ಡಬ್ಬೇರುಮಡುವು ಸದ್ಗುರು ಶ್ರೀ ವಿದ್ಯಾನಂದ ಶರಣರು ವಿರಚಿತ

# ಗಗನ ಸಿದ್ಧಾಂತ



ಸಂಪಾದಕರು

ದೇವಾನಂದ ಶರಣರು ಬೆನಕನಹಳ್ಳಿ

ಬಸವರಾಜ ಸ್ವಾಮಿ ರಾಯಚೂರು

ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು ವಿರಚಿತ

# ಗಗನ ಸಿದ್ಧಾಂತ

ಸಂಪಾದಕರು

ದೇವಾನಂದ ಶರಣರು ಬೆನಕನಹಳ್ಳಿ

ಬಸವರಾಜ ಸ್ವಾಮಿ ರಾಯಚೂರು

ಪ್ರಕಾಶನ

ಸುದ್ದಿಮೂಲ ಪಬ್ಲಿಷರ್ಸ್ ಇಂಡಿಯಾ ಲಿಮಿಟೆಡ್

ನಂ.12-7-196, ಸೀಯಾತಲಾಬ, ರಾಯಚೂರು-584102 (ಕರ್ನಾಟಕ)

ದೂರವಾಣಿ : 08532-235730

Parama Poojya Sadguru Vidyananda Sharanaru Virachita
GAGANA SIDDHANTA

Editors
DEVANANDA SHARANARU BENAKANAHALLI
BASAVARAJ SWAMY RAICHUR

ಪರಮಪೂಜ್ಯ ಸದ್ಗುರು ವಿದ್ಯಾನಂದ ಶರಣರು ವಿರಚಿತ
ಗಗನ ಸಿದ್ಧಾಂತ

ಸಂಪಾದಕರು
ದೇವಾನಂದ ಶರಣರು ಬೆನಕನಹಳ್ಳಿ
ಬಸವರಾಜ ಸ್ವಾಮಿ ರಾಯಚೂರು

ಪುಟಗಳು-487+ viii

ಕಾಗದ ಬಳಕೆ-70 ಜಿ.ಎಸ್.ಎಂ.ಎನ್.ಎಸ್.ಮ್ಯಾಪ್‌ಲಿತೊ

ಪ್ರತಿಗಳು: 1000



ಮುದ್ರಣ : 2015 (ಸಮಗ್ರ)

ಬೆಲೆ : ರೂ. 300/-

ಮುಖಪುಟ-ಮುರುಳೀಧರ ರಾಠೋಡ್, ಬೆಂಗಳೂರು

ಆಕಾರ : ಡೆಮ್ಮಿ ಅಷ್ಟದಳ

ಮುದ್ರಕರು: ಶುಭೋದಯ ಪ್ರಿಂಟರ್ಸ್, ಬೆಂಗಳೂರು

ಪ್ರಕಾಶಕರು:
ಸುದ್ದಿಮೂಲ ಪಬ್ಲಿಷರ್ಸ್ ಇಂಡಿಯಾ ಲಿಮಿಟೆಡ್
ನಂ.12.7.196, ಸಿಯಾತಲಾಬ, ರಾಯಚೂರು-584102
ದೂರವಾಣಿ : 08532-235730

# ಓದುವ ಮುನ್ನ ....

ದ್ವೈತ, ದ್ವೈತಾದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಿವಶಕ್ತಿ ವಿಶಿಷ್ಟಾದ್ವೈತ, ಮುಂತಾದ ಸಿದ್ಧಾಂತಗಳು ಭಾರತದಲ್ಲಿ ಪ್ರಚಲಿತದಲ್ಲಿವೆ. ತನುವಿನ ಶಕ್ತಿ ತನು ಬಳಕೆ ಮಾಡಿಕೊಳ್ಳಲು ಸಕಲ ತನುಗಳಿಗೆ ನೆರವಾಗಲೆಂದು ಈ ಗ್ರಂಥಗಳನ್ನು ಮಹಾಜ್ಞಾನಿಗಳು ರಚಿಸಿರುವರು. ಆದರೆ ಜನ ಆಯಾ ಜ್ಞಾನಿಗಳನ್ನು, ಅವರು ಬರೆದ ಸೂತ್ರ ಪ್ರಧಾನವಾದ ಜ್ಞಾನ ಗ್ರಂಥಗಳನ್ನು ಮಾತ್ರ ವಿಶ್ವಾಸಕ್ಕೆ ತೆಗೆದುಕೊಂಡರು ; ತಮ್ಮ ತಮ್ಮ ತನುವಿನಲ್ಲಿ ತನ್ಮಯವಾದ ಅರಿವಿನ ಶಕ್ತಿಯನ್ನೇ ಮರೆತರು. ಒಬ್ಬೊಬ್ಬ ಜ್ಞಾನಿಯ ಹೆಸರಿನಲ್ಲಿ ಮತ, ಧರ್ಮ, ನಿರ್ಮಾಣವಾಯಿತು. ಜಾತಿ ಉಪಜಾತಿ ಪಂಗಡಗಳು ಹುಟ್ಟಿಕೊಂಡವು. ಜ್ಞಾನಿಗಳು ಬರೆದ ಸೂತ್ರಪ್ರಧಾನ ಸಿದ್ಧಾಂತಗಳೆಲ್ಲ ಧರ್ಮ ಗ್ರಂಥಗಳಾದವು. ಅವು ಪೂಜೆಗೆ, ವಾದ ವಿವಾದಗಳಿಗೆ, ಉಪನ್ಯಾಸಕ್ಕೆ ಮೀಸಲಾದವು. ತನುವಿನ ಉನ್ನತಿಗಾಗಿ ತನುವಿನಿಂದಲೇ ಬರೆದ ಗ್ರಂಥಗಳು ತನುವಿಗೆ ಮುಳುವಾದವು. ಈ ಸಕಲ ಸಿದ್ಧಾಂತಗಳನ್ನು ಶ್ರೀ ವಿದ್ಯಾನಂದ ಶರಣರು ಗಮನದಲ್ಲಿಟ್ಟುಕೊಂಡು **'ಗಗನಸಿದ್ಧಾಂತ'**ವನ್ನು ರಚಿಸಿದರು. ಗಗನ ಸಿದ್ಧಾಂತದಲ್ಲಿ ಅಲ್ಲಮ ಪ್ರಭುಗಳ 198 ವಚನಗಳನ್ನು, ಹಡಪದ ಅಪ್ಪಣ್ಣ ಗಳ, ಶರಣೆ ಸತ್ಯಕ್ಕಗಳ, ಸಿದ್ಧರಾಮ ಶಿವಯೋಗಿಗಳ ಒಂದೊಂದು ವಚನವನ್ನು ಹಾಗೂ ಬಸವಣ್ಣನವರ, ಚನ್ನಬಸವಣ್ಣನವರ ಎರಡೆರಡು ವಚನಗಳನ್ನು ತೆಗೆದುಕೊಂಡಿದ್ದಾರೆ. ಹೀಗೆ ಒಟ್ಟು 205 ವಚನಗಳನ್ನು ಆಧಾರವಾಗಿಟ್ಟುಕೊಂಡು ಅವುಗಳ ಮೂಲಕ ಅನುಭಾವ ನೀಡುತ್ತ ತನುವಿನಲ್ಲಿಯೇ ತನ್ಮಯವಾದ ಅರಿವಿನ ಶಕ್ತಿಯನ್ನು ಓದುವ ತನುವಿಗೇ ಮನದಟ್ಟಾಗುವಂತೆ **ಗಗನ ಸಿದ್ಧಾಂತ** ಸಿದ್ಧ ಪಡಿಸಿದ್ದಾರೆ.

ಶರಣರಿಗೆ ದೊರೆತ ವಚನಗಳು, ಕಟ್ಟಿನಲ್ಲಿರುವ ವಚನಗಳಿಗೆ ಸ್ವಲ್ಪ ಮಟ್ಟಿನ ವ್ಯತ್ಯಾಸವಿದೆ. ಅನುಭಾವಿಗಳಿಗೆ ಈ ವಿಷಯ ನಗಣ್ಯವಾದರೂ ಸಂಶೋಧಕರಿಗೆ ತಡೆಯನ್ನೊಡ್ಡುತ್ತದೆ. ಹೀಗಾಗಿ ಕಟ್ಟಿನಲ್ಲಿರುವ ವಚನಗಳ ವಚನ ಸಂಖ್ಯೆ ದಾಖಲಿಸಲಾಗಿದೆ. ತಾತ್ಪರ್ಯದಲ್ಲಿ ಬದಲಾವಣೆಯಾಗುವುದಿಲ್ಲವೆಂದು ಭಾವಿಸಲಾಗಿದೆ.

ಅಂಗದಲ್ಲಿ ಅರಿವು ಸಂಗಮವಾಗಿದೆ. ಮನ ಅಂಗವನ್ನು ಆವರಿಸಿದೆ. ಮನ ತನ್ನ ತೃಪ್ತಿಗಾಗಿ ಅಂಗವನ್ನೇ ದುರ್ಬಳಕೆ ಮಾಡಿಕೊಳ್ಳುತ್ತದೆ.

ಮನಕ್ಕೆ ಬಯಕೆಯಾಗಿ ದೇವರನ್ನು ನೆನೆಯುತ್ತದೆ; ಆರಾಧಿಸುತ್ತದೆ. ದೇವರಿಗೆ ಆಲಯವನ್ನು ಕಟ್ಟಿಸಿ, ವಸ್ತ್ರಾಭರಣಗಳನ್ನು ತೊಡಿಸಿ, ಛತ್ರಿ ಚಾಮರಗಳನ್ನು ಬೀಸಿ, ಉತ್ಸವಗಳನ್ನು ಮಾಡಿ ಸಂಭ್ರಮಿಸುತ್ತದೆ. ಮನ ಇದೆಲ್ಲವನ್ನೂ ಅಂಗದಿಂದಲೇ ಮಾಡುತ್ತದೆ. ದೇವಾಲಯ ಕಟ್ಟಿದ್ದು ಅಂಗವೇ . ದೇವರನ್ನು ನಿರ್ಮಿಸಿದ್ದೂ ಅಂಗವೇ. ಅದನ್ನು ಭ್ರಮೆಯಿಂದ ಪೂಜಿಸಿದ್ದು ಕೂಡಾ ಅಂಗವೇ ಆಗಿದೆ.

ಭೂಮಿಯೊಳಗಿರುವ ಹಳದಿ ಲೋಹವನ್ನು ಚಿನ್ನ ಎಂದು ಹೆಸರಿಸಿ, ಅದಕ್ಕೆ ಮೋಹಗೊಂಡಿದ್ದೂ ಮನವೇ. ಚಿನ್ನದಲ್ಲಿ ನಾನಾರೀತಿಯ ಆಭರಣ ಮಾಡಿದ್ದು ಮನವೇ. ಅದಕ್ಕೆ ಬೆಲೆ ಕಟ್ಟಿ ಹಗಲಿರುಳು ದುಡಿದು ಅಂಗದೊಂದಿಗೆ ಸಂಗ್ರಹಿಸಿ ಶ್ರೀಮಂತನೆನ್ನಿಸಿಕೊಂಡಿದ್ದು ಮನವೇ.

ಅದೇ ಆಭರಣಗಳಿಗೆ ಮೋಹಗೊಂಡು ಯುದ್ಧಮಾಡಿ ಕೊಂದು ಪಡೆದ ಅಂಗಕ್ಕೆ ರಾಜನ ಪಟ್ಟಕಟ್ಟಿಕೊಂಡದ್ದು ಮನವೇ. ಆಭರಣಗಳಲ್ಲಿಯ ಸತ್ಯ ಅರಿಯದೇ ಅದಕ್ಕೆ ಮೋಹಗೊಂಡು ಕಳುವು ಮಾಡಿ ಅಂಗಕ್ಕೆ ಕಳ್ಳನ ಪಟ್ಟ ಕಟ್ಟಿದ್ದು ಕೂಡಾ ಮನವೇ ಆಗಿದೆ.

ಅಂಗ ಒಂದೇ, ಅದರಲ್ಲಿರುವ ಅರಿವು ಒಂದೇ, ಮನವೂ ಒಂದೇ ಆದರೂ ಮನ ಅಂಗದಲ್ಲಿಯೇ ವಾಸಮಾಡಿ ಅಂಗಕ್ಕೆ ಶ್ರೀಮಂತನ ಪಟ್ಟ, ಬಡವನ ಪಟ್ಟ, ರಾಜನ ಪಟ್ಟ, ಕಳ್ಳನ ಪಟ್ಟ ಕಟ್ಟಿಕೊಂಡು ಅಂಗವನ್ನೇ ಹೀಯಾಳಿಸುತ್ತ ಅಂಗದಲ್ಲಿಯೇ ವಾಸಮಾಡಿದೆ.

ಮನಕ್ಕೆ ಹೊರಗಿನದೆಲ್ಲಾ ತಿಳಿಯುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವೊಂದೇ ತಿಳಿಯುವುದಿಲ್ಲ. ಅಂಗವನ್ನು ಆವರಿಸಿದ ಮನದ ಸಹಾಯದಿಂದ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಹೇಗೆ ಮೊರೆಹೋಗಬೇಕು ಎಂಬುದನ್ನು ಸದ್ಗುರುಗಳು 205 ವಚನಗಳನ್ನು ತೆಗೆದುಕೊಂಡು ಅವುಗಳನ್ನು ತಾತ್ಪರ್ಯದ ಮೂಲಕ ಓದುವ ಮನಕ್ಕೆ ಮನಂಬುಗುವಂತೆ ಬರೆದಿದ್ದಾರೆ. ತನುವಿನಲ್ಲಿಯೇ ತನ್ಮಯವಾದ ಘನವನ್ನು ಆವರಿಸಿದ ಮನ ಹೇಗೆ ಬೆರೆತು ಘನಮನವಾಗಬೇಕೆಂಬುದನ್ನು **ಗಗನ ಸಿದ್ಧಾಂತದ** ಮೂಲಕ ಸ್ಪಷ್ಟವಾಗಿ ವಿವರಿಸಿದ್ದಾರೆ. ಶ್ರೀ ಸದ್ಗುರು ವಿದ್ಯಾನಂದ ಶರಣರು 205 ವಚನಗಳಿಗೆ ಬರೆದ ತಾತ್ಪರ್ಯವನ್ನು ಸವಿಯಲು ಈ ಗ್ರಂಥವನ್ನು ಕೈಗೆತ್ತಿಕೊಳ್ಳುವ ಮೊದಲು ಶರಣರ ಕುರಿತು ಸ್ವಲ್ಪ ಕಾಲ ಧ್ಯಾನಿಸುವುದು ಸೂಕ್ತ.

ನಿಃಶಬ್ದವೇದಿ ಶಬ್ದಮುಗ್ಧ ತತ್ವವು ಆಪ್ತ ಮೂಲವನ್ನು ಆಪೇಕ್ಷಿಸುತ್ತದೆ. ವಚನಗಳು ಆಪ್ತೋಪವಿಷ್ಟವಾದಾಗಲೇ ಪ್ರಯೋಜನವಾಗುತ್ತದೆ.

ಸತ್ಯವನ್ನು ಲೋಕೋಪಯೋಗಿ ದೃಷ್ಟಿಯಿಂದ ಹೇಳುವವರೇ ಆಪ್ತರು. ಲೋಕೋದ್ಧಾರವೆಂದರೇನು? ಅದು ಯಾವುದರಿಂದ ಆಗುತ್ತದೆ? ಎಂಬುದನ್ನು ಸ್ಪಷ್ಟವಾಗಿ ತಿಳಿದು ಸ್ವಾರ್ಥದ ಲವಲೇಶವೂ ಇಲ್ಲದೆ ಉಸಿರಾಟದಷ್ಟೇ ಸಹಜವಾಗಿ ಆ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು ಡಬ್ಬೇರುಮಡುವಿನ ಪರಮಪೂಜ್ಯ ಶ್ರೀ ವಿದ್ಯಾನಂದ ಶರಣರು.

ಶರಣರ ಮಾತೆಲ್ಲಾ ಅಮೃತವಾಯಿತು. ಪೂಜ್ಯರ ವ್ಯಕ್ತಿತ್ವವನ್ನು ವರ್ಣಿಸುವುದು ಕಷ್ಟವೇ. ಅವರನ್ನು ಕಣ್ಣಾರೆ ಕಂಡ, ಅವರೊಡನಾಡಿದ ಶಿಷ್ಯವರ್ಗ, ಅವರ ಪ್ರವಚನಗಳನ್ನು ಕೇಳಿದವರಿಗೆ ಅವರ ಬಗ್ಗೆ ಹೇಳಬೇಕಾಗಿಲ್ಲ. ಯಾರು ಅವರನ್ನು ನೋಡಿಲ್ಲವೋ, ಕೇಳಿಲ್ಲವೋ ಅಂಥವರನ್ನು ಇಂಥ ಒಬ್ಬ ಶರಣರಿದ್ದರು ಎಂದು ನಂಬಿಸುವುದು ಕಷ್ಟದ ಕೆಲಸ. ಅಂಥ ವ್ಯಕ್ತಿತ್ವ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದಶರಣರದು.

ಮಗುವಿನಂಥ ನಿಷ್ಕಲ್ಮಷ ಹೃದಯ , ನಿರ್ಮಲ ನಗೆ, ವಾತ್ಸಲ್ಯಪೂರ್ಣ ನೋಟ. ಸದಾ ಶರಣರ ಗುರುಗಳಾದ ಸದ್ಗುರು ನಾಗಭೂಷಣರ ಸ್ಮರಣೆ, ಒಂದೇ ಮಾತಿನಲ್ಲಿ ಹೇಳುವುದಾದರೆ ಕಣ್ಣಿಗೆ ಬಿದ್ದ ಅರುಹೃದಯಿಗೆ ಸ್ವರೂಪ ಜ್ಞಾನ ಮಾಡಿಸುವ ಛಲವಂತ ಶರಣರವರು.

ಅವರೇ ಹೇಳಿದಂತೆ 4ನೇ ತರಗತಿಯವರೆಗೆ ಅಯ್ಯನವರ ಶಾಲೆಯಲ್ಲಿ ಅಭ್ಯಾಸ. ತಮ್ಮ 23ನೇಯ ವಯಸ್ಸಿನವರೆಗೆ ಈ ಲೋಕದವರು ಆಚರಿಸುವ ಹಲವಾರು ಆಚಾರಗಳಲ್ಲಿದ್ದೆವೆಂದು

ಆಗಾಗ ಹೇಳಿಕೊಳ್ಳುತ್ತಿದ್ದರು.

ಬೀದರ್ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮುಚಳಾಂಬದ **ಸದ್ಗುರು ಶ್ರೀ ನಾಗಭೂಷಣ ಶಿವಯೋಗಿಗಳ** ದರ್ಶನದ ನಂತರ ಅವರೆಂದೂ ಹಿಂತಿರುಗಿ ನೋಡಲಿಲ್ಲ. ಪೂರ್ವಾಶ್ರಯದ ಡಬ್ಬೇರುಮಡುವಿನ ಆದನಗೌಡರು **ಶ್ರೀ ವಿದ್ಯಾನಂದ ಶರಣ**ರಾದರು. ಅಯ್ಯನವರ ಶಾಲೆಯಲ್ಲಿ ಕೇವಲ ಕನ್ನಡ ಅಭ್ಯಾಸ ಮಾಡಿದ್ದ ಆದನಗೌಡರು ಸದ್ಗುರು ನಾಗಭೂಷಣರ ಗರಡಿಯಲ್ಲಿ ಸಂಸ್ಕೃತ ಹಾಗೂ ಹಿಂದಿ ಅಭ್ಯಾಸ ಮಾಡಿ ಭಗವದ್ಗೀತೆಯನ್ನು ಸರಳ ಹಾಗೂ ಸುಲಲಿತವಾಗಿ ಪ್ರವಚನ ಮಾಡ ಹತ್ತಿದರು. ಸಕಲ ಶಿವಶರಣರ ವಚನಗಳು ಅವರಿಗೆ ಅತ್ಯಂತ ಪ್ರಿಯವಾದವು. ಕಬ್ಬಿಣದ ಕಡಲೆಯಂತಿರುವ ಅಲ್ಲಮ ಪ್ರಭುಗಳ ವಚನಗಳನ್ನು ನೋಡಿ ಅತ್ಯಂತ ಆನಂದಿತರಾದರು. ಅವುಗಳ ಒಳಗುಟ್ಟನ್ನು ತಮ್ಮ ಪ್ರವಚನಗಳ ಮೂಲಕ ಹೇಳಿ ಶಿಷ್ಯರ ಸ್ವರೂಪ ಜ್ಞಾನಕ್ಕೆ ದಾರಿಮಾಡಿಕೊಟ್ಟರು. ಹಗಲು ದಣಿವರಿಯದೆ ಪ್ರವಚನ ಮಾಡಿದರೆ ರಾತ್ರಿ ಏಕಾಂತದಲ್ಲಿ ವಚನಗಳಿಗೆ ವ್ಯಾಖ್ಯಾನ ಬರೆಯುತ್ತಿದ್ದರು. ಪುಸ್ತಕ ಓದಿ ಉದಾಹರಿಸುವ ಪಂಡಿತೋತ್ತಮನಿಗೆ ತನ್ನ (ದೇಹದ) ಪುಸ್ತಕದ ಪರಿಚಯ ಸ್ವರೂಪ ಜ್ಞಾನ ಕರುಣಿಸುತ್ತಿದ್ದರು.

ಸಕಲ ಶರಣರ ವಚನಗಳೂ ಅವರ ನಾಲಿಗೆಯ ತುದಿಯಲ್ಲಿದ್ದವು. ಪ್ರವಚನಗಳನ್ನು ಸಿದ್ಧಮಾಡಿಕೊಳ್ಳುತ್ತಿರಲಿಲ್ಲ. ಒಮ್ಮೆ ಹೇಳಿದ ವಚನದ ತಿರುಳು ಮತ್ತೊಮ್ಮೆ ಅನೇಕ ಕವಲುಗಳನ್ನು ಒಡೆದು ಒಂದೇ ಅರ್ಥದಲ್ಲಿ ಲೀನವಾಗಿ ಮೈಮನಗಳನ್ನು ಅರಳಿಸಿ ತನ್ನನ್ನು ನೋಡಿಕೊಳ್ಳುವಂತೆ ಮಾಡುವ ಮೋಡಿ ಸದ್ಗುರುಗಳಿಗೆ ಕರಗತವಾಗಿತ್ತು. ಅವರ ಪ್ರವಚನ ಕಲಿತ ವಿದ್ಯೆಯ ಪ್ರದರ್ಶನವಾಗಿರದೆ ಸತ್ಯವೇ ತಾನಾಗಿ ತಾನೇ ಸತ್ಯವಾಗಿ ತಾಯಿ ರೂಪದಲ್ಲಿ ತುತ್ತು ಮಾಡಿ ಉಣಬಡಿಸಿದಂತಿರುತ್ತಿತ್ತು. ತಾವೂ ಉಂಡು ಸತ್ಯದ ಡೇಗು ಡೇಗುತ್ತಿದ್ದರು.

ಒಬ್ಬ ವ್ಯಕ್ತಿ ಸ್ವರೂಪ ಜ್ಞಾನಿಯಾಗಿ ತಾನು ಯಾವ ಕಾಯಕವನ್ನಾದರೂ ಮಾಡಲಿ ಅವನಿಂದ ಲೋಕಕ್ಕೆ ಉಪಯೋಗವಾಗುತ್ತದೆ. ಮಹದಾನಂದ ಹೊಂದಿ ಸ್ವಸುಖ ಪಡೆಯುತ್ತಾನೆ ಎಂಬ ಕಳಕಳಿ ಅವರದಾಗಿತ್ತು. ಹಗಲಿರುಳೆನ್ನದೆ ತಮ್ಮ ಅರವತ್ತು ವಸಂತಗಳನ್ನು ಇದಕ್ಕಾಗಿ ಮೀಸಲಿಟ್ಟರು.

ಕುಳಿತಲ್ಲಿ, ನಿಂದಲ್ಲಿ, ಮಲಗಿದಲ್ಲಿ ಅವರ ಧ್ಯಾನ ಶರಣರ ಕುರಿತೇ ಆಗಿರುತ್ತಿತ್ತು. ಅರುಹೃದಯ ಸಿಕ್ಕ ಕೂಡಲೇ ಅವನನ್ನು ಬಿಗಿದಪ್ಪಿ ತಮ್ಮವನನ್ನಾಗಿ ತಮ್ಮ ಮಗನನ್ನಾಗಿ ಮಾಡಿಕೊಂಡು ಆತನೊಳಗಿದ್ದ ಅರುವನ್ನು ಆತನಿಗೇ ಪರಿಚಯಿಸುತ್ತಾ ಆತನ ಮರುವನ್ನು ಆತನಿಂದಲೇ ನಷ್ಟಮಾಡಿಸಿ ಸ್ವರೂಪ ಜ್ಞಾನಿಯನ್ನಾಗಿಸುವ ಸುಳುಹು ನೀಡುತ್ತಿದ್ದರು.

ಹೀಗೆ ಮಾಡುವಾಗ ಅವರ ಜಾತಿ-ಮತ ಪಂಥ ಅರ್ಥವ್ಯವಸ್ಥೆ, ಅಧಿಕಾರ, ಇದಾವುದನ್ನು ಗಮನಿಸದೆ ಅರುಹೃದಯವನ್ನು ಮಾತ್ರ ನೋಡುತ್ತಿದ್ದರು. ಅವನ ಭೇಟಿಗಾಗಿ ಹಗಲಿರುಳು ಹಂಬಲಿಸುತ್ತಿದ್ದರು. ದೇಹದ ಅಭಿಮಾನ ಅಹಂಕಾರ ಬಿಡುವವರಿಗೆ ಸುಲಲಿತವಾಗಿ ಪರೀಕ್ಷೆಗಳು ಸದಾ ನಡೆಯುತ್ತಿದ್ದವು.

ಪಾದದಿಂದ ಹಿಡಿದು ನೆತ್ತಿಯವರೆಗಿನ ಅಭಿಮಾನ ಬಿಟ್ಟಾಗಲೇ ಆತ ಸದ್ಗುರುಗಳಿಂದ ಪೂಜಿತನಾಗುತ್ತಿದ್ದ ಪೂಜಿಸಲ್ಪಡುತ್ತಿದ್ದ. ಗುರುವಾಗುತ್ತಿದ್ದ. ಗುರುಮುಟ್ಟಿಗುರುವಾಗುವ ಪರಂಪರೆ ಶರಣ ಪರಂಪರೆಯಲ್ಲಿ ಮಾತ್ರ ಕೇಳುತ್ತೇವೆ. ಆದರೆ ಸದ್ಗುರು ವಿದ್ಯಾನಂದ ಶರಣರು ಆರು

ದಶಕಗಳವರೆಗೆ ಇದನ್ನು ಸದ್ದುಗದ್ದಲವಿಲ್ಲದೆ ಏಕಾಂಗಿಯಾಗಿ ನಡೆಸಿಕೊಂಡು ಬಂದರು. ಜ್ಞಾನ ಪಡೆದು ತಮ್ಮ ಕಾಯಕ ಮಾಡುತ್ತಾ ಸ್ವಸುಖದಲ್ಲಿ ಲೀನವಾದ ಸದ್ಗುರು ವಿದ್ಯಾನಂದ ಶರಣರ ಶಿಷ್ಯಂದಿರು ಸಾವಿರಾರು ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ಸದ್ಗುರು ವಿದ್ಯಾನಂದರ ಕಾಯಕದಲ್ಲಿ ಲೀನವಾದರೆ ಕಲ್ಯಾಣ ರಾಜ್ಯ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ.

ಮಹಾತ್ಮಾ ಬಸವಣ್ಣ ಇಷ್ಟ ಲಿಂಗ ಕೊಟ್ಟು ಉಪಕಾರ ಮಾಡಿದನೆಂದು ಒಂದು ವರ್ಗ ಅವರನ್ನು ಸ್ಮರಿಸುತ್ತದೆ. ಮತ್ತೊಂದು ವರ್ಗ ರೇಣುಕರು ಇಷ್ಟ ಲಿಂಗ ಕೊಟ್ಟರೆಂದು ಪ್ರತಿಪಾದಿಸುತ್ತದೆ. ಹೀಗೆ ಅನ್ನುವ ಈ ಎರಡು ವರ್ಗಗಳು ಉಣ್ಣೆಯಂತೆ ಕ್ಷೀರದ ರುಚಿಯನ್ನು ಸವಿಯಲಿಲ್ಲವೆಂದು ರೇಣುಕ ಹಾಗೂ ಶರಣರ ಅಮೃತವನ್ನು ಸವಿದ ಅನುಭಾವಿಗಳಿಗೆ ಅನ್ನಿಸದೇ ಇರದು. ಶರಣರ ವಚನಗಳಲ್ಲಿ ರೇಣುಕರ ಅನುಭಾವದಲ್ಲಿ ಕುರುಹನ್ನೆ ಕಂಡರು. ಸದಾ ಕತ್ತಲನ್ನೆ ಕಂಡವರಿಗೆ ಬೆಳಕಿನ ರುಚಿ ಹಿಡಿಸುವುದಿಲ್ಲ.

'' ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದಡೇನು? ಹಸಿವು ಹೋಹುದೆ?
ಅಂಗದ ಮೇಲೆ ಲಿಂಗ ಸ್ವಾಯತವಾದಡೇನು?
ಭಕ್ತನಾಗಬಲ್ಲನೆ? ಇಟ್ಟಕಲ್ಲು ಮೆಳೆಯ ಮೇಲೆ ಸಿಲುಕಿದಡೆ
ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ?
ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ ನಾಚುವನಯ್ಯಾ-ಗುಹೇಶ್ವರಾ''

ಎಂದು ಲಿಂಗವನ್ನು ಹಾಗೂ ಲಿಂಗ ಕಟ್ಟಿಕೊಂಡಾತನನ್ನು, ಕಟ್ಟಿದಾತನನ್ನು ಅಲ್ಲಮಪ್ರಭು ಟೀಕಿಸಿದ್ದಾನೆ. ಈ ವಚನದ ತಾತ್ಪರ್ಯವನ್ನು ಸದ್ಗುರು ವಿದ್ಯಾನಂದ ಶರಣರು ಬಹು ಮಾರ್ಮಿಕವಾಗಿ ದಾಖಲಿಸಿದ್ದಾರೆ.

ದಾಸರ, ಸಂತರ, ದಾರ್ಶನಿಕರ, ತತ್ತ್ವ ಪದಕಾರರ ಹಾಗೂ ಶರಣರ ವಚನಗಳನ್ನು ಸಾಹಿತಿಗಳು ಸಾಹಿತ್ಯಕ್ಕಾಗಿ, ಭಾಷಣಕಾರರು ಭಾಷಣಕ್ಕಾಗಿ, ಪ್ರಾಧ್ಯಾಪಕರು ಪಾಠ ಪ್ರವಚನಗಳಿಗಾಗಿ ಸಂಘಟನೆಗಳು ಜಾತಿ ಸಂಕರಕ್ಕಾಗಿ ಉಪಯೋಗಿಸಿಕೊಂಡರೇ ವಿನಃ ಸ್ವಸಂತೋಷಕ್ಕಾಗಿ ಸ್ವರೂಪಜ್ಞಾನಕ್ಕಾಗಿ ಅಲ್ಲ. ಹೀಗಾಗಿ ವಚನಗಳು ಅವರಿಗೆ ಹೇಗೇಗೊ ಕಾಣುತ್ತವೆ.

''ಇಷ್ಟಲಿಂಗವನ್ನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೊ?
ಇಷ್ಟಲಿಂಗ ಹೋದಡೆ ಪ್ರಾಣಲಿಂಗ ಹೋಗದು ನೋಡಾ,
ಇಷ್ಟಲಿಂಗ ಪ್ರಾಣಲಿಂಗದ ಭೇದವನು ಗುಹೇಶ್ವರಾ ನಿಮ್ಮ ಶರಣ ಬಲ್ಲ''

ಶರಣರ ದೃಷ್ಟಿಯಲ್ಲಿ ಕಾಯವೇ ಇಷ್ಟಲಿಂಗ. ಅರಿವೆಂಬ ಮಹಾನುಭಾವನು ಪ್ರಾಣಲಿಂಗವೆಂಬ ಕಾಯದೊಂದಿಗೆ ತಾಯಿಯ ಗರ್ಭದಿಂದ ಹೊರಬರುತ್ತಾನೆ. ಸ್ವಾನುಭಾವದಿಂದ ಸ್ವಸುಖದ ಆನಂದದಿಂದ ಮೆರೆದು ಅಂಗ ಬಿಟ್ಟು ಲಿಂಗದೊಂದಿಗೆ ಗಗನದಲ್ಲಿ ಮರೆಯಾಗುತ್ತಾನೆ. ತಾನೇ ಗಗನವಾಗುತ್ತಾನೆ. ಆ ಗಗನ ಸದೃಶವಾದ ಭಗವಂತನಿಗೆ ಜನನ ಮರಣಗಳಿಲ್ಲ . ಮನ ಬಂಜೆಯ ಮಗ. ಹುಟ್ಟಾ ಬಂಜೆಯ ಮಗನನ್ನು ಎಲ್ಲಿಂದ ತರಬೇಕು? ಆಕೆ-ಮಗನನ್ನು ಹೇಗೆ ಹಡೆದಾಳು ಎಂಬ -ಮಾರ್ಮಿಕ ಪ್ರಶ್ನೆಗಳೊಂದಿಗೆ ತಾತ್ಪರ್ಯದ ವಾಗ್ಝರಿ ಹರಿಯುತ್ತ ಸಾಗುತ್ತದೆ. ಸದ್ಗುರು ವಿದ್ಯಾನಂದ ಶರಣರ **'ಗಗನ ಸಿದ್ಧಾಂತ'** ಅವರ ಶಿಷ್ಯರಿಗೆ ಸುಲಿದ ಬಾಳೆಹಣ್ಣು ; ಹೊಸಬರಿಗೆ ಹಲಸು. ಸ್ವಲ್ಪ ನಿಧಾನವಾಗಿ ಜಾಗ್ರತದಿಂದ ಬಿಡಿಸಿ ಅರಿವಿನ ಸಿಹಿ ಅನುಭವಿಸಬೇಕು.

ಇಲ್ಲದಿದ್ದರೆ ಬಾಯಿ ತುಂಬ ಅಂಟು.

ಸದ್ಗುರು ವಿದ್ಯಾನಂದರು ಈ ನಾಡು ಕಂಡ ಮಹಾನ್ ಸಂತರು. ಮಠ ಮಾನ್ಯಗಳ ಒಡೆಯರು ಸಾಹಿತಿಗಳು ಈ ಸತ್ಪುರುಷರನ್ನು ನೋಡಲು ಬರಲಿಲ್ಲ. ರಾಜಕಾರಣಿಗಳು ಇವರತ್ತ ಸುಳಿಯಲಿಲ್ಲ. ಗುರುಗಳಾದರೂ ಅಷ್ಟೆ. ಅವರ ನೆರಳಿನ ಸಾಮಿಪ್ಯವೂ ಹೋಗಲಿಲ್ಲ. ಅರುಹೃದಯಿಗಳನ್ನು ಕಂಡು ಅರಿವಿನ ಬೀಜ ಬಿತ್ತಿದರು. ಮೊಳಕೆಯೊಡೆದು ಸಸಿಗಳಾಗಿವೆ. ಕೆಲವು ಮರಗಳಾಗಿ ಫಲಕ್ಕೆ ಬಂದಿವೆ . ಆ ಮಾಗಿದ ಅರಿವಿನ ಫಲ ತನ್ನ ಕೆಲಸ ಮಾಡದೇ ಇರದು.

ತನ್ನೊಳಗಿರುವ ಒಡೆಯನನ್ನು ತೋರಿಸಿ ಅವನೇ ತಾನಾಗುವ ಪ್ರಯತ್ನವನ್ನು ಶರಣರು ಹನ್ನೆರಡನೆಯ ಶತಮಾನದಲ್ಲಿ ಯಶಸ್ವಿಯಾಗಿ ಪೂರೈಸಿದ್ದಾರೆ.

ಅದೇ ಪ್ರಯತ್ನವನ್ನು ಪರಮ ಪೂಜ್ಯ ಸದ್ಗುರು ಡಬ್ಬೇರುಮಡುವಿನ ಶ್ರೀ ವಿದ್ಯಾನಂದ ಶರಣರು ಮನೆ ಮನೆಗೆ ತೆರಳಿ ಶ್ರೀಸಾಮಾನ್ಯನನ್ನು ಸ್ವರೂಪ ಜ್ಞಾನಿಗಳನ್ನಾಗಿ ಪರಿವರ್ತಿಸಲು ಏಕಾಂಗಿಯಾಗಿ ಯತ್ನಿಸಿದರು. ಹೆದ್ದೊರೆನಾಡು ಕಂಡ ಅಪೂರ್ವ ಸಂಚಾರಿ ಸಂತರಾದ ಪೂಜ್ಯ ಶ್ರೀ ವಿದ್ಯಾನಂದ ಶರಣರು ನಾಡಿನಾದ್ಯಂತ ಆಧ್ಯಾತ್ಮದ ಚಿಂತನೆಯ ವಾತಾವರಣವನ್ನು ಮೂಡಿಸಿದರು.

ಉತ್ತರ ಕರ್ನಾಟಕದ ರಾಯಚೂರು, ಕಲಬುರ್ಗಿ, ಬೀದರ್, ಬಾಗಲಕೋಟೆ, ಬಿಜಾಪುರ, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳಾದ್ಯಂತ ಸತತ ಅರವತ್ತು ವರ್ಷಗಳವರೆಗೆ ಹಗಲಿರುಳೆನ್ನದೆ ಸಂಚರಿಸಿ ಸಾವಿರಾರು ಸಂಖ್ಯೆಯ ಜಿಜ್ಞಾಸುಗಳಲ್ಲಿ ಆಧ್ಯಾತ್ಮದ ಆಸಕ್ತಿ ಹುಟ್ಟಿಸಿದರು.

ಈ ಜ್ಞಾನ ಮಹಾಯಜ್ಞ ಅವರೊಂದಿಗೆ ನಂದಲಿಲ್ಲ. ಅನುಭವ ಮಂಟಪದಲ್ಲಿ ಚೆನ್ನಬಸವಣ್ಣನವರು ಕ್ರಿಯಾಶೀಲರಾದಂತೆ ಬೆನಕನ ಹಳ್ಳಿಯ ಸದ್ಗುರು ನಾಗಭೂಷಣ ಶಿವಯೋಗಿ ಮಹಾಬೋಧಾಲಯದಲ್ಲಿ ಪೂಜ್ಯ ವಿದ್ಯಾನಂದ ಶರಣರ ಪ್ರೀತಿಯ ಕಂದ ಮಹಾಜ್ಞಾನಿ ದೇವಾನಂದರಾಗಿ ರೂಪುಗೊಂಡಿರುವರು.

ಸಾಧನೆಯ ಮಾರ್ಗದಲ್ಲಿರುವವರಿಗೆ ಯಾದಗಿರಿ ಜಿಲ್ಲೆಯ ಸುರಪುರು ತಾಲೂಕಿನ ಬೆನಕನ ಹಳ್ಳಿಯ ಮಹಾ ಬೋಧಾಲಯ ಕೈ ಮಾಡಿ ಕರೆಯುತ್ತಲಿದೆ.

ಸದ್ಗುರು ಶ್ರೀ ವಿದ್ಯಾನಂದಶರಣರು ಜೂನ್ 1-2006 ರಂದು ಅಸ್ವಸ್ಥರಾದರು. ದೇಹದ ಬಳಲಿಕೆಯ ಮಧ್ಯೆಯೇ ಪ್ರವಚನ ಸಾಗಿತ್ತು. ಆನಂದದ ಮರೆಯಲ್ಲಿ ದೇಹ ಮತ್ತು ಪ್ರಾಣದ ಚಿನ್ನಾಟ ನಡೆದೇ ಇತ್ತು. 23 ದಿನಗಳ ಚಿಕಿತ್ಸಾ ಹಂತದಲ್ಲಿ ವೈದ್ಯರಿಗೆ ಒಮ್ಮೆಯೂ ದೇಹಕ್ಕಾದ ನೋವಿನ ಸಂಗತಿಯನ್ನು ವ್ಯಕ್ತಪಡಿಸಲಿಲ್ಲ.

ಗುರುಗಳು ಮುಂದಿನ ಚಿಕಿತ್ಸೆಗೆ ಒಪ್ಪಿಗೆ ಕೊಡಲಿಲ್ಲ. ಈ ಶರೀರದ ಕತೆ ಮುಗಿಯಿತು. ಬೆಳಿಗ್ಗೆ ಊರಿಗೆ ಹೊರಡೋಣ ಎಂದರು. ಅವರ ದೇಹದ ನರಳಾಟದಿಂದ ನನ್ನ ಹಾಗೂ ದೇವಾನಂದ ಶರಣರ ಮುಖ ಕಂದಿತು. ಇದನ್ನು ಗಮನಿಸಿದ ಗುರುಗಳು ನಮ್ಮಿಬ್ಬರನ್ನು ಹತ್ತಿರ ಕೂಡಿಸಿಕೊಂಡು ಇಡೀ ರಾತ್ರಿ ಪ್ರವಚನ ಮಾಡಿದರು, ಮಹಾಜ್ಞಾನ ಕಾಯ ಮತ್ತು ಪ್ರಾಣದ

ಚಿನ್ನಾಟದ ದರ್ಶನ ಮಾಡಿಸಿದರು.

ಬೆನಕನಹಳ್ಳಿಯಲ್ಲಿ ದೇಹ ಬಿಡುವುದಾಗಿ ಹೇಳಿ ಕರೆದುಕೊಂಡು ಹೋಗಲು ಸೂಚಿಸಿದರು. ದಿನಾಂಕ 23-6-2006 ರಂದು ಬೆನಕನ ಹಳ್ಳಿಗೆ ಹೋದೆವು. ಕೊನೆಗೆ ಮೂರು ದಿನಗಳಲ್ಲಿ ಸಂಜ್ಞೆಯ ಮೂಲಕ ಹೇಳಿ ದಿನಾಂಕ 2-7-2006 ಮಧ್ಯಾಹ್ನ 2.20 ಗಂಟೆಗೆ ದೇಹಬಿಟ್ಟರು.

ಅವರು ಬರೆದ ಶರಣ ಸಾಹಿತ್ಯದಲ್ಲಿ 'ನಾನು ನನ್ನ ಕಂಡ ಕಣ್ಣು', 'ನಿಃಶಬ್ದ ಕೃಪೆ' ಪ್ರಕಟವಾಗಿದೆ. ಅವರು ಇರುವವರೆಗೂ ತಮ್ಮ ಸಾಹಿತ್ಯ ಪ್ರಕಟಿಸಲು ಮುಂದೆ ಬಂದವರಿಗೆ ಇದನ್ನು ತಮ್ಮ ಹೃದಯದಲ್ಲಿ ಪ್ರಕಟಿಸಿಕೊಳ್ಳಿ ಪ್ರಕಟಣೆ ಬೇಡ ಎಂದು ಒತ್ತಿ ಹೇಳುತ್ತಿದ್ದರು. ನನ್ನ ಒತ್ತಾಯದ ಮೇರೆಗೆ ಪ್ರಕಟಿಸಲು ಅನುಮತಿ ಕೊಟ್ಟರು. 'ಗಗನ ಸಿದ್ಧಾಂತ ' ' ಗುರುಕನ್ನೆ ' ಡಿ.ಟಿ.ಪಿ.ಮಾಡಿ ತೋರಿಸಿದಾಗ ಅತ್ಯಂತ ಆನಂದ ಪಟ್ಟರು. ಇಷ್ಟು ಸಾಕು. ಬೇಕಾದವರು ಇದರ ಫೋಟೋ ಪ್ರತಿ ಮಾಡಿಕೊಳ್ಳಲಿ ಎಂದು ಹೇಳಿದರು.

ಗಗನ ಸಿದ್ಧಾಂತ 136 ವಚನಗಳ ತಾತ್ಪರ್ಯ ಮೊದಲ ಭಾಗ 6-7-2006 ರಂದು ಮುದ್ರಣಗೊಂಡು ಪ್ರಕಾಶಿಸಲ್ಪಟ್ಟಿತು. ಪ್ರತಿಗಳು ಮುಗಿದು ಹೋದ ನಿಮಿತ್ತ ಪುನಃ ಸಮಗ್ರವಾಗಿ ಗಗನ ಸಿದ್ಧಾಂತವನ್ನು ಪ್ರಕಾಶಿಸಲ್ಪಟ್ಟಿತು. ಈ ಗ್ರಂಥ ಭೂಮಿಯೊಳಗಿದ್ದ ನಿಧಿಯಂತೆ ಅಂಜನ ಹಾಕಿ ಹುಡುಕಬೇಕು. ಸಾಧಕರಿಗೆ ಮಾರ್ಗ ಸುಲಭವಾಗಲಿ ಎಂದು ಹೆಚ್ಚಿನ ವಿವರಣೆಯೊಂದಿಗೆ ಶ್ರೀಸಾಮಾನ್ಯರ ಮನ ಮುಟ್ಟುವಂತೆ ಸದ್ಗುರುಗಳು ವಿವರಿಸಿದ್ದಾರೆ.

ಪೂಜ್ಯ ವಿದ್ಯಾನಂದ ಶರಣರ ಅಪ್ರಕಟಿತ ಸಾಹಿತ್ಯ ಐದು ಸಾವಿರ ಪುಟಗಳನ್ನು ಮೀರಲಿದೆ. ಪತ್ರಿಕೆ ಪ್ರಸಾರದೊಂದಿಗೆ ಅರಿವಿನ ಪ್ರಸಾರ ಮಾಡಲು ಪಣ ತೊಟ್ಟಿರುವ ರಾಯಚೂರು (ಸ್ಪಿಲ್)ಸುದ್ದಿಮೂಲ ಪಬ್ಲಿಷರ್ಸ್ ಇಂಡಿಯಾ ಲಿಮಿಟೆಡ್ ಸಂಸ್ಥೆಯು ಸದ್ಗುರುಗಳ ಇಚ್ಛೆಯಂತೆ ಸಕಲರೂ ಸ್ವರೂಪ ಜ್ಞಾನಿಗಳಾಗಬೇಕೆನ್ನುವ ಆಶಯದೊಂದಿಗೆ **'ಗಗನ ಸಿದ್ಧಾಂತ'** ಪ್ರಕಾಶಿಸಿದೆ. ಪೂಜ್ಯರ ಸಮಗ್ರ ಅಪ್ರಕಟಿತ ಸಾಹಿತ್ಯವನ್ನು ಇಡೀ ವಿಶ್ವದಾದ್ಯಂತ ಓದುಗರು www.suddimoola.com ಲಾಗ್ಆನ್ ಮಾಡಿ BOOK STORE ಗೆ ಕ್ಲಿಕ್ ಮಾಡಿ ನೋಡಬಹುದಾಗಿದೆ. ಉಚಿತ ಡೌನ್‌ಲೋಡ್ ಮಾಡಿಕೊಂಡು ಪ್ರಿಂಟ್ ತೆಗೆದುಕೊಳ್ಳಬಹುದಾಗಿದೆ.

ಗಗನ ಸಿದ್ಧಾಂತ ಸಮಗ್ರ ಕೃತಿಯನ್ನು ಹಾಗೂ ಇನ್ನುಳಿದ ಅವರ ಸಮಗ್ರ ಪ್ರಕಟಣೆಗಳನ್ನು ಮುದ್ರಣ ಮಾಡಬೇಕೆಂಬ ಸದಿಚ್ಛೆಯನ್ನು ಮಾನ್ಯಶ್ರೀ ಎ.ವೆಂಕಟೇಶ ನಾಯಕ ಶಾಸಕರು ಹಾಗೂ ಮಾಜಿ ಸಂಸದರು ಅವರ ಮುಂದೆ ವ್ಯಕ್ತಪಡಿಸಿದಾಗ ಗಗನ ಸಿದ್ಧಾಂತ ಸಮಗ್ರ ಕೃತಿಗೆ ತಗುಲುವ ವೆಚ್ಚವನ್ನು ತಾವೇ ಭರಿಸುವುದಾಗಿ, ಇದು ಶರಣರಿಗೆ ಸಲ್ಲಿಸುವ ನಮ್ಮ ಸೇವೆ ಎಂದು ಭಾವಿಸಬೇಕಾಗಿ ಹೃದಯ ತುಂಬಿ ಹೇಳಿದರು. ಈ ಸಂದರ್ಭದಲ್ಲಿ ಅವರಿಗೆ ಹೃದಯಪೂರ್ವಕ ಅಭಿನಂದನೆಗಳನ್ನು ಸಲ್ಲಿಸುವೆ.

ಪ್ರಯತ್ನ ನಮ್ಮದು, ಅಂತಿಮ ಇಚ್ಛೆ ಓದುಗರದು; ಸಕಲ ತನುಗಳಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನದು.

**ಬಸವರಾಜ ಸ್ವಾಮಿ**
ಸಂಪಾದಕ, ರಾಯಚೂರು
ಜುಲೈ 02, 2015

# ಮುದ್ರಣ ಸೇವೆ

ಶರಣ ದಂಪತಿಗಳಾದ



**ಶ್ರೀಮತಿ ಸಾವಿತ್ರಿದೇವಿ ವೆಂಕಟೇಶ ನಾಯಕ**

**ಮಾನ್ಯಶ್ರೀ ಎ.ವೆಂಕಟೇಶ ನಾಯಕ**

ಶಾಸಕರು, ದೇವದುರ್ಗ ಹಾಗೂ ಮಾಜಿ ಸಂಸದರು

### ಪರಮಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು ವಿರಚಿತ

# ಗಗನ ಸಿದ್ಧಾಂತ

1

**ಲಿಂಗ ಒಳಗೊ ಹೊರಗೊ ? ಬಲ್ಲಡೆ ನೀವು ಹೇಳಿರೆ ?**
**ಲಿಂಗ ಎಡನೊ ಬಲನೊ? ಬಲ್ಲಡೆ ನೀವು ಹೇಳಿರೆ ?**
**ಲಿಂಗ ಮುಂದೊ ಹಿಂದೊ ? ಬಲ್ಲಡೆ ನೀವು ಹೇಳಿರೆ ?**
**ಲಿಂಗ ಸ್ಥೂಲವೊ ಸೂಕ್ಷ್ಮವೊ? ಬಲ್ಲಡೆ ನೀವು ಹೇಳಿರೆ ?**
**ಲಿಂಗ ಪ್ರಾಣವೊ, ಪ್ರಾಣ ಲಿಂಗವೊ ?**
**ಬಲ್ಲಡೆ ನೀವು ಹೇಳಿರೆ ಗುಹೇಶ್ವರ ಲಿಂಗವನು ?** ॥ 153 ॥

**ತಾತ್ಪರ್ಯ:** ಪ್ರಭುದೇವ ಎಚ್ಚರವಂತರ ಎಚ್ಚರವಮಾಡುವ ಅನುಪಮ ತೇಜವಾದುದರಿಂದ ಲಿಂಗವರಿತವರಾದಲ್ಲಿ ಹೇಳಿರೆ ಗುಹೇಶ್ವರ ಲಿಂಗವನು ಎಂಬ ಪ್ರಶ್ನೆ ಆತನದಾಗಿಹದು.

ಗುಹೇಶ್ವರಲಿಂಗವೆಂಬುದು ಕಾಣಬಾರದ ಗುರು. ಗುಹೇಶ್ವರ ಲಿಂಗ ಇದು *ಅರಿದಿಹೆನೆಂದಡೆ ಅರಿವಿಂಗಸಾಧ್ಯ. ನೆನದಿಹೆನೆಂದಡೆ ನೆನಹಿಂಗಸಾಧ್ಯ. ಭಾವಿಸಿಹೆನೆಂದೆಡೆ ಭಾವಕಸಾಧ್ಯ. ವಾಙ್ಮನಕ್ಕಗೋಚರಲಿಂಗ ತೋರಬಾರದ ಘನ ಹೇಳಲೆಂದೇನೊ, ಹೇಳಬಾರದ ಘನ ತೋರಲೆಂದೇನೊ* ಎಂಬ ಮಾರ್ಮಿಕ ರಹಸ್ಯವ ಬಲ್ಲವರಾರು ? ಇದು ಗುರು ಕರುಣಿಸಿದ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮಲಿಂಗ. ಇದು ಅರಿಯ ಹೋದವರು ತಾನೆ ಲಿಂಗ ಘನ. ಇದು ಭಾವಕ್ಕಿಂಬುಕೊಡದ ಲಿಂಗ ಶಬ್ಧಮೀಸಲಾಗಿಹ ಲಿಂಗ ನುಡಿಗೆಡೆಗೊಡದ ಘನವಾಗಿಹ ಲಿಂಗ. ಇದು ಅಂಗದ ಮೇಲೆ ಲಿಂಗ ಧರಿಸಿಹೆವೆಂಬ ಭಾವುಕರಿಗೆ ನಿಲುಕದ ಲಿಂಗ. ಇದು ಕೃತ್ಯಕ್ಕೆ ಬಾರದ ಲಿಂಗ. ಬಟ್ಟಿಡಲೆಡೆ ತೆರಹಿಲ್ಲದ ಲಿಂಗ. ಪೂರ್ಣಲಿಂಗ. ಅಖಂಡಿತ ಲಿಂಗ. ಅಚಲಿತ ಲಿಂಗ. ಅರಿಯ ಹೋಗುವುಡೆ ಸಕಲವೂ ತಾನೇ ಆಗಿ ಪ್ರಜ್ವಲಿಸುವ ಲಿಂಗ. ಈ ಅನುಪಮ ಲಿಂಗವರಿಯದ್ದರಿಂದ ಅಜಾತ ತತ್ವ ತಿಳಿಯದಂತಾಗಿ ಭೇದ ಜ್ಞಾನ ಅಧಿಕವಾಗಿ ಬೆಳೆದು ಜಾತೀಯತೆಯೇ ಪ್ರಧಾನವಾಗಿ ಪಕ್ಷ ಪಂಗಡಗಳೇ ಅಧಿಕಾಧಿಕ ಬೆಳೆಯ ಹತ್ತಿವೆ. ಇದಲ್ಲದೆ, ಲಿಂಗ ಧರಿಸಿದವರದೊಂದು ಜಾತಿ, ಲಿಂಗ ಧರಿಸದವರದೊಂದು ಜಾತಿಯಾಗಿ ಭೇದ ಜ್ಞಾನದಿಂದ ಭವಿ ಭಕ್ತ ಎಂದು ಸೀಮಿತ ದೃಷ್ಟಿಯವರಾಗಿಹರು, ಇದು ಲಿಂಗವರಿಯದ ದೃಷ್ಟಿ, ಲಿಂಗವರಿತಲ್ಲಿ ಭರಿತಭಾವ ಅಖಂಡ ಜ್ಞಾನದಿಂದ ನಿಸ್ಸೀಮ ನಿಲುವುಳ್ಳದ್ದಾಗಿಹುದು. ಅದು ಸುಜ್ಞಾನದೃಷ್ಟಿ, ಸುಖಮಯವಾಗಿಹ ತನ್ನ ದೃಷ್ಟಿ, ನಿಷ್ಕಳಂಕ ದೃಷ್ಟಿ, ಶರಣರ ದೃಷ್ಟಿ, ದಿವ್ಯ ದೃಷ್ಟಿ, ಇದು

ಅಜಾತನೊಲಮೆಯ ದೃಷ್ಟಿ.

ಶರಣ ಸ್ವಯಲಿಂಗಿ ಲಿಂಗವರಿತ ಘನಕ್ಕೆ ಘನ ಮಹಾಘನವಾಗಿಹ ದೃಷ್ಟಿ. ಅದು ಏಕಮೇವಾದ್ವಿತೀಯವಾಗದಿಹ ನಿರಾಲಂಬ ನಿರುಪಮ ದೃಷ್ಟಿಯಾದುದರಿಂದ ಲಿಂಗವೆಂದರೆ ತಾನು ತಾನೆ. ತನಗಿಂತನ್ಯವಾದುದಿಲ್ಲ, ತನ್ನೊಂದಿಗೆ ಸೇರಿದುದಿಲ್ಲ, ತಾನೆ ತಾನಾಗಿಹ ಘನ. ನುಡಿಗೆಡೆಗೊಡದ ಘನವಾಗಿರುವಲ್ಲಿ ತನಗೆ ತಾನು ಒಳಗೆನ್ನಬಹುದೆ? ಹೊರಗೆನ್ನಬಹುದೆ? ಎಡನೆನ್ನಬಹುದೆ? ಬಲನೆನ್ನಬಹುದೆ? ಸ್ಥೂಲನೆನ್ನಬಹುದೆ? ಸೂಕ್ಷ್ಮನೆನ್ನಬಹುದೆ? ಜಡ ತಾನೆನ್ನಬಹುದೆ? ಚೇತನವೆನ್ನಬಹುದೆ? ಚೈತನ್ಯ ತಾನೆನ್ನಬಹುದೆ? ಚೈತನ್ಯಕ್ಕೆ ತಾ ಚೈತನ್ಯನಾಗಿಹ ಘನವು ಶಬ್ಧಮುಗ್ಧವಾಗಿಹ ಘನವು ಚೈತನ್ಯವೆನ್ನದು. ಅಂಗವೆನ್ನದು. ಲಿಂಗವರಿತು ಲಿಂಗವಾಗಿಹ ಘನವು ಹೊಗಳತೆಗೆ ಸಿಕ್ಕುವುದೆಂತು ?

ಪ್ರಭುದೇವರ ಅಂತರಾಳದ ಗುರಿ ಸಕಲರು ಲಿಂಗವರಿಯುವ ಗುರಿ. ಇದರಿಂದ ನಿಸ್ಸೀಮತ್ವ ಸಹಜಸಿದ್ಧವಾಗಿ ಸಮತೆ ಸಯವಾಗಲಿ, ನಿಶ್ಯಬ್ಧವೇದಿಗಳಾಗಲಿ, ನಿಜವರಿತು ನಿರಾಳಸುಖದ ಸುಖಿಯಾಗಲಿ ಎಂಬುದು ಆ ಮಹಾಂತನ ತವಕ. ಈ ತವಕವೇ ಘನ ತವಕವಾಗಿ ಲಿಂಗದ ಯತಾರ್ಥ ತಿರುಳನ್ನೆ ನಮ್ಮಗಳ ಮುಂದೆ ಬಿತ್ತರಿಸಿಹನು.

2

**ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ, ಜೀವಕ್ಕೆ ಜೀವವಾಗಿ,**
**ಇದ್ದುದನಾರು ಬಲ್ಲರೊ ?**
**ಅದು ದೂರವೆಂದು, ಸಮೀಪವೆಂದು ,**
**ಮಹಾಂತ ಗುಹೇಶ್ವರನು ಒಳಗೆಂದು ಹೊರಗೆಂದು,**
**ಬರುಸೂರೆಹೋದರು.** ॥ 155 ॥

**ತಾತ್ಪರ್ಯ**: ಪ್ರಭುದೇವ ಮೂಲವರಿತ ಅರಿವಿಂಗರುವು, ಕಾಣದುದ ಕಂಡ ಸ್ವಮಹಿಮ. ಇದು ಕಾರಣ ಕಲ್ಪಿತವ ಕಾಣುವನೆಂತು? ತನುವಿನ ತನುವಾಗಿದ್ದು, ಮನದ ಮನವಾಗಿದ್ದು, ಜೀವದ ಜೀವವಾಗಿದ್ದ ಲಿಂಗ ಘನ. ಅರಿವರಿದ ನಿಜ ಚಿದ್ರೂಪ. ಬಾಹ್ಯತನು, ಬಾಹ್ಯಮನ, ಬಾಹ್ಯ ಜೀವಕ್ಕೆ ಮುಖ್ಯತೆ ಕೊಡದೇ, ಅರಿಯಬೇಕಾದುದನ್ನೆ ಅರಿತ ಕೂಟಸ್ಥ, ಅಕಲ್ಪಿತ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನು. ಸೀಮಿತವನ್ನೆ ಕೆಡಿಸಿ ನಿಸ್ಸೀಮದ ನಿಜದರುವು ಕರುಣಿಸಿದ ಕರುಣಾಕರ. ಸರ್ವಾಂಗ ಲಿಂಗಿ, ಈ ಮಹಾಂತನ ಮಹಾಪ್ರಸಾದವ ಬಹುವಿಚಾರವಂತರು ನೋಡರು. ನೋಡಿದರೂ ಪರಮ ಜ್ಞಾನವ ಸ್ವೀಕರಿಸರು. ಸ್ವೀಕರಿಸಿ ಜ್ಞಾನಾಮೃತವ ಸವಿದವರು ವಿರಳ. ಹೀಗಾಗಿ ಸೀಮಿತ ದೃಷ್ಟಿ ಪ್ರಬಲವಾಗಿ ಮಾನವ ಹೃದಯವು ಸಂಕುಚಿತವಾಗಿದೆ. ಇದರಿಂದ ನಡೆಯಲ್ಲಿ ಭೇದ ನುಡಿಯಲ್ಲಿ ಭೇದ, ಆಚಾರದಲ್ಲಿ ಭೇದ, ಭಾವದಲ್ಲಿ ಭೇದ, ವಿಚಾರ ವಿಚಾರದಲ್ಲಿ ಭೇದ, ನೆನೆವಲ್ಲಿ ಭೇದ, ಅರಿವಲ್ಲಿ ಭೇದವಾಗಿ ಹೃದಯ ಭ್ರಾಂತಿಯೆ ನಿಬಿಡವಾಗಿದೆ. ಈ ಕಾರ‍್ಗತ್ತಲೆಯಿಂದ ಬಿಡುಗಡೆಯಾಗಿ ಮಾನವ ಬೆಳಕಿನತ್ತ ಬರುವುದು ಯಾವಾಗ? ಸಟೆಯೆ ದಿಟವಾಗಿರುವಲ್ಲಿ ದಿಟದ ಘನವ ತಿಳಿಯುವುದದೆಂತು? ಈ ಭ್ರಮದಿಂದ ಬಿಡುಗಡೆಯಾಗಿ ತಾನಾರೆಂಬ

ತನ್ನಿರುವಿನ ಅರಿವು ತಿಳಿಯುವುದು ಯಾವಾಗ? ಇದು ಕಾರಣ ಪ್ರಭುದೇವ, ತನುವಿಂಗೆ ತನುವಾಗಿದ್ದ ಘನವರಿಯಲು ಅರುಹಿದ.

ತನು: ಇದು ಸಕಲರಿಗೆ ಕಾಣಿಸಿಕೊಳ್ಳುವ ತನು. ಬಾಹ್ಯ ತನು, ಕೆಡುವ ತನು, ಷಡ್ವಿಕಾರ ತನು, ಮಲಮಯ ತನು, ಷಡ್ಧಾತು ತನು ತೋರಿ ಇಲ್ಲವಾಗುವ ತನು, ತಾಯಿ ಗರ್ಭದಲ್ಲಿದ್ದ ತನು, ಅಲ್ಲಿಂದ ಹೊರಗೆ ಬಂದ ತನು, ಬಾಲ್ಯ, ಯೌವನ, ಮುಪ್ಪು, ಮರಣಂಗಳಿಂದುಕ್ತವಾದ ತನು, ಸೊಕ್ಕು ಸೊರಗುವಿಕೆಯಿಂದುಕ್ತವಾದ ತನು, ಇದು ಭ್ರಾಂತರಿಗೆ ಕಾಣಿಸಿಕೊಳ್ಳುವ ತನು. ಇದರ ಪರಿಚಯ ಸಕಲರಿಗಿದೆ.

ತನುವಿಂಗೆ ತನುವಾಗಿ: ಇದು ಬಲ್ಲವರ ತನು, ಅಭಾದಿತ ತನು, ಕೆಡದ ತನು, ಶುದ್ಧ ತನು, ನಿರವಯ ತನು, ಇದು ತತ್ತ್ವಅರಿತವರಿಗೆ ಗೋಚರವಾಗುವ ತನು. ಈ ನಿರುಪಮ ತನುವ ತಿಳಿಯದ್ದರಿಂದ ಜನನ ಮರಣ ದಿಟವಾಗಿದೆ. ಯಾರಿಗೆ ನಿರ್ಮಳಾಂಗ ದರ್ಶನವಾಗಿದೆ ಅವರಿಗೆ ಜನನವ ಕಾಣದು, ಮರಣವ ಕಾಣದು. ಅವರಿಗೆ ಸಾವೆಂಬುದು ಸಯವಲ್ಲ, ಸಾವನರಿಯರು. ಅವರು ಮುನ್ನಮುನ್ನಲಾದ ಘನ, ತನ್ನಿಂದ ತಾನಾದ ಘನ, ಅಂಗದಲ್ಲಿ ಉದಯವಾದ ಲಿಂಗೈಕ್ಯರಿಗೆ, ಬಾಹ್ಯ ತನು ನಷ್ಟ, ಬಾಹ್ಯಮನವು ನಷ್ಟ, ಜೀವತ್ವವೂ ಪುಸಿ, ಬೆಳಕಿನಲ್ಲಿ ಕತ್ತಲೆಗೆ ಇಂಬುಂಟೆ? ಸತ್ಯದಲ್ಲಿ ಮಿಥ್ಯೆಗಿಂಬುಂಟೆ? ಪರಮಸತ್ಯ ಸಾಕ್ಷಾತ್ಕಾರವಾದವಂಗೆ ಸತ್ಯಅಸತ್ಯದ ಗಜಿ ಬಿಜಿ ತೋರದು, ಮನದ ಮನ ಆವುದು ಗೊತ್ತೆ? ಅದು ವರ್ಣಾತೀತ. ಕೇವಲ ಜ್ಯೋತಿ, ಈ ಸ್ವಯಂಜ್ಯೋತಿ ಪ್ರಕಾಶಿಸುವಲ್ಲಿ ಸಂಕಲ್ಪ ವಿಕಲ್ಪರೂಪಿ ಮನಕ್ಕಿಂಬುಂಟೆ?

ಕಲ್ಪಿತ ಮನವೆಂಬುದು ಅವಿಚಾರ ಮನ ಮರವುಳ್ಳ ಮನ, ಭ್ರಾಂತಿ ಮನ, ಇಲ್ಲದ್ದು ಕಲ್ಪಿಸುವ ಮನ ಇದ್ದುದನರಿಯದಿಹ ಮನ. ಇದರ ನಿವಾಸ ಕತ್ತಲೆಯಲ್ಲಿ, ಅದು ಬೆಳಕನ್ನು ಸೇರದು, ಹೀಗಾಗಿ ಪ್ರಪಂಚವೆಲ್ಲವು ಇದರ ಅಧಿಕಾರದಲ್ಲಿ, ಇದರ ಹಿರಿತನ ವಿಶ್ವದ ತುಂಬ . ಮನಕ್ಕೆ ಮನವಾಗಿದ್ದ ವರ್ಣಾತೀತ ಕೇವಲ ಜ್ಯೋತಿಯ ಅರಿತಿದ್ದಾರೆ. ಅಲ್ಲಿಯೆ ಇದರ ಪೂರ್ವಾಶ್ರಯ ನಷ್ಟವಾಗಿದೆ. ಏಕೆಂದರೆ ಅಲ್ಲಿಯೆ ವರ್ಣಾತೀತವಾಗಿಹ ಜ್ಯೋತಿ ಪ್ರಜ್ವಲಿಸುವುದು. ಅಲ್ಲಿ ಕಲ್ಪಿತವೆ ನಷ್ಟವಾಗಿರುವುದರಿಂದ ಅಕಲ್ಪಿತತ್ವವೆ ಬೆಳಗುಳ್ಳದ್ದಾಗಿ ಬೆಳಗುವಲ್ಲಿ ಭ್ರಾಂತಿಗಿಂಬುವತರದು, ಇದು ಕಾರಣ, ಭ್ರಾಂತಿ ಮನವು ನಷ್ಟವಾಗಿಹುದು.

ಪ್ರಭುವಿನ ಮನ ಸುಮನ, ಅದು ನಿರ್ಮಾಯವು ನಿರಾಳವು ಅಚಿಂತ್ಯವಾದುದರಿಂದ ಗುಹೇಶ್ವರಲಿಂಗ ತಾನಾಗಿ ಪ್ರಜ್ವಲಿಸಿ ಸಕಲ ಶರಣ ಶರಣೆಯರಿಗೆಲ್ಲ ಮಹಾಲಿಂಗದ ಸಂಜ್ಞೆಯುಳ್ಳದ್ದಾಗಿಹುದು, ತನುವಿಂಗೆ ತನುವಾಗಿ ಮನಕ್ಕೆಮನವಾಗಿ ಜೀವಕ್ಕೆ ಜೀವವಾಗಿದ್ದುದ ತನ್ನಿಂದ ನೋಡಿದಡೆ, ಒಂದು ಪುಸಿ, ಒಂದು ದಿಟ, ಒಂದು ಬಿಂಬ, ಒಂದು ಪ್ರತಿಬಿಂಬ, ಒಂದು ಭ್ರಾಂತಿಜೀವ, ಇನ್ನೊಂದು ನಿಭ್ರಾಂತವು ನಿರ್ಭಾವವು. ಭ್ರಾಂತಿ ಜೀವ, ಭಾವ ಭ್ರಮದಿಂದುಕ್ತವು, ಇನ್ನೊಂದು ಆವಾವ ಭಾವಕ್ಕೆಡೆಗೊಡದ ನಿಜದಲ್ಲಿ ಲೀಯವಾದ ಜೀವ. ಮಿಗೆ ಮಿಗೆ ಮೀಸಲವಾಗಿಹ ತತ್ವವರಿತ ಜೀವ ಲಿಂಗ ಸಕಲ ಸಂಯೋಗ ವರ್ಮಸ್ಥಲವರಿತ ಜೀವ, ನಿರಂತರವಾಗಿರುವ ಮಂಗಳಮಯಜೀವ, ಲಿಂಗಕ್ಕೆ ಲಿಂಗವೆನ್ನದ ಜೀವ, ಮರ ಮರವರುವೆಂಬೆರಡಕ್ಕೂ ಎಡೆಗೊಡದ ಜೀವ, ನಿಶ್ಚಿಂತ ಜೀವ, ನಿರಾಳ ಜೀವ, ಸ್ವಸ್ವರೂಪದಲ್ಲಿ ಲೀಯವಾದ ಜೀವ, ಇದು ಮಹಾಂತ ಗುಹೇಶ್ವರನಲ್ಲಿ ತಲ್ಲೀಯವಾದ

ಜೀವ, ಇದು ಘನಕ್ಕೆ ಘನವಾದುದರಿಂದ ತನಗಿಂತನ್ಯವಾದುದಿಲ್ಲ, ತನ್ನೊಂದಿಗೆ ಸೇರಿದುದು ಇಲ್ಲ. ಗಗನದಂತೆ ಸಮರಸವಾಗಿರುವ ಜ್ಞಾನಾಮೃತವು ತಾನಾದುದರಿಂದ ಲಿಂಗವು ತನಗಿಂತ ದೂರವೆನಲಿಲ್ಲ. ಸಮೀಪವೆನಲಿಲ್ಲ. ಕಲ್ಪಿತವೆ ನಷ್ಟವಾಗಿರುವಲ್ಲಿ ಭಾವಿಸಲು ಸಂದೆಲ್ಲಿ, ಭಾವಕ್ಕಿಂಬುಗೊಡದ ಘನದೊಳ, ಭಾವವೇತರದು, ನಿರವಧಿಯೊಳ ಒಳಗೆಂಬ ಭಾವವಿಲ್ಲ, ಹೊರಗೆಂಬ ಭಾವವಿಲ್ಲ, ಲಿಂಗದ ರಹಸ್ಯ ತಿಳಿಯದ ಪರಿಣಾಮವೆ ದೂರ ಸಮೀಪವೆಂದು ಒಳಗೊಂದು ಹೊರಗೊಂದು ಕಲ್ಪಿಸಿ ವೃಥಾ ಕೆಟ್ಟರು ಎಂದು ಹೇಳಿಹರು.

ಇದಲ್ಲದೆ ಲಿಂಗದ ಯತಾರ್ಥಜ್ಞಾನವಿಲ್ಲದ್ದರಿಂದ ಇಷ್ಟಲಿಂಗವು ಅನುಪಮ ಲಿಂಗವೆಂದು ತಿಳಿಯದೆ ಪೂಜಾಲಿಂಗವೆಂದು ಅದನ್ನು ಪೂಜಿಸಿದಲ್ಲಿ ಬೇಡಿದ ಇಷ್ಟಾರ್ಥವ ನೀವುದೆಂದು ಕೊಡುವ ಕೊಳ್ಳುವ ವ್ಯವಹಾರಕ್ಕೆ ಉಪಯೋಗಿಸಿಕೊಂಡ ಭಕ್ತರು ಇದ್ದಾರೆ, ಮಾಹೇಶ್ವರರು ಇದ್ದಾರೆ. ಇವರುಗಳಲ್ಲಿ ಆರ್ತಭಕ್ತರು ಉಂಟು, ಅರ್ಥಾರ್ಥ ಭಕ್ತರು ಉಂಟು, ಜಿಜ್ಞಾಸುಗಳು ಉಂಟು, ಅನುಭವಿಗಳು ಉಂಟು ಸಧ್ಯದ ಸಮಯದಲ್ಲಿ ಅನಿತ್ಯದ ಫಲ ಪದಕ್ಕಾಗಿ ಲಿಂಗಯ್ಯನನ್ನು ಪೂಜಿಸುವ ಭಾವಭ್ರಮಿತರೆ ಹೆಚ್ಚಾಗಿ ಭಕ್ತಿಯ ಘನತ್ವ ತಿಳಿಯದಂತಾಗಿದೆ. ಮಹೇಶ್ವರರ ಘನತ್ವ ತಿಳಿಯದಂತಾಗಿ ಮಾಯಿಕ ತತ್ವಕ್ಕೆ ಮಾರು ಹೋಗಿ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗವ ತಿಳಿಯುವ ಹಸಿವು ಇಲ್ಲವಾಗಿದೆ. ಇದನ್ನು ಕಂಡೆ ಪ್ರಭುದೇವರು,

3

**ಬೇಡದ ಮುನ್ನವೆ ಮಾಡಬಲ್ಲಡೆ ಭಕ್ತಿ**
**ಬೇಡುವನೆ ಲಿಂಗ ಜಂಗಮವು ?**
**ಬೇಡುವವರಿಗೆಯೂ ಬೇಡಿಸಿಕೊಂಬುವರಿಗೆಯೂ**
**ಪ್ರಸಾದವಿಲ್ಲ-ಗುಹೇಶ್ವರಾ.** || 157 ||

**ತಾತ್ಪರ್ಯ**: ಭಕ್ತನಾರು? ಲಿಂಗ ಜಂಗಮನಾರು? ಪ್ರಸಾದ ಆರು? ಪ್ರಭುದೇವರ ಮಹದರಿವು ಸೂರ್ಯಪ್ರಕಾಶದಂತೆ ಪ್ರಕಾಶಿಸುವ ಪ್ರಕಾಶ; ಅಲ್ಲಲ್ಲ. ಇದು ಉದಯಾಸ್ತಗಳಿಂದ ಕೂಡಿದ ಪ್ರಕಾಶವಾದ್ದರಿಂದ ಈ ಪ್ರಕಾಶವಾಗದು, ಈ ಮಹಾಂತನ ಮಹದರುವು ಉದಯ ಅಸ್ತವೆನ್ನದೆ ಬೆಳಗುವ ಚಿತ್ ಪ್ರಕಾಶ ಒಳಹೊರಗೆನ್ನದೆ ಬೆಳಗುವ ಚಿದ್ಘನ, ಈ ಮಹಾಂತನಿಂದ ಭಕ್ತನ ಭಕ್ತಿಯ ಘನತ್ವ , ಲಿಂಗ ಜಂಗಮದ ಘನತ್ವ ಪ್ರಸಾದಗಳ ಹಿರಿಮೆ ತಿಳಿಯುವುದು ಅವಶ್ಯವು.

ಭಕ್ತನೆಂದರೆ ಬೇಡದ ಮುನ್ನ ಮಾಡಬಲ್ಲಡಾತ ಭಕ್ತ, ಈ ಭಕ್ತ ತನುವ *ಗುರುವಿಂಗಿಕ್ಕಿ ಗುರುವಾದಾತ. ಮನವ ಲಿಂಗಕಿಕ್ಕಿ ಲಿಂಗವಾದಾತ. ಧನವ ಜಂಗಮಕಿಕಿ, ಜಂಗಮವಾದಾತ. ಇಂತಿ ತ್ರಿವಿಧವ ತ್ರಿವಿಧಕಿಕ್ಕಿ ಸದ್ಗುರು ಕಪಿಲಸಿದ್ಧ ಮಲ್ಲಿಕಾರ್ಜುನ ನಿಮ್ಮ ಶರಣರೆಲ್ಲರಿಗೂ ಗುರುವಾದನಯ್ಯ ಬಸವಣ್ಣ.* ಭಕ್ತನಾಗಿ ಬೇಡದ ಮುನ್ನ, ಲಿಂಗ ಜಂಗಮರಿಗೆ ಅರ್ಪಿತ ಮಾಡುವುದು, ಏನನ್ನು ಅರ್ಪಿತ ಮಾಡುವುದು? ತನು, ಮನ, ಧನ ಅರ್ಪಿತ ಮಾಡುವುದು. ಇವು ಮೂರನ್ನು ಲಿಂಗಾಂಗ ಸಮರಸ ಜ್ಞಾನಕ್ಕಾಗಿ ಅರ್ಪಿತ

ಮಾಡುವುದು. ಸಮ್ಯಜ್ಞಾನಕ್ಕಾಗಿ ಅರ್ಪಿತ ಮಾಡುವುದು, ಲಿಂಗ ಸಕೀಲ ಸಂಯೋಗ ವರ್ಮಸ್ಥಲವರಿಯಲು ಅರ್ಪಿತ ಮಾಡುವುದು. ಅರ್ಪಿತ ಮಾಡಿದಲ್ಲಿ ಇಲ್ಲದುದು ಇಲ್ಲವಾಗಬೇಕು. ಇದ್ದ ಪರತತ್ವ ಬೆಳಗಬೇಕು. ಇಲ್ಲದ ಮರವು ಇಲ್ಲವಾಗಬೇಕು. ಇಲ್ಲದ ಮಾಯಾರೂಪಿ ತೋರಿಕೆ ಇಲ್ಲವಾಗಬೇಕು. ಇಲ್ಲದ ಪ್ರಪಂಚ ಇಲ್ಲವಾಗಬೇಕು. ಇಲ್ಲದ ಕರ್ಮಪಾಶ ಇಲ್ಲವಾಗಬೇಕು. ಇಲ್ಲದ ತನು, ಮನ, ಧನ ಇಲ್ಲವಾಗಿ, ಇದ್ದ ಸದ್‌ಜ್ಞಾನಭರಿತ ತಾನಾಗಬೇಕು. ಲಿಂಗ ಜಂಗಮವೆಂಬಿವು ತನ್ನರಿವಿನ ಅರುವಾಗಬೇಕು. ಇದಲ್ಲದೆ ನಿರಂತರವಾಗಿದ್ದ ತೆರಹಿಲ್ಲದ ಜ್ಞಾನ ಪ್ರಸಾದ ತನ್ನದಾಗಿ ಪ್ರಜ್ವಲಿಸಬೇಕು.

ಬೇಡುವನೆ *ಲಿಂಗ ಜಂಗಮ: ಜಂಗಮ ಆರು ಗೊತ್ತೆ ? ಲಿಂಗ ಒಂದಾಗಿದ್ದ ಜಂಗಮ, ಜಂಗಮ ಒಂದಾಗಿದ್ದ ಲಿಂಗ. ಉಪಮೆಗೆ ತಂದು ಎರಡೆನ್ನಬಹುದೆ ? ನಿರ್ಗಮನಿ ಜಂಗಮ, ನಿರಾಳ ಜಂಗಮ, ನಿರಾಲಂಬ ಜಂಗಮ, ನಿಜೈಕ್ಯ ಜಂಗಮ, ಶುದ್ಧ ಶಿವೈಕ್ಯ ಕೂಡಲಚೆನ್ನ ಸಂಗಮ.*

ಲಿಂಗ ಜಂಗಮ ಅವನೆಂತು ಬೇಡುವನು ? ಬಯಲು ಆರನ್ನಾದರೂ ಬೇಡುವುದೆ ಅದಕ್ಕಾವ ಅಭಿಲಾಷೆ ? ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ನಿಜವೆಂದರಿದ ನಿಜೈಕ್ಯ ಈ ಮಹಾಂತ ಬೇಡುವನೆ ? ಘನಕ್ಕೆ ಘನವಾಗಿಹ ಈ ಘನವಂತನ ದಿವ್ಯ ದೃಷ್ಟಿಗೆ ತನ್ನ ಹೊರತು ಅನ್ಯ ಕಾಣುವನೆ ? ತಾನೇ ಸರ್ವಾತ್ಮ, ತಾನೇ ನೇತಾತ್ಮ, ತಾನೇ ತಾನಾಗಿಹ ಮಹಾಂತ ಆರಾಗಿ ಬೇಡುವನು ? ಅದಾವ ಕಾರಣಕ್ಕಾಗಿ ಕೇಳುವುದು ? ತೃಪ್ತರೂಪ ತೃಪ್ತನು ಬೇಡವುದೆಂತು ? ಚಿನ್ಮಯಾನಂದವು ಆನಂದಕ್ಕಾಗಿ ಅಲೆದಾಡುವುದೆ ? ಅಮೃತವು ರುಚಿಯ ಬಯಸುವುದೆ ? ಸೂರ್ಯನು ಬೆಳಕಿಗಾಗಿ ಅಲೆದಾಡುವನೆ? ಹಾಗೆ ಜ್ಞಾನಾಮೃತನು, ಜ್ಞಾನಾನಂದಮಯನು, ಜ್ಞಾನಸ್ವರೂಪನು, ಜ್ಞಾನೇಶ್ವರನು, ಜ್ಞಾನಕ್ಕಾಗಿ ಬೇಡುವನೆ ? ನಿತ್ಯಾನಂದನು ಅನಿತ್ಯವ ಕಾಣುವನೆ ? ಆತನ ದಿವ್ಯ ದೃಷ್ಟಿಗೆ ಸ್ಥಲವ ಕಾಣನು, ನಿಸ್ಥಲವ ಕಾಣನು,ಏನನ್ನು ಕಾಣದ್ದರಿಂದ ಮರವರುವೆಂಬ ಗಜಿಬಿಜಿ ಕಾಣನು. ಉಪಮಿಸದ, ನಿಜದಲ್ಲಿದ್ದ ನಿರುಪಮ ಏನೊಂದು ಅರಿಯನು. ಇದು ಕಾರಣ ಲಿಂಗ ಜಂಗಮ ಬೇಡದವನು.

ಲಿಂಗವರಿತು ಲಿಂಗವಾಗಿಹ ಜಂಗಮ, ಈ ಜಂಗಮ ಘನ. ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದವ ಕೊಂಡ ಘನವಂತ. ಜಂಗಮಕ್ಕೆ ಜಂಗಮವಾಗಿ ಜಂಗಮ ಪ್ರಸಾದವ ಕೊಂಡ ಘನವಂತನಾದುದರಿಂದ ಲಿಂಗ ಅದನ್ನು ಹೇಗೆ ಬೇಡದೋ ಹಾಗೆ ಲಿಂಗವೇ ತಾನಾಗಿಹ ಜಂಗಮ ಏನನ್ನು ಬೇಡನು. ಪ್ರಸಾದಿಗಳೆಂದರೆ ಪರಮ ಜ್ಞಾನಿಗಳು, ನಾ ನೀನೆಂಬುದಕ್ಕೂ ತೆರಹಿಲ್ಲದ ಜ್ಞಾನಿಗಳು. ಜ್ಞಾನಮಯರು, ಜ್ಞಾನಗಂಗಾ ಪರಮಾಮೃತರು ಅವರಿಗೆ ಪ್ರಸಾದವೆ ಗುರುವಾಗಿದೆ. ಲಿಂಗವಾಗಿದೆ. ಜಂಗಮವಾಗಿದೆ. ಪ್ರಸಾದವೇ ಪರತತ್ತ್ವ ಪರಮಾನಂದ, ವಾಙ್ಮನೋತೀತ. ಪ್ರಸಾದವೇ ಪರವಸ್ತುವಾಗಿಹ ಘನವ ಅದನೆಂತು ಬಣ್ಣಿಸುವುದು.

ಪ್ರಸಾದಿಕ ಪ್ರೇಮಿಗಳು ಬಹಳಷ್ಟು ಇದ್ದಾರೆ. ಇದ್ದರೂ ಸರಿಯಾದ ತಿಳುವಳಿಕೆ ಇದ್ದವರು ತೀರ ವಿರಳ. ಪ್ರಸಾದವೆಂದರೆ ಕೊಡಕೊಳ್ಳುವ ಪದಾರ್ಥ ಎಂದು ತಿಳಿದು ಭಕ್ತ ಬೇಡುವವನಾಗಿದ್ದಾನೆ. ಜಂಗಮದೇವನು ಕೊಡುವವನಾಗಿಹನು. ಕೊಡಲಿ, ಕೊಳ್ಳಲಿ

ಅಡ್ಡಿಯಿಲ್ಲ. ಅಕ್ಷರಾಕ್ಷರ ಮೀರಿದ ಜ್ಞಾನಪ್ರಸಾದ ಕೊಡುವವರಾಗಲಿ. ಕೊಳ್ಳುವವರಾಗಲಿ, ಇದು ಭಕ್ತಜಂಗಮರ ಸಾಮರಸ್ಯ, ಗುರು ಶಿಷ್ಯರ ಸಾಮರಸ್ಯ ಇದನ್ನು ಬಿಟ್ಟು ಅನಿತ್ಯ ಪದಾರ್ಥ ಕೊಟ್ಟರೆ ಅದು ನಿತ್ಯ ಪ್ರಸಾದವಾಗದು. ಜಡ ವಸ್ತು, ಅದು ಅವಸ್ತುವು. ಅದು ಮಹಾ ಪ್ರಸಾದ. ಮಹದರುವು ಮಹಾಜ್ಞಾನವಾಗದು. ಅನ್ನ ಪ್ರಸಾದವಾಗದು, ನೀರು ಪಾದೋದಕವಾಗದು, ಇದು ಕಾರಣ ಬೇಡುವವರಿಗೆಯೂ, ಬೇಡಿಸಿಕೊಂಬುವವರಿಗೆಯೂ ಪ್ರಸಾದವಿಲ್ಲ, ಪರಮಜ್ಞಾನವಿಲ್ಲವೆಂದು ಹೇಳಿಹರು.

ಪ್ರಸಾದರೂಪಿ ಪರಮಜ್ಞಾನ, ಪರಮಾಮೃತ, ವಾಙ್ಮನೋತೀತವಾದುದು. ತಾನಾರೆಂದರಿತ ನಿಜಾನುಭವಿಯೇ ಸಕಲರಿಗೆ ಜ್ಞಾನವ ನೀಡುವ ಜ್ಞಾನದಾಸೋಹಿ, ಅಲ್ಲಿಯೇ ಗುರು ಉಂಟು, ಲಿಂಗ ಉಂಟು, ಜಂಗಮ ಉಂಟು, ಪ್ರಸಾದ ಉಂಟು, ನಿಜಾನುಭವವಿದ್ದಲ್ಲಿಯೇ ಪಡಿಪದಾರ್ಥ ಉಂಟೆಂದು ಹೇಳಿಹರು.

**4**

**ಅನುಭಾವದಿಂದ ಹುಟ್ಟಿತ್ತು ಲಿಂಗ,**
**ಅನುಭಾವದಿಂದ ಹುಟ್ಟಿತ್ತು ಜಂಗಮ,**
**ಅನುಭಾವದಿಂದ ಹುಟ್ಟಿತ್ತು ಪ್ರಸಾದ,**
**ಅನುಭಾವ ಅನುವಿನಲ್ಲಿ ಗುಹೇಶ್ವರಲಿಂಗ ಅನುಪಮ ಸುಖಿ.** || 170 ||

**ತಾತ್ಪರ್ಯ:** ಅನುಭಾವವಿದು ಅತೀಂದ್ರಿಯ ವಿದ್ಯೆಯಿಂದ ಲಭ್ಯವಾಗುವ ಅನುಭಾವ, ಈ ಅನುಭಾವದಿಂದ ಹುಟ್ಟಿತ್ತು ಲಿಂಗ, ಇದಾರ ಅನುಭಾವ ! ಇದು ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗದನುಭಾವ, ಕಲ್ಪಿತಕ್ಕೆಡೆಗೊಡದವರ ಅನುಭಾವ ತಾನಾರೆಂದರಿತವರ ಅನುಭಾವ, ದಿಟದನುಭಾವ, ಮಾತು ಮನಂಗಳಿಗೆಡೆಗೊಡದ ಅನುಭಾವ, ಶೃತಿ ಸ್ಮೃತಿಗಳಿಗಗೋಚರವಾದ ಅನುಭಾವ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನಾನುಭಾವ, ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದಿಯಾಗಿ ಕೊಂಡವರ ಪರಾತ್ಪರ ಅನುಭಾವ. ಭಾವಕ್ಕಿಂಬುಕೊಡದ ಅನುಭಾವ, ಶಬ್ದಮೀಸಲವಾಗಿಹ ಅನುಭಾವ. ಸ್ಥಲ-ನಿಸ್ಥಲವೆನ್ನದ ಅನುಭಾವ, ತಾನಾರೆಂಬ ತನ್ನ ನಿರ್ಣಯ ತನಗಾದ ಅನುಭಾವ ಮಹಾನುಭವಿಗಳಲ್ಲಿ ನಿಜವನೆಲೆಗೊಂಡ ಸ್ವಾನುಭಾವ. ಅವರಲ್ಲಿ ಹುಟ್ಟಿದ ಲಿಂಗ, ಮೂಗ ಮೂಗರ ಪ್ರಸಂಗದಿಂದ ಹೊರ ಹೊಮ್ಮಿದ ಲಿಂಗ. ವಿವರಿಸುವರೆ ಅಗಮ್ಯ, ಅಪ್ರಮಾಣ, ಅಚಿಂತ್ಯ. ಅಚಿಂತ್ಯವ ಚಿಂತನಕ್ಕೆ ತರುವರೆ ಹೇಳಾ ? ಅಕಥನೀಯ ಘನವ ಕಥನವ ಮಾಡುವರೆ ಹೇಳಾ ? ಅಖಂಡಿತವ ಕಲ್ಪಿತಕ್ಕೊಳಪಡಿಸುವರೆ ಹೇಳಾ.

ಶರಣನ ಹೃದಯ ಲಿಂಗಕ್ಕೆ ಲಿಂಗವಾಗಿಹ ಘನ, ಮೌನದ ಮೌನ, ಚಿನ್ಮುದ್ರೆ. ಇದನೆಂತು ವರ್ಣಿಸುವದು, ಇಲ್ಲಿ ಅಬಾಧಿತ ಘನವ ಅದನೆಂತುಸುರುವುದು ಶಬ್ದವೇ ಮೀಸಲವಾಗಿರುವಲ್ಲಿ ನಾಮರೂಪ ಆಧಾರವೆಂದು ಹೇಗೆ ಹೇಳುವುದು ಆದಿ ಎಂದು ಹೇಗೆ ಹೇಳುವುದು, ಪ್ರಪಂಚವೆಂಬ ಆರೋಪಿತಕ್ಕಿಂಬು ಅದೆಂತು ಸಾಧ್ಯ. ನಾಶ ಅವಿನಾಶ ಪ್ರಕಟ ಅಪ್ರಕಟ ಪ್ರಕಾಶ-ಪ್ರಕಾಶಕ ಲಕ್ಷಣ-ಲಕ್ಷ್ಯ ಇವು ನುಡಿಗೆಡೆಗೊಡದ ಘನದಲ್ಲಿ

ಹೇಗೆ ಸಾಧ್ಯ. ನಿಸ್ಸೀಮವು ಸೀಮಿತವಾಗಬಹುದೆ? ಶರಣನ ಅನುಭಾವ ಅನುಪಮ, ಅನುಭವದಿಂದ ಹುಟ್ಟಿದ ಲಿಂಗವು ಅನುಪಮ, ಅನುಭಾವದಿಂದ ಹುಟ್ಟಿದ ಜಂಗಮವು ಅನುಪಮ. ಈ ಅನುಪಮ ಅನುಭಾವ ಭಾವಕ್ಕಗಮ್ಯವಾದ ಅನುಭಾವ, ಧ್ಯಾನಾತೀತ ಅನುಭಾವ, ಅರಿಯದರುವುಳ್ಳ ಅರುವಿನ ಅನುಭಾವ. ಇಲ್ಲಿ ಮರವೆಂಬುದಿಲ್ಲ, ಅರುವೆಂಬುದಿಲ್ಲ, ಅರಿತೆನೆಂಬುದಿಲ್ಲ, ಅರಿಯೆನೆಂಬುದಿಲ್ಲ, ನಾಮವೆಂಬುದಿಲ್ಲ, ಅನಾಮವೆಂಬುದಿಲ್ಲ, ರೂಪವೆಂಬುದಿಲ್ಲ, ಅರೂಪವೆಂಬುದಿಲ್ಲ, ಆಸ್ತಿ ಎಂಬುದಿಲ್ಲ, ನಾಸ್ತಿ ಎಂಬುದಿಲ್ಲ, ಇಲ್ಲ ಇಲ್ಲವೆಂಬುದಿಲ್ಲಾಗಿ ವಾಣಿ ಮೌನ, ಮನ ಮೌನ, ನೆನಹು ಮೌನ, ಭಾವ ಮೌನ, ಮೌನದ ಮೌನವಾಗಿ ಬೆಳಗುಳ್ಳ ಬೆಳಗಿನ ಘನವದೆಂತುಸುರುವುದು.

ಇಂತಪ್ಪ ಜಂಗಮಕ್ಕೆ ಜಂಗಮವಾಗಿ ಜಂಗಮ ಪ್ರಸಾದ ಕೊಂಡ ಅನುಭಾವದಿಂದ ಹುಟ್ಟಿದ ಜಂಗಮ, ಅಪ್ರತಿಮ ಜಂಗಮ, ಲಿಂಗ ಒಂದಾಗಿರ್ದ ಜಂಗಮನ ಉಪಮಗೆ ತರಬಾರದು ನೋಡಾ. ಅನುಭಾವದಿಂದ ಹುಟ್ಟಿದ ಪ್ರಸಾದ, ಈ ಪ್ರಸಾದ ಅತೀಂದ್ರಿಯ ಜ್ಞಾನದಿಂದ ಹುಟ್ಟಿದ ಪ್ರಸಾದ, ನಿಃಶಬ್ದ ವೇದಿಗಳ ಪ್ರಸಾದ. ಶೃತಿಗಳೇ ಹೆತ್ತರಿವು ಆದುದರಿಂದ ಪರಮ ಜ್ಞಾನ, ಪರಮಾಮೃತ. ಇದು ಆರುವಿಂಗರುವಾಗಿಹ ಗಗನಸಾದೃಶವಾಗಿಹ ಜ್ಞಾನಾಮೃತ. ಇದು ತೆರಹಿಲ್ಲದ ಜ್ಞಾನ, ನಿಸ್ಸೀಮ ಜ್ಞಾನ, ಪರತತ್ವ ಪರಮಾನಂದ, ವಾಙ್ಮನೋತೀತ ಇದು ಅರುವ ಅರಿದರಿದ ಮಹಜ್ಞಾನ. ಮಹದರವು ಎಂಬುದು ಉಪಚಾರಕ್ಕೋಸುಗ ಹೇಳಿದುದು. ಖಂಡಿತವಲ್ಲದ ಅಖಂಡಿತ ಜ್ಞಾನವು ಅದು ಪಂಚ ಪಕ್ವಾನ್ನದಿಂದುಕ್ತವಾದ ಒಂದು ಪಾಯಸವಾಗಬಹುದೆ ? ನಿರಂತರವಾಗಿಹ ಮಂಗಲಮಯ ಪರತತ್ವದರಿವು ಬಿಸಿ ತಂಗಳುಳ್ಳ ಪಾಯಸವಾಗಬಹುದೆ? ಅದು ಪ್ರಸಾದವೆಂದು ಸ್ವೀಕರಿಸಿದುದು ಮಲಮಯವಾಗಬಹುದೆ ? ಮಲವಾದುದು ಅದು ಪ್ರಸಾದವೆಂದು ತಿಳಿಯಬಹುದೆ?

ಶ್ರೀಗುರುವಾಗಲಿ, ಲಿಂಗ ಒಂದಾಗಿರ್ದ ಜಂಗಮವಾಗಲಿ, ಒಂದು ವ್ಯಕ್ತಿಯಾಗಬಹುದೆ ? ಆ ಮಹಾಂತನು ಒಂದು ಸೀಮಿತ ಜಾತಿಗೆ ಒಳಪಡಬಹುದೆ ? ಲಿಂಗವು ಶಿಲೆಯಾಗಬಹುದೆ ? *ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು, ನೆಲಿಸಿ ಲಿಂಗವೆನಿಸಿತ್ತಯ್ಯ ಲಿಂಗವು, ಇದರಿರವ ಅರುಹಿದಲ್ಲಿ ಗುರುವೆನಿಸಿತ್ತಯ್ಯ ಲಿಂಗವು, ಗುರು ಲಿಂಗ ಜಂಗಮಕ್ಕೆ ತಿಲಾಂಶವು ಭೇದವಿಲ್ಲ ನೋಡಾ, ಎಲೆ ದೇವಾ ಬೇಧಿಸಿದವಂಗೆ ಭವಬಾಧೆ ತಪ್ಪುವುದೆ ? ದೇವರ ದೇವ ಕಪಿಲಸಿದ್ಧ ಮಲ್ಲಿಕಾರ್ಜುನ.* ಇದು ಕಾರಣ, ಅತೀಂದ್ರಿಯ ಜ್ಞಾನವದು ಜ್ಞಾನಾಮೃತದಿಂದುದಯಿಸಿದ ಅನುಭಾವ ಈ ಅನುಭಾವದನುವಿನಲ್ಲಿ ಗುಹೇಶ್ವರ ಲಿಂಗ ಅನುಪಮಸುಖಿ, ಸುಖವಾವುದು? ಸುಖಿಯಾವುದು? ಸುಖದನುಭಾವವಾವುದು? *ಸುಖಿ ಶರಣ, ಸುಖಿ ಲಿಂಗ ಸುಖದನುಭಾವ ಸುಸಂಗ ಕೂಡಲ ಚೆನ್ನಸಂಗಾ ಪರವಿಲ್ಲಾಗಿ.*

ಅನುಭಾವವಾವುದು? ಅನುವು ಆವುದು? ಸುಸಂಗವೆ ಸುಖದನುಭಾವ, ಸುಸಂಗವೆಂದರೆ ಗುರುಶಿಷ್ಯರೀರ್ವರು. ಸಮಪ್ರಕಾಶಮಾನವಾದ ತತ್ವ ತಿಳಿದುಕೊಂಡಿರುವ ಗುರು ಶಿಷ್ಯರೈಕ್ಯವು. ಇದು ಅವಿರಳವಾಗಿರುವ ಸುಖವು. ಅನುಭಾವವದು, ಎಲ್ಲಿ ಮನಸ್ಸು ಮತ್ತು ವಾಕ್ ಅರಿಯಲು ಅಶಕ್ತವಾಗಿಹವು ಇದನ್ನು ಬೋಧಿಸಿದ ಗುರುತ್ವ ಇದನ್ನು ತಿಳಿದುಕೊಂಡ

ಶಿಷ್ಯತ್ವ ಅದು ಅನುಭಾವವಾಗಿಹದು, ಅಂತಪ್ಪ ಅನುಭಾವದಿಂದ ತಿಳಿದುಕೊಂಡಿರುವ ಸಮ ಪ್ರಕಾಶಮಾನವಾದ ತತ್ವವ ತಿಳಿದುದು ಅನುವು ಆಗಿದೆ. ಅನುವು ಸುಖರೂಪ ಲಿಂಗ, ಅನುವಿನಲ್ಲಿದ್ದ ಶರಣನೆ ಅನುಪಮ ಸುಖಿ. ಅಂದರೆ ಸಮ ಪ್ರಕಾಶಮಾನವಾದ ತತ್ವ ತಿಳಿದು ಸಮದೃಷ್ಟಿಯಲ್ಲಿ ನಿಂತುದೆ ಸವೆಯದ ಸುಖಿ, ಅನುಪಮ ಸುಖಿ ಎಂದು ಹೇಳಿಹರು. ಈ ಅನುಭಾವದನುವಿನಲ್ಲಿ ಗುಹೇಶ್ವರ ಲಿಂಗ ಅನುಪಮ ಸುಖಿ ಎಂದು ಪ್ರಭುದೇವ ಬಿತ್ತರಿಸಿದುದು.

5

**ಆಧಿ ಇಲ್ಲದಿರ್ದಡೆ ಲಿಂಗ ಪ್ರಸಾದಿ ಯೆಂಬೆನು,**
**ವ್ಯಾಧಿ ಇಲ್ಲದಿರ್ದಡೆ ಜಂಗಮ ಪ್ರಸಾದಿಯೆಂಬೆನು,**
**ಲೌಕಿಕವ ಸೋಂಕದಿರ್ದಡೆ ಸಮಯಪ್ರಸಾದಿಯೆಂಬೆನು.**
**ಇಂತೀ ತ್ರಿವಿಧ ಪ್ರಸಾದ ಸಂಬಂಧಿಯಾದಡೆ**
**ಆತನ ಅಚ್ಚ ಪ್ರಸಾದಿ ಎಂಬೆನು ಕಾಣಾ-ಗುಹೇಶ್ವರಾ.** || 167 ||

**ತಾತ್ಪರ್ಯ:** ಆಧಿ ಎಂಬುದು ರೋಗ, ವ್ಯಾಧಿ ಎಂಬುದು ರೋಗ, ಲೋಕವೆಂಬುದು ರೋಗ, ದೇಹದೃಷ್ಟಿ(ಕುರುಹು) ದೇಹಬುದ್ಧಿ ದೇಹಾಭಿಮಾನವೇ ಆಧಿಯಾಗಿದೆ. ದೇಹ ವಾಸನೆಯೆ ವ್ಯಾಧಿ. ಇದು ಒಳರೋಗವು ಲೋಕದೃಷ್ಟಿ ಲೋಕವಾಸನೆಯೆ ಮಹಾರೋಗವಾಗಿದೆ. ಈ ತ್ರಿವಿಧ ರೋಗ ಕಳೆದುಕೊಳ್ಳಲು ಲಿಂಗಪ್ರಸಾದಿ, ಜಂಗಮ ಪ್ರಸಾದಿ, ಸಮಯ ಪ್ರಸಾದಿಗಳಾಗುವುದು. ಇದರಿಂದ ನಿಜವಾದ ನಿರೋಗಿ ಎನಿಸಿಕೊಳ್ಳುವನು.

ಆಧಿ:- ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲ ಈ ಮಲತ್ರಯದಿಂದುಕ್ತವಾದ ಮೂರುವರೆ ಮೊಳ ಶರೀರವೆ ನಾನೆಂದು ಅಭಿಮಾನಿಸುವನೆ ಆಧಿಯು. ಇದರಿಂದ ಷಡ್ವಿಕಾರ ರೂಪವಾಗಿದೆ. ಇದರ ಅಭಿಮಾನಿಯು ವ್ಯಾಧಿ ಎಂದು ಹೇಳಿಸಿಕೊಳ್ಳುವನು. ಈ ವ್ಯಾಧಿಯ ನೋವು ಬಹು ನೋವು. ಹುಟ್ಟಿರುವೆ ಸಾಯುವೆ ಬಾಲ್ಯ ಯೌವನ, ಮುಪ್ಪು, ಮರಣ, ಸೊಕ್ಕುವಿಕೆ, ಸೊರಗುವಿಕೆಯ ಕಂಡು ಬಳಲುವ ಭಾವವುಳ್ಳವನಾದುದರಿಂದ ವ್ಯಾಧಿ ಎಂದು ಹೇಳಿಸಿಕೊಳ್ಳುವನು.

*ಲಿಂಗಪ್ರಸಾದಿ, ಜಂಗಮ ಪ್ರಸಾದಿ, ಸಮಯ ಪ್ರಸಾದಿಗಳ* ಅಧಿಕಾರಿ ಆರು ಗೊತ್ತೆ ? *ಕರಿಯನಿತ್ತಡೊಲ್ಲೆ, ಸಿರಿಯನಿತ್ತಡೆಯೊಲ್ಲೆ, ಹಿರಿದಿಪ್ಪ ರಾಜ್ಯವನಿತ್ತಡೊಲ್ಲೆ, ಬ್ರಹ್ಮಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರ ಪದವಿಯನೊಲ್ಲೆ, ನಾನಾ ಪದವಿಯನೊಲ್ಲೆ, ನಿಮ್ಮ ಶರಣರ ಸೂಳ್ನುಡಿ ಇತ್ತಡೆ ನಿಮ್ಮನಿತ್ತಂತೆ ಕಾಣಾ ರಾಮನಾಥ.* ಈ ನಿಷ್ಕಾಮ ಹೃದಯ, ನಿರಪೇಕ್ಷೆ ಹೃದಯವೆ ತ್ರಿವಿಧ ಪ್ರಸಾದಿಯ ಅಧಿಕಾರಿ. ಈ ಪುಣ್ಯ ಪುರುಷನಿಗೆ ಶರಣರ ಸ್ವಾನುಭವ ನುಡಿಯು ಅವಶ್ಯಕವು.

ಶರಣರ ಸೂಳ್ನುಡಿ ಎಂದರೆ *ಪ್ರಪಂಚ ಸತ್ಯ ಎನ್ನುವವರು ಕೋಟ್ಯಾನು ಕೋಟಿ, ಪ್ರಪಂಚ ಮಿಥ್ಯೆ ಎನ್ನುವವರು ಕೋಟ್ಯಾನುಕೋಟಿ ಪಾರಮಾರ್ಥ ಸತ್ಯ ಎನ್ನುವವರು*

ಕೋಟ್ಯಾನುಕೋಟಿ. ಪರಮಾರ್ಥ ಮಿಥ್ಯ ಎನ್ನುವವರು ಕೋಟ್ಯಾನುಕೋಟಿ, ಸಮದೃಷ್ಟಿಯಲ್ಲಿ ನಿಂತು ತಮ್ಮ ತಾವರಿತವರ ನೊಬ್ಬರನೂ ಕಾಣೆ ಕೂಡಲ ಸಂಗಮದೇವಾ ಎಂಬ ಸ್ವಾನುಭಾವದ ಸಮ್ಯಕ್ ನುಡಿಯೆ, ಶರಣರ ಸೂಳ್ನುಡಿ ಎಂದಿಹರು.

ಶರಣರ ಸ್ವಾನುಭಾವದ ಸಮ್ಯಕ ಜ್ಞಾನದಲ್ಲಿ ಲಿಂಗಪ್ರಸಾದ, ಜಂಗಮ ಪ್ರಸಾದ, ಸಮಯ ಪ್ರಸಾದ ಅಂತರ್ಗತವಾಗಿಹವು, ಆರಿಗೆ ಈ ಪ್ರಸಾದ ರೂಪಿ ಪರಮಜ್ಞಾನ ಲಭ್ಯವಾಗಿದೆ ಅವರಿಗೆ ಆಧಿಯು ಇಲ್ಲ, ವ್ಯಾಧಿಯು ಇಲ್ಲ, ಲೋಕದ ಸೋಂಕು ಇಲ್ಲವಾಗಿದೆ. ಆಧಿ ಇಲ್ಲದಿದ್ದಡೆ ಲಿಂಗ ಪ್ರಸಾದಿ ಎಂದೆನು, ಕುರುಹು ರೂಪು ಇಲ್ಲದಿದ್ದಡೆ ಲಿಂಗಪ್ರಸಾದಿ ಎಂದೆನು, ಲಿಂಗ ಪ್ರಸಾದಿಗಳೆಂದರೆ ಲಿಂಗವರಿತವರು, ಲಿಂಗಜ್ಞಾನಿಗಳು. ಲಿಂಗವೆಂದರೆ ನಿರೂಪ-ನಿರವಯ- ನಿರಾಲಂಬ-ನಿರ್ನಾಮ-ನಿರುಪಮ-ಅಖಂಡ-ಅಚಲಿತ-ಅಭೇದ್ಯ-ಅಚಿಂತ್ಯ. ಆರಿಗೆ ಈ ಲಿಂಗದ ಯತಾರ್ಥ ಜ್ಞಾನವಾಗಿದೆ, ಅವರಿಗೆ ಕುರುಹಾಗಿ ಕಾಣಿಸಿಕೊಳ್ಳುವವೆಲ್ಲವು ಇಲ್ಲವಾಗಿದೆ. ಇದು ಕಾರಣ. ನೀಲಮ್ಮನವರು *ಅಂಡಜವಳಿದ ಬಸವ, ಪಿಂಡಜವಳಿದ ಬಸವ, ಆಕಾರವಳಿದ ಬಸವ, ನಿರಾಕಾರವಳಿದ ಬಸವ, ಸಂಗವಳಿದ ಬಸವ, ನಿಸ್ಸಂಗವಳಿದ ಬಸವ, ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವ* ಎಂದು ಲಿಂಗಪ್ರಸಾದಿಯಾಗಿಹ ಬಸವರಾಜ ದೇವರನ್ನು ಕೊಂಡಾಡಿಹಳು. ಲಿಂಗ ಜ್ಞಾನದಿಂದ, ಕುರುಹಿನಿಂದ ಕಾಣಿಸಿಕೊಳ್ಳುವುದೆಲ್ಲವು ಇಲ್ಲವಾಗಿ ಎಲ್ಲೆಲ್ಲೂ ಎತ್ತ ನೋಡಿದಡತ್ತತ್ತ ಲಿಂಗವೇ ಪ್ರಜ್ವಲಿಸುವುದು.

ವ್ಯಾಧಿ ಇಲ್ಲದಿದ್ದಡೆ ಜಂಗಮ ಪ್ರಸಾದಿ ಎಂದೆನು: ಜಂಗಮ ಪ್ರಸಾದಿ ಎಂದರೆ *ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಉಪಮೆಗೆ ತಂದು ಎರಡೆನ್ನಬಹುದೆ? ಲಿಂಗವೆ ತಾನಾಗಿಹ ಜಂಗಮ, ಜಂಗಮವೆ ತಾನಾಗಿಹ ಲಿಂಗ, ಎರಡಾಗಿ ಕಾಣದ ಸ್ವಮಹಿಮ, ಈ ಮಹಾಂತನ ದಿವ್ಯದೃಷಿಗೆ, ಆನು ನೀನೆಂಬುದಿಲ್ಲ, ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲದ್ದೆಂದು ಇಲ್ಲದುದು ಎಲ್ಲಿಪ್ಪುದು ? ಇಲ್ಲಾದುದಿಲ್ಲಾದುದೆಂತಿಪ್ಪುದು ? ಅನುವನರಿದು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು*, ಇದು ಜಂಗಮ ಪ್ರಸಾದಿಯಾಗಿಹ ಹಿರಿಮೆ.

ಲಿಂಗ ಮರೆತವರೆಲ್ಲ ಆಧಿಯು ಇಲ್ಲವಾಗಿಲ್ಲ, ಕುರುಹು(ರೂಪು) ಇಲ್ಲವಾಗಿಲ್ಲ, ಇವರಿಗೆ ಇಲ್ಲದ ರೋಗವಂಟಿದೆ, ಏಕೆಂದರೆ ಇಲ್ಲದುದು ಇದ್ದುದಾಗಿದೆ. ಇಲ್ಲದ ರೂಪು ಇದ್ದುದು ಎನ್ನುವವರು ಕೋಟ್ಯಾನುಕೋಟಿ ಸಿಕ್ಕುವರು. ರೂಪ ಆರೂ ಆಗಿಲ್ಲ . ಆರಾರು ಆಗದ ರೂಪವನ್ನೆ ತಾನೆಂದು ಭ್ರಾಂತಿಯಿಂದುಕ್ತರಾದವರು ವಿಶ್ವದ ತುಂಬೆಲ್ಲ ತುಂಬಿಹರು. ಏಕೆಂದರೆ ಈ ಜಂಗಮ ಜ್ಞಾನಿ ಕೋಟಿಗೊಬ್ಬರು ಸಿಕ್ಕುವುದು ದುರ್ಲಭವಾಗಿದೆ. ಇಲ್ಲದುದು ಇದೆ ಎನ್ನುವ ಅಂಟು ರೋಗ ಬಹು ವ್ಯಾಪಕವಾಗಿ ಹಬ್ಬಿದೆ. ಭ್ರಾಂತಿಯ ಹಗರಣ ಬಹು ವಿಚಿತ್ರವಾದುದು. *ಆನು ಅರಿದೆ ಮರದೆ ಅಳಿದೆ ಉಳಿದೆನೆಂಬ ಸಂಶಯ ಭ್ರಮೆ, ಸ್ಥೂಲ ಸೂಕ್ಷ್ಮವೆಂಬ ವಿಪರೀತ ಭ್ರಮೆ. ಅಂತರ್ಮುಖ ಭ್ರಮೆ, ಬಹಿರ್ಮುಖ ಭ್ರಮೆ, (ಸ್ಥೂಲ) ಅತತ್ವ, ತತ್ವ, ವಿವೇಕ ಭ್ರಮೆ, ಪುಣ್ಯ-ಪಾಪ, ಸ್ವರ್ಗ-ನರಕ, ಬಂಧ, ಮೋಕ್ಷ, ಪ್ರವರ್ತಕ, ನಿವರ್ತಕ ಆದಿಯಾದ ಕ್ರಮ ಭ್ರಮೆ ಹುಸಿ, ಜೀವ ಪರಮರೈಕ್ಯವೆಂಬ ಸಂಧಾನ ಭ್ರಮೆ. ಯೋಗದಾಸೆಗೆ ಸಿಲುಕುವ ಭ್ರಮೆ, ನಾಹಂ*

ಭ್ರಮೆ, ಕೋಹಂ ಭ್ರಮೆ, ಸೋಹಂ ಭ್ರಮೆ, ಚಿದಹಂ ಭ್ರಮೆ ತತ್ವಸಕರಣವೇಷ್ಠಿತ ಜಗವೆಲ್ಲ ಮಾಯಾಮಯ. ಇದು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಶರಣಂಗಾವ ಭ್ರಮೆಯೂ ಇಲ್ಲ.

ಲಿಂಗ ತಾನಾಗಿಹ ಜಂಗಮಂಗೆ ಆವಾವ ಭ್ರಮೆಯೂ ಇಲ್ಲ, ಏಕೆಂದರೆ ಲಿಂಗ ಪ್ರಸಾದಿಯಾಗಿ ಸ್ಥೂಲ ಸೂಕ್ಷ್ಮವೆಂಬ ಕುರುಹೆ ಇಲ್ಲವಾಗಿದೆ. ಜಂಗಮ ಪ್ರಸಾದಿಯಾಗಿ ಇಂದ್ರಿಯಂಗಳ ಶುಭಾಶುಭಂಗಳು ಮನದ ಶುಭಾಶುಭಂಗಳು ಇಲ್ಲವಾದುದಲ್ಲದೆ, ಮನದ ಪ್ರವೃತ್ತಿ, ನಿವೃತ್ತಿ ಇಲ್ಲವಾದುದರಿಂದ ಆನು ಅರಿದೆ ಮರೆದೆ ಅಳಿದೆ ಉಳಿದೆನೆನ್ನುವುದು ಇಲ್ಲವಾಗಿದೆ. ಅಂತರ್ಮುಖ, ಬಹಿರ್ಮುಖವೆಂಬುದು ಇಲ್ಲವಾಗಿದೆ. ತತ್ವ ಅತತ್ವವೆಂಬ ವಿವೇಕವೂ ಇಲ್ಲವಾಗಿದೆ. ಪುಣ್ಯ, ಪಾಪ, ಸ್ವರ್ಗ, ನರಕ, ಬಂಧ, ಮೋಕ್ಷವು ಇಲ್ಲವಾಗಿದೆ. ಜೀವ ಪರಮೈಕ್ಯವೆಂಬ ಸಂಧಾನವು ಇಲ್ಲವಾದುದಲ್ಲದೆ ನಾಹಂ, ಕೋಹಂ, ಸೋಹಂ, ಚಿದಹಂ ಎಂಬ ಮರವರುವಿನ ಅಭಿಮಾನವು ಇಲ್ಲವಾಗಿ ತತ್ವದ ಸಮೂಹದಿಂದುಕ್ತವಾದ ಜಗವೆಲ್ಲ ಮಾಯಾಮಯವೆಂದೆನಿಸಿ, ಇವೆಲ್ಲವು ಇಲ್ಲದುದಾಗಿಹವು. ಕಾರಣ ಜಂಗಮ ಪ್ರಸಾದಿಗೆ ಇವಾವ ವ್ಯಾಧಿಯು ಇಲ್ಲದುದಾಗಿದೆ.

ಸಮಯ ಪ್ರಸಾದಿಯು ತನು, ಮನ, ಧನವೆಂಬ ಭ್ರಮೆ ನಷ್ಟವಾದುದರಿಂದ ನಿರ್ವಿಶೇಷ ನಿರುಪಮ ನಿರಾಲಂಬ ಪ್ರಸಾದಿಗಳು ಈ ಪರತತ್ವದರುವೆ ಅವರ ಇರುವು ಆಗಿರುವುದರಿಂದ ಅಜಾತ ತತ್ವ ಸಿದ್ಧವಾಗಿ ಸಕಲ ಅಂಗಗಳು ಚಿದಂಗ, ಚಿಲ್ಲಿಂಗವು ಮನವು ಘನಮನವಾಗಿ ಪ್ರಜ್ವಲಿಸುವಲ್ಲಿ ಹೇಳಲಿಲ್ಲ, ಕೇಳಲಿಲ್ಲ, ಇದು ಕಾರಣ ಭ್ರಮಿಗಳು ಸಾಕಷ್ಟು ಸಿಕ್ಕುವರು, ಒಬ್ಬ ಬ್ರಹ್ಮವೇತ್ತ ಮಹಾಪುರುಷ ಸಿಕ್ಕುವುದು ದುರ್ಲಭ. ಆ ಮಹಾಂತನೊಬ್ಬನೆ ಆಧಿ, ವ್ಯಾಧಿ, ಇಲ್ಲದವನು ಇದಲ್ಲದೆ ಲೋಕ ಸೋಂಕದವನು, ನಿಶಬ್ಧವೇದಿಗೆ ಲೋಕದ ಶಬ್ಧ ಸೋಂಕುವದೆಂತು? ಎಂದು ಹೇಳಿಹರು. ಇಂತಪ್ಪ ತ್ರಿವಿಧ ಪ್ರಸಾದದ ಸಂಬಂಧಿಯಾದಾತನೆ ಅಚ್ಚಪ್ರಸಾದಿ ಎಂದೆನು ಕಾಣಾ ಗುಹೇಶ್ವರಾ.

ತ್ರಿವಿಧ ಪ್ರಸಾದದ ಸಂಬಂಧಿಯಾದುದರಿಂದ ಸರ್ವಾಂಗ ಲಿಂಗವಾಗಿ ಪ್ರಜ್ವಲಿಸಿ ಕುರುಹೆ(ರೂಪವೆ) ಇಲ್ಲವಾದುದರಿಂದ ಆಧಿ ಇಲ್ಲದಿದ್ದುದು ಆಗಿದೆ. ಮನವೆಂಬುದು ಮನದ ಮನ, ಅದು ವರ್ಣಾತೀತ, ಕೇವಲ ಜ್ಯೋತಿಯಾಗಿ ಪ್ರಜ್ವಲಿಸುವುದರಿಂದ ಭ್ರಾಂತಿ ಮನವು ನಷ್ಟವು. ಅದರ ಕಾರ್ಯವಾಗಿಹ ನಾನಾ ಭ್ರಾಂತಿಯು ನಷ್ಟವಾದುದರಿಂದ ವ್ಯಾಧಿಯು ಇಲ್ಲದುದಾಗಿದೆ. ನಿರ್ವಿಶೇಷ, ನಿರುಪಮ, ನಿರಾಲಂಬ, ಜ್ಞಾನದ ಸಂಬಂಧಿಯಾದುದರಿಂದ ನಿಶಬ್ದವೇದಿಯಾಗಿ ಲೋಕ, ಲೋಕದ ಶಬ್ದ ಸೋಂಕದವನಾದುದರಿಂದ ತ್ರಿವಿಧ ಪ್ರಸಾದಿಯಾದುದರಿಂದ ಅಚ್ಚಪ್ರಸಾದಿ ಎಂದೆನೆಂದು ಹೇಳಿಹರು. ಈ ಪರಮ ಪ್ರಸಾದದ ಜ್ಞಾನವಿಲ್ಲದವರು, ಇಷ್ಟ ಲಿಂಗವ ಅಂಗದ ಮೇಲೆ ಧರಿಸಿದರೂ ಅದರ ಯತಾರ್ಥ ಜ್ಞಾನ ಇವರಿಗಿಲ್ಲವಾದುದರಿಂದ ಅಖಂಡ ತೇಜ, ಅಖಂಡ ಲಿಂಗ, ಅನುಪಮ ಲಿಂಗ ಹೋಗಿ ಪೂಜಾ ಲಿಂಗವಾಗಿದೆ.

6

**ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದಡೇನು ?**
**ಹಸಿವು ಹೋಹುದೆ ?**
**ಅಂಗದ ಮೇಲೆ ಲಿಂಗ ಸ್ವಾಯತವಾದಡೇನು ?**
**ಭಕ್ತನಾಗಬಲ್ಲನೆ ?**
**ಇಟ್ಟ ಕಲ್ಲು ಮೆಳೆಯ ಮೇಲೆ ಸಿಲುಕಿದಡೆ,**
**ಆ ಕಲ್ಲು ಲಿಂಗವೆ ? ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ?**
**ಇಂತಪ್ಪವರ ಕಂಡಡೆ ನಾಚುವೆನಯ್ಯ-ಗುಹೇಶ್ವರಾ.** ॥ 179 ॥

**ತಾತ್ಪರ್ಯ**: *ಹೊಟ್ಟೆಯ ಮೇಲೆ ಓಗರದ ಮೊಟ್ಟೆಯ ಕಟ್ಟಿದಡೇನು, ಹಸಿವು ಹೋಹುದೆ? ಅಂಗದ ಮೇಲೆ ಲಿಂಗ ಸ್ವಾಯತವಾದಡೇನು ಭಕ್ತನಾಗಬಲ್ಲನೆ ?* : ಹೊಟ್ಟೆಯ ಮೇಲೆ ಅನ್ನದ ಮೊಟ್ಟೆಯ ಕಟ್ಟಿದರೆ ಹಸಿವು ಹಿಂಗುವುದೆ ? ತೃಪ್ತಿಯಾಗುವುದೆ ? ಹಾಗೆ ತಮ್ಮ ಅಂಗದ ಮೇಲೆ ಪೂಜಾ ಲಿಂಗ ಕಟ್ಟಿ ಪೂಜೆ ಮಾಡಿದರೆ, ತನ್ನ ಮುನ್ನ ಮುನ್ನಲಾದ ಘನದಿರುವು ಅರಿದು ಅದುವೆ ಆದನೆ ? ಅಂದರೆ ಭಕ್ತನಾದನೆ ? ಲಿಂಗ ತಾನು ಒಂದಾದನೆ ? ಲಿಂಗದಿರುವು ತನ್ನಿರುವು ಒಂದಾಯಿತೆ ? ಒಂದಾಗದಿದ್ದಲ್ಲಿ ಅದೇತರ ಭಕ್ತಿ ! ಅದೇತರ ಲಿಂಗಾರ್ಚನೆ !

ಬಹಳಷ್ಟು ಲಿಂಗವಂತರು, ಲಿಂಗಜ್ಞಾನವಿಲ್ಲದೆ ಪೂಜಾಲಿಂಗಕ್ಕೆ ಲಿಂಗವೆನ್ನುವ ನಂಬಿಗೆವಂತರು ಇದ್ದಾರೆ. ಇವರ ಮೂಢವಿಶ್ವಾಸ ಹೋಗಿರುವುದಿಲ್ಲ, ಲಿಂಗ ಜಡವೊ ? ಚೇತನವೊ ? ಚೈತನ್ಯವೊ ? ಕ್ಷರವೊ ? ಅಕ್ಷರವೊ ? ಅಕ್ಷರಾಕ್ಷರ ಮೀರಿದ ಘನವೊ ? ಆವುದು ಲಿಂಗವೆಂದು ಅರಿಯಲಿಲ್ಲ, ಬಲ್ಲ ಗುರುಘನನಿಂದಾದರೂ ಅರಿಯಲಿಲ್ಲ. ಅರಿಯದೆ ಲಿಂಗಧಾರಣ ಮಾಡುವ ಗುರುವರ್ಗವು, ಲಿಂಗ ಧರಿಸಿಕೊಳ್ಳುವ ಭಕ್ತರು ಇವರುಗಳಲ್ಲಿ ಲಿಂಗಜ್ಞಾನ ಎಷ್ಟರ ಮಟ್ಟಿಗೆ ತಿಳಿದಿಹರು ? ಅದಾರು ಬಲ್ಲರು ? ಪರಂಪರೆ ಮೂಢ ಸಂಪ್ರದಾಯ ಹಾಗೆ ಬಂದಿದೆ. ಊರೊಳಗೆ ಹಿರೇಮಠದವರೆ ಲಿಂಗ ಕಟ್ಟುವವರು. ಇನ್ನುಳಿದ ಅಯ್ಯಗಳು ಅಷ್ಟು ಯೋಗ್ಯರಲ್ಲ, ಅವರು ಅನರ್ಹರು. ಹೀಗೆ ಅಯ್ಯ, ಅಯ್ಯಗಳಲ್ಲಿ ಭೇದ, ಭೇದ. ಮಾಡಲಿ ಇಬ್ಬರೂ ಅವರೆ! ಆರಿಗೂ ಜ್ಞಾನವಿಲ್ಲ ! ಪೂರ್ವದಿಂದಲೂ ಇವರುಗಳ ಮನೆಯಲ್ಲಿದ್ದವರು ಲಿಂಗವ ಧರಿಸಿದವರು. ಅವರೆ ಲಿಂಗವ ಕಟ್ಟಲು ಯೋಗ್ಯರು. ಇನ್ನುಳಿದವರಿಗೆ ಆ ಯೋಗ್ಯತೆ ಇಲ್ಲ, ಏಕೆಂದರೆ ಇವರು ಮನೆಯ ಗುರುಗಳಂತೆ. ಇವರಿಗೆ ಲಿಂಗ ಕಟ್ಟುವ ಅಧಿಕಾರ ಇರಲಿ, ಈ ಪುಣ್ಯವಂತನು ಕೂಡ ಅನಾನುಭವಿ. ವರ್ಣಾಕ್ಷರ, ಶಬ್ದಜ್ಞಾನ, ವ್ಯಾಕರಣ ಸ್ವಲ್ಪ ಕವಿತಾ ಮಾಡುವಷ್ಟು ಓದು ಬರಹ ಬರುತ್ತಿದ್ದರೆ ಆತನೊಬ್ಬ ಪಂಡಿತ. ಅದರಲ್ಲಿ ತ್ಯಾಗಿಯಾಗಿದ್ದು ಜಿತೇಂದ್ರಿಯನಾಗಿದ್ದು ಪೂಜಾನಿಷ್ಠನಾಗಿದ್ದು ಮೇಲೆ ತಪೋನಿಷ್ಠನಾಗಿ ಅಲ್ಲಲ್ಲಿ ಪುರಾಣ ಪ್ರವಚನ ಮಾಡುವವರಾಗಿದ್ದರೆ ತೀರಿತು; ಆತನೊಬ್ಬ ಲಿಂಗದಲ್ಲಿ ಉದ್ಭವವಾದ ಅವತಾರಿ ಎಂದು ಹೇಳುತ್ತದೆ ನಂಬಿಗೆವಂತರ ಲಿಂಗವಂತ ಸಮಾಜ. ಲಿಂಗತತ್ವ ವ್ಯಾಪಕವಾಗಿದೆ. ವಿಶ್ವವೆ ಲಿಂಗತತ್ವವಾಗಿದೆ. ಅದನ್ನು ತಿಳಿಯದ್ದರಿಂದ ಅಷ್ಟೆ ಸಂಕುಚಿತವಾಗಿದೆ. ಇದು ಲಿಂಗವಂತರು ಲಿಂಗತತ್ವ ತಿಳಿ

ಯದ ಪರಿಣಾಮವು.

ಲಿಂಗ ಪೂರ್ಣ, ಅಖಂಡ ಅನುಪಮವೆಂದು ಬಲ್ಲವರಾರು ? *ಶ್ರೀಗುರು ಕರುಣಿಸಿದ ಲಿಂಗ ಅರಿದರುಹಿಸಿಕೊಂಬುದಕ್ಕೂ ಮೀರಿದ ಘನಲಿಂಗ, ವೇದ ವೇಂದಾಂತಗಳಿಗಸಾಧ್ಯವಾದ ಅನುಪಮ ಲಿಂಗ,* ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ಎಂದು ಶ್ರೀ ಬಸವರಾಜದೇವರು ಬಿತ್ತರಿಸಿದುದು ಕೇಳಿಯೂ ಇಷ್ಟಲಿಂಗಕ್ಕೆ ಅನುಪಮ ಲಿಂಗವೆನ್ನುವರು. ಬಲ್ಲವರಿಂದ ಕೇಳಿ ಕೇಳಿ ಪೂಜಾ ಲಿಂಗವಾಗಿಹುದೆಂದರೆ ಆಶ್ಚರ್ಯ. ಶೃತಿಗಗೋಚರ ಲಿಂಗ, ಕೃತ್ಯಕ್ಕೆ ಬಾರದ ಲಿಂಗ, ಅಪ್ರತಿಮ ಲಿಂಗ, ಅಕಲ್ಪಿತ ಲಿಂಗ, ಅಚಿಂತ್ಯ ಲಿಂಗವೆಂದು ತಿಳಿದವರೆಷ್ಟು ? ತಾವೆ ಅದುವೆ ಆದವರೆಷ್ಟು ?

*ರೂಪವನೆ ಕಂಡು ನಿರೂಪವನೆ ಕಾಣರು. ತನುವನೆ ಕಂಡು ಅನುವನೆ ಕಾಣರು. ಆಚಾರವನೆ ಕಂಡು ವಿಚಾರವನೆ ಕಾಣರು, ಗುಹೇಶ್ವರಾ ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು.* ಎಂಬ ಮಹಾಪ್ರಸಾದದ ಅರಿವು ಆಗಿದ್ದರೆ ಲಿಂಗವಂತರು ಇಷ್ಟು ಭೇದ ಜ್ಞಾನಿಗಳು ಆಗುತ್ತಿದ್ದಿಲ್ಲ. ಸಕಲರು ಧರಿಸಿದುದು ಒಂದೆ ಲಿಂಗವಾದರೂ, ಲಿಂಗವೊಂದನ್ನೆ ಪೂಜಿಸಿ ಪುನಃ ಲಿಂಗ ಲಿಂಗವಂತರಲ್ಲಿ ಭೇದ, ಅಯ್ಯ ಅಯ್ಯಗಳಲ್ಲಿ ಭೇದ, ಭಕ್ತ ಭಕ್ತರಲ್ಲಿ ಭೇದ, ಶಿಷ್ಯ ಶಿಷ್ಯರಲ್ಲಿ ಭೇದ, ಗುರು ಗುರುಗಳಲ್ಲಿ ಭೇದ, ವಿರಕ್ತ ವಿರಕ್ತರಲ್ಲಿ ಭೇದ, ಚರ ಪಟ್ಟಾಧೀಶರಲ್ಲಿ ಭೇದ, ಜಗದ್ಗುರುಗಳಲ್ಲಿ ವೈಶಿಷ್ಟ್ಯ, ಹೀಗೆ ಭೇದಜ್ಞಾನವೆ ಪ್ರಾಮುಖ್ಯವಾದಾಗ ಲೋಕದ ಹೀನಾವಸ್ಥೆ ಆರಿಗೆ ಹೇಳುವುದು, ಆರಿಗೆ ಕೇಳುವುದು. ಇದನ್ನು ಕಂಡೆ ಪ್ರಭುದೇವ ಹೊಟ್ಟೆಯ ಮೇಲೆ ಒಗರದ ವೊಟ್ಟೆಯು ಕಟ್ಟಿದಡೇನು ಹಸಿವು ಹೋಗುವುದೆ ? ಅಂಗದ ಮೇಲೆ ಲಿಂಗ ಸ್ವಾಯತವಾದಡೇನು ಭಕ್ತನಾಗಬಲ್ಲನೆ ? ಎಂದು ಎಚ್ಚರಿಸಿದ.

ಎಚ್ಚರಿಸಿದ ಮಹದರುವನ್ನಾದರೂ ಈಗ ಅರಿತವರೆಷ್ಟು ? ಅರಿಯದಿದ್ದರೂ ಅರಿಯಲಿಲ್ಲ ಕೊನೆಗೆ ಭಾವಿಸುವ ಭರಿತ ಭಾವದವರೆಷ್ಟು ? ಇದಲ್ಲದೆ ತಮ್ಮ ತಪ್ಪನ್ನು ತಿದ್ದಿಕೊಂಡು ಲಿಂಗವರಿಯಬೇಕೆನ್ನುವ ತವಕವಾದರೂ ಇದೆಯಾ ? ಪರತತ್ವದಲ್ಲಿ ಶ್ರದ್ಧಾವಂತರಾದರೂ ಇರುವರಾ ? ಇದೆಂಥ ನಿಕೃಷ್ಟ ಸ್ಥಿತಿ ಇದೆಂಥ ಅಧೋಮುಖದ ವರ್ತನೆ, *ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೇ ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ?* ಇಂತಪ್ಪವರ ಕಂಡಡೆ ನಾಚುವೆನಯ್ಯ ಗುಹೇಶ್ವರ ಎಂದು ಪ್ರಭುದೇವರು ಖಂಡಿಸಿದುದು.

ಪ್ರಭುದೇವ, ಇವರು ಲಿಂಗ ಸಂಸ್ಕಾರ ಕೊಡುವುದು ಕಂಡು ನಾಚಿಕೆಯಾಗಿದೆ ಎಂದುದಲ್ಲದೆ, ಇವರಿಗೆ ಬಲ್ಲವರಿಂದ ಲಿಂಗವರಿಯುವ ಹಂಬಲವಿಲ್ಲ, ಇನ್ನು ಪೀಠಕ್ಕೆ ಲಿಂಗವೆನ್ನುತ್ತಾರೆ. ಪೀಠಕವಾಗುವ ಮುನ್ನ ಅದರ ಪೂರ್ವಾಶ್ರಯವೇನಿತ್ತು ಅದನ್ನಾದರೂ ನೆನಪಿಸಿಕೊಳ್ಳುವಿರಾ ಇದು ಎಲ್ಲರಿಗೂ ಗೊತ್ತಿದ್ದ ವಿಷಯ.

ಕಲ್ಲಿನ ಪೂರ್ವಾಶ್ರಯ ಕಳೆದು ಲಿಂಗವ ಮಾಡಿದುದು ಮೊಳೆಯಲ್ಲವೆ ? ಮೊಳೆ ಯಾವಾಗ ಲಿಂಗ ಸಂಬಂಧ ಮಾಡಿತು? ಎಂದಲ್ಲಿ ಅದು ಭಕ್ತನಾಗಲಿಲ್ಲವೆ ? ಅಂತಪ್ಪ ಕಲ್ಲನ್ನೆ ಕೆಲಬರು ಲಿಂಗವೆಂದು ಧರಿಸಿದವರು ಭಾವಿಸಿದವರು ಬಹಳಷ್ಟು ಲಿಂಗವಂತರಿದ್ದಾರೆ. ಈ ಜಡ ಸಂಸ್ಕಾರದಿಂದ ಅದು ಪೂಜಾ ಲಿಂಗವಾಯಿತಲ್ಲದೆ, ಸದ್ಗುರು

ಕೃಪೆಯಿಂದ ಪ್ರಾಪ್ತವಾದ, ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವಾಯಿತೆ ? ಅಖಂಡ ತೇಜವಾಯಿತೆ ? ಆಗದ್ದರಿಂದ ಜಡಮತೀಯರಾದರು. ಮತಿ ಗತಿಯುಳ್ಳವರಾಗಿ ಗತಿಮತಿಗೆ ಸಿಲುಕಿ ಭವದಿಂದ ವಿಮುಕ್ತರಾಗಲಿಲ್ಲ ಇದು ಕಾರಣ ಇದ ಕಂಡು ನಾಚಿದೆನಯ್ಯ, ಎಂದುದಲ್ಲದೆ:

7

**ಇಷ್ಟ ಲಿಂಗವನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೋ ?**
**ಇಷ್ಟಲಿಂಗ ಹೋದಡೆ ಪ್ರಾಣಲಿಂಗ ಹೋಗದು ನೋಡಾ.**
**ಇಷ್ಟಲಿಂಗ ಪ್ರಾಣಲಿಂಗದ ಭೇದವನು**
**ಗುಹೇಶ್ವರಾ ನಿಮ್ಮ ಶರಣ ಬಲ್ಲ.** || 181 ||

**ತಾತ್ಪರ್ಯ**: *ಇಷ್ಟಲಿಂಗವನು, ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೊ ?* ಬಹು ವೀರಶೈವರು ಇಷ್ಟಲಿಂಗವನು ಪೂಜಾಲಿಂಗವೆಂದರು, ಪ್ರಾಣಲಿಂಗವೆಂದರೆ ಪ್ರಾಣಾಯಾಮ ವಾಗಲಿ ಅಥವಾ ಷಣ್ಮುಖ ಮುದ್ರವಾಗಲಿ ತಮಗೆ ಇಷ್ಟವಾದ ಅಭ್ಯಾಸದಿಂದ ಕಾಣುವ ನಾದ, ಬಿಂದು, ಕಲೆಗಳಿಗೆ ಪ್ರಾಣಲಿಂಗವೆಂದು ತಿಳಿದು ಇದು ಕಷ್ಟವೆಂದು ಕಂಡಂತೆ ಕಾಣುತ್ತದೆ.

ಈ ಪೂಜಾಲಿಂಗ ಪೂಜೆ ಮಾಡುವ ಲಿಂಗಾರ್ಚನೆಯ ಕಾಲದಲ್ಲಿ ಪ್ರಾಣಾಯಾಮ ಮಾಡುವ ಅಭ್ಯಾಸದಿಂದ ಕೇವಲ ಕುಂಭಕವ ಬೆಳೆಸಿ, ಹೇಗೆ ಹೇಗೆ ಹೆಚ್ಚು ಕಾಲ ಬಾಹ್ಯ ಪ್ರಜ್ಞೆಯಿಂದ ನಿವೃತ್ತರಾಗಿ ಪೂಜಾಲಿಂಗದಲ್ಲಿ ದೃಷ್ಟಿ ಏಕಾಗ್ರಗೊಳಿಸಿದಂತೆ ಪ್ರಕಾಶ ಪ್ರಕಾಶಿಸುವುದೇ ಇವರಿಗೆ ಪ್ರಾಣಲಿಂಗವಾಗಿದೆ. ಹೀಗಾಗಿ ಇವರು ಅಭ್ಯಾಸದ್ವಾರಾ ಪ್ರಕಾಶಿಸುವ ಪರ ಪ್ರಕಾಶವ ಕಂಡರಲ್ಲದೆ, ತಾವಾರು ತಮ್ಮ ಮೂಲ ಸ್ವರೂಪವ ತಿಳಿಯಲಿಲ್ಲ, ಇವರು ತಮ್ಮ ಮನದ ಚಂಚಲ ದೋಷ ಕಳೆದುಕೊಳ್ಳುವ ಸಾಧಕರಾದರ ಲ್ಲದೆ ಲಿಂಗವರಿತ ಅಖಂಡ ಲಿಂಗಾಂಗಿಗಳು ಆಗಲಿಲ್ಲ.

ಪೂರ್ವಿಕರಾಗಿರುವ ಅಣ್ಣ ಬಸವಣ್ಣನವರು *ಅಂತರಂಗದಲ್ಲಿರ್ದ ನಿರವಯಲಿಂಗ ಸಾವಯುವ ಲಿಂಗವ ಮಾಡಿ, ಶ್ರೀಗುರು ಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು ಅಂತ ರಂಗವನಾವರಿಸಿ ಅಂತಃಕರಣ ಕರಣಂಗಳೆ ಕಿರಣಂಗಳಾಗಿ ಬೆಳಗುವ ಚಿದಂಶವೆ ಪ್ರಾಣ ಲಿಂಗವೆಂದು ಈ ಮೂಲ ಚೈತನ್ಯವೆ ಭಾವಲಿಂಗವು ಇದನರಿದು ನೋಡುವ ನೋಟ ಭಾವ ಪರಿಪೂರ್ಣವಾಗಿ ತಾನು ತಾನಹದಲ್ಲದೆ ಇದಿರಿಟ್ಟು ತೋರುವುದಿಲ್ಲ. ಅಖಂಡ ಪರಿ ಪೂರ್ಣವಪ್ಪ ನಿಲವು ತಾನೆ ಕೂಡಲಸಂಗಮದೇವಾ.*

ಆದಿ ಪುರಾತನರು ಲಿಂಗ ಸಕೀಲ ಸಂಯೋಗ ವರ್ಮಸ್ಥಲ ತಿಳಿಸುವ ಸಕೀಲಕ್ಕೂ ಈಗಿನವರು ಬಾಹ್ಯಸಂಸ್ಕಾರದಿಂದುಕ್ತವಾದ ಲಿಂಗಸಂಸ್ಕಾರ ಲಿಂಗ ಧರಿಸಿ ಪೂಜಾಲಿಂಗವ ಪೂಜಿಸುವ ಪೂಜಕರಿಗೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸವಾಗಿದೆ.

ಬಸವಾದಿ ಪ್ರಮಥರು ತನ್ನ ಅಂತರಂಗದಲ್ಲಿರ್ದ ನ್ಯಸ್ತವಾಗಿಹ ನಿಧಿ, ಅಕ್ಷಯ ಚಿನ್ನಿಧಿ ಅಕ್ಷರಾಕ್ಷರ ಮೀರಿದ ಘನನಿಧಿ, ಅಚಿಂತ್ಯನಿಧಿಯೆಂಬ ನಿರವಯ ಲಿಂಗ,

ಸಾವಯುವ ಲಿಂಗ ಮಾಡಿದ ಶ್ರೀಗುರು ಸ್ವಾಮಿಯೆತ್ತ ? ಬಾಹ್ಯ ಸಂಸ್ಕಾರ ಕೊಡುವ ಆಚಾರ್ಯರೆತ್ತ ? ಪೀಟಕಕ್ಕೆ ಕಂತೆಯ ಧರಿಸಿರುವ ಲಿಂಗವೆತ್ತ ? ಇದುವೆ ಲಿಂಗವೆಂದು ಕೊಡುವುದು ಇಷ್ಟಲಿಂಗವೆ ? ಪೂಜಾಲಿಂಗವು ಇಷ್ಟಲಿಂಗವಾಗಬಹುದೆ ? ಖಂಡಾಖಂಡ ಸಂಯೋಗವಿಲ್ಲದೆ ಅಖಂಡಿತ ಲಿಂಗವು ಪೂಜೆಗೂ ನೆನಹಿಂಗೆ ಒಳಪಡಬಹುದೆ ? ಸಕಲರ ಅಂತರಂಗದಲ್ಲಿರ್ದ ನಿರವಯ ಲಿಂಗ; ಅದಾವ ಲಿಂಗ ? ಇದರ ರಹಸ್ಯ ತಿಳಿದಿರುವ ವೀರಶೈವರು ಎಷ್ಟು ಸಿಕ್ಕುತ್ತಾರೆ. ಈ ರಹಸ್ಯವ ತಿಳಿದು ಅದನ್ನೆ ಸಾವಯವ ಲಿಂಗ ಮಾಡಿ ಶ್ರೀಗುರು ಸ್ವಾಮಿ ಸುಜ್ಞಾನ ರೂಪಿ ಕರಸ್ಥಲ ಅದೆಷ್ಟು ಭಕ್ತರ ಕರಸ್ಥಲವಾಗಿಹುದು? ಅಂತಪ್ಪ ಕರಸ್ಥಲ ರೂಪಿ ಸುಜ್ಞಾನದಿಂದ ಅನುಪಮ ಲಿಂಗ, ಅಖಂಡಿತಲಿಂಗವಾಗಿ ಬೆಳಗುವುದು. ಇದನ್ನು ತಿಳಿಯುವ, ಕಾಣುವವರೆಲ್ಲ ದಿವ್ಯದೃಷ್ಠಿಯುಳ್ಳವರಾದುದರಿಂದ ನಿಸ್ಸೀಮರಾಗಿ ಅಕುಲರಾಗಿ ಪ್ರಜ್ವಲಿಸುವರು.

ಈಗಿನ ಬಹು ಲಿಂಗವಂತರು, ಬೆಳಕು ಕೈಯಲ್ಲಿದ್ದು, ಕತ್ತಲೆಯನರಿಸಿದಂತಾಗಿದೆ. ಅಮೃತವ ಸೇವಿಸಿ ಮರಣವ ಕಂಡಂತಾಗಿದೆ. ಇದರ ಪರಿಹಾರ ಆವಾಗ? ತನ್ನಲ್ಲಿದ್ದ ಅಚಿಂತ್ಯಾತ್ಮ ನಿಧಿ ತನಗೆ ಲಭ್ಯವಾದಾಗ ? ಅಂತರಂಗದಲ್ಲಿರ್ದ ನಿರವಯಲಿಂಗ ಸಾವ ಯವ ಲಿಂಗ ಮಾಡಿ ಶ್ರೀಗುರು ಸ್ವಾಮಿ ತನ್ನ ಸುಜ್ಞಾನ ರೂಪಿ ಕರಸ್ಥಲದಿಂದ ನಮ್ಮ ಸುಜ್ಞಾನ ರೂಪಿ, ಕರಸ್ಥಲಕ್ಕೆ ತಂದುಕೊಟ್ಟ ಮೇಲೆ ಇದು ಪೂಜಾಲಿಂಗ ಹೇಗಾಗುವುದು ? ಕ್ರಿಯಾಲಿಂಗ ಹೇಗಾಗುವುದು ? ಕೃತ್ಯಕ್ಕೆ ಬಾರದಲಿಂಗ ಕೃತ್ಯಕ್ಕೆ ತಂದುದು ಹೇಗೆ? ಅಕ್ರಿಯ ಲಿಂಗ, ನಿರವಯ ಲಿಂಗ ಅದುವೇ ಸಾವಯವ ಲಿಂಗ, ಅನುಪಮ ಲಿಂಗ, ಅಖಂಡಿತ, ಅಚಲಿತ ಲಿಂಗ ಮಾಡಿ ತೋರಿಸಿದ ಶ್ರೀಗುರುಸ್ವಾಮಿ ಅಘಟಿತ ಘಟನಾ ಸಾಮರ್ಥ್ಯವುಳ್ಳ ಅಪ್ರತಿಮ. ತನ್ನ ಅಂತರಂಗದಲ್ಲಿರ್ದ ನಿರವಯ ಲಿಂಗ ಬೇರೆಯಲ್ಲ. ಶ್ರೀಗುರು ಕೃಪೆಯಿಂದ ಲಭ್ಯವಾಗಿ ತನ್ನ ಸುಜ್ಞಾನ ರೂಪಿ ಅಂಗೈಯಲ್ಲಿ ಥಳ ಥಳಿಸಿ ಬೆಳಗುವ ಅಖಂಡ ತೇಜ ಬೇರೆಯೇ ? ಅದುವೇ ನಿರವಯ ಲಿಂಗ. ಇದು ಸಾವಯವ ಲಿಂಗವೆಂದು ಭೇದವಾಗಿ ಕಾಣುವವರು ಗುರುದ್ರೋಹಿಗಳು, ಲಿಂಗದ್ರೋಹಿಗಳು. ತಮ್ಮನ್ನು ತಾವೇ ಕೊಂದುಕೊಂಡವರು; ಮರೆವುಳ್ಳವರು. ಸೀಮಿತ ಜ್ಞಾನಿಗಳೆಂದು ಹೇಳಿಸಿಕೊಳ್ಳು ವರು.

ಲಿಂಗವರಿಯದ ಲಿಂಗಾರ್ಚಕರು ಈಗಿನ ಸಮಾಜದಲ್ಲಿ ಸಮಾಜವನ್ನು ಸುಧಾರಿಸುವ ಆಚಾರ್ಯರಾಗಿಹರು, ಸಮಾಜವೆಂಬುದು ಅಜಾತವು ಹಾಗೂ ಜಾತ್ಯಾ ತೀತವೆಂದು ಹೇಳಿ ಹೇಳಿ, ಜಾತೀಯತೆಯನ್ನೆ ಬೆಳೆಸುವರು. ಇಂತಪ್ಪ ಸದಾಚಾರಿಗಳು, ಪೂಜಾನಿಷ್ಠರು, ತಪಸ್ವಿಗಳು, ತ್ಯಾಗಿಗಳು, ಶಿವಯೋಗಿಗಳು. ಇವರ ಅನುಯಾಯಿಗಳಾದ ದೇಶದ ಪ್ರಮುಖರು, ರಾಜ್ಯ ಪ್ರಮುಖರು, ನಗರ ಪ್ರಮುಖರು, ಗ್ರಾಮ ಪ್ರಮುಖರು. ಭೇದ ಜ್ಞಾನವೇ ಇವರೊಳಗೆ ಪ್ರಾಧಾನ್ಯವಾಗಿದೆ ಮೂಢನಂಬಿಕೆ, ಅಂಧಶ್ರದ್ಧೆಯುಳ್ಳವರಾ ದಾಗ ಇವರಿಗೆ ಮಾನವನ ಅರುಹೃದಯ ಕಾಣುವುದು ಆವಾಗ ? ಅರುಹೃದಯ ಆಗದ ವಿನಃ ಭೇದ ಜ್ಞಾನ, ಜಾತೀಯತೆ ನಷ್ಟವಾಗದು. ಕರಣಂಗಳು ಅರುವಿನ ಕಿರಣಂಗ ಳಾಗವು. ಸೂರ್ಯೋದಯವಾಗದ ವಿನಃ ಕತ್ತಲೆ ಕೆಡದು. ಲಿಂಗಪ್ರಸಾದಿಗಳು, ಜಂಗಮ ಪ್ರಸಾದಿಗಳು ಆಗದ ವಿನಃ ಪಿಂಡಾಂಡ, ಬ್ರಹ್ಮಾಂಡ ರೂಪಿ ಕುರುಹಿನ ಕಾರ್ಗತ್ತಲೆ ನಷ್ಟವಾ

ಗದು.

ವೇದ ವೇದಾಂತ ಸಾಹಿತ್ಯ, ಉಪನಿಷದ್ದಾದಿಗಳು, ವಚನಂಗಳು, ಅನುಪಮ ಸಾಹಿತ್ಯ ನಿಸ್ಸೀಮ ಸಾಹಿತ್ಯ ಅಕುಲ ಸಾಹಿತ್ಯ ನಶ್ವಂತರ ಮಾಡುವ ಸಾಹಿತ್ಯ. ಈ ಮಹಾ ಸಾಹಿತ್ಯ ಓದಿ ಓದಿ ಕೇಳಿ ಕೇಳಿ ಭೇದ ಜ್ಞಾನದ ಕುರುಡುತನ ಹೋಗದಿದ್ದ ಮೇಲೆ ಹೇಳಲಿಲ್ಲ, ಕೇಳಲಿಲ್ಲ, ಏಕೆಂದರೆ ಇದರಿಂದಾದ ಲಾಭವೇನು ? ಮಾನವ ಜನ್ಮಂಗಳಿಗಿಂತ ಹಿರಿದಾದ ಜನ್ಮವಿಲ್ಲ, ಇದು ಅರುವಿನ ಜನ್ಮ. ಇಂತಪ್ಪ ಜ್ಞಾನಿ ಜನ್ಮ ದೊರೆತರೂ ಲಿಂಗ ಪ್ರಸಾದ, ಜಂಗಮ ಪ್ರಸಾದ ತಿಳಿಯಲಿಲ್ಲವೆಂದಲ್ಲಿ ಜೀವವಿದ್ದು ಸತ್ತಂತೆ. ಆರೇ ಇರಲಿ ವೇದ ವೇದಾಂತ ಗಳಿಗೆ ಅಸಾಧ್ಯವಾದ ಅನುಪಮ ಲಿಂಗ ಅಚಲತೆ ಲಿಂಗವರಿಯುವ ಭಾಗ್ಯವಂತರಾಗು ವುದು. ಇದರಿಂದ ಇಷ್ಟಲಿಂಗ ಪ್ರಾಣಲಿಂಗ ರಹಸ್ಯವ ತಿಳಿಯುವುದರಿಂದ ಪ್ರಭುದೇವ ಇಷ್ಟಲಿಂಗ ಹೋದಡೆ ಪ್ರಾಣಲಿಂಗ ಹೋಗದು ನೋಡಾ ಎಂದುದಲ್ಲದೆ ಇಷ್ಟಲಿಂಗ, ಪ್ರಾಣ ಲಿಂಗವೆಂಬ ಭೇದವನು ಗುಹೇಶ್ವರ ನಿಮ್ಮ ಶರಣ ಬಲ್ಲ ಎಂದು ಹೇಳಿದರು.

ಸರ್ವರ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದ್‌ಬೆಳಗೆ ನಿರವಯ ಲಿಂಗ. ಇದನ್ನು ಒಂದನುವ ಮಾಡಿ ಶ್ರೀಗುರುಸ್ವಾಮಿ ಅನುಭವಕ್ಕೆ ತಂದುಕೊಟ್ಟ . ಆ ಮಹಾಬೆ ಳಗೆ ಸಾವಯವ ರೂಪಿ ಇಷ್ಟಲಿಂಗ, ಭಕ್ತರ ಸುಜ್ಞಾನರೂಪಿ ಕರಕಮಲದಲ್ಲಿ ಪ್ರಜ್ವಲಿಸುವ ಅಖಂಡಿತ ಲಿಂಗ. ಈ ಲಿಂಗ ಪ್ರಸಾದವಾಗಿಹ ಅಖಂಡವ ಜ್ಞಾನವ ಕಂಡು ಅಂತರಂಗವೆ ಒಪ್ಪಿ ಕರಣಂಗಳೇ ತಮ್ಮ ಪೂರ್ವಾಶ್ರಯವಾದ ಅನಾತ್ಮ ಭಾವದಿಂದ ದೂರಾಗಿ, ಅಖಂಡ ಜ್ಞಾನ ಪ್ರಭೆಯಿಂ ಕರಣಂಗಳೆ ಲಿಂಗ ಕಿರಣಂಗಳಾಗಿ ಬೆಳಗುವ ಚಿದಂಶವು ಪ್ರಾಣ ಲಿಂಗವಾಗಿಪ್ಪುದು.

ಈ ಚಿದಂಶರೂಪಿ ಚಿತ್‌ಪ್ರಭೆಯಿಂದ, ಸಕಲ ಭಾವಂಗಳು ಭ್ರಮರೂಪವಾಗಿ, ಭಾವಕ್ಕಗಮ್ಯವಾಗಿಹ ಮೂಲ ಚೈತನ್ಯ ಭರಿತ ಭಾವವಾಗಿಪ್ಪುದು ಭಾವಲಿಂಗ. ಈ ಭರಿತ ಭಾವವ ಅರಿದರಿದು ನೋಡುವ ನೋಟ ಲಿಂಗಯ್ಯನ ನೋಟ. ಇದು ಅರಿಯದರುವುಳ್ಳ ನೋಟ. ನಿರಾಳ ನೋಟ, ನಿಜ ನೋಟ, ತನ್ನನ್ನೇ ನೋಡಿದ ನೋಟ, ಇದು ಕೂಡದಗ ಲದ ನೋಟ. ತನ್ನ ಹೃದಯದೋಳ್ ನ್ಯಸ್ತವಾಗಿಹ ನೋಟ, ತನ್ನ ನೋಟವಾದ್ದರಿಂದ ತಾನು ತಾನಹದಲ್ಲದೆ ಇದಿರಿಟ್ಟು ಅಂದರೆ ತನಗಿಂತನ್ಯ ಆವುದು ಇಲ್ಲವಾದ್ದರಿಂದ ಇಷ್ಟ ಲಿಂಗ, ಪ್ರಾಣಲಿಂಗವೆಂಬ ಭೇದವನು ಗುಹೇಶ್ವರ ನಿಮ್ಮ ಶರಣ ಎಂದು ಹೇಳಿಹರು.

**8**

**ವ್ರತಗೇಡಿ ವ್ರತಗೇಡಿ ಎಂಬವ, ತಾನೇ ವ್ರತಗೇಡಿ.**
**ವ್ರತ ಕೆಡಲಿಕ್ಕೇನು ಹಾಲಂಬಿಲವೆ ?**
**ವ್ರತ ಕೆಟ್ಟಬಳಿಕ ಘಟ ಉಳಿಯಬಲ್ಲುದೆ ?**
**ಕಾಯದೊಳಗೆ ಜೀವವುಳ್ಳನ್ನಕ್ಕ,**
**ಅದೇ ಪ್ರಾಣಲಿಂಗವು ಕಾಣಾ ಗುಹೇಶ್ವರಾ.** ॥ 182 ॥

**ತಾತ್ಪರ್ಯ**: *ವ್ರತಗೇಡಿ ವ್ರತಗೇಡಿ ಎಂಬವ ತಾನೇ ವ್ರತಗೇಡಿ* : ಎಂದುದು ಪ್ರಭು

ದೇವರ ಪ್ರಸಾದ ವಾಣಿ. ವ್ರತಗೇಡಿಗಳೆಂಬುವವರು ಇವರಾರು ? ವ್ರತದ ಅಭಿಮಾನಿಗಳು, ವ್ರತವೇ ಇವರಿಗೆ ತಮ್ಮ ಇರುವಾಗಿದೆ. ಇವರಿಗೆ ಸಮದರ್ಶನವಿಲ್ಲ, ಏಕೆಂದರೆ ಸಮ್ಯಜ್ಞಾನವಿಲ್ಲ. ಇವರು ಭೇದ ಜ್ಞಾನಿಗಳು. ಭಾವ ಭ್ರಾಂತರು. ಕಲ್ಪಿತರು. ಶಬ್ದವೇದಿಗಳು.

ಪ್ರಭುದೇವ ಅಕಲ್ಪಿತ ಅಪ್ರಮಾಣ , ಅಗಮ್ಯ, ಅಂಚಿತ್ಯಾತ್ಮನಂತೆ ನಿಶಬ್ದವೇದಿ. ಈ ಮಹಾಂತನದು ಕೆಡದ ವ್ರತ. ಅಗಣಿತನು ಗುಣವುಳ್ಳವನಾಗಬಹುದೆ ? ಪುರುಷೋತ್ತಮನು ಪುರವಾಗಬಹುದೆ ? ನಿಸ್ಸೀಮನು ಸೀಮಿತನಾಗಬಹುದೆ ? ಹಾಲು ಆಗಲಿ, ಅಂಬಲಿಯಾಗಲಿ, ಘಟವಾಗಲಿ, ಮಠವಾಗಲಿ ಕೆಡುತ್ತವೆ, ಬೀಳುತ್ತವೆ, ನಷ್ಟವಾಗುತ್ತವೆ. ಘಟ ಒಡೆಯಬಹುದು, ಮಠ ಬೀಳಬಹುದು, ಮೇಘವು ಬಯಲಾಗಬಹುದು. ಘಟದೊಳಗಿದ್ದ ಆಕಾಶ ಒಡೆಯಬಹುದೆ ? ಮಠದೊಳಗಿದ್ದ ಆಕಾಶ ಬೀಳಬಹುದೆ? ಮೇಘದೊಳಗಿದ್ದ ಆಕಾಶ ಇಲ್ಲವಾಗಬಹುದೆ ? ಹಾಗೆ ಕಾಂಡ ತ್ರಯದಭಿಮಾನಿಗಳು ವಿಷಮ ದೃಷ್ಟಿಯುಳ್ಳವರು. ಇವರು ನಿಸ್ಸೀಮರಾಗಬಹುದೆ ? ಕರ್ಮಿಯು ಉಪಾಸಕನಿಗೆ ಶ್ರೇಷ್ಠನಾಗಿ ಕಾಣುವನು. ಉಪಾಸಕನು ಜ್ಞಾನಿಗಳನ್ನು ಶ್ರೇಷ್ಠರಾಗಿ ಕಾಣುವನು. ಜ್ಞಾನಿಗೆ ಇವರೀರ್ವರು ಭ್ರಾಂತರಾಗಿ ಕಾಣುವರು. ನಿಜವರಿತವರ ದೃಷ್ಟಿಯಲ್ಲಿ ಇವರೆಲ್ಲರೂ ವ್ರತಗೇಡಿಗಳಾಗಿಹರು. ಪ್ರಭುದೇವ ನಿಜೈಕ್ಯ ಸಂಪನ್ನ, ಆತನ ದಿವ್ಯದೃಷ್ಟಿ ಅರಿಯದವರೆಲ್ಲ ವ್ರತಗೇಡಿಗಳು ಎಂದು ಹೇಳಿಹನು.

ಕಾಯ ನಾನೆನ್ನುವ ಕರ್ಮಕಾಂಡಿಯ ಕಂಡು: ಉಪಾಸಕನು ಹೀಗೆನ್ನುವನು. ಓ ಕಾಯ ನಾನೆನ್ನುವ ಕರ್ಮಕಾಂಡಿಯೆ, ದೇವನು ಕೊಟ್ಟ ಕಾಯವನ್ನು ದೇವನಿಗೆ ಅರ್ಪಣ ಮಾಡದವನು, ದೇವನು ಕೊಟ್ಟ ಪಡಿಪದಾರ್ಥ ದೇವನದೆನ್ನದೆ ತನ್ನದು ಮಾಡಿ ತಾನೆಂದು ಉಪಭೋಗಿಸುವವನಾಗಿದ್ದಾನೆ. ಅಹಂಭಾವಿಯಾಗಿಹನು ಇದನ್ನು ಕಂಡು ಕರ್ಮಿಗೆ ಉಪಾಸಕನು ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮಾನಾಥ ಎಂದು ಹೀಯಾಳಿಸುವನು ವ್ರತಗೇಡಿ ಅನ್ನುವನು.

ಸಾಕ್ಷಿ ನಾನೆನ್ನುವ ಜ್ಞಾನಕಾಂಡಿಯು ಉಪಾಸಕನನ್ನು ಕಂಡು: ದೇವನಿಗೆ ಅರ್ಪಿತ ಮಾಡುವ ಉಪಾಸಕನೆ ದೇವನ ಪದಾರ್ಥ, ದೇವನವು ಎಂದು ಅರ್ಪಿತ ಮಾಡುವಿ ಸರಿ. ದೇವನೆಂದರೆ ಆರು ಗೊತ್ತೆ ? *ಹೊರಗಿದ್ದಿಹನೆಂದು ಮರೆದು ಮಾತನಾಡಿದೆ ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು ತೆರಹಿಲ್ಲದಭವ ನುಡಿಗೆಡೆಗೊಡನು* ಎಂಬುದನ್ನು ತಿಳಿದಿರುವಿಯಾ, ಅಥವಾ ಬಲ್ಲ ಮಹಾಪುರುಷರಿಂದ ಕೇಳಿ ತಿಳಿದಿರುವಿಯಾ ಓ ಅರ್ಪಿಸುವ ಅರ್ಪಿತನೆ ? ತೆರಹಿಲ್ಲದಭವನೆ ದೇವನಾಗಿರುವಲ್ಲಿ ಅರ್ಪಿತ ಪದಾರ್ಥವೆಲ್ಲಿ ? ಅರ್ಪಿಸುವವನೆಲ್ಲಿ ? ಅರ್ಪಿಸಿಕೊಳ್ಳುವ ಘನವೆಲ್ಲಿ? ನೀನು ದೇವನಿಗಿಂತ ಅನ್ಯನೆ ? ನೀನಾರೆಂದು ತಿಳಿದಿರುವೆಯಾ ? ತೆರಹಿಲ್ಲದಭವ ನುಡಿಗೆಡೆಗೊಡದ ಘನದಲ್ಲಿ ನೀ ಭಕ್ತನಾಗಿ ಅರ್ಪಿಸಲು ಅರ್ಪಿಸುವ ಪದಾರ್ಥಕ್ಕಾಗಲಿ ಸಂದು ಇದೆಯಾ ? ಎಂದು ಪ್ರಶ್ನಿಸುವ ಜ್ಞಾನಕಾಂಡಿಯ ದೃಷ್ಟಿಗೆ ಇವನು ವ್ರತಗೇಡಿಯಾಗಿ ಕಾಣುವನು. ಎಲ್ಲಿಯವರೆಗೆ ಸಮಗೋಷ್ಠಿಯಾಗಿಯೆ ಪರತತ್ವ ತಿಳಿಯುವುದಿಲ್ಲ ಅಲ್ಲಿಯವರೆಗೆ ವಿಷಮ ಬುದ್ಧಿ ಹೋಗುವುದಿಲ್ಲ, ವಿಷಮ ದೃಷ್ಟಿ,

ವಿಷಮ ಜ್ಞಾನ ನಷ್ಟವಾಗದಿದ್ದಲ್ಲಿ ಪರತತ್ವದ ಸಾಕ್ಷಾತ್ಕಾರವಾಗುವುದಿಲ್ಲವೆಂದು ತಿಳಿಯುವುದು.

ಆಧುನಿಕ ಸಮಾಜದಲ್ಲಿ ಹಾಲು ಅಂಬಲಿ ವ್ರತವೇ ಅಧಿಕವಾಗಿದೆ. ತಾವು ಸೇವಿಸುವ ಹಾಲು ಕೆಡುವುದು, ಅಂಬಲಿಯೂ ಕೆಡುವುದು ಇದು ತಿಳಿಯದಾಗಿದೆ. ಇದನ್ನು ಸೇವಿಸಿ ಬೆಳೆದ ಶರೀರವು ಕೆಡುವುದು. ಇಂದ್ರಿಯಂಗಳು , ಮನ ಕೆಡುವವು. ಕೆಡುವ ಹಾಲು ಅಂಬಲಿ ಸೇವಿಸಿ ತಯಾರಾದುದೆಲ್ಲ ಕೆಡುವುದು, ಬೀಜ ವೃಕ್ಷವೆಂಬ ನ್ಯಾಯದಂತೆ, ಕೆಡುವ ಬೀಜದಿಂದ ಕೆಡುವ ವೃಕ್ಷ ; ಇದು ಎಲ್ಲ ವ್ರತಗೇಡಿಗಳ ಕಥೆ. ಲಿಂಗಸಂಪನ್ನರ ಕಥೆಯಲ್ಲ, ಲಿಂಗಸಂಪನ್ನರೆಂದರೆ ಲಿಂಗವ ತಿಳಿದು ಲಿಂಗವಾಗಿಹ ಘನ ವ್ರತಿಗಳು. ಅದು ಅಖಂಡ ವ್ರತ, ಅಚಿಂತ್ಯ ವ್ರತ, ಸಮತಾವ್ರತ, ಅರಿದರಿದು ಅದುವೆ ಆಗಿಹ ವ್ರತ. ನಿರುಪಮ ವ್ರತ ಕ್ರಿಯಾತೀತವು.

ಕ್ರಿಯದಿಂದುಕ್ತವಾದುದೆಲ್ಲ ಒಂದು ದಿನ ಕೆಡುತ್ತದೆ. ನೆನಹಿನಿಂದುಕ್ತವಾದುದು ಕೆಡುತ್ತದೆ. ಭಾವದಿಂದುಕ್ತವಾದುದು ಕೆಡುವುದು. ಭಾವಕ್ಕಗಮ್ಯವಾದುದು ಕೆಡದು. ಧ್ಯಾನಾತೀತವು ಕೆಡದು. ಅಚಿಂತ್ಯವು ಕೆಡದು. ಇದು ಕಾರಣ ಚೇತನ ಕೆಡದು. ಏಕೆಂದರೆ ಚೇತನ ಚೈತನ್ಯಕ್ಕಿಂತ ಅನ್ಯವಲ್ಲ.

ಕಾಯದೊಳಗೆ ಜೀವವುಳ್ಳನ್ನಕ್ಕರ ಅದೆ ಪ್ರಾಣಲಿಂಗವು ಕಾಣಾ ಗುಹೇಶ್ವರಾ: ಎಂದು ಪ್ರಭುದೇವ ಬಿತ್ತರಿಸಿದುದು. ಘಟದೊಳಗಿದ್ದ ಆಕಾಶ ಹೇಗೆ ಕೆಡದೊ ಹಾಗೆ ಕಾಯದೊಳಗಿದ್ದ ಚೇತನ ಜೀವ ಕೆಡದು. ಜೀವವೆಂಬುದು ಜೀವರ ಜೀವವಾಗಿದ್ದುದರಿಂದ ಅದು ನಿರಂತರವಾಗಿರುವ ಮಂಗಳಮಯ ಜ್ಯೋತಿ. ಈ ಜ್ಯೋತಿಯೇ ತಾನೆಂದರಿದವರೆ ಪ್ರಾಣ ಲಿಂಗಿಗಳು ಎಂದು ಹೇಳಿಹುದು. ಪ್ರಾಣಲಿಂಗವಂತರೆಲ್ಲ ಅರಿದರಿದು ನೋಡಿದ ಶರಣರು ಇದು ಕಾರಣ ಅರುವ ಅರಿದರಿದು ನೋಡಿ ಎಂದು ಎಚ್ಚರಿಸಿದರು.

9

**ಅರಿದರಿದು ಅರಿವು ಬರುದೊರೆವೋಯಿತ್ತು.**
**ಕುರುಹ ತೋರಿದಡಿಂತು ನಂಬರು.**
**ತೆರಹಿಲ್ಲದ ಘನವ ನೆನೆದು**
**ಗುರು ಶರಣು ಶರಣೆಂಬುದಲ್ಲದೆ,**
**ಮರಹು ಬಂದಿಹುದೆಂದು, ಗುರು ಕುರುಹ ತೋರಿದನಲ್ಲದೆ**
**ಅರಿಯಬಲ್ಲಡೆ ಗುಹೇಶ್ವರನೆಂಬ ಲಿಂಗವು, ಹೃದಯದಲೈದಾನೆ.** ॥ 185 ॥

**ತಾತ್ಪರ್ಯ:** *ಅರಿದರಿದು ಅರಿವು ಬರುದೊರೆ ವೋಯಿತ್ತು :* ಎಂದು ಪ್ರಭುದೇವ ಬಿತ್ತರಿಸಿ ಜಿಜ್ಞಾಸುಗಳಿಗೆಲ್ಲ ವಿವರಿಸಿ ನೋಡುವ ದಿವ್ಯದೃಷ್ಟಿ ಕರುಣಿಸಿದ. ಈ ಅರಿಯುವ ಅರಿವು ಮಧ್ಯಸ್ತ ಅರುವು. ಇಲ್ಲದ ಮಾಯಾರೂಪಿ ತೋರಿಕೆ ಇಲ್ಲ ಮಾಡಿ, ಇದ್ದ ಘನ ತತ್ವವ ತೋರಿಸಿ, ತನ್ನ ಮಧ್ಯಸ್ಥಿಕೆಯನ್ನೆ ನಿಷ್ಪ್ರಯೋಜಕವೆಂದು ಕಾಣಿಸುವ ಈ ಅರಿವು, ಸಾಧಕರಿಗೂ ಜಿಜ್ಞಾಸುಗಳಿಗೂ ಅನಾತ್ಮ ಧರ್ಮದ ತಾದಾತ್ಮ್ಯದಿಂದ ಬಿಡುಗಡೆ ಮಾಡಲು ಆಪ್ತ ಪುರುಷನಂತೆ, ಅನಿಮಿತ್ಯ ಬಾಂಧವನಂತೆ ಕರುಣಾಮಯನಂತೆ ಬಿಡುಗಡೆ ಮಾಡುತ್ತಾನೆ.

ಆಗ ನಿಸ್ಸಂಗತ್ವ ಸಿದ್ಧಿಸುತ್ತದೆ. ಭ್ರಮವನ್ನೆ ನಿರಸನ ಮಾಡಿ ಬ್ರಹ್ಮಭಾವ ಸಿದ್ಧಿಸುತ್ತದೆ. ಮರಣದ ಅಂಜಿಕೆಯನ್ನೆ ಕಳೆದು ಅಮರತ್ವ ಸಾಧಿಸುತ್ತದೆ.

ಈ ಚಿಂತನೆ ಅಮರ ಚಿಂತನೆ. ಸುಖರೂಪಾತ್ಮನ ಚಿಂತನೆ, ಅರುವಿನ ಚಿಂತನೆ, ಬ್ರಹ್ಮ ಚಿಂತನೆ, ಈ ಚಿಂತನವೆ ಬಹು ಸಾಧಕರಿಗೆ ತಮ್ಮ ಸ್ವರೂಪವೆಂದು ಭಾವಿಸಿ ಇಲ್ಲಿಯೆ ನಿಂತಿದ್ದಾರೆ. ಅವರಿಗಿದು ಮುಕ್ತಾವಸ್ಥೆ ಎಂದು ಹೇಳಬಹುದು. ಇವರ ನಿಲವು ಭೇದ ಬಾಧಕವಾಗಿ ಅಭೇದ ಸಾಧನೆಯಾಗಿದೆ. ಇದು ಮನದ ವೃತ್ತಿ ಎಂದು ಬಹು ಸಾಧಕರಿಗೆ ತಿಳಿದುದು ಎಂದು ಹೇಗೆ ತಿಳಿಯುವುದು ? ಇದು ಕಾರಣ ಮನದ ಕಾರ್ಯ ನಮ್ಮ ಸ್ವರೂಪ ಆಗದೆಂದು ಅರಿಯಲೊಲ್ಲರು. ಅದಕ್ಕಾಗಿ ಅರಿದರಿದು ಅರುವು ಬರುದೋರೆವೋಯಿತ್ತು ಎಂಬ ಪ್ರಭುವಿನ ಗಂಭೀರತ್ವ ಆಧ್ಯಾತ್ಮಿಗಳಿಗೆ ಬರುವುದು ವಿರಳವಾಗಿದೆ.

ಪ್ರಭು ಹೇಳುವುದೇನು ? ಮುನ್ನವೆ ಪ್ರಭು, ಈಗಳೂ ಪ್ರಭು ಎಂದೆಂದೂ ಪ್ರಭುವಾದ್ದರಿಂದ ಅರಿವುದಾವುದೋ ಅದನ್ನೆ ಅರಿದರಿದು ನೋಡಿದ ಗಂಭೀರ ಘನವಂತ. ಆತನ ಮುಂದೆ ಶೃತಿಗಳೆಲ್ಲ ಮೌನ ಧರಿಸಿದವು. ಮಾಗಿದ ಕಾಯಿಯಂತೆ ವ್ಯರ್ಥವಾದವು. ಆತನು ಕುರುಹಿಂಗೆ ಒಪ್ಪಲಿಲ್ಲ, ಒಪ್ಪಿದವರಿಗೂ ಕೂಡ ತನ್ನ ಮಹಾ ಪ್ರಸಾದವ ಕರುಣಿಸಿ ಆವುದನ್ನು ನಂಬಬೇಕು, ಅಂತಪ್ಪ ಘನಕ್ಕೆ ಘನವಾದುದನ್ನೆ ನಂಬುವಂತೆ ಮಾಡಿದ. ತೆರಹಿಲ್ಲದ ಘನವನ್ನೆ ನಂಬುವಂತೆ ಮಾಡಿದ. ವೇದಾಂತಿಗಳೆ ಇರಲಿ, ಸಿದ್ಧಾಂತರೆ ಇರಲಿ, ನಾನೀನೆಂಬುದಕ್ಕೆಡೆಗೊಡದ ಘನವೆ ನಮ್ಮಯ ಇರವು, ಸಕಲರ ಇರವು ಎಂದು ನಿಸ್ಸೀಮರನ್ನಾಗಿ ಮಾಡಿ ನಿಮ್ಮಿಂದ ನಿಮ್ಮನ್ನು ನೀವು ನೋಡಿಕೊಳ್ಳಿ ಎಂದು ಎಚ್ಚರಿಸಿದ.

ಆದಿ ಪುರಾತನರ ಪರಮಜ್ಞಾನ ಆರ ಹೃದಯದಲ್ಲಿ ಪ್ರಜ್ವಲಿಸಿರುವದಿಲ್ಲ ; ಇಷ್ಟಲಿಂಗವು ಅವರಿಗೆ ಒಂದು ಕುರುಹಾಗಿದೆ. ಅದಕ್ಕಾಗಿ ಅದು ಪೂಜಾಲಿಂಗವಾಯಿತು. ಆಚಾರಲಿಂಗವಾಯಿತು. ರೂಪ ನಿರೂಪವಾಗಲಿಲ್ಲ, ಬಹುಲಿಂಗವಂತರಿಗೆ ಪ್ರಭುವೆಂಬ ನಿಜೈಕ್ಯ ಜಂಗಮನ ದರ್ಶನವಾಗಲಿಲ್ಲ, ಲಿಂಗವು ತೆರಹಿಲ್ಲದ ಘನವಾಗಲಿಲ್ಲ, ಅಖಂಡ ತೇಜವಾಗಲಿಲ್ಲ ಏಕೆಂದರೆ, ಅಂತರಂಗದಲ್ಲಿರ್ದ ನಿರವಯಲಿಂಗ, ಸಾವಯವ ಲಿಂಗವ ಮಾಡಿ ಶ್ರೀಗುರು ಸ್ವಾಮಿ ಸುಜ್ಞಾನ ರೂಪಿ ಕರಸ್ಥಲದಲ್ಲಿ ಇಡಲಿಲ್ಲ, ಆ ಪರಮ ಚಿದ್ ಬೆಳಗಿನ ಘನತ್ವ ಹೃದಯದಲ್ಲಿ ಪ್ರಜ್ವಲಿಸದ್ದರಿಂದ ಇದು ಪೂಜಾ ಲಿಂಗವಾಗಿ ಮಡಿ ನೀರಿನಿಂದ ತೊಳಿಸಿಕೊಳ್ಳುವ ಆಚಾರಲಿಂಗವಾಯಿತ್ತಲ್ಲದೆ ನಿಷ್ಕಳಂಕ ಲಿಂಗವಾಗಲಿಲ್ಲ,

ಅರುವ ಅರಿದರಿದ ಸಂಕೇತವೆಂದರೆ ತಾನು ತೆರಹಿಲ್ಲದಭವ. ನುಡಿಗೆಡೆಗೊಡದ ಘನ, ನುಡಿದು ಹೇಳಿದುದೆಂತು ಭಾವಕ್ಕಿಂಬು ಕೊಡದವನ ಭಾವಿಸುವದೆಂತು ? ಅಚಿಂತ್ಯನ ಚಿಂತಿಸುವದೆಂತು, ಆಗ ಶ್ರೀಗುರು ಸ್ವಾಮಿ ತನಗೆ ಆಪ್ತನಾಗಿ ಬಂದು ತನ್ನ ಹೃದಯದಲ್ಲಿ ನ್ಯಸ್ತವಾಗಿಹ ನಿಜದ ನಿಕ್ಷೇಪವ ತೋರಿಸಿದುದು ಬಣ್ಣಿಸುವದೆಂತು ? ಆ ಘನವಂತನನ್ನಾದರೂ ವರ್ಣಿಸುವದೆಂತು ? ಈರ್ವರು ಒಂದೆ ಸುಖರೂಪ ಸಮುದ್ರವು, ಅಚಿಂತ್ಯಾತ್ಮರಾಗಿಹ ತಮ್ಮಯ ನಿಲವು.

ಮರೆದು ಬಂದಿಹುದೆಂದು ಗುರು ಕುರುಹ ತೋರಿದನಲ್ಲದೆ ಅರಿಯಬಲ್ಲಡೆ ಗುಹೇಶ್ವರ ಲಿಂಗ ಹೃದಯದಲ್ಲೈದಾನೆ, ಮರೆದು ಬಂದಿಹುದೆಂದು ಕುರುಹ ತೋರಿದವನೆ ಪರಮ ಗುರುವು. ಕುರುಹ ಅರಿಯಬಲ್ಲವನೆ ಗುರುವಿಂಗೆ ಗುರುವಾಗಿ ಗುರು ಪ್ರಸಾದವ

ಕೊಂಡವನು; ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದ ಕೊಂಡವನು. ಈ ಅಪ್ರತಿಮವಂತರ ಘನವ ಅದೆಂತು ವರ್ಣಿಸುವುದು.

ಮರೆದು ಬಂದುದು ಆವುದು? ಗುರು ತೋರಿಸಿದ ಕುರುಹು ಆವುದು ? ತನ್ನ ಹೃದಯ ಮಧ್ಯದಲ್ಲಿ ನ್ಯಸ್ತವಾಗಿಹ ಪರಮ ಚಿದ್ ಬೆಳಗೆ ಮರೆದು ಬಂದುದು ಅದನ್ನೆ ಕುರುಹ ಮಾಡಿ ತೋರಿಸಿದ ಕರುಣಾಮಯಿ. ಈ ಕುರುಹಿನ ಘನವು ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ತೇಜ, ಅಚಲಿತ ತೇಜ, ಇದು ಮೌನ ತೇಜ ಇದನ್ನು ಅರಿಯ ಹೋದವರು ತಮ್ಮ ಹೃದಯದಲ್ಲಿ ನ್ಯಸ್ತವಾಗಿಹ ಗುಹೇಶ್ವರ ಲಿಂಗವ ಕಂಡು ತಾವು ಅದುವೆ ಆಗಿ ಪ್ರಜ್ವಲಿಸಿದರು. ಇಂತಪ್ಪ ಬೆಳಗುಳ್ಳ ಘನ ಲಿಂಗ ಪೂಜಿಸುವರ ಪೂಜೆಯ ತೋರಿಸಿರಿ ಎಂದು ಎಚ್ಚರಿಸಿಹನು.

**10**

**ಹೊತ್ತಾರೆ ಪೂಜಿಸಲು ಬೇಡ ಕಂಡಾ.**
**ಬೈಗೆಯೂ ಪೂಜಿಸಲು ಬೇಡ ಕಂಡಾ.**
**ಇರುಳವನು ಹಗಲುವನು ಕಳೆದು,**
**ಪೂಜೆಯನು ಪೂಜಿಸಲುಬೇಕು ಕಂಡಾ.**
**ಇಂತಪ್ಪ ಪೂಜೆಯನು ಪೂಜಿಸುವರ,**
**ಎನಗೆ ನೀ ತೋರಾ ಗುಹೇಶ್ವರಾ.** ॥ 203 ॥

**ತಾತ್ಪರ್ಯ:** ಪ್ರಭುದೇವ ಬ್ರಾಹ್ಮಿಮುಹೂರ್ತದಲ್ಲಿ ಸಾಯಂಕಾಲದಲ್ಲಿ ಹಗಲಿನಲ್ಲಿ ರಾತ್ರಿಯಲ್ಲಿ ಪೂಜೆ ಮಾಡುವ ಲಿಂಗಾರ್ಚಕರ ಕಂಡು : ಓ ಪೂಜಿಸುವ ಪೂಜಕನೆ? ಲಿಂಗದೇವನ ಪೂಜೆ, ನಸುಕಿನಲ್ಲಿ ಪೂಜಿಸಲು ಬೇಡ ಸಾಯಂಕಾಲದಲ್ಲಿ ಪೂಜಿಸಬೇಡ, ಹಗಲು ರಾತ್ರಿಗಳ ಕಳೆದು ಪೂಜಿಸಬೇಕು. ಇಂತಪ್ಪ ಪೂಜೆಯ ಪೂಜಿಸುವವರ ಎನಗೆ ತೋರಯ್ಯ ಗುಹೇಶ್ವರ ಎಂದು ಪ್ರಶ್ನಿಸಿದ್ದಾನೆ.

ಓ ಶರಣುವರೇಣ್ಯರೆ ; ಪೂಜೆಯ ಪೂಜಿಸುವವರು ನೀವು ಅಸಮಾನ್ಯರು, ಅಪ್ರಮಾಣಿಕರು, ಅಗಣಿತರು, ಅಚಿಂತ್ಯಾತ್ಮರು ಪೂಜಿ(೦)ಶೂನ್ಯ ಎಂದರೆ ಸಾಮಾನ್ಯವೆ ? ಇದು ಅನುಭಾವದಗಮ್ಯವು; ಅರುವಿನ ವಿಶ್ರಾಮವು, ನಿಜದ ನಿಧಿಯು ಮನದ ಮೂಲವು. ಇಂತಪ್ಪ ಘನ ಸಂಪಾದನೆಯುಳ್ಳವರು ನೀವು; ಅಸಾಧ್ಯವ ಸಾಧಿಸುವವರು. ಈ (೦) ಶೂನ್ಯದ ಸಂಪಾದನೆ ಅನುಪಮದ ಸಂಪಾದನೆ. ಅಖಂಡಿತದ ಸಂಪಾದನೆ, ಅಚಲಿತ ಸಂಪಾದನೆ, ಈ ಸಂಪಾದನೆಯ ಸಂಪನ್ನರು ನೀವು; ಸಮರ್ಥರು. ನೀವು ಕಾರ್ಯ ಬ್ರಹ್ಮನನ್ನು ಪೂಜಿಸಿದವರಲ್ಲ, ಕಾರಣ ಬ್ರಹ್ಮವನ್ನು ಪೂಜಿಸಿದವರಲ್ಲ, ಆಕಾರವ ಪೂಜಿಸಿದವರಲ್ಲ, ನಿರಾಕಾರವ ಪೂಜಿಸಿದವರಲ್ಲ, ಮಾಯಿಕಕ್ಕೆ ಎಡೆಗೊಟ್ಟವರಲ್ಲ, ಕುರುಹ ಪೂಜಿಸಿದವರಲ್ಲ, ಬ್ರಹ್ಮನೆಂದವರಲ್ಲ, ವಿಷ್ಣುವೆಂದವರಲ್ಲ, ರುದ್ರನೆಂದವರಲ್ಲ, ಈಶ್ವರ ಸದಾಶಿವನೆಂದವರಲ್ಲ ; ನುಡಿಗೆಡೆಗೊಡದ ಘನವ ಪೂಜಿಸಿದವರು. ನಾನೆಂದವರಲ್ಲ, ನೀನೆಂದವರಲ್ಲ, ಪರತತ್ವನಿಜಸಂಯುಕ್ತರು. ನಾ ನೀನೆನ್ನದಿಹ ಶಬ್ದಸುಖಿಗಳು, ಅಸಂಖ್ಯಾತರು. ನಿಮ್ಮ

ಪೂಜೆ ಜಪತಪಾದಿಗಳಿಂದುಕ್ತವಾದುದೆಂತು ? ಪರತತ್ವವು ಬ್ರಾಹ್ಮಿಮುಹೂರ್ತವ ನೋಡಬಹುದೆ ? ಸ್ವಯಂಪ್ರಕಾಶವು ಸಾಯಂಕಾಲ, ಮಧ್ಯಾಹ್ನಗಳ ಕಾಣಬಹುದೆ ? ಓಹೋ ಶರಣು ವರೇಣ್ಯರೆ ನೀವು ಅಗಣಿತರು; ನಿಮ್ಮ ಪೂಜೆಗೆ ಉದಯಕಾಲ ವೇತರದು ? ಮಧ್ಯಾಹ್ನವೇತರದು, ಸಾಯಂಕಾಲವೇತರದು, ಅತಿಕಾಲನು ಕಾಲವ ಕಾಣು ವನೆ ? ಸೂರ್ಯನ ಪೂಜೆಗೆ ಕಕ್ಕಡದ ಆರುತಿಯೆ ? ನಿರಂತರವಾಗಿಹ ಮಂಗಳಮಯ ಚಿಜ್ಯೋತಿಯ ಪೂಜೆಗೆ ಅದಾವ ಬ್ರಾಹ್ಮಿ ಮುಹೂರ್ತ ? ಅದಾವ ಸಾಯಂಕಾಲ ?

ಓ ಅಣ್ಣಯ್ಯಗಳಿರಾ ! ಲಿಂಗವರಿತು ಲಿಂಗ ಪೂಜೆ ಮಾಡುವಿರಾ ? ಲಿಂಗ ಬೇರೆ, ನೀವು ಬೇರಾಗಿ ಪೂಜ್ಯ ಪೂಜ್ಯಕ ಭಾವವುಳ್ಳವರಾಗಿ ಮಾಡುವಿರಾ ? ಅಥವಾ ಲಿಂಗ ನಾನು ಒಂದೆಯಾಗಿ ಮಾಡುವಿರಾ ? ನಿಮ್ಮ ಪೂಜೆಯ ಗುರಿ ಆವುದು ? ವರ್ಮವಾವುದು ಬಲ್ಲಡೆ ಹೇಳಿರಿ.

*ಲಿಂಗವಾದ ಬಳಿಕ ಪೂಜಿಸಲಿಲ್ಲ, ಜಂಗಮವಾದ ಬಳಿಕ ನೋಡಲಿಲ್ಲ, ಪ್ರಸಾದಿ ಯಾದ ಬಳಿಕ ರುಚಿಸಲಿಲ್ಲ ಇಂತೀ ತ್ರಿವಿಧ ಒಂದಾದ ಬಳಿಕ ಪೂಜಿಸಲಿಲ್ಲ. ಏಕೆಂದರೆ ಅಂಗದ ಮೇಲಣ ಲಿಂಗವು ಲಿಂಗವಲ್ಲ. ಮನದ ಮೇಲಣ ಲಿಂಗವು ಲಿಂಗವಲ್ಲ. ಭಾವದ ಮೇಲಣ ಲಿಂಗವು ಲಿಂಗವಲ್ಲ. ಅಂಗದ ಮೇಲಣ ಲಿಂಗ ವ್ಯವಹಾರ, ಮನದ ಮೇಲಣ ಲಿಂಗ ಸಂಕಲ್ಪ, ಭಾವದ ಮೇಲಣ ಲಿಂಗ ಭ್ರಾಂತು, ತತ್ವ ಆಳಿನ ಆಳು ಅರಸನಪ್ಪನೆ ? ಆಳನಾಳುವವ ಅರಸನಲ್ಲದೆ ಅಂಗ, ಪ್ರಾಣ, ಮನ, ಭಾವಂಗಳ ನೊಳಕೊಂಡಿರ್ಪುದೆ ಲಿಂಗ ಕಾಣಾ ಮಸಣಯ್ಯ ಪ್ರಿಯ ಗಜೇಶ್ವರಾ.*

ಲಿಂಗವೆಂಬುದು ಅಕ್ಷರಾಕ್ಷರ ಮೀರಿದ ಘನ. ನಿರೂಪ, ನಿರುಪಮ, ನಿರಾಲಂಬ ನಿರ್ಬೇಧ್ಯವಿರುವಲ್ಲಿ ಅದೆಂತು ಪೂಜೆ ಮಾಡುವುದು ? ರೂಪುಳ್ಳವಂಗೆ ಅರ್ಚನೆ ಉಂಟು, ಅರ್ಪಿತಉಂಟು. ನಿರೂಪಂಗೆ ಅರ್ಚನೆ ಅದೆಂತು ? ಅರ್ಪಿತ ಅದೆಂತು ? ನಿರುಪಮನ ಪೂಜೆ ಎರಡಾಗಿ ನಾನು ನೀನಾಗಿ ಮಾಡಿದುದೆಂತು ತೆರಹಿಲ್ಲದ ಘನದಲ್ಲಿ ನಾ ನೀ ಇದ್ದುದೆಂದು ? ಇಲ್ಲದ ನಾ ನೀ ಇದು ಬೇರಾದುದೆಂದು ? ಒಂದಾದುದು ಎಂದು ? ಲಿಂಗ ಘನವು; ನಿರಾಲಂಬ. ಅದು ಭೇದಾಭೇದ ವಿನಿರ್ಮುಕ್ತವಾದುದು, ಅದು ಪೂಜ್ಯ ಪೂಜಕ, ಭಾವಕ್ಕೊಳಪಡುವದೆಂತು ? ಇದು ಕಾರಣ ಪ್ರಭುದೇವ:

*ಹಿಡಿವ ಕೈಯ ಮೇಲೆ ಕತ್ತಲೆಯಯ್ಯ, ನೋಡುವ ಕಂಗಳ ಮೇಲೆ ಕತ್ತಲೆಯಯ್ಯ, ನೆನೆವ ಮನದ ಮೇಲೆ ಕತ್ತಲೆಯಯ್ಯ, ಕತ್ತಲೆಯೆಂಬುದು ಇತ್ತಲೆಯಯ್ಯ, ಗುಹೇಶ್ವರ ನೆಂಬುದು ಅತ್ತಲೆಯಯ್ಯ.* ಎಂದು ಎಚ್ಚರಿಸಿದ.

ಲಿಂಗ ಪೂಜ್ಯ ಭಕ್ತ ಪೂಜಕವೆಂಬ ಭೇದಜ್ಞಾನಿಗಳ ದೃಷ್ಟಿಗೆ ಹಿಡಿವ ಕೈಯಿ, ನೋಡುವ ಕಂಗಳು, ನೆನೆವ ಮನ, ಇದು ಭ್ರಾಂತು, ಇದು ಕತ್ತಲು. ನಿಭ್ರಾಂತರ ದೃಷ್ಟಿಗೆ ಉದಯಾ ಸ್ತಗಳಿಲ್ಲದೆ ಅಖಂಡವಾಗಿಹ ಸ್ವಯಂಜ್ಯೋತಿಲಿಂಗ, ಚಿಜ್ಯೋತಿ ಲಿಂಗ. ಸುಜ್ಞಾನಿಗಳೆ ಹಗಲು ರಾತ್ರಿಯ ಕಳೆದು ಪೂಜಿಸುವವರು. ಅರಿಯದರುವುಳ್ಳ ಪರಮಜ್ಞಾನಿಗಳು. ಅರುವು, ಅರು ವೆಂಬ ಹಗಲುವನು, ಮರವು ಮರವೆಂಬ ಕತ್ತಲೆ ಕಳೆದವರು. ಅಂತಪ್ಪ ಪರಾತ್ಪರ ಜ್ಞಾನಿ ಗಳು ಲಿಂಗ ಒಂದಾಗಿರ್ದ ಜಂಗಮ ತತ್ವ ತಿಳಿದ ಮಹಾಂತರು. ಆ ಮಹಾಂತರ ಪೂಜೆ ಪೂಜಿಸುವದು ಎನಗೆ ತೋರಾ ಗುಹೇಶ್ವರ ಎಂದು ಬಿತ್ತರಿಸಿಹರು.

11

**ಎನ್ನ ಮನದ ಕೊನೆಯ ಮೊನೆಯ ಮೇಲೆ**
**ಅಂಗವಿಲ್ಲದ ರೂಪನ ಕಂಡು ಮರುಳಾದೆನವ್ವಾ .**
**ಆತನ ಕಂಡು ಬೆರಗಾದೆನವ್ವಾ .**
**ಎನ್ನ ಅಂತರಂಗದ ಆತುಮನೊಳಗೆ**
**ಅನುಮಿಷ ನಿಜೈಕ್ಯ ಗುಹೇಶ್ವರನ ಕಂಡು !** ॥ 205 ॥

**ತಾತ್ಪರ್ಯ:** ಪ್ರಭು ಲೋಕವ ಕಂಡು ಮರುಳಾಗುವವನೆ ? ಲೋಕಾದಿಗಳ ಭೋಗ ಕಂಡು ಮರುಳಾಗುವವನೆ ? ಲೋಕದ ಅಧಿಪತಿಗಳಿಗೂ ಮರುಳಾಗಲಿಲ್ಲ, ತನಗೆ ಒಲಿದು ಬಂದ ರಾಜಕನ್ಯೆ ತನ್ನನ್ನು ರಾಜ್ಯವನ್ನು ಒಪ್ಪಿಸಿದರೂ ಮರುಳಾಗಲಿಲ್ಲ, ಕೊನೆಗೆ ಪ್ರೇಮಾತುರವಾಗಿ ರಾಜಕನ್ಯೆ ನೀನೆ ಎನಗೆ ಪ್ರಿಯನು ಎಂದು ಆಲಿಂಗನ ಮಾಡಿದರೂ ನಿರಾಲಂಬನಾಗಿ ತನ್ನ ನಿಸ್ಸಂಗತ್ವದ ಹಿರಿಮೆಯಲ್ಲಿ ನಿಂತ ಸ್ವಪ್ರಭೆಯ ತೋರಿಸಿದ. ಬ್ರಹ್ಮ ಪದವಿ, ವಿಷ್ಣುಪದವಿ, ರುದ್ರಪದವಿಗಳಿಗೂ ಮರುಳಾಗಲಿಲ್ಲ, ಈ ಮಹಾಂತ ಮರುಳಾದದ್ದು, ಅಂಗವಿಲ್ಲದ ರೂಪನಕಂಡು! ಇದೆಂಥ ಮರುಳತನ ? ಇದೆಂಥ ಹೃದಯ ಪ್ರೇಮ ? ಇದೆಂಥ ಸಾಮರಸ್ಯ ಪ್ರೇಮ ? ಈ ಅಂಗವಿಲ್ಲದ ರೂಪನ ಕಂಡುದು ಆವಲ್ಲಿ ?

ಎನ್ನ ಮನದ ಕೊನೆಯ ಮೊನೆಯ ಮೇಲೆ : ಪ್ರಭುವಿನ ಮನ, ಮನದ ಕೊನೆ ಆವುದು ? ಅಲ್ಲಿ ಕಂಡುದು ಅಂಗವಿಲ್ಲದ ರೂಪನು. ಓಹೋ ಇದಾರ ಸಾಹಸ ಪ್ರಭುವಿನ ಸಾಹಸ. ಶರಣರ ಸಹೃದಯವನ್ನೆ ತನ್ನಂತೆ ಮಾಡುವ ಸಾಹಸ! ಪ್ರಭುವಿನ ಮನ ಎರಡೆಂಭತ್ತು ಕೋಟಿ ವಚನಂಗಳ ಪರಿಶೋಧಿಸಿದ ಮನ. ಈ ಮನ ಸಾಮಾನ್ಯವೆ ? ಇದು ಅಪ್ರತಿಮ ಮನ; ಏಕೆಂದರೆ ಮನದ ಕೊನೆಯ ಮೊನೆಯ ಮೇಲೆ ಅಂಗವಿಲ್ಲದ ರೂಪನ ಕಂಡುದು, ಅಪ್ರತಿಮ ಮನ. ಮನ, ಘನವರಿಯಲು ಹೋದ ಮನ. ಶಬ್ದ ಸಂಭ್ರಮ ಸೇರದ ಮನ. ಅವರ್ಣೀಯ ಮನ, ಘನ ಮನ, ಏನನ್ನು ಭಾವಿಸದ ಮನ, ಮನವನ್ನೆ ನಷ್ಟ ಮಾಡಿದ ಮನವಾದ್ದರಿಂದ ಸುಮನವೆಂದು ಹೇಳಿದೆ. ಇದು ಕಾರಣ ಮನದ ಕೊನೆಯ ಮೊನೆ ಎಂದು ಬಿತ್ತರಿಸಿಹರು. ಭಾವ ನಿರ್ಭಾವವಾದುದೆ ಮನದ ಕೊನೆಯ ಮೊನೆಯಾಗಿದೆ. ಅಲ್ಲಿ ಅಂಗವಿಲ್ಲದ ರೂಪನಕಂಡುದು ಎಂದು ಹೇಳಿಹರು.

ಅಂಗವಿಲ್ಲದ ರೂಪನು: ಇವನೆಂಥ ರೂಪುಳ್ಳವನು ? ಇವನಿಗೆ ಅರೂಪನೆನ್ನಬೇಕೆ ? ಅನ್ನಲಾಗದು. ರೂಪಾರೂಪವೆಂಬುದಕ್ಕೂ ಇಂಬುಗೊಡದ ರೂಪನು, ಅಖಂಡ ರೂಪನು, ಅನುಪಮ ರೂಪನು, ಅಚಲಿತ ರೂಪನು, ತೋರಬಾರದ ಘನ; ಈ ಘನವ ಕಂಡು ಮರುಳಾದುದು ಈ ಅಂಗವಿಲ್ಲದ ರೂಪನು. ಈ ಘನ ತೇಜವ ಕಂಡು ಮರುಳಾದುದು, ಇದು ತ್ಯಾಗಾಂಗ ರೂಪನೂ ಅಲ್ಲ, ಯೋಗಾಂಗ ರೂಪನೂ ಅಲ್ಲ ಏಕಂದರೆ ಅಂಗವುಳ್ಳವನಾದಲ್ಲಿ ತ್ಯಾಗಾಂಗಿ ಯೋಗಾಂಗಿ ಅನ್ನಲು ಬರುವುದು. ಏನೊಂದಾಗದ ಘನವ ಕಂಡು ಮರುಳಾದೆನೆಂದು ಹೇಳಿದುದಲ್ಲದೆ ಆತನ ಕಂಡು ಬೆರಗಾದೆ; ಬೆರಗುಗೊಳ್ಳುವುದು ಕಾಣದುದು ಕಂಡಾಗ.

ಪ್ರಭು ಕಂಡ ಬೆರಗು, ಆರಾರ ಕಾಣದ ಬೆರಗು. ಇದು ಕಾಣದುದ ಕಂಡುದು ಕೇಳದುದು ಕೇಳಿದುದು. ಅಂಗವಿಲ್ಲದ ರೂಪನ ಕಂಡುದು. ತನಗಿಂತನ್ಯವಾದುದು ಕಂಡನೆ ? ದೇವತಾ ದೈತ್ಯರ ಕಂಡನೆ ? ಅಥವಾ ಬ್ರಹ್ಮಾದಿಗಳ ಕಂಡನೆ ? ಇವಾವು ಕಂಡಿಲ್ಲ, ಕಂಡರೂ ಈ ಮಾಯಿಕಕ್ಕೆ ಬೆರಗುಗೊಳ್ಳುವನಲ್ಲ ; ಶೃತಿಗಳ ಕಂಡು ಚಕಿತವಾಗು ವವನಲ್ಲ ನಿಶಬ್ದವೇದಿ ಇವಾವುದಕ್ಕೂ ಬೆರಗುಗೊಳ್ಳುವನಲ್ಲ ,

ತನ್ನ ಅಂತರಂಗದ ಆತುಮನೊಳಗೆ ಅನುಮಿಷ ನಿಜೈಕ್ಯ ಗುಹೇಶ್ವರನ ಕಂಡು: ಬೆರಗುಗೊಂಡ ನಿರುಪಮ ಪ್ರಭು.

ಬಹು ಆಧ್ಯಾತ್ಮವಂತರು ಇರುವರು, ಪ್ರಭುವಿನಂಥ ಆಧ್ಯಾತ್ಮವಂತರು ಸಿಕ್ಕುವುದು ವಿರಳ. ಈ ಮಹಾಂತನ ಮಹದರುವು ನಿರುಪಮ. ಪ್ರಭು ಗುಹೆಯೊಳು ಹೊಕ್ಕು ಅಲ್ಲಿ ಅನುಮಿಷನೆಂಬ ನಿಜೈಕ್ಯ ಶರಣರೂಪಿ ಈಶ್ವರನ ಕಂಡು ಬೆರಗಾದುದಲ್ಲದೆ ಅಷ್ಟಕ್ಕೆ ತೃಪ್ತನಾ ಗಲಿಲ್ಲ, ಆತನನ್ನು ತನ್ನ ಅಂತರಂಗರೂಪಿ, ಅರು ಹೃದಯವೆಂಬ ನಿಶಬ್ದವೇದಿಯಾಗಿಹ ಮಹದರುವುಳ್ಳ ಸ್ವಾನುಭವದಲ್ಲಿ ಕಂಡ.

ಆತುಮ ಆತುಮಂಗೆ ಆತುಮ ನೆನಲಿಲ್ಲದ ನಿಶಬ್ದವೇದಿ, ಲಿಂಗಕ್ಕೆ ಲಿಂಗನೆನಲಿ ಲ್ಲದ ನಿಶಬ್ದವೇದಿ, ಅಂಡಜ ಪಿಂಡಜ ಸಾಕಾರ ನಿರಾಕಾರ ಸಂಗ ನಿಸ್ಸಂಗವಳಿದ ಸ್ವಯಲಿಂಗಿ ಈ ಸ್ವಯಲಿಂಗಿ ಗುರುವಿಂಗೆ ಗುರುವಾಗಿ ಗುರುಪ್ರಸಾದಕೊಂಡ ಪರಮಗುರು ಗುರುವಿನ ಗುರು, ಲಿಂಗಕ್ಕೆ ಲಿಂಗವಾಗಿ ಕಂಡ; ಅನುಪಮ ಲಿಂಗದ ಪ್ರಸಾದಿ, ಜಂಗಮಕ್ಕೆ ಜಂಗಮ ವಾಗಿ ಜಂಗಮ ಪ್ರಸಾದಕೊಂಡ ನಿರಾಲಂಬ ಜಂಗಮ, ನಿರ್ನಾಮ ಜಂಗಮ, ನಿರ್ಲಿಖಿತ ಜಂಗಮನಾದ್ದರಿಂದ ಎನ್ನ ಅಂತರಂಗದ ಆತುಮನೊಳಗೆ ಅನುಮಿಷ ನಿಜೈಕ್ಯ ಗುಹೇಶ್ವರ ಕಂಡುದು, ಕಾಣದುದು ಕಂಡದು, ಎಂದು ಹೇಳಿಹರು.

ಪ್ರಭು ಅರುವಿನ ಅರುವ ನೋಡಹೋಗಿ, ಅರಿಯದ ಅರುವಾಗಿ ನಿಂತುದೆ ನೋಡದ ನೋಟ, ಆವಾವುದರೋಳ ಕೂಡದ ಕೂಟಸ್ಥ. ಸಂಗ ನಿಸ್ಸಂಗಗಳ ಸಂಯೋಗವಿ ಲ್ಲದ ನಿಸ್ಸಂಗನ ನಿಲುವು, ಸತ್ಯಾಸತ್ಯವ ಕಾಣದ ಅಭೇದ್ಯ, ಚಿತ್ತಾಚಿತ್ತವ ಕಾಣದ ಸ್ವಯಂಜ್ಯೋತಿ, ನಿಜವ ಕಂಡು ನಿಜವೆನ್ನದ ನಿಜೈಕ್ಯ. ಇಂತಪ್ಪ ಘನಕ್ಕೆ ಘನವಾದ ಮಹದ ರುವು; ತನ್ನ ಅಂತರಂಗವೆಂಬ ಗುಹೆಯಲ್ಲಿ ಕಂಡುದರಿಂದ ಗುಹೇಶ್ವರ ಕಂಡುದು ಎಂದು ಹೇಳಿಹರು. ವೀರಶೈವರು ಇಂತಪ್ಪ ಪರತತ್ವವರಿಯದ್ದರಿಂದ ಲಿಂಗವ ತಿಳಿಯಲಿಲ್ಲ , ತಿಳಿ ಯದೆ ಅಂಗದ ಮೇಲೆ ಲಿಂಗ ಧರಿಸಿರುವುದರಿಂದ, ಲಿಂಗವೆಂಬುದು ಬಹುವಾಗಿ, ಸೀಮಿತ ಭಾವವೆ ಪ್ರಬಲವಾಗಿ, ನಿಸ್ಸೀಮ ಸುಖದಿಂದ ವಂಚಕರಾದುದು. ಪ್ರತ್ಯಕ್ಷ ಪ್ರಭು ಕಂಡು ಮರುಗಿ ಅರುವಿನ ಜನ್ಮವಾಗಿದ್ದು ಅರುವ ತಿಳಿಯಲು ಅರುವಿನ ಕುರುಹರೂಪಿ ಲಿಂಗವ ಧರಿಸಿದರೂ ಸೀಮಿತ ಬುದ್ಧಿಯು ಸ್ಥಿರವಾಯಿತಲ್ಲಾ ಏನು ಸೋಜಿಗ.

**12**

**ಎನಗೊಂದು ಲಿಂಗ ನಿನಗೊಂದು ಲಿಂಗ ಮನೆಗೊಂದು ಲಿಂಗವಾಯಿತ್ತು .**
**ಹೋಯಿತ್ತಲ್ಲಾ ಭಕ್ತಿ, ಜಲವ ಕೂಡಿ.**
**ಉಳಿ ಮುಟ್ಟದ ಲಿಂಗವ ಮನ ಮುಟ್ಟ ಬಲ್ಲುದೆ ಗುಹೇಶ್ವರಾ.** ॥ 207 ॥

**ತಾತ್ಪರ್ಯ:** ಪ್ರಭುದೇವ, ಲಿಂಗದ ಘನವರಿತುದ್ದರಿಂದ ಲಿಂಗಾರ್ಚಕರೆಲ್ಲ ಜಡಮತೀಯರಾದುದಕಂಡು ಮರಗುತ್ತಿದ್ದಾನೆ. ಓಹೋ ಲಿಂಗ ಪ್ರೇಮಿಗಳೆ ? ಎನಗೊಂದು ಲಿಂಗ ? ನಿನಗೊಂದು ಲಿಂಗ ? ಮನೆಗೊಂದು ಲಿಂಗ ? ಸಕಲರಿಗೆ ಒಂದೊಂದು ಲಿಂಗ, ಇದೇನು ಸೋಜಿಗ ? ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲವು, ತುಣು ತುಣಕಾಯಿತೆ ? ಬಿಡಿ ಬಿಡಿಯಾಯಿತೆ ? ಇದೆಂಥ ಲಿಂಗ ಸಕೀಲ ಸಂಯೋಗದ ವರ್ಮಸ್ಥಲ ವರಿತವರಪರಿ ? ಅರುವಿಂಗರುವಾಗಿಹ ಘನವು ಮರವಿಗಿಂಬಾಯಿತ್ತೆ ? ಜ್ಯೋತಿಯ ಹಿಡಿದು ಕತ್ತಲೆಯ ಕಂಡರೆ ! ಪರುಷವು ಕೈಯಲ್ಲಿದ್ದರೂ ದರಿದ್ರರಾದರೆ ! ಅಮೃತವ ಕಂಡರೂ ಮರಣವನಪ್ಪಿದುದು ಇದಕ್ಕೇನನ್ನಬೇಕು ? ತ್ರಾಹಿ ತ್ರಾಹಿ. ಲಿಂಗವಿಡಿದು ಅಂಗವಂತರಾದರೆ ? ನಿಸ್ಸೀಮವು ಸೀಮಿತವಾಯಿತೆ ? ಅಖಂಡವು ಖಂಡಿತವಾಯಿತೆ ? ಅನುಪಮ ಉಪಮೆಗೊಳಪಟ್ಟಿತ್ತೆ ? ನುಡಿಗೆಡೆಗೊಡದ ಘನ ನುಡಿಗೊಳಪಟ್ಟಿತ್ತೆ ? ಹೀಗಾದಲ್ಲಿ ಪರಿಹಾರ ?

ನನಗೊಂದು ಲಿಂಗ ನಿನಗೊಂದು ಲಿಂಗ ? ಆಶ್ಚರ್ಯ. ನಾನೀನೆಂಬುದಕ್ಕೂ ತೆರಹಿಲ್ಲದ ಲಿಂಗ ನನಗೊಂದು ಲಿಂಗವಾಯಿತ್ತೆ ? ನಿನಗೊಂದು ಲಿಂಗವಾಯಿತ್ತೆ ? ಮನೆಗೊಂದು ಲಿಂಗ, ಓಹೋ ? ಮನೆ ಮಠವೆಂಬುದಕ್ಕೂ ಇಂಬುಗೊಡದಲಿಂಗ, ಅಚಲಿತ ಲಿಂಗ, ಸಾಕಾರ ನಿರಾಕಾರವೆಂಬುದಕ್ಕೂ ಇಂಬುಗೊಡದ ಲಿಂಗ ಮನೆಗೊಂದು ಲಿಂಗವಾಯಿತ್ತೆ ? ಸಗುಣ ನಿರ್ಗುಣವರಿಯದ ಲಿಂಗ ಮನೆಗೊಂದು ಲಿಂಗವಾಯಿತ್ತೆ ? ಭಾವಕ್ಕೆಡೆಗೊಡದ ಲಿಂಗ, ಅದ್ವಿತೀಯ ಲಿಂಗ, ನಿರವಧಿ ಲಿಂಗ, ನಿರವಯ ಸಾವಯವೆಂಬುದಕ್ಕೆಡೆಗೊಡದ ಲಿಂಗ ಮನೆಗೊಂದು ಲಿಂಗವಾದುದು ಹೇಗೆ ? ಇದೆಂಥ ವೀರಶೈವರ ನಿಲವು, ಲಿಂಗಾಂಗ ಸಮರಸ ಜ್ಞಾನವಂತರ ನಿಲವು, ಜ್ಞಾನಾಚಾರದವರ ನಿಲವು.

ಶುದ್ಧ ಸಿದ್ಧ ಪ್ರಸಿದ್ಧವಾಗಿಹ ಮಹಾ ಪ್ರಸಾದದರಿವು ದೂರಾಯಿತೆ ? ಕುರುಹು ಇಂದ್ರಿಯಂಗಳು ಪ್ರಾಣ ಕರಣಾದಿಗಳಿಗೆ ನಿಲುಕದ ಪರತತ್ವ ಪರಾತ್ಪರದರಿವು ಪರಮ ಜ್ಞಾನ ಪರಮಾಮೃತ ಕಲ್ಪಿತದರುವಾಯಿತೆ ? ತೋರಬಾರದ ಘನ ಈ ಚರ್ಮಚಕ್ಷುವಿಗೆ ಕಂಡಿತೆ? ಹೇಳಬಾರದ ಘನ ನನಗೊಂದು ನಿನಗೊಂದು ಲಿಂಗವೆಂದು ಹೇಳಲಿಂಬಾಯಿತೆ? ತೋರಬಾರದ ಘನ ಹೇಳಲೆಂದೇನೊ? ಹೇಳಬಾರದ ಘನ ತೋರಲೆಂದೇನೊ ? ಪರ ಸಂದಾನದ ಪರಿಯಲ್ಲ, ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ.

ಲಿಂಗ ನನ್ನದೆಂಬುವವನದಲ್ಲ, ನಿನ್ನದೆಂಬುವವನದಲ್ಲ, ನಾನೆಂಬುವವನದಲ್ಲ, ನೀನೆಂಬುವನದಲ್ಲ, ಚಿದಹಮ್ಮಿನವರದಲ್ಲ ಸೋಹಂ ಎನ್ನುವವರದಲ್ಲ, ನಾಹಂ ಕೋಹಂ ಎನ್ನುವರದು ಹೇಗಾಗುವದು ? ಇದು ಕಾರಣ ಲಿಂಗ ಭಕ್ತನಾದುದಲ್ಲ, ಜಂಗಮವಾದುದಲ್ಲ, ಗುರುವಾದುದಲ್ಲ, ವಿರತಿಯಾದುದಲ್ಲ, ಏನೊಂದಾಗದ ಘನ, ಅನುಪಮ ಘನ, ಅದು ಆಚಾರವಂತರದು ಆಗದು, ಅನಾಚಾರವಂತರದು ಆಗದು, ಪಂಡಿತರದು ಆಗದು, ಪಾಮರರದು ಆಗದು, ಅಂತ್ಯವೆಂಬವರದು ಆಗದು, ಅರಿಯವೆಂಬುವರದು ಆಗದು ಇದು ವೇದವನೋದಿದವರದು ಆಗದು, ವೇದಾಂತವನೋದಿದವರದು ಆಗದು. ಆತೀತನೆಂಬುವರದು ಆಗದು, ಅನಾಗತರದು ಆಗದು, ಶೃತಿವಂತರದು ಆಗದು.

ಲಿಂಗ : ಲಿಂಗವರಿಯ ಹೋಗಿ ಲಿಂಗವಾಗಿಹರ ಲಿಂಗ. ಭಾವಕ್ಕಿಂಬುಗೊಡದವರ

ಲಿಂಗ. ಶಬ್ದಮೀಸಲುವಾಗಿಹರ ಲಿಂಗ. ಲಿಂಗವೆನ್ನದವರ ಲಿಂಗ. ಇದು ನಾಸ್ತಿಕರಿಗೂ ದೂರ. ಆಸ್ತಿಕರಿಗೂ ದೂರ. ಇವರೀರ್ವರಿಗೂ ನಿಲುಕದ ಲಿಂಗ; ಇವರ ಭಾವಕ್ಕೂ ನೆನಹಿಗೂ ತಟ್ಟದ ಮುಟ್ಟದ ಲಿಂಗ ನಿರಾಲಂಬ ಲಿಂಗ. ಅದು ನನಗೊಂದು ಲಿಂಗ, ನಿನಗೊಂದು ಲಿಂಗ ಹೇಗಾಗುವುದು ?

ಹೀಗಾಗಿ ಲಿಂಗದ ಯತಾರ್ಥ ಜ್ಞಾನವಿಲ್ಲದುದರಿಂದ ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ. ಆಧುನಿಕ ಸಮಯದಲ್ಲಿ ಭಕ್ತಿ ಆರಿಗೂ ಇಲ್ಲ ! ಇಲ್ಲವೆನ್ನಲೂ ಬಾರದ್ದಾಗಿದೆ. ಭಕ್ತಿ ಎಂದರೆ ಲಿಂಗ ತಾನು ಒಂದಾಗುವುದು. *ಮಾಡುವ, ಮಾಡಿಸಿಕೊಂಬ ಉಭಯ ಒಂದೆ, ಗುರು ಒಂದೆ, ಲಿಂಗ ಒಂದೆ, ಜಂಗಮ ಒಂದೆ, ಪ್ರಸಾದ ಒಂದೆ, ಒಂದಾದಲ್ಲಿ ಎರಡಾಗಿ ಭಕ್ತನು ನೀನೆ ಕೂಡಲ ಚನ್ನಸಂಗಮದೇವಾ,* ಇದು ಭಕ್ತಿ. ಹೋಯಿತ್ತಲ್ಲಾ ಭಕ್ತಿ ಜಲವು ಕೂಡಿ ಎಂದುದು ಲಿಂಗವಂತರ ಸ್ಥಿತಿ, ಲಿಂಗವಂತರ ಭಕ್ತಿ, ಭೇದಜ್ಞಾನಿಗಳಾಗಿ ಜಲವ ಕೂಡಿದಂತಾಗಿದೆ ಎಂದು ಪ್ರಭು ಹೇಳಿದುದು.

*ಉಳಿ ಮುಟ್ಟದ ಲಿಂಗ ಮನ ಮುಟ್ಟಬಲ್ಲುದೆ, ಗುಹೇಶ್ವರಾ:* ಬಹು ಲಿಂಗಾರ್ಚಕರು, ಇಷ್ಟಲಿಂಗವನ್ನು ಉಳಿ ಮುಟ್ಟದಲಿಂಗ, ಮನಮುಟ್ಟಬಲ್ಲುದೆ ? ಎನ್ನುವುದನು ತಿಳಿದ ಲಿಂಗಪೂಜಕರು ಸಿಕ್ಕುವುದು ವಿರಳ. ಪೂಜಾಲಿಂಗ ಉಳಿಮುಟ್ಟದ ಲಿಂಗವೆಂದು ಮನಕ್ಕೆ ವೇದ್ಯವಾಗಿದ್ದರೆ, ಮಡಿ ನೀರಿನ ಗಜಿಬಿಜಿಯಲ್ಲಿ ಸಿಲುಕಿ ತೊಳಲುವ ಬಳಲುವ ಸಂಕುಚಿತ ಶೀಲದಿಂದ ನಿವೃತ್ತರಾಗುತ್ತಿದ್ದರು. ಇದಲ್ಲದೆ ಅಂಗಭಾವ ನಷ್ಟವಾಗಿ, ನಿಷ್ಕಳಂಕ ಲಿಂಗವರಿಯುವ ಸುಜ್ಞಾನಿಗಳಾಗುತ್ತಿದ್ದರಲ್ಲದೆ ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದದ ಭಾಗ್ಯವಂತರಾಗಿ ಸರ್ವಾಂಗ ಲಿಂಗಿಗಳಾಗುತ್ತಿದ್ದರು.

ಲಿಂಗ ಉಳಿಮುಟ್ಟದ ಲಿಂಗವಾದ್ದರಿಂದ ನಿರೂಪಲಿಂಗ ನಿರುಪಮ ಲಿಂಗ, ಅಭೇದ್ಯಲಿಂಗ, ಅದಾಹ್ಯಲಿಂಗ, ಪೂರ್ಣಾತ್ ಪೂರ್ಣ ಲಿಂಗ, ಅಖಂಡಿತ ಲಿಂಗವಾಗಿರುವಲ್ಲಿ ಮನದ ಮಾಪಿಗೆ ನಿಲುಕುವದದೆಂತು ? ಅಪ್ರಮಾಣ, ಅಗಮ್ಯವಾದ್ದರಿಂದ ಮನ ಮುಟ್ಟಬಲ್ಲುದೆ ಗುಹೇಶ್ವರ ಎಂದು ಎಚ್ಚರಿಸಿದುದಲ್ಲದೆ ; ಆರಾರಿಗೂ ಹುಟ್ಟದ ಲಿಂಗವನು ಅಜಾತ ಲಿಂಗ, ಕ್ರಿಯಾ ಲಿಂಗವೆಂಬುವರು ಅಚ್ಚವ್ರತಗೇಡಿಗಳು ಎಂದು ಖಂಡಿಸಿಹನು.

**13**

**ಪೃಥ್ವಿಗೆ ಹುಟ್ಟದ ಶಿಲೆ, ಕಲ್ಲು ಕುಟಿಗಂಗೆ ಹುಟ್ಟದ ಮೂರುತಿ,**
**ಮಂತ್ರಕ್ಕೆ ಲಿಂಗವಾಯಿತ್ತಲ್ಲಾ !**
**ಈ ಮೂವರಿಗೆ ಹುಟ್ಟದ ಮಗನ ಲಿಂಗವೆಂದು ಕೈವಿಡಿವ ,**
**ಅಚ್ಚವ್ರತಗೇಡಿಗಳನೇನೆಂಬೆ ಗುಹೇಶ್ವರಾ.** ॥ 209 ॥

**ತಾತ್ಪರ್ಯ:** ಬಹುಲಿಂಗವಂತರಿಗೆ ಲಿಂಗದ ಪರಿಜ್ಞಾನವಿಲ್ಲದಂತಾಗಿದೆ.ಲಿಂಗ ರೂಪವೊ ನಿರೂಪವೊ ? ಎಂಬುದರ ರಹಸ್ಯವ ತಿಳಿದವರು ವಿರಳ. ಹೀಗಾಗಿ ವೀರಶೈವರಲ್ಲಿ ಲಿಂಗದ ಘನವ ತಿಳಿಯದಂತಾಗಿ ಲಿಂಗ ಸಕೀಲ ಸಂಯೋಗದ ವರ್ಮಸ್ಥಲವರಿತವರಾರು ? ಲಿಂಗದ ಯತಾರ್ಥಜ್ಞಾನ ಮಾಡಿಕೊಡುವ

ಶ್ರೀಗುರುವಾರು ? ಎಂಬುದು ಸಹ ತಿಳಿಯದಂತಾಗಿ, ಲಿಂಗಾರ್ಚಕರು, ಲಿಂಗ ಪೂಜಿಸಿದರೂ ಪುರಾತನರ ಲಾಭ ದೊರೆಯದಂತಾಗಿದೆ. ಕೆಲವು ಆಚಾರ್ಯರು ಲಿಂಗಯ್ಯನನ್ನು ಕೊಡಕೊಳ್ಳುವ ವ್ಯವಹಾರಕ್ಕೆ ಉಪಯೋಗಿಸಿಕೊಂಡು ಕೊಡುವವನೀಶ, ಕೊಳ್ಳುವವ ಭಕ್ತನೆನ್ನುವಷ್ಟು, ಪೂಜ್ಯ ಪೂಜ್ಯಕರೆನ್ನುವ ಸಕಾಮಿಗಳಾಗಿಹ ಭಕ್ತರೆ ಅಸಂಖ್ಯರು ಎಂದು ಹೇಳಿದರೂ ತಪ್ಪಾಗಲಾರದು.

ಲಿಂಗಯ್ಯನು ಬೇಡಿದವರಿಗೆ ಬೇಡಿದ ಇಷ್ಟಾರ್ಥವ ಪೂರೈಸುವನಾದ್ದರಿಂದ ಈತನಿಗೆ ಇಷ್ಟಲಿಂಗವೆಂಬ ನಾಮ ಬಂದಿದೆ ಎನ್ನುವಷ್ಟು ಅಲ್ಪಮತೀಯರಾಗಿಹರು. ಮೇಲಾಗಿ ಆವುದೆ ಸಮಾಜವಾಗಲಿ ವಿಷಯೋಪಭೋಗದ ಬಯಕೆಯೆ ಹೆಚ್ಚಾಗಿ ಇದರಿಂದ ಸಹಜ ಇಂದ್ರಿಯರಾಮರಾಗಿ ಆತ್ಮರಾಮನ ಬಯಕೆಯುಳ್ಳವರು ಸಿಗುವುದು ದುರ್ಲಭವಾಗಿದೆ. ಅಧಿಕಾರ ಫಲ ಪದವಿ ಪ್ರತಿಷ್ಠೆ ಐಶ್ವರ್ಯ ಭೋಗ ಇವುಗಳೆ ಮಾನವನ ಪುರುಷಾರ್ಥಗಳಾಗಿವೆ.

ಪರಮ ಪುರುಷಾರ್ಥ ಸಂಪನ್ನರಾಗಿಹ ವಿರಕ್ತರು, ಪೀಠಾಧಿಪತಿಗಳು, ಅಯ್ಯಗಳು, ಶಾಸ್ತ್ರಜ್ಞರು, ಇವರು ತಮ್ಮ ಪ್ರತಿಷ್ಠೆ ಬೆಳೆಸಿಕೊಳ್ಳಲು ಐಹಿಕ ವಿಷಯೋಪಭೋಗ ಐಶ್ವರ್ಯ ಅಧಿಕಾರ ಫಲ ಪದವಿ ಕೊಡುವ ದೇವರೆ ಆಗಿಹರು. ಅವತಾರಿಗಳೆ ಆಗಿಹರು. ಹೀಗಾಗಿ ಈ ಮಹಾಂತರುಗಳೆಲ್ಲ ಮಾನವ ಸಮಾಜವನ್ನೆ ಕುರುಡ ಸಮಾಜವನ್ನಾಗಿ ಮಾಡಿಹರು. ಶ್ರೇಷ್ಠ ರಾಜಕಾರಣಿಗಳೆಂಬುವರನ್ನು ಕೂಡ ತಮ್ಮ ಭಕ್ತರನ್ನಾಗಿ ಮಾಡಿಕೊಂಡು ಅವಿಚಾರದ ಕಗ್ಗತ್ತಲಲ್ಲಿಟ್ಟಿಹರು. ಅವರಲ್ಲಿ ನಾನಾರೆಂಬ ವಿಚಾರದ ಸುಳಿವೆ ಇಲ್ಲವಾಗಿದೆ. ಉಪಜೀವನಕ್ಕಾಗಿ ಪಶು, ಪಕ್ಷಿಗಳು ಬದುಕಿ ಬಾಳುವಂತೆ ಮಾನವನ ಬದುಕಾಗಿದೆ. ಹೀಗಾಗಿ ಮಹಾತ್ಮರ ಮಹಾನುಭವ ರೂಪಿ ಮಹದರುವು ತಿಳಿಯುವ ಭಾಗ್ಯ ಆರಿಗೂ ಬೇಡವಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಬೇಡದ ಜಂಗಮತ್ವ ಹೋಗಿ ಬೇಡುವ ಜಂಗಮತ್ವ ಬೇಕಾಗಿರುವುದು.

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿಯು ನಿನ್ನವಳಲ್ಲ, ನಿನ್ನೊಡವೆ *ಎಂಬುದು ಜ್ಞಾನರತ್ನ ಆ ರತ್ನವ ಕೆಡಗೊಡದೆ ಅಲಂಕರಿಸಿದೆಯಾದೊಡೆ ಗುಹೇಶ್ವರ ಲಿಂಗದಲ್ಲಿ ನಿನಗಿಂತ ಸಿರಿವಂತರು ಅನ್ಯರಿಲ್ಲವೆಂದು* ಬಿತ್ತರಿಸಿದ ಪ್ರಸಾದವಾಣಿಯನ್ನು ಈ ಲೋಕದವರು ಕೊಡುವ ಪ್ರತಿಷ್ಠೆಗೆ ಒಳಗಾದ ಆಚಾರ್ಯರು, ವಿರಕ್ತರು, ಭಕ್ತರಿಗೆ ಈ ಜ್ಞಾನರತ್ನವ ಕೊಟ್ಟು, ಅಧೋಮುಖವುಳ್ಳ ಮನವನ್ನು ಊರ್ಧ್ವಮನವ ಮಾಡಿ, ಲಿಂಗಮುಖದ ಭಕ್ತರಾಗಿಹರೆ ? ಭಕ್ತರು ಲಿಂಗಮುಖದವರಾಗುವುದು ಇರಲಿ, ಬಹುವಿರಕ್ತರು, ಪೀಠಾಧಿಪತಿಗಳು ಜ್ಞಾನಾರ್ಜನೆವುಳ್ಳವರಾಗದೆ ಕರ್ಮ, ಕ್ರಿಯೆ, ತಪಸ್ಸು, ತ್ಯಾಗ, ಅರ್ಚನೆ ಇತ್ಯಾದಿಗಳ ಅನುಷ್ಠಾನದ ನಿಷ್ಠೆಯುಳ್ಳವರಾದಲ್ಲಿ ಭಕ್ತರಿಗೆ ಲಿಂಗವರಿಯುವ ಭಾಗ್ಯ ಅದು ಹೇಗೆ ಸಾಧ್ಯ.

*ಭಕ್ತಿಯೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಬಸವೇಶ, ವೈರಾಗ್ಯವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಅಲ್ಲಮೇಶ, ಅನುಭಾವವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ* ನಿಮ್ಮ ಬಾಲಕೇಶ, ಕಪಿಲಸಿದ್ಧ ಮಲ್ಲೇಶ, ವ್ಯೋಮಕೇಶ, ನಾಶಪಾಶ. ಇಂತಪ್ಪ ಭಕ್ತಿ ವೈರಾಗ್ಯ ಅನುಭಾವದಿಂ ಲಿಂಗಪೂಜೆಯಾಗುವ ಜ್ಞಾನಾರ್ಜನೆ ಘನತ್ವ ಆವ ಭಕ್ತರಿಗಾದರೂ ಈ ಪ್ರತಿ

ಷ್ಠೆಗೆ ಬಲಿಯಾಗಿರುವ ಮಹಂತರು ತಿಳಿಯಪಡಿಸಿರುವರೆ ? ತಮಗಾಗಿ ತಮ್ಮ ಸ್ವರೂಪವ ತಿಳಿದಿಹರೆ ? ತಿಳಿದಿದ್ದರೂ ಅದು ಭಕ್ತರಿಗೆ ಕೊಡುವ ಜ್ಞಾನವಾಗಿದ್ದರೆ ಬಹುಭಕ್ತರು ಜ್ಞಾನಾರ್ಜನೆವುಳ್ಳವರಾಗುತ್ತಿದ್ದರು.

ಪೂಜಾಲಿಂಗವಂತರು ಪೃಥ್ವಿಗೆ ಹುಟ್ಟಿದ ಶಿಲೆ ಕಲ್ಲು ಕುಟಿಗಂಗೆ ಹುಟ್ಟಿದ ಮೂರುತಿ ಮಂತ್ರಕ್ಕೆ ಲಿಂಗವಾಯಿತ್ತು ಈ ಮೂವ್ವರಿಗೆ ಹುಟ್ಟಿದ ಮಗನ ಲಿಂಗವೆಂದು ನಂಬಿದ ಭಕ್ತರೆ ಬಹುವಾಗಿ ಸಿಕ್ಕುತ್ತಾರೆ. ಇವರಿಗೆ ಅಚ್ಚವ್ರತಗೇಡಿಗಳೆಂದು ಪ್ರಭುದೇವ ದೂಷಿಸಿಹನು. ಇದಲ್ಲದೆ ದೇವನಾರು ಎಂಬ ಪರಿಚಯವಿಲ್ಲದೆ ಪೂಜಿಸುವವರನ್ನು ಖಂಡಿಸಿದ್ದಾನೆ.

**14**

**ಕಲ್ಲ , ದೇವರೆಂದು ಪೂಜಿಸುವರು - ಆಗದು ಕಾಣಿರೊ.**
**ಅಗಡಿಗರಾದಿರಲ್ಲ !**
**ಮುಂದೆ ಹುಟ್ಟುವ ಕೂಸಿಂಗೆ**
**ಇಂದು ಮೊಲೆಯ ಕೊಡುವಂತೆ ಗುಹೇಶ್ವರಾ !** ॥ 210 ॥

**ತಾತ್ಪರ್ಯ** : ಕಲ್ಲು, ದೇವನೆಂದು ಪೂಜಿಸುವವರಿಗೆ ಪ್ರಭುದೇವ ಕಲ್ಲು ದೇವನೆಂದೂ ಆಗದು, ಅದು ಗುಡಿಯಲ್ಲಿರಲಿ, ಮಹಾಮೇರು ಮಂದಿರದಲ್ಲಿರಲಿ ಅದು ಬಾರಾ ಜ್ಯೋತಿರ್ಲಿಂಗದ ಹೆಸರಿನಲ್ಲಿ ಕರೆಯಿಸಿಕೊಳ್ಳಲಿ ಅದು ರಾಮ ರಾವಣರಿಂದ ಪ್ರತಿಷ್ಠಿತವಾಗಿರಲಿ ರಾಜ ಮಹಾರಾಜರಿಂದ ತ್ರಿಶಂಖ ಮಹಾರಾಜರಿಂದ ಪ್ರತಿಷ್ಠಿತವಾದದ್ದಿರಲಿ ಅದು ಅವಿನಾಶಿ ಪರಬೊಮ್ಮವಾಗದು. ಕೆಲವರು ದೇವನ ಬಗ್ಗೆ ಸರಿಯಾಗಿ ತಿಳಿಯದೆ ಲಿಂಗ ಬೇರೆ, ಬ್ರಹ್ಮ ಬೇರೆ, ಶಿವ ಬೇರೆ, ಶಕ್ತಿ ಬೇರೆ ಇವರುಗಳಲ್ಲಿ ದೇವತಾ ದೈತ್ಯರು ಬೇರೆಂದು ಸೀಮಿತ ಭಾವದಿಂದುಕ್ತರಾದ ಭಕ್ತರುಗಳು ಬಹು ಇದ್ದಾರೆ.

ದೇವನೊಬ್ಬ ನಾಮ ಹಲವು ಎಂಬ ಅಣ್ಣ ಬಸವಣ್ಣನವರ ವ್ಯಾಪಕ ಅನುಭವ ಬಹುಜನರಿಗೆ ತಿಳಿದಿರುವುದಿಲ್ಲ, ಇದಲ್ಲದೆ ದೇಹವೇ ದೇವಾಲಯ ಪ್ರಾಣವೆ ಲಿಂಗವಾಗಿರಲು ಬೇರೆ ದೇವಾಲಯವೇಕೆ ? ಗುಹೇಶ್ವರಾ ನೀ ಕಲ್ಲಾದರೆ ನಾನೇನಪ್ಪೆನಯ್ಯ ಎಂಬ ಪ್ರಭುವಿನ ಪ್ರಸಾದ ವಾಣಿ ತಿಳಿಯದೆ ದೇವರುಗಳಲ್ಲಿ ಕಾರ್ಯಬ್ರಹ್ಮ ಬೇರೆ, ಕಾರಣ ಬ್ರಹ್ಮ ಬೇರೆಂದು, ಕೆಲಬರು ಸಗುಣದೇವರು ನಿರ್ಗುಣ ದೇವನೆಂದು ನಾನಾ ರೀತಿಯಲ್ಲಿ ಹೃದಯವನ್ನೆ ಛಿದ್ರ ಛಿದ್ರ ಮಾಡಿ ನಿಜವಾದ ದೇವನ ಪರಿಚಯವಿಲ್ಲದಂತಾಗಿದೆ.

ಆರು ಕೋಟಿ ಬ್ರಹ್ಮರು ಮಡಿವಲ್ಲಿ, ನಾರಾಯಣಂಗೆ ಒಂದು ದಿನವಾಯಿತ್ತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು, ರುದ್ರಾವತಾರ ಹಲವಳಿದಲ್ಲಿ ನಮ್ಮ ಕೂಡಲಸಂಗಮದೇವನೇನೆಂದು ಅರಿಯನು. ಬ್ರಹ್ಮರಾಗಲಿ, ನಾರಾಯಣರಾಗಲಿ, ರುದ್ರರಾಗಲಿ ಇವರುಗಳೆಲ್ಲ ಮಡಿವವರೆ ಆಗಿರುವಲ್ಲಿ ಇವರು ದೇವರು ಹೇಗಾಗುವರು? ದೇವನು ಕಾರ್ಯ ಬ್ರಹ್ಮವು ಆಗಲಾರ, ಕಾರಣ ಬ್ರಹ್ಮವು ಆಗಲಾರ, ಏನೊಂದಾಗದ ಘನವು ದೇವನು, ಈ ದೇವನ ಬಗ್ಗೆ ಆರು ದೇವನನ್ನು ಅರಿಯ ಹೋಗಿ ತಾನೆ ದೇವನೆಂಬುದು ದಿಟವಾಗಿ ಶಬ್ದಮುಗ್ದರಾಗಿಹರೊ, ನುಡಿದು ನಿಶಬ್ದರಾಗಿಹರೊ,

ಅವರೆ ಮಾತೆಂಬುದು ಜ್ಯೋತಿರ್ಲಿಂಗವಾದವರು, ದೇವನ ಪರಿಚಯವಿದ್ದವರು, ಶರಣರು, ಶರಣೆಯರು, ಸಂತರು, ಸಾಧು ವರೇಣ್ಯರು ಬ್ರಹ್ಮವಂತ ಬ್ರಹ್ಮಜ್ಞಾನಿಗಳು, ಲಿಂಗವರಿತ ಸರ್ವಾಂಗಲಿಂಗಿಗಳು ಅನುಪಮರು. ಇವರಿಗೆ ದೇವನ ಬಗ್ಗೆ ಪರಿಚಯವಿದ್ದುದರಿಂದ ಹೊರಗಿದ್ದಿಹನೆಂದು ನಾನು ಮರೆದು ಮಾತನಾಡಿದೆ, ಅರಿಯಲೀಯದೆ ಬಂದೆನ್ನ *ಅಂತರಂಗದಲ್ಲಿಪ್ಪನು, ತೆರಹಿಲ್ಲದಭವ ನುಡಿಗೆಡೆಗೊಡನು, ಆತನ ಬಯಲಿಂಗೆ ಬೇಟೆಗೊಂಡೆನವ್ವ  ನಾನೇನ ಮಾಡುವೆನೆಲೆ ತಾಯೆ ಮರೆದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು ತನ್ನನರಿದಡೆ ಒಳ್ಳಿದನವ್ವಾ ನಮ್ಮ ಶಂಭು ಜಕ್ಕೇಶ್ವರನು.*

ದೇವನನ್ನು ಹೊರಗಿದ್ದಿಹನೆಂದು, ಗುಡಿ, ತೀರ್ಥ ಕ್ಷೇತ್ರಗಳಲ್ಲಿದ್ದವನೆಂದು ತಿಳಿದವರೆಲ್ಲ ಮರೆದು ಮಾತನಾಡಿದವರು. ಆರಿಗೂ ತಿಳಿಯಗೊಡದೆ ತನ್ನ ಅಂತರಂಗದಲ್ಲಿಪ್ಪ ದೇವ  ತೆರಹಿಲ್ಲದಭವ ನುಡಿಗೆಡೆಗೊಡನು. ಈ ಅಭವನ ನಿಲುವು ನಿರುಪಮ ನಿರವಧಿ. ಈತ ಕುರುಹಿಲ್ಲದ ಗಂಡ. ಅರಿತರೆ ಬಹು ಒಳ್ಳಿದನು ಎಂಬುದು ಬಿತ್ತರಿಸಿದುದು ನೋಡಿದಡೆ ತೆರಹಿಲ್ಲದಭವ ನುಡಿಗೆಡೆಗೊಡನು. ಇದು ತನ್ನಿಂದ ತನ್ನ ನೋಡಿದ ಮಹದರುವು. ಒಳಗಿದ್ದಾನೆಂಬೆನೆ ಹೊರಗೆಲ್ಲ ತಾನೆ ನೋಡಾ. ಹೊರಗಿದ್ದಾನೆಂಬೆನೆ ಒಳಹೊರಗೆ ಸರ್ವಾಂಗದಲ್ಲಿ ಸನ್ನಿಹಿತವಾಗಿರ್ದ. ಅಗಲಲಿಲ್ಲದ ಘನವನಗಲಿದೆನೆಂಬ ಮಾತು ಶಿವ ಶರಣರ ಮನಕ್ಕೆ ಬಹುದೆ ? ತೆರಹಿಲ್ಲದ ಘನವು ಕಲಿದೇವಯ್ಯನು ಕರಸ್ಥಳದೊಳ್ ಐದಾನೆ ಕಾಣಾ.

ಕರಸ್ಥಲದೊಳಿರುವ ದೇವನನ್ನು ಪೂಜಾಲಿಂಗವೆಂದು ತಿಳಿದು ಪೂಜಿಸುವವರಿಗೆ ಪೂಜಾಲಿಂಗವೆ ತೆರಹಿಲ್ಲದ ಘನನೆಂದು ತಿಳಿವುದು ಶಿವಶರಣರ ಮನಕ್ಕೆ ಒಪ್ಪಿದುದು. ಶ್ರೀಗುರು ಕಾರುಣ್ಯದಿಂದ ಸುಜ್ಞಾನಿಗಳು ಆದವರಿಗೆ ಕರಸ್ಥಲದೊಳಿರುವ ಇಷ್ಟಲಿಂಗ ಅವರಿಗೆ ಅನುಪಮ. ಅಖಂಡವಾಗಿಹುದು. ಇನ್ನುಳಿದವರ ದೃಷ್ಟಿಗೆ ಕಲ್ಲು ದೇವನೆಂದು ಪೂಜಿಸುವುದು ಭ್ರಮಾತ್ಮಕವು, ವಿಚಾರವಂತರಿಗೆ ನಗೆಗೀಡಾಗಬಹುದು; ಬಹು ಹಾಸ್ಯದ ವಿಷಯವಾಗಿಹುದು. ಸಾಮಾನ್ಯ ಭಾವುಕನಿಗೆ ಭಾವಕ್ಕಗಮ್ಯವಾಗಿಹ ಭರಿತ ಭಾವದವರಾಗಿ ಈಗಳೆ ತನ್ಮಯ ನಾಗು ಎಂದಂತಾಗಿದೆ. *ಕಲ್ಲು ಹಿಡಿದು ಅಲ್ಲಮನ ನೋಡುವೆವೆಂಬುವರ ಖುಲ್ಲಮನುಜರೆಂಬೆ, ಕಲ್ಲುಹಿಡಿದವರೆಲ್ಲ ಅಲ್ಲಮನಾಗಲು ಭವ ಬೀಜ ಇನ್ನೆಲ್ಲಿಯದಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ?* ಎಲ್ಲೆಲ್ಲೂ ದೇವನ ಕಂಡುದು ಅರು ಹಿರಿಯರಿಗೆ. ಅದು ಪೂಜಾಲಿಂಗ ಪೂಜಿಸುವವರಿಗೆ ನಿಲುಕದ ವಿಷಯ. ಅದು ಅಲ್ಲಮನಂಥ ಮಹಾಂತನಿಗೆ ಕಲ್ಲು ದೇವನಾಗಿದೆ. ಪರಮಜ್ಞಾನಿಗೆ ದೇವನಾದಂತೆ, ಲಿಂಗ ಪೂಜಿಸುವ ಆಚಾರವಂತರಿಗೆ ಅದು ತೆರಹಿಲ್ಲದ ಘನವಾಗಬಹುದೆ ? ಎಡೆಯಿಲ್ಲದ  ಪರಿಪೂರ್ಣವಾಗಬಹುದೆ ? ಆಗದ್ದರಿಂದ ಮುಂದೆ ಹುಟ್ಟುವ ಕೂಸಿಂಗೆ ಇಂದೆ ಮೊಲೆ ಕೊಟ್ಟಂತೆ ಎಂದು  ಹೇಳಿಹನು.

**15**

**ಉದಯ ಮುಖದಲ್ಲಿ ಪೂಜಿಸ ಹೋದರೆ,**
**ಹೃದಯ ಮುಖದಲ್ಲಿ ಕತ್ತಲೆಯಾಯಿತ್ತು,**
**ಹಾರಿ ಹೋಯಿತ್ತು ಪ್ರಾಣಲಿಂಗ, ಹರಿದು ಬಿದ್ದಿತ್ತು ಸೆಜ್ಜೆ**

ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಾ ಗುಹೇಶ್ವರಾ. ॥ 216 ॥

**ತಾತ್ಪರ್ಯ:** *ಉದಯ ಮುಖದಲ್ಲಿ ಪೂಜಿಸಹೋದರೆ ಹೃದಯ ಮುಖದಲ್ಲಿ ಕತ್ತಲೆಯಾಯಿತ್ತು:* ಪ್ರಭುದೇವ ಉದಯ ಮುಖದ ಪರಿಜ್ಞಾನಿಯಾದುದರಿಂದ ಪೂಜಾಲಿಂಗವ ಪೂಜಿಸ ಹೋದವರಿಗೆ ಎಚ್ಚರಿಸುತ್ತಿಹನು. ಓ ಲಿಂಗಯ್ಯನ ಪೂಜಿಸ ಹೋದವರೆ ? ನೀವು ಲಿಂಗಯ್ಯನ ಪೂಜಿಸ ಹೋದರೆ, ಹೃದಯ ಮುಖದಲ್ಲಿ ಕತ್ತಲೆಯಾದುದು ಕಾಣಲಿಲ್ಲವೆ ? ಉದಯ ಮುಖ, ಲಿಂಗ ಮುಖ. ಅಂದು ಇಂದು ಎಂದೆಂದು ಇದ್ದಂತಿದ್ದ ಮುಖ, ಇದು ಕಂದದ ಮುಖ, ಕುಂದದ ಮುಖ, ಇದು ಅಸ್ತವ ಕಾಣದ ಮುಖ, ನಿರಂತರ ಉದಯ ಮುಖ, ಈ ಮುಖವರಿಯಲು ತಾನು ಲಿಂಗಕ್ಕೆ ಲಿಂಗವಾಗಿ ಅರಿವುದು, ಸತ್ಯದ ಸತ್ಯವಾಗಿ ಅರಿವುದು. ಚಿತ್ತದ ಚಿತ್ ಆಗಿ ಅರಿವುದು. ಅದು ಸಚಿದ್ರೂಪವಾದರೆ ತಾನು ನಿಜ ಸಚಿದ್ರೂಪವಾಗಿ ಅರಿವುದು. ಹೀಗೆ ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದಕೊಂಡವರು ಅವರೆಂತು ಲಿಂಗವ ಪೂಜಿಸ ಹೋಗುವರು ? ಲಿಂಗವೆ ಹೆತ್ತರಿವು ಆಗಿ ತಾನೆ ನಿಜದರುವು ಆಗಿದ್ದುದು ತನ್ನಿಂದ ತನ್ನ ಕಂಡವರು ಲಿಂಗವು ಪೂಜಾಲಿಂಗವೆಂದು ತಿಳಿಯರು. ಇದು ಪೂಜೆಗೆ ಬಾರದ ಲಿಂಗವೆಂದು ಉದಯ ಮುಖವೆಂದು ತಿಳಿದವರು ಪೂಜಿಸಹೋಗಲಿಲ್ಲ, ಆರಿಗಿದು ಸಚ್ಚಿದ್ರೂಪ ಮುಖವಾಗಿ ಕಂಡಿಲ್ಲ, ಅವರು ಪೂಜಿಸ ಹೋಗಿ ಹೃದಯ ಕರಣಂಗಳ ಮುಖವಾಯಿತ್ತು ಇದು ಕಾರಣ ಹೃದಯ ಮುಖದಲ್ಲಿ ಕತ್ತಲೆಯಾಯಿತ್ತು ಎಂದು ಹೇಳಿಹರು.

*ಹಾರಿ ಹೋಯಿತ್ತು ಪ್ರಾಣಲಿಂಗ, ಹರಿದು ಬಿದ್ದಿತ್ತು ಸೆಜ್ಜೆ:* ಅದಾರ ? ಪ್ರಾಣ ಲಿಂಗ ಹಾರಿತ್ತು, ಆರ ಹೃದಯ ಮುಖ ಭ್ರಾಂತಿಯಿಂದುಕ್ತವಾಗಿದೆ ಅದುವೆ ಕರಣಂಗಳಿಂದುಕ್ತವಾಗಿ ಶೋಕ ಮೋಹ ಚಿಂತೆ ಭಯ ಸಂತಾಪದಿಂದುಕ್ತವಾಗಿದೆ. ಅಲ್ಲಿಯೆ ಕತ್ತಲೆಯಾಯಿತ್ತು ಅಲ್ಲಿ ಪ್ರಾಣಲಿಂಗ ಹಾರಿಹೋಯಿತ್ತು ಎಂದು ಹೇಳಿದುದು ಕಂಡು ಆಶ್ಚರ್ಯ. ಏಕಂದರೆ ಪ್ರಾಣ ಹಾರಿಹೋಗುವುದು ಸಹಜ, ಪ್ರಾಣದ ಪ್ರಾಣ ಅದೆಂತು ಹಾರುವುದು. ವಾಯು, ಸ್ಪಂದ ನಿಸ್ಪಂದದಿಂದುಕ್ತವಾದುದು ಸಕಲರಿಗೆ ವಿದಿತವಿದ್ದ ವಿಷಯ. ಆಕಾಶ ಹಾರುವುದೆ ? ಜಡವು ನಶ್ವರವಾಗುವುದು ಸಹಜ. ಅಜಡವು ನಶ್ವರವಾಗುವುದೆ ? ಪ್ರಾಣ ಚೇತನವಾದರೆ ಪ್ರಾಣಲಿಂಗ ಚೇತನದ ಚೈತನ್ಯವು ಅದೆಂತು ನಷ್ಟವು ? ಪ್ರಾಣ ಅರುವಾದರೆ ಪ್ರಾಣ ಲಿಂಗವು ಅರುವಿಂಗರುವು ಅದೆಂತು ಹಾರಿಹೋಯಿತು ? ಅಮೃತತ್ವವು ಸಾವುಳ್ಳದ್ದಾಯಿತೆ ? ಮರುಜವಣಿಯು ಮರಣವುಳ್ಳದ್ದಾಯಿತೆ ? ಇದು ಆಶ್ಚರ್ಯವಲ್ಲವೆ ? ನಿಜ. ಪ್ರಾಣಲಿಂಗವು ನಿಜ ಚೈತನ್ಯವಾದರೂ ಉದಯ ಮುಖ ಲಿಂಗ ಮುಖ ಅದು ನಿರಂತರ ನಿಷ್ಕಳಂಕ ಮುಖವೆಂದು ತಿಳಿಯುತ್ತಿಲ್ಲ, ಪೂಜಾಲಿಂಗವಾಗಿ ಪೂಜಿಸುವುದರಿಂದ ಹೃದಯ ಅರು ಹೃದಯವಾಗದ್ದರಿಂದ ಅಲ್ಲಿ ಅರುವಿಂಗರುವಾಗಿಹ ಪ್ರಾಣ ಲಿಂಗದ ಜ್ಞಾನವಿಲ್ಲ, ಅನುಭವವಿಲ್ಲ, ಜ್ಞಾನ ಶೂನ್ಯವಾಗಿಹ ಕಾಯದಲ್ಲಿ ನಿತ್ಯ ನಿರಂಜನವಾಗಿಹ ನಿಜ ಚೈತನ್ಯವಿದ್ದರೂ ಅದರ ಜ್ಞಾನಾನುಭವವಿಲ್ಲದ್ದರಿಂದ ಹಾರಿಹೋಯಿತ್ತು ಪ್ರಾಣ ಲಿಂಗವೆಂದು ಹೇಳಿಹರು.

*ಹರಿದು ಬಿದ್ದಿತ್ತು ಸೆಜ್ಜೆ:* ಇದಾವ ಸೆಜ್ಜೆ ? ಲಿಂಗ ಸೆಜ್ಜೆ, ಲಿಂಗ ಕಾಯ, ಇದು

ಹರಿದು ಬೀಳುವುದೆ ? ಚೈತನ್ಯ ಕಾಯ ಹರಿದು ಬೀಳಬಹುದೆ ? ಆವ ಕಾಯದಲ್ಲಿ ಚೈತನ್ಯವರಿತಿರುವುದಿಲ್ಲ ಅದು ಲಿಂಗಕಾಯವಾಗದು. ಅಲ್ಲಿ ಅಂಗಭಾವ ಘಟ್ಟಿಗೊಂಡಲ್ಲಿ ಲಿಂಗಭಾವ ಚೈತನ್ಯ ಭಾವ ಲಿಂಗ ಚಿಂತನೆ ನೆನಹು ಅಲ್ಲಿ ಇರದು. ಈ ಕಾರಣದಿಂದ ಹರಿದು ಬಿದ್ದಿತ್ತು ಸೆಜ್ಜೆ ಎಂದು ಹೇಳಿಹರು.

*ಕಟ್ಟುವ ಬಿಡುವ ಸಂಬಂಧಿಗಳ ಕಷ್ಟವ ನೋಡಾ ಗುಹೇಶ್ವರಾ:* ವೀರಶೈವರಲ್ಲಿ ಕೆಲಬರು ಪೂಜಾಲಿಂಗವ ಕಟ್ಟಿದ್ದುಂಟು, ಕೆಲಬರು ಪೂಜಾಲಿಂಗವ ಕಟ್ಟದೆ ಬಿಟ್ಟವರುಂಟು, ಕಟ್ಟಿದವರು ಪೂಜಾಲಿಂಗವ ಪೂಜಿಸಿ ಪೂಜಿಸಿ ಭಾವಿಸಿ ಭಾವಿಸಿ ಭ್ರಾಂತರಾಗಿಹರಲ್ಲದೆ ಅವರಿಗೆ ಪೂಜಿಸಿಕೊಳ್ಳುವ ಲಿಂಗಯ್ಯನ ಜ್ಞಾನವಿಲ್ಲ, ಪೂಜಿಸುವವ ತಾನಾರೆಂಬ ತನ್ನ ಜ್ಞಾನವಿಲ್ಲ, ಇತ್ತ ತಮ್ಮಂತೆ ಪೂಜಾಲಿಂಗವ ಕಟ್ಟಿಕೊಳ್ಳದವನಿಗೆ ತಮ್ಮ ಪಂಗಡದ ಹೊರಗಿನವನೆಂದು ದೂರುವರು. ಈ ಗುಂಪಿಗೆ ನಾನು ಹೊರಗಾದೆ, ಲಿಂಗವ ಕಟ್ಟಿಕೊಂಡರೆ ಒಳ್ಳೆಯದಿತ್ತು ಎನಿಸಿ ಒಳಗೆ ಮನವು ಕಳವಳಗೊಳ್ಳುವುದು. ಹಾಕಬೇಕೆಂದಲ್ಲಿ ವಿಚಾರ ಮುಖ ಒಪ್ಪದಾಗಿದೆ. ಹೀಗಾಗಿ ಇವರೀರ್ವರಿಗೆ  ಕಷ್ಟವಾಗಿದೆ. ಇತ್ತ ಲಿಂಗ ಬಿಟ್ಟವನಿಗೂ ಕಷ್ಟವಾಗಿದೆ. ಇವರೀರ್ವರ ಕಾರ್ಯ ಮನದ ಕಾರ್ಯವಾಗಿದೆ. ಕಲ್ಪನಾರಹಿತ ಲಿಂಗಜ್ಞಾನಿಯು ಕಟ್ಟಿಕೊಂಡವನಲ್ಲ, ಬಿಟ್ಟವನಲ್ಲ ಎಂದು ಹೇಳಿದುದು.

**16**

**ಹಿಡಿವ ಕೈಯ ಮೇಲೆ  ಕತ್ತಲೆಯಯ್ಯಾ,**
**ನೋಡುವ ಕಂಗಳ ಮೇಲೆ  ಕತ್ತಲೆಯಯ್ಯಾ,**
**ನೆನೆವ ಮನದ ಮೇಲೆ ಕತ್ತಲೆಯಯ್ಯಾ,**
**ಕತ್ತಲೆಯೆಂಬುದು ಇತ್ತಲೆಯಯ್ಯಾ**
**ಗುಹೇಶ್ವರನೆಂಬುದು ಅತ್ತಲೆಯಯ್ಯಾ.** ॥ 219 ॥

**ತಾತ್ಪರ್ಯ**: ಪ್ರಭುದೇವರ ಲಿಂಗಾರ್ಚನೆ ಹಿರಿಮೆಯ ರೀತಿಯೆ ಬೇರೆಯಾಗಿದೆ. ಬಹು ಲಿಂಗವಂತರ ಲಿಂಗ ಪೂಜೆ ಕ್ರಿಯೆಯಿಂದುಕ್ತವಾಗಿದೆ. ಅಂದರೆ ಮಾಡುವ ವಿಧಾನವುಳ್ಳದ್ದಾಗಿದೆ. ಈ ಘನವಂತನ ಪರಿ ಮಾಡದ ಪರಿ, ಅಕ್ರಿಯೆ ಪರಿ, ಮಾಡುವ ವಿಧಾನಕ್ಕೂ, ಮಾಡದ ವಿಧಾನಕ್ಕೂ ಮಹದಂತರವಾಗಿದೆ.

*ಮಾಡಿ, ಮಾಡಿ ಹೋದರು ಹಲಬರು, ನೋಡಿ ನೋಡಿ ಹೋದರು ಹಲಬರು, ನೀಡಿ ನೀಡಿ ಹೋದರು ಹಲಬರು, ಮಾಡದೆ ನೀಡದೆ ನೋಡದೆ ಹೋದವರಾರನು ಕಾಣೆ ಕಪಿಲಸಿದ್ಧ ಮಲ್ಲಿಕಾರ್ಜುನ* ಎಂದು ಸಿದ್ಧರಾಮ ಶಿವಯೋಗೀಶ್ವರನು ಅಕ್ರಿಯದ ಹಿರಿಮೆಯ ತೋರಿಸಿದರು. ಮಾಡುವದಾಗಲಿ, ನೋಡುವದಾಗಲಿ ನೀಡುವದಾಗಲಿ ಜೀವನ ಕಾರ್ಯ, ಆಭಾಸನ ಕಾರ್ಯ, ಮರವಿನ ಕಾರ್ಯ. ಮಾಡದುದು, ನೀಡದುದು, ನೋಡದುದು, ಅಕಲ್ಪಿತನ ಕಾರ್ಯ. ಮಹದರುವು ಅಚಿಂತ್ಯಾತ್ಮತಾನ ಅರಿವುಡೆ ತನ್ನ ನಿಜದ ನಿಲವು ಅರಿದರಿದ ಅರಿಯದರುವು ಇರುವು.

ಪ್ರಭುದೇವ, ಲಿಂಗವನ್ನು ಲಿಂಗವಂತರು ಕಂಡಂತೆ ಕಾಣಲಿಲ್ಲ, ಆತ ಕಂಡುದು

ಬೇರೆ. ಲಿಂಗ ರೂಪವಾಗಿ ಕಾಣಲಿಲ್ಲ ನಿರೂಪವಾಗಿ ಕಂಡ, ಲಿಂಗ ತನುವಾಗಿ ಕಾಣಲಿಲ್ಲ ಸ್ವಯಂ ಜ್ಯೋತಿಯಾಗಿ ಕಂಡ, ಪೂಜಾಲಿಂಗವಾಗಿ ಕಾಣಲಿಲ್ಲ, ಅಖಂಡಿತ ಲಿಂಗ ಅನುಪಮ ಲಿಂಗವಾಗಿ ಕಂಡ. ಆರು ಲಿಂಗವನ್ನು ಕುರುಹಾಗಿ ಕಂಡಿಹರು, ಅವರು ಹಿಡಿದ ಕೈಯಾಗಿಹವು, ನೋಡುವ ಕಂಗಳು ನೆನೆವ ಮನವಾಗಿದೆ, ಅವರು ಲಿಂಗವರಿಯದವರು, ಭ್ರಮಾತ್ಮರು. ಮರವುಳ್ಳವರಾದುದರಿಂದ ಅವರ ಪೂಜೆ ಕತ್ತಲಲ್ಲಿಯೆ. ನೋಡುವ ನೋಟ ಕತ್ತಲಲ್ಲಿ, ನೆನೆವ ಮನವು ಕತ್ತಲಲ್ಲಿಯೆ. ಅಂದರೆ ಭೇದಜ್ಞಾನದಲ್ಲಿಯೆ ಭ್ರಮರೂಪ ಭಾವದಲ್ಲಿಯೆ ಎಂದು ಹೇಳಿಹರು.

ಅವಲ್ಲಿ ಲಿಂಗವೆಂಬುದು ಅರುವ ಅರಿಯ ಹೇಳಿದ ಕುರುಹು ಎಂದು ಅರಿಯ ಹೋಗಿಹರು ಅವರು ಅಪ್ರಮಾಣರು. ಲಿಂಗವದು ಅಖಂಡಿತ ಅನುಪಮ, ಅಚಲಿತವಾಗಿಹದು. ಪ್ರಭುದೇವ ಲಿಂಗ ಅಕಲ್ಪಿತವಾಗಿ ಕಾಣಬೇಕಾದರೆ ತಾನು ಅಪ್ರಮಾಣನಾಗಿ ಕಂಡ, ಅಚಿಂತ್ಯನಾಗಿ ನಿಂತ. ಇದು ಕಾರಣ ಲಿಂಗಾರ್ಚಕರನ್ನು ಎಚ್ಚರಿಸಿದ. ಎಚ್ಚರದ ಎಚ್ಚರಾಗಿರಿ ನಿಜದೆಚ್ಚರವೆ ಲಿಂಗ ಕಂಡ ಚಿನ್ಹ, ಅರಿದರಿದು ನೋಡಿರಿ, ಆಗ ಘನ ಗಂಭೀರ ಲಿಂಗವಾದಲ್ಲಿ ಈ ಕರಗಳಿಂದ ಲಿಂಗ ಹಿಡಿಯಬಹುದೆ ? ನೋಡುವ ಕಂಗಳದಿಂದ ಲಿಂಗವ ನೋಡಬಹುದೆ? ನೆನೆವ ಮನದಿಂದ ಲಿಂಗವ ನೆನೆಯಬಹುದೆ ? ಆಗದು, ಏಕೆಂದರೆ *ಅರಿದಿಹೆನೆಂದರೆ ಅರುವಿಂಗಸಾಧ್ಯ, ನೆನದಿಹೆನೆಂದರೆ ನೆನಹಿಂಗಸಾಧ್ಯ, ಭಾವಿಸಿಹೆನೆಂದರೆ ಭಾವಕಸಾಧ್ಯ, ವಾಙ್ಮನಕ್ಕಗೋಚರವನರಿವ ಪರಿ ಎಂತಯ್ಯ ಗುರು ತೋರದನ್ನಕ್ಕರ? ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿಲಿಂಗ ಉದಯವಪ್ಪುದೆಂಬ ಶ್ರುತಿ ಹುಸಿಯೆ, ಕೂಡಲ ಸಂಗಮದೇವಾ ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ.* ಗುರು ಕಾರುಣ್ಯದಿಂದ, ಗುರು ಶಿಷ್ಯರ ಮಧ್ಯದಲ್ಲಿದ್ದ ಸ್ವಯಂಜ್ಯೋತಿ ಲಿಂಗ ಉದಯವಾಗುವುದೊ, ಆಗ ಗುರು ಶಿಷ್ಯರು ಒಂದಾದವರು. ಲಿಂಗ ತಾನು ಒಂದಾಗಿಹರು, ಭಕ್ತ ಜಂಗಮ ಒಂದಾಗಿಹರು ಅವರು ಅಕಲ್ಪಿತ ಲಿಂಗವಾಗಿಹರು.

ಎರಡೊಂದಾದ ಬಳಿಕ ಅರ್ಚನೆಯಿಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲವೆಂಬ ಸ್ವಾನುಭಾವ ಪ್ರಕಾಶಿಸುವಲ್ಲಿ ಇದು ನಿಜವಾದ ಲಿಂಗಾರ್ಚನೆ. ಈ ಲಿಂಗಾರ್ಚನೆ ಮಾಡುವ ಭಾಗ್ಯ, ಶರಣ ಶರಣೆಯರದಾಗಿದೆ. ಕಾರಣ, ಅವರು ಸಕಲ ಜೀವಿಗಳ ಲೇಸನೆ ಬಯಸುವ ವಿಶ್ವಕುಟುಂಬಿಗಳು. ವಿಶ್ವಾತ್ಮರು. ಲಿಂಗದಲ್ಲಿ ಉದಯವಾದ ಲಿಂಗಮಯರು. ಅವರ ದಿವ್ಯದೃಷ್ಟಿಗೆ ಲಿಂಗದ ಹೊರ್ತಾಗಿ ಅನ್ಯ ಆವುದು ಕಾಣದ್ದರಿಂದ ಅಜಾತರು ಅಯೋನಿಜರು ಅಕುಲರು. ಇವರೆ ಪವಿತ್ರಾತ್ಮರು ಶುದ್ಧಾತಿ ಶುದ್ಧರು. ಇವರ ಮಹಾಪ್ರಸಾದವ ಅರಿದರಿದು ನೋಡಿದವರು ಕೂಡ ಅಜಾತರೆ, ಅಯೋನಿಜರೆ ಎಂಬುದು ತಮ್ಮಿಂದ ತಮಗೆ ವಿದಿತವಾದಾಗ ಈ ವಿಷಮ ದೃಷ್ಟಿಯುಳ್ಳ ಜ್ಞಾನವು ಪೂಜ್ಯ, ಪೂಜಕ ಭಾವದಿಂದುಕ್ತವಾದ ಭೇದವು ಪೂಜಾಲಿಂಗದ ಪೂಜೆ. ಇವೆಲ್ಲ ಭ್ರಮೆ, ಅಜ್ಞಾನ ಎಂಬುದು ಸಹಜ ವಿದಿತವಾಗುವುದು.

ಆಗ *ಗುಹೇಶ್ವರನೆಂಬುದು* ಅತ್ತಲೆಯಯ್ಯ, ಅವಲ್ಲಿ ಗುರು ಶಿಷ್ಯರೊಂದಾಗಿಹರು ಪೂಜಿಸುವ ಭಕ್ತ, ಪೂಜಿಸಿಕೊಳ್ಳುವ ಲಿಂಗ ಒಂದಾಗಿಹರು, ಭಕ್ತ ಜಂಗಮರೊಂದಾಗಿಹರು ಅಲ್ಲಿಯೆ ಇಬ್ಬರ ಮಧ್ಯದಲ್ಲಿಹ ಸ್ವಯಂ ಜ್ಯೋತಿ ಲಿಂಗ ಉದಯವಾಗಿ ಎಲ್ಲೆಲ್ಲೂ

ಸ್ವಯಂಜ್ಯೋತಿ ಲಿಂಗವೆ ಪ್ರಜ್ವಲಿಸುವುದರಿಂದ ಎರಡಾಗಿ ಮಾಡುವ ಅರ್ಚನೆಯಿಲ್ಲ, ಅರ್ಪಿತ ವಿಲ್ಲ, ಅವಧಾನವಿಲ್ಲ, ಅವಧಾನವಿಲ್ಲದ್ದರಿಂದ ಗುಹೇಶ್ವರನೆಂಬುದು ತಾನೆ ತನ್ನತ್ತಲೆಯಾ ದುದರಿಂದ ಶಬ್ದಕ್ಕೆ ತೆರಹಿಲ್ಲವೆಂದು ಹೇಳಿಹರು.

**17**

**ಇರುಳಿನ ಸಂಗವ ಹಗಲೆಂದರಿಯರು**
**ಹಗಲಿನ ಸಂಗವನಿರುಳೆಂದರಿಯರು .**
**ವಾಯಕ್ಕೆ ನಡೆವರು, ವಾಯಕ್ಕೆ ನುಡಿವರು,**
**ವಾಯುಪ್ರಾಣಿಗಳು.**
**ಗುಹೇಶ್ವರನೆಂಬ ಅರುಹಿನ ಕುರುಹು**
**ಇನ್ನಾರಿಗೆಯೂ ಅಳವಡದು.** ॥ 222 ॥

**ತಾತ್ಪರ್ಯ**: ಇರುಳಿನ ಸಂಗವ ಹಗಲೆಂದರಿಯರು: ಓಹೋ ಇದೆಂಥ ಕತ್ತಲೆಯ ಸಂಗ, ಒಳಹೊರಗೂ ಕವಿದಿಹ ಕತ್ತಲೆ. ಇದನ್ನು ಸೂರ್ಯ ಚಂದ್ರರು ಓಡಿಸರು. ನಕ್ಷತ್ರ ಗಳಿಂದ ಕತ್ತಲೆ ಕೆಡಿಸುವುದು ಹೇಗೆ ಸಾಧ್ಯ? ಈ ಕತ್ತಲೆ ದೇವತಾ ದೈತ್ಯ ತಪಸ್ವಿಗಳಿಗೂ ಹೋಗದು. ಮನು ಮುನಿಗಳ ತಪಸ್ವಿ ತ್ಯಾಗಿಗಳ ತ್ಯಾಗಕ್ಕೂ ಹೋಗದು. ನಿಷ್ಕಾಮ ಕರ್ಮಗ ಳಿಂದಲೂ ಸಕಾಮ ಕರ್ಮಗಳಿಂದಲೂ ಹಠಯೋಗದಿಂದಲೂ ಈ ಕತ್ತಲೆ ಹೋಗದು. ಸಕಲರ ನಿವಾಸ ಕತ್ತಲಲ್ಲಿಯೆ. ಲಿಂಗಾರ್ಚಕರು ಕೂಡ ಕತ್ತಲೆಯ ಸಂಗದಲ್ಲಿದ್ದವರೆ. ಬಹು ವಿರತ ಜಂಗಮಯ್ಯ ಮೊದಲಾದವರು ಇರುಳಿನ ಸಂಗದಲ್ಲಿದ್ದವರು. ಲಿಂಗದ ಘನವರಿ ಯದವರೆಲ್ಲ ಕತ್ತಲೆಯ ಸಂಗದಲ್ಲಿದ್ದವರು. ಲಿಂಗ ಲಿಂಗ ಎಂದು ಹಲಬುವವರು ಇವರು ಕತ್ತಲೆಯಲ್ಲಿದ್ದವರು; ಇವರಿಗೆ ಹಗಲಿನ ಪರಿಚಯವಿಲ್ಲ.

ವಿಶ್ವದ ಮಾನವರು ಹಗಲು ಕತ್ತಲೆಯ ಸಂಗದಲ್ಲಿದ್ದವರು. ಇವರಿಗೆ ಹಗಲಿನ ಪರಿ ಚಯವಿಲ್ಲವೆನ್ನವುದು ಸರಿ ಎನಿಸದು. ಹೊರಗೆ ಸೂರ್ಯನ ಉದಯಾಸ್ತದಿಂದ ತೋರುವ ಹಗಲು ಕತ್ತಲೆಯ ಪರಿಚಯವಿದೆ. ಅರುವಿನ ಜನ್ಮದಲ್ಲಿ ಬಂದ ಮೇಲೆ ಒಬ್ಬ ಚಿತ್ ಸೂರ್ಯನಿರುವನು. ಅವನ ಪರಿಚಯ ಒಬ್ಬ ತತ್ತ್ವವೇತ್ತನು ಮಾತ್ರ ಸರಿಯಾಗಿ ತಿಳಿದು ಕೊಂಡಿರುವನು. ಇನ್ನುಳಿದವರಿಗೆ ಅಸಾಧ್ಯವು. ಏಕೆಂದರೆ ಹಗಲಿನ ಸಂಗ ಮಾಡಿದವರಿಗೆ ಕತ್ತಲೆಯು ಕಾಣದು. ಕತ್ತಲೆಯ ಸಂಗ ಮಾಡಿದವರು ಹಗಲಿನ ಸಂಗ ಮಾಡರು. ವಿಶ್ವ ದಲ್ಲಿ ಬಹಳಷ್ಟು ಮಾನವರು ಕತ್ತಲೆಯ ಸಂಗದಲ್ಲಿದ್ದವರು; ಅಸಂಖ್ಯರು ಎಂದರು ಅಡ್ಡಿ ಇಲ್ಲ. ಕೋಟಿಗೊಬ್ಬರು ಮಾತ್ರ ಹಗಲಿನ ಸಂಗ ಮಾಡಿದವರು ಸಿಕ್ಕುವುದು ವಿರಳ.

ಹಗಲಿನ ಸಂಗ ಮಾಡಿದವರು ಯಾರು ಗೊತ್ತೆ ? ತಾನಾರೆಂದು ತನ್ನ ತಾನರಿತ ವನು ಬ್ರಹ್ಮವೇತ್ತನು. ವಿಶ್ವವನ್ನೆ ಬ್ರಹ್ಮವಾಗಿ ಕಂಡವರು ಲಿಂಗವರಿತು ಸರ್ವಾಂಗಲಿಂಗವಾಗಿ ಹರು. ವಿಶ್ವವೆ ಲಿಂಗವಾಗಿಹ ಜ್ಞಾನ ಸ್ವರೂಪರು. ಇವರು ಹಗಲಿನ ಸಂಗದಲ್ಲಿದ್ದವರು. ಶರ ಣರು ಶರಣೆಯರು, ಸಂತರು, ಶಿವಯೋಗಿಗಳು, ಅಚ್ಚ ಪ್ರಸಾದಿಗಳು.

ಕತ್ತಲೆ ಯಾವುದು ಗೊತ್ತೆ ? ಅಜ್ಞಾನವೆಂಬುದು ಕತ್ತಲೆ. ಮಾಯೆ ಕತ್ತಲು, ಕಾಣಿ

ಸುವ ಪ್ರಪಂಚ ಕತ್ತಲು, ಸಂಚಿತ ಆಗಾಮಿ ಪ್ರಾರಬ್ಧಗಳೆಂಬಿವು ಕತ್ತಲು, ತ್ರಿವಿಧ ಕರ್ಮಗಳ ಕಲ್ಪಿಸುವ ಮನವು ಕತ್ತಲು, ಇಲ್ಲದುದ ಕಲ್ಪಿಸುವ ಮನವು ಕತ್ತಲು, ಇದ್ದುದನರಿಯದಿಹ ಮನವು ಕತ್ತಲೆ, ಒಬ್ಬ ಬ್ರಹ್ಮಜ್ಞಾನಿಯ ಬಿಟ್ಟು, ಸಕಲರ ನಿವಾಸ ಕತ್ತಲಲ್ಲಿ, ಇದು ಅತಿಗಾಢ ಕತ್ತಲು, ಒಳಹೊರಗೂ ಮುಚ್ಚಿರುವುದರಿಂದ ದೇವನನ್ನು ತಿಳಿಯಗೊಡದು, ಶ್ರೀಗುರುವನ್ನು ತಿಳಿಯಗೊಡದು, ತಾನಾರೆಂದು ತನ್ನನ್ನು ತಿಳಿಯಗೊಡದು, ಇದು ಕಾರಣ ಎತ್ತ ನೋಡಿದಡತ್ತ ಅಂಧಃಕಾರವೆ ಅಂಧಃಕಾರ.

ಈ ಕತ್ತಲೆಗೆ ಪರಿಹಾರ ? ಇದಕ್ಕೆ ಶ್ರೀಗುರು ಕಾರುಣ್ಯವೆ ಮೂಲವು. ಗುರು ಕರುಣಿಸೆ ಬಿಟ್ಟಿತ್ತು ಮರವೆ, ಗುರು ಕರುಣಿಸೆ ಬಿಟ್ಟಿತ್ತು ಮಾಯೆ, ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚ, ಕೂಡಲ ಚೆನ್ನಸಂಗಮದೇವಾ ಗುರು ಕರುಣಿಸೆ ಬಿಟ್ಟಿತ್ತು ಕರ್ಮಪಾಶ.

ಗುರುಕರುಣೆ ಅಪಾರವು. ಗುರು ತನ್ನ ನೆನೆವನ್ನಬರ ತನ್ನಂತೆ ಮಾಡಿದ. ಈ ಕೃಪೆಗೆ ಆವುದು ಸರಿ ? ಗುರುವಾದವನು ಗುರುವೆನಲಿಲ್ಲ, ಗುರುವೆಂದು ಹೇಳಿಸಿಕೊಳ್ಳದ ಅನುಪಮ ಜ್ಯೋತಿ ; ಈ ಪರಂಜ್ಯೋತಿಗೆ ಶಿಷ್ಯರು ಕಾಣುವರೆ ?

ಗುರು ಕಾರುಣ್ಯವೆ ಹಗಲು. ಗುರು ಶಿಷ್ಯರು ಕಾಣದುದೆ ಹಗಲು. ಈರ್ವರು ಅನುಪಮರಾದುದು . ಹಗಲು ಈ ಹಗಲಿನ ಸಂಗದ ಆತುರವಂತರು ಮುಮುಕ್ಷುಗಳು. ಈ ಹಗಲು ಕಾಣಲು ನಿತ್ಯಾನಿತ್ಯವಿಚಾರ ಮಾಡಲು ಒಂದನ್ನು ಬಿಟ್ಟು ಒಂದನ್ನು ಹಿಡಿದವರು ಅಭ್ಯಾಸಿಗಳು. ಬಿಟ್ಟವರಾಗದೆ ಹಿಡಿದವರಾಗದೆ ತನ್ನ ನೋಡಿದವರು ಅನುಭವಿಗಳು. ಘನಗುರು ತನ್ನಿರುವೆ ಒಂದನುವ ಮಾಡಿ ಕರುಣಿಸಿದಾಗ, ನಿರಂತರವಾಗಿಹ ಮಂಗಲಮಯ ಜ್ಯೋತಿ; ತನ್ನರವು ತನ್ನಿಂದ ತನಗೆ ಪ್ರಜ್ವಲಿಸುವ ಭಾಗ್ಯ ಲಭ್ಯವಾಗುತ್ತದೆ. ಆಗ ಹಗಲೆಂದರೆ ತಾನೆ. ಸಚ್ಚಿದಾನಂದ, ಲಿಂಗ, ಪೂರ್ಣ, ಅಖಂಡವೆಂದರೆ ತಾನೆ. ತಾನೆ ಹಗಲು ಇರುವುದರಿಂದ ಕತ್ತಲೆಯ ಕಾಣರು. ಆರು ಸಚ್ಚಿದ್ರೂಪ ಚಿಜ್ಯೋತಿ ಅಖಂಡ ಎಂಬುದು ಅರಿದು ನೋಡಿದಾಗ ತಾನು ಅದುವೆ ಆದಲ್ಲಿ ಶಬ್ದ ಮೀಸಲು ಆಗಿಹುದು. ಅವರು ಮಾತ್ರ ಹಗಲಿನ ಸಂಗ ಮಾಡಿದವರು. ಇಂತಪ್ಪ ಮಹಾಂತರು ಪ್ರಾಣ ಪ್ರಿಯರು ಹೇಗಾಗುವರು ?

ವಾಯು ಪ್ರಾಣಿಗಳು ವಾಯುವಿಗೆ ನುಡಿವರು. ವಾಯುವಿಗೆ ನಡೆವರು, ಗುಹೇಶ್ವರನೆಂಬ ಅರುವಿನ ಕುರುಹ ಆರಿಗೆಯು ಅಳವಡದು, ವಾಯುಪ್ರಾಣಿಗಳು ಇವರಾರು ? ಇವರು ಹಠಯೋಗಿಗಳು, ಪ್ರಾಣಾಯಾಮದ ಪ್ರಿಯರು, ಇವರ ನಡೆ ನುಡಿ ಪ್ರಾಣದ ಅಭ್ಯಾಸವಾಗಿದೆ. ಇವರಿಗೆ ಪೂರಕ, ರೇಚಕ, ಕುಂಬಕದ ಕಾರ್ಯವೆ ನಡೆ ನುಡಿಯಾಗಿದೆ. ಈ ಶರೀರ ಬಹು ದಿವಸ ಬಾಳಲಿ, ಬದುಕಲಿ ಎಂಬುದೆ ಇವರ ಹಂಬಲ. ಇದರಿಂದ ದೇಹಾಭಿಮಾನ, ದೇಹದ ಮಮಕಾರ ದಿನೆ ದಿನೆ ವೃದ್ಧಿಯಾಗುವುದು. ಇವರು ಸಹಸ್ರಾರು ವರ್ಷವಿದ್ದರೂ ವಾಯಕ್ಕೆ ನಡೆವರು, ವಾಯುಕ್ಕೆ ನುಡಿವರು ವಾಯು ಪ್ರಾಣಿಗಳು ಎಂದು ಹೇಳಿಹರು.

ಗುಹೇಶ್ವರನೆಂಬ ಅರುವಿನ ಕುರುಹು ಆರಿಗೆಯೂ ಅಳವಡದು: ಪ್ರಭುದೇವ ಗುಹೇಶ್ವರನೆಂಬುದು ಅರುವಿನ ಕುರುಹು. ಅದುವೆ ಕರ ಕಮಲದಲ್ಲಿ ಬೆಳಗುವ ಬೆಳಗುಳ್ಳ ಲಿಂಗ ಘನ. ಇದರ ಸಾಕ್ಷಾತ್ಕಾರ ಮಾಡಿಕೊಂಡವರು ವಿರಳ. ಆರಿಗೆ ಶ್ರೀಗುರು ಕಾರುಣ್ಯ

ವೆಂಬ ಹಸ್ತ ಮಸ್ತಕ ಸಂಯೋಗವಾಗಿದೆ. ಅವರಿಗೆ ಲಿಂಗವದು ಅರುವಿಂಗರುವಾಗಿಹ ಸ್ವಯಂ ಪ್ರಭೆಯಾಗಿದೆ. ಇದು ತಾನಾರೆಂದರಿತವರ ತನ್ನ ಪ್ರಭೆ, ಇದು ಪೂಜಾ ಲಿಂಗವಾಗಿ ಕಂಡವರಿಗೆ ಅಸಾಧ್ಯ. ಶ್ರೀಗುರು ಸ್ವಾಮಿ ಕರುಣಿಸಿದ ಲಿಂಗಯ್ಯ ಅನುಪಮ. ಮೌನದ ಮೌನ. ನಿಶಬ್ದ ಬ್ರಹ್ಮ, ಅರಿತವರಿಗೆ ಸಾಧ್ಯಅರಿಯದಿದ್ದಲ್ಲಿ ಆರಾರಿಗೂ ಅಳವಡದು, ಇದ ಲ್ಲದೆ ಅಷ್ಟಾಂಗ ಯೋಗದಲ್ಲಿ ಅಳಿಯುವ ಯೋಗ ಮಾಡಿದವರಿಗೆ ಅಸಾಧ್ಯ. ಅಳಿಯದೆ ನಿರಂತರ ಉಳಿದ ಮಂಗಲಮಯ ತತ್ವ ಅರಿತವರಿಗೆ ಸಾಧ್ಯವು.

**18**

**ಆಸನಬಂಧನರು ಸುಮ್ಮನಿರರು.**
**ಭಸ್ಮವ ಹೂಸಿ ಸ್ವರವ ಹಿಡಿವರು ಸಾಯದಿಪ್ಪರೆ ?**
**ಸತ್ಯವನೆ ಮರೆದು, ಅಸತ್ಯವನೆ ಹಿಡಿದು,**
**ಸತ್ತುಹೋದರು ಗುಹೇಶ್ವರಾ.** ॥ 224 ॥

**ತಾತ್ಪರ್ಯ**: ಸತ್ಯಾಸತ್ಯದ ತಿಳುವಳಿಕೆಗೆ ಮಹಾತ್ಮರ ಮಹಾನುಭವವೆ ಪ್ರಧಾನವಾದುದು. ಇದುವೆ ಮಾನವನಿಗೆ ಹೆದ್ದಾರಿಯಾದುದು. ಈ ಅನುಭವ ಒಂದು ಇಲ್ಲದಿದ್ದರೆ, ಮಾನವನ ನಡೆ ನುಡಿ ಕಗ್ಗತ್ತಲಲ್ಲಿಯೆ, ಭ್ರಾಂತಿಯಲ್ಲಿಯೆ ಇವನ ಅಲೆದಾಟವಾಗುತ್ತಿತ್ತು. ಮಹಾಂತರ ಕೃಪಾದೃಷ್ಟಿಯೆಂಬ ಸ್ವಾನುಭವ ಸೂರ್ಯನಂತೆ ಪ್ರಕಾಶಿಸಿದರೂ ಎಷ್ಟೊ ಸಾಧಕರು ಸಿದ್ಧರು ನೇರವಾದ ಸತ್ಯವನ್ನೆ ಮರೆತು ಅಸತ್ಯವೆ ಇವರಿಗೆ ಸತ್ಯವಾದಂತಾಗಿದೆ. ಈ ಭ್ರಾಂತಿ ಪರಿಹಾರಕ್ಕೆ ದಿವ್ಯೌಷಧವೆಂದರೆ ಉಪನಿಷತ್, ಬ್ರಹ್ಮಸೂತ್ರ, ಭಗವದ್ಗೀತೆ ಹೇಗೆ ಮಹದರಿವು ಆಗಿವೆಯೊ ಹಾಗೆ ಕನ್ನಡದಲ್ಲಿ ವಚನಸಾಹಿತ್ಯವು ಅಷ್ಟೆ ಮಹಾಜ್ಞಾನದಿಂದ ಬೆಳಗುಳ್ಳ ಘನ ತತ್ವವನ್ನೆ ಪ್ರಜ್ವಲಿಸುವವು. ಇದರಲ್ಲಿ ಕೆಲವು ಪಂಡಿತರು, ಮಹಜ್ಞಾನದಲ್ಲಿ ವಿಷಮದೃಷ್ಟಿಗಳಾಗಿ ಪ್ರಸ್ಥಾನತ್ರಯ ಬೋಧಕ್ಕೆ ಪ್ರಧಾನತ್ವ ಮಾಡುವರು. ಕೆಲವರು ವಚನ ಸಾಹಿತ್ಯವನ್ನು ಪ್ರಧಾನ ಮಾಡುವುದರಲ್ಲಿ ಸರಿಹೋಗಿ ತಮ್ಮನ್ನು ತಾವು ಮರೆಯುವ ಸಂಭವವೂ ಇದೆ. ಇದರ ಕಡೆಗೆ ನೋಡದೆ ಆ ಮಹಾತ್ಮರ ಮಹಾನುಭವದಿಂದ ತಾವಾರೆಂದರಿಯುವ ಅನುವರಿತು ಕೊಂಡರೆ ತಾನು ಸ್ವಸುಖಿಯಾಗುವಲ್ಲಿ ನಿಸ್ಸಂದೇಹ. ಪೂರ್ವದಲ್ಲಿ ಅಂದರೆ ಪ್ರಭು ಅಲ್ಲಮನಿದ್ದ ಸಮಯದಲ್ಲಿ ಆಸನ ಬಂಧರನ್ನು ನೋಡಿ ಅವರುಗಳಿಗೆ ನೀವು ಮಾಡುವ ಸಾಧನೆಯಿಂದ ಅಮರರಾಗುವಿರಾ ? ನಿಮ್ಮ ಆಸನ ಮೂಲಬಂಧ ಉಡ್ಡಿಯಾಣ ಬಂಧ, ಜಾಲಂಧರ ಬಂಧವೆಂಬ ಬಂಧತ್ರಯಗಳಿಂದ ಪ್ರಾಣ ನಿಮ್ಮ ಸ್ವಾಧೀನದಲ್ಲಿಟ್ಟುಕೊಂಡರೆ ಇದರಿಂದ ನಿಮಗೆ ಅಮರತ್ವವೆ ? ಎಂದು ಪ್ರಶ್ನಿಸಿಹರು.

ಸೃಷ್ಟಿಯೆ ಕಾಲಕರ್ಮದಿಂದುಕ್ತವಾಗಿರುವುದು, ಸೃಷ್ಟಿಯ ಒಡೆಯರುಗಳು ಕಾಲ ಕರ್ಮಾಧೀನವಾಗಿರುವಲ್ಲಿ ಇನ್ನುಳಿದವರ ಪಾಡೇನು? ಬ್ರಹ್ಮಪ್ರಳಯವಾಗುವಲ್ಲಿ ಅವನ ಸೃಷ್ಟಿಯು ಪ್ರಳಯವಾಗುವುದು. ಆಗ ಈ ಶರೀರವೆಲ್ಲಿ ಇಂದ್ರಿಯಾದಿಗಳು ಪ್ರಾಣದಿಂದಾದ ಅಭ್ಯಾಸವೆಲ್ಲಿ ? ಪ್ರಾಣವೆಲ್ಲಿ ? ಕುಂಭಕದಲ್ಲಿದ್ದ ಪ್ರಾಣವು ನಷ್ಟವಾಗುವದಿಲ್ಲವೆ ? ಓ ಹಠ

ಯೋಗಿಗಳೆ ನೀವೆ ವಿಚಾರ ಮಾಡಿರಿ, ನೀವು ಸಾಧಿಸಿದ ಸಾಧನೆ ಅದು ಸತ್ಯವೊ ಅಸತ್ಯವೊ ? ಈ ವಿಷಯ ಅರಿದು ನೋಡುವಿರಾ ? ಇದು ಕಾರಣ ಪ್ರಭುದೇವರು ''ಸತ್ಯವನೆ ಮರೆದು ಅಸತ್ಯವನೆಹಿಡಿದು ಸತ್ತುಹೋದರು ಗುಹೇಶ್ವರಾ'' ಎಂದು ಹೇಳಿ ಹರು.

ಆರು ಅಸತ್ಯವ ಹಿಡಿದಿಹರು ಅವರು ಸತ್ಯವ ಮರೆದಿಹರು. ಆರು ಸತ್ಯವ ಹಿಡಿದಿ ಹರು ಅವರು ಅಸತ್ಯವ ಮರೆತಿಹರು ಸತ್ಯವೆಂದರೆ ತ್ರಿಕಾಲ ಅಬಾಧಿತವಾದುದು. ಸತ್ಯವರಿ ಯಹೋದವರು ಅಭಾದಿತ ಘನವೇ ತನಗಿಂತ ಅನ್ಯವಾದುದು ಆವುದು ಇಲ್ಲ, ಈ ಇಲ್ಲ ವೆಂಬುದು ಇಲ್ಲವಾದಾಗ ತನ್ನಿಂದ ತನ್ನಿರುವು ಆಗುವುದು. ಆಗ ಪ್ರಭುವಿನ ಮಹಾಜ್ಞಾನ ನಮಗೆ ಯತಾರ್ಥ ದರ್ಶನವಾಗುವುದು. ಏಕೆಂದರೆ ಸತ್ಯವೆಂಬುದು ನುಡಿಗೆಡೆಗೊಡದ ಘನವಿರುವಲ್ಲಿ ಅಲ್ಲಿ ಶಬ್ದವೆ ಮೀಸಲಾಗಿರುವಲ್ಲಿ ಅದನೆಂತು ಉಸುರುವುದು, ಅದಕ್ಕಾಗಿ ಅಲ್ಲಮ ತನಗಿಂತನ್ಯವಾಗಿ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ, ಸಹಜವೂ ಇಲ್ಲ, ಅಸಹಜವೂ ಇಲ್ಲ, ನಾನು ಇಲ್ಲ, ನೀನು ಇಲ್ಲ, ಇಲ್ಲವೆಂಬುವ ತಾನಿಲ್ಲ ಗುಹೇಶ್ವರನೆಂಬುದು ತಾ ಬ ಯಲು ಎಂದು ಸಿದ್ದಿಸಿದುದು ಬಹು ಸಾಧಕರಿಗಾಗಲಿ, ಅಣಿಮಾದಿಸಿದ್ಧ ಪುರುಷರಿಗಾಗಲಿ ಇಲ್ಲ, ತಮ್ಮ ತಾವರಿತವರು ವಿರಳ. ಅರಿತವರಿಗೆ ತಾನೊಂದೆ ಸತ್ಯ, ಸತ್ಯವೆಂಬುದು ತನ್ನಿ ರುವು ತಾನೆ, ಅಂತವರ ನಿಲವು, ಲಿಂಗಾನುಭವಿಗಳ ನಿಲವು. ಅದು ಸುಖದ ಸುಖ.

**19**

**ಹುಟ್ಟಿದ ನೆಲೆಯ ತೃಷ್ಣೆ ಬಿಡದವರಿಗೆ,**
**ಉದಕ ಲಿಂಗದ ಅನುಭಾವವೇಕೊ ?**
**ಮಾತಿನ ಮಾತಿನ ಮಹಂತರು ಹಿರಿಯರು!**
**ಗುಹೇಶ್ವರನೆಂಬ ಲಿಂಗಸಾರಾಯ,**
**ತೋರದು ತೋರದು ಬಹು ಮುಖಿಗಳಿಗೆ.** ॥ 649 ॥

**ತಾತ್ಪರ್ಯ**: ಹುಟ್ಟಿದ ನೆಲೆಯ ತೃಷ್ಣೆಯ ಬಿಡದವಂಗೆ ಲಿಂಗಾನುಭವದ ಮಾತೇಕೊ ? : ಹುಟ್ಟಿದುದು ಆವುದು ? ಹುಟ್ಟದೆ ಇದ್ದುದು ಆವುದು ? ಕಲ್ಪಿತವೆಲ್ಲ ಹುಟ್ಟಿದುದು. ಕಥನಕ್ಕೆ ನಿಲುಕದ ಘನ ಆವುದು ಅದು ಹುಟ್ಟದುದು. ಅಕ್ಷರಾಕ್ಷರ ಮೀರಿದ ಘನ ಹುಟ್ಟದುದು, ಭಾವಕ್ಕಿಂಬುಕೊಡದ್ದಾವುದು ಅದು ಹುಟ್ಟದುದು. ನುಡಿಗೆಡೆಗೊಡದ ಘನವಾವುದು ಅದು ಹುಟ್ಟದುದು.

ಹುಟ್ಟಿದುದು ಕುರುಹಿನಿಂದುಕ್ತವಾದುದೆಲ್ಲವು ಹುಟ್ಟಿದುದು. ಭಾವಕ್ಕಿಂಬುಕೊಡುವು ದೆಲ್ಲವು ಹುಟ್ಟಿದುದು. ಪ್ರಕೃತಿ ಪುರುಷವೆಂಬುದೆಲ್ಲವು ಹುಟ್ಟಿದುದು, ಆವಸ್ಥಾದಿಗಳೆಲ್ಲ ಹುಟ್ಟಿ ದವುಗಳು. ಶರೀರ ಇಂದ್ರಿಯ ಪ್ರಾಣ ಮನ ಬುದ್ಧ್ಯಾದಿಗಳೆಲ್ಲ ಅಜ್ಞಾನದಿಂದ ಹುಟ್ಟಿದವು ಗಳು. ಸಾಕ್ಷಿ, ದೃಕ್ ಪ್ರತ್ಯಗಾತ್ಮ ಪರಮಾತ್ಮನೆಂಬುದೆಲ್ಲವು ಜ್ಞಾನದಿಂದ ಹುಟ್ಟಿದವುಗಳು. ಸುರರು ಅಸುರರು ಹುಟ್ಟಿದವುಗಳೆ. ದೇವಗಣ, ರುದ್ರಗಣ, ಪ್ರಮಥಗಣಾದಿಗಳೆಲ್ಲ ಹುಟ್ಟಿ ದವರೆ. ಸತ್ಯರು ನಿತ್ಯರು ಮುಕ್ತರು ಎಂಬುವರೆಲ್ಲ ಹುಟ್ಟದವರೆ. ಇವರುಗಳೆಲ್ಲ ಕಲ್ಪಿತರೆ.

ಒಬ್ಬನು ಮಾತ್ರ ಹುಟ್ಟದವನು ಅವನೇ ಅಜಾತನು. ತಾನಾರೆಂದರಿತ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಈತ ಹುಟ್ಟದಾತ. ಸಮುಪ್ರಕಾಶಮಾನವಾದ ತತ್ವವರಿತ ಘನ ಮಹಿಮನು.

ಇವರುಗಳ ಹುಟ್ಟಿದ ನೆಲೆ ಆವುದು ? ತೃಷ್ಣೆ ಆವುದು ? ನರರು ಸುರರು ಪಿಂಡವೆಂಬ ಭಾಂಡದಲ್ಲಿ ಹುಟ್ಟಿದವರು. ಅವರಿಗೆ ಪಿಂಡವೆ ನೆಲೆ. ಪಿಂಡದ ಆಸೆ ; ಪಿಂಡ ಬಹುದಿವಸ ಬಾಳಲಿ ಎಂಬುದು ಅವರ ಬಯಕೆ. ದೇವತಾಗಣ ರುದ್ರಗಣ ಪ್ರಮಥ ಗಣ ಇವರು ಬ್ರಹ್ಮಾಂಡವೆಂಬ ಭಾಂಡದಲ್ಲಿ ಹುಟ್ಟಿದವರು. ಅವರಿಗೆ ಬ್ರಹ್ಮಾಂಡದ ಪ್ರೀತಿ ಅದರದೆ ಆಸೆ, ಅದರದೆ ಬಯಕೆ. ಸತ್ಯರು ನಿತ್ಯರು ಮುಕ್ತರು ಎಂಬ ಮಹಾಮಹಿಮರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿ ಹುಟ್ಟಿದವರು. ಅವರಿಗೆ ಚಿದಹಂ ನೆಲೆಯಾಗಿದೆ. ಅದರದೆ ಹಸಿವು ಅದರದೆ ಬಾಯಾರಿಕೆ ಇವರೆಲ್ಲರುಗಳ ಭ್ರಮೆ ಸತ್ಯತ್ವಬುದ್ಧಿ ನಿರಸನವಾಗದ ವಿನಃ ಹುಟ್ಟಿದುದು ಸುಳ್ಳಾಗದು. ಕಲ್ಪಿತ ಕೆಡದು. ಭಾವರೂಪ ಭ್ರಮ ನಿರಸನವಾಗದು.

ಯಾರಿಗೆ ದೇವಲೋಕ ಮರ್ತ್ಯಲೋಕ ಅಲ್ಲಿ ವಾಸಿಸುವ ಪಿಂಡಗಳು ಜೀವರುಗಳು ತೋರುವದೆಲ್ಲವೂ ಭ್ರಮಾತ್ಮಕ, ಮಾಯಿಕ ಅಜ್ಞಾನವೆಂದು ತಿಳಿದು ಇವುಗಳಲ್ಲಿ ನಿತ್ಯಾನಿತ್ಯ ವಿವೇಕದಿಂದ ವೈರಾಗ್ಯಬಂದು ಇವುಗಳಲ್ಲಿ ಸತ್ಯತ್ವ ಬುದ್ಧಿ ನಿರಸನವಾಗಿ, ಭಾವಂಗಳೆಲ್ಲ ಭ್ರಮವಾಗಿ ಶಬ್ದಂಗಳೆಲ್ಲ ಎಂಜಲೆನಿಸಿ ನುಡಿಗೆಡೆಗೊಡದ ಘನದಿರುವೆ ತನ್ನಿರುವಾಗಿ ತಾನೆ ತಾನಾದುದು ಆಗುವುದೊ ಅದೇ ಲಿಂಗಾನುಭವವು.

ಕಲ್ಪಿತನಿಗೆ ಅಕಲ್ಪಿತದ ಮಾತೇಕೆ ? ಭಾವ ಭ್ರಮಿತಂಗೆ ನಿರ್ಭಾವದ ಮಾತೇಕೆ ? ಶಬ್ದವೆ ಮೀಸಲಾಗಿರುವ ಘನವಂತನಿಗೆ ಎಂಜಲ ಮಾತೇಕೆ ? ಇವರ ಲಿಂಗಾನುಭವವೆಂಬುದು ಮಾತಿನ ಮಾತು. ಈ ಮಹಾಂತರೆ ಹಿರಿಯರು. ಇವರುಗಳಿಗೆ ಗುಹೇಶ್ವರನ ಲಿಂಗಸಾರಾಯ ತೋರದು, ತೋರದು. ಏಕೆಂದರೆ ಇವರು ಬಹುಮುಖದವರು. ಇವರದು ಒಮ್ಮೆ ಅವಿವೇಕ ಮುಖ, ಒಮ್ಮೆ ವಿವೇಕ ಮುಖ, ಒಮ್ಮೆ ಅಹಂಕಾರಿಗಳು, ಒಮ್ಮೆ ನಿರಹಂಕಾರಿಗಳು. ಒಮ್ಮೆ ಇಂದ್ರಿಯ ಮುಖದವರು ಪ್ರಾಣ ಮುಖದವರು ಪ್ರಕೃತಿ ಮುಖದವರು ಒಮ್ಮೆ ಪುರುಷ ಮುಖದವರು. ಇದೆಲ್ಲದಕ್ಕೂ ಮನವೆ ಮುಖ್ಯವಾಗಿಹುದು. ಇವರು ತ್ಯಾಗಾಂಗ ಮುಖಿಗಳು, ಯೋಗಾಂಗ ಮುಖಿಗಳು, ಭೋಗಾಂಗ ಮುಖಿಗಳಾಗಿ ಬಹುಮುಖವಾಗಿಹರು. ಇಂಥವರಿಗೆ ಲಿಂಗಸಾರಾಯ ತೋರದು, ತೋರದು ಎಂದು ಹೇಳಿಹರು.

ಲಿಂಗ ಸಾರಾಯವೆಂಬುದು ನಿಶಬ್ದವೇದಿಗಳ ಸಾರಾಯ. ಎಂಜಲಮಾತಿನವರ ಸಾರಾಯವಲ್ಲ, ಮೌನದ ಮೌನವಾಗಿಹ ಸಾರಾಯ. ಶೃತಿಗಳಿಗಗೋಚರವಾಗಿಹ ಸಾರಾಯ. ಸುಖದ ಸುಖಿಯಾಗಿಹ ಸಾರಾಯ. ಶಬ್ದಮುಗ್ಧರು ಸವಿಯುವ ಸಾರಾಯ. ಮಾತಿನ ಮಾತಿನ ಮಹಾಂತರುಗಳು, ಇವರು ಲಿಂಗಸಾರಾಯವಂತರಲ್ಲ, ಲಿಂಗಸಾರಾಯ ಲಿಂಗವರಿತು ಲಿಂಗವಾಗಿಹ ಮಹಾಂತನ ಮಹದರುವು. ಲಿಂಗಾನುಭವಿಗಳ ಮಾತಿನ ಮಾತಿನ ಮಹಾಂತರಿಗೆ ಇದು ಸಾಧ್ಯವಾಗದ್ದರಿಂದ ಗುಹೇಶ್ವರನೆಂಬ ಲಿಂಗಸಾರಾಯ ಬಹುಮುಖಿಗಳಿಗೆ ತೋರದು ತೋರದು ಎಂದರು. ಇವರು ಕಲ್ಪಿತರು, ಕಲ್ಪಿತದರುವೆ ಇವರಿಗೆ ಪುರು

ಷಾರ್ಥವಾದ್ದರಿಂದ ಕರ್ಮವೇ ಪ್ರಧಾನ. ಪೂಜ್ಯ ಪೂಜಕ ಭಾವವುಳ್ಳ ದ್ವೈತ ಭಕ್ತಿಯೆ ಪ್ರಧಾನ. ವೇದಗಳಲ್ಲಿ ಹೇಳಿದ ಕರ್ಮಕಾಂಡ ಉಪಾಸನಾಕಾಂಡ ಜ್ಞಾನ ಕಾಂಡಗಳೆಂಬ ತ್ರಿಕಾಂಡಗಳೆ ಪ್ರಧಾನವಾದುದರಿಂದ ಇವರು ಅನುಪಮರಾಗಲಿಲ್ಲ. ತ್ರಿಕಾಂಡಗಳನ್ನೆ ಕಂಡರಲ್ಲದೆ ತನ್ನ ಕಾಣಲಿಲ್ಲ, ಕಾಣದ್ದರಿಂದ ಇವರು ಬಹುಮುಖಿಗಳು, ಆರು ತಮ್ಮನ್ನು ತಾವು ಯತಾರ್ಥ ತಿಳಿದವರೊ ಅವರು ಸಾರಾಯ ಸುಖಿಗಳು, ಇನ್ನುಳಿದವರು ಹುಟ್ಟಿದ ನೆಲೆಯ ತೃಷ್ಣೆ ಬಿಡದವರು ಎಂದು ಹೇಳಿದೆ.

**20**

**ಕರ್ಮಾಧೀನವೆಂಬ, ಕರ್ಮಿ. ಲಿಂಗಾಧೀನವೆಂಬ, ಭಕ್ತ.**
**ದೇಹ ಪ್ರಾರಾಬ್ಧವೆಂಬ, ದ್ವೈತಿ-**
**ಈ ತ್ರಿವಿಧವೆನ್ನದವರ, ನೀನೆಂಬೆ, ಗುಹೇಶ್ವರಾ.** ॥ 231 ॥

**ತಾತ್ಪರ್ಯ**: ಕರ್ಮಾಧೀನರು ಯಾರು ? ಕರ್ಮವೆ ಪುರುಷಾರ್ಥವು ಆಗಿಹ ಮತಿವಂತರು. ಇವರು ಜಡ ಮತೀಯರು. ಜಡದೇಹವೆ ತಾವೆನ್ನುವವರು. ಇವರಿಗೆ ಕರ್ಮವೆಂದರೇನು ? ಕರ್ಮ ಮಾಡುವವ ತಾನಾರು ? ಕರ್ಮ ಮಾಡುವದು ಆರಿಗಾಗಿ ಏತಕ್ಕಾಗಿ ? ಕರ್ಮ ದೇವನೆ ಎಂಬ ವಿಚಾರ ತಿಳಿಯದವರಾಗದ್ದರಿಂದ ಆ ಕರ್ಮದ ರಹಸ್ಯವನು ಅರಿಯಲಿಲ್ಲ, ಕರ್ಮ ಮಾಡುವವರಾದರು ನೀಡುವವರಾದರು, ನೋಡುವವರಾದರು. ಆರಿಗೆ ಅ ಕರ್ಮದ ರಹಸ್ಯ ಗೊತ್ತಿದೆ ಅವರು ಮಾಡಿ ಮಾಡದವರು, ನೋಡಿದವರಾದರೂ ನೋಡದವರು, ನೀಡಿ ನೀಡದವರು ಇವರು ಕರ್ಮಾಧೀನರಲ್ಲ, ಆರು ಮಾಡಿದವರು ನೀಡಿದವರು ನೋಡಿದವರು ಆಗಿಹರೊ ಅವರು ಕರ್ಮಾಧೀನವೆಂಬ ಕರ್ಮಿಗಳು ಎಂದು ಹೇಳಿಹರು.

ಕರ್ಮಾಧೀನವಂತ ಕರ್ಮಗಳನ್ನು ಅಹಂಕಾರ ಮಮಕಾರಗಳಿಂದುಕ್ತನಾಗಿ ಮಾಡುವನೊ ಇದು ಫಲ ಪದದಿಂದುಕ್ತವಾದ ಕರ್ಮ. ಇವರು ಕರ್ಮದಲ್ಲಿ ಆಸಕ್ತರು. ಇವರಿಗೆ ಕರ್ಮವೆ ದೇವರಾಗಿದೆ. ಇವರಲ್ಲಿ ನಿತ್ಯಾನಿತ್ಯ ವಿವೇಕವಿಲ್ಲ, ವೈರಾಗ್ಯವಿಲ್ಲ, ಸದ್ಗುರು ದರ್ಶನವಿಲ್ಲ, ಇವರು ಗತಿಮತಿಯುಳ್ಳವರಾದುದರಿಂದ ಕರ್ಮಾಧೀನವೆಂಬ ಕರ್ಮ ಎಂದು ಹೇಳಿಹರು.

ಲಿಂಗಾಧೀನವೆಂಬ ಭಕ್ತ: ಈ ಭಕ್ತ ಲಿಂಗವರಿಯದ ಭಕ್ತ. ಲಿಂಗಾರ್ಪಿತ ವರಿಯದ ಭಕ್ತ. ಅರ್ಪಿತ ಮಾಡುವ ಭಕ್ತ ತಾನಾರು ? ಅರ್ಪಿಸಿಕೊಳ್ಳುವ ಲಿಂಗವಾರು ಎಂಬುದು ಗುರುಮುಖದಿಂದಲಾದರೂ ತಿಳಿಯರು. ಲಿಂಗ ಘನವೆಂಬುದು ಕೂಡ ಸಾರಾಸಾರ ವಿಚಾರ ಮಾಡಿ ಭಾವಿಸಿದವರಲ್ಲ, ಮುಗ್ಧ ಭಕ್ತರು ನಿರಹಂಭಾವಿಗಳು. ನಿರ್ಮಮವಂತರು, ಲಿಂಗದಲ್ಲಿ ಮಮವಂತರು. ಇವರಿಗೆ ಲಿಂಗ ಕಾರಣವಾಗಿದೆ. ಜಗತ್ತು ಕಾರ್ಯವಾಗಿದೆ. ಲಿಂಗದ ಪ್ರೇರಣೆಯಿಂದ ಸಕಲ ಜಗದ ಕಾರ್ಯ ನಡೆದಿಹದೆಂಬ ಭಾವಿಕರು. ಲಿಂಗ ಲಿಂಗವೆಂಬ ವಾಚಾರ್ಥ ಪ್ರೇಮಿಗಳು. ಲಿಂಗವೆಂಬುದು ತ್ರಿಗುಣದಲ್ಲಿ ಪ್ರತಿಬಿಂಬಿತವಾದ ಚೇತನಕ್ಕೆ ಲಿಂಗವೆಂಬ ಭಾವಿಕರು ಉಂಟು. ಅದು ಸರ್ವಜ್ಞತ್ವ, ಅದು ಸರ್ವ ಶಕ್ತಿತ್ವ

ಸರ್ವಾಂತರ್ಯಾಮಿ. ಪರೋಕ್ಷ ಬಂಧಮೋಕ್ಷರಹಿತ ಸಕಲ ಜಗತ್ತಿನ ಉತ್ಪತ್ತಿ ಸ್ಥಿತಿ ನಾಶಗಳನ್ನು ಮಾಡುತ್ತ ವಿಕಾರವ ಹೊಂದದೆ ಆನಂದ ಸ್ವರೂಪ ಲಿಂಗವೆಂದು ತಿಳಿದವರೂ ಉಂಟು. ಲಿಂಗವು ಸಾಕ್ಷಿ ಅಸಂಗ ದೃಕ್ ಸಚ್ಚಿದಾನಂದ ನಿತ್ಯಪೂರ್ಣವೆಂದು ಭಾವಿಸಿದವರು ಉಂಟು, ಲಿಂಗವು ಜಗತ್ತಿನ ಆಧಾರವು ಆಧೇಯವು ಜಗತ್ತು ಜೀವರುಗಳು ಲಿಂಗದ ಆಧೀನವೆಂದು ತಿಳಿದವರು ಲಿಂಗಾಧೀನವೆಂಬ ಭಕ್ತನೆಂದು ಹೇಳಿದ್ದಾರೆ.

ದೇಹ ಪ್ರಾರಬ್ಧವೆಂಬದ್ವೈತಿ ಇವರು ಪುರುಷಾರ್ಥ ಜ್ಞಾನಿಗಳು. ಪುರ ಪುರುಷವೆಂಬ ಸೀಮಿತ ಜ್ಞಾನಿಗಳು. ಪುರವೆಂಬುದು ನಾಶವುಳ್ಳದ್ದು, ಪುರುಷನೆಂಬುದು ಅವಿನಾಶಿ, ಪುರ ಇಲ್ಲದುದು ಪುರುಷ ಇದ್ದವನು. ಇಪ್ಪತ್ತೈದು ತತ್ವಗಳಿಂದೊಳಗೂಡಿದ ದೇಹವೆಂಬ ಪುರ ವ್ಯಷ್ಠಿ

ಪುರ ಸಮಷ್ಠಿ ಎಂಬುದು ಬ್ರಹ್ಮಾಂಡ. ವ್ಯಷ್ಠಿಯ ಅಭಿಮಾನಿಯೆ ಜೀವ ಸಮಷ್ಠಿ ಅಭಿಮಾನಿಯೆ ಬ್ರಹ್ಮ . ಅಹಂಕಾರ ತನಗಧಿಷ್ಠಾನವಾದ ಪ್ರತ್ಯಗಾತ್ಮ ಪ್ರತಿಬಿಂಬದಿಂದ ಕೂಡಿರುವ ಕಾರಣ, ಚೇತನಾ ಚೇತನಾತ್ಮಕವಾಗಿರುವುದು. ಅದರಲ್ಲಿ ಇಷ್ಟವಾದ ಬುದ್ಧಿಯಿಂದ ಸುಖವು, ಅನಿಷ್ಠವಾದ ಬುದ್ಧಿಯಿಂದ ದುಃಖವು ಆಗುತ್ತದೆ. ಅಹಂಕಾರ ವಿಶಿಷ್ಟ ಚೇತನದಿಂದ ಕೂಡಿ ಸುಖ-ದುಃಖಗಳು ಆ ಅಹಂಕಾರಕ್ಕಿವೆ. ಇದಕ್ಕೂ ಬೇರೆಯಾಗಿರುವ ತನ್ನ ಪ್ರತ್ಯಗಾತ್ಮ ಸ್ವರೂಪ ನಿರ್ವಿಕಾರವು ಅಚಲ ಅಸಂಗ ಸ್ವರೂಪವಾದುದರಿಂದ ದೇಹವು ತನ್ನ ಪ್ರಾರಬ್ಧದಂತೆ ನಾಶವಾಗುತ್ತದೆ. ತಾನು ಮಾತ್ರ ಅವಿನಾಶಿ ಎಂದು ತಿಳಿದವನು ದೇಹವನ್ನು ಪ್ರಾರಬ್ಧಕ್ಕೆ ಬಿಟ್ಟು ತಾನು ಅಸಂಗನೆಂದು ಹೇಳುವ ಪುರುಷಾರ್ಥ ಜ್ಞಾನಿಗೆ ದೇಹ ಪ್ರಾರಬ್ಧವೆಂಬ ದ್ವೈತಿ ಎಂದು ಹೇಳಿದರು.

*ತ್ರಿವಿಧವೆನ್ನದವರ ನೀನೆಂಬೆ ಗುಹೇಶ್ವರ:* ತ್ರಿವಿಧ ಎನ್ನದವರು ಲಿಂಗವಂತ, ಲಿಂಗಮಯರು, ಅಕಲ್ಪಿತವೆ ತನ್ನ ನಿಜದಿರುವು ಆಗಿರುವಲ್ಲಿ ಕರ್ಮಾಧೀನವೆಂಬ ಕರ್ಮಿ ಇವನೊಬ್ಬ ಕಲ್ಪಿತ. ಲಿಂಗಾಧೀನವೆಂಬ ಭಕ್ತ ಇವನೊಬ್ಬ ಕಲ್ಪಿತ. ದೇಹ ಪ್ರಾರಬ್ಧವೆಂಬದ್ವೈತಿ ಇವನೊಬ್ಬ ಕಲ್ಪಿತ. ಇವರು ಕಾಂಡತ್ರಯಕ್ಕೊಳಪಟ್ಟವರು. ಕಾಯ ನಾನೆಂಬ ಕರ್ಮಿ ಒಬ್ಬನು. ಈಶಾರ್ಪಣ ಮಾಡುವ ಭಕ್ತ ಇನ್ನೊಬ್ಬನು. ಸಕಲ ಕರ್ಮಗಳಿಗೆ ಸಾಕ್ಷಿ ನಾನೆನ್ನುವ ಜ್ಞಾನಿ ಮಗದೊಬ್ಬನು. ಹೀಗೆ ಇವರು ಕಾಂಡತ್ರಯಜ್ಞಾನವುಳ್ಳವರು, ಅಖಂಡಿತ ಜ್ಞಾನದಿಂದ ದೂರಾದವರು. ನಿಜದ ಘನ ಅರಿಯದವರು, ಆರು ನಿಜವರಿತಿಹರು ಅವರು ತ್ರಿವಿಧ ಎನ್ನದವರು. ಅವರು ನಿರುಪಮರು, ಈ ಮೂವರನ್ನು ಕಾಣದವರು. ಎಲ್ಲೆಲ್ಲೂ ತನ್ನನ್ನೆ ಕಂಡವರು, ನಿಸ್ಸೀಮ ಜ್ಞಾನಿಗಳು ಆದುದರಿಂದ ಅವರಿಗೆ ಕಲ್ಪಿತವೂ ಸಹ ಅಕಲ್ಪಿತ ಘನವಾಗಿದೆ. ತೆರಹಿಲ್ಲದ ಜ್ಞಾನವಾಗಿದೆ. ಇದು ಕಾರಣ ತ್ರಿವಿಧ ಎನ್ನದವರ ನೀನೆಂಬೆ ಗುಹೇಶ್ವರಾ ಎಂದು ಹೇಳಿಹರು.

ಕೊರಳಲ್ಲಿ ಲಿಂಗ ಧರಿಸುವುದು ಏಕೆ ? ತನ್ನಂತರಂಗದೊಳಗಿರುವ ಲಿಂಗವ ತಿಳಿಯಲು ಧರಿಸುವುದು. ಧರಿಸಿದರೂ ಲಿಂಗವ ತಿಳಿಯದಾದರೆ ಸಂಸಾರ ಸಂಗ ದೂರಾಗದು. ಇದು ಕಾರಣ ಲಿಂಗವರಿತವ ನಿಸ್ಸಂಗಿ, ನಿರಾಲಂಬ, ನಿರುಪಮ ಘನಕ್ಕೆ ಘನ. ಈ ಮಹಾಂತನಿಗೆ ಕಾಯ ಪೀಠ, ಮನ ಲಿಂಗವಾಗಿದೆ. ಶರಣಂಗೆ ಕೊರಳಲ್ಲಿ ಲಿಂಗದ ಕಾಯಿ ಹಾಕುವ ಅವಶ್ಯಕತೆ ಮತ್ತೇನು ? ಎಂದು ಪ್ರಭು ಹೇಳಿಹರು.

21

**ಉದಕದಲುತ್ಪತ್ಯವಾದ ಶತಪತ್ರದಂತೆ**
**ಸಂಸಾರ ಸಂಗವ ತಾ ಹೊದ್ದದಿರಬೇಕು.**
**ಕಾಯವೇ ಪೀಠ, ಮನವೇ ಲಿಂಗವಾದಡೆ,**
**ಕೊರಳಲ್ಲಿ ನಾಗವತ್ತಿಗೆ ಏಕೊ ಶರಣಂಗೆ ? - ಗುಹೇಶ್ವರಾ.** ॥ 232 ॥

**ತಾತ್ಪರ್ಯ**: ***ಉದಕದಲ್ಲಿ ಉತ್ಪತ್ತಿಯಾದ ಶತಪತ್ರದಂತೆ ಸಂಸಾರ ಸಂಗವ ತಾ ಹೊದ್ದದಿರಬೇಕು:*** ಉದಕದಲುತ್ಪತ್ತಿಯಾದ ಶತಪತ್ರವು ಉದಕಕ್ಕೆ ಹೇಗೆ ಅಂಟದಂತಿದೆಯೋ ಹಾಗೆ ಸಂಸಾರದಲ್ಲಿದ್ದರೂ ಸಂಸಾರ ಸಂಗ ಹೊದ್ದದಿರಬೇಕು. ಸಂಸಾರ ಸಂಗವೆ ಜನನ ಮರಣಂಗಳ ಚಕ್ರವಾಗಿದೆ. ಸಂಸಾರವೆಂಬುದು ವಿಷಯದರಸ, ಇದರಿಂದ ಜೀವನು ಬಂಧನವುಳ್ಳವನು, ಆವರಣವುಳ್ಳವನು, ರಾಗದ್ವೇಷಿ, ಮಾನಾಪಮಾನಕ್ಕೊಳಪಟ್ಟವನು. ಬದ್ಧನು, ಗುಣಮಯಿಯು ಮನದ ಶುಭಾಶುಭಂಗಳು ತಾನಾಗಿಹನು. ಇಂದ್ರಿಯಂಗಳ ಶುಭಾಶುಭಕ್ಕೊಳಪಟ್ಟವನು. ಮನವೇ ಸಂಸಾರ, ಮನವೇ ಪ್ರವೃತ್ತಿ, ನಿವೃತ್ತಿ, ತ್ಯಾಗಿ, ಭೋಗಿ ಅದುವೆ ಬಂಧಮೋಕ್ಷ, ಅದುವೆ ಮನದ ನಾಲ್ಕು ವರ್ಣಾಶ್ರಮಂಗಳು. ಮನಸ್ಸಿನಿಂದ ಸಕಲದಉತ್ಪತ್ತಿ ಇದು ಕಾರಣ. ಮನವು ತಾನಾಗದಿರಬೇಕು. ಮನದ ಸಂಗ ಹೊದ್ದದಿರ ಬೇಕು, ಮನದ ಸಂಗ ಹೊದ್ದದವರು ಯಾರು ? ಪಾರಮಾರ್ಥ ದೃಷ್ಟಿಯಿಂದ ನೋಡಿದವರಿಗೆ ಮನಸ್ಸು ಇಲ್ಲ, ಅದುವೆ ಇಲ್ಲವೆಂದಲ್ಲಿ, ಅದರ ಸಂಗ ಹೊದೆಯುವದೂ ಇಲ್ಲ, ಆರು ಜ್ಞೇಯ ವಸ್ತುವನ್ನು ಯತಾರ್ಥವಾಗಿ ತಿಳಿದಿಹರು ಅವರಿಗೆ ಮನಸ್ಸು ಇಲ್ಲವಾಗಿದೆ. ಜ್ಞೇಯವೆಂದರೆ ಪರಾತ್ಪರ ವಸ್ತು. ಅಕ್ಷಾರಕ್ಷರ ಮೀರಿದ ಘನ, ಅಚಿಂತ್ಯಾತ್ಮ ಅಕಲ್ಪಿತ. ಇದು ಆರು ಇದ್ದಂತಿದ್ದ ಘನವ ತಿಳಿದಿಹರು ಅವರು ಮಾತ್ರ ಮನದ ಸಂಗ ಹೊದೆಯದವರು. ಮನವು ತನ್ನ ಪ್ರವೃತ್ತಿ, ನಿವೃತ್ತಿ ಕಾರ್ಯದಿಂದ ಬಿಡುಗಡೆಯಾಗುವುದೆ ಅಚಿಂತ್ಯಾತ್ಮನ ದರ್ಶನ. ಆಗ ಅದು ಸಂಕಲ್ಪ, ವಿಕಲ್ಪ ರೂಪಿ ಮನಸ್ಸಾಗಿ ಇರದು.

ಉದಕದಲುತ್ಪತ್ತಿಯಾದ ಶತಪತ್ರವು ಹೇಗೆ ಉದಕದಲ್ಲಿದ್ದರೂ ನಿಸ್ಸಂಗವಾಗಿಯೇ ಇರುತ್ತದೆ, ಹಾಗೆ ಮನವು ಅಚಿಂತ್ಯವುಳ್ಳದ್ದಾಗುವುಡೆ ಈ ಸಂಸಾರ ಸಂಗ ತಟ್ಟುವದಿಲ್ಲ, ಮನವು ಪ್ರವೃತ್ತಿ, ನಿವೃತ್ತಿಗಳ ಆಕರವುಳ್ಳದ್ದಾದರೂ ಅದರ ಸತ್ಯತ್ವ ಬುದ್ಧಿ ನಷ್ಟವಾಗಿ ಅಚಿಂತ್ಯ ತ್ವದಲ್ಲಿ ಲೀನವಾಗಿರುವುದು. ಅದಕ್ಕೆ ಸಹಜ ತನ್ನಯ ಇರುವು, ಅರುವು ಆಗಿಹುದರಿಂದ ಅದು ಸಂಸಾರ ಸಂಗದಲ್ಲಿದ್ದರೂ ಅದು ತಾನಾಗದು, ತನ್ನದಾಗದು, ತನ್ನ ನಿಸ್ಸಂಗದ ಹಿರಿ ಮೆಯಲ್ಲಿರುವುದು.

ಮನಸ್ಸಿಗೆ ಎರಡು ಮುಖಗಳು. ಒಂದು ಸಂಕಲ್ಪ, ಇನ್ನೊಂದು ವಿಕಲ್ಪ. ಇಲ್ಲದ್ದು ಕಲ್ಪಿಸುವುದೊಂದು ಮುಖ. ಇದ್ದುದ್ದನ್ನು ಅರಿಯದಿಹುದೊಂದು ಮುಖ. ಆವಾಗ ಸದ್ಗುರು ಕೃಪೆಯಿಂದ ಇದ್ದುದನರಿಯಹೋಗುವುದು. ಆಗ ತನ್ನ ಕಾಯದಿಂದ ನಿವೃತ್ತವಾಗಿ ಅಚಿಂತ್ಯ ವಾಗಿಹ ಘನದಲಿ ಲೀನವಾಗುವುದು. ನದಿಗಳು ಸಮುದ್ರವ ಸೇರಿ ಹೇಗೆ ಸಮುದ್ರ ರೂಪವಾಗುವುವು ಹಾಗೆ ಮನರೂಪಿ ನದಿ ತನ್ನ ಪ್ರವಾಹರೂಪವಾದ ಪ್ರವೃತ್ತಿ ನಿವೃತ್ತಿಯೆಂಬ ಉಪಕ್ರಮ ಉಪಸಂಹಾರವ ಬಿಟ್ಟು ಅಚಿಂತ್ಯದಲ್ಲಿ ಲೀನವಾಗುವುದು.

ಕಾಯವೆ ಪೀಠ, ಮನವೆ ಲಿಂಗವಾದಡೆ ಕೊರಳಲ್ಲಿ ನಾಗವತ್ತಿಗೆ ಏಕೋ ಶರಣಂಗೆ ಗುಹೇಶ್ವರಾ. ಪ್ರಭು ಸಮಯಾಚಾರದ ಹಂಗಿಗನಲ್ಲ. ಸ್ವಯಂ ಪ್ರಭೆ, ಸ್ವಯಂಜ್ಯೋತಿಯೆ ತಾನಾದ ಘನ. ಆತಂಗೆ ನಾಗವತ್ತಿಗೆಯ ಹಂಗೇಕೆ ? ಅಂದರೆ ಲಿಂಗದ ಕಾಯ ಹಂಗೇಕೆ ? ಪೂಜಾ ಲಿಂಗದ ಹಂಗೇಕೆ ? ಪ್ರಭುವಿನ ಕಾಯ ಘನ ಕಾಯ, ಕಾಯದ ಕಾಯವಾಗಿಹ ನಿರ್ವಿಕಾರ ಕಾಯ, ಅದು ಅಬಾಧಿತ ಕಾಯ, ಅರುವಿನ ಕಾಯ, ಅರು ಹೃದಯವಾದ್ದರಿಂದ ಕಾಯವೆ ಪೀಠವೆಂದು ಹೇಳಿದ್ದಾರೆ.

ಮನವೆ ಲಿಂಗ, ಪ್ರಭುವಿನ ಮನ ಅವರ್ಣೀಯ ಮನ. ಕೇವಲ ಜ್ಯೋತಿ ಸ್ವಯಂಜ್ಯೋತಿಯಾದ್ದರಿಂದ ಪೂರ್ವಾಶ್ರಯಕ್ಕಿಂಬಿಲ್ಲ, ಅರಿತೆ ಅರಿಯನೆಂಬುದಿಲ್ಲದ ನಿರ್ಭಾವ ಮನ , ನಿಷ್ಪತ್ತಿಮನ. ಅಚಿಂತ್ಯವನೆಲೆಗೊಂಡ ಮನ ಅದು ಸುಖದ ಸುಖಿಯಾಗಿಹ ಮನ ವಾದುದರಿಂದ ಪೂಜಾಲಿಂಗದ ಅವಶ್ಯಕತೆಯೇಕೆ ? ಇದು ಕಾರಣ ಕೊರಳಲ್ಲಿ ಶರಣಂಗೆ ಲಿಂಗದ ಕಾಯಿ ಏಕೆ ? ಎಂಬ ಪ್ರಶ್ನೆ ಪ್ರಭುವಿನದು.

ಬಹು ಲಿಂಗವಂತರು, ಪೂಜಾಲಿಂಗಪ್ರೇಮಿಗಳು ಲಿಂಗವರಿಯದೆ ತಮ್ಮ ತಮ್ಮ ಭಾವಕ್ಕೆ ಬಂದಂತೆ ಅದನ್ನು ಧರಿಸಿಕೊಂಡಿಹರು. ನಾನು ಅದನ್ನು ಭಾವದಿಂದ ಪೂಜಿಸ ಹೋಗಿ ಅದು ಪೂಜಿಸಿಕೊಳ್ಳುವ ಲಿಂಗವಾಗಲಿಲ್ಲ, ಪೂಜ್ಯ ಪೂಜ್ಯಕ ಭಾವಕ್ಕೆ ಮೀರಿ ಬೆಳಗುಳ್ಳ ಘನವಾದುದರಿಂದ ಎನ್ನ ಮನದಲ್ಲಿ ಸಿಲುಕಿತ್ತು ಎಂದು ಹೇಳಿಹರು.

**22**

**ತಮ್ಮ ತಮ್ಮ ಭಾವಕ್ಕೆ , ಉಡಿಯಲ್ಲಿ ಕಟ್ಟಿಕೊಂಡರು.**
**ತಮ್ಮ ತಮ್ಮ ಭಾವಕ್ಕೆ , ಕೊರಳಲ್ಲಿ ಕಟ್ಟಿಕೊಂಡರು,**
**ನಾನೆನ್ನ ಭಾವಕ್ಕೆ ಪೂಜಿಸ ಹೋದಡೆ,**
**ಕೈತಪ್ಪಿ ಮನದಲ್ಲಿ ಸಿಲುಕಿತ್ತೆನ್ನ ಲಿಂಗ.**
**ಸಾಧಕನಲ್ಲ, ಭೇದಕನಲ್ಲ - ಗುಹೇಶ್ವರಲ್ಲಯ್ಯ ತಾನೆ ಬಲ್ಲ .** ॥ 233 ॥

**ತಾತ್ಪರ್ಯ:** ಬಹುಲಿಂಗಾರ್ಚಕರು ಭಾವಿಕರು ಮುಗ್ಧರು. ಲಿಂಗವರಿಯದವರು ತಮ್ಮ ತಮ್ಮ ಇಷ್ಟದಂತೆ ಒಬ್ಬನು ಪೂಜಾಲಿಂಗವನ್ನು ಬಗಲಲ್ಲಿ, ಒಬ್ಬನು ಟೊಂಕದಲ್ಲಿ, ಮತ್ತೊಬ್ಬನಿಗೆ ಕೊರಳಲ್ಲಿ ಎದೆಯ ಮೇಲೆ ರಟ್ಟೆಗೆ ಹೇಗೆ ಹೇಗೆ ತಮ್ಮಗಳ ಭಾವಕ್ಕೆ ಪ್ರಿಯ ವಾಗುವುದೋ ಹಾಗೆ ಧರಿಸಿಕೊಂಡಿಹರು. ಇವರು ಇಷ್ಟಲಿಂಗ ಅಖಂಡಲಿಂಗವೆಂದು ಧರಿಸಿದರೂ ಅದು ಪೂಜಾಲಿಂಗವಾಗಿದೆ. ಲಿಂಗ(ರೂಪ) ಕುರುಹುಳ್ಳದ್ದಾಗಿದೆ. ಆಚಾರ ಮುಖ್ಯ ಹೇತುವಾಗಿಹುದು. ಲಿಂಗದ ತನು ಪ್ರತ್ಯಕ್ಷ ಕಂಡರು ಅದರ ನಿಜಸ್ವರೂಪ ತಿಳಿಯದಾದುದರಿಂದ ಲಿಂಗವು ಪೂಜ್ಯವಾಗಿದೆ. ತಾವು ಪೂಜಕರಾಗಿ ಪೂಜಾ ವಿಧಾನದಲ್ಲಿ ನಿಪುಣರಾಗಿ ಶೀಲವಂತರೆಂದೆನಿಸಿದರು. ಇವರುಗಳ ಶೀಲ ಮೀಸಲ ನೀರು, ಮೀಸಲ ಪ್ರಸಾದ, ಮೀಸಲು ಮೀಸಲು ಎಂದು ಆರನ್ನು ಮುಟ್ಟಿಸಿಕೊಳ್ಳದಿಹುದೆ ಇವರ ಶ್ರೇಷ್ಠ ಆಚಾರವಾಯಿತ್ತು.

ಪ್ರಭುದೇವ ನಾನೆನ್ನ ಭಾವಕ್ಕೆ ಪೂಜಿಸಹೋದಡೆ ಕೈತಪ್ಪಿ ಮನದಲ್ಲಿ

ಸಿಲುಕಿತ್ತೆನ್ನಲಿಂಗವೆಂದು ಬಿತ್ತರಿಸಿದುದು ನೋಡಿದಡೆ ಲಿಂಗಾರ್ಚಕರ ಭಾವ ಭಾವವಾಗಲಿಲ್ಲ. ಆ ಮಹಾಂತನ ಭಾವ ಭಾವಕ್ಕೆಡೆಗೊಡದ ಭಾವ ನಿರ್ಭಾವ. ಶಬ್ದಮೀಸಲವಾಗಿಹ ನಿಜಧಾಮ. ಲಿಂಗವು ಕುರುಹು ಆಗಲಿಲ್ಲ. ಪೂಜಾಲಿಂಗವಾಗಲಿಲ್ಲ. ನಾಮ ನಿರ್ನಾಮವಾಯಿತ್ತು. ಭಾವಕ್ಕಗಮ್ಯವಾಗಿಹ ಸ್ವಯ ಲಿಂಗ ಪ್ರಜ್ವಲಿಸಿ ಎನ್ನ ಮನದಲ್ಲಿ ಸಿಲುಕಿತ್ತೆನ್ನಲಿಂಗವೆಂದಿಹನು.

ಪ್ರಭುವಿನ ಪೂಜೆಗೂ ಲಿಂಗಾರ್ಚಕರ ಪೂಜೆಗೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸ. ಲಿಂಗವಂತರ ಲಿಂಗ, ಪೂಜಾ ವಿಧಾನದಿಂದುಕ್ತವಾದುದು. ಇದಲ್ಲದೆ ಪೂಜ್ಯ ಪೂಜಕ ಭಾವದಿಂದುಕ್ತವಾದುದು ಮರವುಳ್ಳದು. ಇತ್ತ ಲಿಂಗವನ್ನು ಅರಿಯದು ಇತ್ತ ಪೂಜಕನಾದ ತನ್ನನ್ನು ತಿಳಿಯದು, ಇದು ಲಿಂಗವರಿಯದ ಪರಿ ಅವರದು. ಭಕ್ತಿಯೆ ಲಿಂಗ ಪೂಜೆಯಾದ ಪೂಜೆ. ಲಿಂಗ ತಾನು ಒಂದಾದ ಪೂಜೆ. ವೈರಾಗ್ಯವೆ ಲಿಂಗಪೂಜೆಯಾದ ಪೂಜೆ, ವೈರಾಗ್ಯ ಲಿಂಗ ತಾನು ಒಂದಾದ ಪೂಜೆ. ಜ್ಞಾನಕ್ರಿಯೆಯೆ ಲಿಂಗ ಪೂಜೆಯಾದ ಪೂಜೆ. ಜ್ಞಾನಕ್ರಿಯೆ ಲಿಂಗ ತಾನು ಒಂದಾದ ಪೂಜೆ. ಅನುಭಾವವೆ ಲಿಂಗ ಪೂಜೆಯಾದ ಪೂಜೆ. ಅನುಭಾವ ಲಿಂಗ ತಾನು ಒಂದಾದ ಪೂಜೆ ಮಹಾಂತರದು.

ಪೂಜಾ ವಿಧಾನದಿಂದುಕ್ತವಾದ ಷೋಡಷ ಪೂಜೆ ಎತ್ತ, ಪೂಜ್ಯ ಪೂಜಕ ಭಾವವೆ ಪುಸಿಯಾಗಿ ಭಾವಕ್ಕೆಡೆಗೊಡದ ನಿರ್ಭಾವದ ನಿಬ್ಬೆರಗಿನಲ್ಲಿ ನಿಂತ ನಿಜೈಕ್ಯವೆತ್ತ ? ಎತ್ತಣದಿಂದೆತ್ತ, ವೈರಾಗ್ಯವೆ ಪೂಜೆಯಾದ ಲಿಂಗ ಪೂಜೆ ಎತ್ತ, ಮಡಿನೀರು ಭಸ್ಮ ಧೂಪ ದೀಪ ನೈವೇದ್ಯ ಮಂತ್ರಾದಿಗಳಿಂದುಕ್ತವಾದ ತೋರಿಕೆಯ ಪೂಜೆ ಎತ್ತ ? ಬುದ್ಧಿಗತವುಳ್ಳ ಪೂಜೆ ಎತ್ತ. ಬುದ್ಧಿಯೆ ಭಸ್ಮವಾಗಿ ಸರ್ವಾಂಗ ಲಿಂಗಮಯವಾದುದೆತ್ತ ? ಕ್ರಿಯೆ ಎತ್ತ, ಅಕ್ರಿಯೆ ಎತ್ತ, ಮರುವಿನ ಅರುವಿನಿಂದುಕ್ತವಾದುದೆತ್ತ, ಅರುವಿಂಗರುವಾದುದೆತ್ತ, ಧ್ಯಾನವೆತ್ತ, ಧ್ಯಾನಾತೀತವೆತ್ತ ? ತನು, ಮನ, ಭಾವದಿಂದುಕ್ತವಾದುದೆತ್ತ ತನುನಷ್ಟ, ಮನ ನಷ್ಟ, ನೆನಹು ನಷ್ಟ, ಭಾವನಷ್ಟ, ಜ್ಞಾನ ನಷ್ಟವಾದುದೆತ್ತ. ಆಚಾರವೆತ್ತ, ಅನಾಚಾರವೆತ್ತ, ಅಂಗವಕಂಡುದೆತ್ತ, ಲಿಂಗವ ಕಂಡುದೆತ್ತ, ಭವಕಂಡುದೆತ್ತ, ಅಭವನಕಂಡುದೆತ್ತ, ಲಿಂಗಾನುಷ್ಠಾನವೆತ್ತ, ಲಿಂಗ ತಾನಾದುದೆತ್ತ, ಮರಣವೆತ್ತ, ಮರುಜವಣಿ ಎತ್ತ, ಚಿಂತನವೆತ್ತ, ಅಚಿಂತ್ಯವೆತ್ತ, ಬರಹೋಗುವ ಸುಖವೆತ್ತ, ನಿರಂತರ ಸುಖದ ಸುಖವೆತ್ತ ಇದು ಕಾರಣ ನಾನೆನ್ನ ಭಾವಕ್ಕೆ ಪೂಜಿಸ ಹೋದಡೆ ಕೈತಪ್ಪಿ ಮನದಲ್ಲಿ ಸಿಲುಕಿತೆನ್ನಲಿಂಗವೆಂದುದು.

ಸಾಧಕನಲ್ಲ ಭೇದಕನಲ್ಲ ಗುಹೇಶ್ವರನಲ್ಲಯ್ಯ ತಾನೆ ಬಲ್ಲ : ಪ್ರಭು ಗುಹೇಶ್ವರನರಿತ ಅಲ್ಲಯ್ಯ. ಗುಹೇಶ್ವರನೆಂದರೆ ಗುಹೆಯು. ಶಬ್ದಮುಗ್ಧ ಗುಹೆಯಲ್ಲಿರುವ ಈಶ್ವರನು ಶಬ್ದಮುಗ್ಧ. ಗುಹೇಶ್ವರನ ಅರಿಯಹೋದ ಅಲ್ಲಯ್ಯ ಶಬ್ದಮುಗ್ಧ ನಿಶಬ್ದವೇದಿ ಸಂಪನ್ನ ಅಲ್ಲಯ್ಯ. ಈ ಮಹಾಂತನ ಮಹಾನುಭವ ನುಡಿದು ಹೇಳುವದದೆಂತು ? ನಡೆದು ತೋರಿಸುವದದೆಂತು ? ಕಲ್ಪಿತನಾಗಿದ್ದಲ್ಲಿ ನುಡಿದವನಾಗುತ್ತಿದ್ದ ನಡೆದು ತೋರಿಸುವವನಾಗುತ್ತಿದ್ದ ಬಹು ಸಾಧಕರುಂಟು, ಅಭ್ಯಾಸಿಗಳು ಉಂಟು, ಅನುಭವಿಗಳು ಉಂಟು, ಇವರು ಲಿಂಗವರಿಯದವರು. ಅಕಲ್ಪಿತ ಘನವನವರೇನು ಬಲ್ಲರು ? ಅಚಿಂತ್ಯವ ಚಿಂತಿಸಬಲ್ಲವರಾರೊ ಅವರು ಜೀವರು. ತಾ ಜೀವನೆಂದು ಮಾಡುವ ಭಾವವುಳ್ಳವರಿಗೆ ನಿರ್ಭಾವದ ರಹಸ್ಯವ ಅವರೇನು ಬಲ್ಲರು. ಕೂಟಸ್ಥನೆ ತಾನಾದ ಘನಮಹಿಮ, ಆಕಾಶದ ಉದ್ದ ಅಳತೆ ಅದಾರು

ಬಲ್ಲರು ? ಸಾಧಕನಾಗದಿಹ ಘನ ಭೇದಕನಾಗದಿಹ ಘನ ಆತ ಗುಹೇಶ್ವರ ಅಲ್ಲಯ್ಯ ಪ್ರಾಣಲಿಂಗಿಯಾಗಿಹ ಪ್ರಭು. ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿಯಾಗಿಹ ಘನ ಅಲ್ಲಯ್ಯ ತಾನೆ ಬಲ್ಲ. ಕೆಲವರು ಪ್ರಾಣಕ್ಕೆ ಲಿಂಗವೆಂದು ತಿಳಿದವರುಂಟು ಅವರಿಗೆ ಪ್ರಾಣ ಲಿಂಗವಾಗದು, ಲಿಂಗ ಪ್ರಾಣವಾಗದು ಗುಹೇಶ್ವರನೆನಲಿಲ್ಲದ ಅಲ್ಲಯ್ಯ.

**23**

**ಪ್ರಾಣ ಲಿಂಗವೆಂಬ ಶಬ್ದಕ್ಕೆ ನಾಚಿತ್ತು ಮನ ನಾಚಿತ್ತು.**
**ಪ್ರಾಣ ಹೋದರೆ ಕಾಯ ಬಿದ್ದಿತ್ತು ,**
**ಲಿಂಗ ಒಂದೆಸೆಯಾದಡೆ ಮನ ನಾಚಿತ್ತು.**
**ಗುಹೇಶ್ವರನೆನಲಿಲ್ಲದ ಘನವು.** ॥ 236 ॥

**ತಾತ್ಪರ್ಯ**: ಕೆಲಬರು ಪ್ರಾಣ ಲಿಂಗವೆಂದೆನ್ನುವರು, ಪ್ರಾಣಕ್ಕೆ ಲಿಂಗವೆನ್ನುವವರು ಜಡಮತೀಯರು, ಇದು ಅರುಸ್ವರೂಪರಾಗಿ ಹೀಗನ್ನುವದು ನಾಚಿಕೆಯ ಮಾತು. ಜಡವು ಚೈತನ್ಯವಾಗದು ಎಂಬರಿವು ಗುರು ಕಾರುಣ್ಯವಂತರಿಗೆ ಸಹಜವು, ಬಹು ಲಿಂಗವಂತರಿಗೆ ಗುರುಗಳು ಆರು ? ಲಿಂಗವೆಂದರೇನು ಜಂಗಮವೆಂದರೇನು ಎಂಬ ಪರಿಜ್ಞಾನವಿಲ್ಲದ ಭಾವಿಕರು ತಮ್ಮ ತಮ್ಮ ಭಾವಕ್ಕೆ ಬಂದಂತೆ ಭಾವಿಸಿಹರು ಅವರಿಗೆ ನಿಜ ಜ್ಞಾನವಿಲ್ಲವಾಗಿದೆ.

ಭಾವಕ್ಕಗಮ್ಯವಾಗಿಹ ಗುರು ಲಿಂಗ ಜಂಗಮ ಭಾವಕ್ಕೊಳಪಡುವುದೆಂತು ? ಕಾಣ ಬಾರದ ಘನವೆಂಬುದು ಗುರು ಲಿಂಗ ಜಂಗಮವು. ಇದ್ದುದೊಂದೆ, ತ್ರಿವಿಧವಾದ ಘನ ವಾರು ಬಲ್ಲರು ? ತ್ರಿವಿಧ ಒಂದಾದುದ ಘನವ ಅದಾರು ಬಲ್ಲರು ? ಈ ಚಿನ್ಮಯವು ಪ್ರಾಣವಾಗಬಹುದೆ ? ಗುಹೇಶ್ವರನೆನಲಿಲ್ಲ ಘನವೆ ತ್ರಿವಿಧವಾಗಿಹುದು. ಅದುವೆ ಮೂರೊಂದಾಗಿಹುದು. ಇಂತಪ್ಪ ಘನದಿರುವುಳ್ಳ ಪ್ರಭು, ಪ್ರಾಣ, ಲಿಂಗವೆಂಬ ಶಬ್ದಕ್ಕೆ ನಾಚಿತ್ತು, ಇದಲ್ಲದೆ ಮನವು ನಾಚಿತ್ತು ಎಂದು ಬಿತ್ತರಿಸಿದ ಪ್ರಸಾದ ವಾಣಿಯು ಅದೆಷ್ಟು ಲಿಂಗವಂತರಿಗೆ ತಿಳಿದಿರಬಹುದು. ಪ್ರಾಣವೆಂಬುದು ವಾಯು, ಇದು ಲಿಂಗವಾಗದು.

ಪ್ರಾಣ ವಾಯು ಜಠರಾಗ್ನಿಯ ಸಂಯೋಗದಿಂದ ಉಂಡ ಅನ್ನವನ್ನು ಜೀರ್ಣಮಾಡುವ ಕ್ರಿಯೆಯುಳ್ಳುದು. ಮತ್ತು ಈ ದೇಹವನ್ನು ಇತ್ತ ಅತ್ತ ತಿರುಗಾಡಿಸುತ್ತದೆ. ಇದಲ್ಲದೆ ಈ ದೇಹವ ಹೊತ್ತುಕೊಂಡು ತಿರುಗುತ್ತದೆ. ಇದನ್ನೆ ಪ್ರಾಣಾಯಾಮ ಅಭ್ಯಾಸದಿಂದ ಹಠ ಯೋಗಿಗಳು ಕೇವಲ ಕುಂಭಕ ಸಾಧಿಸಿ ಸಹಸ್ರಾರು ವರ್ಷಗಳವರೆಗೂ ಶರೀರ ಬದುಕಿರಲು ಪ್ರಾಣಲಿಂಗಿಗಳೆಂದು ಹೇಳುವ ಪರಿಪಾಠವಾಗಿದೆ. ಇದಲ್ಲದೆ ಅಪಾನ ವಾಯುವಾಗಲಿ. ವ್ಯಾನ, ಉದಾನ, ಸಮಾನ ಇವು ಪಂಚ ಪ್ರಾಣಂಗಳು. ಶರೀರದಲ್ಲಿ ಒಂದೊಂದು ಕ್ರಿಯೆಯಿಂದುಕ್ತವಾದುದರಿಂದ ಒಂದೊಂದು ಹೆಸರು ಪಡೆದಿವೆ.

ಊಟ ಮಾಡಿದ ಅನ್ನ ನೀರುಗಳನ್ನು ಕೆಳಗೆ ತೆಗೆದುಕೊಂಡು ಹೋಗಿ ಮಲಮೂತ್ರಗಳನ್ನು ವಿಸರ್ಜನೆ ಮಾಡುವುದು, ಮೈಯಿ ನೋಯಿಸುವುದು ಇದು ಅಪಾನ ವಾಯುವಿನ ಕಾರ್ಯವಾಗಿರುವುದು. ಊಟ ಮಾಡಿದ ಅನ್ನ ನೀರುಗಳು ಜಠರಾಗ್ನಿಯಿಂದ ಪಾಕ ವಾದ ನಂತರ ಬಾಕಿ ಉಳಿಯುವುದು ಆ ರಸವನ್ನು ತಕ್ಕೊಂಡು ಎಲ್ಲಾ ನಾಡಿಗಳಿಗೆ

ಒಯ್ದು ಕೊಡುವ ಸ್ವಭಾವ ವ್ಯಾನ ವಾಯುವಿನದಾಗಿರುವುದು. ಕಂಠದೇಶದಲ್ಲಿರುವ ಉದಾನ ವಾಯು ಸೀನು, ಬಿಕ್ಕಳಿಕೆ, ದಮ್ಮು, ಕೆಮ್ಮು, ಡೇಕರಿಕೆ ಇತ್ಯಾದಿ ಕ್ರಿಯೆಯ ಮಾಡುವುದೆ ಉದಾನ ವಾಯುವಿನದಾಗಿರುವುದು. ಅನ್ನರಸವನ್ನು ಎಲ್ಲಾ ನಾಡಿಗಳಿಗೂ ಸಮಾನವಾಗಿ ಹಂಚಿ ಹಾಕುವ ಗುಣವು ನಾಭಿ ದೇಶದಲ್ಲಿರುವುದು ಇದು ಸಮಾನ ವಾಯುವಿನದಾಗಿರು ವುದು. ಈ ಪಂಚಪ್ರಾಣ ಲಿಂಗವಾಗದು. ಉಪಪ್ರಾಣಗಳು ಆಗವು, ಇವುಗಳ ಕ್ರಿಯೆಯಾದರೂ ಲಿಂಗವಾಗದು ಇದು ಕಾರಣ ಜಡವಾದ ಪ್ರಾಣಕ್ಕೆ ಚೈತನ್ಯಲಿಂಗ ಎನ್ನು ವರ ಶಬ್ಧಕ್ಕೆ ನಾಚಿತ್ತು ಎಂದು ಹೇಳಿಹರು.

ನಿಷ್ಕಳಂಕ ಲಿಂಗ ಪ್ರಾಣವಾಗಬಹುದೆ ? ನಿರಾಲಂಬ ಲಿಂಗ, ನಿಸ್ಸಂಗ ಲಿಂಗ, ನಿರವಧಿ ಲಿಂಗ, ನಿರುಪಾಧಿ ಲಿಂಗ, ಅಚಲಿತ ಲಿಂಗ, ಅಖಂಡ ಲಿಂಗ, ಪ್ರಾಣವಾಗಬ ಹುದೆ ? ಅಚಲಿತ ಲಿಂಗ ಬರಹೋಗುವ ಕ್ರಿಯೆಯುಳ್ಳದ್ದಾಗಬಹುದೆ ? ನಿರಾಲಂಬಕ್ಕೆ ಅದಾವುದರ ಅವಲಂಬನ ? ಅದಕ್ಕೆ ಪ್ರಾಣ ಹೋದರೇನು ಕಾಯ ಬಿದ್ದಡೇನು ? ಈ ಪೂಜಾಲಿಂಗ ಪೂಜೆ ಇಲ್ಲದೆ ಹಾಗೆ ಇದ್ದರೇನು ? ಆ ಘನ ? ಸಂಗಾಸಂಗವೆನ್ನಲು ಮೀರಿದ ಅನುಪಮದ ಘನ, ಅದಾರು ಬಲ್ಲರು ಬಯಲು ಬಯಲೆ ! ಅದು ಘಟ ಮಠದೊಳಿದ್ದರೂ ನಿರಾಲಂಬವು. ಒಳಹೊರಗೆನ್ನದೆ ವ್ಯಾಪಕವಾದ ಘನಕ್ಕೆ ಆವುದರ ಸಂಗ ವಾಗಬೇಕು. ಪ್ರಾಣ ಹೋದರೆ ಕಾಯ ಬಿದ್ದಿತ್ತು. ಒಂದೆಸೆಯಾದಡೆ ನಾಚಿತ್ತು ಗುಹೇಶ್ವರನೆ ನಲಿಲ್ಲದ ಘನವು. ಕಾಯದಲ್ಲಿ ಪ್ರಾಣ ಇರುವವರೆಗೂ ಪೂಜಾಲಿಂಗ ಬಹು ಪೂಜ್ಯನೀಯ ವಾಗಿದೆ. ಪ್ರಾಣ ಹೋದರೆ ಕಾಯದ ಮೆರವಣಿಗೆ ಬಿದ್ದಿತ್ತು. ಏಕೆಂದರೆ ಒಂದು ದಿವಸ ಜಾಸ್ತಿ ಇಟ್ಟರೆ ಅದರ ಒಂದೆಸೆ ಬೈಲಿಗೆ ಬೀಳುವುದು. ಅಂದರೆ ಅದರ ಒಂದೆಸೆಯಾದ ದುರ್ಗಂಧವೆ ದುರ್ಗಂಧ. ಅದಕ್ಕಾಗಿ ಪ್ರಾಣ ಹೋದ ಕೂಡಲೆ ಕಾಯ ಕಿಚ್ಚಿನಲ್ಲಿ ಬಿದ್ದಿತ್ತು. ಕಾಯ ಕುಣಿಯಲ್ಲಿ ಬಿದ್ದಿತ್ತು. ಮಣ್ಣಿನಲ್ಲಿ ಬಿದ್ದಿತ್ತು. ಆಗ ಮಣ್ಣಿನಲ್ಲಿ ಬಿದ್ದ ಕಾಯ ಮಣ್ಣಿ ನಲ್ಲಿ ಕೂಡಿದಾಗ ಲಿಂಗ ಪೂಜಾಲಿಂಗ ಒಂದೆ. ಸ್ಮಶಾನದಲ್ಲಿ ಹೆಣದ ಕೂಡ ಪೂಜಾಲಿಂಗ ಇದ್ದೇನೆಂದರೂ ಹೆಣವು ಸ್ವಲ್ಪ ದಿವಸ ಆದನಂತರ ಮಣ್ಣಿನಲ್ಲಿ ಕೂಡಿ ಮಣ್ಣಾದಾಗ ಪೂಜಾಲಿಂಗ ತಾನೊಂದೆ. ಪೂಜೆ ಮಾಡುವರಿಲ್ಲ, ಪೂಜೆ ಇಲ್ಲ, ಪೂಜ್ಯತೆ ಇಲ್ಲ ಆರಾರು ಕೇಳದ ಒಂದೆಸೆಯಾದಡೆ ನಾಚಿತ್ತು. ಪ್ರಭು ಲಿಂಗ ಈ ದೆಸೆಯ ಕಂಡು ಲಿಂಗ ಒಂದೆ ಸೆಯಾದಡೆ ನಾಚಿತ್ತು ಮನ ಎಂದು ಹೇಳಿದ. ಕೊನೆಗೆ ತನ್ನ ನಿರ್ಣಯವನ್ನೆ ಹೃದಯ ಬಿಚ್ಚಿ ಗುಹೇಶ್ವರನೆನಲಿಲ್ಲದ ಘನವೆಂದು ಸಕಲರ ಕಣ್ಣು ತೆರೆಯಿಸಿದ.

ಇದು ಲಿಂಗವರಿತು ಲಿಂಗವಾಗಿಹ ನಿಲುವು ನಿಜನಿಲುವು ಭಾವಕ್ಕಿಂಬುಕೊಡದ ನಿಲುವು. ನುಡಿಗೆಡೆಗೊಡದ ಘನವಾಗಿಹ ನಿಲುವು. ಅರಿದರಿದು ನಿಂತವರ ನಿಲುವು ಏನನು ? ಲಿಂಗವ ಅರಿದರಿದು, ವೇದವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ಅರಿದರಿದು ಗುಹೇಶ್ವರನೆನಲಿಲ್ಲದ ಘನವೆಂದು ಹೇಳಿದುದು. ಇದು ಅಳಿಯದೆ ಕೂಡುವ ಯೋಗವೆಂದು ತಾನು ಕಂಡುದು ಸಕಲರು ಕಾಣುವ ಹೆದ್ದಾರಿ ಹಾಕಿಕೊಟ್ಟ ಕರು ಣಾಕರನ ಕರುಣಾಬ್ಧ ಅಪಾರವಾದುದು.

24

**ಅಷ್ಟಾಂಗಯೋಗದಲ್ಲಿ ;**
**ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರವೆಂಬ**
**ಧ್ಯಾನ ಧಾರಣ ಸಮಾಧಿಯೆಂಬ, ಎರಡು ಯೋಗವುಂಟು**
**ಅಲ್ಲಿ ಅಳಿದು ಕೂಡುವುದೊಂದು ಯೋಗ,**
**ಅಳಿಯದೆ ಕೂಡುವುದೊಂದು ಯೋಗ.**
**ಈ ಎರಡು ಯೋಗದೊಳಗೆ,**
**ಅಳಿಯದೆ ಕೂಡುವ ಯೋಗವು ಅರಿದು ಕಾಣಾ ಗುಹೇಶ್ವರಾ.** ॥ 257 ॥

**ತಾತ್ಪರ್ಯ**: ಪ್ರಭುದೇವ, ಸಕಲರ ಗುರು. ಆವಾವ ಶರಣ ಶರಣೆಯರು ತನಗೆ ದರ್ಶನವಾಗಿಹರು, ಅವರುಗಳೆಲ್ಲರಿಗೂ ನೇರವಾಗಿ ಅನುಪಮ ಘನದರುವಿನತ್ತ ಕರುಣಿಸುವದೆ ಆ ಮಹಾಂತನ ಕರುಣಾರಸದ ಕಳ ಕಳಿ. ಭಕ್ತರೆ ಕಾಣಲಿ, ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯದ ಷಟ್‌ಸ್ಥಲ ಪ್ರೇಮಿಗಳು ಕಾಣಲಿ ಅವರಿಗೆ ನೇರವಾಗಿ ತನ್ನಿರುವಿನ ದರ್ಶನವಾಗುವಂತೆ ಎಚ್ಚರಿಸಿದ ಅಗಮ್ಯ ಪ್ರಭು. ಇತ್ತ ಅಷ್ಟಾವರ್ಣ ಅಷ್ಟಾಂಗ ಯೋಗದ ನಿಷ್ಠಾವಂತರಿಗೂ ಇತ್ತ ಕೃಷಿ ಕಾಯಕದವರಿಗೂ ಕಾಯಕದಲ್ಲಿ ನಿರತರಾದ ನಿಷ್ಠಾ ವಂತರಿಗೂ ಸಕಲರಿಗೂ ತಮ್ಮ ಸ್ವರೂಪದ ಘನದಿರುವಿನ ಮಹಿಮೆಯ ಒಂದನುವ ಮಾಡಿ ತಿಳಿಸುವದೆ ಆ ಮಹಾಂತನ ಗುರಿ. ಸ್ವರೂಪದರುವುಳ್ಳ ಮಹಿಮರ ಕಂಡು ಅವರ ಮಹಾ ನುಭವಕ್ಕೆ ನಮೋ ನಮೋ ಎಂದು ಅಪ್ಪಿಕೊಂಡ ಸಮರಸವುಳ್ಳ ನಿಸ್ಸೀಮ ಘನ, ನಿಜಾನುಭ ವಿಯಾಗಿಹ ನಿಜೈಕ್ಯ.

ಅಷ್ಟಾಂಗ ಯೋಗದಲ್ಲಿ, ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಗಳೆಂಬಿವು ಅಳಿದು ಕೂಡುವ ಯೋಗ. ಧ್ಯಾನ ಧಾರಣ ಸಮಾಧಿಯೆಂಬುದು ಅಳಿಯದೆ ಕೂಡುವ ಯೋಗ. ಇದರಲ್ಲಿ ಯಮವೆಂದರೆ, ಶರೀರ ಇಂದ್ರಿ ಪ್ರಾಣ ಮನಸ್ಸು ಮೊದ ಲಾದ ಅನಾತ್ಮಧರ್ಮ ತನಗೆ ದೃಶ್ಯವಾಗಿ ಕಾಣಿಸಿಕೊಂಬುವುದರಿಂದ ತಾನಲ್ಲವೆಂದು ತಿಳಿದು ತನಗೆ ವೈರಾಗ್ಯ ಉತ್ಪನ್ನವಾದರೆ ಅಷ್ಟಾಂಗ ಯೋಗದಲ್ಲಿರುವ ಒಂದು ಯಮಾಂಗವಾಗ ವುದು.

ಈ ಯಮದಲ್ಲಿ ಹೇಳಿದ ದೇಹಾದಿಗಳಲ್ಲಿ ಹುಟ್ಟಿದ ವೈರಾಗ್ಯ ತನ್ನ ಮನಸ್ಸಿನಲ್ಲಿ ಸ್ಥಿರವಾಗಿ ಉಳಿದರೆ ಅದು ನಿಯಮಾಂಗವೆಂದು ಹೇಳಿಸಿಕೊಳ್ಳುವುದು.

ಸಕಲ ವಿಷಯಂಗಳಲ್ಲಿ ರಾಗ ವಿರಾಗ ಕೆಟ್ಟು ಬುದ್ಧಿ ನಿರಂತರ ಉದಾಸೀನ ಸ್ಥಿತಿಯ ಲ್ಲಿರಲು ಆಸನಾಂಗವೆಂದು ತಿಳಿಯುವುದು.

ಶರೀರೇಂದ್ರಿಯಾದಿಗಳೆಂಬವು ಘಟದಂತೆ ಕಾಣಿಸುವುದರಿಂದ ಮಿಥ್ಯೆ ಆಗಿವೆ. ಅವು ಗಳು ತಾನಲ್ಲವೆಂದು ತಿಳಿದು ಅವುಗಳಲ್ಲಿ ಪುನಃ ನಾನೆಂಬ ಭ್ರಾಂತಿಯಿಂದ ಕೂಡದೆ ಇರು ವುದೆ ಪ್ರಾಣಾಯಾಮವೆಂದು ತಿಳಿವುದು.

ದೃಶ್ಯ ಪ್ರಪಂಚ ಶುಕ್ತಿರಜತದಂತೆ ಮಿಥ್ಯೆಯಾಗಿವೆ. ಇದರಿಂದ ಜನ್ಯವಾದವು ಕೂಡಾ ಸ್ವಪ್ನದಂತೆ ಮಿಥ್ಯವೆ ಆಗಿವೆಯೆಂದು ತಿಳಿದು ಬಹಿರ್‌ದೃಷ್ಟಿ ತೆಗೆದು ಹಾಕಿ ನಿಜದರುವಿನ

ಕಡೆ ವೃತ್ತಿಯನ್ನು ಅಂತರ್ಮುಖ ಮಾಡುವದಕ್ಕೆ ಪ್ರತ್ಯಾಹಾರವೆಂದು ಹೇಳುವರು.

ಆತ್ಮಸ್ವರೂಪದ ಕಡೆ ತಿರುಗಿದ ಮನವು ಹೊರಗೆ ಹೋಗದೆ ಆತ್ಮ ಸ್ವರೂಪದಲ್ಲಿ ದೃಢವಾಗಿ ನಿಲ್ಲಲಾಗಿ ಧಾರಣವೆನ್ನುವರು. ಚೈತನ್ಯ ಸ್ವರೂಪದಲ್ಲಿ ನಿಂತಿರುವ ಮನಸ್ಸು, ಆ ಚೈತನ್ಯವೆ ತಾನೆಂದು ತಿಳಿದು ಚಿಂತನೆಯನ್ನು ಮಾಡಲು ಧ್ಯಾನವೆಂದು ಹೇಳುವರು.

ಉಪಾಧಿಕರಹಿತವಾದ ಕೇವಲ ಶುದ್ಧ ಚೈತನ್ಯವೆ ತಾನೆಂಬ ಧ್ಯಾನಾಕಾರ ವೃತ್ತಿಯು ಲಯವಾಗಿ ವೃತ್ತಿಗೆ ಅಧಿಷ್ಠಾನವಾಗಲು ಆನಂದ ಸ್ವರೂಪನಾಗಿಯೂ ವ್ಯಾಪಕನಾಗಿ ಇರುವ ಸ್ವಸ್ವರೂಪ ವೃತ್ತಿಯೆ ಸಮಾಧಿಯೆಂದು ತಿಳಿವುದು.

ಇವು ಅಷ್ಟಾಂಗ ಯೋಗದಲ್ಲಿ ಬರುವ ಅಭ್ಯಾಸದ್ವಾರಾ ಸ್ವರೂಪ ಸುಖವನ್ನು ಕಾಣುವ ಅಂಗಗಳು. ಇವುಗಳು ಅಳಿದು ಕೂಡುವ ಯೋಗ. ಅಳಿಯದೆ ಕೂಡುವ ಯೋಗ, ಪ್ರಭುವಿನ ಯೋಗ, ನಿರ್ಯೋಗ ನಿರುಪಮ ಯೋಗ, ಸ್ವಯಂ ಯೋಗ.

ಸಂಯೋಗ ವಿಯೋಗವೆಂಬೆರಡಿಲ್ಲದ ನಿಜವನಾರಯ್ಯ ಬಲ್ಲವರು ? ಇದು ಅಳಿಯದೆ ಕೂಡುವ ಯೋಗ. ತನ್ನ ಯೋಗ, ತಾನೆ ತಾನಾಗಿಹ ಸ್ವಮಹಿಮ. ಅದು ಕೂಡಿ ಬೆರಸದು, ಅದು ಅಗಲಿ ಹಿಂಗದು ತೆಗಹಕ್ಕೆ ಬಾರದು. ಮಾಗಹಕ್ಕೆ ಸಿಲುಕದು, ಸುಗುಣ ನಿರ್ಗುಣವೆಂಬ ಬಗೆಗೆಡೆ ಗೊಡದ ಸೋಮೇಶ್ವರ ಲಿಂಗ. ಅರಿಯುವುದೇನು ಮರೆವುದೇನು ? ಕೂಡದಗಲದ ಘನವು ಸಂಯೋಗ ವಿಯೋಗವೆಂಬೆರಡಿಲ್ಲದ ನಿಜವು. ಇದು ಅಳಿಯದೆ ಕೂಡುವ ಯೋಗ, ತನ್ನ ಯೋಗ, ತಾನೆ ತಾನಗಿಹ ಸ್ವಮಹಿಮ. ಇಲ್ಲಿ ಕೂಡಿದುದಿಲ್ಲ ಅಗಲಿದುದಿಲ್ಲ ಕಳೆದುಕೊಂಡುದಿಲ್ಲ ಪಡೆದುದಿಲ್ಲ ಉಪದೇಶವೆ ನಷ್ಟವಾಗಿರುವ ಹಿರಿಮೆಯಲ್ಲಿ ಗುರುವಿನ ಗುರುವಾಗಿಹ ತನ್ನಿರುವು ತನಗೆ ವೇದ್ಯವಾಗಿರುವಲ್ಲಿ ಇಲ್ಲಿ ಗುರುವಾಗಿ ಹೇಳಿದುದಿಲ್ಲ, ಶಿಷ್ಯನಾಗಿ ಕೇಳಿದುದಿಲ್ಲ, ಅರಿಯದರುವೆ ತನ್ನಯ ಇರುವಾದುದು ತೆಗಹಕ್ಕೆ ಬಾರದು, ಮೊಗಹಕ್ಕೆ ಸಿಲುಕದು. ಇದಲ್ಲದೆ ಸೀಮಿತವಾಗಿಹ ಸಗುಣ, ನಿರ್ಗುಣವೆಂಬ ರೀತಿಗೆ ಅವಕಾಶ ಕೊಡದ ಘನವು. ಇಲ್ಲಿ ನಿರಂತರವಾಗಿಹ ಮಂಗಳಮಯ ತತ್ವವೆ ಪ್ರಜ್ವಲಿಸುವುದರಿಂದ ಅರಿವುದೇನು, ಮರೆವುದೇನು ಎಂದು ಹೇಳಿಹರು. ಇದು ಅಳಿಯದೆ ಕೂಡುವ ಯೋಗ, ನಿರ್ಯೋಗ ಘನಯೋಗವೆಂದುದು.

25

**ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ, ಹೆಸರಿಟ್ಟು ಕರೆದವರಾರೊ ?**
**ಅಕಟಕಟಾ ಶಬ್ದದ ಲಜ್ಜೆಯ ನೋಡಾ !**
**ಗುಹೇಶ್ವರನನರಿಯದ ಅನುಭಾವಿಗಳೆಲ್ಲರ**
**ತರಕಟ ಕಾಡಿತ್ತು.** ॥ 264 ॥

**ತಾತ್ಪರ್ಯ**: ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರಿಟ್ಟು ಕರೆದವರಾರೊ ? ಎಂದು ಪ್ರಶ್ನಿಸಿದುದು ನೋಡಿದಡೆ, ಈತ ಅಗಮ್ಯಪ್ರಭು. ನಿಶಬ್ಧವೇದಿ ಲಿಂಗವೇದಿ ಲಿಂಗ ಸ್ವರೂಪನಾದುದರಿಂದ ನಿರಾಳವೆಂಬುದನ್ನು ಸಂಬೋದಿಸಿದ್ದಾನೆ. ಈ ಮಹಾಂತನಿಗೆ ವೇದ ವೇದಾಂತಗಳೆಲ್ಲವೂ ಹೆತ್ತರಿವು ಆಗಿವೆ. ಕಲ್ಪಿತವಾಗಿವೆ. ಭ್ರಾಂತಿಯಾಗಿವೆ. ಶಬ್ದವೆ ನಿಷ್ಪ್ರಯೋ

ಜಕವಾಗಿವೆ. ಈತನ ಸಂಜ್ಞೆ ನಿರಾಳವೆಂಬ ಕೂಸು, ನಿಶ್ಚಿಂತ ಕೂಸು, ಶಾಂತಿಯೆ ಶಾಂತಿಯಾಗಿಹ ಕೂಸು, ಇದಾರಿಗೂ ಹುಟ್ಟದ ಕೂಸು. ತನ್ನಿಂದ ತಾನೆ ಪರಮಾನಂದವಾಗಿಹ ಕೂಸು. ಇದರಿರುವ ನೋಡಿರೆ ? ಶಬ್ಧಮುಗ್ಧವಾಗಿಹ ಘನಾನಂದವ ಅರಿಯಿರೊ, ಕಲ್ಪಿತಕ್ಕೆಡೆಗೊಡದ ಕಂದನಿಗೆ ಹುಟ್ಟಿಸಿದ ತಂದೆಯಿಲ್ಲ, ಹಡೆದ ತಾಯಿಯಿಲ್ಲ, ಇದರಿರುವೆ ಇದರ ಸ್ವರೂಪವಾಗಿದೆಯಲ್ಲ ! ಇದನಾರು ವರ್ಣಿಸುವುದು ? ಅವರ್ಣೀಯ ಕೂಸಿಂಗೆ ಪ್ರಮಾಣಗಳಿಂದ ಹೇಗೆ ನಿರ್ಣಯಿಸುವುದು. ಅಕಥನೀಯವಾದುದಕ್ಕೆ ಕಥನದ ಪ್ರಸಂಗ ಅದೆಂತು ? ಬೆಣ್ಣೆಯನ್ನಿಕ್ಕಿ ಹೆಸರಿಟ್ಟು ಕರೆದವರಾರೊ? ನಾಮವೆ ನಿರ್ನಾಮವಾದವಂಗೆ ನಾಮವಿಟ್ಟು ಕರೆದವರಾರೊ ?

ಬಯಲು ನಿರ್ಬಯಲು ಅದಾವ ಗ್ರಾಮದ್ದಾಗಬೇಕು ? ಅದಾವ ನಗರದ್ದಾಗಬೇಕು ? ಪ್ರಾಂತದ್ದಾಗಬೇಕು ? ದೇಶ ವಿದೇಶದ್ದಾಗಬೇಕು ? ಆವಾವುದು ಆಗದಿರುವಲ್ಲಿ ಅದು ಒಂದು ಮನೆಯದ್ದು, ಅದು ಒಂದು ವ್ಯಕ್ತಿಯದ್ದು ಹೇಗಾಗುವುದು ? ಅಕಥನೀಯ ಕೂಸು ಅದು ಕಥನಕೊಳ್ಳಪಟ್ಟುದೆಂದು ? ಕಥನ ಮಾಡುವದೆ ಮರವು. ಕಥನ ಸತ್ಯವಾದುದಲ್ಲವು; ಮರವಿನ ಮರವು. ಲಿಂಗವೆಂಬುದು ಶಬ್ದದಿಂದುಸುರವ ಸಂಜ್ಞೆಯಲ್ಲ, ಅದು ಅರಿದರಿದು ನೋಡಿದವರ ಹೃದಯದಲ್ಲಿ ನ್ಯಸ್ತವಾಗಿಹ ಪರಮಚಿದ್‌ಬೆಳಗು. ಅದು ಚಿಜ್ಯೋತಿ ಎನಲಿಲ್ಲ ನೋಡಹೋದವರೆಲ್ಲ ಅದುವೆ ಆಗಿಹ ಘನವಂತರು. ನಿಶಬ್ದ ವೇದಿಗಳು ಶಬ್ದವ ಸೇರರು. ಸಮಪ್ರಕಾಶವಾದ ಪರತತ್ವಕ್ಕೆ ಅವಿಚಾರವಾವುದು ವಿಚಾರವಾವುದು ? ವಾಙ್ಮನೋತೀತವಾದ ಘನವು ಪರಿಮಿತಿಯ ಅನುಭಾವ ಸೇರದು ನಿರಾಳವೆಂಬ ಕೂಸು ಶಬ್ದಮುಗ್ಧ. ಅದನ್ನು ಕಾಣಹೋಗಿ ಅದುವೆ ಆಗಿರುವಲ್ಲಿ ಅಲ್ಲಿ ಎರಡೆಂಬುದಿಲ್ಲ, ಒಂದೆಂಬುದಿಲ್ಲ ಶಬ್ದಕ್ಕೆಡೆ ಇಲ್ಲದಿರುವಲ್ಲಿ ಹೆಸರಿಟ್ಟು ಕರೆವುದು ಅದೆಂತು ಸಾಧ್ಯ.

ಅಕಟಕಟಾ ಶಬ್ದಲಜ್ಜೆಯ ನೋಡಾ: ಮೌನ ಮೌನ ಎಂದುದು ಮೌನವಾಗಬಹುದೆ ? ವಾಣಿಯು ಮಾತಾಡದಿದ್ದಲ್ಲಿ ಅದು ಮೌನದ ಮೌನವಾಗಬಹುದೆ ? ಸ್ವತಃ ಸಿದ್ಧಮೌನ, ಅಗಮ್ಯ ಮೌನ, ಅಪ್ರಮಾಣ ಮೌನ, ಇಲ್ಲಿ ವಾಣಿಯ ಕ್ರಿಯೆ ಅಸಮಂಜಸವು ವಿರುದ್ಧವು ಅಸಂಹ್ಯವು. ಅದುವೆ ಕಾರ್ಯ ಮಾಡುವದೆಂದಲ್ಲಿ ಅದು ನಾಚಿಕೆ ಇಲ್ಲದ ಕಾರ್ಯವಾಗುವುದು. ಅದಕ್ಕಾಗಿ ಅಕಟಕಟಾ ಶಬ್ದದ ಲಜ್ಜೆಯ ನೋಡಾ ಎಂದು ಎಚ್ಚರಿಸಿಹನು.

ಗುಹೇಶ್ವರನರಿಯದ ಅನುಭಾವಿಗಳೆಲ್ಲ ತರಕಟ ಕಾಡಿತ್ತು : ಗುಹೇಶ್ವರನೆಂಬುದು ಸಕಲರ ಇರವು, ವಿಶ್ವದ ಇರವು. ಗುಹೆ ವಿಶ್ವವಾಗಿದೆ. ಅದರೋಳ್ ಬೆಳಗುಳ್ಳ ಘನದಿರುವೆ ಈಶ್ವರವಾಗಿದೆ. ಅದನ್ನು ಅರಿತವರಿಗೆಲ್ಲರಿಗೂ ಈ ಶಬ್ದರೂಪ ತರಕಟ ನಾಚಿ ಶರಣಾಯಿತ್ತು. ಅರಿಯದ ಅನುಭಾವಿಗಳಿಗೆಲ್ಲ ಕಠೋರವಾಗಿ ಕಾಡಿಸುತ್ತಿಹುದು. ತಾವಾರೆಂದು ತಮ್ಮ ನರಿಯದ ಅರ್ಥಾತ್ ಗುಹೇಶ್ವರನರಿಯದವರು ಶಬ್ದ ಸೂತಕಿಗಳು. ಇವರು ಕಲ್ಪಿತರು. ಕಲ್ಪಿತಕ್ಕೆ ಎಡೆಗೊಟ್ಟ ತಮ್ಮ ನಿಶ್ಚಿಂತವಾಗಿಹ ಮೂಲದಿರುವುಳ್ಳ ಘನತ್ವದಿಂದ ವಂಚಿತರಾಗಿ ಪರಮಾತ್ಮನೆಂದು, ಪರಬ್ರಹ್ಮನೆಂದು, ಚಿಜ್ಯೋತಿ ಎಂದು ಚಿದಾನಂದನೆಂದು ಹೆಸರಿಟ್ಟು ಉಪಚಾರದ ಮಾತುಗಳ ಕರೆವುದರಲ್ಲಿಯೆ ಸರಿಹೋದುದನ್ನು ಪ್ರಭು ಕಂಡು ಇವರು

ತಮ್ಮ ತಾವರಿಯದ್ದರಿಂದ ಅಥವಾ ತಮ್ಮ ಶರೀರ ರೂಪಿ ಗುಹೆಯೊಳಗೆ ಪ್ರಕಾಶಿಸುವ ಸ್ವಯಂಜ್ಯೋತಿಯ ತಿಳಿಯದ್ದರಿಂದ ಇವರುಗಳಿಗೆ ಇವರ ಶಬ್ದಂಗಳೆ ಕಠೋರವಾಗಿ ಕಾಡಿ ಸುತ್ತಿಹವು ಎಂದು ಪ್ರಭುದೇವ ಹೇಳಿದುದಲ್ಲದೆ ನಿಮ್ಮ ಕಂಡ ಪರಮಜ್ಞಾನಿ ಗುಹೇಶ್ವರ ಎಂದು ತನ್ನ ಮಹಾನುಭವದಿಂ ಬೆಳಗಿಹನು.

**26**

**ಕಿಚ್ಚಿನ ಕೆಂಡದಂತೆ ಹೊರೆಯಲ್ಲಿಪ್ಪೆಯಯ್ಯಾ,**
**ಬೆಂಕಿಯ ಬೆಳಗ ಕಂಡೆ - ಇದು ಕಾರಣ,**
**ನಿಮ್ಮ ಕಂಡೆ ಪರಮಜ್ಞಾನಿ ಗುಹೇಶ್ವರಾ.** ॥ 265 ॥

**ತಾತ್ಪರ್ಯ**: ಪರಮಜ್ಞಾನಿ ಪ್ರಭು ಶರಣರ ಹೃದಯವನ್ನು ಪರಮ ಜ್ಞಾನಿಗಳ ಜ್ಞಾನದ ಹೃದಯವನ್ನಾಗಿ ಬೆಳಗಿದ ಬೆಳಗುಳ್ಳ ಘನ. ಈ ಮಹಾಂತನ ಜ್ಞಾನ ಕಿಚ್ಚಿನ ಕೆಂಡ ದಂತೆ ಕಿಚ್ಚನ್ನು ನೋಡ ಹೋದ ಕಣ್ಣು, ಕಿಚ್ಚು ಒಂದೆ ನೋಡಲಿಲ್ಲ. ಕಿಚ್ಚು ನೋಡ ಹೋಗಿ ಕೆಂಡ ಕಂಡಿತ್ತು.

ಒಂದೆಂಬೆನೆ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಒಂದೆರಡೆಂಬ ಸಂದೇಹವಿದೇನೋ ? ಅಗಲಲಿಲ್ಲದ ಕೂಟಕ್ಕೆ ಬಿಚ್ಚಿಬೇರಾಗದ ಉಪದೇಶವೆಂದಂತೆ. ಒಂದೆಂಬೆನೆ ಎರಡಾಗಿದೆ. ಕಿಚ್ಚು ಒಂದೆಂಬೆನೆ ಕಿಚ್ಚು ಕೆಂಡ ಎರಡಾಗಿದೆ. ಎರಡೆಂಬೆನೆ ಒಂದಾಗಿದೆ. ಕಿಚ್ಚುಕೆಂಡ ಎರಡೆಂಬೆನೆ ಕಿಚ್ಚಾವುದು ಅದು ಕೆಂಡ ! ಕೆಂಡವಾವುದು ಅದು ಕಿಚ್ಚು ಇರುವಲ್ಲಿ ಇದು ವಿವರಿಸಲಿಕ್ಕಾಗದ ನಿಲವು. ಅಗಲಲಿಲ್ಲದ ಕೂಟಕ್ಕೆ ಬಿಚ್ಚಿಬೇರಾಗದ ಉಪದೇಶ. ಕಿಚ್ಚಿನಿಂದ ಕೆಂಡವೆಂದೂ ಅಗಲಿಲ್ಲ, ಕೆಂಡದಿಂದ ಕಿಚ್ಚು ಎಂದೂ ಅಗಲಿಲ್ಲ, ಇವೆರಡರದು ಅಗಲಲಿಲ್ಲದ ಕೂಟ, ಕಿಚ್ಚು, ಕೆಂಡವೆಂಬುದು ಬೇರಾಗದುಪದೇಶ. ಇಲ್ಲಿ ಕಿಚ್ಚು ಕೆಂಡವೆಂಬುದು ನುಡಿ ಮಾತ್ರ ಬೇರಲ್ಲದೆ ಇರುವು ಬೇರೆಯೆ ? ಭಾವ ಬೇರೆಯೆ, ಕಿಚ್ಚು ಇದಾವ ಕಿಚ್ಚು ? ಜ್ಞಾನ ಅಖಂಡವಾಗಿಹ ಕಿಚ್ಚು, ಜ್ಞಾನ ಅಚಲಿತವಾಗಿಹ ಕಿಚ್ಚು, ಜ್ಞಾನ ಅಕಲ್ಪಿತವಾಗಿಹ ಕಿಚ್ಚು, ಈ ಜ್ಞಾನವೆ ಸುಜ್ಞಾನ. ಈ ಸುಜ್ಞಾನ ಅಖಂಡಿತನ ನೋಡ ಹೋದ ಅರಿವು. ಈ ಅರಿವು ಮಹದರುವು. ಕಿಚ್ಚು ಕೆಂಡ ಒಂದಾದ ನಿಲವು, ಮಹದ ರುವು ಇರವು ಒಂದಾದ ನಿಲುವು. ಅರುವಿಂಗರುವಾದುದು ಮಹದರುವು. ಇದು ನಿಶ ಬ್ದವು. ಜ್ಞೇಯವು ನಿಶಬ್ದವು, ಇದು ಜ್ಞಾನಜ್ಞೇಯ ಒಂದಾದ ನಿಲುವು. ಕಿಚ್ಚನ್ನು ಕಂಡು ಕಣ್ಣು ಕಿಚ್ಚೆನಲಿಲ್ಲ ಕೆಂಡವೆನಲಿಲ್ಲ. ಹಾಗೆ ಜ್ಞೇಯರೂಪಿ ನಿಶಬ್ದ ಬ್ರಹ್ಮವ ಕಾಣಲು ಹೋದ ಅರಿವು ಅಕಲ್ಪಿತ ಅಖಂಡಿತ ಅನುಪಮ ಎನಲಿಲ್ಲ, ಕಿಚ್ಚು ಕೆಂಡ ಒಂದಾದುದು ಶಬ್ದಕ್ಕೆ ತೆರಹಿಲ್ಲ, ಹಾಗೆ ಜ್ಞಾನ ಜ್ಞೇಯ ಒಂದಾದುದು ಪರಮಜ್ಞಾನ. ಜ್ಞಾನಜ್ಞೇಯ ನೋಡ ಹೋಗಿ ಜ್ಞೇಯದಂತಿದೆ ; ಜ್ಞೇಯದಂತೆ ಜ್ಞಾನವದೆ. ಹೇಳಿದರದಕ್ಕದೆ ಕೊರತೆ, ಅಲ್ಲಿ ನುಡಿ ಯಲು ವಾಣಿಯಿಲ್ಲ, ನೆನೆಯಲು ಮನವಿಲ್ಲ, ನಿರ್ಣಯಿಸಲು ಬುದ್ಧಿ ಇಲ್ಲ, ಈ ಇಲ್ಲ ವೆಂಬುದು ಇಲ್ಲದುದು ನುಡಿಗೆಡೆಗೊಡದ ಘನದಲ್ಲಿ ನುಡಿಯುವದೆಂತು ? ಅಚಿಂತ್ಯವು ಚಿಂತನಕ್ಕೆಡೆಯಾದುದೆಂತು ? ಮೌನವು ಮಾತಾಡಿದುದೆಂತು ?

ಬೆಂಕಿ ಬೆಳಕಿನಂತೆ ನೀನಿಪ್ಪೆಯಯ್ಯ, ನೀನಿದ್ದ ನಿಲವು ಬೆಂಕಿ ಬೆಳಕು, ಬೆಂಕಿಯ ಬೆಳಕು ಬೇರಾಗಿರಬಹುದೆ ? ಮೂಕನ ಮೂಕತ್ವ ಮಾತಾಡುವವನಿಗೆ ಅದೆಂತು ಸಾಧ್ಯ. ಕಣ್ಣಿಲ್ಲದವನು ಬೆಂಕಿಯ ಬೆಳಕು ಕಾಣುವನೆಂತು ? ತಿಳಿಯುವನೆಂತು? ಬೆಂಕಿಯ ಬೆಳಕು ಇದಾವ ಬೆಳಕು, ಎರಡೊಂದಾದ ಬೆಳಕು. ಬೆಂಕಿಯೆಂಬೆನೆ ? ಬೆಳಕು. ಬೆಳಕೆಂಬೆನೆ ? ಬೆಂಕಿ. ಕಣ್ಣು ಎರಡಾಗಿ ಕಂಡರೂ ದೃಷ್ಟಿ ಒಂದೆ ಎಂಬಂತೆ ನುಡಿ ಎರಡಾಗಿ ಕಂಡರೂ ಅದರ ಇರವು ಒಂದೆ. ಒಂದಾಗಿದ್ದ ಬೆಂಕಿ ಬೆಳಕು ವಿಭಾಗಿಸಲು ಬಾರದ ನಿಲವು. ಅನುಭಾವವೆಂಬೆನೆ ? ಅನುವಾಗಿ ಪ್ರಜ್ವಲಿಸುತ್ತಿಹುದು ಅನುವೆಂಬೆನೆ ? ಅನುಭಾವವೆ ಬೆಳಗುತ್ತಿದೆಯಲ್ಲ ಇದನು ಬೇರು ಮಾಡಿ ಬೆರದು ನೋಡಾ. ಅನುಭಾವವು ಮೂಕ. ಅನುವು ಮೌನ. ಮೌನವಿದ್ದಲ್ಲಿ ಮೂಕತ್ವ , ಮೌನದ ಸಂಜ್ಞೆ ಮೂಕತ್ವ ಅದು ನುಡಿದು ಹೇಳುವರಿಗೆಂತು ಸಾಧ್ಯವು, ಈ ಅನುಭಾವ ಅನುವು ಒಂದಾದ ಘನ ಅದಾರು ಉಪಮಿಸುವುದು.

ಆಧುನಿಕ ಸಮಯದಲ್ಲಿ ಪ್ರಭುವಿನ ಜ್ಞಾನವಾದವರು ಸಿಕ್ಕುವದು ವಿರಳ. ಮಾತಿನ ಮಹಾಂತರು ಸಿಕ್ಕುವರು. ಮಾತೆ ಎಂಜಲವೆಂದು ತಿಳಿದವರು ಮಿಗೆ ಮಿಗೆ ಮೀಸಲುವಾಗಿಹ ಪರತತ್ವ ತಿಳಿದವರು ವಿರಳ. ಏಕೆಂದರೆ ಮಹಾಂತನ ಮಹದರುವು ಅರಿದರಿದು ನೋಡಿದವರಿಗೆ ತೃಪ್ತರೂಪ ತೃಪ್ತಿ. ಅದು ಪ್ರಭು ಹೃದಯ ಅಕಥನೀಯತ್ವದಿಂದಲೆ ಪ್ರಜ್ವಲಿಸುವುದು. ಪ್ರಭುವಿನ ಜ್ಞಾನ ತೆರಹಿಲ್ಲದ ಜ್ಞಾನ, ಸಕಲರು ಅರಿದರಿದು ತಾನು ತೃಪ್ತರೂಪ ತೃಪ್ತನಾಗಿ ಹಿಂದಿನಿಂದ ಜಗತ್ತಿನ ಕಲ್ಯಾಣ ಕಾರ್ಯ ಮಾಡಿದರೆ ಅಡ್ಡಿಯಿಲ್ಲ, ತಾನೆ ಹಸಿವಿನಿಂದ ಬಳಲಿ, ಎಲ್ಲರೂ ನನ್ನಲ್ಲಿ ಬನ್ನಿ, ನಿಮಗೆ ಸಾಕಷ್ಟು ಉಣಬಡಿಸುವೆ ತೃಪ್ತಿಪಡಿಸುವೆನೆಂದಂತೆ. ತಾನಾರು ಎಂದು ಮೊದಲು ತನ್ನ ನರಿಯದೆ ಪುಸ್ತಕದ ಮಾತು ಕಲಿತು ಅದು ಪುಸ್ತಕದಲ್ಲಿ ಬೆಳಗಲಿಲ್ಲವೆಂದಲ್ಲಿ ಅದು ನಿಷ್ಪ್ರಯೋಜಕವಾಗುವುದು. ಹಾಗಾಗಿ ಪ್ರಭುವಿನ ಸಂಜ್ಞೆ, ಶಬ್ದಮುಗ್ಧ ಸಂಜ್ಞೆ. ಅರಿದರಿದು ನೋಡುವ ಈ ನೋಟ ನೋಡದ ನೋಟ, ತನ್ನ ಕಂಡ ನೋಟ, ಪರಮಜ್ಞಾನ ನೋಟ, ಅರಿವು ಇರುವು ಒಂದಾದ ಸುಜ್ಞಾನ. ಇದುವೆ ಗುಹೇಶ್ವರ ನಿಲವು, ಸುಖದ ಸುಖಸ್ವರೂಪರಾಗಿಹ ನಿಮ್ಮ ಶರಣರು.

**27**

**ಧಾತು ಮಾತು ಪಲ್ಲಟಿಸಿದರೆ, ಗಮನವಿನ್ನೆಲ್ಲಿಯದೊ ?**
**ಧ್ಯಾನ ಮೌನವೆಂಬುದು ತನುಗುಣ ಸಂದೇಹವಯ್ಯಾ.**
**ಸುಜ್ಞಾನಭರಿತ, ಅನುಪಮಸುಖಿ - ಗುಹೇಶ್ವರಾ ನಿಮ್ಮ ಶರಣನು.** ॥ 266 ॥

**ತಾತ್ಪರ್ಯ**: ಧಾತು, ಇದು ಮೂಲವು. ಮುನ್ನ ಮುನ್ನಲಾದ ಘನವು. ಶರಣರೆಂದರೆ ಧಾತು. ಅವರ ಮಾತೆಂಬುದು ಜ್ಯೋತಿರ್ಲಿಂಗ. ಅದು ಮಾತಾಡಿದುದುಂಟೆ ? ಶರಣ ನುಡಿಗೆಡೆಗೊಡದ ಘನ. ನಾನೀನೆಂಬುದಕ್ಕೆಡೆಗೊಡದ ಘನ, ಅವರ್ಣೀಯ ಘನ ವರ್ಣಿಸುವದದೆಂತು ? ಮಾತು ಪಲ್ಲಟಿಸಿದಡೆ ಗಮನವಿನ್ನೆಲ್ಲೆಯದೊ ? ಆರು ಮಾತು ಪಲ್ಲಟಿಸಿದವರು ಅವರು ಶರಣರು. ಅವರಿಗೆ ನಾಹಂ ಪಲ್ಲಟಿಸಿದೆ. ಕೋಹಂ ಪಲ್ಲಟಿಸಿದೆ.

ಸೋಹಂ, ಚಿದಹಂ, ದಾಸೋಹಂ ಎಂಬುದು ಪಲ್ಲಟಿಸಿದೆ.

ಅಹಂ ಮಮತ್ವದಿಂದುಕ್ತವಾದ ಮಾತು ಪಲ್ಲಟಿಸದ ಮಾತು. ಪಲ್ಲಟಿಸದ ಮಾತು ಅದನೆಂತು ವರ್ಣಿಸುವುದು. ಗಾಢ ನಿದ್ರೆಯಲ್ಲಿದ್ದು ಸುಖಿಸುವವನ ಮಾತೆ ಮೌನವಾಗಿರುವಲ್ಲಿ ಅನುಪಮ ಲಿಂಗ ಸುಖ, ಸುಖದ ಸುಖಿಯಾದುದು ನುಡಿದು ಹೇಳಲು ಬಾರದು ನೋಡಾ. ಮಾತು ಪಲ್ಲಟವಾದವರಲ್ಲಿ ಕಾಯ ನಾನೆಂಬುದಕ್ಕೂ ಇಂಬಿಲ್ಲ, ಸರ್ವಾರ್ಪಣ ಮಾಡುವ ಭಾವ ಭಕ್ತಿಗೂ ಇಂಬಿಲ್ಲ, ಸಾಕ್ಷಿ ನಾನೆನ್ನುವ ಚಿದಹಮ್ಮಿಗೂ ಇಂಬಿಲ್ಲ, ಭಾವಕ್ಕಗಮ್ಯವೆ ತನ್ನಿರುವಾಗಿ ಪ್ರಜ್ವಲಿಸುವಲ್ಲಿ ಭಾವಕ್ಕಿಂಬು ಏತರದು.

ಮಿಗೆ ಮಿಗೆಯಾಗಿಹ ಮೀಸಲ ಬಲ್ಲವಂಗೆ ಮಾತೆ ಎಂಜಲವಾದವನ ಘನವ ಅದಾರು ಬಲ್ಲರು ? ಮಾತು ಪಲ್ಲಟವೆಂಬುದು ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಮರಸವೆನ್ನೆ, ಆಯಿತೆನ್ನೆ, ಆಗದೆನ್ನೆ, ಚೆನ್ನಮಲ್ಲಿಕಾರ್ಜುನನಲ್ಲಿ ಏನೂ ಎನ್ನದೆ ಶಬ್ಧಮುಗ್ಧವಾದುದು. ಇದು ಮಾತು ಪಲ್ಲಟವಾದ ಚಿನ್ಹ, ಅದಕ್ಕಾಗಿ ಅವರು ಸ್ಥಲವೆನ್ನದವರು; ನಿಸ್ಥಲವೆನ್ನದವರು. ತಾನಾರೆಂಬ ತನ್ನ ನಿರ್ಣಯ ತಾನೆ ತಾನಾದುದು. ಅವರಿಗೆ ಲಿಂಗೈಕ್ಯವೆಂಬುದು ಗೌಣವಾಗಿದೆ. ಉಪಮಿಸಲು ಬಾರದ ಘನವಂತ ಮಾತು ಪಲ್ಲಟಿಸಿದುದು ಇದಾರು ಉಪಮಿಸುವದು.

ಆರಿಗೆ ಮಾತು ಪಲ್ಲಟಿಸಿದೆ ಅವರಿಗೆ ಗಮನವೆಲ್ಲಿಯದು ? ಆಕಾಶ ಇದ್ದಂತಿದ್ದ ಆಕಾಶ ಅದು ಬಂದುದಿಲ್ಲ, ಹೋದುದಿಲ್ಲ, ಶರಣ ಇದ್ದಂತಿರುವ ಘನ ಚಿದಾಕಾಶ ಬಂದುದೆಲ್ಲಿ ಹೋದುದೆಲ್ಲಿ ? ಚಿನ್ಮಯವು ಚಿದಾಕಾಶವು ಬಂದುದೆಲ್ಲಿ ? ಹೋದುದೆಲ್ಲಿ ? ಶರಣರೆಂದರೆ ಮೂಲವಸ್ತು. ಅದುವೆ ಧಾತು. ಅದಕ್ಕೆ ಗಮನವೆಲ್ಲಿಯದು. ಒಳ ಹೊರಗೆನ್ನಲು ಎಡೆಗೊಡದ ಘನಲಿಂಗ ಅದು ಅಚಲವಾಗಿರುವಲ್ಲಿ ಅಖಂಡವಾಗಿರುವಲ್ಲಿ ಗಮನಕ್ಕಿಂಬುಂಟೆ ?

ಧ್ಯಾನ ಮೌನವೆಂಬುದು ತನುಗುಣ ಸಂದೇಹವಯ್ಯ. ಶರಣ, ಧ್ಯಾನಾತೀತನು, ಧ್ಯಾನ ಮಾಡುವವನು ಹೇಗಾಗುವನು, ಧ್ಯಾನ ಮಾಡುವುದು ಗುಣಸ್ವಭಾವ. ಮೌನ ಮಾಡುವುದು ತನು ಸ್ವಭಾವ. ಲಿಂಗವರಿತು ಲಿಂಗವಾಗಿಹ ಶರಣ ಸಗುಣ ನಿರ್ಗುಣವೆಂಬುದಕ್ಕೆಡೆಕೊಡಬಹುದೆ ? ಕಾಲತ್ರಯಂಗಳ, ಜೀವತ್ರಯಂಗಳ, ಭಾವತ್ರಯಂಗಳನೊಂದು ಮಾಡಿ ಸುಖ-ದುಃಖ ಸಗುಣ ನಿರ್ಗುಣವೆಂಬುಭಯ ಲಿಂಗದಲ್ಲಿ ಏಕ ಮಾಡಿದ ನಿಸ್ಸೀಮಂಗೆ ಧ್ಯಾನಮೌನವೆಲ್ಲಿಯದು, ತನುವಿನ ತನು ಮನದ ಮನ ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗಿ ಶರಣಂಗೆ ತನುಗುಣಸಂದೇಹವಿಲ್ಲವಯ್ಯ.

ಸುಜ್ಞಾನಭರಿತ ಅನುಪಮಸುಖಿ ಗುಹೇಶ್ವರಾ ನಿಮ್ಮ ಶರಣ: ಸುಜ್ಞಾನವದು ಕೇವಲ ಸುಖಕರವಾದ ಜ್ಞಾನ. ಸುಖರೂಪ ಜ್ಞಾನ, ಸುಖವೆಂದರೆ ಜ್ಞಾನ. ಜ್ಞಾನವೆಂದರೆ ಸುಖ, ಇದು ಸುಜ್ಞಾನ. ತನ್ನನ್ನು ತಾನು ನೇರವಾಗಿ ಅರಿತುದೆ ಸುಜ್ಞಾನ. ಇದು ಅನುಪಮ ಜ್ಞಾನ. ಇಲ್ಲಿ ಅರಿತೆ ಅರಿಯೆ ಅಳಿದೆ ಉಳಿದೆನೆನ್ನುವುದು ಭ್ರಮವಾಗಿದೆ. ಅಂತರ್ಮುಖ, ಬಹಿರ್ಮುಖ ತತ್ವ ಅತತ್ವವೆಂಬ ವಿವೇಕವು ಭ್ರಮವಾಗಿದೆ. ಬಂಧಮೋಕ್ಷ ಪ್ರವೃತ್ತಿ, ನಿವೃತ್ತಿ ಎಂಬುದು ಭ್ರಮವಾಗಿದೆ. ಜೀವಪರಮರೈಕ್ಯವೆಂಬ ಸಂಧಾನವು ಭ್ರಮ. ಯೋಗ, ವಿಯೋಗ, ನಿತ್ಯ ಅನಿತ್ಯವು ಭ್ರಮವಾಗಿರುವುದರಿಂದ ಸುಜ್ಞಾನಭರಿತ ಶರಣ ಅನುಪಮ ಸುಖಿ ಎಂದು

ಹೇಳಿಹರು.

ಶರಣನೆಂದರೆ ನುಡಿಗೆಡೆಗೊಡದ ಘನವೆ ತನ್ನಿರುವೆಂದರಿದ ಘನವಂತ. ಸುಜ್ಞಾನ ಭರಿತ, ಈ ಮಹಾಂತನ ಸುಖವ ಉಪಮೆ ಕೊಟ್ಟು ಹೇಳಲು ಬಾರದ್ದರಿಂದ ಅನುಪಮ ಸುಖಿಯಾದುದರಿಂದ ಈತ ವೇದ, ಶಾಸ್ತ್ರ ಇವಾವುಗಳ ಹಂಗಿಗನಲ್ಲ, ಲಿಂಗವರಿತು ಲಿಂಗ ವಾಗಿಹ ಶರಣ ಅದಾರ ಹಂಗಿನಲ್ಲಿರಬೇಕು ? ಅಂಗ ಸಂಗದ ಮಧ್ಯದಲ್ಲಿದ್ದು ಬಚ್ಚಿಟ್ಟು ಬಳಸದ ಶರಣರು.

**28**

**ವೇದ ಪ್ರಮಾಣವಲ್ಲ , ಶಾಸ್ತ್ರ ಪ್ರಮಾಣವಲ್ಲ**
**ಶಬ್ದ ಪ್ರಮಾಣವಲ್ಲ ಕಾಣೆ ಭೋ ಲಿಂಗಕ್ಕೆ !**
**ಅಂಗಸಂಗದ ಮಧ್ಯದಲ್ಲಿದ್ದು ಬೈಚಿಟ್ಟು ಬಳಸಿದ**
**ಗುಹೇಶ್ವರಾ ನಿಮ್ಮ ಶರಣ.** ॥ 269 ॥

**ತಾತ್ಪರ್ಯ**: ಪ್ರಭು ನಿಶಬ್ದವೇದಿ, ನಿರುಪಮ ವೇದಿ. ಆ ಮಹಾಂತಂಗೆ ವೇದ, ಶಾಸ್ತ್ರ ಶಬ್ದ, ಪ್ರಮಾಣಂಗಳು ಹೇಗಾಗುವವು. ಅಪ್ರಮಾಣಂಗೆ ಪ್ರಮಾಣಂಗಳಿಲ್ಲವೆಂದು ಎಚ್ಚರಿಸಿದ.

ವೇದ ಈಶ್ವರಿ ಜ್ಞಾನವಿದ್ಯೆ. ಇದರ ಪ್ರಾದುರ್ಭಾವವು ಋಷಿಗಳ ಮೇಲೆ ಆಗಿದ್ದು, ಜಗತ್ತಿನ ಆರಂಭದಲ್ಲಿ ಏಕಾಂತ ವಾಸಿಯಾದ ಋಷಿಗಳ ಪವಿತ್ರ ಹೃದಯದಲ್ಲಿ ಉದಯ ವಾಯಿತು. ಮೂಲವೇದ ಮಂತ್ರ ನಾಲ್ಕು ಸಂಹಿತಾರೂಪದಲ್ಲಿವೆ. ಯಾವ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದವೆಂದು ವರ್ಣಿಸಿದೆ. ಇವುಗಳ ಪಾಠ ಆದಿ ಭೇದಗಳಿಂದ 1133 ಶಾಖೆಗಳಾಗಿವೆ ಎಂದು ವೇದವಿತ್ತರು ಹೇಳುವರು. ಇರಲಿ.

ಈಶ್ವರಿ ಮುನ್ನವೊ ? ಈಶ್ವರಿ ಜ್ಞಾನ ಮುನ್ನವೊ ? ಋಷಿ ಮುನ್ನವೊ ? ಇದರ ಪ್ರಾದುರ್ಭಾವ ಮುನ್ನವೊ ? ಜಗತ್ತು ಮುನ್ನವೊ ? ಏಕಾಂತ ವಾಸಿಯಾದ ಋಷಿಗಳ ಪವಿತ್ರ ಹೃದಯ ಮುನ್ನವೊ ? ಕಲ್ಪಿತ ಮುನ್ನವೊ, ಅಕಲ್ಪಿತ ಮುನ್ನವೊ ? ಭಾವ ಮುನ್ನವೊ ? ಭಾವಕ್ಕಗಮ್ಯವಾದುದು ಮುನ್ನವೊ ? ಪ್ರಮಾಣಂಗಳು ಮುನ್ನವೊ ? ಅಪ್ರ ಮಾಣ ಮುನ್ನವೊ ? ಅಲಕ್ಷ್ಯ ಮುನ್ನವೊ ? ಲಕ್ಷಣ ಲಕ್ಷ ಮುನ್ನವೊ ? ನಾನೀನೆಂಬು ದಕ್ಕೆ ತೆರಹಿಲ್ಲದುದು ಮುನ್ನವೊ ? ನಾನೀನೆಂಬುದಕ್ಕೆ ಅವಕಾಶ ಕೊಟ್ಟುದು ಮುನ್ನವೊ ? ಇದು ಕಾರಣ ತಾ ಮುನ್ನವೊ ? ತನ್ನಿಂದರಿಸಿಕೊಳ್ಳುವುದು ಮುನ್ನವೊ ? ಶಬ್ದವೇದವು ಮುನ್ನವೊ ? ಶಬ್ದವೆ ಮೀಸಲವಾದುದು ಮುನ್ನವೊ ? ಇದು ತಾನಾರೆಂದು ತನ್ನ ಅರಿದ ರಿದು ನೋಡಿದವರಿಗೆ ಇದರ ರಹಸ್ಯವು ತಿಳಿಯುವುದು. ತಾನು ನುಡಿಗೆಡೆಗೊಡದ ಘನ ವಾಗಿರುವಲ್ಲಿ ತನಗೆ ವೇದ, ಶಾಸ್ತ್ರ , ಶಬ್ದ ಪ್ರಯೋಜಕವಾಗದು. ತಾನೆಂದರೆ ಅರಿದರುಹಿ ಸಿಕೊಂಬುದಕ್ಕೆ ಮೀರಿದ ಘನವಾಗಿರುವಲ್ಲಿ ತನಗೇನನ್ನಬೇಕು ? ಅರಿಸಿಕೊಳ್ಳುವನಾಗಿದ್ದಲ್ಲಿ ಅಲ್ಲಿ ನಾಮರೂಪವುಂಟು. ಅರಿಯುವವನಾಗಿದ್ದಲ್ಲಿ ಲಕ್ಷಣ ಲಕ್ಷವೆಂದು ಶಾಸ್ತ್ರದ ಪ್ರಯೋಜಕವುಂಟು. ಇವೆರಡು ತನ್ನಿಂದ ತಿಳಿಸಿಕೊಳ್ಳುವುಗಳೆ. ತಾನು ಅನುಪಮ

ನಿರಾಲಂಬವಾದವಂಗೆ ಏನೆಂದುಸರುವುದು.

ಶಾಸ್ತ್ರದಲ್ಲಿ ಮುಖ್ಯ ಪ್ರಯೋಜಕವೆಂದರೆ ನಾಮರೂಪಂಗಳ ಬಾಧಪಡಿಸುವುದು, ಅಸ್ತಿ ಭಾತಿ ಪ್ರಿಯವ ಸ್ವೀಕರಿಸುವುದು. ಆವುದು ಭೇದವುಳ್ಳದ್ದಾಗಿದೆ ಅದನ್ನು ಬಾಧಪಡಿಸುವುದು. ಆವುದರಿಂದ ಅಭೇದತ್ವ ಸಿದ್ಧಿಸುವುದು ಅದನ್ನು ಅಪ್ಪಿಕೊಳ್ಳುವುದು; ಇವು ಕಲ್ಪಿತನಿಗೆ ಪ್ರಯೋಜಕವಾಗಿವೆ; ಅಕಲ್ಪಿತನಿಗೆ ಹೇಗೆ ಪ್ರಯೋಜಕವಾಗಬೇಕು? ಇದನ್ನು ತನ್ನಿಂದ ತಾನರಿವುದು. ಶಾಸ್ತ್ರವು ಎಷ್ಟು ತಿಳಿಸಿದರೂ ತಿಳಿಯದವನಿಗೆ ನಿಷ್ಪ್ರಯೋಜಕವು. ತಾನಾರೆಂದು ತನ್ನಿಂದ ತನ್ನ ಅರಿತವರಿಗೂ ನಿಷ್ಪ್ರಯೋಜಕವು. ಮಧ್ಯಸ್ಥನಿಗೆ ಉಪಯೋಗವು, ಮಧ್ಯಸ್ಥನೆಂದರೆ ತಿಳಿದವನೂ ಅಲ್ಲ, ತಿಳಿಯದವನೂ ಅಲ್ಲ, ತಿಳಿದಂತೆ, ಒಮ್ಮೆ ತಿಳಿಯದಂತೆ ಭಾಸವಾಗುವವನೆ ಮಧ್ಯಸ್ಥನು. ಈತನಿಗೆ ಶಾಸ್ತ್ರವು ಪ್ರಯೋಜಕವು. ಆರಿಗೆ ಅರುವಿಂಗರುವಾಗಿಹ ತನ್ನಿರುವಿನ ಜಾಗ್ರತೆಯಾಗಿಹುದು ಅವರಿಗೆ ಶಾಸ್ತ್ರವು ಪ್ರಮಾಣವಾಗದೆಂದು ಹೇಳಿದೆ.

ಶಬ್ದವು ಪ್ರಮಾಣವಲ್ಲ . ಸಿದ್ಧಾರೂಢರು, ಶಂಕರಾಚಾರ್ಯರು ಗರಗದ ಮಡಿವಾಳೇಶ್ವರರು, ನಿಶಬ್ದ ಬ್ರಹ್ಮವರಿತ ಅವರ್ಣನೀಯರು. ಅವರಿಗೆ ಶಬ್ದಪ್ರಮಾಣವಾಗಿಲ್ಲ, ಅವರಿಗೆ ಬೋಧವೆ ನಷ್ಟವಾಗಿಹುದು. ಅಪರವಿಲ್ಲದಂದು, ಪರಬ್ರಹ್ಮವಿಲ್ಲದಂದು ಅನಾದಿ ಇಲ್ಲದಂದು, ಆದಿ ಇಲ್ಲದಂದು, ಸದಾಶಿವನಿಲ್ಲದಂದು, ಆನು ನೀನೆಂಬುದು ತಾನು ಇಲ್ಲದಂದು ಕೂಡಲಚೆನ್ನಸಂಗಯ್ಯ ಏನೂ ಎನ್ನದಿರ್ದನಂದು.

ತಾನಾರೆಂದರಿತ ಮಹಾಂತನ ಇರವು, ಈ ಆರು ಪ್ರಮಾಣಂಗಳು ಹೇಗೆ ಆಗಬೇಕು. ಅರಿತ ಮಹಾಂತ ಏನೂ ಎನ್ನದಿರ್ದನಂದು. ನಿರಂತರವಾಗಿಹ ಮಂಗಲಮಯ ವಸ್ತುವಿಗೆ ವೇದ ಪ್ರಮಾಣವಾಗದು ಶಾಸ್ತ್ರ ಪ್ರಮಾಣವಾಗದು, ಶಬ್ದ ಪ್ರಮಾಣವಾಗದು, ಲಿಂಗವರಿತ ಶರಣ ಲಿಂಗ. ಆ ಮಹಾಂತನಿಗಾವ ಪ್ರಮಾಣವಿಲ್ಲ.

ಅಂಗ ಸಂಗದ ಮಧ್ಯದಲ್ಲಿದ್ದು ಬೈಚಿಟ್ಟು ಬಳಸದ ಗುಹೇಶ್ವರ ನಿಮ್ಮ ಶರಣ. ಶರಣನ ಅಂಗಸಂಗ ಆವುದು ಗೊತ್ತೆ ? ತ್ಯಾಗಾಂಗ, ಭೋಗಾಂಗ, ಯೋಗಾಂಗ. ಈ ತ್ರಿವಿಧ ಅಂಗಸಂಗದ ಸಂಬಂಧದಿಂದ ಬಂದವುಗಳು. ಆತನಿಗೆ ಇವು ಪ್ರಮಾಣವಾಗವು. ಇವುಗಳ ಮಧ್ಯದಲ್ಲಿದ್ದುದಕ್ಕೆ ಪ್ರಮಾಣವೆಂದು ಹೇಗೆ ಹೇಳುವುದು. ಅಪ್ರಮಾಣವೆಂದು ಹೇಗೆ ಹೇಳುವುದು. ಏಕಂದರೆ ಶರಣನ ಅಂತರಂಗದಲ್ಲಿ ಇದು ಮುನ್ನವೆ ನ್ಯಸ್ತವಾಗಿಹ ಘನ. ಇದು ಬೈಚಿಟ್ಟ ಘನ, ಇದು ಬಳಸದ ಘನ.

ಆವಲ್ಲಿ ಬೈಚಿಟ್ಟು ಬಳಸದ ಘನದ ಸಾಕ್ಷಾತ್ಕಾರವಾಗಿದೆ. ಅಲ್ಲಿ ತನು, ಇಂದ್ರಿ, ಪ್ರಾಣ, ಮನ, ಲಿಂಗಭೋಗೋಪ ಭೋಗದಿಂದುಕ್ತವಾಗಿವೆ. ಲಿಂಗಾಂಗ ಸಮರಸಜ್ಞಾನದ ಸುಖದ ಸುಖವುಳ್ಳವುಗಳಾಗಿವೆ. ಇವುಗಳು ಸಹಜ. ಅಂಗಸಂಗದಲ್ಲಿದ್ದರೂ ತಾನು ಮಧ್ಯ ಅಂದರೆ ಸಮಸ್ವರೂಪನಾಗಿರುತ್ತಾನೆ. ಈ ಸಮಗೋಷ್ಠಿ ಉಪಮಿಸದ ಗೋಷ್ಠಿ, ಬೈಚಿಟ್ಟು ಬಳಸದ ಗೋಷ್ಠಿ ಇದನ್ನು ಕಂಗಳ ಬೆಳಗು ಎಂದು ಕಲ್ಪಿಸಬಾರದು, ಕರ್ಣದ ನಾದವೆಂದು ವರ್ಣಿಸಬಾರದು.

**29**

**ಕಂಗಳ ಬೆಳಗ ಕಲ್ಪಿಸಬಾರದು, ಕರ್ಣದ ನಾದವ ವರ್ಣಿಸಬಾರದು.**
**ಜಿಹ್ವೆಯ ರುಚಿಗೆ ಪ್ರತಿಯಿಲ್ಲವೆಂದಿತ್ತು.**
**ಮತಿಗೆ ಮಹಾಘನವಪ್ಪ ಸುಷುಮ್ನನಾಳದ ಸುಯಿಧಾನವ,**
**ಪ್ರಮಾಣಿಸಬಾರದು.**
**ಅಣು ರೇಣು ತೃಣ ಕಾಷ್ಠದೊಳಗೆ ಭರಿತ ಮನೋಹರ,**
**ನಿಂದ ನಿರಾಳ- ಗುಹೇಶ್ವರಾ.** ॥ 273 ॥

**ತಾತ್ಪರ್ಯ**: ಪ್ರಭುದೇವ, ಶರಣರ ಇರವು ಅರಿವುಗೋಸುಗ ಸಂಚರಿಸಿದ ಮಹಾಘನ. ಆತನ ದೃಷ್ಟಿಗೆ ಹಲವಾರು ಸಾಧಕರು ಕಂಡಿಹರು. ಅವರವರ ಅಭ್ಯಾಸದಲ್ಲಿಯೆ ಅವರಿಗೆ ದಿವ್ಯಜ್ಞಾನವ ಬೋಧಿಸಿ, ನಿಜದಿರುವಿನೋಳ್ ನಿಲ್ಲಿಸಿದ ನಿಜಚಿದ್ರೂಪ. ಇಲ್ಲಿ ಹಠಯೋಗಿಗಳನ್ನು ಕಂಡಂತೆ ತೋರುತ್ತದೆ. ಅವರ ಕರ್ಮದ ಹೃದಯ ಕೆಡಿಸಿ ಅರುಹೃದಯ ಮಾಡುವ ಪರಿಯಾಗಿದೆ.

ಹಠಯೋಗಿಗಳು ತಮ್ಮ ಪ್ರಾಣಾಯಾಮ ಅಭ್ಯಾಸದಲ್ಲಿ ತೋರುವ ಪ್ರಕಾಶಕ್ಕೆ ಸ್ವರೂಪವೆಂದು; ಇದಲ್ಲದೆ ಕರ್ಣದಲ್ಲಿ ಕೇಳುವ ದಶನಾದಗಳಿಗೆ ಸ್ವರೂಪವೆಂದು ಕೆಲವರು; ಜಿಹ್ವೆ ರುಚಿಗೆ ಪ್ರಸಾದವೆಂದು; ಅದುವೆ ಪರಮಾಮೃತವೆಂದು; ಹಾಗೂ ಪಶ್ಚಿಮ ನಾಳದಲ್ಲಿ ಸುಳಿವ ಪ್ರಾಣವಾಯು ಅಮೃತಾಹಾರವೆಂದು; ಹೀಗೆ ತಿಳಿದು ತಮ್ಮ ನಿರಾಳ ಸ್ವರೂಪದಿಂದ ವಂಚಕರಾದುದು ಕಂಡು ಅವರಿಗೆ ಕಂಗಳ ಬೆಳಗ ಕಲ್ಪಿಸಬಾರದು ಎಂದು ಎಚ್ಚರಿಸಿದ. ಕಂಗಳ ಬೆಳಗು ನಮ್ಮ ಸ್ವರೂಪವಾಗದು ಬೆಳಗಿನ ಬೆಳಗು ನಿಜವಾದ ಬೆಳಗು. ನಿರಂತರ ಬೆಳಗು, ಅದು ಕಲ್ಪಿತ ಹೇಗಾಗುವುದು, ಕರ್ಣದ ನಾದವ ವರ್ಣಿಸಬಾರದು. ತನ್ನದು ನಾದಬಿಂದುಕಲೆಗಳಿಗೆ ಅಭೇದ್ಯವಾದ ಅಚಲಿತನು, ನಿಶಬ್ದಬ್ರಹ್ಮವು. ಅದು ಕರ್ಣದ ನಾದವುಳ್ಳದ್ದು ಹೇಗಾಗುವುದು. ಜಿಹ್ವೆಯ ಜಿಹ್ವೆಯಾಗಿರುವ ಜ್ಞಾನಾಮೃತನು, ಈ ಜಿಹ್ವೆಯ ರುಚಿಗೆ ಪ್ರತಿ ಇಲ್ಲದುದು ಹೇಗಾಗುವುದು? ತಾನು ಅಮರ ರಸ, ಚಿದ್ರಸ, ಜ್ಞಾನಾನಂದ ಇರುವುದರಿಂದ ಜಿಹ್ವೆಯ ರುಚಿಗೆ ಪ್ರತಿ ಇಲ್ಲದುದು ಎಂದು ಹೇಳಿಹರು.

ವಾಙ್ಮನೋತೀತವಾದ ಮಹಾಘನವು ಪಶ್ಚಿಮ ಚಕ್ರದೊಳಗೆ ಸುಳಿದಾಡುವ ಪ್ರಾಣವಾಯು ಆಗಬಹುದೆ ? ಅದು ಅಮೃತಾಹಾರವಾಗಬಹುದೆ ? ತನ್ನಿಂದ ತನ್ನ ನೋಡಿದುದು ಪಶ್ಚಿಮ ಚಕ್ರವಾಗಿದೆ. ಅದು ಸುಖದ ನಾಳವಾಗಿದೆ. ಅರುವಿನ ನಾಳವಾಗಿದೆ. ಅದು ಅರುವಿಂಗರುವಾದುದರಿಂದ ಅಮೃತಾಹಾರವೆಂದು ಹೇಳಿದೆ. ಅಣು ರೇಣು ತೃಣ ಕಾಷ್ಠದೊಳಗೆ ಭರಿತ ಮನೋಹರನಿಂದ ನಿರಾಳ ಗುಹೇಶ್ವರ. ಈ ನಿಂದ ನಿರಾಳವು ಬಹು ಪ್ರಶಾಂತವು ಇದು ಶಾಂತಿಯ ಶಾಂತಿ, ಅಣುವಿನಲ್ಲಿಯೂ ಭರಿತವು, ರೇಣುವಿನಲ್ಲಿ ಭರಿತವು, ತೃಣದಲ್ಲಿಯೂ ಭರಿತವು, ಕಾಷ್ಠದಲ್ಲಿ ಭರಿತವು, ಇದು ಎಲ್ಲೆಲ್ಲೂ ಭರಿತವು, ಪೂರ್ಣಮದಃ ಪೂರ್ಣ ಮಿದಂ ಎಂದು ಇರುವುದರಿಂದ ಅಪೂರ್ಣ ಆವುದು ಇರುವುದಿಲ್ಲ . ಅಣುವಿನ ಅಣುವಾದುದರಿಂದ ಪೂರ್ಣವು. ರೇಣುವಿಂಗೆ ರೇಣುವಾದುದರಿಂದ ಪೂರ್ಣವು. ತೃಣದ ತೃಣವಾದುದರಿಂದ ಪೂರ್ಣವು. ಕಾಷ್ಠದ ಕಾಷ್ಠವಾದುದರಿಂದ

ಪೂರ್ಣವು. ಈ ಪೂರ್ಣವೂ ಮನೋಹರವು, ಆರು ಪೂರ್ಣದ ಪೂರ್ಣವಾಗಿಹರೋ ಅವರು ನಿಂದುದು ಶಾಂತಿಯ ಶಾಂತಿ ಪರಮಶಾಂತಿ ಅದುವೆ ನಿರಾಳ ಗುಹೇಶ್ವರ ಎಂದು ಹೇಳಿಹರು.

**30**

**ಪ್ರಾಣಲಿಂಗ ಪರಾಪರವೆಂದರಿದು,**
**ಅಣು ರೇಣು ತೃಣ ಕಾಷ್ಠದಲ್ಲಿ ಕೂಡಿ ಪರಿಪೂರ್ಣಶಿವನೆಂದರಿದು,**
**ಇಂತು - ಕ್ಷಣವೇದಿ ಅಂತರಂಗವ ವೇಧಿಸಲ್ಕೆ**
**ಅಗಣಿತ ಅಕ್ಷರೇಶ್ವರ ತಾನೆಂದರಿದು**
**ಪ್ರಣವಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದರಿದ ಕಾರಣ,**
**ಗುಹೇಶ್ವರಾ ನಿಮ್ಮ ಶರಣನುಪಮಾತೀತನು.** || 275 ||

**ತಾತ್ಪರ್ಯ:** ಪ್ರಾಣಲಿಂಗ ಆವುದು ಗೊತ್ತೆ ? ಪ್ರಾಣದ ಪ್ರಾಣ ಆವುದು, ಅದು ಪ್ರಾಣ ಲಿಂಗ. ಪ್ರಾಣ ಆವುದರಿಂದ ಸಿದ್ಧವಾಗುವುದು ಅದು ಪ್ರಾಣಲಿಂಗ. ಪ್ರಾಣ ಕಲ್ಪಿತ, ಪ್ರಾಣದ ಪ್ರಾಣ ಅಕಲ್ಪಿತ; ಅನುಪಮ. ಇದು ಶ್ರೇಷ್ಠಾ ಶ್ರೇಷ್ಠವೆಂದು ತಿಳಿದು ಅಣು ರೇಣು ತೃಣ ಕಾಷ್ಠದೊಳಗೆ ಕೂಡಿದ ಪ್ರಾಣಲಿಂಗ ಎಲ್ಲೆಲ್ಲೂ ಭರಿತವು. ಅದಕ್ಕಾಗಿ ಅಣುವಿ ನಲ್ಲಿ ಭರಿತವು ತೃಣದಲ್ಲಿ ಭರಿತವು, ರೇಣುವಿನಲ್ಲಿ ಭರಿತವು, ಕಾಷ್ಠದೊಳಗೆ ಭರಿತವು. ಈ ಭರಿತವು *ತುಂಬಿದುದು ತುಳಕದು ನಂಬಿದುದು ಸಂದೇಹಿಸದು ಒಲಿದುದು ಓಸರಿಸದು ನೆರೆ ಅರಿದುದು ಮರೆಯದು ಚೆನ್ನಮಲ್ಲಿಕಾರ್ಜುನ ನೀನೊಲಿದ ಶರಣಂಗೆ ನಿಸ್ಸೀಮ ಸುಖ* ನೋಡಾ. ಚೆನ್ನಮಲ್ಲಿಕಾರ್ಜುನನೆಂಬುದು ಪ್ರಾಣಲಿಂಗ; ಇದು ಅಣುವಿನ ಅಣು. ರೇಣು ವಿನ ರೇಣು, ತೃಣದ ತೃಣ, ಕಾಷ್ಠದ ಕಾಷ್ಠವಾಗಿ ಕೂಡಿದುದರಿಂದ ಪರಿಪೂರ್ಣಶಿವನಾಗಿಹುದು, ಆರು ಪ್ರಾಣಲಿಂಗದ ಈ ರಹಸ್ಯವ ತಿಳಿದಿಹರು ಅವರು ಮುನ್ನ ಮುನ್ನಲಾದ ಘನವ ತಿಳಿದಿಹರು. ತನ್ನಿಂದ ತಾನಾದ ಘನವ ತಿಳಿದವರು ಪರಿ ಪೂರ್ಣಶಿವನೆಂದರಿದು ಹೀಗೆ ಒಂದು ಕ್ಷಣ ತನ್ನ ಅಂತರಂಗ ತಿಳಿದಲ್ಲಿ ಅಗಣಿತ ಅಕ್ಷರೇಶ್ವರ ತಾನೆಂದು ಆಗ ತನ್ನ ಸ್ವರೂಪದ ಹಿರಿಮೆ ತನ್ನಿಂದ ತನಗೆ ವಿದಿತವಾಗುವುದು. ಎಲ್ಲವನ್ನು ತಾನೆ ತಿಳಿವನು. ಇದೆಲ್ಲವು ತನ್ನಿಂದ ಸಿದ್ಧವಾಗುವವು. ತನ್ನನ್ನಾವು ಸಿದ್ಧಮಾಡವು. ಏಕಂದರೆ ತಾನು ಅರಿಯಬಾರದ ಘನ. ಅಗಣಿತ ಅಕ್ಷರೇಶ್ವರ; ಅರಿದು ಅರುಹಿಸಿಕೊಳ್ಳುವುದಕ್ಕೆ ಮೀರಿದ ಘನ; ತನ್ನನ್ನು ತನ್ನಿಂದ ತಿಳಿಯುವುದು. ಅದಕ್ಕಾಗಿ ಅಗಣಿತ ಅಕ್ಷರೇಶ್ವರ ತಾನೆಂದರಿದು ಎಂದು ಹೇಳಿದೆ.

ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದರಿದ ಕಾರಣ ಗುಹೇಶ್ವರ ಶರ ಣನುಪಮಾತೀತನು. ಗುಹೇಶ್ವರ ಶರಣ ಜ್ಯೋತಿ ಅಲ್ಲ ಪರಂಜ್ಯೋತಿ. ಜ್ಯೋತಿಗಳೆಲ್ಲ ಶರ ಣನೆಂಬ ಪರಂಜ್ಯೋತಿಯಿಂದ ಸಿದ್ಧವಾಗುವವು. ಜ್ಯೋತಿಗಳು ಶರಣನನ್ನು ಸಿದ್ಧಮಾಡಲರಿ ಯವು. ಶರಣನು ಮಾತ್ರ ಪ್ರಣವವು, ಜ್ಯೋತಿ ಅದರ ಪ್ರಭೆಯು. ಜ್ಯೋತಿ ಪ್ರಣವವೆಂದರೆ ಓಂ ಪ್ರಭೆ; ಎಂದರೆ ಜ್ಞಾನ ಸ್ವರೂಪ. ಇವೆರಡರ ಮೇಲಣ ಜ್ಯೋತಿ ತಾನಾದುದರಿಂದ

ಪರಂಜ್ಯೋತಿ ತಾನಾಗಿಹನು. ಪ್ರಣವವು ಉಪಮೆಗೊಳಪಟ್ಟುದು. ಅದರ ಪ್ರಭೆಯು ಉಪಮೆಗೊಳಪಟ್ಟುದು. ಇವೆರಡು ತನ್ನಿಂದ ಸಿದ್ಧವಾಗುವುದರಿಂದ ತಾನು ನಿರಂತರ ಇದ್ದಂತಿರುವ ಮಂಗಳಮಯ ಜ್ಯೋತಿ, ಅನುಪಮ ಜ್ಯೋತಿಯಾದುದರಿಂದ ಗುಹೇಶ್ವರನ ಶರಣನು ಉಪಮಾತೀತನು ಎಂದು ಹೇಳಿಹರು.

**31**

**ನೆನೆಹು ನೆನೆವ ಮನದಲ್ಲಿಲ್ಲ, ತನುವಿನಾಶೆ ಮುನ್ನವಿಲ್ಲ,**
**ಮನ ಮನವನೊಳಕೊಂಡ ಘನಘನವನೇನೆಂಬೆ !**
**ತನ್ನಲ್ಲಿ ತಾನೆಯಾಯಿತ್ತ !**
**ನೆನೆಯಲಿಲ್ಲದ ನಿಂದ ನಿರಾಳ ಅನಾಗತವಾದುದ ಕಂಡು**
**ನಾನು ಬೆರಗಾದೆನು.**
**ಅಂತು ಇಂತು ಎನಲಿಲ್ಲ, ಚಿಂತೆ ಇಲ್ಲದ ಮಹಾಘನವ.**
**ಗುಹೇಶ್ವರಲಿಂಗವ ಬೇರೆ ಅರಸಲಿಲ್ಲ.** ॥ 280 ॥

**ತಾತ್ಪರ್ಯ**: ಪ್ರಭುದೇವರ ಮನ, ಉಪಮಿಸದ ಮನ. ಆವ ಮನದಲ್ಲಿ ನೆನೆಹು ನೆನೆವುದು ಇದೆ ಅದನ್ನು ಉಪಮಿಸಬಹುದು. ಮನವು ದ್ವಿಮುಖದ್ದು, ಅದುವೆ ನಷ್ಟವಾದ ಮೇಲೆ ಅದಕ್ಕೇನನ್ನಬೇಕು. ಒಂದು ಶುದ್ಧ, ಮತ್ತೊಂದು ಅಶುದ್ಧ, ಹೀಗೆ ಎರಡು ಮುಖವುಳ್ಳದು. ಒಂದು ಅಂಗದ ನೆನಹುಳ್ಳದ್ದಾಗಿದೆ. ಇನ್ನೊಂದು ಲಿಂಗ ಎನ್ನುವ ನೆನಹುಳ್ಳದ್ದಾಗಿದೆ. ಒಂದು ಭ್ರಾಂತು, ಇನ್ನೊಂದು ನಿಭ್ರಾಂತು ಎನ್ನುವ ಶಾಸ್ತ್ರದ ಮಾತು. ಏಕಂದರೆ ಒಂದು ದುಃಖ, ಇನ್ನೊಂದು ಸುಖ. ಒಂದು ನಾನಾ ಮುಖ, ಇನ್ನೊಂದು ಏಕ ಮುಖ. ಆವುದು ನಾನಾ ಮುಖವುಳ್ಳದ್ದಾಗಿದೆ; ಅದು ಅರುವಿನ ಮುಖ. ಪ್ರವೃತ್ತಿವುಳ್ಳ ಮುಖ, ನಾನಾ ನಾಮರೂಪವುಳ್ಳದ್ದಾದ ಮುಖ ಅಲ್ಲಿಯೆ ಮಾಯೆ ಕರ್ಮಪಾಶ, ಪ್ರಪಂಚ, ಮರವು. ಅಲ್ಲಿಯೆ ಸಂಚಿತ ಆಗಾಮಿ ಪ್ರಾರಬ್ಧವೆಂಬ ಕರ್ಮ ಉಂಟು, ಭವ ಉಂಟು.

ಆವುದು ಏಖ ಮುಖವಾಗಿದೆ. ಅದು ಮರುವಿನ ಮುಖ. ನಿವೃತ್ತಿ ಮುಖ, ಲಿಂಗವೆನ್ನುವ ಮುಖ, ಮುಕ್ತವೆನ್ನುವ ಮುಖ. ಈ ಎರಡು ಮುಖವುಳ್ಳುದು ಮನ, ಪ್ರಭುವಿನ ಮನ ಇವೆರಡು ಆಗದ್ದು. ನೆನಹಿನ ನೆನವು ಮನದಲ್ಲಿಲ್ಲವೆಂದ ಮೇಲೆ ಇದಾವ ಮನ ಇದು ಅಕಲ್ಪಿತ ಮನ, ಘನ ಮನ, ಅಖಂಡಿತ ಘನವಪ್ಪ ಪೂರ್ಣವೆ ತನ್ನಿರುವು ಎಂದರಿದ ಮನ, ನಿಸ್ಸೀಮ ಮನ. ಈ ಘನ ಮನ ಆವ ಹೃದಯದಲ್ಲಿ ಮನೆ ಮಾಡಿಕೊಂಡು ಪ್ರಜ್ವಲಿಸುತ್ತದೆ ಅಲ್ಲಿಯ ಘನತ್ವ, ಅದಾರ ವರ್ಣಿಸುವುದು? ತನುವಿನಾಶೆ ಮುನ್ನಿಲ್ಲ, ಆವುದು ತನುವಿನ ತನುವಾಗಿದೆ ಅಲ್ಲಿ ಷಡ್ವಿಕಾರವುಳ್ಳ ತನುವಿನಾಶೆ ಮುನ್ನಿಲ್ಲ, ಬೆಳಕಿಗೆ ಬೆಳಕನ್ನು ಕಾಣುವ ಆಶೆ; ಅದು ಕತ್ತಲೆಯಿಂದ ಬಿಡುಗಡೆಯ ಆಶೆ ಇರಬಹುದೆ ? ಪರಮಾಮೃತರೂಪಿ ಘನಕ್ಕೆ ಕಳಂಕದಾಶೆ, ತನುವಿನಾಶೆ ಮುನ್ನಿಲ್ಲ. ಶರಣನ ಮನ ನಿಷ್ಕಳಂಕ ಸುಖ, ಅಚ್ಚಸುಖ. ಅಚ್ಚಸುಖಿಗೆ ಬರಹೋಗುವ ಸುಖ ದುಃಖದಾಸೆ ಇರಬಹುದೆ ? ನಿರವಯಕ್ಕೆ ಅವಯವದಾಸೆಗಿಂಬುಂಟೆ ? ನಿರ್ಭಯವು ಭಯವುಳ್ಳದ್ದಾಗದು. ಪ್ರಾಣಲಿಂಗಿ

ಶರಣ ತೋರಿಕೆಗೆ ಉಪಾಧಿಯುಳ್ಳವನಾಗಿಕಂಡರೂ ನಿರುಪಾಧಿ. ಅವಯವವುಳ್ಳವನಾಗಿ ಕಂಡರೂ ನಿರವಯಿ. ಕಾರಣ ಶರಣಂಗೆ ತನುವಿನಾಶೆ ಮುನ್ನಿಲ್ಲವೆಂದು ಹೇಳಿಹರು.

ಮನ ಮನವನೊಳಕೊಂಡ ಘನವನೇನೆಂಬೆ ? ಅಕಲ್ಪಿತ ಮನದೊಳ್ ಕಲ್ಪಿತ ಮನ ಅಡಕವಾದ ಮೇಲೆ ಅದಕ್ಕೇನನ್ನಬೇಕು, ನೆನೆಯದ ಮನದೊಳ್ ನೆನೆಯುವ ಮನ ಅಡಕವಾದ ಮೇಲೆ ಹೇಳಲೆಂತು ಬಾರದು. ಬಹು ಅಭ್ಯಾಸಿಗಳು ಉಂಟು, ಮನ ಮನ ವನೊಳಕೊಂಡ ಘನ ಅಭ್ಯಾಸಿಗಳು ಸಿಕ್ಕುವುದು ವಿರಳ. ಸಮುದ್ರದೊಳ್ ಪ್ರವಾಹರೂಪಿ ನದಿಗಳು ಸೇರಿದ ಮೇಲೆ ಅಲ್ಲಿ ನದಿ, ಸಮುದ್ರವೆಂದು ವಿಭಾಗಿಸಲು ಬರುವುದೆ? ಹಾಗೆ ಅಕಲ್ಪಿತ ಮನದೊಳ್ ಪ್ರವೃತ್ತಿ ಮನ, ನಿವೃತ್ತಿ ಮನ ಲೀಯವಾದ ಮೇಲೆ ಅಲ್ಲಿ ಇದು ಕಲ್ಪಿತ ಮನ, ಇದು ಅಕಲ್ಪಿತ ಮನವೆಂದು ವಿಭಾಗಿಸಲು ಬರುವುದೆ ? ಅಂಗ ಲಿಂಗ ವೆಂಬ ಸಂಕೇತವೆ ನಿರ್ನಾಮವಾದಾಗ ಅದರ ಘನವನೇನೆಂಬೆ ? ನೆನೆಯದಮನ ದೊಳ್ ನೆನೆಯುವ ಅಂಗವೆಂಬ ಮನ ಲಿಂಗವೆಂಬ ಮನ ಇವೆರಡು ಲೀನವಾದಾಗ ಮನ ಮನವನೊಳಕೊಂಡ ಘನವು ಅದೆಂತು ವರ್ಣಿಸುವುದು.

ತನ್ನಲ್ಲಿ ತಾನಾಯಿತ್ತು ಆಕಾಶವತ್ ಆಕಾಶ. ಇದು ಏನೊಂದಾದುದಲ್ಲ ಹೋದು ದಲ್ಲ, ಇದ್ದಂತಿದ್ದ ಆಕಾಶ ಹೇಗೋ ಹಾಗೆ ತನ್ನಲ್ಲಿ ಎಂಬುದು ವಾಙ್ಮನೋತೀತ ನಿಲಯ. ಇಲ್ಲಿ ಸಹಜವೆನ್ನದೆ ನಿಜವೆನ್ನದೆ, ಅಚಲವೆನ್ನದೆ ಅಖಂಡಿತನೆನ್ನದೆ, ಶೂನ್ಯ ಎನ್ನದೆ, ನಿಶೂನ್ಯ ಎನ್ನದೆ ಏನೂ ಎನ್ನದಂತಿದ್ದುದೆ ತನ್ನಲ್ಲಿ ತಾನಾಯಿತ್ತು ಎಂದು ಹೇಳಿದೆ. ಇದು ಮಾತಿನ ಮಾತಿನ ಮಹಾಂತರದಲ್ಲ, ಆಕಾಶವದು ಆಕಾಶವೆನ್ನುವದೆ ? ಏನೊಂದುಸರಲು ಎಡೆಗೊ ಡದ ಘನ ತಾನು. ತಾನೆಂದು ಮಾತಾಡಿದವನು ? ತನ್ನ ಘನದೊಳ್ ತಾನಿದ್ದುದರಿಂದ ತನ್ನಲ್ಲಿ ತಾನಾಯಿತ್ತು ಎಂದು ಹೇಳಿಹರು.

ನೆನೆಯಲಿಲ್ಲದ ನಿಂದ ನಿರಾಳ ಅನಾಗತವಾದುದ ಕಂಡು ನಾನು ಬೆರಗಾದೆನು: ಪ್ರಭುದೇವರ ಪ್ರಸಾದ ವಾಣಿ, ತನ್ನಿಂದ ತನ್ನನರಿತ ಯತಾರ್ಥ ಅರಿವು; ತನ್ನ ನಿಜದಿರುವು ನೆನೆಯಲಿಲ್ಲದ ನಿಂದ ನಿರಾಳ. ಈ ನಿರಾಳದಿರುವೆ ತನ್ನಯ ಇರುವಾಗಬೇಕೆಂದ ಶರಣರು ತಮ್ಮ ಮನ ನೆನೆಯಲಿಲ್ಲದ ಘನ ಮನವಾಗಬೇಕು. ಇನ್ನು ಮನವು ನೆನೆಹಿನಿಂದುಕ್ತವಾಗಿ ದ್ದಂದಲ್ಲಿ ತೃಪ್ತಿರೂಪ ತೃಪ್ತಿಲಭ್ಯವಾಗಿಲ್ಲ, ನಿಶ್ಚಿಂತತೆ ಇಲ್ಲ. ಅದಕ್ಕೆ ಇನ್ನು ಭೂತ ಭವಿಷ್ಯ ತ್ಕಾಲ, ವರ್ತಮಾನ ಕಾಲ ಉಂಟು. ಕಾಲತ್ರಯಂಗಳು ಕಾಣದುದೆ ತಾನಿಂತ ನಿರಾಳ; ಚಿದಾಕಾಶಕ್ಕೆ ಭೂತ ಭವಿಷ್ಯ ವರ್ತಮಾನ ಉಂಟೆ ? ನೆನೆಯಲಿಲ್ಲದ ನಿಂದ ನಿರಾಳವು ಕಲ್ಪಿತವಾಗಬಹುದೆ ? ಕಲ್ಪಿತನಾಗದಿದ್ದಲ್ಲಿ ಮರವಿನಿಂದ ಜೀವಾತ್ಮನಾದುದು ಆವಾಗ ? ವಿವೇಕದಿಂದ ಅಂತರಾತ್ಮನಾದುದು ಆವಾಗ ? ಇವೆರಡು ಆಗದಿದ್ದಲ್ಲಿ ಅರುವಿನಿಂದ ಪರ ಮಾತ್ಮನಾದುದು ಆವಾಗ ? ನೆನೆಯಲಿಲ್ಲದ ನಿಂದ ನಿರಾಳ ಅಂದರೆ ತನ್ನಿರುವು ತಾನೆ ತಾನಾಗಿ ಕಾಲತ್ರಯಂಗಳ ಕಟ್ಟಳೆಯೆ ಕಾಣದುದ ಕಂಡು ನಾನು ಬೆರಗಾದೆ. ನನಗೆ ಅವಿ ವೇಕವೂ ಕಾಣಲಿಲ್ಲ, ವಿವೇಕವೂ ಕಾಣಲಿಲ್ಲ, ಪೂರ್ವದಲ್ಲಿ ನನ್ನ ನಾ ಅರಿತಿದ್ದಿಲ್ಲ, ಈಗ ನನ್ನ ನಾ ಅರಿತೆನೆನ್ನುವ ಈ ಭವಿಷ್ಯವೆ ನಷ್ಟವಾಗಿ ನಾನು ಬೆರಗಾದೆ. ಇದಲ್ಲದೆ ಜೀವಾತ್ಮ ಅಂತರಾತ್ಮ ಪರಮಾತ್ಮನೆಂಬ ಭಾವರೂಪಭ್ರಮ ನಷ್ಟವಾಗಿ ನಾನು ಬೆರಗಾದೆ.

ಅಂತು ಇಂತು ಎನಲಿಲ್ಲ ಚಿಂತೆ ಇಲ್ಲದ ಮಹಾಘನವ ಗುಹೇಶ್ವರ ಲಿಂಗ ಬೇರೆ

ಅರಸಲಿಲ್ಲ, ಇಲ್ಲಿ ನುಡಿ, ನೆನಹಿಂಗೆ ಇಂಬಿಲ್ಲದಿರುವಲ್ಲಿ ಹಾಗೆ ಎಂದು ಹೀಗೆ ಎಂದು ಏನು ಹೇಳುವುದು. ಮರವಿನಲ್ಲಿ ಜೀವಾತ್ಮ, ಮಧ್ಯದಲ್ಲಿ ಅಂತರಾತ್ಮ, ಕೊನೆಯದಾಗಿಹ ಅರುವಿನಲ್ಲಿ ಪರಮಾತ್ಮನೆಂದು, ಅಂತು ಇಂತು ಎನಲಿಲ್ಲ, ಅಚಿಂತ್ಯತ್ವವು ಚಿಂತೆಯಿಲ್ಲದ ಮಹಾಘನ, ಅರಿದರಿದು ನೋಡುವುಡೆ ಅಚಿಂತ್ಯಾತ್ಮ ತಾನೆ. ಗುಹೇಶ್ವರ ಲಿಂಗವು ಚಿಂತೆ ಇಲ್ಲದ ಮಹಾ ಘನವಾದ್ದರಿಂದ ಬೇರೆ ಅರಸಲಿಲ್ಲ, ಈರ್ವರ ಇರುವು ಅದುವೆ; ನಿಜವು ಅದುವೆ ಇರುವಲ್ಲಿ ಪೂಜ್ಯ ಪೂಜಕನೆಂದು ಪೂಜಿಸಲಿಲ್ಲ, ಹುಡುಕಲಿಲ್ಲ, ಹುಡುಕುವವರೆಲ್ಲ ಗುಹೇಶ್ವರ ಲಿಂಗ ಅರಿಯದವರು. ಅವರು ಚಿಂತನದಿಂದುಕ್ತರಾಗಿಹ ಅನುಭವಿಗಳು. ಶಬ್ದಾ ನುಭವಿಗಳು, ಅವರಿಗೆ ಚಿಂತೆ ಇಲ್ಲದ ಮಹಾಘನದ ಘನವ ಅವರೇನು ಬಲ್ಲರು. ಆರು ತಾನಾರೆಂದು ತನ್ನ ತಾ ಅರಿತಿಹನು. ಆ ಮಹಾಂತ ತನ್ನಿಂದ ತಾನಾದ ಘನ. ನೆನೆಯಲಿ ಲ್ಲದ ನಿಂದ ನಿರಾಳ. ಅಂತು ಇಂತು ಎನಲಿಲ್ಲ, ಚಿಂತೆ ಇಲ್ಲದ ಮಹಾಘನವೆಂಬ ಪ್ರಸಾದ ವಾಣಿಯ ದರ್ಶನವು ಅಲ್ಲಿ ಮಾತ್ರ ಮನದ ಕಲ್ಪಿತ ಭ್ರಮ ತನುವಿನ ವಿಕಾರ ಭ್ರಮ, ಈ ಭ್ರಮ ನಷ್ಟವಾಗಬೇಕಾದರೆ ನೆನೆಯಲಿಲ್ಲದ ನಿಂದ ನಿರಾಳವ ಕಾಣುವುದು.

**32**

**ಮನದ ಕಾಲತ್ತಲು, ತನುವಿನ ಕಾಲಿತ್ತಲು.**
**ಅನುಭಾವದ ಅನುವನು ನೆನೆವುತ್ತ ನೆನೆವುತ್ತ ಗಮನ ಕೆಟ್ಟಿತ್ತು .**
**ಲಿಂಗ ಮುಖದಲಾದ ಸೂಚನೆಯ ಸುಖವಕಂಡು ಗಮನ ಕೆಟ್ಟಿತ್ತು.**
**ಅನುವಾಯಿತ್ತು ಅನುವಾಯಿತ್ತು, ಅಲ್ಲಿಯೆ ತಲ್ಲೀಯವಾಯಿತ್ತು -**
**ಗುಹೇಶ್ವರನೆಂಬ ಲಿಂಗೈಕ್ಯಂಗೆ !** ॥ 295 ॥

**ತಾತ್ಪರ್ಯ**: **ಮನದ ಕಾಲುಕತ್ತಲು, ತನುವಿನ ಕಾಲುಕತ್ತಲು:** ಮನದ ನೆನೆಹು ಭ್ರಾಂತಿ, ತನುವಿನ ನಡೆ ನುಡಿಗಳು ಭ್ರಾಂತಿ. ಪಂಡಿತನಾಗಲಿ ನೀತಿವಂತರಾಗಿರಲಿ ಆಚಾರ ವುಳ್ಳವರಾಗಿರಲಿ ಮನದ ನೆನಹಿಂಗೆ, ಶರೀರ ನಡೆನುಡಿಗೆ ತಾನೆಂದು ಒಪ್ಪಿಹನು. ಅವನು ಅಜ್ಞಾನಿಯು, ಭ್ರಾಂತನು. ಸಕಲರು ತಾನಾಗದ ಶರೀರದ ಶುಭ ಅಶುಭವಾಗಿಹರು. ಮನದ ಶುಭ ಅಶುಭ ತಾವಾಗಿಹನೆಂದರೆ ಮರವುಳ್ಳವರು, ಅಜ್ಞಾನಿಗಳು. ಇಲ್ಲಿ ವಾಸಿಸು ವರೆಲ್ಲ ಕತ್ತಲೆಯಲ್ಲಿ, ಇವರಿಗೆ ಬೆಳಕಿನತ್ತ ಮುಖವಿಲ್ಲ, ಅಲ್ಪ ಸುಖಿಗಳು ಮಹಾನ ದುಃಖಿಗಳು. ನೆನುಹೆ ಇವರ ಕಾಲು. ನಿರ್ಣಯವೆ ಇದರ ಕಾರ್ಯ, ಚಿಂತನವೆ ಇದರ ಗತಿಯಾಗಿದೆ. ಅಲ್ಪ ಕಾಲದ ಸುಖವೆ ಇದರ ಫಲವಾಗಿದೆ.

ಮನದ ಕಾಲು: ಅದೊಂದು ಸ್ವಪ್ನ. ಅದರ ವ್ಯವಹಾರಗಳಾಗಿರುವ ಶುಭಾ ಶುಭಂಗಳು ಸ್ವಪ್ನವೆ. ಇದು ದೀರ್ಘಸ್ವಪ್ನ, ಶೋಕ ಮೋಹಂಗಳು ಸ್ವಪ್ನವೆ. ಜನನ ಮರ ಣಂಗಳು ಸ್ವಪ್ನವೆ, ಅನಂತ ಕಾಲದಿಂದಲೂ ಇದರಿಂದ ಎಚ್ಚರವಾಗುವ ಸುಸಂಧಿ ಮಾನವ ರಿಗೆ ಲಭ್ಯವಾಗಲೊಲ್ಲದು. ಕಾರಣ ಈ ಸ್ವಪ್ನ ಬಹು ಸತ್ಯವಾಗಿದೆ. ಕತ್ತಲು ಸತ್ಯವಾಗಿದೆ. ಬೆಳಕು ಮಿಥ್ಯೆಯಾಗಿದೆ. ಮರವು ಸತ್ಯವಾಗಿದೆ. ಅರುವು ಆರು ಕೇಳದಂತಾಗಿದೆ. ದೇಹ ಬುದ್ಧಿ ಸತ್ಯವಾಗಿದೆ. ಆತ್ಮ ಜ್ಞಾನ ಆರು ಕೇಳದಂತಾಗಿದೆ. ಜೀವ ಜೀವರ ಭೇದ

ಸತ್ಯವಾಗಿದೆ. ಜೀವ ಬ್ರಹ್ಮ ಭೇದ ಸತ್ಯವಾಗಿದೆ. ಜೀವ ಬ್ರಹ್ಮರ ಏಕತ್ವಜ್ಞಾನ ದೂರವಾಗಿದೆ. ಇದು ಮನದ ಕಾಲು. ಕತ್ತಲಿನ ಪ್ರಭಾವ. ತನುವಿನ ಕಾಲು ಕತ್ತಲಿನ ಪ್ರಭಾವ. ಇದು ಮರವಿನ ಕಾರ್ಯವಾಗಿಹ ಮನವನ್ನು ತನುವನ್ನು ಸತ್ಯವೆಂದು ತಿಳಿದ ಪ್ರತಿಫಲ.

ಈ ಅಜ್ಞಾನದ ಪರಿಹಾರವಾಗಬೇಕೆಂದಲ್ಲಿ ಅನುಭಾವದನುವ ನೆನೆವುತ್ತ ಗಮನಗೆಟ್ಟಿತ್ತು: ಮಾನವ ಎಲ್ಲಿಯವರೆಗೆ ಅನುಭಾವದನುವ ನೆನೆಯುವುದಿಲ್ಲ ಅಲ್ಲಿಯವರೆಗೆ ಮನದ ಶೋಕ ಮೋಹ ನಷ್ಟವಾಗದು. ತನುವಿನ ಜನನ ಮರಣಂಗಳು ನಷ್ಟವಾಗವು. ಅನುಭಾವವೆಂದರೇನು ಅನುವೆಂದರೇನು ? ಅನುಭಾವವೆಂಬುದು ಅತೀಂದ್ರಿ ವಿದ್ಯೆ. ಅನುವು ಎಂದರೆ ಸ್ವರೂಪ. ನಿಜದ ರೂಪ. ಅತೀಂದ್ರಿ ವಿದ್ಯಾಸಂಪನ್ನನೆ ಅನುಭಾವಿ. ಅರುವಿಂಗರುವಾಗಿಹ ಘನ ಮನವನೊಳಕೊಂಡವನೆ ಅನುಭಾವಿ. ಅನುಭಾವಿಗೆ ಅಂಗ ಶೃಂಗಾರವುಂಟೆ ? ಅನುಭಾವಿಗೆ ಕಾಮ ಕ್ರೋಧ ಉಂಟೆ ? ಅನುಭಾವಿಗೆ ನಾಹಂ ಕೋಹಂ ಸೋಹಂ ಎಂಬ ಭ್ರಾಂತಿನ ಭ್ರಮೆಯುಂಟೆ ? ಅನುಭಾವಿಗೆ ನನ್ನವರು ತನ್ನವರು ಎಂಬ ಮಾತುಂಟೆ ? ಅನುಭಾವಿಗಳೆಂಬವರು ಅಲ್ಲಿಗಲ್ಲಿಗೆ ತಮ್ಮ ಅನುಭಾವಂಗಳ ಬೀರುವರೆ ? ಅನುಭಾವಿಗಳ ಪರಿಯ ಹೇಳಿಹೆ ಕೇಳಿರಣ್ಣ . ನೀರ ಮೇಲಣ ತೆಪ್ಪದಂತೆ, ಸಮುದ್ರದೊಳಗಣ ಬೆಂಗುಂಡಿನಂತೆ ಇರಬಲ್ಲಡೆ ಅನುಭಾವಿಗಳೆಂಬೆನಯ್ಯ. ವಚನಂಗಳ ಓದಿ ವಚನಂಗಳ ಕೇಳಿ, ಕಂಡ ಕಂಡ ಠಾವಿನಲ್ಲಿ ಬಂಡುಗಲೆವ ಜಗಭಂಡರ ಆತ್ಮ ತೇಜಕ್ಕೆ ತಿರುಗುವ ವೇಷಧಾರಿಗಳ ಕಂಡು ಅನುಭಾವಿಗಳೆಂದಡೆ ಅಘೋರ ನರಕ ತಪ್ಪದು ಅಮುಗೇಶ್ವರ. ಅನುಭಾವಿಗಳೆಂದರೆ ಅತೀಂದ್ರಿಯರು. ಅರುವ ಅರಿಯ ಹೋದವರು, ಅರುವಿಂಗರುವಾಗಿಹ ತನ್ನ ಸ್ವರೂಪವ ತಿಳಿದವರು ಅವರು ಜ್ಞಾನಾಮೃತರು. ಅಂತಪ್ಪ ಮಹಾಂತರಿಗೆ ಮನದ ಪ್ರವೃತ್ತಿ ನಿವೃತ್ತಿ ಗಮನಗೆಟ್ಟಿತ್ತು. ತನುವಿನ ಅಹಂಕಾರದ ಕಾರ್ಯವು ಕೆಟ್ಟಿತ್ತು. ಅಲ್ಲಿ ಲಿಂಗಮುಖದಲಾದ ಸೂಚನೆ ಸುಖವ ಕಂಡು ಗಮನಗೆಟ್ಟಿತ್ತು.

*ಲಿಂಗ ಮುಖ :* ಇದಾರ ಮುಖ, ಲಿಂಗವರಿಯ ಹೋಗಿ ಲಿಂಗಕ್ಕೆ ಲಿಂಗವಾಗಿ ನೋಡದವರ ಮುಖ. ಸ್ವಯಲಿಂಗಿಯಾದವರ ಮುಖ. ಈ ಮುಖದ ಪರಿಜ್ಞಾನ. ''ಅಂಡಜವಳಿದ ಬಸವಾ, ಪಿಂಡಜವಳಿದ ಬಸವಾ, ಆಕಾರ ವಳಿದ ಬಸವಾ, ನಿರಾಕಾರ ವಳಿದ ಬಸವಾ, ಸಂಗವಳಿದ ಬಸವಾ, ನಿಸ್ಸಂಗ ವಳಿದ ಬಸವಾ ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವಾ'' ಲಿಂಗ ಮುಖ, ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಮುಖಬಸವನದು ಎಂದು ನೀಲಾಂಬಿಕೆಯು ಬಿತ್ತರಿಸಿದುದು. ಅಂಡಜವ ಕಾಣದ ಬಸವಾ, ಪಿಂಡಜವ ಕಾಣದ ಬಸವ, ಆಕಾರ ನಿರಾಕಾರ ಕಾಣದ ಬಸವ. ಸಂಗ ನಿಸ್ಸಂಗ ಕಾಣದ ಬಸವ, ಎಲ್ಲೆಲ್ಲೂ ಲಿಂಗ ಮುಖವ ಕಂಡ ಬಸವ. ಅಜ್ಞಾನಿಗಳಿಗೆ ಕಾಣದ ಮುಖ, ಸುಜ್ಞಾನಿಗಳಿಗೆ ಎಲ್ಲಿ ನೋಡಿದಡಲ್ಲಲ್ಲಿ ಲಿಂಗ ಮುಖ. ಏಕೆಂದರೆ ಲಿಂಗವೆಂಬುದು ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ಸದ್ಗುರುದೇವನ ಕಾರುಣ್ಯದಿಂ ತನ್ನನುಜ್ಞಾನವಂ ತನ್ನ ಅನುಭವಕ್ಕೆ ಬರುವಂತೆ ತಿಳಿಸಿಕೊಟ್ಟಾಗ ಅಂಡಜವಳಿಯಲು ಪಿಂಡಜ ವಳಿಯಲು ಆಕಾರ ನಿರಾಕಾರವಳಿಯಲು, ಸಂಗ ನಿಸ್ಸಂಗವಳಿಯಲು, ದಿವ್ಯ ಜ್ಞಾನವ ನೀಡಿದ, ಲಿಂಗ ಮುಖದ ಸೂಚನೆ ಎನ್ನ ಸ್ವಯ ಸುಖದ ಸೂಚನೆ. ಇದೆಂಥ ಸುಖ, ಅಕ್ಷಯ ಸುಖ, ಅನುಪಮ ಸುಖ, ನುಡಿಗೆಡೆ

ಗೊಡದ ಸುಖ, ಭಾವಕ್ಕಿಂಬುಕೊಡದ ಸುಖ. ಈ ಸುಖದ ಸುಖಿಯಾಗುವ ತನಕ ಸೋಹಂ ಚಿದಹಂ ಗಮನ ಕೆಡದು. ವೃತ್ತಿದ್ವಾರ ಕಾಣುವ ಸುಖ, ಬರಹೋಗುವ ಸುಖ, ಆಭಾಸ ಸುಖ, ತನ್ನದು ಅಖಂಡ ಸುಖ, ನಿಸ್ಸೀಮ ಸುಖವಾಗಿ ಗಮನ ಕೆಟ್ಟಿತ್ತು.

ಅನುವಾಯಿತ್ತು ಅನುವಾಯಿತ್ತು ಅಲ್ಲಿಯೆ ತಲ್ಲೀಯವಾಯಿತ್ತು ಗುಹೇಶ್ವರ : ಲಿಂಗೈಕ್ಯಂಗೆ ನಿಜವು ಕರಿಗೊಂಡುದೆ ಲಿಂಗೈಕ್ಯವು. ಅಲ್ಲಿ ನಿಜವೆನ್ನುವುದು ದೋಷವಾಗಿರುವಲ್ಲಿ ಅದನಾವ ಭಾಷೆಯಿಂದ ವಿಸ್ತರಿಸುವುದು. ತಾನೆ ತಾನಾದುದು ಅದು ಅನುವಾಯಿತ್ತು, ಅನುವಾಯಿತ್ತು ಅಲ್ಲಿಯೆ ಗುಹೇಶ್ವರ ಲಿಂಗವೆನ್ನಲು ಬಾರದಂತಾಗಿದೆ ಇದಲ್ಲದೆ ತಾನೆ ತಾನು ಎನ್ನಲು ಬಾರದಂತಾಗಿದೆ. ಅಲ್ಲಿಯೆ ತಲ್ಲೀಯವಾದ ಸಂಕೇತವೆಂದು ತಿಳಿವುದು.

**33**

**ನೆನಹು ಸತ್ತಿತ್ತು, ಭ್ರಾಂತು ಬೆಂದಿತ್ತು.**
**ಅರಿವು ಮರೆಯಿತ್ತು ಕುರುಹುಗೆಟ್ಟಿತ್ತು.**
**ಗತಿಯನರಸಲುಂಟೆ ? ಮತಿಯನರಸಲುಂಟೆ ?**
**ಅಂಗವೆಲ್ಲ ನಷ್ಟವಾಗಿ ಲಿಂಗಲೀಯವಾಯಿತ್ತು.**
**ಕಂಗಳಂಗದ ಕಳೆಯ ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ.** ॥ 298 ॥

**ತಾತ್ಪರ್ಯ**: ನೆನಹು ಸತ್ತಿತ್ತು : ನೆನಹು ಸತ್ತ ಘನವ ಆದಾರು ಬಲ್ಲರು ? ಸತ್ತ ಹೆಣ ಅದಕ್ಕೆ ನೆನಹು ಸತ್ತಿದೆ. ಭ್ರಾಂತಿ ಬೆಂದಿದೆ. ಅರವು ಮರತಿದೆ. ಕುರುಹು ಕೆಟ್ಟಿದೆಯಲ್ಲವೆ ? ಸತ್ ಅರಿತವನ ನೆನಹು ಸತ್ತಿದೆ. ಸತ್ತವನು ಬದುಕಿದುದೆಂತು ? ಬದುಕಿದವನು ಸತ್ತುದೆಂತು ? ಸತ್ತವನಿಗೆ ಬದುಕಿದ ಅರುವಿಲ್ಲ, ಬದುಕಿದವನಿಗೆ ಸತ್ತವನ ಅರುವಿಲ್ಲ, ಸತ್ತವರಾರು ? ಬದುಕಿದವರಾರು ? ಸತ್ ಸ್ವರೂಪವರಿತವರು ಸತ್ತವರು. ಬದುಕಿದವರೆಂದಲ್ಲಿ ಸತ್ಯವನರಿಯದೆ ತೋರಿ ಇಲ್ಲವಾಗುವ ಮಾಯಿಕದ ಅಭಿಮಾನಿಗಳು. ಮೋಹಿಗಳು. ನಾಮರೂಪ ಸತ್ಯತ್ವ ಬುದ್ಧಿಯುಳ್ಳವರು, ಭ್ರಾಂತರು. ಇವರಿಗೆ ನೆನಹು ಸತ್ತುದು ಹೇಗೆ ತಿಳಿವುದು ? ಆರು ಸತ್ತು ಬದುಕಿಹರು; ಆರು ಬದುಕಿ ಸತ್ತಿಹರು ಅವರಿಗೆ ಅಮರತ್ವ ನಿಶ್ಚಯವಾಗಿದೆ.

ಆರಿಗೆ ತಾನಾರೆಂಬರುವಿನ ಇರುವು ನಿಶ್ಚಿತವಾಗಿದೆ, ಆ ಮಹಾಂತನಿಗೆ ಕಲ್ಪಿತನ ಸಕಲ ಕಾರ್ಯಗಳ ಅಭಿಮಾನ ಮೋಹ ಸತ್ತು ಹೋಗಿದೆ. ಕಾರಣ ಸುಖರೂಪ ಅವಿರಳಾನಂದದಲ್ಲಿ ಮಗ್ನವಾಗಿಹನು. ಈ ಘನವಂತನ ಬದುಕು ಅಮರ ಬದುಕು. ಸುಖರೂಪ ಸುಖದ ಬದುಕು. ನಡೆದು ನಿರ್ಗಮನಿ ನುಡಿದು ನಿಶಬ್ದವಾಗಿದ್ದ ಘನವ ಅದನೆಂತು ವರ್ಣಿಸುವುದು. ಕರ್ತೃವಾಗಿ ಕಂಡರೂ ಅಕರ್ತೃ ರೂಪನು , ನಿಸ್ಸಂಗಿಯು. ನಿರಾಲಂಬ ನಿಜ ಪದದಲ್ಲಿ ಮಗ್ನನಾಗಿಹ ನಿಜೈಕ್ಯ. ಇಂತಪ್ಪ ಪರತತ್ವದ ಪರಿಣಾಮಿಯಾಗಿಹ ಪರಮಾಮೃತಂಗೆ, ಮಹಾವಾಕ್ಯಂಗಳೆ ಹೆತ್ತರಿವು ಆಗಿ ತನ್ನ ಸ್ವಮಹಿಮೆಯಲ್ಲಿರುವುದರಿಂದ ನೆನಹ ಸತ್ತಿತ್ತು. ನಿಸ್ಸೀಮಂಗೆ ಸೀಮಿತ ನೆನಹು ಸತ್ತಿತ್ತು. ತಾನು ಕಲ್ಪಿತನೆಂಬುದು ನಷ್ಟವಾಗಿರುವಲ್ಲಿ

ಮರುವಿನ ಭಾವದಲ್ಲಿ ತೋರುವ ತನು ಇಂದ್ರಿ ಪ್ರಾಣ ಮನ ಬುದ್ಧಿ ತಾನೆಂಬ ನೆನಹು ಸತ್ತಿತ್ತು. ಇತ್ತ ಅರುವಿನಲ್ಲಿ ತೋರುವ ಸಾಕ್ಷಿ ಸ್ವಯಂಪ್ರಕಾಶ ಅಸಂಗ ಪ್ರತ್ಯಗಾತ್ಮ ನಾನೆಂಬ ನೆನಹು ಸತ್ತಿತ್ತು ಎಂದು ಹೇಳಿದೆ.

ಭ್ರಾಂತಿ ಬೆಂದಿದೆ ಭಾವಕ್ಕಗಮ್ಯವಾದ ಘನವೆ ತನ್ನಿರುವೆಂದರಿದ ಮಹಾಂತನ ಸಕಲ ಭಾವರೂಪ ಭ್ರಾಂತಿ ಬೆಂದಿದೆ. ಆತಂಗೆ ಅರಿತೆ ಅರಿಯೆನೆಂಬುದು ಬೆಂದಿದೆ. ಅಳಿದೆ ಉಳಿ ದೆನೆನ್ನುವ ಭ್ರಾಂತಿ ಬೆಂದಿದೆ. ತತ್ವ ಅತತ್ವವೆಂಬ ವಿವೇಕರೂಪ ಭ್ರಾಂತಿ ಬೆಂದಿದೆ. ಅಂತರ್ಮುಖ, ಬಹಿರ್ಮುಖವೆಂಬ ಭ್ರಾಂತಿ ಬೆಂದಿದೆ. ಜೀವ ಪರಮೈಕ್ಯವೆಂಬ ಭ್ರಾಂತಿಯು ಬೆಂದಿದೆ. ಕೂಡಿದೆ ಅಗಲಿದೆನೆನ್ನುವ ಭ್ರಾಂತಿ ಬೆಂದಿದೆ. ನಾಹಂ ಕೋಹಂ ಸೋಹಂ ಚಿದಹಂ ಎಂಬ ಭ್ರಾಂತಿ ಬೆಂದಿದೆ. ಮಿಗೆ ಮಿಗೆ ಮೀಸಲುವಾಗಿಹ ತನ್ನಿರುವೆ ನಿಜವೆಂದ ರಿದ ನಿಶಬ್ದವೇದಿಗೆ ಶಬ್ದವೆ ಸೂತಕವಾಗಿಪ್ಪವು ನೋಡಾ. ಇದು ಕಾರಣ ನುಡಿದು ನಿಶಬ್ದ ಬ್ರಹ್ಮವಾಗಿಹ ಘನವಂತ; ಹುರಿದ ಕಾಳು. ಅದು ಉಪಬೋಗಕ್ಕಲ್ಲದೆ ಜನ್ಮತಾಳುವುದಕ್ಕಲ್ಲ, ಹಾಗೆ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂಬ ತ್ರಿವಿಧಾಂಗ ರೂಪದಿಂ ತೋರಿ ತನ್ನ ಘನಸುಖದಲ್ಲಿ ತಾನಿಹನು.

ಅರುವ ಮರೆಯಿತ್ತು : ಸಾಮಾನ್ಯ ಅರುವು ಆಗಿಹ ನಾನಿದ್ದೇನೆನ್ನುವುದು ಮರೆತು ಹೋಗಿದೆ. ನಾನು ಜೀವನಿದ್ದೇನೆ, ಹುಟ್ಟಿದ್ದೇನೆ. ಬಾಲ್ಯ ಯೌವ್ವನ, ಮುಪ್ಪು, ಸೊಕ್ಕುವಿಕೆ, ಸೊರಗುವಿಕೆ ಮರಣವುಳ್ಳವನು. ಸತ್ಕರ್ಮಿ, ದುಷ್ಕರ್ಮಿ, ಭೋಗಿ ತ್ಯಾಗಿ. ನಾನೆ ಕರ್ತೃ, ನಾನೆ ಭೋಕ್ತೃವೆಂಬ ಕಲ್ಪಿತ ಅರಿವು ಮರೆಯಿತ್ತು. ನಾನು ಸಾಕ್ಷಿ, ಅಸಂಗ ಕೂಟಸ್ಥ ದೃಕ್ ಸಚ್ಚಿದಾನಂದ ನಿತ್ಯ ಪೂರ್ಣನೆಂಬ ಅರಿವು ಮರೆಯಿತ್ತು. ಅಖಂಡ ಅಪಾರ ಅದ್ವಿತೀಯ ನೆಂಬ ಅರುವು ಮರೆಯಿತ್ತು. ಕುರುಹು ಕೆಟ್ಟಿತ್ತು: ರೂಪಾರೂಪವೆಂಬುದು ಕೆಟ್ಟಿರುವಲ್ಲಿ ಅಂಡಜ, ಪಿಂಡಜರೂಪಿ ಬ್ರಹ್ಮಾಂಡವು ಕೆಟ್ಟಿತ್ತು. ಅಲ್ಲಿ ನರರು, ಸುರಾಸುರರು, ಮನು, ಮುನಿಗಳು, ದೇವತಾಗಣ, ರುದ್ರಗಣ, ಪ್ರಮಥಗಣರೆಂಬುದ ಕೆಟ್ಟಿತ್ತು. ಅಲ್ಲಿ ಅಜ್ಞಾನಿಗ ಳೆಂಬುದಿಲ್ಲ, ಜ್ಞಾನಿಗಳೆಂಬುದಿಲ್ಲ, ಸಾಧಕರಿಲ್ಲ, ಸಿದ್ಧರಿಲ್ಲವಾದ್ದರಿಂದ ಕುರುಹು ಕೆಟ್ಟಿತ್ತು. ಲಿಂಗಲಿಂಗವೆಂಬ ಕುರುಹೆ ಕೆಟ್ಟು ಹೋಗಿರುವಲ್ಲಿ ಅಂಗಾಂಗದಿಂದ ಕಾಣಿಸಿಕೊಳ್ಳುವ ಕುರುಹು ಕೆಟ್ಟುದೇನಾಶ್ಚರ್ಯ ? ಲಿಂಗವರಿತ ಸರ್ವಾಂಗ ಲಿಂಗ ಮರುವಿಗೆ ಕುರುಹುವ ತರದು. ಸಕಲವು ತಾನಾಗಿಹ ಘನಲಿಂಗಕ್ಕೆ ಲಕ್ಷಣವಾವುದು, ಲಕ್ಷ್ಯವಾವುದು, ಘನಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿದ್ದ ಮಹಾಂತಂಗೆ ಕುರುಹು ಇಲ್ಲ, ಕೂನವೂ ಇಲ್ಲ, ಇಲ್ಲ ಇಲ್ಲವೆಂಬುದು ಇಲ್ಲ ಮಾಡಿದ ಮಹಾಂತನ ದಿವ್ಯ ದೃಷ್ಟಿಗೆ ಕುರುಹು ಕೆಟ್ಟುದು ಏನಾಶ್ಚರ್ಯ.

ಗತಿಯ ಅರಸಲುಂಟೆ, ಮತಿಯ ಅರಸಲುಂಟೆ : ಚಿದ್ ಬಯಲಿಗೆ ಗತಿ ಹುಡುಕಬಹುದೆ ? ಅಲ್ಲಿ ಪವಿತ್ರ, ಅಪವಿತ್ರವೆಂಬ ಸೀಮಿತ ಉಂಟೆ ? ಪುಣ್ಯರುಗಳು, ಪಾಪಿಗಳು ಉಂಟೆ ? ಸತ್ಯಜ್ಞಾನಾನಂದವೆ ತಾನಾಗಿಹ ಘನವಂತನಿಗೆ ಗತಿ ಮತಿ ಹುಡಕಲುಂಟೆ ? ಮರವರುವು ಹುಡಕಲುಂಟೆ ? ಅರಿಯದರುವಿಂಗೆ ಅದಕ್ಕಾವಗತಿ, ಅದಕ್ಕಾವ ಮತಿ ಉದಯಾಸ್ತ ಕಾಣದ ಸ್ವಯಂಜ್ಯೋತಿಗೆ ಗತಿ ಆವುದು, ಮತಿ ಆವುದು ?

ಅಂಗವೆಲ್ಲ ನಷ್ಟವಾಗಿ ಲಿಂಗ ಲೀಯವಾಯಿತ್ತು. ಕಂಗಳಂಗದ ಕಳೆಯ ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ: ಕಲ್ಪಿತದಿಂದುಕ್ತವಾದ ಅಂಗವು ತೋರುವುದರಿಂದ ಲಿಂಗವು ಅವಶ್ಯವು. ತ್ಯಾಗಾಂಗ ಯೋಗಾಂಗ ಭೋಗಾಂಗವೆಂಬಿವು ಕಲ್ಪಿತನ ಕಂಗಳಂಗದ ಕಳೆಯ ಬೆಳಗಿನ ಭಂಗವೆಂದು ತಿಳಿದು ಈ ಕಲ್ಪಿತನು ನಷ್ಟವಾದಲ್ಲಿ ಅವನ ಅಂಗಾಂಗಗಳೆಲ್ಲವು ನಷ್ಟ ವಾಗಿ ಈ ಲಿಂಗವೆಂಬುದು ತನ್ನೊಳ ಅಡಕವಾಗಿತ್ತು ಆಗ ದಿವ್ಯದೃಷ್ಟಿ ಪ್ರಜ್ವಲಿಸಿ ಇದು ಸ್ವಯಮೇವ ದೃಷ್ಟಿ ಅನುಪಮ ದೃಷ್ಟಿ ಬೆಳಗುಳ್ಳದಾಗಿರುವಲ್ಲಿ ಪ್ರಕಾಶಿತ, ಪ್ರಕಾಶಕವೆಂಬ ಕಂಗಳಂಗದ ಕಳೆಯ ಬೆಳಗಿನ ಭಂಗ ಹಿಂಗಿರುವಲ್ಲಿ ಇನ್ನೇನಿನ್ನೇನು ನುಡಿಗಿಂಬಿಲ್ಲ.

34

**ಅರಿವಿನ ಕುರುಹಿದೇನೊ ? ಒಳಗೆ ಅನುಮಿಷ ನಂದಿನಾಥನಿರಲು ?**
**ಪೂಜಿಸುವ ಭಕ್ತನಾರೊ ? ಪೂಜೆಗೊಂಬ ದೇವನಾರೊ ?**
**ಮುಂದು ಹಿಂದು, ಹಿಂದು ಮುಂದಾದಡೆ,**
**ಗುಹೇಶ್ವರಾ ನೀನು ನಾನು, ನಾನು ನೀನಾದೊಡೆ ?** ॥300 ॥

**ತಾತ್ಪರ್ಯ**: ಅರಿವಿನ ಕುರುಹಿದೇನೊ ? : ಹಿರಿಮೆ, ತನಗೆ ತಾನೆ ಪ್ರಶ್ನಿಸಿಕೊಂಡನೆ ? ಅಹುದು ಪ್ರಭು ಹೃದಯ ಅರು ಹೃದಯ. ಆವುದೆ ಆಗಲಿ ತನ್ನ ಅರು ಹೃದಯದ ವರೆಗಲ್ಲಿಗೆ ತಿಕ್ಕಿ ನೋಡುವ ಪರೀಕ್ಷಿತ. ಗುರು ಕರುಣಿಸಿದ್ದೆ ಇರಲಿ ಆರದೆ ಇರಲಿ ಅದನ್ನು ಪರಿಶೋಧಿಸುವುದು ಆ ಮಹಾಂತನ ಕರ್ತವ್ಯ. ಭಾವಿಕರೆ ಇರಲಿ, ಆಸ್ತಿಕರೆ ಇರಲಿ ಅರ್ಚಕರಿರಲಿ ವಿರತಿಗಳಿರಲಿ, ಗೃಹಸ್ಥರಿರಲಿ ಜಿಜ್ಞಾಸುಗಳಿರಲಿ ಮುಗ್ಧ ಅಂಧ ಶ್ರದ್ಧೆಯುಳ್ಳವರೆ ಇರಲಿ, ಇವರು ಬಹಳಷ್ಟು ಇದ್ದಾರೆ. ಗುರು ಆವುದೆ ಕೊಡಲಿ, ಬೋಧಿಸಲಿ ಅದನ್ನು ನಂಬುವ ಭಾವಿಕರು ಬಹಳ ಇಹರು. ಗುರು ಘನ ಆರಿಗನ್ನಬೇಕು ? ಲಿಂಗ ಘನ ಆವುದೆಂದು ತಿಳಿವುದು ಎಂಬರಿವು ಬಹು ಜನರಿಗೆ ಇಲ್ಲದಿ ರುವುದರಿಂದ ಪ್ರಭುವಿನಂತೆ ಅರುವಿನ ಕುರುಹಿದೇನೋ ಎಂದು ತನಗೆ ತಾನೆ ಪ್ರಶ್ನಿಸಿ ಕೊಂಡವರು ಸಿಕ್ಕುವದು ವಿರಳ.

ಅರುವಿನ ಕುರುಹಿಂಗೆ ಕೆಲಬರು ಪೂಜಾಲಿಂಗವ ಮಾಡಿ ಪೂಜಿಸುತ್ತಿಹರು. ಕೆಲಬ ರು ಶಿವನೆಂದು, ಪ್ರಕಾಶನೆಂದು ಅರುವಿನ ಕುರುಹೆಂದು ಚಿನ್ಮುದ್ರೆ ಎಂದು, ಚಿತ್ ಪ್ರಕಾಶ ವೆಂದು, ಅದ್ವೈತ ಶಿಶುವೆಂದು, ಅನುಪಮ ಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗ ವೆಂದು ಸಂಬೋಧಿಸಿಹರು. ಪ್ರಭುದೇವ ಅರುವ ಅರಿಯ ಹೋದ ಘನವಂತ. ಈ ಮಹಾಂತ ಅರುವೆನಲಿಲ್ಲ, ಅರುವಿನ ಕುರುಹು ಎನಲಿಲ್ಲ, ಲಿಂಗ ಲಿಂಗ ಎಂದು ಹಲುಬ ಲಿಲ್ಲ, ಭಾವಿಸಲಿಲ್ಲ, ಚಿಂತಿಸಲಿಲ್ಲ . ಅದು ತನ್ನೊಳಗೆ ಕಂಡು ಅದುವೆ ಆಗಿಹನು.

ಪ್ರಭು, ಸುಜ್ಞಾನಭರಿತ. ಅನಿಮಿಷ ದೃಷ್ಟಿ, ತನ್ನದಾದ ದೃಷ್ಟಿ, ಲಿಂಗ ತಾನು ಒಂದಾದ ದೃಷ್ಟಿ, ಈ ದಿವ್ಯ ದೃಷ್ಟಿಗೇನನ್ನಬೇಕು. ಹೇಳ ಹೋದಡೆ ಮೌನದೃಷ್ಟಿ, ಆವು ದನ್ನು ನೋಡ ಹೋಗಿತ್ತೇ ಅದುವೆ ಆಗಿ ಅದರೊಳ ಲೀಯವಾಗಿ, ರೆಪ್ಪೆ ಬಡಿಯದ ದೃಷ್ಟಿ, ಅನಿಮಿಷ ತಾನಾದ ದೃಷ್ಟಿ, ಓಹೋ ! ಇದೆಂಥ ಕಂಗಳು ? ಕಂಗಳ ದೃಷ್ಟಿ ಕಂಗ

ಳಂಗದಲ್ಲಿ ಲಿಂಗ ನಿವಾಸ. ಇದು ಉಪಮಿಸದ ನಿವಾಸ, ಕಂಗಳು ತುಂಬಿ ಲಿಂಗವಾಗಿಹ ದೃಷ್ಟಿ, ಇವು ಲಿಂಗ ನೋಡ ಹೋಗಿ ಅನಿಮಿಷವಾಯಿತೆ ?

ತಮ್ಮ ಪೂರ್ವಸ್ವಭಾವ ಮರೆತು ಅಪೂರ್ವವಾದವೆ ? ಈ ಘನಲಿಂಗವ ನೋಡಿ ನೋಡದ ನೋಟವಾಯಿತೆ ? ಈ ನೋಟ ನಿಜದಲ್ಲಿರ್ದ ನಿಬ್ಬೆರಗಿನ ನೋಟ. ಹೃದಯ ನೋಡುವುಡೆ ಘನಾನಂದದಲ್ಲಿ ಲೀಯವಾದ ಹೃದಯ. ಅಕ್ಷಯ ಸುಖವ ಸುಖಿಸುವ ಹೃದಯ. ಹೃದಯದೋಳ್ ನ್ಯಸ್ತವಾಗಿಹ ಮುನ್ನ ಮುನ್ನಲಾದ ಘನವ ಪ್ರಜ್ವಲಿಸುವ ಹೃದಯ. ಇದು ತನ್ನೊಳ ತಾನಾಗಿ ಕಂಡ ಗುರುಲಿಂಗ. ಗುರುವಿಂಗೆ ಗುರುವಾಗಿ ಗುರು ಕಂಡ ಅನಿಮಿಷ. ಲಿಂಗಕ್ಕೆ ಲಿಂಗವಾಗಿ ಲಿಂಗ ಘನವ ಕಂಡ ನಂದಿನಾಥ, ಗುರು ತಾನೆ ಲಿಂಗ ತಾನೆ ಆಗಿ ಕಂಡ ಪ್ರಭುವಿಗೆ ಅರುವಿನ ಕುರುಹು ಹೇಗೆ ಘನವುಳ್ಳದ್ದಾಗಬೇಕು ? ಹೆತ್ತರಿವು ನಿಜದಿರುವು ಆಗಬಹುದೆ ?

ಗುರುಕಾರುಣ್ಯವೆಂಬುದು ತಾನಾರೆಂದರಿಯುವ ಸುಜ್ಞಾನ, ಸುಜ್ಞಾನವೆ ಕರಸ್ಥಲ. ಸುಜ್ಞಾನದಿಂ ಒಳಹೊರಗೆನ್ನದೆ ಪ್ರಜ್ವಲಿಸುವದೆ ಅನುಪಮ ಲಿಂಗ. ಈ ಘನಲಿಂಗವ ತಿಳಿದು ಘನಕ್ಕೆ ಘನವಾಗಿ ತನ್ನ ನೋಡಿದುದೆ ಗುರು ಕಾರುಣ್ಯದ ಸಫಲತೆ. ಗುರು ಕಾರಣ್ಯದಿಂದ ಮರವು, ಮಾಯೆ, ಪ್ರಪಂಚ, ಕರ್ಮಪಾಶ ನಷ್ಟವಾಗಿ ಅಚಿಂತ್ಯಾತ್ಮನಾಗಿಹುದೆ ಇದರ ಮೂಲ ಗುರಿಯಾಗಿದೆ. ಎಲ್ಲಿಯವರೆಗೆ ಅಚಿಂತ್ಯತ್ವ ತಿಳಿಯುವುದಿಲ್ಲ ಅಲ್ಲಿಯವರೆಗೆ ತಾನು ಅಜಾತ, ವಿಶ್ವವು ಅಜಾತವು ಎಂಬುದು ತನ್ನಿಂದ ತನಗೆ ತಿಳಿಯುವ ತನಕ ಗುರು ಕಾರುಣ್ಯದ ಹಿರಿಮೆ ತಿಳಿಯದು. ತನ್ನ ಘನತ್ವವು ತನಗೆ ಗೊತ್ತಾಗದು. ಗುರು ಕಾರುಣ್ಯಮಯರೆಂದರೆ ಶರಣ ಶರಣೆಯರು. ಅವರ ಹೃದಯ ಅಜಾತ ತತ್ವ ಅಳವಡಿಸಿಕೊಂಡು ತಾವು ಅದುವೆ ಆದವರು. ಅವರದು ಅಖಂಡ ದೃಷ್ಟಿ, ಅಖಂಡ ಭಾವ, ಅಖಂಡ ಜ್ಞಾನ, ಅಖಂಡಾನಂದವಾಗಿರುವುದರಿಂದ ಖಂಡ ದೃಷ್ಟಿ ಅಲ್ಲಿ ನಾಚಿ ಶರಣು ಹೋಗಿದೆ.

ಸದ್ಯದ ಸಮಾಜವು ಅಖಂಡ ದೃಷ್ಟಿ, ಭರಿತ ಭಾವ ಕಳೆದುಕೊಂಡು ಪರಿಭಿನ್ನರಾಗಿ ಲಿಂಗವಂತ ಸಮಾಜ ಪೂಜ್ಯ ಪೂಜಕ ಭಾವದಿಂದ ವರ್ತಿಸುವುದು ಕಂಡು ನಾಚುವ ಪ್ರಸಂಗವಾಗಿದೆ. ಇದನ್ನು ಕಂಡೆ ಪ್ರಭು ಒಳಗೆ ಅನಿಮಿಷ ನಂದಿನಾಥನಿರಲು ಪೂಜಿಸುವ ಭಕ್ತರಾರು ? ಪೂಜೆಗೊಂಬದೇವನಾರು ಎಂದು ಪ್ರಶ್ನಿಸಿದ. ತಾನೆ ಅಖಂಡಲಿಂಗವಾದುದು ಮರೆತು, ಭೇದ ಜ್ಞಾನಿಯಾಗಿ ಪೂಜ್ಯ ಪೂಜಕವೆಂಬ ಭಾವವ ಒಪ್ಪಿಕೊಂಡು ಲಿಂಗಾರ್ಚನೆ ಮಾಡುವವರು ಇವರು ಕೈಯಲ್ಲಿ ಜ್ಯೋತಿ ಹಿಡಿದು ಕತ್ತಲೆ ಅರಿಸಿದಂತಾಗಿದೆ. ಪರುಷ ಹಿಡಿದು ಕೂಲಿ ಮಾಡಲು ಹತ್ತಿದಂತಾಗಿದೆ. ಕುಬೇರನಿಗೆ ದರಿದ್ರತ್ವ ಬಂದಂತಾಗಿದೆ. ಇದರ ಪರಿಹಾರ ಆರು ಮಾಡುವುದು ?

ಬಸವಾದಿ ಪ್ರಮಥರಂತೆ ಗುರು ಕರುಣಿಸಿದ ಲಿಂಗವ ಅರಿದರಿದು ನೋಡುವುದು ಆಗ ತನ್ನೊಳಗೆ ಅನಿಮಿಷ ನಂದಿನಾಥನ ದರ್ಶನ, ಈ ದರ್ಶನದ ಲಾಭವಾದಾಗ ಪೂಜ್ಯ ಪೂಜಕವೆಂಬ ಭೇದ ಭಾವದ ಭೂತ, ಇದು ಬಹುದಿವಸದ ಭೂತ; ಆಗ ಹೋಗುವುದು. ತಾನು ಎಲ್ಲಿಯವರೆಗೆ ಲಿಂಗಕ್ಕೆ ಲಿಂಗವಾಗಿ, ತನ್ನ ನೋಡುವನು ಆಗ ಭೇದ ಭಾವ ನಷ್ಟವು. ನಾನು ಮುಂದು ಎಂದಡೆ ಹಿಂದು, ಹಿಂದು ಎಂದಡೆ ಮುಂದು, ಗುಹೇಶ್ವರ ನೀನು ನಾನು, ನಾನು ನೀನಾದಡೆ, ಆಗ ತಾನಾಗಿಯ ಪೂಜ್ಯ ಪೂಜಕದ ಹಾವಳಿ

ನಿವೃತ್ತವಾಗುವದು ಮುಂದು ಎಂದಡೆ ಹಿಂದು, ಹಿಂದು ಎಂದಡೆ ಮುಂದು, ಗುಹೇಶ್ವರ ನೀನು ಎಂದಡೆ ನಾನು, ನಾನು ಎಂದಡೆ ನೀನು. ಹಿಂದು ಮುಂದು ಎಂಬುದು ಕರಗಿ ತೆರಹಿಲ್ಲದ ಘನವಾಗುವುದು. ಹಿಂದು ತಾನೆ, ಮುಂದು ತಾನೆ, ಪೂರ್ವ ತಾನೆ, ಅಪೂರ್ವ ತಾನೆ ಎಂದೆಂದೂ ನಿರಂತರ ಮಂಗಲಮಯದಿರುವು ತಾನು ಎಂಬುದು ತನಗದು ವಿದಿತ ವಾಗಿ ಪೂಜೆಗೊಂಬ ದೇವನಾಗಲಿಲ್ಲ, ಪೂಜಿಸುವ ಭಕ್ತನಾಗಲಿಲ್ಲ ; ಗುಹೇಶ್ವರನೆಂಬುದು ನಾ ನೀನೆಂಬುದಕ್ಕೂ ತೆರಹಿಲ್ಲದ ಘನವಾಯಿತ್ತು. ತೆರಹಿಲ್ಲದ ಜ್ಞಾನ ಘನವೆಂಬ ಅರಿವು ತನ್ನೊಳ ಬೆಳಗುವುಡೆ, ಸೀಮಿತ ಭಾವ ಭಕ್ತಿ ನಷ್ಟವಾಗಿ ನಿಸ್ಸೀಮತ್ವವು ಸಿದ್ಧವಾಯಿತ್ತು. ಆಗ ಗುಹೇಶ್ವರನೆಂಬುದು ತನಗಿಂತನ್ಯವಾಗಲಿಲ್ಲ, ನಾನು ಎಂಬುದು ತನಗೆ ನೀನು ಎಂಬುದು ತನಗೆ, ಗುಹೇಶ್ವರನೆಂಬುದು ತನಗೆ, ಇದು ತನ್ನಾಟ ತನ್ನ ಲೀಲೆ. ಒಮ್ಮೆ ನಾನು ಎಂದು ಅಭಿನಯಿಸಿದೆ, ಒಮ್ಮೆ ನೀನು ಎಂದು ಅಭಿನಯಿಸಿದೆ, ಒಮ್ಮೆ ಚಿದಹಮ್ಮಾಗಿ, ಒಮ್ಮೆ ದಾಸೋಹಂ ಆಗಿ, ಸೋಹಂ ಆಗಿ ಅಭಿನಯಿಸಿದರೂ ತಾನೆ. ಏಕೆಂದರೆ ತೆರಹಿಲ್ಲದ ಘನ ತನ್ನಿರುವೆಂದರಿದುದರಿಂದ ಈ ನಾನು, ನೀನು ಲೀಲೆಯಾಯಿತ್ತು. ನಿಜದಿರುವು ತಾನು ತಾನೆಯಾಯಿತ್ತು.

**35**

**ಆನು ನೀನೆಂಬುದು ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ ಇಲ್ಲ.**
**ಇಲ್ಲದ ಇಲ್ಲವೆ ಎಲ್ಲಿಂದ ಬಪ್ಪುದೊ?**
**ಅನುವನರಿದು, ತನುವ ಮರೆದ ಭಾವರಹಿತ ಗುಹೇಶ್ವರ.** ॥ 305 ॥

**ತಾತ್ಪರ್ಯ** : ಆನು ನೀನೆಂಬುದಿಲ್ಲ ? ಇದೇನಾಶ್ಚರ್ಯ ಪೂರ್ವದಲ್ಲಿ ನಾನು ನೀನೆಂಬುದು ಅಷ್ಟು ನಿಜವಾಗಿತ್ತು. ಈಗ ಅಷ್ಟೇ ಸುಳ್ಳಾಯಿತೆ ? ನಾನು ನೀನೆಂದು ಕಾಂಬ ದೃಷ್ಟಿ ಗೇನನ್ನಬೇಕು ? ತನ್ನ ತಾನರಿಯದ ದೃಷ್ಟಿ ಮಾಯಿಕ ದೃಷ್ಟಿ, ನಾನಾಗಿ ಕಂಡಿತು, ನೀನಾಗಿ ಕಂಡಿತು ಇದರಿಂದ ವಿಷಮ ದೃಷ್ಠಿಯುಂಟಾಗಿ ಜ್ಞಾನ ಅಜ್ಞಾನ ವಾಯಿತ್ತು ಇದರಿಂದ ನಾನಾ ವಿಧ ಪ್ರಪಂಚವಾಗಿ ತೋರಿತ್ತು. ಈ ಲೋಕದ ಪ್ರಂಚಚವೆ ಮಾಯಿಕ ನೋಡಾ. ನಾನು ನೀನೆಂಬುದು ಸತ್ತರೆ ಜ್ಞಾನ ಅಜ್ಞಾನ ಸತ್ತಿತ್ತು ಈ ಜ್ಞಾನ ಅಜ್ಞಾನ ಸತ್ತು ನಾನಾ ವಿಧವಾಗಿ ತೋರುವ ಪ್ರಂಪಚವು ಸತ್ತಿತ್ತು. ಇದು ಕಾರಣ, ನಾನೆಂಬ ಅಹಂಭಾವ ಇಲ್ಲವಾಗಬೇಕು. ನೀನೆಂಬ ನಿರಹಂಭಾವ ಇಲ್ಲವಾಗಬೇಕು. ಇದು ಇಲ್ಲಾಗುವದು ಆವಾಗ ? ತಾನಾರೆಂದು ಅರಿತಾಗ, ಎಲ್ಲಿಯವರೆಗೆ ತಾನಾರೆಂದು ಅರಿಯುವದಿಲ್ಲ ಈ ನಾನು ನೀನು ನಾನಾವಿಧದಲ್ಲಿ ತೋರುತ್ತದೆ.

ಅವಿದ್ಯಾ ರೂಪದಲ್ಲಿ ತೋರುವ ನಾನು ನೀನು ಬೇರೆ, ವಿದ್ಯಾರೂಪದಲ್ಲಿ ತೋರುವ ನಾನು ಬೇರೆ, ವಿದ್ಯಾವಿದ್ಯೆ ರೂಪದಲ್ಲಿ ತೋರುವದು ಬೇರೆ, ಈ ನಾನು ನೀನು ವಿಶ್ವರೂಪವಾಗಿದೆ. ಇದುವೆ ಪೂಜ್ಯ, ಪೂಜಕ, ರೂಪವಾಗಿದೆ ಇದುವೆ ಜ್ಞಾನರೂಪವಾಗಿದೆ ಬಂಧನ ರೂಪವಾಗಿದೆ, ಮೋಕ್ಷ ರೂಪಾಗಿದೆ, ಬದ್ಧನಾಗಿದೆ ಬುದ್ಧನಾಗಿದೆ ಗುರುವಾಗಿದೆ

ಶಿಷ್ಯನಾಗಿದೆ ಭವಿಯಾಗಿದೆ ಭಕ್ತನಾಗಿದೆ, ಅರಿತವನಾಗಿದೆ ಅರಿಯದವನಾಗಿದೆ ಈ ನಾನು ನೀನೆ ದೇಹೋಹಂ ಆಗಿದೆ ಸೋಹಂ ಆಗಿದೆ. ಚಿದಹಂ ಆಗಿದೆ ದಾಸೋಹಂ ಆಗಿದೆ. ನಾನು ನೀನೆನ್ನುವ ಆಡಳಿತ ಪ್ರಪಂಚದಲ್ಲಿ ಅಷ್ಟೇ ಅಲ್ಲ. ಪರಮಾರ್ಥದಲ್ಲಿ ಇದರಾಡಳಿತ ನಡೆಯುವುದು. ಇದು ಶಬ್ದ ಸಂಭ್ರಮಕ್ಕೆ ಬಹು ಮೆಚ್ಚಿದೆ. ಇದು ಕಾರಣ ಪ್ರಥಮ ವೇದಿಗಳು ಇದರ ಗುಲಾಮರು ; ಮತಿವಂತರು ಇದರ ಗುಲಾಮರೆ ! ಶೃತಿವಂತರೆಲ್ಲ ಇದರ ಕೈಯಾಳುಗಳು, ಆರು ಲಿಂಗಸಕೀಲ ಸಂಯೋಗ ವರ್ಮಸ್ಥಲ ವರಿತಿಹರು ಅಲ್ಲಿ ನಾನು ನೀನೆಂಬುದು ಸತ್ತಿದೆ. ಇಲ್ಲವಾಗಿದೆ.

ಪೂರ್ವದಲ್ಲಿ ಗುರು, ಶಿಷ್ಯ,ಭಕ್ತ, ಜಂಗಮ, ಅವರ ಬೋಧ ಭೋಧಕತ್ವ ಅಷ್ಟೆ ಸತ್ಯವಾಗಿತ್ತು ಈಗ ಅಷ್ಟೆ ಇಲ್ಲವಾದುದು. ಇದೆಷ್ಟು ಆಶ್ಚರ್ಯ ತನ್ನ ತಾನರಿತಲ್ಲಿ ತಾನು ಗುರುವೆಂಬುದಿಲ್ಲ ನೀನು ಶಿಷ್ಯನೆಂಬುದಿಲ್ಲ, ತಾನು ಭಕ್ತನೆಂಬುದಿಲ್ಲ ನೀನು ಜಂಗಮ ನೆಂಬುದಿಲ್ಲ, ಅಂಗನೆಂಬುದಿಲ್ಲ ಲಿಂಗ ನೆಂಬುದಿಲ್ಲ. ಸ್ವಾಮಿ ಇಲ್ಲ ಸೇವಕನಿಲ್ಲ. ಪೂಜ್ಯನಿಲ್ಲ, ಪೂಜಕನಿಲ್ಲ, ನೀನು ಸರ್ವಜ್ಞನೆಂಬುದಿಲ್ಲ ನಾನು ಅಲ್ಪಜ್ಞ ನೆಂಬುದಿಲ್ಲ ವ್ಯಾಪ್ತ ನೆಂಬುದಿಲ್ಲ, ವ್ಯಾಪಕ ನೆಂಬುದಿಲ್ಲ ನಾನು ಪ್ರತ್ಯಗಾತ್ಮನೆಂಬುದಿಲ್ಲ ನೀನು ಪರಮಾತ್ಮನೆಂಬುದಿಲ್ಲ ಇಲ್ಲ ಇಲ್ಲವೆನ್ನುವ ಕಲ್ಪಿತ ಪುರುಷ ಮೊದಲು ತಾನಿಲ್ಲ, ಇಲ್ಲದ ಕಲ್ಪಿತ ಪುರುಷ ನುಂಟಾಗಿ ಪ್ರವೃತ್ತಿ ನಿವೃತ್ತಿ, ಇದ್ದವುಗಳಾಗಿದ್ದವು. ಉಪಕ್ರಮ, ಉಪಸಂಹಾರ ಇದ್ದವುಗಳಾಗಿದ್ದವು. ಅಭ್ಯಾಸ ಫಲ ಇದ್ದವುಗಳಾಗಿದ್ದವು. ಇಲ್ಲದ ಕಲ್ಪಿತ ಪುರುಷ ತಾನೆ ಇಲ್ಲವಾಗುವುಡೆ ಇವನಿಂದ ತೋರುವ ಅಜ್ಞಾನವೂ ಇಲ್ಲ ಜ್ಞಾನವೂ ಇಲ್ಲ, ಅಜ್ಞಾನ ದೃಷ್ಟಿ ಇಲ್ಲ ಜ್ಞಾನದ ದೃಷ್ಟಿ ಇಲ್ಲ. ತಾನರಿದ ಬಳಿಕ ಏನೂ ಇಲ್ಲ ಕಲ್ಪಿತ ಪುರುಷನೂ ಇಲ್ಲ ಅವನ ಮರವೂ ಇಲ್ಲ ಅರುವು ಇಲ್ಲ ಅವಿದ್ಯೆಯು ಇಲ್ಲ ವಿದ್ಯೆಯು ಇಲ್ಲ ಇವುಗಳ ಕಾರ್ಯರೂಪದಲ್ಲಿ ಕಾಣಿಸುವ ಮಾಯಿಕ ಇಲ್ಲ, ಭಾವವಿಲ್ಲ ಅಭಾವ ವಿಲ್ಲ ಬೋಧವಿಲ್ಲ ಅಬೋಧವಿಲ್ಲ ಬೋಧಾಬೋಧ ಮಿಶ್ರವೂ ಇಲ್ಲ ಈ ಇಲ್ಲವೆಂಬುದು ಇಲ್ಲವೆಂದು ಹೇಳಿಹರು.

ಇಲ್ಲದುದು ಇಲ್ಲದುದು ಎಲ್ಲಿಪ್ಪುದೊ? ಬಂಜಿ ಮಗ ಇಲ್ಲದುದು. ಇಲ್ಲುದುದು ಎಲ್ಲಿಪ್ಪುದೊ? ಮೊಲದ ಕೋಡು, ಗಗನ ಕುಸುಮ ಇಲ್ಲುದುದು ಇಲ್ಲಿದುದು ಎಲ್ಲಿಪ್ಪುದೊ ? ಇದ್ದುದಾದಲ್ಲಿ ಹೇಳಬಹುದು, ಇಲ್ಲಾದುದು ಇಲ್ಲಾದುದು ಎಲ್ಲಿಪ್ಪುದೊ ಎಂದು ಪ್ರಶ್ನಿಸಿದಲ್ಲಿ ಹೇಳಲು ಬರುವದಿಲ್ಲ. ಗಗನ ಕುಸುಮ ಮೊದಲೆ ಇಲ್ಲಾದುದು, ಇಲ್ಲವೆಂದಲ್ಲಿ ಕೆಳಗೂ ಇಲ್ಲ ಮೇಲೆಯೂ ಇಲ್ಲ ಮಧ್ಯದಲ್ಲಿಯೂ ಇಲ್ಲ, ಇಲ್ಲದುದು ಇಲ್ಲವೆ ಇಲ್ಲ ಹೇಗೊ, ಹಾಗೆ ನಾನು ನೀನು ಇದು ಕಲ್ಪಿತ. ಇದು ಬಂಜಿ ಮಗ ಇವರ ತಾಯಿ ಬಂಜಿ. ಬಂಜಿ ಎಂಬುದು ಮರವು. ನಾನಾರು, ನೀನಾರು ಎಂದು ಅರಿಯದಿದ್ದುದೆ ಮರವು. ಎಲ್ಲಿ ಮರವು ಇದೆ ಅಲ್ಲಿಯೆ ನಾನು ನೀನು ಇವರ ನಿವಾಸ. ಇದು ಕಾರಣ ಮರವೆಂಬ ತಾಯಿ ಇವಳ ಮಕ್ಕಳೆ ನಾನು. ನೀನು ಅಂದು ಇಲ್ಲ ಇಂದು ಇಲ್ಲ ಎಂದೆಂದೂ ಇಲ್ಲ ಇಲ್ಲಾದುದು ಇಲ್ಲಾದುದು ಎಲ್ಲಿಪ್ಪದೊ ? ಪ್ರವೃತ್ತಿ ನಿವೃತ್ತಿ ಇಲ್ಲದುದು ಗುರು ಶಿಷ್ಯ ಇಲ್ಲದುದು ಈ ಇಲ್ಲೆಂಬುದು ಇಲ್ಲದುದು, ಇಲ್ಲದುದು ಎಲ್ಲಿಪ್ಪುದು.

ಅಂಖಡಿತ ಘನ ಪರಿಪೂರ್ಣವೆ ತನ್ನಿರುವು ಎಂದರಿದ ಮಹಾಂತ ಶಬ್ದಮುಗ್ಧ ಏನೊಂದುಸರಲು ಎಡೆಗೊಡದ ಘನ. ಪರತತ್ವ, ಅಲ್ಲಿ ನಾನು ಇಲ್ಲ ನೀನು ಇಲ್ಲ,

ತಾನಿಲ್ಲ ತಾನರಿದ ಬಳಿಕ ಏನೂ ಇಲ್ಲ, ಈ ಇಲ್ಲೆಂಬು ಇಲ್ಲದುದು ಇಲ್ಲದುದು ಎಲ್ಲಿಪ್ಪದು, ಎಂದು ಶಬ್ದ ಸಂಭ್ರಮತ್ವ ಅಲ್ಲ ಗಳೆಯುತ್ತಿದ್ದಾನೆ.

ಅರುವ ಅರಿದರಿದು ಸ್ವಯ ಸುಖವ ಸವಿದು. ತಾನೆ ತಾನಾಗಿದ್ದುದು ತನ್ನಿಂದ ತನಗೆ ಎದಿತವಾಗಿ ಈ ಶಬ್ದಸಂಭ್ರಮವನ್ನೆ ತಿರಸ್ಕರಿಸುತ್ತಾನೆ, ಪ್ರಥಮ ವೇದ ಇಲ್ಲದುದು ಅತೀತ ಅನಾಗತ ಇಲ್ಲದುದು, ಶೃತಿಗಳು ಇಲ್ಲದುದು ಕಲ್ಪಿತಪುರುಷ ಇಲ್ಲದುದು. ಮರವು ಇಲ್ಲದುದು, ಇವುಗಳೆ ಇಲ್ಲವೆಂದಲ್ಲಿ ಇವರ ಗತಿಯು ಇಲ್ಲ ಮತಿಯು ಇಲ್ಲ. ಇವರೆ ಇಲ್ಲದಿರುವಾಗ. ಇವರಿಗೆ ಆವರಣವಿಲ್ಲ. ಆವರಣವೆ ಇಲ್ಲದಿರುವಾಗ ಅದು ಕಳೆಯುವ ಶೃತಿಗಳು ಇಲ್ಲ, ಇಲ್ಲದುದು ಇಲ್ಲದುದು ಎಂದಲ್ಲಿ ಬಂಜಿಮಗ ಎಲ್ಲಪ್ಪನು, ಕಲ್ಪಿತಪುರುಷ ಎಲ್ಲಿಪ್ಪನು.

ಇಲ್ಲಾದುದಿಲ್ಲಾದುದೆಂದಿಪ್ಪುದು. ಪ್ರಭುದೇವ ನಿವೃತ್ತಿಯ ನಿರಾಳ ನಿರಾಲಂಬದಲ್ಲಿ ನಿಂತ ನಿಜಗುಣ ಸಕಲವನ್ನು ಉಪಸಂಹಾರ ಮಾಡುವ ನಿವೃತ್ತಿನಾಥ, ಬಂಜಿಮಗ ಇಲ್ಲಾದವನು ಎಂದಲ್ಲಿ ಪುನಃ ಅವನು ಹೇಗಿರುವನು ಎಂದು ಕೇಳಿದರೆ ಹಾಸ್ಯಾಸ್ಪದ ವಲ್ಲವೆ ? ಹಾಗೆ ಕಲ್ಪಿತನಾಗಿ ತೋರುವ ಈ ಮಾಯಿಕ ದೃಶ್ಯ. ಅದು ಪ್ರವೃತ್ತಿ ರೂಪವಾದ ಪ್ರಪಂಚದ್ದಿರಲಿ ನಿವೃತ್ತಿ ರೂಪವಾದ ಪರಮಾರ್ಥದ್ದಿರಲಿ. ಇದು ಇಲ್ಲಾದುದಿಲ್ಲಾದುದು ಹೇಗಿದೆ ಎಂದು ಕೇಳಿದರೆ ಗಗನ ಕುಸುಮ ಹೇಗಿದೆ, ಮೊಲದ ಕೋಡು ಹೇಗಿದೆ ಹಾಗೆಯೆ ಎಂದು ಉತ್ತರವ ಶಿಕ್ಕುವದು. ಈ ಗಗನ ಕುಸುಮ, ಮೊಲದಕೋಡು ಎಂದಿಪ್ಪುದು. ಇದುಕಾರಣ ಇಲ್ಲಾದುದಿಲ್ಲಾದುದೆಂದಿಪ್ಪುದು. ಪ್ರಪಂಚ ಪರಮಾರ್ಥರೂಪಿ ಗಗನ ಕುಸುಮ ಮೊದಲೆ ಇಲ್ಲಾದುದಿಲ್ಲಾದುದೆಂದಿಪ್ಪುದೊ ಎಂದು ಹೇಳಿಹರು.

ಅನುವರಿತು ತನುವ ಮರೆದರೆ ಭಾವರಹಿತ ಗುಹೇಶ್ವರ ಬಯಲು. ಇದು ಕಾರಣ ತನ್ನ ಅರಿವುದು, ಸ್ವರೂಪವರಿವುದು, ಅನ್ಯ ಅರಿವುದು ಎಂದು ಹೇಳಿಲ್ಲ, ತನ್ನನ್ನೆ ಅರಿವುದು. ಇಲ್ಲದ ತನುವ ಮರದಡೆ ಭಾವಕ್ಕಗಮ್ಯ ಗುಹೇಶ್ವರ ಬಯಲು ಎಂದು ಹೇಳಿದ್ದಾರೆ.

**36**

**ನೆನೆ ಎಂದಡೆ ಏನ ನೆನೆವೆನಯ್ಯ ?**
**ಎನ್ನ ಕಾಯವೆ ಕೈಲಾಸವಾಯಿತ್ತು,**
**ಮನವೆ ಲಿಂಗವಾಯಿತ್ತು, ತನುವೆ ಸೆಜ್ಜೆಯಾಯಿತ್ತು.**
**ನೆನೆವಡೆ ದೇವನುಂಟೆ ? ನೋಡುವಡೆ ಭಕ್ತನುಂಟೆ ?**
**ಗುಹೇಶ್ವರಲಿಂಗ ಲೀಯವಾಯಿತ್ತು.** ॥ 304 ॥

**ತಾತ್ಪರ್ಯ** : ಪ್ರಭು ನಿಜದಲ್ಲಿರ್ದ ನಿಬ್ಬೆರಗಿನ ನಿರುಪಮ ನಿರಾಳ. ದಿಟವುಳ್ಳವನಿಗೆ ಸಟೆಯು ರುಚಿಸುವುದು ಹೇಗೆ ! ನಿರ್ಮಾಯನಿಗೆ ಮಾಯಿಕವು ಹೇಗೆ ಪ್ರಿಯವಾಗಬಹುದು ? ಅಕಲ್ಪಿತನು ನೆನೆಯುವದಾದರೂ ಏನನ್ನು, ಮರವಿಂಗೆ ನೆನೆವು ಉಂಟು, ಕಾಯ ಉಂಟು, ಕರ್ಮ ಉಂಟು, ವಿಕಾರ ಉಂಟು, ಅಲ್ಲಿ ದೇವನುಂಟು ದೇವನನ್ನು ಪೂಜಿಸುವ ಭಕ್ತನು ಉಂಟು.

ಶರಣ ಅನುಪಮ ಸುಖಿಯಾಗಿರ್ದ ಚಿನ್ಮಯ. ಅಲ್ಲಿ ಭೇದ ಜ್ಞಾನ, ಅಭೇದ ಜ್ಞಾನವೂ ನಿಷ್ಪತ್ತಿಯಾಗಿದೆ. ಅಂತಪ್ಪ ಮಹಾಂತ, ಅರಿಯದವರು ಮಾಡುವ ಪೂಜೆಯನ್ನು ಮಾಡನು. ಇವರಿಗೆ ಷೋಡಶೋಪಚಾರ ಉಂಟು. ಅರ್ಪಿತ ಉಂಟು, ಧ್ಯಾನ, ಧ್ಯೇಯ ಉಂಟು, ಜಪತಪ ಉಂಟು, ಇವರು ತಮ್ಮ ತಾವರಿಯದವರು ಕಾರಣ ತಮಗಿಂತ ನ್ಯವಾದ ದೇವನುಂಟು. ಅವನನ್ನು ಪೂಜಿಸುವ ನೆನೆಯುವ ಭಕ್ತರು ಉಂಟು. ಪೂಜ್ಯ ಪೂಜಕ ಭಾವದಿಂದ ಪೂಜಿಸುವ ಭಕ್ತರು ಬೇರೆ, ದೇವನು ಬೇರೆ, ಶಿವನು ಕೈಲಾಸವಾಸ ಮಾಡಿದವನು. ವಿಷ್ಣು ವೈಕುಂಠದಲ್ಲಿ, ಮುಸುಲ್ಮಾನರು ಮಸೀದಿಯಲ್ಲಿ, ಒಬ್ಬರು ಸಾಕಾರ ವಾಗಿ ಕಂಡಿಹರು, ಇನ್ನೊಬ್ಬರು ನಿರಾಕಾರವಾಗಿ ಕಂಡಿಹರು. ಹಿಂದುಗಳು ಸಾಕಾರನೆಂದು, ಮುಸುಲ್ಮಾನರು ನಿರಾಕಾರನೆಂದು ಭಾವಿಸಿ, ಶೈವೋಪಾಸಕರಿಗೆ ಕೈಲಾಸವೆ ಪರಮಧಾಮವಾ ಯಿತ್ತು. ವೈಷ್ಣವರಿಗೆ ವೈಕುಂಠವೆ ಪರಮಧಾಮವಾಯಿತ್ತು ಇವರುಗಳೆಲ್ಲ ಕೈಲಾಸಕ್ಕೆ ಹೋಗಿ ಶಿವನ ಕಂಡ ಭಕ್ತನಾರು, ವೈಕುಂಠಕ್ಕೆ ಹೋಗಿ ವಿಷ್ಣುವ ಕಂಡ ಭಕ್ತನಾರು, ಎಲ್ಲೆಲ್ಲೂ ನಿರಾ ಕಾರವಾಗಿದ್ದ ದೇವನ ಮಸೀದಿಯಲ್ಲಿ ಕಂಡ ಭಕ್ತನಾರು ? ಇವರ ಭಕ್ತಿ ಭಾವ ನೋಡಿ, ನಿಜವಾದ ದೇವನ ಮಂದಿರವನ್ನು, ದೇವನನ್ನು ತನ್ನನ್ನು ಪರಿಚಯ ಮಾಡಿಕೊಟ್ಟ ಪ್ರಭು.

ಪ್ರಭುವು ಕಾಯವೆ ಕೈಲಾಸ ಮಾಡಿದ, ಮನವೆ ಲಿಂಗ ಮಾಡಿದ, ತನುವೆ ಲಿಂಗದ ಕಾಯಿಯನ್ನಾಗಿ ಮಾಡಿದ, ತಾನೆ ದೇವ, ತಾನೆ ಭಕ್ತ, ತನ್ನೊಳ ತಾನೆ ಲೀಯವಾದ ಹಿರಿ ಮೆಯ ಘನಕ್ಕೆ ಘನವು, ಏಕೆಂದರೆ ಭೇದವಾದಿಗಳು ನೆನೆವ ಮನವೆತ್ತ, ಪ್ರಭುವಿನ ನೆನೆ ಯದ ಮನವೆತ್ತ, ಇವರುಗಳ ಮಲಮಯ ತನುವೆತ್ತ ? ಪ್ರಭುವಿನ ನಿರವಯ ತನು ವೆತ್ತ, ಕೂಡಿದೆವು ಅಗಲಿದೆವು ಎಂಬ ಭಾವಿಕರ ಭಾವವೆತ್ತ ? ಕೂಡದಗಲದ ನಿರ್ಭಾವಿಕ ರೆತ್ತ, ಜ್ಞಾನಾಮೃತವ ಕುಡಿದು ಅಮರರಾಗಿಹ ಶರಣರೆತ್ತ ? ತೀರ್ಥ ಪಾದೋದಕ ಪ್ರಸಾದ ತೆಗೆದುಕೊಂಡು ಮರಣಕ್ಕೊಳಪಟ್ಟ ಭಕ್ತರೆತ್ತ ? ಎತ್ತಣದಿಂದೆತ್ತ ಪ್ರಭು ? ಕಾಯವೆ ಕೈಲಾಸ ಮಾಡಿದ. ಅಪ್ರತಿಮ ಶರಣರ ಕಾಯ ಸುಜ್ಞಾನ ಕಾಯ, ಘನ ಕಾಯ. ಈ ಕಾಯದಿಂದ ಗುರು ದರ್ಶನ, ಲಿಂಗ ದರ್ಶನ, ಜಂಗಮ ದರ್ಶನ, ಪ್ರಸಾದ ದರ್ಶನ ಮೇಲೆ ತನ್ನ ದರ್ಶನ. ಸಕಲವನ್ನು ತನ್ನೊಳಗೆ ಕಾಣಿಸುವ ಕಾಯ, ಸಮರ್ಥಕಾಯ, ಸುದರ್ಶನ ಕಾಯ, ಸುಖರೂಪಿ ಅಕ್ಷಯ ಸುಖದ ಕಾಯ. ಇದಲ್ಲದೆ ಈ ಕಾಯದಲ್ಲಿಯೆ ಗುರು, ಲಿಂಗ, ಜಂಗಮ, ಪ್ರಸಾದ ಉಂಟು, ತಾನು ಉಂಟು, ತನ್ನ ಅಚಿಂತ್ಯ ಸುಖ ಉಂಟು, ಅಲ್ಲಿ ಸಚ್ಚಿದಾನಂದ ರೂಪಿ ಕೈಲಾಸ ಉಂಟು.

ಮನವೆ ಲಿಂಗವಾಯಿತ್ತು, ಮನವೆ ಲಿಂಗ ಮಾಡಿದ ಹಿರಿಮೆ ಪ್ರಭುವಿನದು. ಮರವಿನಿಂದ ಸಂಕಲ್ಪ ವಿಕಲ್ಪಕ್ಕೊಳಗಾಗಿ ಮನಸ್ಸಾಗಿದೆ, ಅರಿವುಡೆ ಕೇವಲ ಜ್ಯೋತಿ, ವರ್ಣಾತೀತವು. ಆವ ಮನವು ಇಲ್ಲದ್ದು ಕಲ್ಪಿಸುವುದು ಬಿಟ್ಟಿದೆ, ಇದ್ದುದನರಿಯ ಹೋಗಿದೆ. ಅದಕ್ಕೆ ತನ್ನ ಮೂಲವಾಗಿಹ ಕೇವಲ ಜ್ಯೋತಿ ದರ್ಶನವಾಗಿ ಅವರ್ಣೀಯವಾಗಿ ಅನುಪ ಮ ಲಿಂಗವಾಗಿದೆ. ಪ್ರಭುವಿನ ಮನ, ಇಲ್ಲದ್ದು ಕಲ್ಪಿಸಹೋಗಲಿಲ್ಲ, ಇದ್ದುದನರಿದು ನಿರಂತ ರವಾಗಿರುವ ಮಂಗಲಮಯ ತತ್ವವಾದುದರಿಂದ ಮನವೆ ಲಿಂಗವಾಯಿತ್ತು, ಆಶ್ಚರ್ಯ ಇದ್ದುದೊಂದೆ ಘನವು ಅರಿಯಹೋದವರಿಗೆ ಸಕಲವು ಲಿಂಗಮಯವಾಗಿ ಪ್ರಜ್ವಲಿಸಿದೆ, ಅರಿಯದಿರೆ ಮನವಾಗಿ ಕಾಣಿಸಿತ್ತು.

*ತನುವೆ ಸೆಜ್ಜೆಯಾಯಿತ್ತು:* ಸಕಲರ ತನು, ಲಿಂಗ ತನುವಾಗಿದ್ದರೂ ಭ್ರಮಾತ್ಮರಿಗೆ ಷಡ್ವಿಕಾರ ತನುವಾಗಿ ತೋರುತ್ತಿಹುದು. ಅರಿದರಿದು ನೋಡಿದವರಿಗೆ ಲಿಂಗ ಕಾಯ. ಕಾಯದೊಳಗೆ ಲಿಂಗವೊ ? ಲಿಂಗದೊಳಗೆ ಕಾಯವೊ ? ಇದಾರು ಬಲ್ಲರು, ಲಿಂಗವು ಅನುಪಮ, ಅನುಪಮನ ಕಾಯವು ಅದುವೆ. ಲಿಂಗವು ಅದುವೆ, ಕಾಯವು ಅದುವೆ, ಲಿಂಗವು ಅರಿಯದರವು, ಕಾಯವು ನಿಶಬ್ದ ಅರುವಾದುದರಿಂದ ತನುವೆ ಸೆಜ್ಜೆಯಾಯಿತ್ತು ಎಂದು ಹೇಳಿದುದು. ನೆನೆವುಡೆ ದೇವರುಂಟೆ ? ನೋಡುವುಡೆ ಭಕ್ತರುಂಟೆ ? ಆವ ಭಕ್ತ ನೋಡಹೋಗಿಹನು, ಅಲ್ಲಿ ನೆನೆಯಲು ತನಗಿಂತನ್ಯವಾಗಿ ದೇವನಿಲ್ಲವಾಗಿದೆ. ತನ್ನಲ್ಲಿಯೆ ಗುಹೇಶ್ವರ ಲಿಂಗ ಲೀಯವಾಯಿತ್ತು ಎಂದು ಹೇಳಿಹರು.

**37**

**ಅಂಗವಿಲ್ಲಾಗಿ ಅನ್ಯಸಂಗವಿಲ್ಲ , ಅನ್ಯಸಂಗವಿಲ್ಲಾಗಿ ಮತ್ತೊಂದ ವಿವರಿಸಲಿಲ್ಲ .**
**ಮತ್ತೊಂದ ವಿವರಿಸಲಿಲ್ಲಾಗಿ ನಿಸ್ಸಂಗವಾಯಿತ್ತಯ್ಯ.**
**ಗುಹೇಶ್ವರಾ ನಿಮ್ಮ ನಾಮವಿಂತುಟಯ್ಯ.** ॥ 303 ॥

**ತಾತ್ಪರ್ಯ**: *ಅಂಗವಿಲ್ಲಾಗಿ ಅನ್ಯ ಸಂಗವಿಲ್ಲ:* ಪ್ರಭು ನಿರ್ದೇಹಿ ನಿರಾಲಂಬ ತನ್ನ ತಾನರಿತ ನಿರುಪಮ. ನಿರ್ದೇಹಿಗೆ ದೇಹವೆಲ್ಲಿಯದು ? ನಿರುಪಮನಿಗೆ ಈ ಉಪಮೆ ಯುಳ್ಳ ಅಂಗವೆ ಇಲ್ಲವಾದವೆ ? ಸ್ಥೂಲಾಂಗ ಸೂಕ್ಷ್ಮಾಂಗ ಕಾರಣಾಂಗ ಮಹಾಕಾರಣಾಂಗ ಇವುಗಳಾವು ಇಲ್ಲವಾದವೆ ? ಇಲ್ಲವಾದುದರಿಂದ ಅನ್ಯ ಸಂಗವಿಲ್ಲವಯ್ಯ ಎಂದು ಬಿತ್ತರಿಸುವುದಲ್ಲದೆ ಅನ್ಯ ಸಂಗವಿಲ್ಲವಯ್ಯ ಎಂದು ಹೇಳಿಹನು. ತ್ಯಾಗಾಂಗದ ಸಂಗವು ಇಲ್ಲ, ಯೋಗಾಂಗದ ಸಂಗವು ಇಲ್ಲ, ಲಿಂಗಭೋಗೋಪ ಭೋಗ ಸಂಗವೂ ಇಲ್ಲ, ಸುಖ ರೂಪ ಸುಷುಪ್ತಿಯಲ್ಲಿ ಮಲಗಿದವಂಗೆ ಅವನಿಗಾವ ಶರೀರ ಭಾವನವಾದರೂ ಇದೆಯಾ ? ಹಾಗೆ ಚಿದ್ರಸವ ಸವಿಯುವ ಅಖಂಡ ಸುಖಿಗೆ ಆವ ಅಂಗವಿರಬೇಕು, ಅಹಂ ಎಂದರೆ ಅಂಗ, ಈ ಅಹಂ ಇದ್ದಾಗ ಸಕಲ ಅಂಗಗಳು ತೋರುವವು. ಈ ಅಹಂ ಆರಿಗೆ ಇಲ್ಲವಾಗಿದೆ ಅವರಿಗೆ ಅಂಗ ಇಲ್ಲವಾಗಿದೆ ಅನ್ಯ ಸಂಗವು ಇಲ್ಲವಾಗಿದೆ. ಆರು ನೇರವಾಗಿ ತನ್ನನ್ನು ತಿಳಿದಿಹರು ಅವರು ಅಹಮಿಲ್ಲದ ಚಿದ್ಘನವು.

ಆರಿಗೆ ಅಹಂಕಾರವಿದೆ ಅಲ್ಲಿಯೆ ದೇಹೋಹಂ ನಾಹಂ ಕೋಹಂ ಸೋಹಂ ಚಿದಹಂ ದಾಸೋಹಂ ಎಂಬ ಅಂಗವಿದೆ. ಆರಿಗೆ ಅಹಮಿಲ್ಲದ ಚಿದ್ಘನವೆ ತನ್ನಿರುವು ಆಗಿದೆ. ಅವರಿಗಾವ ಅಂಗವೂ ಇಲ್ಲ, ಅನ್ಯ ಸಂಗವೂ ಇಲ್ಲವಾಗಿ ನಿರಾಲಂಬದ ಹಿರಿಮೆಯೆ ಅವರದಾಗಿದೆ. ''*ನಿರಾಲಂಬದಲ್ಲಿ ನಿಜಲಿಂಗವು ನಾನೆಂಬ ಮಹದಹಂಕಾರವದೇನೊ ? ಆ ಮಹದಹಂಕಾರವೆ ಸಂಸಾರವಾಗಿ ಬಂದು ಬಳಲುವ ಭ್ರಾಂತಿ ಇದೇನೊ ? ಇದಾರಿಗೆ ತಿಳಿಯದಲ್ಲ, ಇದನಾರಯ್ಯ ಪರಿಹರಿಸುವರು ಕೂಡಲ ಚೆನ್ನಸಂಗಯ್ಯನಲ್ಲದೆ.* ಪ್ರಭು,'ಬಸವಾದಿ ಪ್ರಮಥರು, ಶರಣರು, ಶರಣೆಯರು ಈ ಘನ ಮನವುಳ್ಳವರು ನಿರಾಲಂಬದ ಯತಾರ್ಥ ಘನವರಿತರು ಅದಕ್ಕಾಗಿ ಅಂಗವಿಲ್ಲವೆಂದು ಹೇಳಿಹರು.

ತಿಳಿಯದವರು ನಿಜ ಲಿಂಗ ನಾನೆನ್ನುವವರು, ಅಂಗವುಳ್ಳವರು, ಅನ್ಯಸಂಗವುಳ್ಳ

ವರು, ನಾನು ಅರಿತವನೆಂದು, ಅವರು ತಿಳಿಯದವರೆಂಬ ಭೇದ ಜ್ಞಾನದ ಸಂಗದವರು ಮರವು ಅರವುಳ್ಳ ಸಂಗದವರಾದುದರಿಂದ ಅನ್ಯದರ ಸಂಗವಿದೆ. ಇವರದು ಸಾಪೇಕ್ಷೆ ನಿಸ್ಸಂಗ. ವಿವರಿಸಲು ಬಾರದ ನಿಸ್ಸಂಗವಲ್ಲ, ಪ್ರಭುವಿನದು ವಿವರಿಸಲಾಗದ ನಿಸ್ಸಂಗ. ಅನ್ಯ ಸಂಗವಿಲ್ಲದ ನಿಸ್ಸಂಗ, ಅಂಗವಿಲ್ಲದ ಘನವಂತ, ಈ ಮಹಾಂತನಿಗೆ ಅಹಂ ಎಂಬ ಅಂಗವೆ ಇಲ್ಲವಾದುದರಿಂದ ಆವಾವ ಸಂಗವ ಕಾಣದ ನಿಸ್ಸಂಗ. ಆರು ನೇರವಾಗಿ ತಾನಾರೆಂದು ತನ್ನನ್ನು ಯತಾರ್ಥ ತಿಳಿದಿಹನು ಅಂತಪ್ಪ ಪರಮಜ್ಞಾನಿ ಮಾತ್ರ ಅಂಗವಿಲ್ಲದವನು ಅಹುದು, ಅನ್ಯರ ಸಂಗವಿಲ್ಲದವನು ಅಹುದು, ವಿವರಿಸಲಾಗದ ನಿಸ್ಸಂಗವಂತನು ಅಹುದು. ಈ ನಿಸ್ಸಂಗದ ಹಿರಿಮೆಯುಳ್ಳವ ತಾನಾಗಬೇಕೆಂದಲ್ಲಿ ಕಲ್ಪಿತ ತಾನಾಗಬಾರದು. ಕಲ್ಪಿತನಾದಲ್ಲಿ ಅಹಂಕಾರಿಯು, ಏನನ್ನಾದರೂ ತ್ಯಾಗ ಮಾಡಬಹುದು ಅಹಂಕಾರ ತ್ಯಾಗ ಮಾಡುವುದು ದುಸ್ತರವು, ಗುರುಕರುಣವುಳ್ಳವರಿಗೆ, ಗುರು ಭಕ್ತರಿಗೆ ಅಹಂಕಾರ ತ್ಯಾಗ ಮಾಡಲು, ಕಣ್ಣು ಮುಚ್ಚಲು ತೆರೆಯಲು ಯತ್ನವಿದೆ, ಇದಕ್ಕೆ ಯತ್ನವಿಲ್ಲ, ಆರಿಗೆ ಅಹಂಕಾರ ಇಲ್ಲವಾಗಿದೆ ಅಲ್ಲಿ ತಾನು ತಾನೆ, ತನ್ನ ಹೊರ್ತು ಅನ್ಯವ ಕಾಣನು. ನಿರಾಲಂಬನಿಗೆ ಅದಾವುದರ ಅವ ಲಂಬನ ಇರದು, ಇದು ನಿಶಬ್ದವೇದಿಗಳಿಗೆ ಸಹಜ ಸಾಧ್ಯವು. ಆರು ಲಿಂಗ ಸಕೀಲ ಸಂಯೋಗ ವರ್ಮಸ್ಥಲವರಿತಿಹರು ಅವರಿಗೆ ಸಹಜವು.

ನಿಸ್ಸಂಗದ ಹಿರಿಮೆಯ ಪ್ರಜ್ವಲಿಸುವ ಮಹಾಮಹಿಮರೆಂದರೆ ಶಬ್ದವೆ ಎಂಜಲವಾದ ವರು. ''*ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ ಹೆಸರಿಟ್ಟು ಕರೆದವರಾರು ? ಅಕಟಕಟಾ ಶಬ್ದದ ಲಜ್ಜೆಯ ನೋಡಾ ಗುಹೇಶ್ವರನನರಿಯದ ಅನುಭಾವಿಗಳಿಗೆಲ್ಲ ತರಕಟ ಕಾಡಿತ್ತು,*'' ನಿರಾಳ ನಿರಾಲಂಬವರಿಯದೆ ಬಹು ಉಪಚಾರ ಮಾಡಿ ಈ ಗುರುವರ್ಯರು ಹೆಸರಿಟ್ಟು ಕರೆದು ಅನುಭವಿಗಳೆಂದು ಹೇಳಿಸಿಕೊಳ್ಳುವ ಈ ವರ್ಗಕ್ಕೆ ಇವರ ಶಬ್ದಂಗಳೆ ಇವರಿಗೆ ನಿರಾ ಲಂಬ. ನಿಸ್ಸಂಗದ ಹಿರಿಮೆ ತಿಳಿಯಲೊಲ್ಲರು. ತಾವೆ ತಿಳಿಯದವರಿರುವಲ್ಲಿ ಅನ್ಯರಿಗೆ ತಿಳಿ ಸುವದದೆಂತು ಸಾಧ್ಯ. ಹೀಗಾಗಿ ಅಂಗ ಇಲ್ಲವಾಗಲೊಲ್ಲರು. ಇಲ್ಲವಾಗದ್ದರಿಂದ ನಿಸ್ಸಂಗದ ಹಿರಿಮೆ ತೋರಿಸುವ ಘನತ್ವ ಆರಿಗೂ ಇಲ್ಲವಾಗಿದೆ. ಈ ನಿಸ್ಸಂಗದ ಹಿರಿಮೆ ನಮ್ಮಲ್ಲಿ ಉದ ಯವಾಗಲು ಮೊದಲು ದೃಶ್ಯವ ಕಲ್ಪಿಸಿ ದೃಕ್ ಎಂದು ಹೇಳುವರು. ಅವಸ್ಥಾದಿಗಳ ಕಲ್ಪಿಸಿ ಸಾಕ್ಷಿ ಎಂದು ಸಂಗವ ಕಲ್ಪಿಸಿ ನಿಸ್ಸಂಗವೆಂದು, ಅನಾತ್ಮವ ಕಲ್ಪಿಸಿ ಆತ್ಮನೆಂದು, ಜಡವ ಕಲ್ಪಿಸಿ ಚೈತನ್ಯವೆಂದು, ಸಾಪೇಕ್ಷವ ಮಾಡಿ ತೋರಿಸಿದರಲ್ಲದೆ ಪ್ರಭುವಿನ ನಿಸ್ಸಂಗದ ಹಿರಿಮೆ ವಿದಿತ ವಾಗಲಿಲ್ಲ . ಇದು ಕಾರಣ ಇವರು ದೃಕ್, ಸಾಕ್ಷಿ, ಆತ್ಮ, ಅಸಂಗ, ಚೈತನ್ಯ, ಸಚ್ಚಿದಾನಂದ ಪೂರ್ಣ ಅನ್ನುವದೆ ಅಭ್ಯಾಸ ಮಾಡಿದರಲ್ಲದೆ ನಿಸ್ಸಂಗವರಿಯ ಹೋಗಲಿಲ್ಲ, ಅದಕ್ಕಾಗಿ ಇವರಿಗೆ ಅಂಗವಿಲ್ಲವಾಗಲಿಲ್ಲ,

ಪ್ರಭು ಸಚ್ಚಿದಾನಂದ ನಾನೆಂಬ ಚಿದಂಗವ ಇಲ್ಲವ ಮಾಡಿದ ಮಹಾಂತ ಸಕಲವು ನೀನೆಂಬ ದಾಸೋಹಂವನ್ನೆ ಇಲ್ಲ ಮಾಡಿದ ಘನ, ಈ ಮಹಿಮನಿಗೆ ಅಂಗವಿಲ್ಲ, ಅನ್ಯದರ ಸಂಗವಿಲ್ಲವೆಂದಲ್ಲಿ ವಿವರಿಸುವದದೆಂತು. ವಿವರಿಸಲುಬಾರದುದೆ, ಅದು ನಿಸ್ಸಂಗವಾದ ಸೂಚನೆ. ಗುಹೇಶ್ವರ ನಿಮ್ಮ ನಾಮ ಎಂತುಂಟಯ್ಯ ಎಂದು ಹೇಳಿಹನು. ಗುಹೇಶ್ವರಾ, ನಿನಗೆ ಅಂಗವೆ ಇಲ್ಲವೆಂದು ನೀನು ಹೇಳುವಲ್ಲಿ ನಿನ್ನ ನಾಮ ಎಂತುಂಟು ? ಅಂಗವಿದ್ದ ವಂಗೆ ನಾಮ ಉಂಟು, ಅಂಗವಿಲ್ಲದವನಿಗೆ ಅನ್ಯ ಸಂಗವಿಲ್ಲವೆನ್ನುವುದು ನಿನ್ನ

ನಾಮವೆನ್ನಲೆ ? ಮತ್ತೊಂದು ವಿವರಿಸಲಿಲ್ಲದಿದ್ದುದೆ ನಿನ್ನ ನಾಮವೆನ್ನಲೆ ? ವಿವರಿಸಲಾಗದ ನಿಸ್ಸಂಗವದು ನಿನ್ನ, ನಿಮ್ಮ ಎಂತುಂಟು ಗುಹೇಶ್ವರಾ.

**38**

**ಗಿಡುವಿನ ಮೇಲಣ ತುಂಬಿ ಕೂಡೆ ವಿಕಸಿತವಾಯಿತ್ತು,**
**ತುಂಬಿ ನೋಡಾ!**
**ಆತುಮ ತುಂಬಿ ತುಂಬಿ ಪರಮಾತುಮ ತುಂಬಿ ತುಂಬಿ ನೋಡಾ !**
**ಗುಹೇಶ್ವರನೆಂಬ ಲಿಂಗಕ್ಕೆ ಎರಗಿ ನಿಬ್ಬೆರಗಾಯಿತ್ತು**
**ತುಂಬಿ ನೋಡಾ.** ॥ 306 ॥

**ತಾತ್ಪರ್ಯ** : ಗಿಡುವಿನ ಮೇಲೆ ತುಂಬಿ ಕೂಡೆ ವಿಕಸಿತವಾಯಿತ್ತಯ್ಯ ಗಿಡ ಇದಾವ ಗಿಡ ? ಈ ಗಿಡದ ಮೇಲೆ ತುಂಬಿಕೂಡೆ, ಇದಾವ ತುಂಬಿ ? ಇದು ಕೂಡುವುಡೆ ಅರಳಿತೆ ? ಗಿಡವು ಅರಳಿತೆ ? ತುಂಬಿ ಅದರ ಮಕರಂದವ ಸವಿಯುತ್ತ ಸವಿಯುತ್ತ ಅಲ್ಲಿಯೆ ಲೀಯವಾಯಿತ್ತೆ ? ವಿಕಾಸವಾಯಿತ್ತೆ ? ಇದೆಂಥ ವೃಕ್ಷ, ಇದೆಂಥ ತುಂಬಿ, ಇದೆಂಥ ಆಲಿಂಗನ, ಇದೆಂಥ ಮೇಲೆ ಕೂಡುವಿಕೆ, ಇದೆಂಥ ? ಸಂಬಂಧ ಗಿಡದ ಮೇಲೆ ತುಂಬಿ ಕೂಡೆ ಅರಳುವದೆಂದರೆ ಇದಾವ ಸಂಬಂಧ, ಇದು ವರ್ಣಿಸುವರೆ, ಅಗಮ್ಯ ಸಂಬಂಧ, ಅಪ್ರಮಾಣವು. ಎತ್ತಣ ಗಿಡ, ಎತ್ತಣ ತುಂಬಿ, ಇದು ಅದರ ಮೇಲೆ ಕೂಡೆ ವಿಕಸಿತತೆ ಏನಾಶ್ಚರ್ಯ ? ಗಿಡ ತುಂಬಿಯ ಸಾಮರಸ್ಯ ವಿಚಿತ್ರವಾಗಿಹುದು. ವಿಶ್ವದಲ್ಲಿದ್ದು ವಿಶ್ವಾತೀತವಾಗಿಹವು. ಲೋಕದಲ್ಲಿದ್ದಂತೆ ಕಂಡರೂ ಅಲೌಕಿಕವಾಗಿಹವು. ಚರ್ಮ ಚಕ್ಷುವಿಗೆ ಇವು ಕಾಣಿಸವು. ಗಿಡ, ತುಂಬಿಯ ಸಾಮರಸ್ಯದ ದರ್ಶನ, ಲೋಕದೃಷ್ಟಿಗೆ ಕಾಣಿಸದು. ಇದು ಅಮರ ಗಿಡ. ಅಮರಾನಂದದಿಂದ ಘಮ ಘಮಿಸುವ ಗಿಡ. ಈ ಗಿಡದ ಮೇಲೆ ತುಂಬಿಯ ಕೂಡೆ, ಅದು ಅಮರವಾಗಿ ಅಮರಾನಂದವಾಗಿಹವು ನೋಡಾ.

ತುಂಬಿಗೆ ಅಮರ ಗಿಡವು ಬಹು ಪುಣ್ಯದಿಂ ಲಭ್ಯವಾಗಿಹುದು. ಗಿಡವೆಂಬುದು ಗುರುಲಿಂಗವು. ಚಿತ್ಪಿಂಡವು, ಚಿತ್‌ಪ್ರಕಾಶವು ಅರು ಸ್ವರೂಪವಾಗಿಹ ಗಿಡ, ಈ ಗಿಡದ ಮೇಲೆ ತುಂಬಿ ಕೂಡೆ ವಿಕಸಿತವಾಯಿತ್ತು. ಚಿದ್ರಸರೂಪಿ ಗುರುವೆಂಬ ಗಿಡದ ಮೇಲೆ ಸುವಿವೇಕ ರೂಪಿ ತುಂಬಿಕೂಡೆ ಅರುವಿಂಗರುವಾಗಿ ವಿಕಸಿತವಾಯಿತ್ತು. ಚಿದ್ರಸವ ವರ್ಣಿಸುವರೆ, ವಾಙ್ಮನೋತೀತವಾದುದು. ಮಕರಂದವು ಎಂದಾದರೂ ಮಾತಾಡಿರುವುದೆ? ಅದರ ಸುವಾಸನೆಯ ಸವಿಯುವ ಘ್ರಾಣೇಂದ್ರಿಯು ಬಲ್ಲದು, ಇದು ಆಶ್ಚರ್ಯವು, ಮಕರಂದವು ಮೌನ, ಅದನ್ನು ಸವಿಯುವ ಘ್ರಾಣೇಂದ್ರಿಯು ಮೌನ. ಇದನೆಂತು ವರ್ಣಿಸುವದು. ಸಮಪ್ರಕಾಶಮಾನವಾಗಿಹ ಶ್ರೀಗುರುವು ಮೌನ. ಆ ಗಿಡದಿಂ ವಸರುವ ಸದ್ವಾಸನೆಯು ಮೌನ. ಅದನ್ನು ಸೇವಿಸಲು ಬಂದ ತುಂಬಿರೂಪ ಶಿಷ್ಯನು ಮೌನ. ಮೌನವೆಂಬುದು ನಿಶಬ್ದ ಬ್ರಹ್ಮವಾಗಿಹ ಸಂಜ್ಞೆಯು, ಇದನ್ನಾವ ಭಾಷೆಯಿಂದ ವಿಸ್ತರಿಸುವುದು. ಮೌನವೆಂಬುದು ಅವರ್ಣೀಯ ನಿಲವು. ಮಾತೆ ಮುಕ್ತಾಯವಾಗಿಹ ಶಬ್ದಮುಗ್ಧ. ಅರುವಿಂಗರುವಾಗಿಹ ಘನವ ಅದನೆಂತು ವರ್ಣಿಸುವದು.

ಗುರುಲಿಂಗ ರೂಪಿ ಗಿಡ, ಕಲ್ಪಿತನಾದರೆ ಸಿಗದು. ಸಮಪ್ರಕಾಶಮಾನವಾಗಿಹ ಪರಂಜ್ಯೋತಿ, ಅದರ ಸದ್ವಾಸನೆಯು ಅದುವೆ ಸದ್ವಾಸನೆ. ಅದು ಪಂಚವಿಧದಿಂ ಪ್ರಜ್ವಲಿಸಿದರೂ ಅಖಂಡವಾಗಿಹುದು. ಸತ್ ಅಂದರೆ ಚಿತ್ ಆಗಿಹುದು. ಸಚ್ಚಿತ್ ಅಂದರೆ ಆನಂದವಾಗಿಹುದು. ಸಚ್ಚಿದಾನಂದವೆಂದರೆ ನಿತ್ಯವಾಗಿಹುದು. ಸಚ್ಚಿದಾನಂದ ನಿತ್ಯವೆಂದರೆ ಪೂರ್ಣವಾಗಿಹುದು. ಇದು ಅಖಂಡವು, ಅಚಲವು ಆಗಿದೆ. ಈ ಜೀವರೂಪಿ ಹಂಸವೆಂಬ ತುಂಬಿ ಅಖಂಡದ ಸದ್ವಾಸನೆ ಸವಿದು ಆತ್ಮ ತುಂಬಿ ನೋಡಾ, ಇದು ಪಿಂಡದಲ್ಲಿದ್ದು ಪಿಂಡಕ್ಕಂಟದಂತಿದ್ದಿತ್ತು. ಇದಲ್ಲದೆ ಪಿಂಡ ತಾನಾಗದಂತಿದ್ದುದು ಇದಕ್ಕಾವುದರ ಸಂಗವಿಲ್ಲ ಇದಕ್ಕೆ ಉದಯವಿಲ್ಲ, ಅಸ್ತವಿಲ್ಲ, ಆದಿ ಇಲ್ಲ, ಮಧ್ಯವು ಇಲ್ಲ, ಅಂತ್ಯವು ಇಲ್ಲ.

ತುಂಬಿ ನೋಡಾ ಪರಮಾತುಮ ತುಂಬಿ, ಇದು ಒಳಹೊರಗೆನ್ನದ ತುಂಬಿದ ತುಂಬಿ, ಪಿಂಡಾಂಡ ಕಾಣದ ತುಂಬಿ, ಬ್ರಹ್ಮಾಂಡ ಕಾಣದ ತುಂಬಿ, ಪರಬ್ರಹ್ಮವೆ ತಾನಾದ ತುಂಬಿ, ಸಚ್ಚಿದಾನಂದವೆ ತಾನಾದ ತುಂಬಿ, ಪೂರ್ಣ ತುಂಬಿ, ಭರಿತ ಭಾವದ ತುಂಬಿ, ಅಖಂಡ ಭಾವದ ತುಂಬಿ, ಅಚಲ ತುಂಬಿ, ಎಲ್ಲೆಲ್ಲೂ ವ್ಯಾಪಕವಾದ ತುಂಬಿ, ಜ್ಞಾನ ಸ್ವರೂಪ ತುಂಬಿ, ಜ್ಞಾನಾನಂದ ತುಂಬಿ, ಸುಖಮಯ ತುಂಬಿ, ಇದು ಶುದ್ಧ ತುಂಬಿ, ಸಿದ್ಧ ತುಂಬಿ, ಪ್ರಸಿದ್ಧ ತುಂಬಿ, ಪರಮಾತ್ಮ ತುಂಬಿ, ಶ್ರೀಗುರುವೆಂಬ ಗಿಡದ ಮೇಲೆ ಜೀವರೂಪಿ ಹಂಸ ಕೂಡೆ ಆತುಮ ತುಂಬಿ, ಅದುವೆ ಪರಮಾತ್ಮ ತುಂಬಿ, ಇದುವೆ ಗುಹೇಶ್ವರ ಲಿಂಗಕ್ಕೆರಗಿ, ನಿಬ್ಬೆರಗಾಯಿತ್ತು ತುಂಬಿ ನೋಡಾ ಎಂದು ಹೇಳಿದುದು ಎಷ್ಟು ಗಹನಾರ್ಥವು.

ಗುಹೇಶ್ವರ ಲಿಂಗಕ್ಕೆರಗಿದ ತುಂಬಿ ಅನುಪಮ ತುಂಬಿ. ಗುಹೇಶ್ವರ ಲಿಂಗವು ಅನುಪಮವು ಅದಕ್ಕೆರಗಿದುದು ಅನುಪಮವು. ಇದನ್ನು ಉಪಮಿಸುವದೆಂತು, ಆತ್ಮ ತುಂಬಿಯ ವರ್ಣಿಸಬಹುದು, ಪರಮಾತ್ಮ ತುಂಬಿಯ ವರ್ಣಿಸಬಹುದು, ನಿಬ್ಬೆರಗಾದ ತುಂಬಿಯ ವರ್ಣಿಸುವುದು ಅದೆಂತು ಸಾಧ್ಯ, ಗುಹೇಶ್ವರ ಮೌನ, ಗುಹೇಶ್ವರ ಲಿಂಗವು ಮೌನ, ಅದನ್ನು ಅರಿಯ ಹೋದ ತುಂಬಿಯು ಮೌನವಿದ್ದುದ ಘನವದಾರು ಬಲ್ಲರು. ಲಿಂಗವರಿಯ ಹೋಗಿ ಗುರು ಗುಹೇಶ್ವರ ಮೌನಮುದ್ರಿತನಾಗಿ ಲಿಂಗದಲ್ಲಿ ಲೀಯವಾದ ಕಂಗಳಂಗೆ. ಇದು ಗುಹೇಶ್ವರ ಲಿಂಗದಲ್ಲಿ ಲೀಯವಾದ ನಿಬ್ಬೆರಗು. ನಿಜದಲ್ಲಿರ್ದ ನಿಬ್ಬೆರಗು. ಇಂದು ಅರಿಯ ಹೋಗಿ ಪ್ರಭುವೆಂಬ ತುಂಬಿ ತಾನು ನಿಬ್ಬೆರಗಾದ ತುಂಬಿ, ಲಿಂಗವರಿಯುವದೆಂದರೆ ತಾನು ಲಿಂಗಮಯನಾಗಿ ಲಿಂಗವರಿಯುವುದು, ಲಿಂಗ ಅನುಪಮ. ತಾನು ಅನುಪಮನಾಗಿ ಲಿಂಗವರಿಯುವುದು ಅಲ್ಲಿ ಆತ್ಮ ಪರಮಾತ್ಮನೆಂಬ ಭಾವಕ್ಕಿಂಬಿಲ್ಲ, ಶಬ್ದ ಮೀಸಲವಾಗಿಹುದು. ನುಡಿಗೆಡೆಗೊಡದ ಘನದಲ್ಲಿ ನುಡಿಗೆ ಅವಕಾಶವಿಲ್ಲ, ಇಂತಪ್ಪ ಅನುಪಮದವನಾಗಿ ಲಿಂಗವರಿಯ ಹೋದಾಗ ಅಲ್ಲಿ ತಾನು ಅರಿಯದರುವಾಗಿಹುದೆ, ಲಿಂಗಕ್ಕೆರಗಿ ನಿಬ್ಬೆರಗಾದುದು ಅದಾರು ವರ್ಣಿಸುವುದು. ಆ ನಿಬ್ಬೆರಗಿನಲ್ಲಿ ತಾನು ತಾನೆ ಆಗಿಹುದೆ ತುಂಬಿ ನೋಡಾ.

**39**

**ಅಂಗದ ಮೇಲೆ ಲಿಂಗವರತು, ಲಿಂಗದ ಮೇಲೆ ಅಂಗವರತು**
**ಭಾವತುಂಬಿ ಪರಿಣಾಮವರತು,**

ನಾಮವಿಲ್ಲದ ದೇವರಿಗೆ ನೇಮವೆಲ್ಲಿಯದೋ ಗುಹೇಶ್ವರಾ.॥308॥

**ತಾತ್ಪರ್ಯ**: *ಅಂಗದ ಮೇಲೆ ಲಿಂಗವರಿತು, ಲಿಂಗದ ಮೇಲೆ ಅಂಗವರಿತು:* ಅಂಗ ; ಅಂಗದ ಮೇಲೆ ಲಿಂಗವರಿತು ಎಂದುದು. ಇದೆ ಅಂಗದ ಮೇಲೆ ಇರುವ ಲಿಂಗ ಈ ಲಿಂಗ ವರಿಯುವುದು, ಸ್ಥೂಲಾಂಗದ ಮೇಲಿರುವ ಲಿಂಗವರಿಯುವುದು, ಅಂಗ ವೆಂದರೆ ಸಕಲ ಲಿಂಗವಂತರಿಗೆ ಪರಿಚಯವಿದ್ದ ವಿಷಯವಾಗಿದೆ. ಬಹು ಜನ ಅಂಗ ವೆಂದಲ್ಲಿ ಸ್ಥೂಲ ಶರೀರ ಎಂದು ತಿಳಿದವರೆ ಬಹಳಷ್ಟು ಇದ್ದಾರೆ, ಇರಲಿ. ಲಿಂಗವೆಂದರೆ ಪೀಠಿಕೆ. ಅದಕ್ಕೆ ಕಂತೆ ಹಿಡಿಸಿದ್ದೆ ಲಿಂಗವೆನ್ನುವ ಭಾವಿಕರು ಬಹು ಇದ್ದಾರೆ. ಇವರು ಈ ಲಿಂಗದ ರಹಸ್ಯ ತಿಳಿಯುವದೆಂತು ? ಲಿಂಗವರಿತು ಎಂದುದು ನೋಡಿದಡೆ ಈ ಅಂಗದ ಮೇಲಿದ್ದ ಲಿಂಗವರಿತವರೆಷ್ಟು ಲಿಂಗಾಂಗಿಗಳು ಸಿಕ್ಕುವರು. ಲಿಂಗಪೂಜಿಸುವವರು ಸಿಕ್ಕು ತ್ತಾರೆ. ಲಿಂಗವರಿತವರು ಸಿಕ್ಕುವುದು ವಿರಳ. ಲಿಂಗವಂತರೆಂದರೆ ಬಸವಾದಿ ಪ್ರಮಥರು, ಶರಣರು, ಶರಣೆಯರು ಅವರು ಕಂಡ ಲಿಂಗ ಬೇರೆ, ಇವರು ಕಂಡ ಲಿಂಗ ಬೇರೆ. ಇವ ರಿಗೆ ಪೂಜಾ ಲಿಂಗ ಕಾಣಿಸಿತ್ತು, ಅವರಿಗೆ ಅರುವ ಅರಿಯ ಹೇಳಿದ ಅರುವಿನ ಇರು ವುಳ್ಳ ಅನುಪಮ ಲಿಂಗ ಕಾಣಿಸಿತ್ತು. ಲಿಂಗವೆಂಬುದು ಅರುವ ಅರಿಯ ಹೇಳಿ ಕುರುಹ ಕೊಟ್ಟ ಗುರು ಕಾರುಣ್ಯ; ಉಪಮಿಸದ ಕಾರುಣ್ಯ, ಅಗಮ್ಯ ಕಾರುಣ್ಯ. ಇದನ್ನು ಅರಿಯ ಹೋಗಿ ತಾವು ಉಪಮಿಸದ ಘನಕ್ಕೆ ಘನವಾಗಿಹ ಘನವಂತರು ಮಹಾಮಹಿಮರು.

ಆರು ಗುರು ಕೊಟ್ಟ ಅರುವಿನಿಂದ ಲಿಂಗವರಿಯ ಹೋಗಿಹರು, ಅವರಿಗದು ಪೂಜಾಲಿಂಗವಾಗಲಿಲ್ಲ, ಅದು ವೇದ ವೇದಾಂತಿಗಳಿಗೆ ಅಸಾಧ್ಯವಾದ ಅನುಪಮ ಲಿಂಗವಾ ಗಿದೆ. ನಿರಾಳವೆಂಬ ಕೂಸಾಗಿದೆ. ಅದಕ್ಕೆ ಹೆಸರಿಟ್ಟು ಕರೆಯಲು ನಾಚಿಕೆಯಾಗಿದೆ. ಇದು ಘನವಾಗಿ ಗುರು ಕೊಟ್ಟ ಕಾರುಣ್ಯದ ಸಫಲತೆಯಾಗಿದೆ. ಲಿಂಗವೆಂಬುದು ತನ್ನರುವಿನ ಸಂಜ್ಞೆ, ಶಬ್ಧ ಮುಗ್ಧ ಸಂಜ್ಞೆ, ಮುನ್ನ ಮುನ್ನಲಾದ ಘನದ ಸಂಜ್ಞೆ, ಸಚ್ಚಿದಾನಂದ ಸಂಜ್ಞೆ, ಇದಾರ ಅರಿತಿಹರು. ಅವರ ಮರವು ಮಾಯೆ ಪ್ರಪಂಚ ಕರ್ಮಪಾಶವೆ ಹುಸಿಯಾಗಿ ಅರುವಿಂಗರುವಾಗಿಹ ಘನ. ಘನವುಳ್ಳವರಾಗಿ ಅಜ್ಞಾನ, ಅಸತ್, ಮೃತ್ಯುವಿನಿಂದ ಬಿಡುಗ ಡೆಯಾಗಿ ಅಮೃತತ್ವದ ಸಿದ್ಧಿ ಪುರುಷರಾಗಿಹರು.

ಲಿಂಗದ ಮೇಲೆ ಅಂಗವರಿತು: ಈ ಲಿಂಗದ ಮೇಲೆ ಅದಾವ ಅಂಗ ? ಈ ಅಂಗವರಿಯಬೇಕೆ ? ಇದೆಂಥ ಗಹನಾರ್ಥ, ಗಹನಾಂಗ ಇದಕ್ಕೆ ಸ್ಥೂಲಾಂಗವೆನ್ನಲೆ ? ಎನ್ನಲಾಗದು. ಸೂಕ್ಷ್ಮಾಂಗವೆನ್ನಲೆ ? ಎನ್ನಲಾಗದು. ಕಾರಣಾಂಗವೆನ್ನಲೆ ? ಎನ್ನಲಾಗದು. ಮಹಾಕಾರಣಾಂಗವೆನ್ನಲೆ ? ಎನ್ನಲಾಗದು. ಇದು ಎಂಜಲ ಮಾತ ನುಡಿದವರಿಗೆ ಅಸಾಧ್ಯ ವಾಗಿಹ ಅಂಗ. ಈ ಅಂಗವನ್ನು ಗುರು ಕಾರುಣ್ಯದ ಲಿಂಗ ಬೆಳಗಲಿಲ್ಲ, ಹೆತ್ತರಿವು, ಇರುವು ಆಯಿತ್ತು.

ಅಂಗ, ಏನನ್ನಬೇಕು ? ನುಡಿಗೆಡೆಗೊಡದ ಘನಕ್ಕೇನನ್ನಬೇಕು, ಶೃತಿಗಳೆ ನಾಚಿ, ಮೌನ ಧರಿಸಿದುದಕ್ಕೇನನ್ನಬೇಕು, ಈ ಅಂಗವರಿತ ಘನವಂತ ಅಂದರೆ ಬಸವಣ್ಣ, ಘನ ಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿರ್ದನಯ್ಯ ಕೂಡಲ ಸಂಗಯ್ಯನೆಂಬ ಬೆಳ ಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ ಎಂದು ತನ್ನಂಗದ ಹಿರಿಮೆಯ

ವರ್ಣಿಸಿಹನು. ಲಿಂಗವನ್ನು ತಾನೆ ಅರಿತಲ್ಲದೆ ಅದು ತನ್ನ ಅರಿಯಲಿಲ್ಲ, ಅರುವೆಂಬುದನ್ನು ಗುರು, ಲಿಂಗ, ಜಂಗಮವೆಂಬುದನ್ನು ತಾನೆ ಅರಿತನಲ್ಲದೆ ತನ್ನ ಅರಿಯಲಿಲ್ಲ, ಕಾರಣ ಲಿಂಗಕ್ಕೆ ಲಿಂಗವಾಗಿಹ ತಾನೆ, ಘನಕ್ಕೆ ಘನ ಎಂಬುದು ತಾನೆ, ತನ್ನಿಂದ ತನಗೆ ವಿದಿತವಾದುದೆ ಅಂಗವರಿತ ಹಿರಿಮೆ, ತನ್ನ ಹಿರಿಮೆ.

ಭಾವ ತುಂಬಿ ಪರಿಣಾಮವರಿತು: ಇದಾವ ಭಾವ ತುಂಬಿ ? ಆವುದು ತುಂಬಿದುದು, ಅದರ ಭಾವ ತುಂಬಿ, ತುಂಬಿದುದು ಆವುದೆನ್ನಬೇಕು, ಗುರು ತುಂಬಿದುದಲ್ಲ, ಲಿಂಗ ತುಂಬಿದುದಲ್ಲ, ಜಂಗಮ ತುಂಬಿದುದಲ್ಲ, ಪ್ರಸಾದ ತುಂಬಿದುದಲ್ಲ, ಇವು ಘನ ನಿಜ. ತಾನು ಮಾತ್ರ ಘನಕ್ಕೆ ಘನ ತಾನೆ ತುಂಬಿದುದು. ಎತ್ತ ನೋಡಿದಡತ್ತತ್ತ ತನ್ನದು ಭಾವಕ್ಕಗಮ್ಯವಾದ ಭಾವ ತುಂಬಿ ತಾನೆ ತುಂಬಿ ತನ್ನ ಕಂಡುದೆ ಭಾವ ತುಂಬಿದ ಸಂಕೇತ. ಪರಿಣಾಮವರಿತು, ಇದಾವ ಪರಿಣಾಮವರಿಯುವುದು ? ತನ್ನ ಪರಿಣಾಮ, ತನ್ನ ನಿರ್ಣಯ, ತನ್ನಿಂದ ತನಗಾದ ನಿರ್ಣಯ. ಈ ನಿರ್ಣಯ ಅದಾರು ವರ್ಣಿಸುವುದು. ''ಸ್ಥಲವೆಂದೆನ್ನೆ, ನಿಸ್ಥಲವೆಂದೆನ್ನೆ, ನಿರ್ಣಯವೆನಗಾದ ಬಳಿಕ ಏನೆಂದರಿಯೆನಯ್ಯ, ಇದು ಕಾರಣ ಕೂಡಲ ಚೆನ್ನಸಂಗಯ್ಯ ಲಿಂಗೈಕ್ಯವೆಂದೆನ್ನೆ'' ಎಂದು ತನ್ನ ಪರಿಣಾಮವರಿತು ಹೀಗೆ ವರ್ಣಿಸಿದಾಗ ಅಲ್ಲಿ ತನಗಿಂತ ಅನ್ಯವಾದ ದೇವನೆಲ್ಲಿ ? ದೇವನ ನಾಮವೆಲ್ಲಿ ? ನೇಮವೆಲ್ಲಿಯದು, ನಾಮವಿಲ್ಲದ ದೇವರಿಗೆ ನೇಮವೆಲ್ಲಿಯದು ಗುಹೇಶ್ವರ. ನಾಮವಿಲ್ಲದ ದೇವನು ಯಾರು ? ನಾಮವುಳ್ಳವನು ದೇವನು ಹೇಗಾಗುವನು, ಮರವಿಂಗೆ ದೇವನು ನಾಮವುಳ್ಳವನು ಆಗಿಹನು, ತನಗಿಂತ ಅನ್ಯನಾಗಿದ್ದಾನೆ. ತಾನಾರೆಂದರಿಯುವುಡೆ ತಾನೆ ನಾಮವಿಲ್ಲದ ದೇವ, ತನಗೆ ನೇಮವೆಲ್ಲಿಯದು ಗುಹೇಶ್ವರ ಎಂದಿದ್ದಾರೆ ಪ್ರಭುದೇವರು. ಇಲ್ಲಿಯವರೆಗೆ ದೇವನಿಗೆ ನಾಮ, ತಾನು ನಾಮವುಳ್ಳವನೆಂದು ತಿಳಿದಿದ್ದನು. ಕಾರಣ ಭೇದಜ್ಞಾನಿಯಾಗಿದ್ದನು. ಆವಾಗ ತನಗೂ ನಾಮವಿಲ್ಲ, ತನ್ನ ಹೊರತು ದೇವನು ಅನ್ಯವಲ್ಲವೆಂದು ತಿಳಿದನು. ಆಗ ಆದಿ, ಅನಾದಿ, ಒಂದಾದುದು. ಚಂದ್ರ, ಸೂರ್ಯ ಒಂದಾದುದು. ಧರೆ, ಆಕಾಶ ಒಂದಾದುದು ಗುಹೇಶ್ವರ ನಿರಾಳ ಎಂಬುದು ಸಹಜ ಸಿದ್ಧವು.

**40**

**ಆದಿ ಅನಾದಿ ಒಂದಾದಂದು, ಚಂದ್ರ ಸೂರ್ಯರೊಂದಾದಂದು,**
**ಧರೆ ಆಕಾಶ ಒಂದಾದಂದು;**
**ಗುಹೇಶ್ವರಲಿಂಗನು ನಿರಾಳನು.** ॥ 309 ॥

**ತಾತ್ಪರ್ಯ:** *ಆದಿ ಅನಾದಿ ಒಂದಾದಂದು:* ಆದಿ ಆವುದು ? ಅನಾದಿ ಆವುದು ? ಆದಿ ಎಂದಲ್ಲಿ ಕುರುಹಿಂಗೆ ಕಾರಣ. ಅನಾದಿ ಎಂದಲ್ಲಿ ಶಬ್ದಕ್ಕೆ ಕಾರಣ. ಆದಿ ಎಂದರೆ ಪೂರ್ವಿಕ, ಅನಾದಿ ಎಂದಲ್ಲಿ ಅಪೂರ್ವಿಕ. ಆದಿ ಎಂದಲ್ಲಿ ರೂಪು, ಅನಾದಿ ಎಂದಲ್ಲಿ ನಿರೂಪ. ಆದಿ ಕಂಡವರುಂಟು; ಅನಾದಿ ಕಂಡವರುಂಟೆ ? ರೂಪು ಕಂಡವರುಂಟು, ನಿರೂಪ ಕಂಡವರುಂಟೆ ? ನಿರೂಪ ಕಾಣದಿದ್ದಲ್ಲಿ ಗುಹೇಶ್ವರ ಲಿಂಗದಲ್ಲಿ ಒಂದಾದುದು ಆವಾಗ ? ಪ್ರಭುದೇವ ಗುಹೇಶ್ವರ ಲಿಂಗದಲ್ಲಿ ಒಂದಾದ ಮಹಾಂತ

ಅದುವೆ ಆದ ಘನವಂತ.

ಪ್ರಭುವಿನ ದೃಷ್ಟಿಗೆ ಆದಿ ಅದುವೆ, ಅನಾದಿ ಅದುವೆ ಅಂದರೆ ಗುಹೇಶ್ವರ ಲಿಂಗವೆ. ರೂಪ ಅದುವೆ, ನಿರೂಪ ಅದುವೆ, ಪೂರ್ವಿಕ ಅದುವೆ, ಅಪೂರ್ವಿಕ ಅದುವೆ ಗುಹೇಶ್ವರ ಲಿಂಗ ಅರಿಯ ಹೋಗಿ ಒಂದಾದ ಮಹಾಮಹಿಮ, ಅಖಂಡಿತ ಘನ, ಖಂಡ ಖಂಡವಾಗುವುದೆ ? ಅಲ್ಲಿ ಸೀಮಿತ ದೃಷ್ಟಿಗಿಂಬಿಲ್ಲವಾದುದರಿಂದ ಒಂದಾದುದು.

ಚಂದ್ರ ಸೂರ್ಯರೊಂದಾದುದು, ಶೀತಲ ಅಗ್ನಿ ಒಂದಾಯಿತೆ ? ಹಗಲು ರಾತ್ರಿ ಒಂದಾಯಿತೆ ? ಪೌರ್ಣಮಿ ಚಂದ್ರ ಪೂರ್ಣಪ್ರಭೆಯುಳ್ಳ ಸೂರ್ಯ ಒಂದಾದುದು ಇದೆಂಥ ಆಶ್ಚರ್ಯ ! ಸಮುದ್ರದಲ್ಲಿ ಶೀತಲ, ಒಡವಾಗ್ನಿ ಒಂದಾಗಿಲ್ಲವೆ ? ಉದಕ, ಉದಕದಲ್ಲಿರುವ ಅಗ್ನಿ ಒಂದಾಗಿಲ್ಲವೆ ? ಚಂದ್ರನೆಂದರೆ ಆರುಗೊತ್ತೆ ? ಸುಮನ, ಸುವಿವೇಕರೂಪಿ ಮನ, ಇದು ಚಂದ್ರ, ಸುಜ್ಞಾನ ಸಮ್ಯಜ್ಞಾನ ಇದು ಸೂರ್ಯ. ಇವೆರಡು ಒಂದಾದುದು. ಆರು ನಿಶಬ್ದವೇದಿಗಳು, ಶೃತಿಗಗೋಚರರು, ವಾಙ್ಮನೋತೀತರು, ಲಿಂಗ ಸಕೀಲ ಸಂಯೋಗವರ್ಮಸ್ಥಲವರಿತವರು, ಅವರಿಗೆ ಮಾತೆಲ್ಲ ಎಂಜಲವಾಗಿವೆ. ಸುಮನ ಅವರೆ ಆಗಿಹರು.

ಗುಹೇಶ್ವರ ಲಿಂಗ ನಿರಾಳವು, ಸುಜ್ಞಾನ ಗುಹೇಶ್ವರ ಲಿಂಗ ನಿರಾಳವು, ಅಜ್ಞಾನ ರೂಪ ಮನವು ಅದುವೆ, ಜ್ಞಾನರೂಪಿ ಅರಿವು ಅದುವೆ, ಆವಲ್ಲಿ ನೀನೆಂಬ ಭಾವಪ್ರಧಾನವಾಗಿದೆ ಅದು ಚಂದ್ರಸ್ವರೂಪವಾಗಿದೆ. ಆವಲ್ಲಿ ನಾನೆಂಬ ಜ್ಞಾನವು ಪ್ರಧಾನವಾಗಿದೆ ಅದು ಸೂರ್ಯವಾಗಿದೆ. ಆವಲ್ಲಿ ಚಿದಹಂ ಪ್ರಧಾನವಾಗಿದೆ ಅದು ಸೂರ್ಯವಾಗಿದೆ. ಆವಲ್ಲಿ ದಾಸೋಹ ಪ್ರಧಾನವು ಆಗಿದೆ ಅದು ಚಂದ್ರಸ್ವರೂಪವಾಗಿದೆ. ಪ್ರಭು ನೀನಾರೆಂಬುದಕ್ಕೂ ತೆರಹಿಲ್ಲದ ಘನವಂತ. ಇದು ಕಾರಣ ಈತನು ಗುಹೇಶ್ವರ ಲಿಂಗ ನಿರಾಳದಲ್ಲಿ ಒಂದಾದುದು. ಆರು ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನ ಸಮುದ್ರರಾಗಿದ್ದಾರೆ. ಅವರಿಗೆ ಚಿದಹಂ ಅದುವೆ, ದಾಸೋಹಂ ಅದುವೆ, ಸಮುದ್ರ ದೃಷ್ಟಿಗೆ ಸಕಲ ನದಿ, ಹಳ್ಳ ಮೊದಲಾದವು ಜಲಮಯವು. ಇದು ಗಂಗಾ, ಯಮುನಾ, ಸರಸ್ವತಿ ಎಂಬುದು ಸೀಮಿತ ದೃಷ್ಟಿ, ಇದಕ್ಕೆ ಇಂಬು ಇರದು. ಹಾಗೆ ನಿಶಬ್ದ ವೇದಿಗಳಿಗೆ ದಾಸೋಹಂ ಭಾವರೂಪಿ ಚಂದ್ರ. ಚಿದಹಂರೂಪಿ ಜ್ಞಾನ ಸೂರ್ಯ. ಇವೆರಡು ಅದುವೆ ಅದರ ಹೊರ್ತು ಅನ್ಯವಿಲ್ಲ.

ಧರೆ ಆಕಾಶ ಒಂದಾದುದು: ಧರೆ ಆವುದು ? ಆಕಾಶ ಆವುದು ? ಧರೆ, ಭೂಮಿ ಅಲ್ಲವೆ ? ಆಕಾಶ, ಗಗನವಲ್ಲವೆ ? ಇವೆರಡು ಒಂದಾದವೆ ? ಜಡ, ಚೇತನ ಒಂದಾದವೆ ? ಕ್ರಿಯೆ, ಅಕ್ರಿಯೆ ಒಂದಾದವೆ ? ಘಟ್ಟಿ, ಪೊಳ್ಳು ಒಂದಾದವೆ ? ತನು, ಆತ್ಮ ಒಂದಾದವೆ ? ತನು ಎಂದರೆ ನಿಶ್ಚಲ ಬ್ರಹ್ಮ, ಆತ್ಮ ಎಂದರೆ ಅಚಿಂತ್ಯ ಬ್ರಹ್ಮ ಒಂದಾಯಿತೆ ? ತನು ಎಂದರೆ ಶಬ್ದಮುಗ್ಧ. ಧರೆಯು ಶಬ್ದಮುಗ್ಧ, ಆಕಾಶವು ಶಬ್ದಮುಗ್ಧ, ಆತ್ಮವು ಶಬ್ದಮುಗ್ಧ. ಈ ಶಬ್ದಮುಗ್ಧದ ಘನವದಾರು ಬಲ್ಲರು. ಆರು ತನುವಿಂಗೆ ತನುವಾಗಿ ನೋಡಿದ್ದಾರೆ. ಅವರಿಗೆ ಶಬ್ದಮುಗ್ಧತ್ವದ ಘನವು ಪ್ರಜ್ವಲಿಸಿದೆ.

ಆಕಾಶವೆಂದರೆ ಶಬ್ದ. ಶಬ್ದದ ಶಬ್ದವಾಗಿ ಆರು ನೋಡಿಹರು. ಅವರಿಗೆ ಶಬ್ದಮುಗ್ಧದರಿವು ಪ್ರಜ್ವಲಿಸಿದೆ. ಕೆಲಬರು ಶಬ್ದಮುಗ್ಧವೆಂದರೆ ಮೌನ, ಮೌನವೆಂದರೆ ಮಾತಾಡದೆ ಇರುವುದು ಎಂದು ಹೀಗೆ ತಿಳಿದವರು ಬಹಳಷ್ಟು ಇದ್ದಾರೆ. ಶಬ್ದಮುಗ್ಧವೆಂದರೆ ನುಡಿಗೆಡೆಗೊಡದ ಘನವೆ ತನ್ನಿರುವೆಂದರಿತ ಮಹಾಂತ. ಇಂತಪ್ಪ ಪ್ರಸಾದಿ ಮಾತಾಡಿದಂತೆ ಕಂಡರೂ

ಶಬ್ದಮುಗ್ಧ ಸಂಜ್ಞೆಯುಳ್ಳ ಕರುಣಾಮಯನು.

ಪ್ರಭುವಾಗಲಿ, ಬಸವಣ್ಣ, ಚನ್ನಬಸವಣ್ಣ, ಅಕ್ಕಮಹಾದೇವಿ ಮೊದಲಾದವರು ವಾಣಿ ಕಾರ್ಯ ನಡೆದರೂ ಅವರ ವಾಣಿ ನಿರ್ವಾಣದ ಕರುಣಾಮಯವಾಗಿಹುದು. ಅವರು ಲಿಂಗವರಿತು ಲಿಂಗವಾಗಿಹರು. ಅವರಿಗೆ ಆದಿ, ಅನಾದಿ ಒಂದಾದುದು, ಚಂದ್ರ, ಸೂರ್ಯರೊಂದಾದುದು, ಧರೆ, ಆಕಾಶ ಒಂದಾದುದು. ಅವರಿಗೆ ನರರು ಸುರರು ಅನುಪಮ ಲಿಂಗವೆ. ದೇವತಾಗಣ ರುದ್ರಗಣ ಪ್ರಮಥ ಗಣ ಅನುಪಮ ಲಿಂಗ. ಸತ್ಯರು ನಿತ್ಯರು ಮುಕ್ತರು ಆದುವೆ. ಏಕೆಂದರೆ ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತರು ; ಸಕಲವು ಗುಹೇಶ್ವರ ಲಿಂಗವಾಗಿ ಪ್ರಜ್ವಲಿಸುವುದು ಎಂದು ಹೇಳಿದುದಲ್ಲದೆ, ''*ಇದ್ದುದೊಂದೆ ತೆರಹಿಲ್ಲದ ಜ್ಞಾನ ಘನದ ಅರಿವು ಆದಲ್ಲಿ ಅಂಗ, ಲಿಂಗದ ಮೇಲೆ ಅಂಗವಿದೇನೊ, ಮನದ ಮೇಲೆ ಅರಿವು, ಅರಿವಿನ ಮೇಲೆ ಕುರುಹು ಇದೇನೊ, ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು ಇದೇನೊ ? ನಾನೀನೆಂಬುದಕ್ಕೂ ತೆರಹಿಲ್ಲ* ಎಂದು ಹೇಳಿಹರು.

**41**

**ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೊ ?**
**ಮನದ ಮೇಲೆ ಅರಿವು, ಅರಿವಿನ ಮೇಲೆ ಕುರುಹು ಇದೇನೊ ?**
**ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು.**
**'ನೀ' 'ನಾ' ಎಂಬುದೇ ? - ತೆರಹಿಲ್ಲ ಗುಹೇಶ್ವರಾ.** || 310 ||

**ತಾತ್ಪರ್ಯ**: *ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೊ ?*: ಪ್ರಭು ತಾನಾರೆಂದರಿದ ಸ್ವಮಹಿಮ, ಸ್ವಪ್ರಭೆ ನಿರಾಲಂಬ ನಿರವಧಿ ನಿಜದಲ್ಲಿರ್ದ ನಿಬ್ಬೆರಗು ನಿಭ್ರಾಂತ ಉಪಚಾರದ ಉಪದೇಶಕ್ಕೆ ಒಪ್ಪುವನೆ ? ನಿಸ್ಸೀಮವು ಸೀಮಿತಕ್ಕೆ ಒಪ್ಪುವುದೆ ? ಅಂಗದ ಮೇಲೆ ಲಿಂಗ ? ಲಿಂಗದ ಮೇಲೆ ಅಂಗವಿದೇನೊ ? ಅಂಗ ? ಇದಾವ ಅಂಗ, ಈ ಅಂಗದ ಮೇಲೆ ಲಿಂಗ, ಇದೆಂಥ ಲಿಂಗ, ಇದೆಂಥ ಅಂಗ, ಭ್ರಾಂತರ ಲಿಂಗ, ಭ್ರಾಂತರ ಅಂಗ ಕತ್ತಲೆಯ ಅಂಗ, ಕತ್ತಲೆಯ ಲಿಂಗ, ಈ ಅಜ್ಞಾನ ದೃಷ್ಟಿಗೇನನ್ನಬೇಕು. ಇವರು ಅಂಗವನ್ನು ತಿಳಿಯರು, ಲಿಂಗವನ್ನು ತಿಳಿಯರು, ಭ್ರಾಂತರಿಗೆ ಭ್ರಾಂತಿಯೆ ಕವಿದಿತ್ತು. ಕತ್ತಲೆಗೆ ಬೆಳಕೆನ್ನುವಷ್ಟು ಜಡಮತೀಯರಾಗಿಹರು.

ಜಡವಾದ ಅಂಗ, ಅವಯವದಿಂದುಕ್ತವಾದ ಅಂಗ, ಷಡ್ವಿಕಾರದ ಅಂಗ, ಸಚ್ಚಿದಾನಂದ ರೂಪಿ ಲಿಂಗ, ಚಿನ್ಮಯ ರೂಪಿ ಲಿಂಗ, ಜಡದ ಮೇಲೆ ಚೈತನ್ಯ ಹಾಕಲು ಬರುವುದೆ ? ಕ್ಷರದ ಮೇಲೆ ಅಕ್ಷರೋತ್ತಮ ಲಿಂಗವ ಹಾಕಬಹುದೆ ? ಷಡ್ವಿಕಾರದ ಮೇಲೆ ನಿಷ್ಕಳಂಕ ಲಿಂಗವ ಹಾಕಬಹುದೆ ? ಬಹುಲಿಂಗವಂತರು, ಪೀಠಕಕ್ಕೆ ಕಂತಿ ಹಿಡಿದ ಲಿಂಗಕ್ಕೆ ಲಿಂಗವೆನ್ನುವ ಮತಿವಂತರೆ ಬಹಳಷ್ಟು ಇದ್ದಾರೆ. ಈ ಜಡದ ಜ್ಞಾನವಾಗದ್ದರಿಂದ ಅಂಗವು ಜಡ, ಲಿಂಗವು ಜಡವಾಗಿ ಅಂಗದ ಮೇಲೆ ಲಿಂಗ ಧರಿಸಿಹೆವು ಎನ್ನುವ ಭಾವ ಸಹಜ ಸಕಲರಲ್ಲಿ ಮೂಡಿದೆ. ಇದನ್ನು ಕಂಡೆ ಪ್ರಭು, ಅಂಗದ ಮೇಲೆ ಲಿಂಗ, ಲಿಂಗದ

ಮೇಲೆ ಅಂಗವಿದೇನೊ ? ಎಂದು ಪ್ರಶ್ನಿಸಿದ್ದಾನೆ.

ಲಿಂಗದ ಮೇಲೆ ಅಂಗವಿದೇನೊ ? ಎಂಬ ಪ್ರಶ್ನೆಗೆ ಇದಾರು ಪರಿಹರಿಸುವುದು. ಚೈತನ್ಯದ ಮೇಲೆ ಈ ಜಡವಾದ ಅಂಗ ಹಾಕಲು ಬರುವುದೆ ? ಇಲ್ಲಿ ಹೀಗೆ ತಿಳಿಯಕೂಡದು. ಲಿಂಗದ ಮೇಲೆ ಅಂಗವಿದೇನೊ ? ಎಂದಲ್ಲಿ ಬಹುಲಿಂಗ ಪೂಜಾನಿಷ್ಠರು. ತಮ್ಮ ಪೂಜಾ ಕಾಲದಲ್ಲಿ ಲಿಂಗದೇವನ ಮೇಲೆ ತಮ್ಮ ಕಂಗಳಂಗದಿಂ ನಿರೀಕ್ಷೆಯ ಮಾಡುವರು. ತ್ರಾಟಕವ ಮಾಡುವರು. ಕಂಗಳಂಗವೆಂಬ ದೃಷ್ಟಿಯಿಂದ ಪೂಜಾಲಿಂಗದಲ್ಲಿ ಏಕತ್ವ ಬೆಳೆಸುವರು. ಇದು ಅನಿಮಿಷ ದೃಷ್ಟಿಯೆಂಬ ಭಾವವಾಗಿ ಅನಿಮಿಷನಂತೆ ಇವರು ಸಹ ತಮ್ಮ ಕಂಗಳಂಗದಿಂ ಪೂಜಾಲಿಂಗವ ನೋಡುತ್ತ, ನೋಡುತ್ತ ಅದರಲ್ಲಿ ಲೀಯವಾಗುವರು. ಬೆಳಕನ್ನು ಕತ್ತಲೆ ನೋಡಬಹುದೆ ? ಅನುಪಮ ಲಿಂಗವ ಈ ಚರ್ಮಚಕ್ಷು ನೋಡಬಹುದೆ ? ಸುಜ್ಞಾನವ, ಅಜ್ಞಾನ ನೋಡಬಹುದೆ ? ಅರುವಿಂಗರುವಾಗಿಹ ಘನವ ಮರವು ನೋಡಬಹುದೆ ? ದಿಟವ ಸಟೆಯ ನೋಡಬಹುದೆ ? ಅರಿದರುಹಿಸಿಕೊಂಬುದಕ್ಕೆ ಮೀರಿದ ಘನರೂಪಿ ಲಿಂಗ ಈ ಕಂಗಳಂಗವು ಕಂಡಿತೆ ? ಕ್ರಿಯಾಚಾರವೆತ್ತ ? ಜ್ಞಾನಾಚಾರವೆತ್ತ ? ಸಟೆಯ ಪೂಜಾನೋಟವೆತ್ತ ? ನಿಜದಲ್ಲಿರ್ದ ನಿಬ್ಬೆರಗಿನ ಅನಿಮಿಷನ ನೋಟವೆತ್ತ ? ಬಸವಾದಿ ಪ್ರಮಥರ ಪೂಜೆಯಂತೆ ಪೂಜಾಲಿಂಗದವರ ಪೂಜೆಯಾಗಬಹುದೆ ?

''*ಭಕ್ತಿಯ ಲಿಂಗ ಪೂಜೆಯಾಗಿ ಆಳವಡಿಸಿಕೊಂಡ ಬಸವೇಶ, ಜ್ಞಾನಕ್ರಿಯೆಯ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಚನ್ನಬಸವೇಶ. ವೈರಾಗ್ಯವೆ ಲಿಂಗ ಪೂಜೆಯಾಗಿ ಆಳವಡಿಸಿಕೊಂಡ ಅಲ್ಲಮೇಶ*'' ಎಂದು ಸಿದ್ಧರಾಮ ಶಿವಯೋಗಿ ಹೇಳುವಲ್ಲಿ ಅವರ ಲಿಂಗಾಂಗ ಸಮರಸ ಜ್ಞಾನ ಭಕ್ತಿ, ಜ್ಞಾನಕ್ರಿಯೆ, ವೈರಾಗ್ಯದಿಂದುಕ್ತವಾದ ಲಿಂಗಪೂಜೆಯೆತ್ತ ? ಜ್ಞಾನಾಚಾರವೆತ್ತ ? ಭರಿತಭಾವವೆತ್ತ, ಪೂಜಾಲಿಂಗದವರ ಲಿಂಗಪೂಜಾವಿಧಾನವೆತ್ತ, ಮಡಿನೀರೆತ್ತ, ಧೂಪ ದೀಪ ನೈವೇದ್ಯದಿಂದುಕ್ತವಾದ ಪೂಜೆ ಎತ್ತ, ಅವರ ಜ್ಞಾನೋದಕವೆತ್ತ ಇವರ ಪಾದೋದಕವೆತ್ತ, ಕ್ರಿಯೆ ಎತ್ತ, ಅಕ್ರಿಯೆ ಎತ್ತ.

''*ನಿತ್ಯವೆಂಬ ಭಕ್ತನ ಮನೆಗೆ, ಘನ ಚೈತನ್ಯವೆಂಬ ಜಂಗಮ ಬಂದರೆ, ಜಲವಿಲ್ಲದ ಜಲದಲ್ಲಿ ಪಾದೋದಕ ಮಾಡಿದಂತಾಯಿತ್ತು*'' ಬಸವಾದಿ ಪ್ರಮಥರು ಭಕ್ತ ಜಂಗಮರ ಸ್ವಾನುಭವದ ಸಂಗಮವೆ ಮಡಿನೀರೆಂದು ತಿಳಿದರು. ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗಕ್ಕೆ ಘನ ಜಂಗಮವೆಂದು ತಿಳಿದರು. ಅವರ ಸ್ವಾನುಭವವು ಲಿಂಗವ ತೊಳೆಯುವ ಮಡಿನೀರೆಂದು ತಿಳಿದರು. ಅಂತಪ್ಪ ಸಮ್ಯಜ್ಞಾನರೂಪಿ ಸ್ವಾನುಭವದಿಂದ ಲಿಂಗಕ್ಕೆ ಮಡಿ ನೀರೆರೆಯುವದೆಂದರೆ ತನ್ನೊಳಗಿದ್ದ ಲಿಂಗ ತತ್ವ ಯತಾರ್ಥ ತಿಳಿವುದು. ತಿಳಿಯುವುದರಲ್ಲಿ ತಪ್ಪಾಗಿ ತಿಳಿದಿದ್ದರೆ ಸರಿಯಾಗಿ ತಾನಾರೆಂದರಿಯುವುದು ಇದು ನಿಜವಾದ ಲಿಂಗಾಭಿಷೇಕವಾಗಿದೆ.

ಚಿದ್‌ಭಸ್ಮವೆ ಭಸ್ಮವಾಗಿದೆ. ಸಮ್ಯಜ್ಞಾನದಿಂದ ತನ್ನ ಕರಣಂಗಳ ಪೂರ್ವಾಶ್ರಯ ಕೆಡುವುದೆ ಚಿದ್ ಭಸ್ಮವಾಗಿದೆ. ಈ ಜ್ಞಾನದ ಆಚಾರ ಮಾಡುವುದರಿಂದ ಯತಾರ್ಥ ಅರಿವು ಸಿದ್ಧವು. ಇದನ್ನು ಬಿಟ್ಟು ಪೂಜೆಗೊಂಬ ದೇವನಾರು ಎಂಬುದು ತಿಳಿದಿಲ್ಲ, ಪೂಜೆ ಮಾಡುವ ಭಕ್ತನಾರು ತಿಳಿದಿಲ್ಲ, ಹಾಗೆಯೇ ಪೂಜಾಲಿಂಗದಲ್ಲಿ ತಮ್ಮ ಕಂಗಳನ್ನು ಸ್ಥಾಪಿಸಿದರೆ ಲಿಂಗ ವಿಕಾಸವಾಯಿತ್ತೆ ? ತನ್ನ ಅಂತರಂಗದೊಳ್ ಸ್ವಯಂಜ್ಯೋತಿ ಲಿಂಗ

ಪ್ರಜ್ವಲಿಸಿತೆ ? ಇದೊಂದು ಲೋಕದವರಿಗೆ ತೋರಿಸಲು ಪ್ರತಿಷ್ಠೆಯು, ಇದರಿಂದ ಕಣ್ಣಿನ ಮಂದತ್ವ ಹೋಗುತ್ತದೆ.

ಮನದ ಮೇಲೆ ಅರಿವು, ಅರುವಿನ ಮೇಲೆ ಕುರುಹು ಇದೇನೊ ?: ಎಂದು ಪ್ರಭು ಪ್ರಶ್ನಿಸಿದುದು ಬಹು ಗಹನಾರ್ಥವು ಹಾಗೂ ಭ್ರಾಂತಿನಿರಸನ ಮಾಡಲು ಅತ್ಯಂತ ಕಳಕಳಿಯಿಂದುಕ್ತರಾಗಿ ಮಾಡಿದ ಕರುಣೆ. ಮನದ ಮೇಲೆ ಅರಿವು, ಮನ ಎಂದರೆ ಸಂಕಲ್ಪ ವಿಕಲ್ಪವಲ್ಲವೆ ? ಈ ಮನದ ಮೇಲೆ ಅರಿವು. ಅರಿವೆಂದರೆ ಕಲ್ಪನಾರಹಿತವು. ಇದೆಂಥ ವಿಚಾರ, ಮನವೆಂದರೆ ಅವಿಚಾರ, ಅರುವೆಂದರೆ ವಿಚಾರ, ಅವಿಚಾರದ ಮೇಲೆ ವಿಚಾರವೆ ? ಇದೆಂಥ ಅಜ್ಞಾನ. ಮನವೆಂದರೆ ಭ್ರಾಂತು. ಅರುವೆಂದರೆ ನಿಭ್ರಾಂತು, ಭ್ರಾಂತಿಯ ಮೇಲೆ ನಿಭ್ರಾಂತು ಸಾಧ್ಯವೆ. ಭ್ರಾಂತಿ ಎಂದರೆ ಭಾವರೂಪು, ಅರುವೆಂದರೆ ಭಾವಕ್ಕಗಮ್ಯವಾದುದು.

ಅರುವಿನ ಮೇಲೆ ಕುರುಹು ಇದೇನೊ : ಎಂದು ಪ್ರಭು ಚಕಿತನಾಗಿ ಇದೆಂಥ ಅಸಂಬಂಧವೆನ್ನುತ್ತಾನೆ. ಅರುವೆಂದಲ್ಲಿ ಕುರುಹು ಕಾಣಬಹುದೆ ? ನಿರವಯವೆಂದಲ್ಲಿ ಅವ ಯವ ಕಾಣಬಹುದೆ ? ನಿರೂಪವೆಂದಲ್ಲಿ ರೂಪವ ಕಾಣಬಹುದೆ ? ಸಚ್ಚಿದಾನಂದ ವೆಂದಲ್ಲಿ ನಾಮರೂಪವ ಕಾಣಬಹುದೆ ? ದೃಕ್ ಎಂದಲ್ಲಿ ದೃಶ್ಯವ ಕಾಣಬಹುದೆ ? ಇದೆಂಥ ಅನುಭವ, ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು. ಈ ನಾನು ನೀನೆಂಬುದು ಅರುವಿನ ಗಲಾಟೆ, ಭಾವ ರೂಪ ಗಲಾಟೆ. ಅನುಭಾವ ರೂಪದಲ್ಲಿ ಬಹುವಾಗಿ ಇದ್ದುದ ರಿಂದ ಇದರ ಪರಿಹಾರಕ್ಕೋಸ್ಕರ ನೀ ನಾನೆಂಬುದಕ್ಕೆ ತೆರಹಿಲ್ಲ ಗುಹೇಶ್ವರ ಎಂದು ಉತ್ತ ರವ ವಿವರಿಸಿದನು. ಪ್ರಭುದೇವ ಅನುಪಮ ಜ್ಞಾನಿ, ಅಖಂಡಿತ ಜ್ಞಾನಿ, ನಿಸ್ಸೀಮ ಜ್ಞಾನಿ ಯಾಗಿರುವುದರಿಂದ ಅಲ್ಲಿ ಚಿದಹಮ್ಮಿಗೂ ಇಂಬಿಲ್ಲ, ದಾಸೋಹಂ ಭಾವಕ್ಕೂ ಇಂಬಿಲ್ಲ, ಅರಿಯದರುವುಳ್ಳ ಅನುಪಮನಾಗಿರುವುದರಿಂದ ನಾನೀನೆಂಬುದಕ್ಕೆ ತೆರಹಿಲ್ಲ ಗುಹೇಶ್ವರ ಎಂದು ಹೇಳಿದುದಲ್ಲದೆ ತಾ ಕಂಡ ಅನುಪಮ ನಿಲವ ತಿಳಿಯಲು ಹೆದ್ದಾರಿ ಹಾಕಿದ್ದಾನೆ. ಇಲ್ಲಿ ಕಥನಕ್ಕೆ ನಿಲುಕದ ಅಕಥನೀಯ ನಿಲವ ಒಂದು ಪರಿಯಿಂದ ಇಲ್ಲದುದು ಇಲ್ಲ ಮಾಡಿ ಇದ್ದ ಅಪಾರ ತತ್ವ ತನ್ನಿಂದ ತಾನೆ ಪ್ರಜ್ವಲಿಸುವಂತೆ ಮಾಡಿಹನು.

**42**

**ಪೃಥ್ವಿಯನತಿಗಳೆದು ಅಪ್ಪುವಿಲ್ಲ, ಅಪ್ಪುವನತಿಗಳೆದು ಅಗ್ನಿ ಯಿಲ್ಲ ,**
**ಅಗ್ನಿಯನತಿಗಳೆದು ವಾಯುವಿಲ್ಲ, ವಾಯುನತಿಗಳೆದು ಆಕಾಶವಿಲ್ಲ ,**
**ಆಕಾಶವನತಿಗಳೆದು ನಾದವಿಲ್ಲ, ನಾದವನತಿಗಳೆದು ಬಿಂದುವಿಲ್ಲ ,**
**ಬಿಂದುವನತಿಗಳೆದು ಕಳೆಯಿಲ್ಲ, ಕಳೆಯನತಿಗಳೆದು ಆತ್ಮನಿಲ್ಲ ,**
**ಆತ್ಮವನತಿಗಳೆದು ಗುಹೇಶ್ವರ ಲಿಂಗವಿಲ್ಲ.** ॥ 1361 ॥

**ತಾತ್ಪರ್ಯ**: ಪ್ರಭು ತಾಕಂಡುಂಡ ಪರಮ ಸುಖದಿರುವ ಸಕಲ ಶರಣ ಸದು ಹೃದಯಕ್ಕೆಲ್ಲ ಬೆಳಗಿದ. ಕರುಣೆಯ ಅನುವ ನೋಡಿರೆ. ಇದೆಂಥ ಅತಿಗಳೆಯುವಿಕೆ, ಪಂಚ ಭೂತಂಗಳ ಅತಿಗಳೆಯುವರುಂಟು. ನಾದಬಿಂದು ಕಲೆಗಳ ಅತಿಗಳೆಯುವರುಂಟು. ಪ್ರಕೃತಿ

ಯನ್ನು ಅತಿಗಳೆದವರುಂಟು. ಆತ್ಮನೆನ್ನುವುದನ್ನೆ ಅತಿಗಳೆದವರುಂಟೆ ? ಇದೆಂಥ ದಿವ್ಯದೃಷ್ಟಿ. ಕೊನೆಗೆ ಗುಹೇಶ್ವರ ಲಿಂಗನೆನ್ನುವದೂ ಇಲ್ಲವೆಂದು ಉಸುರುವುದನ್ನೆಲ್ಲ ನಿಷ್ಪ್ರಯೋಜಕ ಮಾಡಿದನೆ ? ಈ ಸಾರಭೂತದಿರುವಿಗೆ ಏನನ್ನಬೇಕು, ಪುರುಷಾರ್ಥವೆನ್ನುವದೂ ಲಜ್ಜಾಸ್ಪದ. ಪರಮ ಪುರುಷಾರ್ಥವೆಂಬುದು ನಿರುಪಯೋಗ. ಇಲ್ಲಿ ಕಥನವೆ ಶಬ್ದಮುಗ್ಧ ವಾಗಿರುವಲ್ಲಿ ಇನ್ನೇನಿನ್ನೇನು.

ಪೃಥ್ವಿನತಿಗಳೆದ ಮೇಲೆ ದೇಹವೆಲ್ಲಿ, ದೇಹಭಾವವೆಲ್ಲಿ, ಈ ದೇಹದ ಅಹಂಕಾರ ವೆಲ್ಲಿ, ನಾಹಂ ಎನ್ನುವದೆಲ್ಲಿ ? ಮರವು ಅಜ್ಞಾನಕ್ಕಿಂಬಿಲ್ಲವೆಂದಲ್ಲಿ, ಅಪ್ಪುವಿನ ಅತಿಗಳೆಯು ವುದು ಸಹಜವು. ಅಪ್ಪುವೆಂದರೆ ಮನಸ್ಸು. ಈ ಮನವಿದ್ದಲ್ಲಿ ಸಂಸಾರ, ಸಂಸಾರ ಕ್ರೀಡೆಯು. ಕ್ರೀಡೆಯಿದ್ದಲ್ಲಿ ಇದನ್ನು ವಿಚಾರ ಮಾಡುವ ತತ್ವ, ಅತತ್ವವೆಂಬ ಸುವಿವೇಕರೂಪಿ ಜಲವೂ ಉಂಟು, ನಿತ್ಯವೆಂದರೆ ಲಿಂಗ, ಅನಿತ್ಯವೆಂದರೆ ಅಂಗ, ನಿತ್ಯವೆಂದರೆ ಜ್ಞಾನ. ಅನಿತ್ಯವೆಂದರೆ ಅಜ್ಞಾನ. ಅಂಗ ನಾಶವುಳ್ಳುದು, ಲಿಂಗ ನಾಶರಹಿತವು. ಹೀಗೆ ಹಂಸಕ್ಷೀರ ನ್ಯಾಯದಂತೆ ತೋರಿ ಇಲ್ಲವಾಗುವುದನ್ನು ಕೆಡಿಸಿ, ತೋರದಡಗದಾತ್ಮನ ಲಕ್ಷಣವ ತೋರಿಸುವುದು ಇದು ಸುವಿವೇಕ ರೂಪಿ ಅಪ್ಪುವಿನದಾಗಿದೆ. ಈ ಅಪ್ಪುವಿನ ಅತಿಗಳೆದಮೇಲೆ ಅಗ್ನಿಯೂ ಇಲ್ಲ, ಪ್ರವೃತ್ತಿ ರೂಪ, ಶೋಕ ಮೋಹವುಳ್ಳ ಸಂಸಾರ ರೂಪ ಕ್ರೀಡೆ ಇದಕ್ಕೆ ವಿರೋಧವಾದ ತತ್ವ, ಅತತ್ವ ವಿಭಾಗಿಸುವುದನ್ನೆ ಅಂದರೆ ಸುವಿವೇಕವ ಅತಿಗಳೆದ ಮೇಲೆ ಅಲ್ಲಿ ಅಗ್ನಿಯೂ ಇಲ್ಲ. ಅಗ್ನಿ ಎಂದರೆ ಜ್ಞಾನಾಗ್ನಿ, ಇಲ್ಲಿ ಎರಡು ವಿಧದ ಅಗ್ನಿ, ಒಂದು ಭ್ರಮಾತ್ಮಕ ಬುದ್ಧಿಯಲ್ಲಿ ಚಿತಾಗ್ನಿ, ಇದು ತ್ರಿವಿಧ ರೂಪವು, ಆಧ್ಯಾತ್ಮಿಕ ತಾಪ ಆದಿ ಭೌತಿಕ ತಾಪ ಆದಿ ದೈವಿಕ ತಾಪವೂ ಇಲ್ಲ. ಇವುಗಳೆ ಇಲ್ಲವೆಂದಲ್ಲಿ ಇವುಗಳ ನಷ್ಟ ಮಾಡುವ ಜ್ಞಾನಾ ಗ್ನಿಯೂ ಇಲ್ಲ, ನಿತ್ಯಾನಿತ್ಯವೆಂಬ ಸುವಿವೇಕರೂಪಿ ಜಲವೂ ಇಲ್ಲವಾದುದರಿಂದ ಇದನ್ನು ಅತಿಗಳೆವ ಲಿಂಗಾಂಗಸಮರಸ ಜ್ಞಾನವೂ ಇಲ್ಲ. ಅಗ್ನಿನತಿಗಳೆದ ಮೇಲೆ ವಾಯು ಇಲ್ಲ. ದೇಹವೆ ಇಲ್ಲ ಆದರ ಭಾವವಿಲ್ಲ, ಅಹಂಕಾರವಿಲ್ಲ, ಆದರ ಕ್ರಿಯೆ ರೂಪ ಕರ್ತೃತ್ವ ಭೋಕ್ತೃತ್ವರೂಪ ಸಂಸಾರವಿಲ್ಲ. ಮುಖ್ಯವಾಗಿ ದೇಹವಿಲ್ಲದ್ದರಿಂದ ವೈಶ್ವಾನರ ರೂಪಿ ಜಠರಾ ಗ್ನಿಯೆ ಇಲ್ಲವೆಂದಲ್ಲಿ ಅಲ್ಲಿ ವಾಯು ರೂಪ ಪ್ರಾಣವಿಲ್ಲ. ಪ್ರಾಣವೆ ಇಲ್ಲವೆಂದಲ್ಲಿ ಪ್ರಪಂಚ ರೂಪ ಕ್ರೀಡೆಯು ಇಲ್ಲ, ವ್ಯಷ್ಠಿ ಕ್ರೀಡೆಯು ಇಲ್ಲ, ಸಮಷ್ಠಿ ಕ್ರೀಡೆಯು ಇಲ್ಲ. ಇವೆರಡು ಇಲ್ಲವಾದಲ್ಲಿ ಸೋಹಂ, ಸೋಹಂ ಎನ್ನುವ 21,600 ಜಪಗಳಿಲ್ಲ, ಸೋಹಂ ಎನ್ನುವ ಜ್ಞಾನವೂ ಇಲ್ಲ, 21,600 ಸೋಹಂ ಎನ್ನುವ ಜ್ಞಾನವೂ ಇಲ್ಲ, ಜಪವೂ ಇಲ್ಲವೆಂದಲ್ಲಿ ವ್ಯಷ್ಠಿ ಸಮಷ್ಠಿರೂಪಿ ಪ್ರಪಂಚದ ನಾಟಕವೂ ಇಲ್ಲ. ಈ ನಾಟಕವೆ ಇಲ್ಲವೆಂದಲ್ಲಿ ಇದಕ್ಕೆ ಬುದ್ಧಿ ಹೇಳುವದಿಲ್ಲ. ಬೋಧವೆ ಇಲ್ಲವಾದಲ್ಲಿ ಪ್ರಣವಾಕಾರವೂ ಇಲ್ಲ, ಗುಣ ಮೂರು ಮುಟ್ಟದ ಗಣನೆಗತೀತವೆಂಬುದಿಲ್ಲ, ಜೀವ ಪರಮರೈಕ್ಯವೆಂಬ ಸಂಧಾನವೂ ಇಲ್ಲ, ಲಿಂಗ ವೆಂಬುದಿಲ್ಲ ಲಿಂಗೈಕ್ಯವೆಂಬುದಿಲ್ಲ, ಸಂಗವೆಂಬುದಿಲ್ಲ, ಸಮರಸವೆಂಬುದಿಲ್ಲ, ಆಯಿತ್ತೆಂಬು ದಿಲ್ಲ, ಆಗದ್ದೆಂಬುದಿಲ್ಲ, ವಾಯುನತಿಗಳೆದು ಆಕಾಶವೂ ಇಲ್ಲ, ಶ್ವಾಸ ಪ್ರಶ್ವಾಸಗಳನ್ನೆ ಅತಿಗ ಳೆದ ಮೇಲೆ ಕಲ್ಪಿತನೆಂಬುದಿಲ್ಲ, ಕಲ್ಪಿತನೆಂಬುದನ್ನೆ ಅತಿಗಳೆದ ಮೇಲೆ ಮಹಾಜ್ಞಾನವೆಂಬು ದೆಲ್ಲಿಯದು. ಇದು ತರ್ಕದಿಂದುಂಟಾದುದಲ್ಲ, ಸಂವಾದದಿಂದುಂಟಾದುದು ಅಲ್ಲ, ಗುರೂಪದೇಶವಲ್ಲ, ಸಮಾಧಿಯಿಂದುಕ್ತವಾದುದಲ್ಲ, ಆಕಾಶವನತಿಗಳೆದು ನಾದವೂ ಇಲ್ಲ,

ನಾದವ ನತಿಗಳೆದು ಬಿಂದು ಇಲ್ಲ, ಬಿಂದುವನತಿಗಳೆದು ಕಲೆಯಿಲ್ಲ, ಕಲೆಯ ನತಿಗಳೆದು ಆತ್ಮವಿಲ್ಲ, ಆತ್ಮವನತಿಗಳೆದು ಗುಹೇಶ್ವರ ಲಿಂಗವೂ ಇಲ್ಲ.

ಕಲ್ಪಿತನೆಂಬುದು ಅತಿಗಳೆದ ಮೇಲೆ ಕಲ್ಪಿತನ ನಿರಸನ ಮಾಡುವ ಮಹಾಜ್ಞಾನವೂ ಇಲ್ಲ, ಮಹಾಜ್ಞಾನವ ಅತಿಗಳೆದ ಮೇಲೆ ನಾದವೂ ಇಲ್ಲ, ಯೋಗಿಗಳಲ್ಲಿ ತೋರುವ ದಶ ವಿಧ ನಾದವೂ, ಪ್ರಣವನಾದವೂ ಇಲ್ಲ, ಪೂರ್ಣಮದಃ ಪೂರ್ಣಮಿದಂ ಎನ್ನುವ ಅಪಾರ ನಾದವೂ ಇಲ್ಲ. ಇದನ್ನು ಅತಿಗಳೆದ ಮೇಲೆ ಬಿಂದುವಿಲ್ಲ, ಬಿಂದು ? ಇದು ಜ್ಞಾನ ಬಿಂದು. ಚಿದ್ಬಿಂದು ಇದು ಇಲ್ಲ, ಇದುವೆ ಇಲ್ಲವೆಂದಲ್ಲಿ ಇದರ ಸಂಜ್ಞೆಯನೊಳಕೊಂಡ ಪಿಂಡಾಂಡದ ಕುರುಹು ಇಲ್ಲ, ಬ್ರಹ್ಮಾಂಡದ ಕುರುಹು ಇಲ್ಲ, ನರರ, ಸುರರ, ಅಸುರರ, ದೇವತಾ ಗಣ, ರುದ್ರಗಣ, ಪ್ರಮಥ ಗಣರ ಆರಾರ ಕುರುಹು ಇಲ್ಲ. ಸತ್ಯರ ನಿತ್ಯರ ಮುಕ್ತರ ಮಹಾಮಹಿಮರ ಜ್ಞಾನಕಲೆ ಚಿತ್ಕಲೆಯು ಇಲ್ಲ ; ಲಕ್ಷಣವೂ ಇಲ್ಲ ಲಕ್ಷ್ಯವೂ ಇಲ್ಲ, ಕಲೆಯನತಿಗಳೆದು ಆತ್ಮನಿಲ್ಲ, ಆತ್ಮನತಿಗಳೆದು ಗುಹೇಶ್ವರ ಲಿಂಗವಿಲ್ಲ.

ಜ್ಞಾನಕಲೆ, ಚಿತ್ಕಲೆಯ ನತಿಗಳೆದ ಮೇಲೆ ಜ್ಞಾನ ಸ್ವರೂಪ ಜ್ಞಾನಾನಂದ, ಸಚ್ಚಿದಾ ನಂದನೆಂಬುದು ಇಲ್ಲ. ಈ ಚಿದಾನಂದನೆಂಬಾತ್ಮನನ್ನೆ ಅತಿಗಳೆದ ಮೇಲೆ ಮೌನಮುದ್ರೆ ಧರಿಸಿದ ಲಿಂಗ ನೋಡ ಹೋಗಿ ಲೀಯವಾದ ಅನಿಮಿಷ ದೃಷ್ಠಿಯು ಗುಹೇಶ್ವರ ಲಿಂಗವೂ ಇಲ್ಲವೆಂದು ತನ್ನ ಅಲಕ್ಷ್ಯವಾದ ಘನಕ್ಕೆ ಘನವಾದ ಸ್ವಮಹಿಮೆಯ ನಿಮ್ಮಿರುವ ನೀವೆ ನೋಡಿಕೊಳ್ಳಿ ಎಂದು ತಾನಾರೆಂದರಿದ ಘನಕ್ಕೆ ಘನ ತನ್ನಿರುವಿನ ಮಹಿಮೆಯ ಸೂಚಿಸಿ ದನಲ್ಲದೆ ಸ್ವಾನುಭವ ಸಾಗರದೊಳಗಿರ್ದ ಶರಣಂಗೆ ಅನುಭವದ ಮಾತ ಬಯಸುವರೆ ? ನುಡಿಗೆಡೆಗೊಡದ ಘನದೊಳಗಿರ್ದ ಶರಣಂಗೆ, ಪುರುಷಾರ್ಥ ಘನವ ಬಣ್ಣಿಸುವರೆ ? ಲಿಂಗ ಘನವೆ ತಾನಾಗಿರ್ದ ಮಹಿಮಂಗೆ ಸಾಲೋಕ್ಯ ಸಾರೂಪ್ಯ ಸಾಯುಜ್ಯ ಸಾಮೀಪ್ಯವ ಬಯಸುವನೆ ? ಬಯಸುವವರು ಭ್ರಾಂತರು.

**43**

**ಕ್ಷೀರಸಾಗರದೊಳಗಿರ್ದ ಹಂಸಗೆ ಹಾಲ ಬಯಸಲುಂಟೆ ?**
**ಪುಷ್ಪದೊಳಗಿರ್ದ ತುಂಬಿಗೆ ಪರಿಮಳವ ಬಯಸಲುಂಟೆ ?**
**ತಾವು ಲಿಂಗದೊಳಗಿದ್ದು ಬೇರೆ ಇತರ**
**ಕಾಮಾರ್ಥ್ಯದೊಳಗಿರ್ದ ಭ್ರಾಂತರನೇನೆಂಬೆ ಗುಹೇಶ್ವರಾ.**

**ತಾತ್ಪರ್ಯ:** *ಕ್ಷೀರ ಸಾಗರದೊಳಗಿರ್ದ ಹಂಸ ಹಾಲ ಬಯಸಲುಂಟೆ ?:* ಹಂಸ ? ಇದಾವ ಹಂಸ, ಇದರ ಸುಕೃತವ ಅದಾರು ವರ್ಣಿಸುವದು, ಹಂಸವೆ ಕ್ಷೀರ ಸಾಗರದೊಳ ಗಿರುವದೆಂದರೆ ಸಾಮಾನ್ಯವೆ ? ಈ ಘನ ಪುಣ್ಯಕ್ಕೇನನ್ನಬೇಕು ? ಕ್ಷೀರ ಸಾಗರ ಅದಾವ ಕ್ಷೀರ ಸಾಗರ ? ಇದು ದೇವತೆಗಳು ನಿರ್ಮಿಸಿದ ಕ್ಷೀರ ಸಾಗರವೆ ? ದೇವಗಣ, ರುದ್ರ ಗಣ, ಪ್ರಮಥಗಣ ನಿರ್ಮಿಸಿದ ಕ್ಷೀರ ಸಾಗರವೆ ? ಅಥವಾ ದೇವನಿಂದ ರಚಿಸಿದ ಕ್ಷೀರ ಸಾಗರವೆ ? ಇದಾರ ಕ್ಷೀರ ಸಾಗರ. ಇದು ದೇವ ದೇವನ ಮಹಾ ಪ್ರಸಾದಿರೂಪಿ ಕ್ಷೀರ ಸಾಗರ. ಕ್ಷೀರ ಸಾಗರವೆಂದರೆ ಭಗವದ್ಗೀತಾರೂಪಿ ಕ್ಷೀರಸಾಗರ. ಶರಣ ಶರಣೆಯರ ವಚ

ನಾಮೃತ ರೂಪಿ ಕ್ಷೀರ ಸಾಗರ. ದತ್ತ ಅವಧೂತ ಗೀತಾರೂಪಿ ಕ್ಷೀರ ಸಾಗರ. ಸತ್ಸಂಗರೂಪಿ ಕ್ಷೀರ ಸಾಗರ, ಸದ್ಗುರು ದೇವನಿಂದ ಹೊರಹೊಮ್ಮಿದ ಕ್ಷೀರಸಾಗರ. ಇದು ಪರಮಾಮೃತ ರೂಪಿ ಕ್ಷೀರಸಾಗರ. ಇದು ಚಿದ್ರಸದ ಸುಖಾಮೃತರೂಪಿ ಕ್ಷೀರಸಾಗರ.

ಹಂಸ ಆವುದು ? ಜೀವವೆಂಬ ಹಂಸ, ವಿವೇಕವೆಂಬ ಹಂಸ, ಪರಬ್ರಹ್ಮವೆ ತಾನೆಂಬ ಹಂಸ. ಇದು ಪೂರ್ಣಭಾವದ ಹಂಸ, ಜ್ಞಾನಾನಂದ ಸವಿಯುವ ಹಂಸ, ಚಿದ್ರ ಸವ ಸವಿಯುತ್ತ, ಸವಿಯುತ್ತ ಅಲ್ಲಿಯೆ ರಮಿಸುವ ಹಂಸ, ಇದು ಮಹಾತ್ಮರ ಮಹಾನು ಭವಿರೂಪಿ ಕ್ಷೀರಸಾಗರದೊಳಗಿರ್ದ ಹಂಸ, ಸತ್ಸಂಗ ರೂಪಿ ಕ್ಷೀರ ಸಾಗರದೊಳಗಿರ್ದು ನಿತ್ಯಾನಂದ ಸವಿಯುವ ಹಂಸ, ಬ್ರಹ್ಮಾನಂದವ ಸವಿಯುತ್ತ, ಸವಿಯುತ್ತ ಅಲ್ಲಿಯೆ ತಲ್ಲೀ ಯವಾದ ಹಂಸ. ವಚನಾಮೃತರೂಪಿ ಕ್ಷೀರಸಾಗರದೊಳಗಿರ್ದ ಹಂಸ.

ಕ್ಷೀರಸಾಗರದೊಳಗಿರ್ದು ಹಾಲಬಯಸಲುಂಟೆ ? ಶರಣ ಶರಣೆಯರ ವಚನಾ ಮೃತವೆಂಬ ಕ್ಷೀರಸಾಗರದೊಳಗಿರ್ದು, ಅಕ್ಷರ ಬಲ್ಲೆವೆಂದು ಹೇಳಿಕೊಳ್ಳುವ ಉಪದೇಶವ ಬಯಸುವರೆ ? ಸದ್ಗುರುನಾಥನ ಸುಜ್ಞಾನರೂಪಿ ಕ್ಷೀರಸಾಗರದೊಳಗಿರ್ದು ಪುರುಷಾರ್ಥವ ಪೇಳುವ ಅನುಭವ ಬಯಸುವರೆ ? ಅಚಿಂತ್ಯ ರೂಪಿ ಕ್ಷೀರಸಾಗರದೊಳಗಿರ್ದು ಅನು ಸಂಧಾನವ ಬಯಸುವರೆ ? ಅಮೃತ ಕುಂಡದಲ್ಲಿದ್ದು ಹಾಲ ಬಯಸುವರೆ ? ಜ್ಞಾನಾ ಮೃತದೊಳಿರ್ದು ನಿತ್ಯಾನಂದವ ಬಯಸಲುಂಟೆ ? ಘನ ಸುಖದಲ್ಲಿರ್ದವಂಗೆ ನಿಶ್ಚಿಂತದ ತವಕವೇಕೆ ? ಪರಬ್ರಹ್ಮಕ್ಕೆ ಬ್ರಹ್ಮನಾಗುವ ಬಯಕೆಯೆ ? ಬ್ರಹ್ಮನಿಷ್ಠ ಬ್ರಹ್ಮನಾಗುವ ಬಯ ಕೆಯೆ ? ಚಿದ್ರಸದಲ್ಲಿ ಲೀಯವಾದವಂಗೆ ಚಿದ್ರೂಪವ ಬಯಸಲುಂಟೆ ? ಅಮರನಿಗೆ, ಅಮರತ್ವ ಬಯಸಲುಂಟೆ ? ನುಡಿಗೆಡೆಗೊಡದ ಘನವಂತನು, ಶೃತಿಗಳ ಬಯಸಲುಂಟೆ ? ಮಾನವ ಈ ಕ್ಷೀರ ಸಾಗರದ ಸುಖವ ಸವಿಯದ್ದರಿಂದ ದಿನೆ ದಿನೆ ಬಯಕೆಯಲ್ಲಿ ಬಳಲುತ್ತಿಹನು. ಮಾನವರೂಪಿ ಹಂಸ ಈ ಜ್ಞಾನಾಮೃತ ಕ್ಷೀರಸಾಗರಕ್ಕೆ ಅನನ್ಯ ಭಾವದಿಂದ ಶರಣಾಗತನಾಗಿ ಚಿತ್ತೇಕಾಗ್ರದಿಂದ ಈ ವಚನಾಮೃತರೂಪಿ ಚಿದ್ರಸವ ಸವಿಯುವನು. ಆಗ ತಾನಾರೆಂಬ ತನ್ನಿರುವ ತನಗೆ ಪ್ರಜ್ವಲಿಸಿ, ತನ್ನ ಸುಖಾಮೃತವ ಸುಖಿಸುವನು. ಇದು ಕಾರಣ ಪುಣ್ಯಪುರುಷರು ಈ ಕ್ಷೀರ ಸಾಗರದೊಳಿರುವದು ಕಲಿಯ ಬೇಕು, ಇದರಿಂದ ಆವಾವ ಬಯಕೆಗಳು ಕಾಡಲಾರವು. ಪುಷ್ಪದೊಳಗಿರ್ದ ತುಂಬಿಗೆ ಪರಿ ಮಳ ಬಯಸಲುಂಟೆ ? ಪುಷ್ಪ ಇದಾವ ಪುಷ್ಪ ? ಈ ಪುಷ್ಪದೊಳಿರುವ ತುಂಬಿ, ಇದಾವ ತುಂಬಿ ಚಿದಾನಂದರೂಪಿ ಶ್ರೀಕೃಷ್ಣನೆ ಪುಷ್ಪ, ಆತನ ಹೃದಯದಿಂದ ಹೊರಹೊಮ್ಮಿ ಬರುವ ಅದ್ವೈತಾಮೃತವೆ ಪುಷ್ಪದೊಳಿರುವ ಮಕರಂದವು, ಅಣ್ಣ ಬಸವಣ್ಣ, ಚನ್ನಬಸವಣ್ಣ ಪ್ರಭು ದೇವ, ಅಕ್ಕಮಹಾದೇವಿ ಮೊದಲಾದ ಶರಣ, ಶರಣೆಯರೆ ಪುಷ್ಪ. ಅವರ ಹೃದಯದಿಂದ ಪ್ರಕಟವಾಗಿಹ ವಚನಾಮೃತ ಸಾಹಿತ್ಯವೆ ಮಕರಂದವಾಗಿದೆ.

ಅನಾಮಯವಾಗಿರುವ ನಿರ್ವಾಣರೂಪಿ ದತ್ತದೇವನೆ ಪುಷ್ಪ. ಆತನ ಹೃದಯ ದಿಂದ ಹೊರ ಹೊಮ್ಮಿದ ಅವಧೂತ ಗೀತೆಯೆ ಮಕರಂದವಾಗಿದೆ. ತುಂಬಿ ಆವುದು. ಪುಷ್ಪದ ಮಕರಂದವ ಹೀರುವದೆ ತುಂಬಿಯಾಗಿದೆ. ಸಚ್ಚಿದಾನಂದ ಸವಿಯುವ ತುಂಬಿ. ಇದು ಅಕ್ಷಯ ಸುಖ ಸವಿಯುವ ತುಂಬಿ. ಅರುವ ಅರಿದರಿದು ನೋಡುವ ತುಂಬಿ, ಅದರ ಸುಖದಲ್ಲಿ ರಮಿಸುವ ತುಂಬಿ, ಪೂರ್ಣವೆ ತಾನಾಗಿಹ ತುಂಬಿ, ಸಚ್ಚಿದ್ಘನದ ತುಂಬಿ,

ಇದು ಲಿಂಗೈಕ್ಯ ಸುಖವ ಸುಖಿಸುವ ತುಂಬಿ. ನಿಶಬ್ದ ವೇದಿಯ ತುಂಬಿ. ಇದು ಮೌನದ ಮೌನವಾಗಿ ಚಿನ್ಮುದ್ರೆಯಲ್ಲಿದ್ದ ತುಂಬಿ. ಇದು ಘನಕ್ಕೆ ಘನವಾಗಿಹ ಸುಖದಲ್ಲಿದ್ದ ಸುಖವ ಬಯಸುವದೆ ? ಸುಖವೆ ತಾನಾಗಿದ್ದು, ಸುಖವ ಬಯಸುವದೆ ? ತಾನೆ ಅಚಿಂತ್ಯಾತ್ಮ ತಾನಿದ್ದು ನಿಶ್ಚಿಂತವ ಬಯಸುವದೆ ?

ತಾನೆ ಅನುಪಮ ಲಿಂಗದೊಳಿರ್ದು ಬೇರೆ ಕಾಮ್ಯಾರ್ಥವ ಬಯಸುವ ಭ್ರಾಂತರ ನೇನೆಂಬೆ ಗುಹೇಶ್ವರ. ತಾನೆ ಲಿಂಗದೊಳಿರುವದೆಂದರೆ; ಘನ ಗಂಭೀರ ಮಹಾ ಘನದೊಳಗೆ ಘನಕ್ಕೆ ಘನನಾಗಿರ್ದನಯ್ಯ. ಅಂದರೆ ಅಂಗವರಿಯಹೋಗಿ ಲಿಂಗ ಘನವಾದರೆ ತಾನು ಘನಕ್ಕೆ ಘನವಾಗಿ ತನ್ನಿಂದ ತನ್ನ ಕಂಡುದೆ ಲಿಂಗದೊಳಿದ್ದಂತೆ. ಲಿಂಗ ಅರುವಾದರೆ ತಾನು ಅರುವಿಂಗರುವಾಗಿದ್ದುದು ತನ್ನಿಂದ ತನ್ನ ಕಂಡುದು, ತನ್ನ ಸ್ವಮಹಿಮೆಯೊಳ ತಾನಿದ್ದುದೆ ತಾನು ಲಿಂಗದೊಳಿರ್ದು ಎಂದು ಹೇಳಿದೆ. ಇಂತಪ್ಪ ಮಹಾಂತ ಪುನಃ ಅಖಂಡ ಸುಖವ ಮರೆತು ಅನಿತ್ಯಬೋಗ ಸುಖ ಬಯಸುವದೆಂದರೆ ಭ್ರಾಂತರ ಕಾರ್ಯ ಮರವಿನ ಕಾರ್ಯ ಮೇಲೆ ಹಾರಾಡುವ ವಿಮಾನ ಕೆಳಗೆ ಬಿದ್ದು, ಅಪಘಾತವಾದಂತೆ, ತಾನು ಲಿಂಗವಾಗಿ ಸ್ವಯಾನಂದದೊಳಿರ್ದು ಪುನಃ  ಪರತಂತ್ರ ಸುಖಕ್ಕೆ ಒಪ್ಪಿ ಇಹ ಪರಲೋಕದ ಭೋಗೈಶ್ವರ್ಯ ಬಯಸುವುದು ಇಲ್ಲವೆ ಬ್ರಹ್ಮ ಪದವಿ, ವಿಷ್ಣು ಪದವಿ, ರುದ್ರಪದವಿ, ನಾನಾ ಪದವಿಗಳ ಇಚ್ಛೆಯುಳ್ಳವರು ಇವರು ಭ್ರಾಂತರು. ಇವರಿಗೇನನ್ನಬೇಕೆಂದು ಪ್ರಭು ಖಂಡಿಸಿದ್ದಾನೆ. ಈ ಭ್ರಾಂತರು ತನ್ನ ಘನವ ತಾನರಿಯನು. ಲಿಂಗ ಘನವ ಅರಿಯನು. ಇವರು ಎರಡು ಅರಿಯದ ಉಭಯ ಭ್ರಷ್ಟರು ಇವರು ಕೆಟ್ಟಕೇಡಿಂಗೆ ಕಡೆಯಿಲ್ಲ.

**44**

**ಕಾಲು ಮುಖ ತೊಳೆದುಕೊಂಡ  ಬಳಿಕ ಮಜ್ಜನಕ್ಕೆರೆವರು,**
**ತಾನು ಲಿಂಗವೊ? ತನ್ನ ಕೈಯದು ಲಿಂಗವೊ ?**
**ಆವುದು ಲಿಂಗ ಹೇಳಿರೆ? ಲಿಂಗಸ್ಥಲವನರಿಯದೆ**
**ಎರಡರಿಂದ ಕೆಟ್ಟರು ಗುಹೇಶ್ವರಾ.**  ॥ 313 ॥

**ತಾತ್ಪರ್ಯ**: ಕಾಲು ಮುಖ ತೊಳೆದುಕೊಂಡ ಬಳಿಕ ಮಜ್ಜನಕ್ಕೆರೆವಿರಿ, ತಾನು ಲಿಂಗವೊ ? ತನ್ನ ಕೈಯದು ಲಿಂಗವೊ ? ಆವುದು ಲಿಂಗ ಹೇಳಿರೆ ? ಪ್ರಭು ಸಹಜ ಸಕಲರ ಪೂಜೆ ಆಗುವ ರಹಸ್ಯವನ್ನು ಸಕಲರಿಗೂ ತಮ್ಮಿಂದ ತಮಗಾಗುವ ಅನುಭವವನ್ನು ತಿಳಿಪಡಿಸಿಹನು. ಕಾಲಮುಖ ತೊಳೆಯುವುದು : ಕಾಲು, ಮುಖ ತೊಳೆದುಕೊಂಡು ನಂತರ ಲಿಂಗಕ್ಕೆ ಮಜ್ಜನ ಎರೆವುದು. ಇದು ಸಹಜ ಕ್ರಿಯೆಯಾಗಿದೆ. ಪರಂಪರೆಯಿಂದ ಬಂದ ರೂಢಿಯಾಗಿದೆ. ಇದರಲ್ಲಿರುವ ಗೂಢ ಗುಟ್ಟು ಅದಾರಿಗೆ ವಿದಿತವು ? ಅರಿದು ನೋಡಿದಡೆ ಕಾಲು ಮುಖ ತೊಳೆಯುವುದು ತನ್ನದೆ ಅಲ್ಲವೆ ? ಮೊದಲು ತನ್ನ ಪೂಜೆ, ಹಿಂದಿನಿಂದ ಕೈಯಲ್ಲಿರುವ ಲಿಂಗ ಪೂಜೆ, ತಿಳಿಯದೆ ಇದನ್ನು ವಿಪರೀತವಾಗಿ ತಿಳಿದಿದ್ದಾರೆ. ತಾನು ಅಶುದ್ಧನಾಗಿಹನಂತೆ, ನೀರಿನಿಂದ ಮುಖ, ಕಾಲು ತೊಳೆದು ಶುದ್ಧವಾಗಿ ನಂತರ ಲಿಂಗಯ್ಯನ ಮಜ್ಜನ ಮಾಡಲು ಅರ್ಹರು ಎಂಬ ಪರಂಪರೆಯಪರಿ ಅಲ್ಲವೆ ?

ಸುಜ್ಞಾನಿಗಳ ದೃಷ್ಟಿಗೆ ಇದು ವಿಚಿತ್ರವಾಗಿದೆ. ಏಕೆಂದರೆ ತಾನು ದೇವನ ದೇವನಾಗಿ ರುವದರಿಂದ ಮೊದಲು ತನ್ನ ಪೂಜೆ ಆಗಿ; ಹಿಂದಿನಿಂದ ಪೂಜಾಲಿಂಗದ ಪೂಜೆ ಸಹಜ ನಡೆದಿರುವುದು, ಎಂಬುದು ಅವರ ದಿವ್ಯದೃಷ್ಟಿ. ತಾನಾರೆಂದರಿತವರು ತಮ್ಮ ಘನ ದೃಷ್ಟಿಗೆ ತಾನು ಮುನ್ನ ಮುನ್ನವೆ ದೇವನ ದೇವನಾಗಿದ್ದವ ಅಂದರೆ ಲಿಂಗಕ್ಕೆ ಲಿಂಗವಾಗಿದ್ದವ. ತನ್ನನ್ನು ಅದಾರು ಸೃಷ್ಟಿಸಬೇಕು. ತಾನು ವಿಶ್ವದ ಒಳಹೊರಗೆನ್ನದೆ ವ್ಯಾಪಕ. ಅಣು, ರೇಣು, ತೃಣ, ಕಾಷ್ಠದೊಳಗೆ ಪರಿಪೂರ್ಣನಾಗಿಹ ಚಿಜ್ಯೋತಿ, ಈ ದೇವ ಕೊರಳೊಳ ಲಿಂಗ ಧರಿ ಸಿದ್ದವರಲ್ಲಿ ಅಷ್ಟೆ ಇದ್ದು, ಉಳಿದವರಲ್ಲಿ ಲಿಂಗ ಇಲ್ಲವೆನ್ನುವ ಹಾಗಿಲ್ಲ. ವಿಶ್ವವೆ ಲಿಂಗಮ ಯವಾಗಿಹುದು. ತಾನೆ ದೇವನಾದುದರಿಂದ ತನ್ನ ಪೂಜೆ ತನ್ನಿಂದ ತಾನೆ ಆಗುವ ಈ ರಹಸ್ಯ ಅದಾರು ಬಲ್ಲರು. ಇದನ್ನು ಬಲ್ಲವರು ಮಹಾತ್ಮರು. ಪ್ರಭು ದೇವ. ಶರಣ ಶರಣೆ ಯರು. ತನ್ನಿಂದ ತಾನೆ ಪೂಜೆ ಆಗುವ ರಹಸ್ಯ ಅರಿದರಿದು ನೋಡುವುದು, ಆಗ ಸಮಾ ಜವೆಂಬುದು ದೇವ. ಚೈತನ್ಯ ದೇವ, ಪೂರ್ಣ ದೇವ ಇದ್ದುದರಿಂದ ಪಕ್ಷಿ ಮೊದಲು ಮಾಡಿ, ಮೊದಲು ಸ್ನಾನ ಮಾಡುವವು. ಅದರಲ್ಲಿ ಮತಿವಂತ ಮಾನವ ದೇವನ ಮಜ್ಜನ ಮಾಡುವರು. ಇದರ ರಹಸ್ಯ ತಿಳಿಯದ್ದರಿಂದ ಕೈಯೊಳಗಿರುವ ಲಿಂಗ. ಗುಡಿಯೊಳಗಿರುವ ದೇವನು, ಪೂಜೆಗೊಂಬ ದೇವನಾಗಿದ್ದಾನೆ. ತಾನು ಪೂಜಿಸುವ ಭಕ್ತನಾಗಿದ್ದಾನೆ. ಯತಾರ್ಥವಾಗಿ ನೋಡಿದರೆ, ಕೈಯೊಳಗಿರುವ ಲಿಂಗವಾಗಲಿ, ಗುಡಿಯೊಳಗಿರುವ ದೇವ, ದೇವನಾಗುವುದು ಹೇಗೆ ?

ದೇವನೆಂದರೆ ಅವಯವವುಳ್ಳವನೊ ? ನಿರವಯನೊ ? ಜಡನೊ ? ಚೇತನನೊ ? ಚೈತನ್ಯನೊ ? ನಾಶವುಳ್ಳವನೊ ? ನಾಶರಹಿತನೊ ? ದೇವನಾದ ಮೇಲೆ ನಾಶವುಳ್ಳವನು ಹೇಗೆ ಆಗುವನು. ನಾಶರಹಿತನು ದೇವನು. ಗುಡಿಯೊಳಗಿರುವ ದೇವನು ನಿರವಯನೊ ? ಅದಕ್ಕೆ ಅವಯವದ ಆಕಾರವು, ಅದು ಹೇಗೆ ನಿರವಯವಾಗುವುದು. ಕೈಯದು ಲಿಂಗ ಪೀಠಿಕೆ. ಅದಕ್ಕೆ ಕಂತೆಯು ಸಾವಯವ ಅಲ್ಲವೆ ? ಅದು ತೆಳಗೆ ಬಿದ್ದರೆ ಭಿನ್ನವಾಗುವುದಿಲ್ಲವೆ ? ಆಗ ಅದು ಪೂಜೆಯಿಂದ ಹೊರಗಾಗಲಿಲ್ಲವೆ ? ಗುಡಿ ಒಂದು ಕಾರಣದಿಂದ ಜೀರ್ಣವಾಗಿ ಬಿದ್ದರೆ ಒಳಗಿರುವ ದೇವನ ಆವುದೆ ಭಾಗ ಮುಕ್ಕಾಗಲಿಲ್ಲವೆ ? ಈ ರಹಸ್ಯವ ತಿಳಿದು ಕೈಯೊಳಗಿರುವ ಪೂಜಾಲಿಂಗವು ನಾಶರಹಿತ ವೆಂದು ಭಾವಿಸಿದರೂ ಅದು ನಾಶವಾಗಲಿಲ್ಲವೆ ? ಚೈತನ್ಯವಾಯಿತೆ ? ತನ್ನಿರವುಳ್ಳ ಅರುವು ಆಯಿತೆ ? ಆಗದು. ತಾನು ಅನಾದಿ, ಲಿಂಗ ಆದಿ. ಗುಡಿಯೊಳಗಿರುವ ದೇವನು ಆದಿ, ತಾನು ಅನಾದಿ. ಬಾರಾ ಜ್ಯೋತಿರ್ಲಿಂಗವು ಇರಲಿ ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿರುವ ದೇವ ರುಗಳೆಲ್ಲ ಪೂರ್ವಿಕವು, ತಾನು ಅಪೂರ್ವಿಕ.

ಶಿಷ್ಯ ಅನಾದಿ, ಗುರು ಆದಿ. ಭಕ್ತ ಅನಾದಿ, ಜಂಗಮ ಆದಿ. ಗುರು ಪೂರ್ವಿಕ, ಶಿಷ್ಯ ಅಪೂರ್ವಿಕವು. ಜಂಗಮ ಪೂರ್ವಿಕ, ಭಕ್ತ ಅಪೂರ್ವಿಕ. ಇಲ್ಲಿ ಭವಿ ತಾನೆ, ಅಪೂರ್ವಿಕ ಘನಕ್ಕೆ ಘನ ತಾನೆ. ಅಪೂರ್ವಿಕವಾವುದು, ಅದು ಮುನ್ನ ಮುನ್ನವೆ ಆಗಿದ್ದುದು. ತನ್ನಿಂದ ತಾನೆ ಆದುದು. ಆರಾರು ಮಾಡಿದುದು ಅಲ್ಲ, ಪೂರ್ವಿಕವಾವುದು ಅದು ಹಿಂದಿನಿಂದ ಆದುದು. ಒಬ್ಬನಿಂದ ಆದುದು. ಅಪೂರ್ವಿಕ ಆದುದಲ್ಲ, ಹೋದುದಲ್ಲ ಇದ್ದಂತಿರುವ ನಿರಂತರವಾಗಿಹ ಮಂಗಳಮಯ ತತ್ವ ಆವುದು ಲಿಂಗ ಹೇಳಿರೆ ? ಈ ಪ್ರಶ್ನೆಗೆ ಉತ್ತರ

ಲಿಂಗವಂತರೆ ಇರಲಿ, ಆರೆ ಇರಲಿ, ಆರು ತನ್ನ ತಾನರಿತವರು ಅವರಿಂದ ಸಿಗುವ ಉತ್ತರ ಪ್ರಭುಲಿಂಗವರಿತ ಘನವಂತ ತನ್ನ ತಾನರಿತ ಮಹಾಂತನಾದುದರಿಂದ ಆವುದು ಲಿಂಗ ಹೇಳಿರೆ ಎಂದು ಪ್ರಶ್ನಿಸಿಹನು.

ಆವುದು ಪೂರ್ವಿಕವು ಅದುವೆ ತಾನು, ತಾನೆ ಲಿಂಗವಿರುವಲ್ಲಿ ತನ್ನ ಕೈಯ ಲಿಂಗ ಅಪೂರ್ವಿಕವಾಗದು. ಇದು ಪೂಜಾಲಿಂಗವಾದುದು. ಕುರುಹಿನಿಂದುಕ್ತವಾದುದು, ಘನ ಲಿಂಗವಾಗದು, ತನ್ನ ಸ್ವರೂಪವಾಗದು, ವಿಶ್ವವೆಲ್ಲ ಲಿಂಗಮಯವಾದುದರಿಂದ ಕಾಲ ಮುಖ ತೊಳೆದುಕೊಳ್ಳುವದೆಂದರೆ, ತನ್ನ ಮಜ್ಜನ ಮಾಡಿಕೊಳ್ಳುವುದು. ಇದನರಿಯದೆ ಪೂಜಾ ಲಿಂಗವ ಪೂಜಿಸಿ ಪೂಜಿಸಿ ಕೆಟ್ಟರು. ಲಿಂಗಸ್ಥಲವನರಿಯದೆ ಎರಡರಿಂದ ಕೆಟ್ಟರು. ಗುಹೇಶ್ವರ ಲಿಂಗ ಸ್ಥಲವ ತಿಳಿಯದ್ದರಿಂದ ಲಿಂಗವ ತಿಳಿಯಲಿಲ್ಲ, ಲಿಂಗವು ಪೂಜಾ ಮಾಡಿಸಿಕೊಳ್ಳುವ ದಾಯಿತ್ತು. ತಾನೆ ಪೂಜೆ ಮಾಡುವ ಭಕ್ತನೆ ಆದನು. ಈ ಸ್ವಾಮಿ ಸೇವಕ, ಭಾವ, ಕ್ರಿಯೆ, ಪೂಜಾ ವಿಧಾನ ಇವೆಲ್ಲ ಮರವಿಂಗಲ್ಲದೆ, ಅರುವಿಂಗಲ್ಲವು.

ಲಿಂಗಸ್ಥಲವೆಂಬುದು ಅನುಪಮಸ್ಥಲ. ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನ ಸ್ಥಲವಿರುವಲ್ಲಿ ಅದಾವ ಸ್ಥಲವೆನ್ನಬೇಕು ? ಇದು ವಾಙ್ಮನೋತೀತ ಸ್ಥಲ, ಮೌನದ ಮೌನ ಸ್ಥಲ. ಸುಖದೇಕ ರಸ ಸ್ಥಲ, ಪರಮಾಮೃತ ಸ್ಥಲ, ತನ್ನ ಸ್ಥಲ ತನ್ನಿರುವಿನ ಅರುವುಳ್ಳ ಸ್ಥಲ. ಈ ಸ್ಥಲವರಿಯದ್ದರಿಂದ ತನ್ನ ಘನವಾದರೂ ಅರಿಯಲಿಲ್ಲ, ಪೂಜಾ ಲಿಂಗದ ಲಿಂಗ ಪೂಜ ಕರಾರು ಲಿಂಗದ ಘನವರಿಯಲಿಲ್ಲ ಇದು ಕಾರಣ ಈ ಎರಡರಿಂದ ಕೆಟ್ಟರು.

**45**

**ನೇಮಸ್ಥ ಲಿಂಗವನರಿಯ, ಸೂಳೆಯ ಮಗ ತಂದೆಯನರಿಯ**
**ಪಿತೃಕಾರ್ಯ ಮಹಳವ ಮಾಡುವಲ್ಲಿ ಆರ ಹೆಸರ ಹೇಳಿ**
**ಮಾಡುವನಯ್ಯ ಗುಹೇಶ್ವರ, ನಿಮ್ಮ ನರಿಯದವರನುಭಯ ಭ್ರಷ್ಟರೆಂಬೆ.**

**ತಾತ್ಪರ್ಯ**: ನೇಮಸ್ಥ ಲಿಂಗವನರಿಯ: ನೇಮಸ್ಥ ? ಆರಾಗಿ ನಿಯಮ ಮಾಡು ವದು, ನೇಮಂಗಳು ಘನವೊ ? ಲಿಂಗ ಘನವೊ ? ಆವುದು ಘನ ? ಇದನ್ನು ಅರಿತು ಮಾಡುವನೊ ? ಹಾಗೆ ಮಾಡುವನೊ ? ಇದಾರು ವಿಚಾರ ಮಾಡುವುದು. ಅರುವ ಅರಿಯ ಹೇಳಿ ಶ್ರೀಗುರು ಕುರುಹ ಕೈಯಲ್ಲಿ ಕೊಟ್ಟರೆ ಅರುವನೆ ಮರೆದು ಕುರುಹ ಪೂಜಿಸುವ ಕುರಿಗಳ ನೋಡಾ ಗುಹೇಶ್ವರ. ಗುರು ಕರುಣಿಸಿದ ಕಾರುಣ್ಯ ಅರಿಯುವ ಭಾಗ್ಯದಿಂದ ದೂರಾಗಿ ಜಡಮತೀಯರಾದರೆ ? ಈ ಜಡ ಬುದ್ಧಿಯು, ನೇಮಸ್ಥರನ್ನು ಮಾಡಿತೆ ? ಲಿಂಗಾಂಗ ಸಾಮರಸ್ಯ ಜ್ಞಾನದಿಂದ ದೂರ ಮಾಡಿತೆ ? ಶೈವಾ ಚಾರಿಗಳಾದರೆ ? ಭೇದ ಜ್ಞಾನಿಗಳಾದರೆ ? ಇವರ ಭಾವ ಲಿಂಗ ಒಂದು, ತಾನೊಂದಾಗಿ ಭಿನ್ನ ಭಾವವುಳ್ಳದ್ದಾಯಿತೆ ? ಸೂರ್ಯನು ಕತ್ತಲವ ಕಂಡನೆ ? ಸ್ವಯಂಜ್ಯೋತಿ ಲಿಂಗ, ಜಡಬುದ್ಧಿಯ ಕೈಯಲ್ಲಿ ಸಿಕ್ಕು, ಪೂಜಾಲಿಂಗವಾದನೆ ? ಈ ಅಂಧಃಕಾರ ಅದಾರು ನಷ್ಟ ಮಾಡುವುದು.

ಪತ್ರೆ ನೇಮದವರೊಂದು ಕೋಟಿ, ಲಿಂಗಾರ್ಚನೆಯ ನೇಮದವರೊಂದು ಕೋಟಿ,

ಜಂಗಮಾರ್ಚನೆಯ ನೇಮದವರೊಂದು ಕೋಟಿ ಜಂಗಮ ತೃಪ್ತಿಯನೇಮದವರೊಂದು ಕೋಟಿ, ತನ್ನ ತಾ ತಿಳಿಯುವ ನೇಮದವರು ವೀರಶೈವಾಗ್ರ ಗಣ್ಯರು ನೋಡಾ ಕಪಿಲ ಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಬಿತ್ತರಿಸಿದಂತೆ ನೇಮಾಚಾರ ಬಹುದಿನಗಳಿಂದ ಬಂದಿದೆ. ಪತ್ರ ನೇಮದವರು, ಪತ್ರೆ ತನ್ನ ತಿಳಿಯಲಿಲ್ಲ, ಧರಿಸಿಕೊಂಡ ಲಿಂಗಯ್ಯ ಪತ್ರೆಯ ತಿಳಿಯಲಿಲ್ಲ, ಪತ್ರನೇಮದವನಾದರೂ ತನ್ನ ತಿಳಿಯಲಿಲ್ಲ, ಲಿಂಗ ತಿಳಿಯಲಿಲ್ಲ, ಪತ್ರೆಯ ತಿಳಿಯಲಿಲ್ಲ, ಲಿಂಗಾರ್ಚಕ ಲಿಂಗವ ತಿಳಿಯಲಿಲ್ಲ, ಲಿಂಗ ಅರ್ಚಕನ ತಿಳಿಯಲಿಲ್ಲ, ಜಂಗಮಾರ್ಚಕ ಜಂಗಮ ತಿಳಿಯಲಿಲ್ಲ, ಭಕ್ತ ಜಂಗಮ ತಿಳಿಯಲಿಲ್ಲ, ಈ ಜಂಗಮ ತೃಪ್ತಿ ನೇಮದವರು ಜಂಗಮವ ತಿಳಿಯಲಿಲ್ಲ, ಜಂಗಮ ತೃಪ್ತರು, ತಮ್ಮ ತೃಪ್ತಿಯ ತಿಳಿಯಲಿಲ್ಲ, ಭಕ್ತರ ತೃಪ್ತಿಯ ನೇಮ ತಿಳಿಯಲಿಲ್ಲ, ಇವರುಗಳಿಗೆ ತಮ್ಮ ನೇಮವೆ ಘನ ವಾಯಿತಲ್ಲದೆ ತಾನು ಘನವಾಗಲಿಲ್ಲ, ಇವರ ನೇಮ, ಇವರು ಕುರಡರು. ಏಕೆಂದರೆ ನೇಮಸ್ಥರು, ನಾವು ಯಾರು ? ಲಿಂಗವೆಂದರೇನು ? ಜಂಗಮವೆಂದರೇನು ? ಜಂಗಮ ತೃಪ್ತಿ ಎಂದರೇನು ? ಇದನಾರು ಅರಿಯ ಹೋಗಲಿಲ್ಲ, ಅರಿಯ ಹೋಗದ್ದರಿಂದ ನೇಮಸ್ಥರಾದರು. ಆರು ತನ್ನ ತಾ ತಿಳಿಯುವ ನೇಮದವರು ಆಗಿಹರು ಅವರು ವೀರಶೈವಾಗ್ರ ಗಣ್ಯರು. ಇದು ಕಾರಣ ನೇಮಸ್ಥ ಲಿಂಗವನರಿಯ ಎಂದು ಹೇಳಿಹರು.

ಸೂಳೆಯ ಮಗ ತಂದೆಯನರಿಯ. ಪಿತೃಕಾರ್ಯವ ಮಹಳವ ಮಾಡುವಲ್ಲಿ ಆರ ಹೆಸರ ಹೇಳಿ ಮಾಡುವನಯ್ಯ, ನೇಮವೆಂದರೆ ಒಂದೆ, ಎರಡೆ, ಮೂರೇ ಹೇಳುವುದು. ಪತ್ರೆನೇಮ ಅದೊಂದು ಭಸ್ಮ, ಅದೊಂದು ಮಡಿ ನೀರು, ಅದೊಂದು ತ್ರಿಕಾಲಗಳು, ಅದೊಂದು ನೇಮ, ಲಿಂಗಾರ್ಚನೆ ಅದೊಂದು ನೇಮ. ಜಂಗಮಾರ್ಚನೆ ಅದೊಂದು ನೇಮವೆ ? ಜಂಗಮ ತೃಪ್ತಿ ಅದೊಂದು ನೇಮವೆ ? ಈ ನೇಮಂಗಳ ಕಾರ್ಯ ಸೂಳೆಯರ ಕಾರ್ಯ, ಈ ನೇಮದಿಂದ ಉತ್ಪತ್ತಿಯಾದ ಜ್ಞಾನ ಸೂಳೆಯ ಮಗನೆಂದು ಸಂಭೋಧಿಸಿದರು. ಸೂಳೆಗೆ ನನ್ನ ಗರ್ಭಧಾರಣವಾಗಿರುವುದು. ಆರ ಬಿಂದುವಿನಿಂದ ಆರ ತೇಜಸ್ಸು ? ಆರ ಬಲ ? ಅದು ಎಂಬ ಪರಿಚಯವಿರುವಲ್ಲಿ ಹುಟ್ಟಿದ ಕೂಸಿಗೆ ನಮ್ಮ ತಂದೆ ಇಂಥವನೆಂದು ಹೇಳಲು ಬಾರದಾಗಿದೆ. ಆ ಮಗುವಿಗೆ ನಿಮ್ಮ ತಂದೆಯ ಶ್ರಾದ್ಧ ಮಾಡು, ಪುಣ್ಯತಿಥಿಯ ಮಾಡು, ಸತ್ತ ದಿನಾಚರಣೆಯ ಮಾಡು ಎಂದು ಹೇಳಿದರೆ ಆ ಮಗು ಆರ ಹೆಸರ ಹೇಳಿ ಮಾಡುವುದು. ಇದು ಹೇಗೆ ಹಾಸ್ಯಾಸ್ಪದವಾಗಿದೆ, ಹಾಗೆ ಗುಹೇಶ್ವರ ಲಿಂಗನರಿಯದವರು ಉಭಯ ಭ್ರಷ್ಟರಾಗಿಹರು ಎಂದು ಪ್ರಭುದೇವ ಖಂಡಿಸಿದ್ದಾನೆ.

ಗುಹೇಶ್ವರ ಲಿಂಗವನರಿಯದವರು ಉಭಯ ಭ್ರಷ್ಟರು. ಇತ್ತ ಗುಹೇಶ್ವರ ಲಿಂಗ ತಿಳಿದಿದ್ದರೆ ತನ್ನನ್ನು ತಿಳಿಯುತ್ತಿದ್ದನು. ತನ್ನ ತಿಳಿದಿದ್ದರೆ ಗುಹೇಶ್ವರ ಲಿಂಗ ತಿಳಿಯುತ್ತಿದ್ದನು. ಇತ್ತ ಗುಹೇಶ್ವರ ಲಿಂಗ ತಿಳಿಯಲಿಲ್ಲ, ಇತ್ತ ತನ್ನನ್ನಾದರೂ ತಿಳಿಯಲಿಲ್ಲ, ಇದು ಕಾರಣ, ಉಭಯ ರೀತಿಯಿಂದಲೂ ತಿಳಿಯದೆ, ಮಾಡಿ ಮಾಡಿ ಹೋದರೂ, ನೀಡಿ ನೀಡಿ ಹೋದರು, ನೋಡಿ ನೋಡಿ ಹೋದರು, ಮಾಡದೇ, ನೀಡದೆ, ನೋಡದೆ ಹೋದವರನಾರನೂ ಕಾಣೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದಂತೆ ನೇಮ ಮಾಡಿ ಮಾಡಿ ಹೋದರು ಜಂಗಮಯ್ಯಗಳಿಗೆ ನೀಡಿ ನೀಡಿ ಹೋದರು, ಪೂಜಾಲಿಂಗವ

ಲಿಂಗಾರ್ಚನೆಯಲ್ಲಿ ನೋಡಿ ನೋಡಿ ಹೋದರು. ಮಾಡಿದವ, ನೀಡಿದವ, ನೋಡಿದವ ತಾನಾರೆಂದು ತಿಳಿಯಲಿಲ್ಲ, ತನ್ನ ತಿಳಿದಿದ್ದರೆ ನೇಮ ಮಾಡದವ ಜಂಗಮಯ್ಯಗಳಿಗೆ ನೀಡಿದವನು ಆಗುತ್ತಿದ್ದನು. ಏಕೆಂದರೆ ಸೀಮಿತ ದೃಷ್ಟಿಯುಳ್ಳವರಾಗಿ ಉಭಯ ಭ್ರಷ್ಟರು ಎಂದು ಹೇಳಿಹರು.

**46**

**ಶೀಲ ಶೀಲವೆಂದೇನೊ ? ತನು, ಮನ, ಧನ ತ್ರಿಪುರವಿರಲು,**
**ಆ ತ್ರಿಪುರವ ಸಂಹಾರ ಮಾಡಿ ಭಸ್ಮಾಂಗಿಯಾದುದಲ್ಲದೆ**
**ಶೀಲವಿಲ್ಲ ಕಾಣಾ ಗುಹೇಶ್ವರಾ.**

**ತಾತ್ಪರ್ಯ**: ಶೀಲ : ಆವುದಕ್ಕೆ ಶೀಲವೆನ್ನಬೇಕು, ತನು, ಮನ, ಧನವೆಂಬ ತ್ರಿಪುರವಿದ್ದು ಶೀಲ ಮಾಡುವವರು ಸಿಕ್ಕುತ್ತಾರೆ. ಈ ತ್ರಿಪುರವ ಸಂಹಾರ ಮಾಡಿ ಭಸ್ಮಾಂಗಿಯಾದವರು ಸಿಕ್ಕುತ್ತಾರೆಯೆ ? ಭ್ರಾಂತರ ಶೀಲ ಬೇರೆ, ನಿಭ್ರಾಂತರ ಶೀಲ ಬೇರೆ. ಲೌಕಿಕರ ಶೀಲ ಭ್ರಾಂತಿಯಿಂದುಕ್ತವಾದುದು. ಮರವಿನಿಂದುಕ್ತವಾದುದು, ಕ್ರಿಯಾಚಾರ ತೊಳೆದು, ಬಳಿದು, ಮಾಡುವುದರಿಂದಾಗುವ ಶೀಲ. ತ್ಯಾಗಾಂಗ, ಬೋಗಾಂಗ, ಯೋಗಾಂಗಗಳಾದರೂ ತ್ರಿಪುರವಿದ್ದು ಮಾಡುವವರಾಗಿದ್ದಾರೆ. ಇವರಿಗೂ ಈ ಮೂರು ಸಂಹಾರ ಮಾಡಿ ಭಸ್ಮಾಂಗಿಗಳಾಗಲಿಲ್ಲ. ಸಮಾನ್ಯವಾಗಿ ತಮ್ಮ ತಮ್ಮ ವರ್ಣಾಶ್ರಮ ಧರ್ಮಕ್ಕನುಸರಿಸಿ ವರ್ತಿಸುವದೆ ಶೀಲವೆಂದು ತಿಳಿದಿಹರು. ಬ್ರಹ್ಮಚರ್ಯವಂತನಿಗೆ ತನ್ನ ಇಂದ್ರಿನಿಗ್ರಹವೆ ಶೀಲವಾಗಿದೆ. ಗೃಹಸ್ಥರಿಗೆ ಪತಿ-ಪತ್ನಿ ವ್ರತವೆ ಶೀಲವಾಗಿದೆ. ಸನ್ಯಾಸಿಗೆ ನಿರಾಶೆ, ವೈರಾಗ್ಯವೆ ಶೀಲವಾಗಿದೆ.

ಕ್ರೀಯಾಶೀಲರು ತಮ್ಮ ಶೀಲವನ್ನು ಅರಿದರಿದು ನೋಡಿರುವಿರಾ ? ತನು, ಮನ, ಧನ ಇವು ಅಪವಿತ್ರವೊ ? ಅಥವಾ ಪವಿತ್ರವೋ? ತನು, ಮನ, ಧನವೆಂಬುದು ಅಪವಿತ್ರವು ಅದರಿಂದ ಮಾಡುವ ಕ್ರಿಯಾಚಾರ ಹೇಗೆ ಶೀಲವಾಗುವುದು. ಶೀಲ ಮಾಡಿದ ಮೇಲೆ ಕೆಡಬಾರದು. ರೂಪಾಂತರ ಹೊಂದ ಬಾರದು. ತನು, ಮನ, ಧನವೆಂಬಿವು ಭ್ರಾಂತು, ಇವುಗಳಿಂದ ಶೀಲ ಮಾಡುವುದು ಹೇಗೆ ? ಶೀಲ ಮಾಡಿದಷ್ಟು ಇವುಗಳ ಸತ್ಯತ್ವ ಬುದ್ಧಿ ಹೆಚ್ಚಾಗುವುದು. ಇವುಗಳು ನಷ್ಟವಾಗುವುದು ಆವಾಗ ? ಹೇಳಿ, ಕೇಳಿ ಅದು ಭ್ರಾಂತಿ, ನಿಭ್ರಾಂತವಾಗುವುದು ಆವಾಗ? ಭ್ರಾಂತಿಯಿಂದುಕ್ತರಾಗಿ ಮಾಡುವ ಶೀಲಕ್ಕೂ, ನಿಭ್ರಾಂತರಾಗಿ ಮಾಡುವ ಶೀಲಕ್ಕೂ ಬೆಳಕು, ಕತ್ತಲೆಗಿರುವಷ್ಟು ವ್ಯತ್ಯಾಸ.

ತನು, ಮನ, ಧನವಿದ್ದು ಮಾಡುವವರು ಭ್ರಾಂತರು. ಇವುಗಳು ಇಲ್ಲದವರಾಗಿ ಮಾಡುವದು ನಿಭ್ರಾಂತವು. ಭ್ರಾಂತರಿಗೆ ಇಲ್ಲದುದು ಇದ್ದಂತಾಗಿದೆ. ನಿಭ್ರಾಂತರಿಗೆ ಇಲ್ಲದುದು ಇಲ್ಲವಾಗಿದೆ. ಇದ್ದುದು ಅಂದು, ಇಂದು ಎಂದೆಂದೂ ಇದ್ದಂತಾಗಿದೆ. ಇದ್ದುದು ಆವುದು ? ನುಡಿಗೆಡೆಗೊಡದ ಘನ. ಇಲ್ಲದುದು ಆವುದು ? ತೋರಿ ಇಲ್ಲವಾಗುವುದು. ಹಗ್ಗ ಇದ್ದುದು, ಹಗ್ಗದಲ್ಲಿ ತೋರುವ ಹಾವು ಇಲ್ಲದುದು. ಇದ್ದುದು ತಾನು, ತಾನಾಗದುದು ಆವುದು ? ಅದು ಇಲ್ಲದುದು ತನು, ಮನ, ಧನ ತ್ರಿಪುರವ ಸಂಹಾರ ಮಾಡಿ

ಬಸ್ಮಾಂಗಿಯಾದುದು  ಹೇಗೆ ? ಈ ಶೀಲ ಬಸವಾದಿ ಪ್ರಮಥರದು.

ತನುವ ಗುರುವಿಂಗಿಕ್ಕಿ ಗುರುವಾದನಯ್ಯ. ಮನವ ಲಿಂಗಕಿಕ್ಕಿ ಲಿಂಗವಾದನಯ್ಯ. ಧನ ಜಂಗಮಕಿಕ್ಕಿ ಜಂಗಮವಾದನಯ್ಯ. ತ್ರಿವಿಧವ ತ್ರಿವಿಧಕಿಕ್ಕಿ ಬಸವಣ್ಣ ಸಕಲರಿಗೂ ಗುರುವಾದನಯ್ಯ ಕೂಡಲ ಸಂಗಮದೇವಾ. ತ್ರಿಪುರ ಸಂಹಾರ ಮಾಡಿ ಭಸ್ಮಾಂಗಿಯಾದಾತ ಬಸವಣ್ಣ, ಚಿದ್ಭಸ್ಮಾಂಗಿಯಾದಾತ ಬಸವಣ್ಣ. ತ್ರಿಪುರ ಸಂಹಾರ ಮಾಡಲು ಅತೀಂದ್ರಿ ವಿದ್ಯೆ ಅವಶ್ಯಕವು. ಆರು ಸುಜ್ಞಾನಿಗಳು ಅವರು ತನುವ ಗುರುವಿಂಗಿಕ್ಕಿ ಗುರುವಾದವರು. ತನ್ನೊಳಗಿನ ಗುರುವಿಂಗಿಕ್ಕುವದು, ತನ್ನೊಳಗಿನ ಲಿಂಗಕಿಕ್ಕುವುದು, ತನ್ನೊಳಗಿನ ಜಂಗಮಕಿಕ್ಕುವುದು, ಆರು ಅರು ಹೃದಯದವರಾಗಿಹರು  ಅವರಿಗೆ ತನು, ಮನ, ಧನವನಿಕ್ಕಲು ಬರುವುದು. ಬೆಳಕಿಂಗೆ ಕತ್ತಲವ ಸಿಕ್ಕಿದಂತೆ. ಸಮ ಪ್ರಕಾಶಮಾನವಾದ ತತ್ವದಲ್ಲಿ ವಿಷಮ ದೃಷ್ಟಿ, ವಿಷಮ ಭಾವ, ವಿಷಮ ಕುರುಹುಗಿಂಬು ಇದೆಯೋ ಇಲ್ಲವೊ ಇದು ತನ್ನಿಂದ ತಾನು ನೋಡುವುದು. ಅಲ್ಲಿ ತನು, ಮನ, ಧನಗಳಿಗೆ ಸಮಪ್ರಕಾಶಮಾನವಾದ ತತ್ವ ಗುರುತತ್ವ, ಅನುಪಮ ಜ್ಯೋತಿ, ಸ್ವಯಂ ಜ್ಯೋತಿ ಲಿಂಗ. ಇದು ಅನಾತ್ಮದ ನೆನಹಿಂಗಾಗಲಿ, ಆತ್ಮದ ನೆನಹಿಂಗಾಗಲಿ ಅವಕಾಶಕೊಟ್ಟಿದೆಯೊ ? ಹೇಗೆ ತನ್ನಿಂದ ತಾನು ನೋಡುವುದು. ಭಾವಕ್ಕಗಮ್ಯವಾಗಿಹ ನಿರಾಲಂಬ, ನಿಸ್ಸಂಗ, ನಿರವಧಿಯಾಗಿಹ ಜಂಗಮ ಘನದಲ್ಲಿ ಧನವೆಂಬ ಭಾವಕ್ಕಾಗಲಿ ಸಂದು ಇದೆಯಾ ಎಂದು ತನ್ನಿಂದ ತಾನೆ ನೋಡುವುದು. ಹೀಗೆ ಅರಿದರಿದು ಆರು ನೋಡಿಹರು. ಅವರ ತನುವೆ ಗುರುವಾಗಿಹುದು. ಮನವೆ ಲಿಂಗವಾಗಿಹುದು. ಧನವು ಜಂಗಮವಾಗಿಹುದು. ತನುವೆ ಗುರುವಾದಲ್ಲಿ, ಷಡ್ವಿಕಾರ ತನು ನಷ್ಟವಾಗಿಹುದು. ಮನವೆ ಲಿಂಗವಾದಲ್ಲಿ ಸಂಕಲ್ಪ, ವಿಕಲ್ಪರೂಪಿ ನೆನಹು ನಷ್ಟವಾಗಿಹುದು. ಧನವೆ ಜಂಗಮವಾದಲ್ಲಿ, ಭಾವ ರೂಪ ಭ್ರಮವು ನಷ್ಟವಾಗಿಹುದು. ಗುರುವೆಂಬುದು ತೆರಹಿಲ್ಲದ ಘನ, ಲಿಂಗವೆಂಬುದದುವೆ, ಜಂಗಮವೆಂಬುದದುವೆ, ಒಂದೆ ಮೂರಾಗಿಹುದು. ಮೂರು ಒಂದಾದುದು. ಇದು ತ್ರಿಪುರವ ಸಂಹಾರ ಮಾಡಿ, ಬಸ್ಮಾಂಗಿಯಾದ ನಿಜ ಶೀಲವೆಂದು ಹೇಳಿಹರು.

ಪ್ರಭುವಿನದು ಸಹಜ ಶೀಲ ಸುಜ್ಞಾನದಿಂದುಕ್ತವಾದುದು. ಸದ್ಭಾವಭರಿತವಾದುದು, ಇದು ಅರುವಿಂಗರುವಾದ ಹಿರಿಮೆ ಚಿದಂಗವೆ ತಾನಾಗಿಹ ಶೀಲ ನಿಜಾನಂದದಲ್ಲಿ ಲೀಯವಾಗಿ ಶೀಲ ಕೆಡದ ಶೀಲ, ನಿಷ್ಕಳಂಕ ಶೀಲ. ಇಲ್ಲಿ ಶುದ್ಧವನರಿದ ಸಂಕೇತ. ಸಿದ್ಧವನರಿದ ಸಂಕೇತ, ಪ್ರಸಿದ್ಧವನರಿದ ಸಂಕೇತ. ಇಲ್ಲಿ ಕಲ್ಪಿತನ ಮರವಿನಲ್ಲಿ ತೋರುವ ತನು, ಇಂದ್ರಿ, ಪ್ರಾಣ, ಮನ, ಬುದ್ಧಿ ನಷ್ಟ. ಅತ್ತ ಜ್ಞಾನದಲ್ಲಿ ತೋರುವ ಸಾಕ್ಷಿ, ಸ್ವಯಂಪ್ರಕಾಶ ಅಸಂಗ ಸಚ್ಚಿದಾನಂದನೆಂಬುದು ನಷ್ಟ. ಸಮಪ್ರಕಾಶಮಾನವಾದ ತನ್ನಿರುವೆ ಎತ್ತ ನೋಡಿದಡತ್ತತ್ತ ಸ್ವಪ್ರಭೆಯ ಪ್ರಭೆಯಾಗಿ ನಿಶ್ಚಿಂತತ್ವ ಸ್ವತಃ ಸಿದ್ಧವು. ಅಲ್ಲಿ ಕಲ್ಪಿತನಿಲ್ಲ, ಕಲ್ಪಿತನ ಏಳು ವಾರಗಳಿಲ್ಲ, ಗುರು, ಲಿಂಗ, ಜಂಗಮ ಮೂರೆ ವಾರ.

**47**

**ಆದಿತ್ಯವಾರ, ಸೋಮವಾರ, ಮಂಗಳವಾರವೆಂದು**
**ಏಳುವಾರದ ಹೆಸರಿಟ್ಟು ನುಡಿವರು. ನಾವಿದನರಿಯೆವು**

ಗುಹೇಶ್ವರನ ಶರಣ ಚನ್ನಬಸವಣ್ಣಂಗೆ ಮೂರೆ ವಾರ.

**ತಾತ್ಪರ್ಯ**: ಮರವಿಂಗೆ ಕಂಡುದು, ಅರುವಿಂಗೆ ಕಂಡುದಿಲ್ಲ, ಅರುವಿಂಗೆ ಕಂಡುದು ಮರವಿಂಗೆ ಕಂಡುದಿಲ್ಲ, ಲೌಕಿಕರಿಗೆ ಕಂಡ ಏಳು ವಾರಂಗಳು ಅಲೌಕಿಕರಿಗೆ ಕಂಡಿಲ್ಲ, ಕತ್ತಲಲ್ಲಿ ಕಂಡ ಹಗ್ಗದಲ್ಲಿಯ ಹಾವು ಬೆಳಕಿನಲ್ಲಿ ಕಾಣುವದೆ ? ಮರವುಳ್ಳವರಿಗೆ ಕಂಡ ಏಳುವಾರಂಗಳು. ಅರುವುಳ್ಳವರಿಗೆ ಕಾಣುವವೆ ? ಆರಿಗೆ ಚರಾಚರ ಜಗವು ತೋರುತ್ತಿದೆ. ಅವರಿಗೆ ಚತುರ್ ಯುಗಂಗಳು. ಈ ಯುಗ ಜಗಂಗಳ ಹಿರಿಯರು, ಕಾರ್ಯ ಕಾರಣವ ಕಾಣತ್ತಿಹರು. ಅವರುಗಳು ಆದಿತ್ಯವಾರ, ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ, ಶನಿವಾರವೆಂದು ಏಳು ಹೆಸರಿಟ್ಟು ನುಡಿವರು. ಇವರು ಲೋಕದ ಚತುರರು. ಮಾತಿನ ಮಾತಿನ ಜಾಣರು. ಇವರು ಮಿಶ್ರ ಜ್ಞಾನಿಗಳು, ಮರವಿನ ಅರುವುಳ್ಳವರು. ಇತ್ತ ಇವರಿಗೆ ಹಗಲಿನ ಪ್ರೇಮವು ಗಾಢವಾಗಿದೆ. ರಾತ್ರಿಯ ಪ್ರೇಮವು ಗಾಢವಾಗಿದೆ. ಇದ್ದುದೊಂದೆ ಹಗಲು. ಇದ್ದುದೊಂದೆ ರಾತ್ರಿ. ಈ ಹಗಲು, ರಾತ್ರಿಯ ಬೆಳಕಿನ ಒಡೆಯರು ಸೂರ್ಯ, ಚಂದ್ರರು. ಇವರುಗಳ ಬೆಳಕಿನಲ್ಲಿ ಏಳು ವಾರಂಗಳು. ಹದಿನೈದು ತಿಥಿಗಳು, ಹನ್ನೆರಡು ಮಾಸಗಳು, ಅರವತ್ತು ಸಂವತ್ಸರಗಳು, ಯುಗಂಗಳು, ಭೂತ, ಭವಿಷ್ಯ, ವರ್ತಮಾನ ಕಾಲಂಗಳು. ಇವುಗಳೆಲ್ಲ ಜೀವನು, ಸಂಚಿತ ಆಗಾಮಿ, ಪ್ರಾರಾಬ್ದ ಕರ್ಮಕ್ಕೆ ಕಾರಣ ಹಾಗೂ ಬ್ರಹ್ಮಾದಿಗಳ ಒಡೆತನಕ್ಕೆ ಕಾರಣ. ಇದು ಮರವಿನ ಅರುವು. ಇದರ ವಿಸ್ತಾರವೆ ಲೋಕವಾಗಿಹುದು. ಜೀವನಿಗೆ ಈ ಲೋಕವು ಸತ್ಯವಾಗಿ ಅಹಂಮಮವುಳ್ಳವನಾಗಿ ವಾಸಿಸುವ ಲೋಕವೆ ಮರ್ತ್ಯಲೋಕವಾಗಿದೆ. ಇದು ಹುಟ್ಟು ಸಾವುಳ್ಳ ಲೋಕವಾಗಿದೆ. ಇಲ್ಲಿಯ ನಿವಾಸಿಗಳಿಗೆ ಅಲ್ಪ ಸುಖ, ಮಹಾನ್ ದುಃಖ. ಈ ದುಃಖವ ಕಂಡು ಕಂಡು ಇದರಿಂದ ನಿವೃತ್ತರಾಗಬೇಕೆನ್ನುವವನು ಆವನೊ ಒಬ್ಬನು. ಆ ಒಬ್ಬನಿಗೆ ಶರಣರ ಮಹಾನುಭವ ತಿಳಿದು ಭವದಿಂದ ಬಿಡುಗಡೆಯಾಗಬೇಕೆಂಬ ಹಂಬಲ. ಅದಕ್ಕಾಗಿ ಗುಹೇಶ್ವರಾ ನಿಮ್ಮ ಶರಣ ಚನ್ನಬಸವಣ್ಣಂಗೆ ಮೂರೆ ವಾರವೆಂದುದು ತಿಳಿಯದಾಗಿದೆ.

ಚನ್ನಬಸವಣ್ಣಂಗೆ ಮೂರೆ ವಾರ: ಆ ವಾರಗಳು ಆವು ? ಸುಜ್ಞಾನಿಗೆ ಕಾಣುವ ವಾರ, ಅಜ್ಞಾನಿಗಳಿಗೆ ಕಾಣುವದಾದರೂ ಅದೆಂತು ? ಮೂರು ವಾರ, ಈ ಏಳು ವಾರಗಳಲ್ಲಿ ಹುಡುಕಿದರೆ ಲಭ್ಯವಾಗುವ ವಾರಗಳಲ್ಲ, ಮಹಾತ್ಮರ ಮಹಾನುಭವದಿಂದ ಲಭ್ಯವಾಗುವ ವಾರ. ಗುರು ಒಂದು ವಾರ, ಲಿಂಗ ಒಂದು ವಾರ, ಜಂಗಮ ಒಂದು ವಾರ, ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು, ನೆಲಿಸಿ ಲಿಂಗವೆನಿಸಿತ್ತಯ್ಯ ಲಿಂಗವು, ಇದರಿರವ ಅರುಹಿ ಗುರುವೆನಿಸಿತ್ತಯ್ಯ ಲಿಂಗವು. ಸರ್ವವು ಲಿಂಗಮಯವು. ಇದ್ದುದೊಂದೆ ಅಖಂಡ ಲಿಂಗ, ಚರಿಸಿದರೂ ಲಿಂಗವೆ, ಬೋಧಿಸಿದರೂ ಲಿಂಗವೆ, ನೆಲಿಸಿದರೂ ಲಿಂಗವೆ, ನಾನು ಸಹಿತ ಅಖಿಲ ಪ್ರಪಂಚ ಪರಮಾತ್ಮ ಸ್ವರೂಪ, ಗುರು ಸ್ವರೂಪ, ಸಚ್ಚಿದಾನಂದವೆಂದು ಬೋಧಿಸಿದುದು ಒಂದು ವಾರ, ಬೋಧವ ತಿಳಿದುದು ಒಂದು ವಾರ, ಅದುವೆ ತಾನಾದುದು ಒಂದು ವಾರ. ತನ್ಮಯವಾದರಿವು ಒಂದು ವಾರ. ಅದನು ಅರಿದರಿದು ನೋಡಿದುದು ಒಂದು ವಾರ. ಅರಿಯದರುವು ತನ್ನಿರುವು ಆದುದು ಒಂದು ವಾರ. ಗುರು-ಶಿಷ್ಯರೊಂದಾದು ಒಂದು ವಾರ. ಭಕ್ತ-ಜಂಗಮರೊಂದಾದು ಒಂದು ವಾರ.

ತೆರಹಿಲ್ಲದ ಘನವಾದುದು ಒಂದು ವಾರ. ಆದಿ, ಅನಾದಿ ಒಂದಾದುದು ಒಂದು ವಾರ. ಚಂದ್ರ-ಸೂರ್ಯರೊಂದಾದು ಒಂದು ವಾರ. ಧರೆ-ಆಕಾಶ ಒಂದಾದುದು ಒಂದು ವಾರ. ಅಂಡಜ, ಪಿಂಡಜ ಒಂದಾದುದು ಒಂದು ವಾರ. ಸಾಕಾರ, ನಿರಾಕಾರ ಒಂದಾದುದು ಒಂದು ವಾರ. ಸಂಗ, ನಿಸ್ಸಂಗ ಒಂದಾದುದು ಒಂದುವಾರ. ಗುಹೇಶ್ವರಾ ನಿಮ್ಮ ಶರಣಂಗೆ ಮೂರೆ ವಾರವೆಂದು ಹೇಳಿಹರು.

**48**

**ತ್ರಿಪುರವನುರುಹಿದ ತ್ರಿಣೇತ್ರನಲ್ಲ ,**
**ಅಂಧಕಾಸುರನ ಮೆಟ್ಟಿ ನಾಟ್ಯವಾಡಿದಾತನಲ್ಲ ,**
**ಖಂಡಕಪಾಲಿಯಲ್ಲ, ಮುಂಡಧಾರಿಯಲ್ಲ ,**
**ಮಂಡಲದೊಳಗೆ ಬಂದು ಸುಳಿವಾತನಲ್ಲ ,**
**ಈಶ್ವರನಲ್ಲ , ಮಹೇಶ್ವರನಲ್ಲ ,**
**ಗುಹೇಶ್ವರನೆಂಬ ಲಿಂಗ ಅಪಾರ ಮಹಿಮನು.** ॥ 1264 ॥

**ತಾತ್ಪರ್ಯ**: ಭಕ್ತರಾಗಲಿ, ಭಾವಿಕರಾಗಲಿ ದೇವನ ಬಗ್ಗೆ ಸರಿಯಾಗಿ ತಿಳಿದುಕೊಂಡವರು ವಿರಳ. ದೇವನ ಕಂಡಿಹೆವೆಂದು ಅವನ ಚಾರಿತ್ರ ಮಾಡಿ ಹೇಳುವರು ಕೊಂಡಾಡುವರು. ಜಪ ಸ್ತೋತ್ರಾದಿಗಳ ಮಾಡುವರು. ಧ್ಯಾನಸ್ಥರಾಗಿ ಅವನಲ್ಲಿ ಲೀಯವಾಗುವರು. ಶರಣ ಶರಣೆಯರಂತೆ ಪರತತ್ವದರುವುಳ್ಳವರಾಗಿ ಅದುವೆ ಆಗಿಹ ಮಹಾಂತರು ಸಿಕ್ಕುವುದು ವಿರಳ. ಶರಣರು ಶರಣೆಯರು ನಿಜವ ಒಪ್ಪಿದರಲ್ಲದೆ ಮಿಥ್ಯಕ್ಕೆ ಒಪ್ಪಲಿಲ್ಲ. ದಿಟವ ಕಾಣ ಹೋಗಿ ಸಟೆಯ ಕಾಣದಾದರು. ದಿಟವಾವುದು ? ಸಟೆ ಆವುದು ? ತ್ರಿಪುರವ ನುರುಹಿದ ತ್ರಿನೇತ್ರನು ಸಟೆಯ ದೇವನು. ಅಂಧಕಾಸುರನ ಮೆಟ್ಟಿ ನಾಟ್ಯವಾಡಿದ ದೇವನು ಸಟೆಯ ದೇವನು. ಖಂಡಕಪಾಲಿಯು ಸಟೆಯ ದೇವನು, ಮುಂಡಧಾರಿಯು ಸಟೆಯ ದೇವನು, ಮಂಡಲದೊಳಗೆ ಬಂದು ಸುಳಿದಾಡುವ ಸಟೆಯ ದೇವನು. ಈಶ್ವರನು, ಮಹೇಶ್ವರನು, ಸಟೆಯ ದೇವನು. ದಿಟನೆಂದರೆ ಗುಹೇಶ್ವರ ಲಿಂಗ ಅಪಾರ ಮಹಿಮ ಅವಯವವುಳ್ಳವನು. ಕ್ರಿಯಾ ಕರ್ಮದಿಂದುಕ್ತನು. ಎರಡು, ಮೂರು ಕಣ್ಣುಳ್ಳವನು ದೇವನಾಗುವನೆ ? ತ್ರಿಪುರವ ಸುಡುವವನು ದೇವನೆ ? ಸುಡುವುದು ಶಾಂತ ಮಾಡುವದು ಇದು ಆರಾಗಿ ಮಾಡುವದು. ಇದೊಂದು ಮಾಯಿಕ ಶಿವ. ತೋರಿ ಇಲ್ಲವಾಗುವ ಶಿವ, ತ್ರಿಪುರವ ಸುಡಲಿ, ಏನೆ ಸುಡಲಿ, ಕಾರಣ ಕಾರ್ಯಗಳಿಗೆ ನಿಲುಕದ ಶಿವನು, ಅದಾವ ಕಾರಣ ಕಂಡ ಕಾರಣವೆ ಕಾಣದಿದ್ದವಂಗೆ ಸುಡುವ ಕಾರ್ಯವೇಕೆ ? ಅಂಧಕಾಸುರನ ಮೆಟ್ಟಿ ನಾಟ್ಯವಾಡುವಾತ ಶಿವನೆ ? ಅಂಧಕಾಸುರನ ಮೆಟ್ಟಿ ನಾಟ್ಯವಾಡಿದ ಶಿವ ದೈತ್ಯನ ಶರೀರ ರಂಗಭೂಮಿಯಾದಡೆ ತಾನು ಅಭಿನಯ ಮಾಡುವ ನಟನಾಗಿಹನು. ಇವನೆಂಥ ಶಿವ, ಅಖಂಡ ಶಿವ, ಪೂರ್ಣ ಶಿವ, ಪೂರ್ಣ ಮದಃ ಮೂರ್ಣ ಮಿದಃ ಶಿವ, ಸಕಲವು ತಾನಾದ ಶಿವ, ವಿಷಮ ದೃಷ್ಟಿಯುಳ್ಳವನಾದುದು ಹೇಗೆ ? ಗರ್ವನಿಗರ್ವ ಕಾಣದವಂಗೆ ಅಂಧಕಾಸುರನ ಗರ್ವ ಕಂಡುದು ಹೇಗೆ ? ಅಗಣಿತನು ಗುಣಮಯಿ

ಆಗುವನೆ ? ಗುಣಮಯಿ ಆದಲ್ಲಿ ಅಗಣಿತನಾದುದು ಹೇಗೆ ? ಬೆಳಕಿಗೆ ಕತ್ತಲವ ಕಂಡಿತೆ ? ಸೂರ್ಯಂಗೆ ಅಮವಾಸ್ಯೆ ಕಂಡಿತೆ ? ಕಗ್ಗತ್ತಲು ಕಂಡು ಅದನ್ನು ಮೆಟ್ಟಿತೆ ? ಮೇಲೆ ನಾಟ್ಯವಾಡಿತೆ ? ಇದೆಂಥ ಪರಿಹಾಸ್ಯ.

ಪರತತ್ವವು ಅಪರವಾಗಬಹುದೆ? ಸ್ವಯಂ ಪ್ರಕಾಶವು ಪರ ಪ್ರಕಾಶವಾಗಬಹುದೆ ? ಸ್ವಯಂ ಪ್ರಕಾಶ ಪರ ಪ್ರಕಾಶ ಕಂಡುದು ಹೇಗೆ ? ಕಂಡು ಅದನ್ನು ಮೆಟ್ಟಿ ಅದರ ಮೇಲೆ ನಾಟ್ಯವಾಡಿತೆ ? ತಾನಾರೆಂದರಿದವರ ದೃಷ್ಟಿಯಲ್ಲಿ ಬಹು ವಿಚಿತ್ರವು. ಗಂಧರ್ವ ನಗರಕ್ಕೆ ಬಂಜಿಮಗ ಮುತ್ತಿಗೆ ಹಾಕಿ ಆ ನಗರವ ವಶ ಮಾಡಿಕೊಂಡು, ಆ ನಗರದ ರಾಜನಾದುದು ಒಪ್ಪಿಗೆಯ ಮಾತೆ? ಖಂಡಕಪಾಲಿಯಲ್ಲ ಪರಬ್ರಹ್ಮವೆ ತಾನಿದ್ದು ತನಗೇಕೆ ಬ್ರಹ್ಮಕಪಾಲ. ಭ್ರಮಿಗೆ, ಬ್ರಹ್ಮಕಪಾಲವು ಘನವುಳ್ಳುದು, ಅರುವಿಂಗರುವು ಆಗಿಹ ಘನಕ್ಕೆ ಘನ ಅದಕ್ಕೇಕೆ ಬ್ರಹ್ಮಕಪಾಲ. ಈ ಖಂಡಕಪಾಲವು ಬ್ರಹ್ಮವಾಗಬಹುದೆ ? ಬ್ರಹ್ಮವ ತಿಳಿಯದ ಅಜ್ಞರು ತಮ್ಮ ತಮ್ಮ ಭಾವಕ್ಕೆ ಬಂದಂತೆ ಭಾವಿಸಿಹರು. ಭಾವಕ್ಕಗಮ್ಯವಾದ ಘನವು ಆವಾವ ಭಾವಂಗಳಿಗೆಡೆಗೊಡುವದಿಲ್ಲ. ನಿರಂತರವಾಗಿರುವ ಮಂಗಲಮಯ ತತ್ವ ಭಾವಕ್ಕಿಂಬು ಕೊಡಬಹುದೆ ? ನಿಜವರಿತ ಮಹಾಂತ ಇಂತಪ್ಪ ಮಾಯಿಕ ಶಿವ ಅತತ್ವ ಶಿವ ತೋರಿ ಇಲ್ಲವಾಗುವ ಮಾಯಿಕಕ್ಕೆ ಒಪ್ಪುವದದೆಂತು ?

ಮುಂಡಧಾರಿಯಲ್ಲ, ದೇವನು ಮುಂಡಧಾರಿಯೆ ? ನಿರುಪಾಧಿಯು, ಉಪಾಧಿಯುಳ್ಳವನಾಗುವನೆ ? ನಿರೂಪನು ರೂಪವುಳ್ಳವನೆ ? ನಿರ್ನಾಮನು ನಾಮವುಳ್ಳವನಾದನೆ ? ಮಿಥ್ಯೆಯೆ ಸತ್ಯವಾಯಿತೆ ? ನಿಷ್ಕಳಂಕನು, ನಿರ್ಮಾಯನು, ಸರ್ವವ್ಯಾಪಕನು, ಮುಂಡಧಾರಿ ಕಾರ್ಯ ಹೇಗೆ ಮಾಡಿದನು. ಚೈತನ್ಯವು ರುಂಡಮಾಲೆ ಧರಿಸಿದುದೆಂತು ? ಇದು ಕಾರಣ, ಮುಂಡ ಧಾರಿಯು ಶಿವನಲ್ಲವೆಂದು ಹೇಳಿಹರು.

ಮಂಡಲದೊಳಗೆ ಬಂದು ಸುಳಿವಾತನಲ್ಲ, ದೇವ ದೇವ ಘನಕ್ಕೆ ಘನ ಅವನೆಂತು ಈ ಭುವನದೊಳಗೆ ಸುಳಿವನು. ಅವನಿಲ್ಲದ ಸ್ಥಳವಾವುದು ? ಅವನಿಲ್ಲದ ರೂಪವಾವುದು ? ಅವನಾಗದ ನಾಮವಾವುದು ? ಗಗನಕ್ಕೆ ಬರುವುದು, ಹೋಗುವುದು ಇದೆಯೆ ? ಗಗನ ಸದೃಶವಾಗಿರುವ ಜ್ಞಾನಾಮೃತ ಬಂದುದು ಹೇಗೆ, ಮಂಡಲ ಕಂಡುದು ಹೇಗೆ, ಸುಳಿದಾಡಿದುದು ಹೇಗೆ ? ಅಚಲಿತವು ಸುಳಿದಾಡಿದುದು ಹೇಗೆ ? ಮಂಡಲದೊಳಗೆ ಸುಳಿದಾಡುವವನು ದೇವನಾಗಲಾರ. ದೇವನೆಂದರೆ ಇದ್ದಕ್ಕಿದ್ದಂತಿರುವ ಅನಂತ, ಆ ಅನಂತಂಗೆ ಆದಿ ಆವುದು ? ಮಧ್ಯ ಆವುದು ? ಅಂತ್ಯವಾವುದು ? ಮಂಡಲವು ಮಾಯಿಕ. ಮಂಡಲದೊಳಗೆ ಸುಳಿದಾಡುವ ದೇವನು ಮಾಯಿಕ. ಮಾಯಿಕ ಜಗತ್ತಿನೊಳಗೆ ಮಾಯಿಕವು ಸುಳಿದಾಡುವುದು ಸಹಜ.

ಈಶ್ವರನಲ್ಲ , ಈಶ್ವರನೆಂದರೆ ಸರ್ವಜ್ಞ, ಸರ್ವಶಕ್ತಿತ್ವ ಸ್ವತಂತ್ರ, ಸರ್ವಾಂತರ್ಯಾಮಿ, ಪರೋಕ್ಷ, ಬಂಧಮೋಕ್ಷರಹಿತ ಆನಂದ ಸ್ವರೂಪವೆ ಈಶ್ವರನೆಂದು ಹೇಳುವರು. ಇದು ತ್ರಿಗುಣಾತ್ಮಕ ಪ್ರಕೃತಿಯ ಉಪಾಧಿಯ ಮೂಲಕ ಅದರಲ್ಲಿ ಪ್ರತಿಬಿಂಬಿತವಾದ ಪರಬ್ರಹ್ಮದ ಚೈತನ್ಯವು ಈಶ್ವರನೆಂದು ಹೇಳಿಸಿಕೊಳ್ಳುವುದು. ಇದು ಸಕಲ ಜಗತ್ತಿನ, ಉತ್ಪತ್ತಿ, ಸ್ಥಿತಿ, ನಾಶಗಳನ್ನು ಮಾಡುತ್ತ ತಾನೊಂದು ವಿಕಾರವ ಹೊಂದದೆ ಆನಂದ ಸ್ವರೂಪವಾಗಿರುವಂಥವನೆ ಈಶ್ವರನೆಂಬ ಪದಕ್ಕೆ ವಾಚ್ಯನಾಗಿಹನು. ಇದು ಕೂಡಾ ಪ್ರಕೃತಿಯ ಉಪಾಧಿ

ಯಿಂದುಕ್ತವಾದುದು. ಪ್ರಕೃತಿ ಪುರುಷನೆಂಬುದಕ್ಕೂ ಸಂಬಂಧವಿಲ್ಲದ ನಿರಾಲಂಬಕ್ಕೆ ಅದಾವ ಪ್ರಕೃತ, ಅದಾವ ಪುರುಷ ಇದು ಕಲ್ಪಿತ ಜ್ಞಾನ, ಅಕಲ್ಪಿತ ಘನಕ್ಕೆ ಹೇಗೆ ಸಮವಾಗುವುದು.

ಮಹೇಶ್ವರನಲ್ಲಿ ಧ್ಯಾನಸ್ಥಿತಿಯಲ್ಲಿ ತಲ್ಲೀಯವಾದ ಮಹೇಶ್ವರನು ಅಲ್ಲ, ಬಹಿರಂಗದಲ್ಲಿ ಬಿಟ್ಟ ಮಹೇಶ್ವರನಲ್ಲ, ಅಂತರಂಗದಲ್ಲಿ ಬಿಟ್ಟ ಮಹೇಶ್ವರನು ಅಲ್ಲ. ಏಕಂದರೆ ಒಬ್ಬನು ಬ್ರಹ್ಮನ ವಂಶದವನು, ಇನ್ನೊಬ್ಬನು ವಿಷ್ಣು ವಂಶದವನು. ಎರಡರಲ್ಲಿ ಬಿಟ್ಟ ಮಹೇಶನು ಕಪಿಲಸಿದ್ಧ ಮಲ್ಲಿಕಾರ್ಜುನ, ಮಹಾದೇವಿಯ ಸಂಗದಿಂದ ಹುಟ್ಟಿದವನು. ಈ ಮಹೇಶ್ವರನು ಅಲ್ಲ, ಇದಲ್ಲದೆ ಅಟ್ಟು ನೀಡುವ ಭಕ್ತನ ಬಟ್ಟೆಗೆ ಇಚ್ಛೆ ಮಾಡಿ ಬಂದಾತನಲ್ಲ, ನೆಟ್ಟನೆ ನೀ ಪರವಸ್ತುವೆಂದು ಜ್ಞಾನವಟ್ಟುವದಕ್ಕೆ ಬಂದಾತ ಮಹೇಶ್ವರ ಇಂತಪ್ಪ ಜ್ಞಾನ ವಟ್ಟಲು ಬಂದವನು ಮಹೇಶ್ವರರಲ್ಲವೆಂದು ಹೇಳಿಹರು. ಗುಹೇಶ್ವರಲಿಂಗ ಅಪಾರ ಮಹಿಮವು ಎಂದು ಕೊಂಡಾಡಿಹನು. ಗುಹೇಶ್ವರ ದೇಹವೆಂಬ ಗುಹೆಗೆ ಈಶ್ವರನೆನಿಸಿಕೊಂಡಿರುವ ಮಹಾ ಘನ ಲಿಂಗಕ್ಕೆ ಗುಹೇಶ್ವರ ಲಿಂಗ ಅಪಾರ ಮಹಿಮ ಎಂದು ಹೇಳಿರುವರು. ಗಗನವೆ ಅಪಾರವುಳ್ಳದ್ದಾಗಿರುವಲ್ಲಿ ಇಂಥ ಗಗನವನ್ನೇ ತನ್ನೊಳಕೊಂಡಿರುವ ಚೈತನ್ಯ ದೇವ, ಅಪ್ರಮಾಣದೇವ, ಅಗಣಿತ ದೇವ, ಅಚಿಂತ್ಯ ದೇವನಾದುದರಿಂದ ಅಪಾರ ಮಹಿಮನು ಎಂದು ಹೇಳಿಹರು.

ಜ್ಞಾನೀ ಜನ್ಮ ಧರಿಸಿದಲ್ಲಿ ಅರಿಯುವದು ಅವಶ್ಯಕವು ಆವುದನ್ನು ಅರಿಯುವುದು ? ಅರಿಯಬೇಕಾದುದು ಆವುದೋ ಅದನ್ನು ಅರಿವುದು. ಮೂಲವಾವುದು ಅದನ್ನು ಅರಿವುದು, ಮೂಲ ತಾನು, ತಾನು ಘನಕ್ಕೆ ಘನ, ಮುನ್ನ ಮುನ್ನಲಾದ ಘನ ಗುಹೇಶ್ವರ ಲಿಂಗವದು ಅಪಾರ ಮಹಿಮನು ಹೇಗೋ ಹಾಗೆ ತನ್ನಿಂದ ತನ್ನ ಅರಿವುಡೆ, ಗುಹೇಶ್ವರ ಲಿಂಗ ತಾನೆ ಅಪಾರ ಮಹಿಮನು.

**49**

**ಅರಿತು ಜನ್ಮವಾದವರಿಲ್ಲ, ಸತ್ತು ಮರಳಿ ತೋರುವರಿಲ್ಲ .**
**ದುರಾಭಿಮಾನವ ಹೊತ್ತು ಅಘಟಿತ ಘಟಿತವ ನುಡಿವಿರಿ.**
**ಈ ದೇಹವಿಡಿದು ನುಡಿವ ಪ್ರಪಂಚಿಗಳನೇನೆಂಬೆ ಗುಹೇಶ್ವರಾ.** ॥ 822 ॥

**ತಾತ್ಪರ್ಯ**: ಏನನ್ನು ಅರಿತು ಜನ್ಮವಾದವರಿಲ್ಲ, ಗುಹೇಶ್ವರ ಲಿಂಗವರಿತು ಜನ್ಮವಾದವರಿಲ್ಲ, ಗುಹೇಶ್ವರ ಲಿಂಗ ಆವುದಕ್ಕನ್ನಬೇಕು, ಸಕಲದೇಹವೆಂಬ ಗುಹೆಗೆ ಈಶ್ವರ ನೆನಿಸಿಕೊಂಡಿರುವ ಮಹಾಲಿಂಗರೂಪಿ ತಾನು, ಇಂತಪ್ಪ ಮಹಾಲಿಂಗ ರೂಪಿ ತನ್ನನ್ನು ಆರು ಅರಿತಿದ್ದಾರೆ ಆ ಮಹಾಂತನ ದೃಷ್ಟಿಗೆ ಆರು ಜನ್ಮವಾದವರಿಲ್ಲ, ಜನ್ಮವೆಂಬುದು ಪುಸಿ ದೃಷ್ಟಿ , ಭ್ರಾಂತಿ ದೃಷ್ಟಿ, ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವು ಕಂಡರೆ ಅದು ಜನಿಸಿರುವುದೆ ? ಹಾಗೆ ಮಹಾಲಿಂಗರೂಪಿ ಘನದಲ್ಲಿ ಜನ್ಮವೆಂಬ ಹಾವು ತೋರಿದರೂ ಅದು ಸುಜ್ಞಾನದಿಂದ ನೋಡುವುಡೆ ಮಹಾಲಿಂಗವು ಇದ್ದಂತೆ ಇದೆ. ಇದು ಸಕಲರ ಅಂತರಂಗ, ಬಹಿರಂಗವೆನ್ನದೆ ವ್ಯಾಪಕವಾಗಿಹ ಚಿದ್ಘನ. ಇದನ್ನು ಅರಿಯಹೋದವರಿಗೆ ತಾನು ಅದುವೆ, ಸಕಲವು ಅದುವೆ ಆಗಿ ಪ್ರಜ್ವಲಿಸುವುದು. ಅರಿಯುವದೆಂದರೆ ಸಕಲರ

ಸ್ವರೂಪವಾಗಿಹ ಚಿದ್ಘನ ಅರಿಯಬೇಕು. ಆಗ ಅರಿತು ಜನ್ಮವಾದವರಿಲ್ಲವೆಂಬುದು ತನಗೆ ವಿದಿತವಾಗುವುದು. ಇದು ಅರುವ ಅರಿತ ಹಿರಿಮೆ. ತನ್ನ ಹಿರಿಮೆ ತನ್ನ ದಿವ್ಯದೃಷ್ಟಿಗೆ ಆರಾರು ಜನ್ಮವಾದವರಿಲ್ಲ.

ಚಿದ್ಘನ ಹೇಗೆ ಅರಿಯುವುದು, ಇದು ಅರಿದರುಹಿಸಿಕೊಂಬುದಕ್ಕೆ ಮೀರಿದ ಘನ. ಇಲ್ಲಿ ಅರಿಸಿಕೊಳ್ಳುವ ಅನಾತ್ಮವು ತಾನಾಗಬಾರದು. ಅರಿಯುವ ದೃಕ್ ರೂಪನು ತಾನಾಗಬಾರದು. ಇವೆರಡು ಆವುದರಿಂದ ಸಿದ್ಧವಾಗುವವು ಅದು ಸ್ವತಃ ಸಿದ್ಧವು. ಏಕೆಂದರೆ ಸ್ವತಃ ಸಿದ್ಧವೆಂಬುದು ತನ್ನಿರವು. ತಾನು ಅರಿದರುಹಿಸಿ ಕೊಳ್ಳುವದಕ್ಕೆ ಮೀರಿದ ಘನವೆಂದು ಹೇಳಿದೆ. ತಾನಿಲ್ಲದ ಮುನ್ನ ಅನಾತ್ಮವೆಂಬುದಿಲ್ಲ. ಆತ್ಮವೆಂಬುದಿಲ್ಲ ಅನಾತ್ಮವೆಂದರಿದವನು ತಾನೆ, ಆತ್ಮವೆಂಬುದನರಿದವನು ತಾನೆ. ಇವೆಲ್ಲವು ಹೆತ್ತರಿವು. ತಾನೆ ಸ್ವಯಮೇವ ಘನ, ಅಪಾರ. ತನ್ನನ್ನು ಇವಾವು ಅರಿಯವು. ತಾನು ಇದ್ದಂತಿರುವ ಅರಿಯದರುವು ಸ್ವಮಹಿಮವು. ಹೀಗೆ ತನ್ನ ದೇಹವೆಂಬ ಗುಹೆಗೆ ಈಶ್ವರನೆನಿಸಿಕೊಂಡಿರುವ ಅನುಪಮ ಲಿಂಗವ ಅರಿತರೆ ಜನ್ಮವಾದವರಿಲ್ಲ.

ಸತ್ತು ಮರಳಿ ತೋರುವದಿಲ್ಲ : ಇದ್ದು ಅವನು ಸತ್ತಿದ್ದಾನೆ. ಅವನಿಗೆ ಪುನಃ ಇಲ್ಲದ್ದು ತೋರಲಾರದು. ಇದ್ದು ಅವನಿಗೆ ಸಾಯುವುದು ಕಲಿತಿದ್ದಾನೆ. ಅವನು ಸತ್‌ಸ್ವರೂಪ ತಿಳಿದಿದ್ದಾನೆ. ಸತ್ ಸ್ವರೂಪ ಇದು ಮಾತಿಲ್ಲದುದು; ಸತ್ ಸ್ವರೂಪ ಅರಿಯ ಹೋದಾಗ ಇಲ್ಲದ ಅಸತ್‌ದೃಷ್ಠಿ, ಮಿಥ್ಯಾದೃಷ್ಠಿ, ಭ್ರಾಂತಿದೃಷ್ಠಿ ಸ್ವಭಾವತಃ ನಷ್ಟವಾಗುವುದು. ಅಸತ್‌ದೃಷ್ಠಿ ಎಂಬುದು ಮೊಲದ ಕೋಡು, ಬಂಜೆಯ ಮಗ, ಗಗನ ಕುಸುಮ. ಇವು ನುಡಿಯಲ್ಲಿಯೆ ತೋರಿ ಅರಿವುಡೆ ಇಲ್ಲವಾಗುವವು. ಮಿಥ್ಯಾದೃಷ್ಠಿ ಎಂಬುದು ಹಗ್ಗದಲ್ಲಿ ಹಾವು, ಸಿಂಪಿಯಲ್ಲಿ ಬೆಳ್ಳಿ, ನಿದ್ರೆಯಲ್ಲಿ ಕನಸು ಇದು ಮಿಥ್ಯಾದೃಷ್ಠಿ , ಭ್ರಾಂತಿದೃಷ್ಠಿ ತಾನಾಗದುದು ತಾನೆಂದು ತಿಳಿದು ವಿಪರೀತ ಬುದ್ಧಿಯುಳ್ಳದ್ದಾದುದೆ ಭ್ರಾಂತಿದೃಷ್ಠಿ, ಅಸತ್‌ದೃಷ್ಠಿ. ಇದು ಆನು ನೀನೆಂಬುದು ಇಲ್ಲ, ತಾನರಿದ ಬಳಿಕ ಏನೂ ಇಲ್ಲ . ಇಲ್ಲಾದುದಿಲ್ಲಾದುದು ಎಂದಿಪ್ಪುದು, ಇಲ್ಲಾದುದಿಲ್ಲಾದುದು ಎಂತಿಪ್ಪುದು, ಅನುವರಿತು ತನುವ ಮರೆದಡೆ ಗುಹೇಶ್ವರ ಬಯಲು. ನಾನೀನೆಂಬುದು ಇದು ಇಲ್ಲ . ಇಲ್ಲಾದುದಿಲ್ಲಾದುದು ಆದ್ದರಿಂದ ಮೊಲದ ಕೋಡು, ಬಂಜಿ ಮಗನೆಂದು ಹೇಳಿದೆ. ಆರು ನಾನೀನೆಂಬುದಕೆಡೆಗೊಡದ ಘನವನ್ನು ಅರಿತಿದ್ದಾರೆ. ಅವರಿಗೆ ಪ್ರಪಂಚವೆ ಮೊಲದ ಕೋಡು, ಬಂಜಿಯ ಮಗನಾಗಿದೆ. ಮಿಥ್ಯಾದೃಷ್ಠಿ ಎಂಬುದು ಕಪ್ಪೆಚಿಪ್ಪಿನಲ್ಲಿ ಬೆಳ್ಳಿ , ಹಗ್ಗದಲ್ಲಿ ಹಾವು, ನಿದ್ರೆಯಲ್ಲಿ ಕನಸು, ತಾನು ಸಾಕ್ಷಿ ಸ್ವಯಂ ಪ್ರಕಾಶ ಅಸಂಗ ಪ್ರತ್ಯಾಗಾತ್ಮನೆಂಬ ಪುರುಷಾರ್ಥದ ಅರುವು ಆಗಿದೆ. ಅವನಿಗೆ ಜಗವು ತೋರಲಿ ತನ್ನ ದೇಹ ತೋರಲಿ, ಸುಖದುಃಖಗಳೆ ತೋರಲಿ, ಮೌನ ಅಪಮಾನ ತೋರಲಿ, ಹುಟ್ಟು ಸಾವು ತೋರಲಿ, ತನ್ನ ಸಾಕ್ಷಿ ಸ್ವಯಂ ಪ್ರಕಾಶದ ಘನವ ನೆನೆಸಿದರೆ ಸಾಕು ಅದು ಮಿಥ್ಯೆಯಾಗಿ ತೋರುತ್ತದೆ. ತನ್ನ ತಾನರಿದವನಿಗೆ ಇದು ಭ್ರಾಂತಿ ದೃಷ್ಠಿಯು ಎಂಬುದು ಸ್ವತಃ ಸಿದ್ಧವು. ನಾಹಂ ಎನ್ನುವುದು ಭ್ರಾಂತಿ ದೃಷ್ಠಿಯೂ ಕೋಹಂ ಎನ್ನುವದು, ಸೋಹಂ ಎನ್ನುವದು, ಚಿದಹಂ ಎನ್ನುವದು, ದಾಸೋಹಂ ಎನ್ನುವದು ನುಡಿಯುವದೆಲ್ಲವು ಭ್ರಾಂತಿ ದೃಷ್ಠಿಯು ಎಂಬುದು ಸಹಜ ಸಿದ್ಧವು ದುರಾಭಿಮಾನವ ಹೊತ್ತು, ಅಘಟಿತ ಘಟಿತವನುಡಿವಿರಿ ಈ ದುರಾಭಿಮಾನ ಹೊತ್ತವರು ಯಾರು? ಅಘಟಿತ ಘಟಿತವ

ನುಡಿವವರು. ದುರಾಭಿಮಾನ ಹೊತ್ತವರೆಂದರೆ ನುಡಿಗೆಡೆಗೊಡದ ಘನವನ್ನು ನುಡಿದು ಹೇಳುವೆವೆನ್ನುವವರೆಲ್ಲ ದುರಾಭಿಮಾನ ಹೊತ್ತವರು. ಮಿಗೆ ಮಿಗೆ ಮೀಸಲವಾಗಿಹ ಅದನ್ನು ಶಬ್ದದಲ್ಲಿ ಬಳಸುವ ಶಬ್ದಾಡಂಬರದವರು ಮಾತಿನ ಮಾತಿನ ಮಹಾಂತರು. ಇವರೆ ದುರಾಭಿಮಾನವ ಹೊತ್ತು ಮಾತಿಗೆ ಅಸಾಧ್ಯವಾದುದು ಸಾಧ್ಯವ ಮಾಡಿಹೆವೆನ್ನುವವರು; ಅರಿಯೆ ಅರಿತೆನೆನ್ನುವವದಕ್ಕೂ ಮೀರಿದ ಘನವ ಅರಿತೆನೆನ್ನುವವರು. ಅವರೆ ನಾನೀನೆಂಬುದಕ್ಕೆಡೆಗೊಡದ ಘನವ ನಾನಾಗಿ ಹೇಳುವವರೆಲ್ಲ ಅವರೆ. ನಿಶಬ್ದ ಬ್ರಹ್ಮವ, ಶಬ್ದದಿಂದುಸರುವವರೆಲ್ಲರು ಅವರೆ. ಅಗಣಿತವ ಗಣಿತಕ್ಕೆ ತಂದವರು ಅಚಿಂತ್ಯತ್ವವ ಚಿಂತನಕ್ಕೊಳಪಡಿಸುವರೆಲ್ಲ ಅವರೆ ವಾಙ್ಮನೋತೀತವ ವಾಕ್ಕಿಗೂ ಮನಕ್ಕೂ ಒಳಪಡಿಸುವವರು ನಿರ್ವಾಣವ ನುಡಿದು ಹೇಳುವವರು ಅಕಲ್ಪಿತವ ಕಲ್ಪಿತದಲ್ಲಿ ಬಳಸುವವರು ಅಪ್ರಮಾಣವು ಪ್ರಮಾಣದಿಂದ ನುಡಿಯುವದರಲ್ಲಿಯೆ ದಿನಗಳೆದರಲ್ಲದೆ, ತನ್ನಿರುವ ಅರಿಯ ಹೋಗದ್ದರಿಂದ ಇವರು ದುರಾಭಿಮಾನವ ಹೊತ್ತು ಅಘಟಿತ ಘಟಿತವ ನುಡಿವರು. ಈ ದೇಹ ವಿಡಿದು ನುಡಿವ ಪ್ರಪಂಚಿಗಳ ನೇನೆಂಬೆ ಗುಹೇಶ್ವರಾ, ಓಹೊ!! ಇವರ ಪರಮಾರ್ಥ ಪ್ರಪಂಚಕ್ಕೆ ಉಪಯೋಗವಾಯಿತೆ? ಇಲ್ಲದ ದೇಹ ಇಲ್ಲವಾಗಲಿಲ್ಲ ಇಲ್ಲದ ಪರಮಾರ್ಥ ನುಡಿ ಇಲ್ಲವಾಗಲಿಲ್ಲವೆ? ಇದ್ದ ತನ್ನಿರುವುಳ್ಳ ಅರಿವು ತನಗೆ ಬೆಳಗುಳ್ಳದ್ದಾಗಿ ಬೆಳಗಲಿಲ್ಲವೆ? ಈ ಶಬ್ದ ಜಾಲ ತನ್ನ ಘನವ ತಿಳಿಯಗೊಡದಂತೆ ಮಾಡಿತ್ತೆ? ಇದುವೆ ದುರಾಭಿಮಾನಕ್ಕೀಡು ಮಾಡಿತ್ತೆ? ಇಲ್ಲದ ಜನ್ಮ ಇಲ್ಲವಾಗಲಿಲ್ಲ . ಆವುದು ಸಾಯಬೇಕು ಅದು ಸಾಯಲಿಲ್ಲವೆ? ಈ ಭ್ರಮಾತ್ಮಕ ತೋರಿಕೆಯೆ ದಿಟವಾಯಿತೆ ! ಇದೇನಾಶ್ಚರ್ಯ; ತನ್ನ ತಾನು ಯತಾರ್ಥವಾಗಿ ಅರಿಯದ ಪರಿಣಾಮ ದುರಾಭಿಮಾನವ ಹೊತ್ತು ಅಘಟಿತ ಘಟಿತವ ನುಡಿಯಲು ಇಂಬು ಮಾಡಿತ್ತು. ಕೊನೆಗೆ ಈ ಅಪವಿತ್ರ ದೇಹವ ತಾನೆಂಬುದು ದೃಢವಾಗಿ ಮಿಥ್ಯಾ ಪ್ರಪಂಚಕ್ಕಾಗಿ ಹೋರಾಡಿ ಮರಣವಾಗುವುದು ಸಿದ್ಧವಾಯಿತೆ; ತ್ರಾಹಿ ತ್ರಾಹಿ ತಾನಾರೆಂದರಿಯದ ಕೇಡಿಂಗೆ ಕಡೆಯಿಲ್ಲ ; ಇದು ಆಗದ ಪಕ್ಷದಲ್ಲಿ ಹಿರಿಯರನೆಲ್ಲರ ಹುಟ್ಟಿಸಿದಾತ ನರಿಯಿರೊ; ಹಿರಿಯರ ಮಕ್ಕಳಿರಾ?

**50**

**ಹಿರಿಯರನೆಲ್ಲರ ಹುಟ್ಟಿಸಿದಾತನರಿಯಿರೊ?**
**ಹಿರಿಯರ ಮಕ್ಕಳಿರಾ?**
**ಇಂದು ಎಂದೇನೊ? ನಾಳೆ ಎಂದೇನೊ?**
**ಎಂದೂ ಒಂದೆ ಮಕ್ಕಳಿರಾ!**
**ಗುಹೇಶ್ವರಲಿಂಗ ಹಂಗಿಲ್ಲದ ಸಂಯೋಗ**
**ಇದು ಬೇಗ ನರಿಯಿರೊದ ಹಿರಿಯರ ಮಕ್ಕಳಿರಾ.** ॥ 1629 ॥

**ತಾತ್ಪರ್ಯ:** ಹಿರಿಯರನೆಲ್ಲರ ಹುಟ್ಟಿಸಿದಾತ ನರಿಯಿರೊ ಹಿರಿಯರ ಮಕ್ಕಳಿರಾ: ಹಿರಿಯರು ಆರು? ಅಜಕಲ್ಪಕೋಟಿ ವರ್ಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ? ನಡು ಮುರಿದು, ಗೂಡು ಗೂಡಿ, ತಲೆ ನಡುಗಿ ಮತಿಗೆಟ್ಟು

ಒಂದನಾಡಹೋಗಿ ಒಂಭತ್ತ ನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ? ಬ್ರಹ್ಮನಷ್ಟು ಬಾಳಿದರೂ, ಶರಣರು ಅವರಿಗೆ ಹಿರಿಯರೆನಲಿಲ್ಲ . ಉಪಾಸಕರು, ತನ್ನ ಉಪಾಸ್ಯ ದೇವನ ಧ್ಯಾನದಲ್ಲಿ ತಲ್ಲೀಯವಾಗಿ ಹುತ್ತೇರಿ ಬೆತ್ತ ಬೆಳದರೂ ಅವರಿಗೆ ಹಿರಿಯರೆನಲಿಲ್ಲ . ನೂರಾರು ವರ್ಷ ವಯೋವೃದ್ಧನಾಗಿ ಶರೀರ ಹಣ್ಣು ಹಣ್ಣಾಗಿ ನಡುಬಾಗಿ ಗೂಡುಗಟ್ಟಿ ತಲೆ ನಡುಗಿ ಬಿಳಿ ಕೂದಲುಗಳಿಂದ ಸಕಲ ಅಂಗಗಳು ಮುಚ್ಚಿ ಕಣ್ಣು ಕಾಣಿಸದವನಾಗಿ ಕಿವಿ ಕೇಳದವನಾಗಿ ಬುದ್ಧಿಯೆ ವಿಭ್ರಮವಾಗಿ ಒಂದ ನಾಡಹೋಗಿ ಒಂಭತ್ತು ಮಾತಾಡಿದರೂ ನಿಷ್ಪ್ರಯೋಜಕವಾಗುವ ಅಜ್ಞಾನಿಗಳಿಗೆ ಹಿರಿಯರೆನಲಿಲ್ಲ.

ಹಿರಿಯರ ನೆಲ್ಲರನು ಹುಟ್ಟಿಸಿದಾತನಾರು ? ಹಿರಿಯರು ಎಂದಲ್ಲಿ ಚರಾಚರ ಜಗವ ಹುಟ್ಟಿಸಿದಾತ ಬ್ರಹ್ಮನೆನ್ನುವರು, ರಕ್ಷಿಸುವಾತ ವಿಷ್ಣುವೆನ್ನುವರು, ಫಲಪದವ ನೀಯುವಾತ ರುದ್ರನೆಂಬುವರು. ಚರಾಚರ ಜಗವ ಹುಟ್ಟಿಸಿದ ಬ್ರಹ್ಮ ತನ್ನ ಶಿರವನ್ನೇಕೆ ಹುಟ್ಟಿಸಲಿಲ್ಲ, ರಕ್ಷಿಸುವ ವಿಷ್ಣುವಾದರೆ ತನ್ನ ಮಗನನ್ನೇಕೆ ರಕ್ಷಿಸಲಿಲ್ಲ, ಬೇಡಿದವರಿಗೆ ಬೇಡಿದ ಫಲಪದವನೀವ ರುದ್ರನಾದಲ್ಲಿ ತನಗೆ ತಾನು ನಿಜಪದವ ಈಯಲಿಲ್ಲ, ದುಷ್ಟ ನಿಗ್ರಹ, ಶಿಷ್ಟ ಪರಿಪಾಲಕ ಕೂಡಲಸಂಗಮದೇವಾ ನಿಜವಾದ ಗುಟ್ಟು ತಿಳಿದವರೆಂದರೆ ಶರಣರು, ಶರಣೆಯರು. ಇದು ಕಾರಣ ಬ್ರಹ್ಮನಿಗೆ ಪೂರ್ವದಲ್ಲಿ ಐದು ಮುಖಗಳಿದ್ದವಂತೆ, ಶಿವನಿಗೂ ಐದು ಮುಖ, ನನಗೂ ಐದು ಮುಖ ಈರ್ವರು ಸಮಾನರು ಎಂಬ ಗರ್ವ ಬಂದಿತ್ತಂತೆ. ಆ ಗರ್ವಹರಣಕ್ಕಾಗಿ ಶಿವನು ಒಂದು ತಲೆಯನ್ನೆ ಕತ್ತರಿಸಿದನಂತೆ. ಸೃಷ್ಟಿ ಮಾಡುವ ಬ್ರಹ್ಮ ತನ್ನ ತಲೆಯನ್ನೇಕೆ ಸೃಷ್ಟಿಸಲಿಲ್ಲ ಎಂದು ಶರಣರು ಪರಿಶೋಧಿಸಿಹರು. ತಮ್ಮ ಅನುಭವದ ಒರೆಗಲ್ಲಿಗೆ ಹಚ್ಚಿ ತಿಕ್ಕಿ ಹುಟ್ಟಿಸಿದವ ಬ್ರಹ್ಮನೆಂಬುದು ಅಲ್ಲಗಳೆದಿದ್ದಾರೆ.

ರಕ್ಷಿಸುವವನು, ವಿಷ್ಣು ಅಲ್ಲವೆ ? ಜಗತ್ತನ್ನೆ ರಕ್ಷಿಸುವ ಸಮರ್ಥ ತನ್ನ ಮಗನನ್ನೇಕೆ ರಕ್ಷಿಸಲಿಲ್ಲ, ಇರಲಿ, ಹಿರಿಯರು ಅಂದರೆ ಆರು, ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೆ ಒಂದು ದಿನವಾಯಿತ್ತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ರುದ್ರಾವತಾರ ಹಲವಳಿವಲ್ಲಿ ನಮ್ಮ ಕೂಡಲ ಸಂಗಮದೇವ ಏನೆಂದೂ ಅರಿಯನು.

ಆರು ಕೋಟಿ ಬ್ರಹ್ಮರೆ ಹಿರಿಯರೆಂದರೆ ಆ ನಾರಾಯಣಂಗೆ ಒಂದು ದಿನವಾಗಿದೆ. ಒಬ್ಬ ಬ್ರಹ್ಮನೆ ಕಲ್ಪಕೋಟಿ ವರ್ಷ ಬಾಳುವಲ್ಲಿ ಆರು ಕೋಟಿ ಬ್ರಹ್ಮ ವರ್ಷಗಳು. ಅದಾರು ಗಣಿತ ಮಾಡುವುದು, ಒಬ್ಬ ಬ್ರಹ್ಮನದು ಗಣಿತ ಮಾಡುವದು, ಅಸಾಧ್ಯವಾಗಿರುವಲ್ಲಿ ನಾರಾಯಣನಿಗೆ ಒಂದು ದಿನವಾದ ಹಿರಿಯನದಾರು ಗಣಿಸುವುದು, ಇಂತಪ್ಪ ನಾರಾಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣು ತೆರೆಯಲು ಅವಕಾಶವಾಗಿದೆ. ಇಂತಪ್ಪ ಹಲವು ರುದ್ರಾವತಾರ ಅಳಿದರೂ ಕೂಡಲಸಂಗಮದೇವ ಏನೆಂದೂ ಅರಿಯನು.

ಹಿರಿಯರನೆಲ್ಲರ ಹುಟ್ಟಿಸಿದಾತ ನರಿಯಿರೊ ? ಹಿರಿಯರ ಮಕ್ಕಳಿರಾ: ಹಿರಿಯರನೆಲ್ಲರ ಹುಟ್ಟಿಸಿದಾತನೆಂದರೆ ಇವರೆಲ್ಲರ ಮುನ್ನ ಮುನ್ನವೆ ಇದ್ದ ಘನ, ಈ ಘನ ಆದಿ ಸ್ವಯಂಭುವಿಲ್ಲದ ಮುನ್ನ, ಸಂಗ ನಿಸ್ಸಂಗವಿಲ್ಲದ ಮುನ್ನ , ನಕ್ಷತ್ರ ಗ್ರಹಂಗಳಿಲ್ಲದ ಮುನ್ನ, ಯೋಗ ಕರಣಂಗಳಿಲ್ಲದ ಮುನ್ನ, ಬೇಚರ, ಭೂಚರವಿಲ್ಲದ ಮುನ್ನ , ಆರೂ ಆರು, ಇಲ್ಲದ ಮುನ್ನ , ಆಕಾಶ ಮಾರುತವಿಲ್ಲದ ಮುನ್ನ ,ಅಂಬುಧಿಕ ಮತರಿಲ್ಲದ

ಮುನ್ನ ಹರಿಬ್ರಹ್ಮದಿಗಳಾರ ನಿಲವಿಲ್ಲದ ಮುನ್ನ , ಹಿಮಕರ, ದಿನಕರರ ಸುಳುಹಿಲ್ಲದ ಮುನ್ನ, ಹಿಂದೂ ಇಲ್ಲ, ಮುಂದೂ ಇಲ್ಲ , ಒಂದು ಇಲ್ಲದ ಮುನ್ನ ಗುಹೇಶ್ವರನಿರ್ದ ತನ್ನ ತಾನರಿಯದಂತೆ. ಇದಲ್ಲದೆ ಅಂಗಜ, ಒಡೆಯರಿಂದ ಮುನ್ನ, ದ್ವೀಪ ದ್ವೀಪವಿಲ್ಲದ ಮುನ್ನ, ಅನಲ, ಪವನರಿಲ್ಲದ ಮುನ್ನ, ರವಿ, ಚಂದ್ರರಿಲ್ಲದ ಮುನ್ನ, ಇಂತೀ ಚತುರ್ವಿಧ ಒಂದಾಗದ ಮುನ್ನ, ಗುಹೇಶ್ವರ ಲಿಂಗವಲ್ಲಿಂದ ಮುನ್ನ.

ಪ್ರಭು ಹಿರಿಯರ ಮಕ್ಕಳಾದವರಿಗೆ ಎಚ್ಚರಿಸಿಹನು. ಹಿರಿಯರೆಂದರೆ ಬ್ರಹ್ಮ, ವಿಷ್ಣು ರುದ್ರರೆಂದು ತಿಳಿಯಕೂಡದು. ಇವರೆಲ್ಲರ ಹುಟ್ಟಿಸಿದಾತ, ಇವರೆಲ್ಲರ ಮುನ್ನವೆ ಇದ್ದಾತ, ಅಂದು, ಇಂದು ಎಂದೆಂದು ಇದ್ದ ಘನವು, ಅದು ಒಳ, ಹೊರಗೆನ್ನದೆ ಪೂರ್ಣಾತ್ ಪೂರ್ಣವಾಗಿರುವ ನಿರಂತರ ಘನ. ಈ ಘನವಂತರೆಂದರೆ ಗುಹೇಶ್ವರ ಲಿಂಗ. ಇದು ಬೇಗಲರಿಯಿರಿ ಹಿರಿಯರ ಮಕ್ಕಳಿರಾ ! ನೀವು ಅರಿಯುವವರು. ನಿಮ್ಮ ಹಿರಿಯರನೆಲ್ಲರ ಹುಟ್ಟಿಸಿದವ, ಇವರೆಲ್ಲರ ಮುನ್ನವೆ ಇದ್ದವ, ಇವನನ್ನು ಬೇಗ ಅರಿಯುವುದು.

ಇಂದು ಎಂದೇನೊ, ನಾಳೆ ಎಂದೇನೊ ಎಂದೂ ಒಂದೆ ಮಕ್ಕಳಿರಾ, ಹಿರಿಯರನೆಲ್ಲರನು ಹುಟ್ಟಿಸಿದವನ ಬೇಗನೆ ಅರಿಯುವುದು ಈ ಕಾರ್ಯ. ಈ ಹೊತ್ತು ಮಾಡಬೇಕೊ, ಅಥವಾ ಎಂದು, ಯಾವ ದಿನ, ಯಾವ ಸಮಯವೆಂದು ವಿಚಾರ ಮಾಡುತ್ತಾ ಕೂಡಬೇಡಿ, ಈಗಲೆ ಬೇಗ ಅರಿಯುವುದು ಎಂದು ನಿರ್ಧರಿಸುವುದು.

ಗುಹೇಶ್ವರ ಲಿಂಗ ಅತಿ ಬೇಗನೆ ಅರಿಯುವುದು ಏಕೆಂದರೆ ಗುಹೇಶ್ವರ ಲಿಂಗ ಹಂಗಿಲ್ಲದ ಸಂಯೋಗ. ಇದು ಬೇಗ ಅರಿಯುವುದು ಗುಹೇಶ್ವರ ಲಿಂಗ ಎಂಬುವುದು ಸಕಲರ ದೇಹವೆಂಬ ಗುಹೆಗೆ ಈಶ್ವರನೆನಸಿಕೊಂಡಿರುವ ಮಹಾಘನಲಿಂಗ ಇದು. ಹಂಗಿಲ್ಲದ ಸಂಯೋಗ, ಇದನ್ನು ಬೇಗ ಅರಿಯುವುದು ಹಿರಿಯರ ಮಕ್ಕಳಿರಾ.

ಈಶ್ವರರೆಂದರೆ ದೇವ, ದಾನವ, ಮಾನವ, ಮನು, ಮುನಿ, ಸಿದ್ಧರು, ಕೇಚರರು, ಭೂಚರರು, ಕಿನ್ನರರು, ದೇವತಾ ಗಣ, ರುದ್ರಗಣ, ಪ್ರಮಥ ಗಣ, ಸಕಲರ ದೇಹವೆಂಬ ಗುಹೆಗೆ ಈಶ್ವರನೆನೆಸಿಕೊಂಡಿರುವ ಸ್ವಯಂಜ್ಯೋತಿಲಿಂಗ ಈ ಘನ ಲಿಂಗವರಿಯಲು ಅಲ್ಲಿ, ಇಲ್ಲಿ ಅರಿಯಲು ಹೋಗಬೇಕಾಗಿಲ್ಲ, ತನ್ನ ದೇಹದೊಳಗೆ ನೋಡುವುದು.

ಈ ಘನಲಿಂಗವರಿಯಲು ತನ್ನಿಂದ ತಾನರಿಯುವುದು. ಇಲ್ಲಿ ಕಲ್ಪಿತನಾಗಿ ನಾಹಂ ಎಂದು ಅರಿಯಹೋದರೂ ಅಸಾಧ್ಯ. ಸೋಹಂ, ಸೋಹಂ ಎಂದು ಅಭೇದವಂತನಾಗಿ ಹೋದರೂ ಅಸಾಧ್ಯ. ನಾನು ಸಾಕ್ಷಿ, ಸ್ವಯಂ ಪ್ರಕಾಶ, ಸಚ್ಚಿದಾನಂದ ನಾನು. ಅಸಂಗ ನಾನು ಪೂರ್ಣ ಎಂದು ಅರುಹಿನ ಅಹಂಕಾರಿಯಾಗಿ ಅರಿಯಹೋದವರಿಗೂ ಅಸಾಧ್ಯ. ಭಾವತೀತ, ತ್ರಿಗುಣಾತೀತ, ಅವಸ್ಥಾತೀತ ಎಂದು ಅತೀತ ಅತೀತನೆಂದು ಅರಿಯಹೋದರೂ ಅಸಾಧ್ಯ. ತಾನು ಅನುಪಮ. ಗುಹೇಶ್ವರ ಲಿಂಗವು ಅನುಪಮವೆಂದು ತನ್ನಿಂದ ತನ್ನ ಅರಿಯ ಹೋದಾಗ, ಗುಹೇಶ್ವರ ಲಿಂಗ ಹಂಗಿಲ್ಲದ ಸಂಯೋಗ ಎಂಬುದು ತನ್ನಿಂದ ತನಗೆ ಸ್ವತಃ ವಿದಿತವು.

ಕಲ್ಪಿತನು ತಾನು ಎಂದು ತನ್ನೊಳಗೆ ಈ ದೋಷ ಎಲ್ಲಿಯವರೆಗೆ ಇದೆ. ಅಲ್ಲಿಯವರೆಗೆ ಹಂಗಿನ ಸಂಯೋಗ, ಹಂಗಿಲ್ಲದ ಸಂಯೋಗವೆಂದರೆ ಲಿಂಗಕ್ಕೆ ಲಿಂಗವಾಗಿ, ಲಿಂಗ ಪ್ರಸಾದ ಕೊಂಡಾಗ, ಹಂಗಿಲ್ಲದ ಸಂಯೋಗ, ಇದು ತನ್ನ ಸಂಯೋಗ, ತನ್ನಿರುವಿನ

ಸಂಯೋಗ, ತಾನೇ ತಾನಾದ ಸಂಯೋಗ. ಲಿಂಗ ಲಿಂಗವೆಂದು ಹಲುಬುವವರಿಗೂ ನಿಲುಕದ ಸಂಯೋಗ. ಅರಿತೆ ಅರಿಯೆನೆಂಬುವವರಿಗೂ ನಿಲುಕದ ಸಂಯೋಗ, ಇದು ತನ್ನಿಂದ ತನ್ನ ನೇರವಾಗಿ ಅರಿತ ಸಂಗ. ಅರಿಯದರುವಾಗಿಹ ಸಂಗ, ಅನುಪಮನಾಗಿಹ ಸಂಗ, ತಾನೇ ಅಕಲ್ಪಿತನಾಗಿಹ ಸಂಗ, ಹಂಗಿಲ್ಲದ ಸಂಗ, ತನ್ನ ಸಂಗ ತಾ ಮಾಡಿದ ಹಿರಿಮೆ ಇದು ಕಾರಣ, ಇದ ಬೇಗ ಅರಿಯಿರೋ ಹಿರಿಯರ ಮಕ್ಕಳಿರಾ ಎಂದು ಹೇಳಿದುದು.

**51**

**ವರ್ಣವಿಲ್ಲದ ಲಿಂಗಕ್ಕೆ ರೂಪ ಪ್ರತಿಷ್ಠೆಯ ಮಾಡುವರು.**
**ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ ಮಾಡುವರು.**
**ನುಡಿಯ ಬಾರದ ಲಿಂಗಕ್ಕೆ ಜಪಸ್ತೋತ್ರವ ಮಾಡುವರು.**
**ಮುಟ್ಟಬಾರದ ಲಿಂಗಕ್ಕೆ ಕೊಟ್ಟು ಕೊಂಡಾಡಿಹೆವೆಂಬರು**
**ಬೊಟ್ಟಿಡಲು ಎಡೆಯಿಲ್ಲದ ಲಿಂಗವ ಮುಟ್ಟಿ**
**ಪೂಜಿಸಿಹೆನೆಂಬ ಭ್ರಷ್ಟರು ನೋಡಾ ಗುಹೇಶ್ವರಾ.** || 1523 ||

**ತಾತ್ಪರ್ಯ:** ವರ್ಣವಿಲ್ಲದ ಲಿಂಗಕ್ಕೆ ರೂಪ ಪ್ರತಿಷ್ಠೆಯ ಮಾಡುವರು: ಲಿಂಗಾರ್ಚನೆಯ ಮಾಡದ ಪೂಜಾಲಿಂಗ ಪ್ರೇಮಿಗಳು ಭಾವಿಕರು, ಲಿಂಗಧಾರಣ ಮಾಡುವ ಅಯ್ಯಗಳು. ಇವರಿಗೆ ಲಿಂಗಜ್ಞಾನವಿಲ್ಲದಿದ್ದರಿಂದ ಲಿಂಗದ ಘನವ ಅವರೇನು ಬಲ್ಲರು. ಇವರು ಕಣ್ಣಿದ್ದು ಕುರುಡರಾಗಿರುವರು. ಕುರುಡ ಬೆಳಕಿನ ಘನವನೇನು ಬಲ್ಲ, ಹಾಗೆ ಲಿಂಗಜ್ಞಾನವಿಲ್ಲದ ಕುರುಡರು ಆಶ್ಚರ್ಯ! ಕಣ್ಣಿದ್ದು ಕುರುಡರಾಗಿರುವುದು ಆಶ್ಚರ್ಯವಲ್ಲವೆ? ಲಿಂಗವೇ ತಾನಿದ್ದು, ತನ್ನ ಜ್ಞಾನ ತನಗಿಲ್ಲವೆಂದರೆ ಆಶ್ಚರ್ಯವಲ್ಲವೆ ? ಶ್ರೀಗುರು ಕರುಣಿಸಿದಲ್ಲಿ ಇವರಿಗೆ ಹೀಗೆ ಮರವುಳ್ಳವರು ಆಗುತ್ತಿದ್ದಿಲ್ಲ, ಲಿಂಗ ಘನ ಅದು ಅವರ್ಣೀಯವು. ಅದನ್ನು ಅರಿಯಲು ಕರುಣಿಸಿಹನಲ್ಲದೆ, ರೂಪವುಳ್ಳದು ಎಂದು ಹೇಳಲಿಲ್ಲ, ಅವರ್ಣೀಯ ಲಿಂಗ, ಅಪ್ರಮಾಣ ಲಿಂಗ, ಅಪ್ರಮೇಯ ಲಿಂಗ, ಅದು ರೂಪವಾಗದು. ನಿರೂಪವಾಗಿಹ ಲಿಂಗ. ಅದನ್ನು ರೂಪವಾಗಿ ಕಾಣುವ ಇದೆಂಥ ದೃಷ್ಟಿ, ಇದು ಪೂಜಾಲಿಂಗವೆಂದು ಪೂಜಾವಿಧಾನ ಹೇಳುವ ಗುರು ಕರುಣೆಗೆ ಏನೆನ್ನಬೇಕು, ರೂಪು : ಕೇವಲ ಜ್ಯೋತಿ. ಅದು ವರ್ಣಾತೀತವಾಗಬಹುದೆ ? ರೂಪು ಅದು ಅಭೇದ್ಯವೇ, ಅದಾಯ್ಯವೆ, ಅಚಲವೆ, ಅಮರವೆ? ರೂಪು, ಅದು ಕಪ್ಪು ಇರಲಿ, ಕೆಂಪು, ಹಳದಿ, ಹಸಿರು, ನೀಲಿ, ಆವುದೇ ಇರಲಿ ಇದು ವರ್ಣದಿಂದುಕ್ತವು. ವರ್ಣಾತೀತ ಲಿಂಗ ಹೇಗಾಗುವುದು.

ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ ಮಾಡುವರು : ಅಹುದು ಇವರ ಸಾಹಸ, ಪ್ರಾಣ ಪ್ರತಿಷ್ಠೆಯ ಮಾಡುವವರು ಇವರಾರು ? ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯೆ ? ಇದೆಂಥ ಪರಿ, ಇವರು ಪೂಜಾ ನಿಷ್ಠರು, ಸ್ವಾಮಿಗಳು, ಅಯ್ಯಗಳಲ್ಲಿ ವಿರತಿಯಾಗಿಹ ಶ್ರೇಷ್ಠರು. ಇವರು ಲಿಂಗಕ್ಕೆ ಪ್ರಾಣ ಪ್ರತಿಷ್ಠೆ ಮಾಡುವವರು. ಇವರು ಪೂರ್ವದಲ್ಲಿ ಕಳಂಕವುಳ್ಳವನಾಗಿದ್ದನಂತೆ, ದಯೆ ತೋರಿ ಇವರು ಅವನನ್ನು ಪ್ರಳಯವಿಲ್ಲದ ಲಿಂಗ ಘನವ ಮಾಡಿದರಂತೆ, ಜೀವ ಕಳೆ ಕೊಟ್ಟರಂತೆ, ಇವರ ಘನಕಾರುಣ್ಯದಿಂದ ಆ ದೇವನು

ಭಕ್ತಾದಿಗಳಿಗೆ ಬೇಡಿದ ಇಷ್ಟಾರ್ಥವ ಪೂರ್ತಿ ಮಾಡುವ ಸಮರ್ಥತೆ ಆ ಲಿಂಗಯ್ಯಗೆ ಬಂದಿತಂತೆ. ಹೀಗೆ ಭಾವಿಕರಲ್ಲಿ ಅಂಧ ಶ್ರದ್ಧೆ ಬೆಳೆದು ಬಂದ ತಪ್ಪು ತಿಳುವಳಿಕೆ ಅದೆಂತು ಪರಿಹಾರವಾಗಬೇಕು. ತಪ್ಪು ತಿಳುವಳಿಕೆ ನಷ್ಟ ಮಾಡುವ ಸ್ವಾನುಭವಿಗಳು ಇವರೆ ? ಅಂಧಶ್ರದ್ಧೆ, ಮೂಢಭಾವ ಬೆಳೆಸಲು ಸಮರ್ಥರಾಗಿಹರಲ್ಲದೆ ಲಿಂಗದ ಯತಾರ್ಥ ಜ್ಞಾನ ಅವರಿಗೆ ಇಲ್ಲದಿರುವಾಗ ಲಿಂಗವೆಂದರೆ ಪ್ರಳಯವಿಲ್ಲದುದು ಎಂಬುದು ಸಹಜವು. ಇದು ತಿಳಿಯದಾಗಿದೆ.

ನುಡಿಯಬಾರದ ಲಿಂಗಕ್ಕೆ ಜಪಸ್ತೋತ್ರ ಪೂಜೆಯ ಮಾಡುವರು: ಮುಟ್ಟಬಾರದ ಲಿಂಗಕ್ಕೆ ಕೊಟ್ಟು ಕೊಂಡಾಡಿಹೆ ಎಂದರು. ಬೊಟ್ಟಿಡಲೆಡೆಯಿಲ್ಲದ ಲಿಂಗ ಮುಟ್ಟಿ ಪೂಜಿಸಿಹನೆಂಬ ಭ್ರಷ್ಟರ ನೋಡಾ ಗುಹೇಶ್ವರಾ. ನುಡಿಯ ಬಾರದ ಲಿಂಗಕ್ಕೆ ಜಪಸ್ತೋತ್ರವ ಮಾಡುವ ಸಂಖ್ಯೆಯೆ ಬಹಳ ಇದೆ. ಇವರು ಉದಯ ಸಾಯಂಕಾಲದಲ್ಲಿ ಲಿಂಗಕ್ಕೆ ಜಪದಿಂದಲು, ಸ್ತೋತ್ರದಿಂದಲು ಪೂಜೆ ಮಾಡುವರು. ಬ್ರಹ್ಮ ಮುರಾರಿ ಸುರಾರ್ಚಿತ ಲಿಂಗಂ ಎಂದು ರಾವಣಾಷ್ಟಕದಿಂದ ಸ್ತೋತ್ರವ ಮಾಡುವರು. ಇದಲ್ಲದೆ ಕೆಲವರು ಹರನಾಮಾವಳಿ ಎನ್ನುವರು. ಲಿಂಗವೆಂದು ನುಡಿಯಲುಬಾರದ ಅಪ್ರಮಾಣ ದೇವನಿಗೆ ಲಿಂಗವೆನ್ನಲು ಬಾರದಿರುವಲ್ಲಿ ಜಪಸ್ತೋತ್ರ ಮಾಡುವವರು; ಲಿಂಗ ರಹಸ್ಯ ತಿಳಿದವರಲ್ಲ.

ಲಿಂಗ ಲಿಂಗ ಎಂಬುವನಿಗೆ ಲಿಂಗವಿಲ್ಲ, ಜಂಗಮ ಜಂಗಮ ಎಂಬುವನಿಗೆ ಜಂಗಮವಿಲ್ಲ, ಪ್ರಸಾದ ಪ್ರಸಾದ ಎಂಬುವನಿಗೆ ಪ್ರಸಾದವಿಲ್ಲ, ಲಿಂಗ ಎನ್ನದವಂಗೆ ಲಿಂಗ ಉಂಟು, ಜಂಗಮ ಎನ್ನದವಂಗೆ ಜಂಗಮವುಂಟು, ಪ್ರಸಾದ ಎನ್ನದವಂಗೆ ಪ್ರಸಾದ ಉಂಟು. ಈ ತ್ರಿವಿಧ ಸ್ಥಲವನರಿಯಬಲ್ಲಡೆ ಕೂಡಲ ಚೆನ್ನಸಂಗಯ್ಯ ತಾನೆ ಉಂಟು.

ಲಿಂಗವೆನ್ನಲು ಬರದಿರುವಲ್ಲಿ ಜಪಸ್ತೋತ್ರದಿಂದ ಪೂಜೆ ಮಾಡುವುದೆಂದರೆ ನಿಶಬ್ದ ಘನಕ್ಕೆ ಶಬ್ದದಿಂದ ಅರ್ಚನೆಯೆ ? ಇದೆಂಥ ಪರಿಹಾಸ್ಯ, ಲಿಂಗವರಿಯ ಹೋಗಿ ಅಜಗಣ್ಣ ಶರಣ ಶಬ್ದಮುಗ್ಧನಾದ. ಶಬ್ದದಿಂದ ಉಸುರಲು ನಾಚಿದ, ಮೌನವ ಧರಿಸಿದ, ಮೌನೇಶನಾದ. ಲಿಂಗವರಿತ ಶರಣರ ನಿಲುವೆತ್ತ, ಲಿಂಗಾಷ್ಟಕ ಮಾಡಿದ ರಾವಣನೆತ್ತ, ಬೆಳಕೆತ್ತ, ಕತ್ತಲೆತ್ತ, ಅಜ್ಞಾನವೆತ್ತ, ಸುಜ್ಞಾನವೆತ್ತ ರಾವಣನೆ ಲಿಂಗವಂತನಾಗಿದ್ದರೆ ಶಿವನನ್ನು ತನಗೆ ಆರು ಕೋಟಿ ವರ್ಷದ ಆಯುಷ್ಯದ ವರವೇಕೆ ಬೇಡುತ್ತಿದ್ದ. ಲಿಂಗವರಿತ ಘನವಂತ ಲಿಂಗಹೊರ್ತು ಅನ್ಯವ ಕಾಣುವನೆ ? ಶರಣರು ಲಿಂಗವರಿತು ತಾನೆ ಲಿಂಗವಾಗಿ ನಿಶಬ್ದವೇದಿಗಳಾದರು.

ಮುಟ್ಟಬಾರದ ಲಿಂಗಕ್ಕೆ ಕೊಟ್ಟು ಕೊಂಡಾಡಿಹೆವೆಂಬರು, ಮುಟ್ಟಬಾರದ ಲಿಂಗ ಇದು ಅಕ್ರಿಯೆ ಲಿಂಗ, ಅದೃಶ್ಯ ಲಿಂಗ, ಅದೃಶ್ಯಿ ಲಿಂಗ ಇದನ್ನು ಮುಟ್ಟುವದದೆಂತು. ನಿರಾಳಲಿಂಗ, ನಿಷ್ಪತ್ತಿ ಲಿಂಗ, ನಿರ್ಮಾಯ ಲಿಂಗ, ಇದಕ್ಕೆ ಕೊಟ್ಟುದೆಂತು? ಇದರಿಂದ ಕೊಂಡುದೆಂತು ? ಕೊಟ್ಟು ಕೊಂಡಾಡಿಹೆವೆಂಬುವವರೆಲ್ಲ ಲಿಂಗದ ಘನವರಿಯದವರು. ತೃಪ್ತರೂಪ ತೃಪ್ತಿ ಲಿಂಗ. ಅದು ಕೊಳ್ಳುವದೆಂತು, ಅದಕ್ಕೆ ಕೊಟ್ಟುದೆಂತು ? ಉಂಡುದು, ಉಟ್ಟುದು, ಕೊಂಬುದು ಲಿಂಗ ಹೇಗಾಗುವುದು? ಉಂಬುದು ಅಗ್ನಿಧರ್ಮ, ಉಟ್ಟುದು ಪೃಥ್ವಿ ಧರ್ಮ, ಅತೃಪ್ತಿಯಿದ್ದಲ್ಲಿ ಕೊಂಬ ಧರ್ಮ ಸಹಜವಾಗಿದೆ. ನಿತ್ಯ ಲಿಂಗ, ಅನಿತ್ಯ ಹೇಗಾಗುವುದು. ಇದ್ದಂತಿರುವ ನಿರಂತರವಾಗಿಹ ಮಂಗಲಮಯ ಚಿದ್ಘನ, ಚಿದಂಗ, ಚಿದ್ರಸ

ಅದಕ್ಕೇನು ಕೊಡುವುದು ? ಕೊಳ್ಳುವದೇನು ? ಅರುವಿಂಗರುವಾಗಿಹ ಘನದಲ್ಲಿ ಕೊಟ್ಟುದೆಲ್ಲಿ ? ಕೊಂಡುದೆಲ್ಲಿ ?

ಬೊಟ್ಟಿಡಲೆಡೆಯಿಲ್ಲದ ಲಿಂಗವ ಮುಟ್ಟಿ ಪೂಜಿಸಿಹೆನೆಂಬ ಭ್ರಷ್ಟರ ನೋಡಾ ಗುಹೇಶ್ವರಾ: ಪೂರ್ಣಲಿಂಗ ಅಪೂರ್ಣವಾಗುವುದೆ? ಅಖಂಡ ಲಿಂಗ ತುಣ ತುಣಕಾಯಿತೆ ? ಕೈಯ ಲಿಂಗವಾಯಿತೆ ? ಘನ ಗಂಭೀರ ಮಹಾಘನ ಲಿಂಗವ ಮುಟ್ಟಿ ಪೂಜಿಸುವದದೆಂತು ? ಲಿಂಗವರಿಯದ್ದರಿಂದ ಪೂಜ್ಯ ಪೂಜಕರ ಕಾರ್ಯವು ಇದಾಗಿದೆ. ಅದು ಪೂಜಿಸಿಕೊಳ್ಳುವ ದೇವನಾಗಿಹನು, ಇವನು ಪೂಜಿಸುವ ಭಕ್ತನಾಗಿಹನು. ಇದು ಮರವಿಂಗೆ ಕಾರಣ, ಅರಿಯುವುಡೆ ಎರಡೊಂದಾದುದು.

ಎರಡೊಂದಾದ ಬಳಿಕ ಅರ್ಚನೆಯಿಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲ ಗುಹೇಶ್ವರಾ. ಲಿಂಗ ತಾನು ಒಂದಾದಲ್ಲಿ ಆರಾಗಿ ಅರ್ಚನೆ ಮಾಡುವುದು. ಅರ್ಪಿತ ಮಾಡುವುದು, ಅರಿಯುವುದಾದರೂ ಅದಾವ ಕಾರಣ, ಉಸುರುವವರೆಲ್ಲ ಲಿಂಗವರಿಯದವರು. ಭೇದ ಜ್ಞಾನದಿಂದುಕ್ತವಾದುದು, ಮರವಿಂಗೀಡು, ತನ್ನವ ತಿಳಿಯದ್ದು ಲಿಂಗವ ತಿಳಿಯದು, ತಿಳಿಯದ ಪೂಜೆ ಜಪ, ಸ್ತೋತ್ರ, ವ್ಯರ್ಥವು. ಇವರ ಪ್ರತಿಷ್ಠೆಯು ಹಾನಿಕಾರಕವು. ಇವರ ಪರಿಶ್ರಮವೆ ವ್ಯರ್ಥವಾದುದರಿಂದ ಇವರು ಭ್ರಷ್ಟರು ಖಂಡಿಸಿದುದಲ್ಲದೆ ಮೃಷ್ಟಾನ್ನ ಪಾಲುಗಾರರಾದಿರೆ ? ಭಾಗಿಸ್ಥರಾದಿರೆ ? ಅಡವಿಯಲ್ಲಿ ತಪ್ಪಲುಗಳಿಗೆ ಮೃತ್ಯುರೂಪಾದಿರೆ ? ಶ್ರೀಗುರು ಲಿಂಗ ಕೊಟ್ಟುದೇಕೆ ? ಅರುವ ಅರಿಯ ಹೇಳಿ ಕುರುಹಕೊಟ್ಟರೆ ಅರುವೆ ಮರೆದು ಕುರುಹನೆ ಪೂಜಿಸುವ ನರಕುರಿಗಳಾದಿರಾ ಎಂದು ಪ್ರಭು ಖಂಡಿಸಿಹನು.

**52**

**ಆಡಿಂಗೆ ದಾಯಾದ್ಯರಾದಿರಲ್ಲ .**
**ಕಾಡಗಿಡುವಿಂಗೆ ಮೃತ್ಯುವಾದಿರಲ್ಲ .**
**ಅರುವನರಿಯಹೇಳಿ,**
**ಶ್ರೀಗುರು ಕುರುಹ ಕೈಯಲ್ಲಿ ಕೊಟ್ಟಡೆ**
**ಅರಿವನೆ ಮರೆದು ಕುರುಹ ಪೂಜಿಸುವ**
**ಕುರಿಗಳ ನೋಡಾ ಗುಹೇಶ್ವರಾ.** ॥ 872 ॥

**ತಾತ್ಪರ್ಯ**: ಆಡಿಂಗೆ ದಾಯಾದಿರಾದಿರಲ್ಲ ಕಾಡಗಿಡುವಿಂಗೆ ಮೃತ್ಯುವಾದಿರಲ್ಲ : ಓ ಅಣ್ಣಯ್ಯಗಳಿರಾ ! ಲಿಂಗಯ್ಯನ ನೈವೇದ್ಯಕ್ಕೆ ಪಾಲಗಾರುಗಳಾದಿರಾ? ಅಡವಿಯಲ್ಲಿರುವ ತಪ್ಪಲಕ್ಕೆ ಮೃತ್ಯುವಾದಿರಾ ? ಶ್ರೀಗುರು ಅನುಗ್ರಹಿಸಿದುದೇನು ? ನೀವು ಮಾಡುವದಿದೇನು ? ಗುರು ಸಂಜ್ಞೆಯ ಅರಿಯದವರು ಇವರು ಗುರುದ್ರೋಹಿಗಳು, ಲಿಂಗವರಿಯದವರು. ವೀರಶೈವರಲ್ಲಿ ಗುರುಕಾರುಣ್ಯವರಿಯದ ಸಂಖ್ಯೆಯೆ ಬಹಳವಿದೆ. ಲಿಂಗವೆಂದರೆ ಅರುವ ಅರಿಯ ಹೇಳಿದ ಸಂಜ್ಞೆ ಎಂದು ತಿಳಿದುಕೊಂಡ ಲಿಂಗವಂತರು ಎಷ್ಟು ಜನ ಸಿಕ್ಕುವರು. ಇದು ನಿಶಬ್ದ ಬ್ರಹ್ಮ, ಮೌನ ಮುದ್ರೆ ಧರಿಸಿದ ಚಿನ್ಮುದ್ರೆ ಅರುವಿನ

ಇರುವು ಎಂದು ತಿಳಿದವರು ಎಷ್ಟು ? ವಿರಳ ಲಿಂಗವೆಂಬುದು ಅರುವ ಅರಿಯ ಹೇಳಿದ ಸಂಜ್ಞೆ ಎಂದು ಇದನು ಹೀಗೆಯೆ ಅರಿಯುವದೆಂದು ಅದರ ರಹಸ್ಯವ ತಿಳಿದ ಶ್ರೀಗುರುಗಳು ಕಂಡಿರುವರೆ ? ದೀಕ್ಷಾ ಕೊಡುವ ದೇವನೆ ಅದರ ರಹಸ್ಯ ತಿಳಿಸಿಲ್ಲವೆಂದಲ್ಲಿ ಪೂಜಾಲಿಂಗವ ಮಾಡಿ ಪೂಜಿಸುವ ಭಕ್ತರಿಗೆ ತಿಳಿಯುವುದಾದರೂ ಹೇಗೆ ?

ಗುರು ಆಜ್ಞೆಯ ಮೀರಿದೆನಾದಡೆ ಎನ್ನ ಸುಕೃತವೆಲ್ಲ ಕಿಲ್ಮಿಷವಾಗಲಿ ದೇವಾ, ಗುರು ಸಂಜ್ಞೆಯ ಅರಿಯೆನಾದಡೆ ಎನ್ನ ಬ್ರಹ್ಮ ಸಂಜ್ಞೆ ಬತ್ತಿ ಹೋಗಲಿ ದೇವಾ. ಗುರುದ್ವಾರವ ಕಾಯದಿದ್ದೆನಾದಡೆ ಎನ್ನ ಪಶ್ಚಿಮ ದ್ವಾರ ಸಿಗದೆ ಹೋಗಲಿ. ಗುರು ಪುತ್ರರ ಗುರುವೆನ್ನದಿದ್ದಡೆ ಯಮಗಂಡ ನನಗಿರಲಿ ಕಪಿಲಸಿದ್ಧಮಲ್ಲಿಕಾರ್ಜುನ.

ಎಂಬ ಸಿದ್ಧರಾಮ ಶಿವಯೋಗಿಗಳ ಸಂದೇಶದಂತೆ ವೀರಶೈವರಲ್ಲಿ ಲಿಂಗವಂತರಾದವರು ಗುರು ಆಜ್ಞೆ ಮೀರದೆ ಇದ್ದವರೆಷ್ಟು ಭಕ್ತ ಜನ ? ಕೊನೆಗೆ ಗುರು ಆಜ್ಞೆ ತಿಳಿದವರೆಷ್ಟು ಭಕ್ತರು ? ಗುರು ಆಜ್ಞೆಯೆಂಬುದು ಅರುವ ಅರಿಯ ಹೇಳಿ ಕುರುಹ ಕೈಯಲ್ಲಿ ಕೊಟ್ಟುದು; ಈ ಕುರುಹ ಕೈಯಲ್ಲಿ ಕೊಟ್ಟರೂ ಅರುವನೆ ಮರೆದು ಅದನ್ನು ಕುರುಹೆಂದು ತಿಳಿದು ಪೂಜಿಸುವವರೆಲ್ಲ ಗುರು ಆಜ್ಞೆ ಪಾಲಿಸುವವರೆ ? ಗುರು ಪುತ್ರರೆ ? ಗುರು ಭಕ್ತರೆ ? ಇವರು ಗುರು ಸಂಜ್ಞೆ (ಲಿಂಗ) ಅರಿತರೆ ತಾನು ಸ್ವಯಂ ಪ್ರಕಾಶನೆಂಬ ಅರಿವು ತನ್ನೊಳ ಪ್ರಜ್ವಲಿಸಿತೆ ? ಚಿತ್ಸೂರ್ಯ ತಾನಾಗಿ ಬೆಳಗಿದನೆ ? ತನ್ನಿಂದ ತನ್ನನ್ನು ಕಂಡನೆ ? ಈ ಲಿಂಗವಂತರಲ್ಲಿ ಲಕ್ಷಕ್ಕೊಬ್ಬ ಭಕ್ತನಂತೆ ಒಬ್ಬನಿಗಾದರೂ ಅರುವ ಅರಿಯ ಹೇಳಿದ ಕುರುಹಿನ ಸಂಜ್ಞೆ ಅರಿತಿರುವರಾ ? ಅರಿತಿದ್ದರೆ ಕುರುಹಾಗಿ ಕಾಣುತ್ತಿದ್ದಿಲ್ಲ.

ಅರುವ ಅರಿಯ ಹೇಳಿ ಕುರುಹು ಕೊಟ್ಟುದು, ಅನುಪಮ ಲಿಂಗ. ಇದನ್ನು ಅರಿವ ಪರಿ ಎಂತು? ಲಿಂಗಕ್ಕೆ ಲಿಂಗವಾಗಿ ಅರಿವುದು, ಅರುವಿಂಗೆ ಅರುವಾಗಿ ಅರಿ ಯುವುದು. ಯಾರು ಅರಿಯ ಹೋಗಿಹರು ಅವರು ಅರುವೆನಲಿಲ್ಲ, ಲಿಂಗವೆನಲಿಲ್ಲ, ಚಿಜ್ಯೋತಿ ಎನಲಿಲ್ಲ, ಶಬ್ದಮುಗ್ಧವಾಗಿಹರು ಮೌನದ ಮೌನವಾಗಿಹರು. ಶ್ರೀಗುರು ಕಾರುಣ್ಯ ಅಪಾರ. ತನ್ನ ನೆನೆವನ್ನಬರ ತನ್ನಂತೆ ಮಾಡಿದ ಹಿರಿಮೆ ಅದಾರು ವರ್ಣಿಸುವುದು.

ಗುರುವ ಕಂಡವರುಂಟು, ಶ್ರೀಗುರುವ ಕಂಡವರು ವಿರಳ. ಶ್ರೀಗುರುವೆಂಬುದು ಗುರುವಿನ ಗುರು ಅರಿವುಡೆ ಸಕಲರ ಸ್ವರೂಪ.

ಇಬ್ಬರ ಮಧ್ಯದಲ್ಲಿ ಒಂದು ವಸ್ತು ಉಂಟು ಕಂಡಿರೆ ಗಣಂಗಳಿರಾ? ಕಂಡಿರೆ ಅಯ್ಯಗಳಿರಾ? ಗುರುವಿನ ಗುರು ಇದು ಬೇಗಲರಿಯೆ ಗುಹೇಶ್ವರಾ.

ಇಬ್ಬರ ಮಧ್ಯದಲ್ಲಿದ್ದ ಒಂದು ವಸ್ತು. ಇದು ಶಿಷ್ಯರಾಗಿ ಶ್ರವಣ ಮಾಡದ ಜ್ಯೋತಿ, ಗುರುವಾಗಿ ಅರುವ ಬೋಧಿಸದ ಜ್ಯೋತಿ, ಅರುವಿಂಗರುವಾಗಿ ಸಕಲರ ಹೃದಯದೋಳ್ ಪ್ರಕಾಶಿಸುವ ಸ್ವಯಂಜ್ಯೋತಿ. ಇದು ಉದಯಾಸ್ತ ಕಾಣದ ಜ್ಯೋತಿ, ಅರಿವುಡೆ ತಾನೇ ಸ್ವಯಂಜ್ಯೋತಿ ಎಂದು ಹೇಳಿಹರು. ಇಂತಪ್ಪ ಶ್ರೀಗುರು ಕರುಣಿಸಿದ ಲಿಂಗ, ಅರುವ ಅರಿಯ ಹೇಳಿ ಕುರುಹ ಕೊಟ್ಟ ಲಿಂಗ. ಇದನ್ನು ಯಾರು ಅರಿಯ ಹೋಗಿಹರು ಅವರು ಅದುವೆ ಆಗಿಹ ಘನವ ಅದು ಯಾರು ವರ್ಣಿಸುವುದು. ತನಗೆ ವಾಣಿ ಇಲ್ಲ, ಮನ ಇಲ್ಲ, ಇಲ್ಲವೆಂಬುದು ಇಲ್ಲವಾದುದು ಅಲ್ಲಿ ಕುರುಹಾಗಿ ತೋರುವದೆಂತು ತೋರುವದೆ ಇಲ್ಲವೆಂದಲ್ಲಿ ಹೇಳಲೆಂತು ಬಾರದು. ಈ ಘನ ಲಿಂಗ ಗುರು ಕರುಣಿಸಿದ ಲಿಂಗ. ಇದನ್ನು

ಅರಿಯ ಹೋದವರು ಅನುಪಮರು, ಅವರ ಇರುವ ವರ್ಣಿಸಲು ಉಪಮಿಸಲು ಬಾರದು. ಇದು ವಿಶ್ವವ್ಯಾಪಕ ತತ್ವ, ಇದು ಸಕಲ ಮಾನವರುಗಳಿಗೆ ಸಮವಾಗಿಹ ತತ್ವ ಹೋಗಿ ಲಿಂಗಕಟ್ಟಿಕೊಂಡವರ ತತ್ವವಾಗಿ ಸೀಮಿತವಾದುದು ಕಂಡು ಖೇದವಾಗುತ್ತಿದೆ. ಇದರಿಂದ ಭೇದಜ್ಞಾನವಾಗಿ ಮಾನವ ಜೀವನವೆ ಛಿದ್ರ, ವಿಛಿದ್ರವಾಗಿ ಪರಾವಲಂಬನವಾಗಿ ತಮ್ಮ ತಾವೆ ಆತ್ಮರನನ್ನ ಮಾಡಿಕೊಳ್ಳುತ್ತಿಹರು. ಇದರ ಪರಿಹಾರವೆಂದರೆ ಶರಣ ಸಾಹಿತ್ಯದಂತೆ ಗುರು ಕೊಟ್ಟ ಲಿಂಗವ ಅರಿದರಿದು ನೋಡುವದು ಅಂದರೆ ಅರುವ ಅರಿದು ನೋಡುವುದು ಆಗ ಅರುವೆ ಸಕಲರ ಅರು ಹೃದಯವಾಗುವಲ್ಲಿ ಅರುವ ಮರೆಯಲು ಅವಕಾಶವಿಲ್ಲ. ಆಗ ಭೇದ ಜ್ಞಾನ ಸಹ ನಷ್ಟವಾಗುವುದು. ಈ ಕಾರ್ಯ ಮಾಡದಿದ್ದಲ್ಲಿ ಅರುವ ಮರೆದು ಕುರುಹ ಪೂಜಿಸುವುದೆ ನಿಜವಾಗುತ್ತದೆ.

ಈ ಕುರುಹ ಪೂಜಿಸುವುದರಿಂದ ಆಗುವ ಪರಿಣಾಮವೇನು? ಓ ಅಣ್ಣಗಳಿರಾ ಈಗಿನ ಪರಿಸ್ಥಿತಿಯ ಕಂಡು ಕಂಡು ಕೇಳುವುದೆ? ಅಜಾತ ತತ್ವ ದೂರಾಗಿ ಗುರುವೆಂಬಾತ ಶಿಷ್ಯನಂತುವನರಿಯ, ಶಿಷ್ಯನೆಂಬಾತ ಗುರುವಿನಂತುವನರಿಯ, ಭಕ್ತನೆಂಬಾತ ಜಂಗಮ ನಂತುವನರಿಯ, ಜಂಗಮವೆಂಬಾತ ಭಕ್ತನಂತುವನರಿಯ, ಗುರು ಗುರುಗಳಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರುಗಳಲ್ಲಿ ಸಮವಿಲ್ಲ, ಭಕ್ತ ಭಕ್ತನಲ್ಲಿ ಸಮವಿಲ್ಲ, ಜಂಗಮ, ಜಂಗಮರಲ್ಲಿ ಸಮವಿಲ್ಲ, ವಿಷಮತ್ವವೆ ಸಕಲರ ಜ್ಞಾನವಾಗಿ ಶ್ರೇಷ್ಠ ಕೀಳು ಎಂಬ ಮರವಿನ ಜ್ಞಾನವೆ ಪ್ರಬಲವಾಗಿ ಭವ ಭವಾಂತರದಲ್ಲಿ ಜನ್ಮ ತಾಳುವುದು. ಇದು ಲಿಂಗವರಿಯದ ಪರಿಣಾಮ ಕುರುಹ ಪೂಜಿಸಿದ ಪ್ರತಿಫಲ, ಕಣ್ಣಿದ್ದು ಕುರುಡನೆಂದು ಕಣ್ಣಿಗಾಗಿ ಹಲುಬಿದಂತಾಗಿದೆ. ತಾನೆ ಲಿಂಗವಾಗಿ ಸುಖದ ಸುಖದಲ್ಲಿರುವುದು ಹೇಗೆ? ಅದನ್ನು ಮರೆತು ತಾನು ಬೇರೆ, ಲಿಂಗ ಬೇರೆ, ಲಿಂಗ ಘನ, ತಾನು ಕಿರಿ ಕಿರಿದಾಗಿ ತಿಳಿದಲ್ಲಿ ಎರಡೊಂದಾಗುವುಗು ಅವಾಗ, ಅರ್ಚನೆ, ಅರ್ಪಿತ, ಅವಧಾನ ಮುಕ್ತಾಯ ಆವಾಗ ?

ಈ ಅರ್ಚನೆಯಿಂದ ಆದ ಪರಿಣಾಮವೆಂದರೆ ಆಡಿಂಗೆ ದಾಯಾದಿರಾಗುವದು. ಕಾಡುಗಿಡುವಿಂಗೆ ಮೃತ್ಯುರೂಪವಾಗುವುದು, ನೈವೇದ್ಯದ ನೇಮಸ್ಥರಾಗುವುದು, ಪಕ್ವಾನ್ನದ ಪಾಲುಗಾರರಾಗುವುದು. ನಾವು ಶುದ್ಧ ಪ್ರಸಾದಿಗಳು. ಅಚ್ಚ ಪ್ರಸಾದಿಗಳು ಮತ್ತು ಅಡವಿಯಲ್ಲಿರುವ ಗಿಡಗಳಿಗೆ, ಗಿಡದಲ್ಲಿರುವ ತಪ್ಪಲಕ್ಕೆ ಕುರಿ ಹೇಗೆ ಮೃತ್ಯುರೂಪವಾಗಿದೆಯೋ ಹಾಗೆ ಇವರು ಬಿಲ್ವಪತ್ರೆಗೆ, ಬನ್ನಿ ಪತ್ರೆಗೆ ಪುಷ್ಪಗಳಿಗೆ ಮೃತ್ಯುರೂಪವಾಗುವುದು. ಇವರಿರುವು ಕುರಿಗಳ ಇರುವು ಒಂದೇ ಎಂದು ಪ್ರಭುದೇವರು ಕುರುಹ ಪೂಜಿಸುವ ಕುರಿಗಳ ನೋಡಾ ಎಂದು ಖಂಡಿಸಿದ್ದಾನೆ. ಪೂಜಾಲಿಂಗವಂತರಿಗೆ ನಿಜ ಲಿಂಗದ ರಹಸ್ಯವ ತಿಳಿಸಿಹನು.

**53**

**ಕಟ್ಟಿದಾತ ಭಕ್ತನಪ್ಪನೆ ? ಕೆಡಹಿದಾತ ದ್ರೋಹಿಯಪ್ಪನೆ ?**
**ಲಿಂಗವ ಕಟ್ಟಲಿಕ್ಕೆ ತನ್ನ ಕೈಯೊಳಗಿಪ್ಪದೆ ?**
**ಕೆಡಹಲಿಕ್ಕೆ ಬೀಳಬಲ್ಲುದೆ ?**
**ಆ ಲಿಂಗವು ಬಿದ್ದ ಬಳಿಕ ಜಗವು ತಾಳಬಲ್ಲುದೆ ?**
**ಪ್ರಾಣಲಿಂಗ ಬಿದ್ದ ಬಳಿಕ ಆ ಪ್ರಾಣ ಉಳಿಯಬಲ್ಲುದೆ ?**

**ಲಿಂಗ ಬಿದ್ದಿತ್ತೆಂಬುದು ಸೂತಕದ ಶಬ್ದ, ಭ್ರಾಂತುವಿನ ಪುಂಜ,**
**ಅಂತು ಅದು ಕೇಳಲಾಗದು.**
**ಯುಗ ಜುಗಂಗಳು ಗತವಹವಲ್ಲದೆ ಲಿಂಗಕ್ಕೆ ಗತವುಂಟೆ ?**
**ಲಿಂಗವು ಬಿದ್ದಿತ್ತೆಂದು ನಿಂದಿಸಿ ನುಡಿವ**
**ದ್ರೋಹಿಯ ಮಾತ ಹೇಳಲಾಗದು ಕಾಣಾ ಗುಹೇಶ್ವರಾ ?** ॥ 1044 ॥

**ತಾತ್ಪರ್ಯ:** ಕಟ್ಟಿದಾತ ಭಕ್ತನಪ್ಪನೆ ? ಕೆಡಹಿದಾತ ದ್ರೋಹಿಯಪ್ಪನೆ? ಲಿಂಗವ ಕಟ್ಟಲಿಕ್ಕೆ ತನ್ನ ಕೈಯೊಳಗಿಪ್ಪುದೆ ಕೆಡಹಲಿಕ್ಕೆ ಬೀಳಬಲ್ಲುದೆ?: ಲಿಂಗಾರ್ಚಕರ ದೃಷ್ಟಿಗೂ, ಲಿಂಗವಂತ ಘನ ಮಹಿಮನ ದೃಷ್ಟಿಗೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸವು ಇಲ್ಲಿ ಕಾಣಬಹುದಾಗಿದೆ. ಪ್ರಭುವಿನ ಘನದೃಷ್ಟಿ ಎತ್ತ, ಈ ಲಿಂಗಾರ್ಚಕರ ದೃಷ್ಟಿ ಎತ್ತ, ಲಿಂಗಾರ್ಚಕರಿಗೆ ಲಿಂಗ ಕಟ್ಟಿದವನು ಭಕ್ತನು, ಕಟ್ಟದವನು ದ್ರೋಹಿಯಾಗಿದ್ದಾನೆ. ಪ್ರಭುವಿನ ದೃಷ್ಟಿಗೆ, ಲಿಂಗ ಕಟ್ಟಲು ತೆಗೆದು ಹಾಕಲು ಇವರ ಕೈಯ ಲಿಂಗವಲ್ಲ, ಪೂಜಾ ಲಿಂಗ ಪ್ರೇಮಿಗಳು ನಿಜಲಿಂಗದ ಘನವ ಇವರೇನು ಬಲ್ಲರು.

ಲಿಂಗಸ್ಥೂಲವೆಂಬರು ಕೆಲವರು ಲಿಂಗಸ್ಥೂಲವಲ್ಲ, ಲಿಂಗ ಸೂಕ್ಷ್ಮವೆಂಬರು ಕೆಲವರು ಲಿಂಗಸೂಕ್ಷ್ಮವಲ್ಲ, ಸ್ಥೂಲ, ಸೂಕ್ಷ್ಮದ ಮೇಲಣ ಜ್ಞಾನರೂಪು ಪರಾನಂದ ಪರಬ್ರಹ್ಮವೆ ಲಿಂಗವೆಂದರಿದ ಅರಿವು, ಅಖಂಡ ರೂಪು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಲವು ತಾನೆ ಬೇರಿಲ್ಲ,

ಶರಣರು ಲಿಂಗವನ್ನು ಸ್ಥೂಲ, ಸೂಕ್ಷ್ಮವಾಗಿ ಕಂಡವರಲ್ಲ, ಅದರ ಮೇಲಣ ಜ್ಞಾನರೂಪು ಅನ್ನುವದಲ್ಲದೆ ಅದನ್ನು ಅರಿಯ ಹೋಗಿ ಪರಮಾನಂದಮಯರಾಗಿ ಪರಾನಂದ ಪರಬ್ರಹ್ಮವೆಂದರಿದ ಅರಿವು ಅಖಂಡರೂಪು, ಲಿಂಗವು ತಾನೆ ಅನ್ಯವಿಲ್ಲವೆಂದರಿದ ಅರಿವು ಇರವು ತಾನೆ, ನಿಜಗುರು ತಾನೆ, ಸ್ವತಂತ್ರ ತಾನೆ, ಸ್ವತಃ ಸಿದ್ಧ ತಾನೆ, ಲಿಂಗಕ್ಕೆ ಲಿಂಗವಾಗಿಹ ಈಶ್ವರ ನಿಲವು ಎಂದು ತಿಳಿದ ತಿರುಳು ಎತ್ತ, ಇವರು ಕಟ್ಟಿಕೊಂಡ ಪೂಜಾಲಿಂಗದ ನಿಲುವು ಎತ್ತ, ಭಾವ ಎತ್ತ, ಭಕ್ತಿ ಎತ್ತ, ಪತ್ರಿ ಪುಷ್ಪವೆತ್ತ, ಮಂತ್ರವೆತ್ತ, ಭೇದ ದೃಷ್ಟಿ, ಭೇದ ಜ್ಞಾನ, ಭೇದ ಭಾವದಿಂದುಕ್ತವಾದ ಪೂಜ್ಯ ಪೂಜಕರಾಗಿ ಲಿಂಗಯ್ಯನ ನಿರೀಕ್ಷಿಸುವ ನೋಟವೆತ್ತ, ಎರಡೊಂದಾದ ದೃಷ್ಟಿ ಎತ್ತ, ಅಜ್ಞಾನವೆತ್ತ ? ಸುಜ್ಞಾನವೆತ್ತ, ಆಚಾರ ವೆತ್ತ, ವಿಚಾರವೆತ್ತ, ಇದು ಕಾರಣ ಈ ಲಿಂಗವಂತರಿಗೆ ಪ್ರಭುದೇವ, ಕಟ್ಟಿದಾತ ಭಕ್ತನಪ್ಪನೆ ? ಕೆಡಹಿದಾತ ದ್ರೋಹಿಯಪ್ಪನೆ ? ಎಂದು ಪ್ರಶ್ನಿಸಿಹನು.

ಆವುದು ಸ್ಥೂಲವಾಗಿದೆ, ಅದನ್ನು ಅಂಗದ ಮೇಲೆ ಕಟ್ಟಿಕೊಳ್ಳಬಹುದು. ಕಟ್ಟದೆ ಇರಬಹುದು. ಸ್ಥೂಲ ಸೂಕ್ಷ್ಮವಾಗದ್ದನ್ನು ಇವರು ಕಟ್ಟಿದುದೆಂತು ? ಅದು ಜ್ಞಾನರೂಪು, ಅದು ಅರು ರೂಪು ಕಟ್ಟಲಿಕ್ಕೆ ಬರಬಹುದೆ ? ಕೆಡಹಲು ಬರುವುದೆ ? ಪಂಚಭೂತದಲ್ಲೊಂದಾದ ಗಗನವು ಅದನ್ನು ಯಾರಾದರೂ ಕೊರಳಲ್ಲಿ ಹಾಕಿಕೊಳ್ಳಬಹುದೆ ? ಇದಲ್ಲದೆ ಅದನ್ನು ಒಂದು ವಸ್ತ್ರದಲ್ಲಾಗಲಿ, ನಾಗವತ್ತಿಗೆಯಲ್ಲಿ ಹಾಕಿ ಕಟ್ಟಿಕೊಳ್ಳಬಹುದೆ ? ಕಟ್ಟಿಕೊಳ್ಳಲು ಬಾರದಿದ್ದಲ್ಲಿ ತ್ಯಾಗ ಮಾಡಲು ಬರುವುದೆ ? ಈ ಗಗನಕ್ಕಿಂತಲೂ ಸಹಸ್ರಾರು ಪಾಲು ಸೂಕ್ಷ್ಮಾತಿ ಸೂಕ್ಷ್ಮವಾದ ಜ್ಞಾನರೂಪ ಲಿಂಗ, ನಿರೂ

ಪಲಿಂಗ, ನಿರಾಳ ಲಿಂಗ, ಸಚ್ಚಿದ್ರೂಪ ಲಿಂಗ ಇದನಾರು ಅಂಗದ ಮೇಲೆ ಕಟ್ಟಿಕೊಳ್ಳುವುದು ಎಂದು ನಿಜ ಲಿಂಗದ ಕಡೆ ಮುಖ ಮಾಡಿಸಿ, ಲಿಂಗವ ಕಟ್ಟಲು ತನ್ನ ಕೈಯೊಳಗಿಪ್ಪುದೆ ಕೆಡಹಲಿಕ್ಕೆ ಬೀಳಬಲ್ಲುದೆ ? ಎಂದು ಲಿಂಗದ ಘನವ ವಿವರಿಸುತ್ತಿದ್ದಾನೆ.

ಜ್ಞಾನರೂಪು ಲಿಂಗ, ಪರಾನಂದ ಲಿಂಗ, ಪರಬ್ರಹ್ಮ ಲಿಂಗ, ಘನ ಲಿಂಗ, ಈ ಲಿಂಗವ ಕಟ್ಟಿಕೊಳ್ಳಲು ತನ್ನ ಕೈಯೊಳಗಿಪ್ಪುದೆ ? ಇದನ್ನು ತಿರಸ್ಕರಿಸಲು ತನ್ನಿಂದ ದೂರವಾಗಬಲ್ಲುದೆ ? ತಾನೆ ಘನಕ್ಕೆ ಘನವಾಗಿಹ ಲಿಂಗವಾಗಿರಲು ತನ್ನನ್ನು ತಾ ಕಟ್ಟಿಕೊಳ್ಳಬಹುದೆ ? ತನ್ನ ತಾ ಬೀಳಗೊಡಬಹುದೆ ? ಚೈತನ್ಯವಾರು  ಕಟ್ಟಿಕೊಳ್ಳುವುದು, ತಿರಸ್ಕರಿಸುವುದು, ನುಡಿಗೆಡೆಗೊಡದ ಘನವ ನುಡಿದು ಹೇಳುವದದೆಂತು ? ಇಂತಪ್ಪ ಸ್ವಮಹಿಮ್ನವಾಗಿಹ ಲಿಂಗ ಕಟ್ಟಿಕೊಳ್ಳಲು ಬಿಡಲು ತನ್ನ ಆಧೀನವೆ ? ಕೈಯ ಲಿಂಗವೆ ? ಪೂಜಾ ಲಿಂಗವೆ ? ನೆನಹಿಂಗೊಳಪಟ್ಟ ಲಿಂಗವೆ ? ಭಾವಿಕರ ಲಿಂಗವೆ ? ಅರಿದಿಹೆನೆಂಬುವರ ಲಿಂಗವೆ ? ಇಂತಪ್ಪ ಘನಲಿಂಗ ಬಿದ್ದ ಬಳಿಕ ಜಗತ್ತು ಉಳಿಯಬಲ್ಲುದೆ ? ಪ್ರಾಣಲಿಂಗ ಬಿದ್ದ ಬಳಿಕ ಪ್ರಾಣ ಉಳಿಯಬಲ್ಲುದೆ ? ಜಗತ್ತಿಗೆ ಆಧಾರವಾದ ಲಿಂಗ, ಅಧಿಷ್ಠಾನವಾದ ಲಿಂಗ, ಇದು ಆಧಾರ ಅಧಿಷ್ಠಾನವಾಗದಿದ್ದಲ್ಲಿ ಜಗತ್ತು ಉಳಿಬಲ್ಲುದೆ ? ಮನೆ-ಮಠಗಳಿಗೆಲ್ಲ ಭೂಮಿಯೆ ಆಧಾರ. ಇದುವೆ ಆಧಾರವಾಗದಿದ್ದಲ್ಲಿ ಮನೆ ಎಲ್ಲಿ ? ಮಠವೆಲ್ಲಿ ? ದೇಶವೆಲ್ಲಿ ? ವಿದೇಶವೆಲ್ಲಿ ? ಜನರು ವಾಸಿಸುವುದು ಸಂಚರಿಸುವುದು ಎಲ್ಲಿ ? ಹಾಗೆ ಚೈತನ್ಯವೆ ಸಕಲದರ ಮೂಲವು ಅದುವೆ ಇಲ್ಲವಾದಲ್ಲಿ ಜಗತ್ತು ಇರುವದೆಲ್ಲಿ ? ಪ್ರಾಣವಾದರೂ ಇರುವದೆಲ್ಲಿ ? ಪ್ರಾಣದ ಪ್ರಾಣವಾಗಿರುವುದು ಪ್ರಾಣಲಿಂಗ, ಲಿಂಗವೆಂದರೆ ಜ್ಞಾನರೂಪು ಅರಿವು ಪರಾನಂದವದು ಪ್ರಾಣಲಿಂಗ. ಇದು ಇಲ್ಲವಾದಲ್ಲಿ ಪ್ರಾಣ ಜಡ ಬರಡು. ಇದರ ಮಹತ್ವ ಅದಾರಿಗೆ ? ಜ್ಞಾನ ರೂಪು, ಅರಿವು ಅರುರೂಪ ಜ್ಞಾನವಿದ್ದುದರಿಂದ ಪ್ರಾಣಕ್ಕೆ ಶ್ರೇಯಸ್ಕರ. ಪ್ರಾಣದ ಅಸ್ತಿತ್ವ ಜೀವವೆ ಇಲ್ಲವಾದಲ್ಲಿ ಕೂಸು ಬದುಕುವದದೆಂತು, ಅಗ್ನಿಗೆ ಆಹಾರವೆ ಇಲ್ಲವೆಂದಲ್ಲಿ ವೈಶ್ವಾನರ ಬದುಕುವದದೆಂತು ? ಪ್ರಾಣಕ್ಕೆ ಲಿಂಗವೆ ಇಲ್ಲವೆಂದಲ್ಲಿ ಪ್ರಾಣ ಇದ್ದುದೆಂತು ?

ಲಿಂಗ ಬಿದ್ದಿತ್ತೆಂಬುದು  ಸೂತಕ ಶಬ್ದ, ಭ್ರಾಂತುವಿನ ಪುಂಜ. ಅಂತು ಇದು ಕೇಳಲಾಗದು. ಲಿಂಗ ಬಿದ್ದಿತ್ತೆಂಬುದು ದೋಷದ ಶಬ್ದ, ಲಿಂಗವನರಿಯದ ಭ್ರಾಂತರ ಸಮೂಹ. ತಪ್ಪು ತಿಳುವಳಿಕೆ ಕಾರ್ಯ, ಭ್ರಮಾತ್ಮಕ ಕೂಗು, ಆಕಾಶ ಬೀಳಬಹುದೆ ? ಅಂದು, ಇಂದು, ಎಂದಾದರೂ ಬಿದ್ದಿರಬಹುದೆ ? ಇದುವೆ ಬೀಳದಿದ್ದಲ್ಲಿ ಗಗನ ಸದೃಶವಾಗಿರುವ ಜ್ಞಾನಾಮೃತ, ಜ್ಞಾನಾನಂದ ಅದು ಬೀಳಬಹುದೆ ? ಕಾರಣ, ಈ ಮಾತು ಭ್ರಾಂತರ ಮಾತು. ಲಿಂಗವರಿಯದವರ ಮಾತು, ಅಜ್ಞರ ಮಾತು, ಇದು ಕೇಳಲಾಗದು, ಏಕೆಂದರೆ ಯುಗ ಜುಗಂಗಳು ಗತವಹವಲ್ಲದೆ ಲಿಂಗಕ್ಕೆ ಗತ ಉಂಟೆ ?

ಕೃತಯುಗ, ತ್ರೇತಾಯುಗ, ದ್ವಾಪರ ಯುಗ, ಕಲಿಯುಗ, ಇಂಥ ಯುಗಂಗಳಿಗೆ ಜಗತ್ತಿಗೆ ನಾಶತ್ವವಿದೆ. ಚೈತನ್ಯಕ್ಕೆ ನಾಶತ್ವವುಂಟೆ ? ಜ್ಞಾನ ಸ್ವರೂಪಕ್ಕೆ ನಾಶವುಂಟೆ ? ಅರುವಿನ ಅರುವಿಂಗೆ ನಾಶವುಂಟೆ ? ಶಬ್ದಮುಗ್ಧ ಅರುವು ಇದು ಅಬಾಧಿತವು, ಈ ಅಬಾಧಿತ ಜ್ಞಾನ ಲಿಂಗವ ತಿಳಿಯದ್ದರಿಂದ ಸಕಲರಿಗೆ ಅಜಾತ ತತ್ವದ ಘನವ ತಿಳಿಯದಂತಾಗಿದೆ. ವಿಶ್ವವೆ ಅಜಾತವಿರುವಲ್ಲಿ ಅಂಗದ ಮೇಲೆ ಲಿಂಗ ಕಟ್ಟಿಕೊಂಡವನದೊಂದು

ಕುಲ, ಕಟ್ಟಿಕೊಳ್ಳದವನದೊಂದು ಕುಲ, ಹೀಗೆ ಭಿನ್ನಜ್ಞಾನದ ಪರಿಣಾಮವೆ ಸಕಲರ ಅರುಹೃದಯವ ಹಾಳು ಮಾಡಿದೆ. ಈ ಸಂಕುಚಿತ ದೃಷ್ಟಿಯಿಂದ ದೂರಾಗಿ ಪ್ರಭುವಿನ ಅಖಂಡ ದೃಷ್ಟಿಯರಾಗುವುದು.

ಲಿಂಗ ಬಿದ್ದಿತ್ತೆಂದು ನಿಂದಿಸಿ ನುಡಿವ ದ್ರೋಹಿಗಳ ಮಾತು ಕೇಳಲಾಗದು ಗುಹೇಶ್ವರ: ಇದು ಲಿಂಗವರಿಯದವರ ಮಾತು, ಲಿಂಗದ್ರೋಹಿಗಳ ಮಾತು, ಕೇಳಬಾರದೆಂದು ಏಕೆಂದರೆ ಲಿಂಗ ಕೃತಕವಲ್ಲ ಆರೂ ಮಾಡಿದುದಲ್ಲವೆಂದು ಅದರ ಘನವ ವಿವರಿಸುತ್ತಿಹನು.

**54**

**ಕೃತ್ಯಕ್ಕೆ ಬಾರದ ಲಿಂಗವ  ಕೃತ್ಯಕ್ಕೆ ತಂದವರಾರೊ ?**
**ವಾಙ್ಮನಕ್ಕಗೋಚರ ಲಿಂಗ, ಬೊಟ್ಟಿಡಲೆಡೆ ತೆರಹಿಲ್ಲದ ಲಿಂಗ !**
**ಪರಾತ್ಪರ ಗುರು ಕೊಟ್ಟ , ಶಿಷ್ಯ ತೆಗೆದುಕೊಂಡನೆಂಬ**
**ರಟ್ಟೆಯ ಭಂಡರ ನೇನೆಂಬೆ ಗುಹೇಶ್ವರಾ.** ॥ 1135 ॥

**ತಾತ್ಪರ್ಯ:** ಪ್ರಭು ಲಿಂಗವ ಕಂಡ, ಕಂಡರೂ ಎಲ್ಲರ ಕಂಡಂತೆ ಕಾಣಲಿಲ್ಲ, ಗುರು ಕೊಟ್ಟ ಲಿಂಗವೆಂದು ಹೇಳುವವರಲ್ಲದೆ, ಕೃತ್ಯಕ್ಕೆ ಬಾರದ ಲಿಂಗವೆಂದು ಆರಾದರೂ ತಿಳಿದಿರಬಹುದೆ ? ತಿಳಿದರೂ ವಿರಳ, ಈ ಘನವಂತ ಅರುವ ಅರಿಯಹೋದ ಅರವಿಂಗರುವು ಈತಂಗೆ ಕೃತ್ಯಕ್ಕೆ ಬಾರದ ಲಿಂಗವಾಯಿತ್ತು. ಇದೆಂಥ ಸುದೃಷ್ಟಿ, ಈ ಮಹಂತನಿಗೆ ಅರುವ ಅರಿಯ ಹೇಳಿದ ಗುರು ಕಾಣಲಿಲ್ಲ, ಅದನ್ನು ಅರಿಯ ಹೋದ ತನ್ನನ್ನು ಕಾಣಲಿಲ್ಲ, ಇದೆಂಥ ಅರಿದರಿದ ಸಕೀಲ ಗುಟ್ಟು , ಇದಾರಿಗೆ. ಘನಲಿಂಗ ಕೃತ್ಯಕ್ಕೆ ಬಾರದ ಲಿಂಗವಾಯಿತ್ತೆ, ಅದರೂ ಕೃತ್ಯಕ್ಕೆ ತಂದವರಿಲ್ಲವಾಯಿತೆ ? ಅಹುದು. ಲಿಂಗಕ್ಕೆ ಲಿಂಗವಾಗಿ ನೋಡಿದ ದಿವ್ಯ ದೃಷ್ಟಿ. ಲಿಂಗವ ಅರಿದರಿದು ನೋಡಿದ ಸುಜ್ಞಾನವು. ಲಿಂಗವು ಕೃತ್ಯಕ್ಕೆ ಬಂದುದು ನೋಡಿದುದು ಹೇಗೆ, ಮಾಡಲು ಬಂದ  ಲಿಂಗ ನಿಜವಲ್ಲ, ಅದು ಕೃತ್ಯಕ್ಕೆ ಇಳಿದ ಲಿಂಗ, ನಿಜ ಲಿಂಗ ಹೇಗಾಗುವುದು ? ನಿರೂಪ ಲಿಂಗ, ಅನುಪಮ ಲಿಂಗ ಮಾಡಲು ಬಂದುದು ಹೇಗೆ ? ಇದು ಕಾರಣ, ಮಾಡಲು ಬಾರದ ಲಿಂಗ, ಮಾಡಿದುದು ಹೇಗೆ ? ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ, ನಿಜ ಚೈತನ್ಯ, ಶರಣರ ಹೃದಯದಲ್ಲಿ ಬೆಳಗುವ ಚಿಜ್ಯೋತಿ. ಇದು ಕೃತ್ಯಕ್ಕೆ ಬರುವುದೆ ? ಇದನ್ನು ಯಾರಾದರೂ ಕೃತ್ಯಕ್ಕೆ ತರಬಹುದೆ ? ಯಾವುದು ಕಾರಣ ಕಾರ್ಯಗಳಿಗೆ ಅತೀತವು ಅದು ಜ್ಞಾನರೂಪು ಲಿಂಗ, ಪರಾನಂದ, ಪರಬ್ರಹ್ಮವೆಂದ ಅರಿವು. ಅದು ಸ್ವತಂತ್ರ ಲಿಂಗ, ಸ್ವತಃ ಸಿದ್ಧ ಲಿಂಗ, ಲಿಂಗವೆಂಬುವುದರ ಲಿಂಗವಾದುದರಿಂದ ತಾನೇ ತನ್ನ ಹೊರತು ಅನ್ಯವಿಲ್ಲ.

ವಾಙ್ಮನಕ್ಕಗೋಚರ ಲಿಂಗ: ಕಥನಕ್ಕೊಳಪಟ್ಟುದುದು ಲಿಂಗವಾಗದು, ಲಿಂಗ, ಲಿಂಗವೆಂಬುದು ಲಿಂಗವಾಗದು, ಶೃತಿ ಸ್ಮೃತಿಗಳಿಗೆ ಮೀರಿದ ಘನವು ಶೃತಿ ಸ್ಮೃತಿಯು ಲಿಂಗವ ಬೆಳಗಲಿಲ್ಲವೆಂದಲ್ಲಿ ಈ ವಾಣಿಯ ಕಥನ ಅದನ್ನು ಗೋಚರಿಸದು. ಮನದ ಕಲ್ಪಿತವು ಅದನ್ನು ತಿಳಿಯದು, ಪ್ರವೃತ್ತಿ ಮನವಾದಲ್ಲಿ ನಿವೃತ್ತಿ ಮನವಾದಲ್ಲಿ ಅದನ್ನು ಬೆಳಗದು. ಬಹಿರ್ಮುಖ, ಅಂತರ್ಮುಖಕ್ಕೂ ಮೀರಿದುದು ಯಥಾ ವಾಚ್ಚ ನಿವರ್ತಂತೆ

ಅಪ್ರಾಪ್ಯ ಮನಸಾ ಸಹ ಎಂದು ಯಾವುದು ವಾಕ್ಕಿಗೆ ಒಳಪಡುವುದು ಅದು ಬ್ರಹ್ಮವಾಗದು. ಮನಸ್ಸಿನಿಂದ ಕಲ್ಪಿಸಿದುದು ಬ್ರಹ್ಮವಾಗದು ಎಂದು ಹೇಳಿದುದರಿಂದ ವಾಙ್ಮನಕ್ಕಗೋಚರ ಲಿಂಗವೆಂದು ಹೇಳಿಹರು.

ಬೊಟ್ಟಿಡಲೆಡೆ ತೆರಹಿಲ್ಲದ ಲಿಂಗ: ಇಲ್ಲಿ ಲಿಂಗವಿಲ್ಲ, ಇಲ್ಲಿ ಇದೆ ಎನ್ನಲು ಬೊಬ್ಬಿಡಲು ಅವಕಾಶ ಕೊಡದ ಲಿಂಗ, ಪೂರ್ಣ ಲಿಂಗ, ಅಖಂಡಿತ ಲಿಂಗವಿರುವಲ್ಲಿ ಇಲ್ಲಿ ಲಿಂಗ ಅಹುದು ಯಾವುದು, ಇಲ್ಲಿ ಲಿಂಗ ಅಲ್ಲ ಯಾವುದು, ಅನಿತ್ಯ ಯಾವುದು, ನಿತ್ಯ ಯಾವುದು, ಬೆಳಗಿಸಿಕೊಳ್ಳುವುದು ಯಾವುದು, ಬೆಳಗುವುದು ಯಾವುದು, ಇದು ವೇದ-ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗ, ಅಖಂಡಿತ ಲಿಂಗವಾದ್ದರಿಂದ ಬೊಬ್ಬಿಡಲೆಡೆ ತೆರಹಿಲ್ಲದ ಲಿಂಗವೆಂದು ಹೇಳಿದ್ದಾರೆ.

*ಪರಾತ್ಪರ ಗುರುಕೊಟ್ಟ ಶಿಷ್ಯ ತೆಗೆದುಕೊಂಡನೆಂಬ ರಟ್ಟೆಯ ಭಂಡರ ನೇನೆಂಬೆ ಗುಹೇಶ್ವರ* : ಇಲ್ಲಿ ಕೊಡುವ, ಕೊಳ್ಳುವುದು ಇತಿಯಾಗಿದೆ. ಕಲ್ಪಿತಕ್ಕಿಂಬುಕೊಡದ ನಿಶಬ್ದವೇದಿಗಳ ನಿಲುವು, ತನ್ನಿಂದ ತಾನರಿದರಿದ ನಿಲವು ನಿರಂತರ ಬೆಳಗುಳ್ಳ ಘನವು ಇದ್ದಂತಿದ್ದ ಘನ. ಮುನ್ನ ಮುನ್ನವೆ ಇದ್ದ ಘನ ಇದನಾರು ಕೊಡುವುದು ? ಇದನಾರು ತೆಗೆದುಕೊಳ್ಳುವುದು ? ಗಗನವನ್ನು ಯಾರು ಕೊಡುವುದು, ಯಾರು ತೆಗೆದುಕೊಳ್ಳುವುದು. ಜಡರೂಪ ಗಗನ, ಕೊಡ ಕೊಳ್ಳುವ ವ್ಯವಹಾರ ಬಾರದಿರುವಾಗ ಅರುವಿಂಗರುವು ಲಿಂಗದ ಲಿಂಗ, ಮೌನದ ಮೌನ ಇದನಾರು ಕೊಡುವುದು, ಕೊಳ್ಳುವುದು.

ಲಿಂಗ ಸಾಹಿತ್ಯ ಶಬ್ದಮುಗ್ಧ ಸಾಹಿತ್ಯ, ನಿಶಬ್ದ ವೇದಿಗಳ ಸಾಹಿತ್ಯ. ಸುಖರೂಪ ಸಾಹಿತ್ಯ, ಈ ಸಾಹಿತ್ಯ ಆಭಾಸ ದೃಷ್ಟಿ, ನಿರುಪಯೋಗ, ಕಲ್ಪಿತ ತಾನಾಗಿ ಅಕಲ್ಪಿತ ಘನವು ತನ್ನಿರುವು ಆಗಿದ್ದರೂ ತನಗದು ಅಸಾಧ್ಯವು. ಆರು ಶೃತಿಗಳ ಮೀರಿ ನಿಂತು ತನ್ನ ತಾ ಅರಿತಿಹರು ಅವರು ಪರಾತ್ಪರ ಗುರು ಕೊಟ್ಟ ಶಿಷ್ಯ ತಕ್ಕೊಂಡನೆಂಬುದು ತಮ್ಮ ತಮ್ಮ ಮನಕ್ಕೆ ಮಾತಾಡಿದುದು ಸರಿಬಾರದ ಮಾತಾಡಿದುದು. ಅಜ್ಞರು, ನಿರುಪಯೋಗ ಮಾತು ಎಂಬುದು ಅವರಿಗೆ ಸ್ವತಃ ಸಿದ್ಧವು, ಇವರು ಲಿಂಗ ಘನವ ಅರು ಹೃದಯರಾಗಿ ಅರಿಯ ಹೋದವರಲ್ಲ, ಧ್ಯಾನದಲ್ಲಿ ನೋಡ ಹೋದವರು. ಆಧ್ಯಾತ್ಮ ಗ್ರಂಥದಲ್ಲಿ ನೋಡ ಹೋಗಿ ಕಂಡಿಹೆವೆಂಬರು. ಇದಲ್ಲದೆ ಜಪ, ತಪದಲ್ಲಿ ಕಂಡಿಹೆವೆಂಬರು, ಭಾವಕ್ಕಗಮ್ಯವಾಗಿ ನೋಡಹೋದವರಲ್ಲ, ನಿಶಬ್ದವೇದಿಗಳಾಗಿ ನೋಡಹೋಗದ್ದರಿಂದ ಏಕರೂಪವಾದ ಗುಹೇಶ್ವರ ಲಿಂಗ ತಾನೆಂಬುದು ತನ್ನಿಂದ ತನಗದು ಹೇಗೆ ನಿಶ್ಚಯವಾಗುವುದು.

55

**ಧ್ಯಾನ ಆಧ್ಯಾತ್ಮದಲ್ಲಿ ಕಂಡಿಹೆನೆಂಬುದು**
**ಜೀವನಲ್ಲದೆ,ಪರಮನಲ್ಲ .**
**ಜಪ, ತಪ ನೇಮ - ನಿತ್ಯಗಳಿಂದ ಕಂಡಿಹೆನೆಂಬುದು**
**ಪ್ರಕೃತಿಯಲ್ಲವೆ ಸುಚಿತ್ತವಲ್ಲ.**

**ಭಾವದಿಂದ ಪ್ರಮಾಣಿಸುವುದೆ ಏಕರೂಪು,**
**ಗುಹೇಶ್ವರಲಿಂಗವು ತಾನೆ.** ॥ 1278 ॥

**ತಾತ್ಪರ್ಯ :** ಧ್ಯಾನ ಆಧ್ಯಾತ್ಮದಲ್ಲಿ ಕಂಡಿಹೆನೆಂಬುದು ಜೀವನಲ್ಲದೆ ಪರಮನಲ್ಲ : ಧ್ಯಾನದಲ್ಲಾಗಲಿ, ಆಧ್ಯಾತ್ಮದಲ್ಲಿ ಕಂಡುದು ಏನು ? ಧ್ಯಾನ ಯಾವುದರಿಂದಾಯಿತ್ತು ? ಆಧ್ಯಾತ್ಮ ಯಾರಿಂದಾಯಿತ್ತು ? ಅರಿತಿಹನೆ ? ಧ್ಯಾನ ಮನದಿಂದ ಆಯಿತ್ತು, ಆಧ್ಯಾತ್ಮ ನಿತ್ಯಾನಿತ್ಯ ಜ್ಞಾನವಾಯಿತ್ತು. ಇದು ಕಲ್ಪಿತನ ಕಾರ್ಯ.

ಧ್ಯಾನ, ಯಾವುದೆ ಒಂದು ವಸ್ತುವಿನ ಮೇಲೆ ಧಾರವಾಯಿಕ ರೂಪವಾಗಿ ಮನಸ್ಸು ನಿಲ್ಲಿಸುವುದೆ ಧ್ಯಾನವೆಂದು ಹೇಳಿಸಿಕೊಳ್ಳುವುದು, ಚಿತ್ತಿನ ಏಕಾಗ್ರತೆಗೆ ಧಾರಣ ಎನ್ನುವರು. ಮನಸ್ಸನ್ನು ಹನ್ನೆರಡು ಸೆಕೆಂಡ್ ಪ್ರಣವ ಚಿಂತನದಲ್ಲಿ ನಿಲ್ಲಿಸಿದರೆ ಒಂದು ಧಾರಣವೆನ್ನುವರು. ಈ ಪ್ರಕಾರವಾಗಿ ಹನ್ನೆರಡು ಧಾರಣವಾದರೆ ಒಂದು ಧ್ಯಾನವಾಗುವುದು. ಬಳಿಕ ಹನ್ನೆರಡು ಧ್ಯಾನವಾದರೆ ಅದು ಸಮಾಧಿ ಎನಿಸುತ್ತದೆ. ಮಹಾತ್ಮ ಏಸು, ಆತನ ಭಕ್ತರು ಶೂಲದ ಮೇಲಿದ್ದ ಏಸುವಿನ ಚಿತ್ರದ ಮೇಲೆ ಧಾರಣ ಮಾಡುತ್ತಾರೆ. ಕೆಲವರು ಓಂ ಎಂಬ ಈ ಅಕ್ಷರದ ಸುಂದರವಾದ ಚಿತ್ರ ತೆಗೆದುಕೊಂಡು ಸಮ್ಮುಖದಲ್ಲಿರಿಸಿ, ಪದ್ಮಾಸನಸ್ಥರಾಗಿ ಸರಳ ದೃಷ್ಟಿಯಿಂದ ಸುಖಪೂರ್ವಕವಾಗಿ ತ್ರಾಟಕ ಮಾಡುತ್ತಾರೆ. ಮತ್ತು ಓಂ ಇದರ ಬಗ್ಗೆ ತಮ್ಮ ಮನಸ್ಸಿನಲ್ಲಿ ನಿತ್ಯತಾ ಅನಂತತಾ ಭಾವನೆ ಇಡುತ್ತಾರೆ. ಓಂಕಾರ ಧನುಷ್ಯ ಮಾಡಿ, ಮನಸ್ಸನ್ನು ತೀರ (ಬಾಣ) ವಾಗಿ ಸಾವಧಾನದಿಂದ ತೀರ ಹೊಡೆದರೆ ಗುರಿಯೆ ಭೇದಿಸಿ ತದ್ರೂಪವಾಗುವಂತೆ ಓಂಕಾರಾಸಕ್ತನು ಬ್ರಹ್ಮರೂಪನಾಗುತ್ತಾನೆ. ತಾತ್ಪರ್ಯ, ಧಾರಣ, ಧ್ಯಾನ, ಸಮಾಧಿ ಇತ್ಯಾದಿ ಸಾಧನಗಳು ಸ್ವರೂಪತಃ ಒಂದೆ ಇರುತ್ತವೆ. ಹೇಗೆ ಬಾಲಕ, ತರುಣ, ವೃದ್ಧ ಈ ಮೂರು ಅವಸ್ಥೆಗಳು ಒಟ್ಟಿನಲ್ಲಿ ಕಾಣುವಂತೆ ಇರುತ್ತವೆ, ಕಾರಣ ಇದು ಮನದ ಕಾರ್ಯ, ಧ್ಯಾನವು ಎಂದು ಹೇಳಿದೆ. ಈ ಮನದ ಕಾರ್ಯವ ಜೀವನೆ ಕಂಡನಲ್ಲದೆ ಪರಮನಲ್ಲವೆಂದಿಹರು.

ಆಧ್ಯಾತ್ಮದಲ್ಲಿ ಕಂಡಿಹೆವೆಂಬರು : ಜೀವನು, ಕಲ್ಪಿತನೆ ಕಂಡಿಹನಲ್ಲದೆ ಅಕಲ್ಪಿತ ಘನವ ಅದೆಂತು ಕಾಣವುದು. ಆಧ್ಯಾತ್ಮನವೆಂಬುದು ಆತ್ಮನಿಗೆ ಸಂಬಂಧಿಸಿದ ವಿಷಯ, ಬ್ರಹ್ಮವನ್ನು ಕುರಿತು ಹೇಳಿದ ವಿಷಯ, ತತ್ವಶಾಸ್ತ್ರಕ್ಕೆ ಅನ್ವಯಿಸುವುದು. ಅಲ್ಲಿ ಆತ್ಮನನ್ನು ಕುರಿತು ಹೇಳಿದ ಲಕ್ಷಣ, ನಾಮರೂಪಗಳನ್ನು ಭಾದಪಡಿಸಿ ಅಸ್ತಿ, ಭಾತಿ, ಪ್ರಿಯಗಳನ್ನು ಸಿದ್ಧ ಮಾಡುವುದು. ಇದು ಜ್ಞಾನ ಕಲೆ. ಗುಣತ್ರಯಗಳನ್ನು, ಅವಸ್ಥ ತ್ರಯಗಳನ್ನು ಭಾದಪಡಿಸಿ ಅಭಾದಿತ ವಸ್ತುವನ್ನು ತಿಳಿಸುವ ಶಾಸ್ತ್ರ, ತತ್ವ ಅತತ್ವವನ್ನು ವಿಭಾಗ ಮಾಡಿ ತಿಳಿಸುವ ಶಾಸ್ತ್ರ, ದೃಶ್ಯವೆಂದು, ದೃಕ್ ಎಂದು, ಅದೃಶ್ಯವೆಂದು ಅದೃಷಿ ಎಂದು, ಲಕ್ಷಣ, ಲಕ್ಷ್ಯವೆಂದು ವಿವರಿಸುವ ಶಾಸ್ತ್ರ, ಆಧ್ಯಾತ್ಮ ಶಾಸ್ತ್ರ

ಜಡ, ಚೇತನ, ಚೈತನ್ಯಗಳ ವಿವರಿಸುವುದು ಇದುವೆ ತತ್ವ ಶಾಸ್ತ್ರ. ಜಡವೆಂದರೆ ತನ್ನನ್ನು ತಾನು ತಿಳಿಯದ್ದು, ಅನ್ಯವನ್ನು ತಿಳಿಯದ್ದು, ಇದು ಜಡ ಲಕ್ಷಣ. ಚೇತನ ಎಂದರೆ, ಜಡವನ್ನು ತಿಳಿಯುವುದು, ಅರಿವು ಎಂದರೆ, ಆಭಾಸ ಅರಿವು, ಬಿಡಿ ಅರಿವು. ಉಪಾದಿಯಲ್ಲಿ ಪ್ರತಿಬಿಂಬಿತವಾದ ಅರಿವು ಇದು ಚೇತನದ ಲಕ್ಷಣ. ಇದಕ್ಕೆ ಹೊರತಾದುದು

ಚೈತನ್ಯ. ಜ್ಞಾನ ಸ್ವರೂಪ ಅರುವು ಸಚ್ಚಿದಾನಂದ ರೂಪ ಇದ್ದಂತಿರುವುದರಿಂದ ನಿತ್ಯ, ಇದು ಒಳಹೊರಗೆನ್ನದೆ ವ್ಯಾಪಕವಾದುದರಿಂದ ಹೀಗೆ ಲಕ್ಷಣ ಹೇಳುವ ಶಾಸ್ತ್ರ ಆಧ್ಯಾತ್ಮ ಶಾಸ್ತ್ರ ಎಂದು ಹೇಳಿಸಿಕೊಳ್ಳುವುದು. ಈ ಆಧ್ಯಾತ್ಮ ಶಾಸ್ತ್ರ ಯಾರ ಸಲುವಾಗಿ, ಕಲ್ಪಿತರೂಪಿ ಆಭಾಸನಿಗೆ ಹೇಳಿದ ವಿಷಯ. ಮರುವಿಂಗೆ ಶಾಸ್ತ್ರವುಂಟು, ಶ್ರವಣ ಮನನ ನಿಧಿ ಧ್ಯಾಸವುಂಟು. ಧಾರಣ, ಧ್ಯಾನ, ಸಮಾಧಿವುಂಟು. ಪರಮಂಗೆ ಮರವೆಂಬುದಿಲ್ಲ, ಅರುವೆಂಬುದಿಲ್ಲ, ಅರಿತೆನೆಂಬುದಿಲ್ಲ, ಅರಿಯನೆಂಬುದಿಲ್ಲ, ನುಡಿಗೆಡೆಗೊಡದ ಘನಂಗೆ ನುಡಿದು ಹೇಳುವುದು ಅದೆಂತು ? ಅಪ್ರಮಾಣ ಗಮ್ಯಂಗೆ ಪ್ರಮಾಣವು ಹೇಳುವುದು ಅದೆಂತು ? ಅಕಲ್ಪಿತನಲ್ಲಿ ಕಲ್ಪಿತಕ್ಕೆ ಅವಕಾಶವುಂಟೆ ? ಅಕಥನೀಯ ಘನದಲ್ಲಿ ಕಥನಿಕ್ಕಿಂಬು ಅದೇತರದು ?

*ಜಪ, ತಪ, ನೇಮ, ನಿತ್ಯಗಳಿಂದ ಕಂಡಿಹೆನೆಂಬುದು ಪ್ರಕೃತಿಯಲ್ಲದೆ ಸುಚ್ಚಿತ್ತವಲ್ಲ* : ಜಪದಲ್ಲಿಯೂ ಓಷ್ಟವೆಂತಲೂ, ಉಪಾಂಸವೆಂತಲೂ, ಮಾನಸಿಕವೆಂತಲೂ ಮೂರು ವಿಧವಾಗಿದೆ. ಜಪದಲ್ಲಿ ಷಡಕ್ಷರಿ, ಪಂಚಾಕ್ಷರಿ, ಅಷ್ಟಾಕ್ಷರಿ, ಶೋಢಷ ಅಕ್ಷರ, ಎರಡಕ್ಷರ, ಪ್ರಾಣವೆಂಬ ಒಂದೆ ಅಕ್ಷರ ಹೀಗೆ ನಾನಾ ವಿಧವಾಗಿ ಜಪಾನುಷ್ಠಾನ ಮಾಡುವವರು ಬಹಳ ಇದ್ದಾರೆ. ಕೆಲವರು 108 ಸಲ ಜಪ, 1008 ಸಲ ಕೆಲವರು, ನಿರಂತರ ಜಪದಲ್ಲಿ ನಿರತರಾಗಿರುವುದು. ಇದರಲ್ಲಿಯೆ ಮನಸ್ಸು, ಇಂದ್ರಿಯಗಳನ್ನು ಏಕಾಗ್ರಗೊಳಿಸುವುದು ತಪಸ್ಸಾಗಿದೆ, ಅದುವೆ ನೇಮವಾಗಿದೆ. ಅವರು ಆಚರಿಸುವ ದಿನದಾಚರಣೆಯೆ ನೇಮವಾಗಿದೆ. ಇನ್ನು ಕೆಲವರು ಕಂದಮೂಲಂಗಳ ಸೇವಿಸಿ ಪ್ರಾಣಾಯಾಮ ಅಭ್ಯಾಸ ಮಾಡುತ್ತಾ ಕೇವಲ ಕುಂಬಕ ಸಾಧಿಸಿ, ತಪಾನುಷ್ಠಾನ ಮಾಡುವವರಾಗಿದ್ದಾರೆ. ತಪಸ್ಸಿನಲ್ಲಿಯೂ ಸಾತ್ವಿಕ ತಪಸ್ಸು, ರಾಜಸ ತಪಸ್ಸು, ತಾಮಸ ತಪಸ್ಸು ಮೂರು ವಿಧವಾದ ಜಪ, ತಪ, ನೇಮ, ನಿತ್ಯಗಳಿಂದ ಕಂಡಿಹೆನೆಂಬರು; ಅದು ಸುಚ್ಚಿತ್ಯವಲ್ಲ. ತಾತ್ಪರ್ಯ ಹೀಗಿದೆ. ಮಾಡುವ ಕಾರ್ಯ ಗುಣಮಯಿ ಕಾರ್ಯ, ಪ್ರವೃತ್ತಿ ಕಾರ್ಯವಲ್ಲದೆ ಸುಚಿತ್ ಅಲ್ಲ. ಸುಚಿತ್ ಅಂದರೆ ಅಕ್ಷರಾಕ್ಷರ ಮೀರಿದ ಘನ, ದೃಕ್‌ನ ದೃಕ್‌ವಿರುವಲ್ಲಿ ಜಪತಪಂಗಳ ಮಾಡಿದುದೆಂತು, ನೇಮ ನಿತ್ಯಗಳ ಮಾಡಿದುದೆಂತು ? *ಗಗನವು ಜಪತಪಂಗಳು ಮಾಡುವುದೆ ? ಅದು ನೇಮ ನಿತ್ಯಂಗಳ ಮಾಡುವುದೆ ? ಚಿದಾಕಾಶವು ಅದೆಂತು ಜಪ, ತಪವ ಮಾಡುವುದು, ಯಾರ ಸಲುವಾಗಿ ಮಾಡುವುದು, ಯಾರಾಗಿ ಮಾಡುವುದು, ಮಾಡುವ ಕಾರ್ಯವೆಲ್ಲವು ಪ್ರಕೃತಿ ಧರ್ಮ. ಅದು ಪುರುಷೋತ್ತಮ ನಿಲುವಲ್ಲ, ಮಾಡುವುದು ಪ್ರಕೃತಿಯ ಕಾರ್ಯ, ಮಾಡದಿರುವುದು ಸುಚಿತ್ ನಿಲುವು ಎಂದು ಹೇಳಿದೆ.

*ಭರಿತಭಾವದಿಂದ ಪ್ರಮಾಣಿಸುವುದೆ ಏಕರೂಪು ಗುಹೇಶ್ವರ ಲಿಂಗವು ತಾನೆ* : ಭಾವವಿದು ಭರಿತ ಭಾವ, ಎಲ್ಲೆಲ್ಲೂ ತನ್ನ ಕಂಡ ಭಾವ. ಇದು ಭ್ರಾಂತರಿಗೆ ಅಗಮ್ಯ, ನಿರ್ಭಾವದ ಘನವ ಇವರೇನು ಬಲ್ಲರು, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರಿವೆಂದರಿದ ಭಾವ, ಇದು ತುಂಬಿದ ಭಾವ, ತುಳಕದ ಭಾವ, ನಂಬಿದ ಭಾವ, ಸಂದೇಹಿಸದ ಭಾವ, ಒಲಿದ ಭಾವ, ಬೇಸರವಾಗದ ಭಾವ, ಇದು ನಿಸ್ಸೀಮ ಭಾವ, ಸುಖವ ಸುಖಿಸುವವರ ಭಾವ, ಇದು ಏಕ ರೂಪ ಗುಹೇಶ್ವರ ಲಿಂಗ ತಾನಾದ ಇರುವುಳ್ಳವಂಗೆ ಮಾತಿನ ಮಾತಿನ ಮಹಾನುಭವಕ್ಕೆ ಒಪ್ಪುವನೆ ? ಲೋಹವ ಕರಗಿ

ಗುಂಡಾದಲ್ಲಿ ಕಾಯವನಿರಿಯಬಲ್ಲುದೆ ?

**56**

**ಲೋಹ ಕರಗಿ ಗುಂಡಾದಲ್ಲಿ ಕಾಯವನಿರಿಯಬಲ್ಲುದೆ ?**
**ಮಾತಿನ ಅದ್ವೈತದಲ್ಲಿ ನುಡಿವರೆಲ್ಲರೂ**
**ಗುಹೇಶ್ವರ ಲಿಂಗವನೆತ್ತಬಲ್ಲರು ಸಂಗನಬಸವಣ್ಣ ?** ॥ 1520 ॥

**ತಾತ್ಪರ್ಯ:** *ಲೋಹವ ಕರಗಿ ಗುಂಡಾದಲ್ಲಿ ಕಾಯವನಿರಿಯಬಲ್ಲದೆ* : ಲೋಹವು ಆಯುಧ ರೂಪಾದಲ್ಲಿ ಕಾಯವನಿರಿಯುವುದು ಸಹಜವಾಗಿದೆ. ಇರಿಯುವ ಆಯುಧವೇ ಗುಂಡಾದಲ್ಲಿ ಅದೆಂತು ಕಾಯವ ಇರಿಯುವುದು, ಅರು ಹೃದಯವೆ ಕರಗಿ ಮರವುಳ್ಳದ್ದಾದಲ್ಲಿ ದೇಹ ಬುದ್ಧಿಯ ನಷ್ಟಮಾಡಬಲ್ಲುದೆ, ಅರು ಹೃದಯವಾಗಿಹ ಅರುವುಳ್ಳವಂಗೆ ಮರವು ಅದರ ಕಾರ್ಯವಾಗಿಹ ಅನಾತ್ಮ ಬುದ್ಧಿ ಸಹಜ ನಷ್ಟ ಮಾಡಬಲ್ಲುದು. ಅರು ಹೃದಯವಾಗದೆ ದೇಹ ಬುದ್ಧಿ ನಷ್ಟವಾಗದು, ಮಾತಿನಲ್ಲಿ ಅರುವಿನ ಮಾತಾಡಿದರೆ ಮರವು ಹೋಗದು, ಮಾಯೆ ನಷ್ಟವಾಗದು, ಪ್ರಪಂಚವು ನಷ್ಟವಾಗದು, ಕರ್ಮಪಾಶವು ಅರಿಯದು.

*ಮಾತಿನ ಅದ್ವೈತದಲ್ಲಿ ನುಡಿವವರೆಲ್ಲರು ಗುಹೇಶ್ವರಲಿಂಗವನೆತ್ತ ಬಲ್ಲರು ಬಸವಣ್ಣ* : ಓ ಬಸವರಸ, ಮಾತಿನ ಮಾತಿನ ಮಹಂತರು. ನುಡಿಯಲ್ಲಿ ವೇದಾಂತ, ನಡೆಯಲ್ಲಿ ಕ್ರಿಯಾಜ್ಞಾನಿಗಳು, ಮಾತು ಮಾತಿಗೆ ಪರಬ್ರಹ್ಮ ಪೂರ್ಣ, ಸಚ್ಚಿದಾನಂದವೆಂದು ನುಡಿಯುವುದು ಅತೀಂದ್ರಿಯತ್ವದಿಂದ ದೂರರು. ತಾನಾರೆಂದು ಅರಿದರಿದು ನೋಡದೆ ಕಲ್ಪಿತವೆ ಸತ್ಯವಾಗಿದ್ದವರಿಗೆ ಅದ್ವೈತದ ರಹಸ್ಯವನರಿಯುವುದು ಅದೆಂತು ಸಾಧ್ಯವು. ಇವರು ಮಾತಿನ ಸಚ್ಚಿದಾನಂದ ಮೂರ್ತಿ. ಸ್ವಯಂಪ್ರಕಾಶ ಮಾತಿನ ದೃಕ್, ಮಾತಿನ ಅಸಂಗ, ಮಾತಿನ ಚಿಜ್ಯೋತಿ, ಇದಲ್ಲದೆ ಮಾತಿನಲ್ಲಿಯೆ ಶಬ್ದಮುಗ್ಧ, ಮಾತಿನಲ್ಲಿಯೆ ಮೌನದ ಮೌನವೆಂದು ಶಬ್ದಗಳ ಜೋಡಿಸುವವರು. ಅವ , ಮಾತಿನ ಜೋಡಣೆಯುಳ್ಳವರು. ಇವರ ಮಾತು ಇವರಿಗೆ ಪ್ರಳಯವಾಗಿಲ್ಲ, ದ್ವೈತ ದೃಷ್ಟಿ ನಷ್ಟವಾಗಿಲ್ಲ, ದ್ವೈತ ಭಾವ ಮಿಥ್ಯೆಯಾಗಿಲ್ಲ, ದ್ವೈತ ಜ್ಞಾನವು ಸತ್ಯವಾಗಿದೆ ಎಂದಲ್ಲಿ ಅದ್ವೈತವದೆಂತು ಸಾಧ್ಯ.

ಗುಹೇಶ್ವರ ಲಿಂಗವನರಿತವರು ಅದ್ವೈತರು. ಅವರು ನುಡಿಗೆಡೆಗೊಡದ ಘನರು. ನಾನೀನೆಂಬುದಕ್ಕೂ ತೆರಹಿಲ್ಲದ ಘನ. ಅವರು ನುಡಿದು ನುಡಿದವರಲ್ಲ, ಮೌನವಾಗಿದ್ದರೂ ಮೌನಿಗಳಲ್ಲ, ನಿರಾಯಾಸವಾಗಿ ಅದ್ವೈತರು. ಗುಹೇಶ್ವರ ಲಿಂಗವರಿತವರು, ಅನುಪಮರು, ಅದ್ವೈತವನರಿತವರು, ಸತ್ಯನಿತ್ಯವ ಮೀರಿದವರು. ಅಲ್ಲಿ ನಾಮರೂಪ ಮಿಥ್ಯೆಯೆಂಬುದಿಲ್ಲ, ಅಸ್ತಿ, ಭಾತಿ, ಸತ್ಯವೆಂಬುದಿಲ್ಲ, ಪರಮಸತ್ಯದ ಸಾಕ್ಷಾತ್ಕಾರವಂತ ಅದ್ವೈತದ ರಹಸ್ಯವನರಿತವರು, ಅವರ ದಿವ್ಯ ದೃಷ್ಟಿಗೆ ಸಮಪ್ರಕಾಶಮಾನವಾದ ತತ್ವ ಒಂದೆ ಸಿದ್ಧವಾಗಿರುವುದು. ಸಮತೆ, ಸಯವಾದ ಶರಣಂಗೆ ಅರಿವು, ಮರೆವುಗಳುಂಟೆ ? ಗಗನಕ್ಕೆ ಬೆಳಕು-ಕತ್ತಲೆ ಸಮ, ಚಂದ್ರ-ಸೂರ್ಯರು ಸಮ, ಮರವುಳ್ಳವರಿಗೂ, ಅರುವುಳ್ಳವರಿಗೂ ಸಮ, ಅಜ್ಞಾನ-ಜ್ಞಾನಕ್ಕೂ ಸಮ, ಬಂಧ-ಮೋಕ್ಷಕ್ಕೂ ಸಮ, ಗುರು-ಶಿಷ್ಯತ್ವಕ್ಕೂ ಸಮ,

ಭಕ್ತ-ಜಂಗಮರಿಗೂ ಸಮ, ಅರಿತೆ-ಅರಿಯೆನೆನ್ನುವುದಕ್ಕೂ ಸಮ, ಪ್ರವೃತ್ತಿ-ನಿವೃತ್ತಿಗೂ ಸಮ, ಸಮವೆಂಬುದು ಸಮ ಸಮ ಎಂದುದಲ್ಲ, ಅದು ಇದ್ದಂತಿದ್ದ ಘನ, ಏನೊಂದಾಗದ ಘನ, ಜೀವನಾದುದಲ್ಲ, ಅಂತರಾತ್ಮನಾದುದಲ್ಲ, ಪರಮಾತ್ಮನಾದುದಲ್ಲ, ಆದುದೆಲ್ಲವೂ ಕಲ್ಪಿತವು.

ಗಗನವು ಇದ್ದಂತಿದೆ. ಅದು ಘಟಾಕಾಶ, ಮಠಾಕಾಶ, ಮೇಘಾಕಾಶ, ಮಹಾಕಾಶವೆಂದರು ತಾನು ಇದ್ದಂತೆ ಇದೆ. ಅದರಲ್ಲಿ ಬದಲಾವಣೆ ಇಲ್ಲ. ಹಾಗೆ ಸಮರೂಪ ಸಮಸ್ವರೂಪವಾಗಿಹ ಘನವು, ನಿರಂತರವು, ಮಂಗಲಮಯವು. ಅದು ನಿಶಬ್ದವೇದಿಗಳ ಇರುವು. ಗುಹೇಶ್ವರ ಲಿಂಗವದುವೆ. ಲಿಂಗವದು,ಲಿಂಗ ಲಿಂಗವೆಂದು ಎಂದೂ ಅಂದುದಲ್ಲ. ಗುಹೇಶ್ವರ ಲಿಂಗವೆಂಬುದು ಈ ದೇಹವೆಂಬ ಗುಹೆಗೆ ಈಶ್ವರನೆನೆಸಿಕೊಂಡಿರುವ ಮಹಾಘನಲಿಂಗ, ಇದು ಚಿದ್ಘನ, ಜ್ಞಾನ ಸ್ವರೂಪವರಿತವರೆ ಅದ್ವೈತರು. ಅವರು ಎರಡೊಂದಾದವರು, ಶರಣರು, ಅವರ ಮಾತೆಂಬುದು ಜ್ಯೋತಿರ್ಲಿಂಗವಾಗಿ ಇದ್ದುದನಾರು ಬಲ್ಲರು ? ಶರಣರು ಶರಣರ ಘನವರಿಯುವರು. ಮೂಕನ ಮಾತು ಮೂಕ ಬಲ್ಲ, ನಿಶಬ್ಧವೇದಿಗಳ ಸಂಜ್ಞೆ ನಿಶಬ್ದವೇದಿಗಳು ಬಲ್ಲರು. ಅರುವ ಅರಿಯ ಹೇಳಿದ ಕುರುಹ ಶರಣರು ಅರಿಯಹೋಗಿ ಅನುಪಮರಾಗಿಹರು. ಅಖಂಡ ಲಿಂಗವಾಗಿಹರು ಅವರದು ತನು ನಷ್ಟ ಮನ ನಷ್ಟ ನೆನಹು ನಷ್ಟ ಭಾವ ನಷ್ಟ ಜ್ಞಾನ ನಷ್ಟವಾದುದರಿಂದ ಸಚ್ಚಿದಾನಂದ ನಾನ್ನೆನುವುದು ನಷ್ಟ ನೀನೆಂಬವುದು ನಷ್ಟವಾದುದರಿಂದ ಅದ್ವೈತರು ನುಡಿದು ಹೇಳುವುದು ಅದ್ವೈತವಾಗದು. ನೆನಹು ನಿರ್ಣಯ ಇತಿಯಾದುದೆ ಅದ್ವೈತದ ಸಾಮ್ರಾಟತ್ವ ಅಚ್ಚ ಸುಖದ ಸುಖ. ಅದ್ವೈತವೆಂದರೆ ಗುಹೇಶ್ವರ ಲಿಂಗ ತಾವಾದ ಸ್ವತಂತ್ರರು ಸ್ವಯಮೇವ ಸುಖ ಸ್ವರೂಪಿಗಳು. ಆರಾರ ಹಂಗಿಲ್ಲದ ಸಂಯೋಗ ತನ್ನಿಂದ ತನ್ನ ಅರಿದರಿದು ನೋಡಿದ ಹಂಗಿಲ್ಲದ ಸಂಯೋಗ. ಇದು ಶಬ್ದ ಮುಗ್ದನಾಗಿಹ ಸಂಯೋಗ ನುಡಿಯ ಹಂಗಿಲ್ಲದ ಸಂಯೋಗ ನಡೆಯ ಹಂಗಿಲ್ಲದ ಸಂಯೋಗ ಈ ಹಂಗಿಲ್ಲದ ಸಂಯೋಗವರಿಯಲು ಗುರು ಶಿಷ್ಯರೆಂಬ ಹಂಗು ಹರಿಯಬೇಕು. ಭಕ್ತ ಜಂಗಮನೆಂಬ ಹಂಗು ಹರಿಯಬೇಕು. ಲೋಕದ ನಚ್ಚು ಮೆಚ್ಚು ಬೇಸರವಾಗಿರಬೇಕು. ಆತ್ಮ ಸ್ತುತಿ ಪರನಿಂದೆಯಲ್ಲಿ ಬಹಳ ದೂರವಿರಬೇಕು. ಸಮಯಚಾರದ ಕಟ್ಟು ನಿಟ್ಟಿಗೆ ಹೃದಯ ಮಾರು ಹೋಗಿರಬಾರದು. ಅರು ಹೃದಯವಾಗದಿದ್ದಲ್ಲಿ ಹಂಗಿಲ್ಲದ ಸಂಯೋಗವು ಬಹು ದೂರವಾಗಿದೆ. ಸಂಗನ ಬಸವಣ್ಣ ಎಂದು ಹೇಳಿಹರು.

57

**ಒಂದರ ಮೋರೆಯನೊಂದು ಮೂಸಿ ನೋಡಿ**
**ಮೊತ್ತೊಚ್ಚಿ ಒತ್ತಿಂಗೆ ಕಚ್ಚೆಯಾಡಿ ಹೋದಂತಾಯಿತ್ತು,**
**ನೋಡಿರೆ ? ಕಲಿಯುಗದೊಳಗಣ ಮೇಳಾಪವ !**
**ಗುರುವೆಂಬಾತ ಶಿಷ್ಯನಂತುವನರಿಯ,**
**ಶಿಷ್ಯನೆಂಬಾತ ಗುರುವಿನಂತುವನರಿಯ,**
**ಭಕ್ತರೆಂಬವರು ಭಕ್ತರೊಳಗೆ ಸಮವಿಲ್ಲ.**

**ಜಂಗಮರೆಂಬವರು ಜಂಗಮದೊಳಗೆ ಸಮವಿಲ್ಲ.**
**ಇದು ಕಾರಣ - ಕಲಿಯುಗದೊಳಗೆ ಉಪದೇಶವ ತೋರುವ**
**ಕಾಳಗುರಿಕೆಯ ಮಕ್ಕಳನೇನೆಂಬೆ ಗುಹೇಶ್ವರಾ.** ॥ 318 ॥

**ತಾತ್ಪರ್ಯ** : ಪ್ರಭು ದೇವ, ಆಧ್ಯಾತ್ಮ ಗುಂಪಿನ ಮೇಳಾಪವ ನೋಡಿರೆ, ಇದು ಕಲಿಯುಗದ ಮೇಳಾಪವ ನೋಡಿರೆ. ಈ ಮೇಳಾಪಕ್ಕೆ ಏನನ್ನಬೇಕು? ಇವರು ಗುರುವಾರು ? ಶಿಷ್ಯರಾರು ? ಭಕ್ತರಾರು ? ಜಂಗಮರಾರು ? ಇವರ ಪ್ರಾರಂಭವಾವುದು ? ಕೊನೆ ಆವುದು ? ಇವರು ತಿಳಿಯಬೇಕಾದ ರಹಸ್ಯವ ಅರಿತಿರುವರಾ ? ಅರಿಯದ ಮೇಳಾಪ ಒಬ್ಬರ ಮುಖ ನೋಡಿ ಇನ್ನೊಬ್ಬ ಸ್ತುತಿ ಮಾಡುವ ಮೇಳಾಪವೆ ? ಗುರುವಿನ ಬ್ರಹ್ಮಚರ್ಯ, ನಿರಾಶೆ, ತಪಸ್ಸುಗಳ ನೋಡಿ ಶಿಷ್ಯನು ಸ್ತುತಿಸುವುದೆ ? ಶಿಷ್ಯನ ಬಹಿರ್‌ಸಭ್ಯತನವ ನೋಡಿ ಸ್ತುತಿಸುವುದೆ ? ಜಂಗಮನ ವ್ರತನಿಯಮಂಗಳ ನೋಡಿ, ತ್ರಿಕಾಲ ಲಿಂಗವ ಪೂಜೆಯ ನೋಡಿ, ಧ್ಯಾನ ಮೌನವ ನೋಡಿ ಕೊಂಡಾಡುವುದೆ ? ಭಕ್ತನ ಮುಗ್ಧ ಭಾವಿಕತ್ವ ಸಕಲವೂ ನಿನ್ನದು ಎನ್ನುವ ಮಾತಿನ ಬಣಕ್ಕೆ ಸ್ತುತಿಸುವುದೆ ? ಇಬ್ಬರು ಒಬ್ಬರನ್ನೊಬ್ಬರು ಹೊಗಳುವ ಹೊಗಳಭಟ್ಟರು. ಇದು ಪರಸ್ಪರ ಸ್ತುತ್ಯ ಮಾಡುವ ಸಮೂಹವು. ಇವರುಗಳ ಶೀಲಗಳು ಸ್ವಲ್ಪಕಾಲದವು. ಮರವಿನ ಹೃದಯಕ್ಕೆ ಒಪ್ಪುವುದೆ ? ಇದೆಂಥ ಹೃದಯ, ಇವುಗಳಿಗೆ ಆಧ್ಯಾತ್ಮ ಹೃದಯವೆನ್ನಬೇಕೆ ? ಅರು ಹೃದಯವೆನ್ನಬೇಕೆ ? ಇರಲಿ, ಕೊನೆಗೆ ಪರಿಶುದ್ಧ ಹೃದಯವೆನ್ನಬೇಕೆ ? ಆನೆಂಬ ಹಂಗು ಹರಿದ ಹೃದಯವೆನ್ನಬೇಕೆ ? ಒಳಹೊರಗೆ ಶುದ್ಧವಾದ ಹೃದಯವೆನ್ನಬೇಕೆ ? ಆಸೆ, ಆಮಿಷಂಗಳ ನಷ್ಟವಾದ ಹೃದಯವೆನ್ನಬೇಕೆ ? ಇದು ಗುರುವಿನ ಮುನ್ನಲಾದ ಘನದಿರುವು ಶಿಷ್ಯನರಿಯ, ಶಿಷ್ಯನ ಮುನ್ನ ಮುನ್ನಲಾದ ಘನದಿರುವು ಗುರುವನರಿಯ. ಭಕ್ತನ ಮೂಲವ ಜಂಗಮನರಿಯ, ಜಂಗಮನ ಮೂಲವ ಭಕ್ತಿಯನರಿಯ, ಇದು ಕಾರಣ ಗುರುಗುರುಗಳಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ, ಜಂಗಮ ಜಂಗಮರಲ್ಲಿ ಸಮವಿಲ್ಲ.

ಗುರುಗಳೆಂದರೆ ಚೆನ್ನಬಸವಣ್ಣನೆ ಗುರು. ಶಿಷ್ಯನೆಂದರೆ ಸಿದ್ಧರಾಮ ಶಿವಯೋಗಿಯೆ ಶಿಷ್ಯನು. ಗುರುವೆಂದರೆ ಬಸವರಸರು, ಶಿಷ್ಯನೆಂದರೆ ಚೆನ್ನಬಸವಣ್ಣನು. ಗುರು ಎಂದರೆ ಅನಿಮಿಷ ದೇವನು, ಶಿಷ್ಯನೆಂದರೆ ಅಲ್ಲಮಪ್ರಭು. ಗುರು ಎಂದರೆ ಸಿದ್ಧರಾಮಶಿವಯೋಗಿ. ಶಿಷ್ಯನೆಂದರೆ ಹಾವಿನಾಳ ಕಲ್ಲಯ್ಯ. ಗುರು ಎಂದರೆ ಸಿದ್ಧಾರೂಢರು, ಶಿಷ್ಯನೆಂದರೆ ಕಬೀರದಾಸರು. ಗುರುನಾಥರೂಢ, ನಾಗಭೂಷಣ ಶಿವಯೋಗಿ, ಗುರುಶಿಷ್ಯನೆಂದರೆ ಸಮಪ್ರಕಾಶಮಾನವಾದ ತತ್ವ ತಿಳಿಸಿದವರು, ತಿಳಿದವರು ಅನುಪಮರು ತಮ್ಮ ತಾ ಅರಿತವರು. ಇವರು ಗುರುಶಿಷ್ಯತ್ವ ಕಾಣದವರು, ಎರಡಾಗದವರು, ಏನೊಂದಾಗದ ಘನಮಹಿಮರು.

ಭಕ್ತನೆಂದರೆ ಬಸವಣ್ಣ, ಜಂಗಮನೆಂದರೆ ಅಲ್ಲಮಪ್ರಭು, ಶರಣೆಯರಲ್ಲಿ ಭಕ್ತರೆಂದರೆ ಮುಕ್ತಾಯಕ್ಕ , ನೀಲಾಂಬಿಕೆ, ಅಕ್ಕಮಹಾದೇವಿ, ಮಹಾದೇವಿಯಕ್ಕ ಇನ್ನು ಅನೇಕ ಶರಣೆಯರು. ಇವರು ಮುನ್ನ ಮುನ್ನಲಾದ ಘನವರಿತವರು. ತಮ್ಮ ಹೃದಯದೊಳ್

ನ್ಯಸ್ತವಾಗಿಹ ಘನವರಿತವರು. ಇದು ಕಾರಣ, ಗುರುವಿನಂತುವ ಶಿಷ್ಯ ಅರಿತವ, ಶಿಷ್ಯನಂತುವ ಗುರು ಅರಿತವ, ಭಕ್ತನಂತುವ ಜಂಗಮ ಅರಿತುದರಿಂದ ಗುರುವೆನಲಿಲ್ಲ ಶಿಷ್ಯರೆನಲಿಲ್ಲ, ಭಕ್ತರೆನಲಿಲ್ಲ, ಜಂಗಮರೆನಲಿಲ್ಲ, ಸಮಗೋಷ್ಠಿಯ ಘನವ ಉಪಮಿಸಬಾರದು ನೋಡಾ, ಸಮ ಎಂಬುದು ತನ್ನಯ ಇರುವಿನ ಅರುವು, ಅರಿಯದರುವು, ಸಕಲರ ಇರುವು, ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಇರುವು.

ಶರಣರಗೋಷ್ಠಿ ಸಮಗೋಷ್ಠಿ, ನಿಸ್ಸೀಮ ಸುಖದ ಗೋಷ್ಠಿ, ಇದು ಅಚ್ಚ ಸುಖ, ಇದು ತನ್ನಿಂದ ತಾನು ಅರಿದರಿದು ನೋಡಿದ ನಿಜಧಾಮ. ಇಲ್ಲಿ ಭಾವಕ್ಕಿಂಬಿಲ್ಲ, ಶಬ್ದಮೀಸಲವು ನುಡಿಗೆ ಆಸ್ಪದವಿಲ್ಲ, ಇದು ಅರುವ ಅರಿಯಹೋದವರ ಸಂಕೇತ. ಸಮತೆ, ಸಯವಾದ ಸಂಕೇತ. ನಿಶಬ್ದವೇದಿಗಳ ಘನದಿರುವು. ಸಮವೆಂಬುದು ಏನೊಂದಾಗದ ಘನ. ಅಂದು ಇಂದು ಎಂದೆಂದೂ ಇದ್ದಂತಿರುವ ಘನ. ಇದಕ್ಕೆ ಪ್ರಾರಂಭ, ಮುಕ್ತಾಯ ಇತಿಯಾಗಿವೆ. ಅನಂತವಾದ್ದರಿಂದ ಇಲ್ಲಿ ಸ್ವೀಕರಿಸಬೇಕಾದುದಿಲ್ಲ, ತ್ಯಜಿಸಬೇಕಾದುದಿಲ್ಲ, ನಷ್ಟಮಾಡಬೇಕಾದುದಿಲ್ಲ, ಇಂತಪ್ಪ ಎಡೆಯಿಲ್ಲದ ಪರಿಪೂರ್ಣ ತಾನಾದುದರಿಂದ ತೃಪ್ತರೂಪ ತೃಪ್ತ ತಾನೆ.

*ಕಲಿಯುಗದಲ್ಲಿ ಉಪದೇಶ ಮಾಡುವ ಕಾಳಗುರಿಕೆಯ ಮಕ್ಕಳನೇನೆಂಬೆ ಗುಹೇಶ್ವರಾ* : ಕಲಿಯುಗದಲ್ಲಿ ಉಪದೇಶ ಮಾಡುವ ಸಂಖ್ಯೆ ಬಹಳ ಇದೆ. ಈ ಉಪದೇಶ ಎಂಜಲು ಉಪದೇಶ. ಗುರುಗಳು ಅನ್ನುವುದನ್ನೆ ಶಿಷ್ಯರು ಅನ್ನುವರು. ಮಾತಾಡುವುದರಲ್ಲಿ ವಾಚಾಳಿ ಇದ್ದು, ಸ್ವಲ್ಪ ಸ್ಮರಣ ಶಕ್ತಿ ವಿಶೇಷವಾಗಿದ್ದು, ಹಲವು ಗ್ರಂಥಗಳ ಕಂಠಪಾಠವಿದ್ದು, ಜನರು ಆಕರ್ಷಕ ಮಾಡಿಕೊಳ್ಳುವಷ್ಟು ಬಲವಿದ್ದರೆ ಅದು ವೈಖರಿ ವಾಣಿ. ಅವರು ಗುರುಗಳ ಗುರು, ವಿಶ್ವ ಗುರು, ಅದರಲ್ಲಿ ನಿರಾಶೆ, ಜಿತೇಂದ್ರಿಯತ್ವವಿದ್ದರೆ ಇವರು ಕಲಿಯುಗದಲ್ಲಿ ಉಪದೇಶ ಕೊಡುವ ಮಹಂತರು. ಇವರು, ಗುರುಗಳಾದವರು. ಗುರುಗಳೆ, ಶಿಷ್ಯರಾದವರು. ಇವರಿಂದ ಆರಾರಿಗೂ ಸಮಪ್ರಕಾಶಮಾನವಾದ ತತ್ವದ ಅರಿವು ಆಗಲಿಲ್ಲ, ಕೊನೆಯವರೆಗೆ ಸೀಮಿತ ಬುದ್ಧಿಗೆ ಒಪ್ಪಿದುದರಿಂದ ಇವರು ಕಾಳಗುರಿಕೆಯ ಮಕ್ಕಳು ಎಂದು ಪ್ರಭು ಖಂಡಿಸಿದ್ದಾನೆ. ಗುರುವಾಗಲಿ, ಶಿಷ್ಯರಾಗಲಿ, ಭಕ್ತರಾಗಲಿ, ಜಂಗಮರಾಗಲಿ, ನಿಶಬ್ದವೇದಿಗಳ ಮಾಡುವುದು. ಸಕಲರ ಹೃದಯ ಅರು ಹೃದಯವಾಗಬೇಕು. ನಿಸ್ಸೀಮತ್ವ ಸಿದ್ದಿಸಿ, ಎಲ್ಲೆಲ್ಲೂ ತಮ್ಮ ಕಂಡು ಸ್ವಯಸುಖರಾದುದು ಹಂಗಿಲ್ಲದ ಸಂಯೋಗ ಅಂದರೆ, ಪರಮಾರ್ಥಕ್ಕೆ ಶೋಭೆ, ಗುರುಶಿಷ್ಯತ್ವಕ್ಕೆ ಶೋಭೆ, ಭಕ್ತ ಜಂಗಮರಿಗೆ ಶೋಭೆ, ಈ ಶೋಭೆ ಪ್ರಜ್ವಲಿಸದಿದ್ದಲ್ಲಿ ಉಪದೇಶ ಕೊಡುವ ಕಾಳಗುರಿಕೆ ಮಕ್ಕಳ ನೇನೆಂಬೆ ಎಂದು ಹೇಳಿದುದು.

**58**

**ವೇದ ವೇದಿಸಲರಿಯದೆ ಕೆಟ್ಟವು ,**
**ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು ,**
**ಪುರಾಣ ಪೂರೈಸಲರಿಯದೆ ಕೆಟ್ಟವು ,**
**ಹಿರಿಯರು ತಮ್ಮ ತಾವರಿಯದೆ ಕೆಟ್ಟರು.**

**ತಮ್ಮ ಬುದ್ಧಿ ತಮ್ಮ ನುಂಗಿತ್ತು.**
**ನಿಮ್ಮನೆತ್ತ ಬಲ್ಲರೊ ಗುಹೇಶ್ವರಾ.** ॥ 324 ॥

**ತಾತ್ಪರ್ಯ:** ವೇದದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ, ಹೀಗೆ ನಾಲ್ಕು ವೇದಂಗಳು. ಅವುಗಳಲ್ಲಿ ಋಗ್ವೇದ 21 ಭೇದವುಳ್ಳದ್ದಾಗಿದೆ. ಯಜುರ್ವೇದ 11, ಸಾಮವೇದ ಸಾವಿರ ಭೇದ, ಅಥರ್ವಣ ವೇದ, ಒಂಭತ್ತು ಭೇದವಾಗಿದೆ. ವೇದ ಜ್ಞಾನ ಇದು ಈಶ್ವರಿ ಜ್ಞಾನವಿದ್ದರೂ ಜೀವಿಗಳಿಗಾಗಿ ಇದೆ. ಕಲ್ಪಿತ ಪುರುಷನಿಗಾಗಿ ಹೇಳಿದೆ. ಮರವಿಂಗೆ ವೇದವಿದೆ. ಅರುವಿಂಗರುವಾಗಿಪ್ಪ ಘನಕ್ಕೆ ಅದಕ್ಕಾವ ವೇದತರಬೇಕು. ನಿಜ ಚೈತನ್ಯಕ್ಕೆ ಅದಾವ ವೇದ ತರಬೇಕು ? ಇದು ಕಾರಣ ತಿಳಿದವನಿಗೂ ವೇದ ಹೇಳಲಿಲ್ಲ, ತಿಳಿಯದವನಿಗೂ ವೇದ ಹೇಳಲಿಲ್ಲ, ಮಧ್ಯಸ್ಥ ಹೃದಯಕ್ಕೆ ಮಾತ್ರ ಪರಮ ಲಾಭವುಳ್ಳದ್ದಿದೆ.

ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು : ಶಾಸ್ತ್ರವು ವಿಧೇಯ ವಿಶೇಷಣ, ನಿಷೇಧ ವಿಶೇಷಣದಿಂದ ಸಾಧಿಸುತ್ತದೆ. ಒಂದು ಲಕ್ಷಣ ಸಚಿತ್ ಆನಂದ, ನಿತ್ಯ ಪೂರ್ಣ ಎಂದು ತಿಳಿಸುವುದು ವಿಧೇಯ ವಿಶೇಷಣ. ಗುಣತ್ರಯಂಗಳು ಅಲ್ಲ, ಗುಣಾತೀತವಾದುದು. ಸಾಕ್ಷಿಯಾದುದು ಅಸಂಗ, ಆತ್ಮ ಸ್ವಯಂಪ್ರಕಾಶ, ಕೂಟಸ್ಥ, ಅಖಂಡ, ದೃಕ್ ಎಂದು ಬೋಧಿಸುವುದು. ಗುಹೇಶ್ವರ ಲಿಂಗ ಹಂಗಿಲ್ಲದ ಸಂಯೋಗ. ಅದಕ್ಕೆ ವಿಧೇಯ ವಿಶೇಷಣದ ಹಂಗಿಲ್ಲ, ನಿಷೇಧ ವಿಶೇಷಣದ ಹಂಗಿಲ್ಲ, ಇವೆರಡೂ ವಿಶೇಷಣ ಯಾವುದರಿಂದ ಸಿದ್ಧವಾಗುವುವು ? ತಮ್ಮಷ್ಟಕ್ಕೆ ತಾವೆ ಸಿದ್ಧವಾಗುವವು. ಆವುದು ನುಡಿಗೆಡೆಗೊಡದ ಘನವಾಗಿದೆ, ಅದರಿಂದ ಇವೆಲ್ಲವು ಸಿದ್ಧವಾಗುವುವು. ಅದನ್ನು ಮಾತ್ರ ಸಿದ್ಧ ಮಾಡಲರಿಯದ್ದರಿಂದ ಇವು ಹೆತ್ತರಿವು ಆಗುವುವು. ಅದಕ್ಕಾಗಿ ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು ಎಂದು ಹೇಳಿಹರು.

ಪುರಾಣ ಪೂರೈಸಲರಿಯದೆ ಕೆಟ್ಟವು : ಪುರಾಣಗಳ ಆದಿ ನಿರ್ಮಾತೃ ವೇದ ವ್ಯಾಸರು. ಇವರು ಹದಿನೆಂಟು ಪುರಾಣಗಳ ರಚಿಸಿಹರು. ಇವರ ಪುರಾಣದ ವೈಶಿಷ್ಟ್ಯ ಹೀಗೆ ಇದೆ. ಕಾರ್ಯಕಾರಣ ಭಾವವಿಟ್ಟುಕೊಂಡು ರಚಿಸಿಹರು. ಕಾರಣ ದೇವನನ್ನು ಪೂಜ್ಯನನ್ನಾಗಿ ಮಾಡಿಹರು. ಕಾರ್ಯ ದೇವನನ್ನು ಪೂಜಕನನ್ನಾಗಿ ಮಾಡಿಹರು. ಉದಾ: ಶಿವಪುರಾಣವಿದೆ ಎಂದು ಇಟ್ಟುಕೊಳ್ಳಿ, ಶಿವನು ಅಧಿಷ್ಠಾನ ಮೂರ್ತಿಯು. ಹರಿಬ್ರಹ್ಮ, ಗಣಪತಿ, ಶಕ್ತಿ ಮೊದಲಾದವರು ಕಾರ್ಯಬ್ರಹ್ಮರು. ಇವರು ಪೂಜ್ಯಕರಾಗಿಹರು. ವಿಷ್ಣು ಪುರಾಣದಲ್ಲಿ ವಿಷ್ಣುವೆ ಅಧಿಷ್ಠಾನ ಮೂರ್ತಿ. ಅಲ್ಲಿ ಶಿವ, ಶಕ್ತಿ, ಗಣಪತಿ, ಬ್ರಹ್ಮ ಮೊದಲಾದವರು ಕಾರ್ಯ ಬ್ರಹ್ಮರು. ಇವರು ವಿಷ್ಣುವಿನ ಪೂಜ್ಯಕರಾಗಿರುವರು.

ಬ್ರಹ್ಮ ಪುರಾಣದಲ್ಲಿ ಬ್ರಹ್ಮವೆ ಅಧಿಷ್ಠಾನ ಮೂರ್ತಿ, ಅಲ್ಲಿ ಶಿವ, ಶಕ್ತಿ, ಹರಿ, ಗಣಪತಿಗಳು ಕಾರ್ಯಬ್ರಹ್ಮರು. ಇವರು ಪೂಜಕರಾಗಿಹರು. ಇದೆ ಮೇರೆಗೆ ಕಾರ್ಯ ಬ್ರಹ್ಮ, ಕಾರಣ ಬ್ರಹ್ಮ ಎಂದು ಕಲ್ಪಿಸಿ ಪುರಾಣ ರಚಿಸಿಹರು. ಇದರಿಂದ ಏನೊಂದಾಗದ ಘನವ ಇವು ತಿಳಿಸಲು ಅರಿಯವು. ಇದು ಕಾರಣ, ಪುರಾಣ ಪೂರೈಸಲರಿಯದೆ ಕೆಟ್ಟವು ಎಂದು ಹೇಳಿಹರು.

ಹಿರಿಯರು ತಮ್ಮ ತಾವರಿಯದೆ ಕೆಟ್ಟರು : ಹಿರಿಯರೆಂದರೆ ಯಾರು ? ಇವರು ಬುದ್ಧಿಮಹಾನ್ ಪುರುಷರು. ಬುದ್ಧಿಗೆ ಮಹತ್ವ ಕೊಟ್ಟವರು. ಅದಾವ ಬುದ್ಧಿ, ಲೌಕಿಕ ಬುದ್ಧಿ, ಪರೋಪಕಾರಾಯ ಪುಣ್ಯಾಯ ಪಾಪಾಯ ಪರಪೀಡನಂ ಎಂಬ ಧರ್ಮಾಚರಣೆಯುಳ್ಳವರು. ಪರರಿಗೆ ಕಾಯ, ವಾಣಿ ಮನಸ್ಸಿನಿಂದ ನೋವು ಮಾಡುವುದಿಲ್ಲ, ವಿನಯ ಶೀಲರು, ನಿರಾಡಂಬರರು, ನಿಗರ್ವಿಗಳು, ಸ್ವಪತ್ನಿವ್ರತರು, ದೇವರು ಕೊಟ್ಟುದರಲ್ಲಿ ಸಂತೋಷವಾಗುವವರು, ಗುರು-ಹಿರಿಯರನ್ನು, ಮಾತಾ-ಪಿತೃಗಳನ್ನು ಪೂಜ್ಯರಾಗಿ ಕಾಣುವವರು. ಹೀಗೆ ನೀತಿಯುಳ್ಳವರಾದರೂ ಪುಣ್ಯವಾವುದು, ಪಾಪಾವಾವುದು ಎಂಬ ನಿಜವನ್ನರಿಯದವರು. ಇವರಿಗೆ ಸರ್ವಾರ್ಪಣ ಜ್ಞಾನವಿಲ್ಲ, ಅನನ್ಯ ಭಕ್ತಿಯಿಲ್ಲ, ಸದ್ಗುರು ದರ್ಶನವಿಲ್ಲ, ಲಿಂಗಾಂಗ ಸಮರಸ ಜ್ಞಾನವಿಲ್ಲ, ಜ್ಞಾನದ ಕಡೆ ಮುಖ ಇಲ್ಲದವರು; ಕರ್ಮಿಗಳು; ಕ್ರಿಯೆಯಲ್ಲಿಯೆ ಸದ್ಗತಿಯ ಹುಡುಕುವವರು. ಇವರಿಗೆ ತಾನಾರೆಂಬ ಜ್ಞಾನವಿಲ್ಲದ ಜ್ಞಾನಶೂನ್ಯರು, ನಾನಾರೆಂಬ ವಿವೇಕವಿಲ್ಲದವರು, ದೇವನಿದ್ದಾನೆಂಬ ಸಾಮಾನ್ಯ ಜ್ಞಾನವುಳ್ಳವರು. ಪೂರ್ಣನು, ಸಚ್ಚಿದಾನಂದನು, ನಿತ್ಯನು, ಅಖಂಡನು ಎಂಬ ಜ್ಞಾನವಿಲ್ಲದವರು. ಇಂತಪ್ಪ ಹಿರಿಯರು ಪರೋಪಕಾರವಿಲ್ಲವರಾದರೂ ಸತ್ಕ್ರಿಯವಂತರು, ತಮ್ಮ ತಾವರಿಯದೆ ಕೆಟ್ಟರು.

ತಮ್ಮ ಬುದ್ಧಿ ತಮ್ಮನ್ನೇ ನುಂಗಿತ್ತು ಗುಹೇಶ್ವರಾ : ಆರಿಗೆ ಬುದ್ಧಿಯೆ ಶ್ರೇಷ್ಠವಾಗಿದೆ ಅವರದು ಗುಣತ್ರಯಂಗಳ ಒಪ್ಪಿದ ಬುದ್ಧಿ, ಸತ್ಕರ್ಮಗಳ ಒಪ್ಪಿದ ಬುದ್ಧಿ, ಜಪ, ತಪ, ಧ್ಯಾನಾದಿಗಳ ಒಪ್ಪಿದ ಬುದ್ಧಿ, ಪಾಪದೋಷ, ಚಂಚಲ ದೋಷವ ಕಳಕೊಂಡ ಬುದ್ಧಿ ಲಿಂಗಾಂಗ ಸಮರಸ ಜ್ಞಾನದಿಂದ ದೂರಾದ ಬುದ್ಧಿ, ಇದರಿಂದ ಬುದ್ಧಿಗನುಸಾರಗತಿಯೆ ಸಿದ್ಧವಾಯಿತಲ್ಲದೆ ತಾನಾರೆಂಬ ತನ್ನಿರುವಿನ ಘನವು ತನಗೆ ಪ್ರಜ್ವಲಿಸಲಿಲ್ಲ, ಕಲ್ಪಿತನೆ ಆದನಲ್ಲದೆ ಪರಮನಾಗಲಿಲ್ಲ,

ತಮ್ಮ ಬುದ್ಧಿ ತಮ್ಮನ್ನೇ ನುಂಗಿತ್ತು ನಿಮ್ಮನೆತ್ತ ಬಲ್ಲರು, ಗುಹೇಶ್ವರಾ. ಆರು ಬುದ್ಧಿ ತಾವಾಗಿಲ್ಲ, ಅವರು ನಿಮ್ಮನ್ನು ಬಲ್ಲವರು, ಗುಹೇಶ್ವರ, ಲಿಂಗವೆ ತಾವಾದವರು. ಅವರ ಬುದ್ಧಿ ಅವರನ್ನು ನುಂಗಲಿಲ್ಲ, ಅವರೆ ಬುದ್ಧಿಯನ್ನು ಭಸ್ಮ ಮಾಡಿಹರು. ಆರು ಗುಹೇಶ್ವರ ಲಿಂಗವರಿಯಲಿಲ್ಲ ಅವರಿಗೆ ತಮ್ಮ ಬುದ್ಧಿ ತಮ್ಮನ್ನ ನುಂಗಿತ್ತು, ನಿಮ್ಮನ್ನು ಆವಾಗ ತಿಳಿಯುವುದು ಎಂದು ಹೇಳಿಹರು.

**59**

**ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು,**
**ಲಕ್ಷಕ್ಕೊಮ್ಮೆ ನುಡಿಯಲಾಗದು, ಕೋಟಿಗೊಮ್ಮೆ ನುಡಿಯಲಾಗದು.**
**ಸುಡಲಿ-ಆವಂದಿರ ಕೂಡೆ ಮಾರಿ ಹೋಗಲಿ.**
**ಗುಹೇಶ್ವರಾ ನಿಮ್ಮ ಶರಣರಲ್ಲದೊಡನೆ,**
**ಬಾಯಿದೆರೆಯಲಾಗದು.** || 321 ||

**ತಾತ್ಪರ್ಯ:** ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು:

ಸತ್ಯವಿಲ್ಲದವರು ಯಾರು ? ಆರಲ್ಲಿ ಸತ್ಯವಿಲ್ಲ ಅವರು ಸತ್ಯ ಆರಲ್ಲಿ ಇಲ್ಲವೆನ್ನಬೇಕು ಮತ್ತು ಸತ್ಯ ಆವುದಕ್ಕನ್ನಬೇಕು ? ವರ್ಣಾಶ್ರಮಂಗಳು ಸತ್ಯವೆನಬೇಕೊ ? ವರ್ಣಾಶ್ರಮಧರ್ಮಂಗಳು ಆಚರಿಸುವದು ಸತ್ಯವೆನಬೇಕೊ ? ಯಮ ನಿಯಮಂಗಳಿಗೆ ಸತ್ಯವೆನಬೇಕೊ ? ಅಥವಾ ಪ್ರಾಣಾಯಾಮ ಪ್ರತ್ಯಾಹಾರ ಸಾಧನಗೆ ಸತ್ಯವೆನಬೇಕೊ ? ಧಾರಣ ಧ್ಯಾನ ಸಮಾಧಿಗಳಿಗೆ ಸತ್ಯವೆನಬೇಕೊ ? ದೇವನ ನಾಮ ಸತ್ಯವೆನಬೇಕೊ ? ಸತ್ಯವೆಂಬುದು ವಾಙ್ಮನಕ್ಕಗೋಚರ ಹೇಳಬಾರದ ಘನ. ತೋರಲೆಂದೇನೊ ? ತೋರಬಾರದ ಘನ ಹೇಳಲೆಂದೇನೊ ? ಸರಸಂಧಾನದ ಪರಿಯಲ್ಲ.

*ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ:* ತೋರಿ ಇಲ್ಲವಾಗುವುದೆಲ್ಲವು ಸತ್ಯವಾಗದು, ಆವುದು ತೋರದಡಗದ ಘನವಾಗಿದೆ. ಅದು ತೋರಿಸಲು ಬರುವುದಿಲ್ಲ, ಬಟ್ಟಿಡಲು ಬರುವುದು ಇಲ್ಲ, ಸತ್ಯ, ಅಹಿಂಸೆ ಬ್ರಹ್ಮಚರ್ಯ, ಆಸ್ತೇಯ, ಅಪರಿಗ್ರಹ ಈ ಆಚಾರವ ಆಚರಿಸಹೋದವರಿಗೂ ಸತ್ಯದ ದರ್ಶನವಿಲ್ಲ, ಜಪ, ತಪ, ಸ್ವಾಧ್ಯಾಯ ಈಶ್ವರಪ್ರಣಿದಾನಗಳ ಆಚರಿಸಿದರೂ ಸತ್ಯದ ದರ್ಶನವಿಲ್ಲ, ಧ್ಯಾನಧಾರಣ ಸಮಾಧಿ ಮಾಡಹೋದವರಿಗೂ ಸತ್ಯದ ದರ್ಶನವಿಲ್ಲ. ಪತ್ರೆನೇಮದವರಿಗೂ ಸತ್ಯದರ್ಶನವಿಲ್ಲ, ಲಿಂಗಾರ್ಚಕರಿಗೂ, ಜಂಗಮಾರ್ಚಕರಿಗೂ ಜಂಗಮ ತೃಪ್ತಿ ಮಾಡುವವರಿಗೂ ಸತ್ಯದ ದರ್ಶನವಿಲ್ಲ, ಪ್ರಪಂಚ ಸತ್ಯವೆನ್ನುವವರಿಗೂ ಸತ್ಯ ದರ್ಶನವಿಲ್ಲ, ಪ್ರಪಂಚ ಮಿಥ್ಯೆ ಎನ್ನುವ ವಿವೇಕಿಗಳಿಗೂ ಸತ್ಯದರ್ಶನವಿಲ್ಲ, ವೈರಾಗ್ಯವಂತರಿಗೂ ಇಲ್ಲ, ಪರಮಾರ್ಥ ಸತ್ಯವೆನ್ನುವ ಮಾತಿನ ಮಾತಿನ ಮಹಾಂತರಿಗೂ ಸತ್ಯದರ್ಶನವಿಲ್ಲ, ಪರಮಾರ್ಥ ಮಿಥ್ಯೆ ಎನ್ನುವ ಇದಲ್ಲ, ಇದಲ್ಲವೆಂದು ನೇತಿ ಮಾಡುವ ನೇತಾತ್ಮಕ ಜ್ಞಾನದವರಿಗೂ ಸತ್ಯದರ್ಶನವಿಲ್ಲ, ಸತ್ಯವೆಂಬುದು ಅಬಾಧಿತ ತತ್ವ, ಇದು ಎಲ್ಲೆಲ್ಲೂ ಭರಿತ ತತ್ವ ಇದು ಅರುವಿನಿಂದ ಅರಿದಿಹೆನೆಂಬುವನಿಗೂ ನಿಲುಕದ ತತ್ವ, ಭಾವದಿಂದ ಭಾವಿಸಿಹೆನೆಂಬುವನಿಗೂ ನಿಲುಕದ ತತ್ವ, ಜ್ಞಾನದಿಂದ ಅರಿದಿಹೆನೆಂಬುವವನಿಗೂ ನಿಲುಕದ ತತ್ವ, ಇದು ತುಂಬಿದುದು ತುಳಕದು, ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ, ಕಿವಿ ತುಂಬಿದ ಬಳಿಕ ಕೇಳಲಿಲ್ಲ, ಕೈಯ ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯಲಿಲ್ಲ ಕೂಡಲ ಸಂಗಮದೇವಯ್ಯಾ. ಬಸವರಸರು, ಬಸವಾದಿ ಪ್ರಮಥರು, ಸತ್ಯವರಿಯ ಹೋದವರು. ಅವರ ದಿವ್ಯದೃಷ್ಟಿಯಲ್ಲಿ ಸತ್ಯವೊಂದು ಬೇರೆ, ತಾನೊಂದು ಬೇರೆಯಾಗಿ ಭೇದಜ್ಞಾನಿಗಳಾಗಿ ನೋಡ ಹೋಗಲಿಲ್ಲ, ಸತ್ಯ ತಾನು ಒಂದೆ ಎಂಬ ಅಭೇದ ಜ್ಞಾನಿಗಳಾಗಿ ನೋಡ ಹೋಗಲಿಲ್ಲ, ಸತ್ಯವೆಂಬುದು ನಿಸ್ಸೀಮವು, ಅಖಂಡಿತವು, ಅನುಪಮವು, ಅರಿಯ ಹೋದವರಿಗೆ ಸದ್‌ಜ್ಞಾನ ಭರಿತವು, ಈ ಸದ್ ಜ್ಞಾನಭರಿತವೆಂಬುದು ಸತ್ಯವು.

ಸದ್ ಜ್ಞಾನಿಗಳು ಭರಿತರಾದುದರಿಂದ ಅವರವು ತುಂಬಿದ ಕಣ್ಣು, ತುಂಬಿದ ಕಿವಿ, ತುಂಬಿದ ಕೈಯ, ತುಂಬಿದ ಮನ, ಇವರು ಅರುವಿಂಗರುವಾಗಿಹ ಘನವಂತರು. ನುಡಿಗೆಡೆಗೊಡದ ಘನವಂತರು. ಅತೀಂದ್ರಿಯರು. ಶಬ್ದಮುಗ್ಧರು. ತನುವಿನ ತನುವಾಗಿಹರು, ಪ್ರಾಣದ ಪ್ರಾಣವಾಗಿಹರು, ಮನದ ಮನವಾಗಿಹರು, ಎಡೆಯಿಲ್ಲದ ಪರಿಪೂರ್ಣರು. ಇದು ಕಾರಣ ಅವರ ಮಾತೆಂಬುದು ಜ್ಯೋತಿರ್ಲಿಂಗ ನುಡಿದು ನಿಶಬ್ದರು, ನಡೆದು ನಿರ್ಗಮನಿ, ಸುಳಿವುಡೆ ಸೂತಕಿಗಳಲ್ಲ, ಗಮನವಿಲ್ಲದೆ ಸುಳಿವವರು ನಿರ್ಗಮನಿಗಳಾಗಿ

ನಿಂತವರು. ಅವರಿಗೆ ಬೇಕಾದುದಿಲ್ಲ, ಬೇಡಾದುದಿಲ್ಲ, ಅಲ್ಲಾದುದಿಲ್ಲ, ಅಹುದಾದುದಿಲ್ಲ, ಸಂಗಿಗಳಲ್ಲ, ನಿಸ್ಸಂಗಿಗಳಲ್ಲ, ಬಿಟ್ಟವರಲ್ಲ, ಹಿಡಿದವರಲ್ಲ, ಅಖಂಡ ಕಣ್ಣು ಇವು ತುಂಬಿದ ಕಣ್ಣು, ಏನನ್ನು ನೋಡುವುದು ? ಏನನ್ನು ನೋಡದಿರುವುದು ? ಎಲ್ಲೆಲ್ಲೂ ನಿರೂಪ ದರ್ಶನ. ಲಿಂಗಕ್ಕೆ ಲಿಂಗವಾಗಿಹ ತಾನು, ಏನನ್ನು ನೋಡಿದರೂ ತನ್ನನ್ನೆ ನೋಡಿದುದು, ಸತ್ಯವದು ಅಭಾದಿತವು.

ಇದು ಸತ್ಯಾಸತ್ಯವೆಂಬುದಕ್ಕೂ ನಿಲುಕದ ತತ್ವ. ಎರಡರ ಮಧ್ಯದಲ್ಲಿ ಒಂದು ವಸ್ತು ಉಂಟು, ಅದು ಬೇಗ ಅರಿಯುವುದು, ಪ್ರಪಂಚ ಪರಮಾರ್ಥದವರ ಮಧ್ಯ ಒಂದು ವಸ್ತುವಿದೆ. ಸತ್ಯ ಮಿಥ್ಯೆ ಎಂಬುವರ ಮಧ್ಯದಲ್ಲಿ ಒಂದು ವಸ್ತುವಿದೆ. ಬೇಕು, ಬೇಡ ಎನ್ನುವವರ ಮಧ್ಯದಲ್ಲಿ, ಅಹುದು, ಅಲ್ಲ ಎನ್ನುವರ ಮಧ್ಯದಲ್ಲಿ, ಪುಣ್ಯ-ಪಾಪದವರ ಮಧ್ಯದಲ್ಲಿ, ಅಜ್ಞಾನ ಜ್ಞಾನದ ಮಧ್ಯದಲ್ಲಿ, ಬಂಧಮೋಕ್ಷದ ಮಧ್ಯದಲ್ಲಿ, ಗುರು-ಶಿಷ್ಯರ ಮಧ್ಯದಲ್ಲಿ, ಮರವು-ಅರುವಿನ ಮಧ್ಯದಲ್ಲಿದ್ದ ವಸ್ತುವೆ ಸತ್ಯ. ಈ ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ, ಲಕ್ಷಕ್ಕೊಮ್ಮೆ, ಕೋಟಿಗೊಮ್ಮೆ ನುಡಿಯಲಾಗದು. ಅವರ ಸಹವಾಸವು ವ್ಯರ್ಥವು, ತನ್ನಲ್ಲಿದ್ದ ಸತ್ಯವ ತಾ ನೋಡದೆ, ಹೊರಗೆ ನೋಡುವವರು ಅವರು ಮಾತಿನ ಮಾತಿನ ಮಹಾಂತರು, ಅವರೊಡನೆ ನುಡಿವುದೆಂದರೆ ಅವರ ಸಹವಾಸದಿಂದ ನಮ್ಮ ಸರ್ವನಾಶ, ಸದ್‌ಜ್ಞಾನಭರಿತವಾದುದು ನಾಶ, ಅರುಹೃದಯ ನಾಶವಾಗುವುದರಿಂದ ಅವರೊಡನೆ ಮಾತಾಡಕೂಡದು ಗುಹೇಶ್ವರಾ, ನಿಮ್ಮ ಶರಣರಲ್ಲದವರೊಡನೆ ಬಾಯ ತೆರೆಯಲಾಗದು ಶರಣರು ಸತ್ಯಾಸತ್ಯದ ಮಧ್ಯದಲ್ಲಿದ್ದ ವಸ್ತುವ ಅರಿತವರು ಅವರನ್ನು ಬಿಟ್ಟು ಯಾರಾರ ಕೂಡ ಬಾಯ ತೆರೆಯಲಾಗದು ಎಂದು ಹೇಳಿಹರು.

**60**

**ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯನು,**
**ಉಪಚಾರದ ಲಿಂಗ, ಉಪಚಾರದ ಜಂಗಮವು.**
**ಉಪಚಾರದ ಪ್ರಸಾದವ ಕೊಂಡು, ಗುರುವಿಂಗೆ ಭವದ ಲೆಂಕನಾಗೆ,**
**ಅಂಧಕನ ಕೈಯ ಅಂಧಕ ಹಿಡಿದಂತೆ-**
**ಇವರಿಬ್ಬರೂ ಹೊಲಬುಗೆಟ್ಟರು ಕಾಣಾ ಗುಹೇಶ್ವರಾ.** ॥ 332 ॥

**ತಾತ್ಪರ್ಯ** : ಉಪಚಾರ : ಬಾಹ್ಯ ಉಪಚಾರ ಇದು ಎರಡಾಗಿ ಕಾಣುವ ದೃಷ್ಠಿ ಇಲ್ಲಿ ಎರಡೊಂದಾಗುವುದು ಬಹುದೂರವಾದುದು. ಇಲ್ಲಿ ಗುರುವಿನ ದರ್ಶ ಶಿಷ್ಯನಿಗಿಲ್ಲವಾಗಿದೆ. ಶಿಷ್ಯನದರ್ಶನ ಗುರುವಿಗಿಲ್ಲವಾಗಿದೆ. ಗುರು-ಶಿಷ್ಯರು ಅತಿ ಹತ್ತಿರವಿದ್ದರೂ ಗುರುವಿನೊಡನೆ ಶಿಷ್ಯಸೇರಿದಂತಾಗಿದೆ. ಶಿಷ್ಯನ ಸತ್ಕಾರ ಸೇವೆಗೆ ಗುರು ಒಲಿದಂತಾಗಿದೆ. ಗುರುವಾಗಿದ್ದರೂ ಗುರುವಾದವ ತಾನಾರು ? ಎಂಬುದು ಗುರುವಿಂಗೆ ವಿದಿತವಿಲ್ಲ, ಶಿಷ್ಯನಾದವನು ಗುರುವಾರು, ತಾನು ಆರು ಎಂಬುದು ವಿದಿತವಿಲ್ಲವಾಗಿದೆ. ಬಾಹ್ಯ ಉಪಚಾರ ಸಾಕಷ್ಟು ಸತ್ಕಾರ, ಸಾಕಷ್ಟು ಸೇವೆ, ಸಾಕಷ್ಟು ನಮ್ರತೆ, ವಿನಯ ಭಾವ

ನೋಡುವವರಿಗೆ ಇವರ ಉಪಚಾರ ಕಂಡು ಆಶ್ಚರ್ಯವಾಗುವ ವಿಷಯ. ಇವರಲ್ಲಿ ಇಷ್ಟು ಅನ್ಯೋನ್ಯತೆ ಬೆಳೆದಿದೆ. ಇವರಿಗೆ ಬಾಹ್ಯ ಪ್ರೇಮ, ಬಾಹ್ಯ ಭಾವ, ಬಾಹ್ಯ ಭಕ್ತಿ, ಬಾಹ್ಯ ನಿಷ್ಠೆ, ಬಾಹ್ಯ ಪೂಜೆ, ಬಾಹ್ಯ ಸತ್ಕಾರ, ಬಾಹ್ಯದ ಫಲಪದಂಗಳು. ನಿಜಜ್ಞಾನ ಇವರುಗಳಿಗಿಲ್ಲವಾದುದರಿಂದ ಗುರುವಿಂಗೆ ನಿಷ್ಠಾಭಕ್ತರಾಗಲಿಲ್ಲ, ಅರುವಿಂಗೆ ನಿಷ್ಠಾವಂತ ಭಕ್ತರಾಗಲಿಲ್ಲ, ಭವದ ನಿಷ್ಠಾವಂತ ಭಕ್ತರಾದರು, ಭವಕ್ಕೆ ದಾನರಾಗಿಹರು. ಏಕೆಂದರೆ ಉಪಚಾರಕ್ಕೆ ಸರಿಹೋಗರಲ್ಲದೆ ತಮ್ಮೀರ್ವರ ಮಧ್ಯದಲ್ಲಿ ಗುರುವಿನ ಗುರು ಇಹನು, ಆ ಘನ ಗುರು ತಿಳಿಯ ಹೋಗಲಿಲ್ಲ, ತಿಳಿಯದ್ದರಿಂದ ಉಪಚಾರದ ಬೋಧ ಗುರುವಿನದು, ಉಪಚಾರದ ಸತ್ಕಾರ ಸೇವೆ ಶಿಷ್ಯನದು,  ಹೀಗಾಗಿ ಭವದಲೆಂಕರಾದರು. ಇಂತಪ್ಪ ಶಿಷ್ಯಂಗೆ ಉಪಚಾರಲಿಂಗ, ಉಪಚಾರದ ಜಂಗಮ, ಉಪಚಾರದ ಪ್ರಸಾದವಕೊಂಡು ಗುರುವಿಂಗೆ ಭವದಲೆಂಕನಾಗೆ ಅಂಧಕನ ಕೈ ಅಂಧಕ ಹಿಡಿದಂತೆ ಇವರಿಬ್ಬರು ಹೊಲಬುದಪ್ಪಿ ಕೆಟ್ಟರು ಗುಹೇಶ್ವರಾ.

ಉಪಚಾರದ ಲಿಂಗ, ಉಪಚಾರದ ಜಂಗಮವು: ಪೂಜಾಲಿಂಗವೆ ಅಂಗದ ಮೇಲೆ ಧರಿಸಿರುವ ಲಿಂಗವೆ ಉಪಚಾರ ಲಿಂಗ. ಇದು ಸತ್ಕಾರ ಸೇವೆ ಮಾಡಿಸಿಕೊಳ್ಳುವ ಲಿಂಗ. ಭಕ್ತರಿಗೆ ಈ ಪೂಜಾ ಲಿಂಗದಿಂದ ಸತ್ಕಾರ ಸೇವೆಯ ಜ್ಞಾನವೆ ಲಭ್ಯವಾಯಿತ್ತು. ಲಿಂಗಯ್ಯನಿಗೆ ಮಡಿ ನೀರು, ಭಸ್ಮ, ಗಂಧಧೂಪ, ದೀಪ, ಪತ್ರಿ, ಪುಷ್ಪ , ಮಂತ್ರ ಇವುಗಳಿಂದ ಭಕ್ತರು ಸೇವೆ ಸಲ್ಲಿಸುವುದು. ಇದರಿಂದ ಈ ಪೂಜಾಲಿಂಗಯ್ಯನು  ಭಕ್ತರಿಗೆ ಬೇಡಿದಿಷ್ಟಾರ್ಥವ ಕೊಡುವುದು.

ಇದೇ ರೀತಿಯಲ್ಲಿ ಉಪಚಾರ ಜಂಗಮನಿಗೆ ತನುವಿನಿಂದ ಸೇವೆ ಸತ್ಕಾರವ ಮಾಡುವುದು. ಮನದಿಂದಲೂ ಧನದಿಂದಲೂ ಸತ್ಕಾರ ಸೇವೆ ಮಾಡುವುದು. ಜಂಗಮ ದೇವನು, ತನ್ನ ತಪಸ್ವಿ ಮತ್ತು ಲಿಂಗಾರ್ಚನೆ ಪ್ರಭಾವದಿಂದ ಭಕ್ತರ ಯೋಗ ಕ್ಷೇಮ ಕಾಪಾಡುವುದು. ಅಂದರೆ ಐಹಿಕಭೋಗ ಸಂಗ್ರಹ ಬೆಳೆದಂತೆ ಪೂಜ್ಯರುಗಳ ಯೋಗ ಕ್ಷೇಮವನ್ನು ಸದಾ ಕಾಪಾಡುತ್ತಿದೆ ಎಂದು ಹೇಳುವುದು.

ಉಪಚಾರದ ಪ್ರಸಾದ : ಜಂಗಮಯ್ಯನಿಗೆ ಕೊಡುವುದು ಪಂಚಾಮೃತ ಸವಿಸವಿಯಾದ ಆಹಾರ, ತುಪ್ಪದಲ್ಲಿ ತಯ್ಯಾರಾದ ಸಿಹಿ ಅಡಿಗೆ, ಇದುವೆ ಇವರ ಉಪಚಾರದ ಪ್ರಸಾದ, ಗುರುವಿನ ಮಠಕ್ಕೆ ಶಿಷ್ಯರು ಬಂದರೆ ಅವನನ್ನು ಒಳ್ಳೆ ಪ್ರೀತಿಯಿಂದ ಬರ ಮಾಡಿಕೊಳ್ಳುವುದು. ಆತನ ಸತಿ, ಸುತ, ಆಪ್ತರ ಯೋಗ ಕ್ಷೇಮ ಕೇಳುವರು. ಅವರು ಶ್ರೀಮಂತರಾಗಿದ್ದರೆ ಉತ್ತುತ್ತಿ, ದ್ರಾಕ್ಷಿ, ಕಲ್ಲು ಸಕ್ಕರೆ ಇತ್ಯಾದಿಗಳನ್ನು ಪ್ರಸಾದ ರೂಪದಲ್ಲಿ ಅವರಿಗೆ ಕೊಡುವುದು. ಶಿಷ್ಯರ ಮನೆಗೆ ಗುರುದೇವನಾಗಲಿ, ಜಂಗಮ ದೇವನೆ ಬರಲಿ, ಅವರಿಗೆ ತಮ್ಮ ಮನೆಯಲ್ಲಿ ಆದರಾತಿಥ್ಯವ ಮಾಡುವುದಲ್ಲದೆ ನಮ್ರಭಾವದಿಂದ ಆಜ್ಞಾಧಾರಕರಾಗಿ ಅವರ ಲಿಂಗಾರ್ಚನೆ ಮಾಡಿಸಿ, ಪಂಚಾಮೃತ ಉಣಿಸಿ, ಅವರಿಗೆ ಕಾಣಿಕೆಯನಿತ್ತು, ಬಡವರ ಮನೆಗೆ ಭಾಗ್ಯ ಬಂದಂತಾಗಿದೆ. ನಮ್ಮ ಸುಕೃತವೆ ತಮ್ಮ ಪಾದ ಸೇವೆ ದೊರೆತದ್ದು ಎಂದು ದೀರ್ಘದಂಡಪ್ರಣಾಮಗಳನ್ನೀಯುವುದು. ಇದು ಉಪಚಾರದ ಆಟ. ಭವದಲೆಂಕಿಗರಾಗಿಹ ಆಟ, ಅಂಧಕನ ಕೈಯ ಅಂಧಕ ಹಿಡಿದಾಟ, ಇವರಾರಿಗೂ

ಭವದಿಂದ ಬಿಡುಗಡೆಯಾಗಬೇಕೆನ್ನುವ ಇಚ್ಛೆಯು ಸಹ ಇಲ್ಲ, ನೀವು ಪರಂಪರೆಯಾಗಿ ಗುರು, ಜಂಗಮರಾಗಿ ಇದೇ ಪೀಠಕ್ಕೆ ಅಧಿಕಾರಿಗಳಾಗಿ ಜನ್ಮವೆತ್ತುತ್ತಬರುವುದು. ನಾವು ಈ ಮಠದ ಪರಂಪರೆಯ ಶಿಷ್ಯರಾಗಿ ಈ ಐಹಿಕ ಭೋಗವ ಭೋಗಿಸಲು ಜನ್ಮ ಎತ್ತುತ್ತ ಬರುವುದು ಎಂದು ಭವದದಾಸರಾಗಿ ಕೆಟ್ಟಿಹರು ಎಂದು ಹೇಳಿಹರು.

**61**

**ಲಿಂಗ-ಜಂಗಮದ ಸಂಬಂಧ ಸಯವ ಮಾಡಿಹೆನೆಂಬರು.**
**ಗುರು ಮುನ್ನವೊ ? ಶಿಷ್ಯ ಮುನ್ನವೊ ?**
**ಆವುದು ಮುನ್ನವೆಂದರಿಯರು ನೋಡಾ !**
**ಇದು ಕಾರಣ-ಆವ ಸಂಬಂಧವನರಿಯರು ಗುಹೇಶ್ವರಾ.** ॥ 333 ॥

**ತಾತ್ಪರ್ಯ :** *ಲಿಂಗ ಜಂಗಮದ ಸಂಬಂಧ ಸಯವ ಮಾಡಿಹೆನೆಂಬರು:* ಆವುದನ್ನು ಸಯವ ಮಾಡಿಹೆನೆನ್ನುವರು, ಲಿಂಗ, ಜಂಗಮು ಸಂಬಂಧ ಸಯವ ಮಾಡಿಹೆನೆನ್ನುವರು. ಲಿಂಗ, ಜಂಗಮ ಅರಿತು ಅನ್ನುವಿರಾ ? ಅರಿಯದೆ ಅನ್ನುವುದು. ಲಿಂಗ, ಜಂಗಮವೆಂಬುದು ತಾನೆ ಇರುವಲ್ಲಿ ತಾನಿದ್ದು ತನ್ನನ್ನು ಆರಾದರೂ ಮಾಡಿಕೊಂಡವರು ಇರುವರೊ ? ಎರಡಾದಲ್ಲಿ ಸಂಬಂಧವಾದುದು ಒಪ್ಪಬಹುದು, ತನಗಿಂತ ಲಿಂಗ, ಜಂಗಮ ಬೇರಾಗಿರಬೇಕು. ಅಲ್ಲಿ ಸಂಬಂಧವ ಕಲ್ಪಿಸಲು ಬರುವುದು ಶಬ್ದಕ್ಕೆ ತೆರಹಿಲ್ಲದುದರಲ್ಲಿ ಲಿಂಗವೆಂಬುವದೆಲ್ಲಿಯದು, ಜಂಗಮವೆಂಬುವದೆಲ್ಲಿಯದು, ಸಯುವೆಂಬುದೆಲ್ಲಿಯುದು, ಇವರುಗಳು ಲಿಂಗ, ಜಂಗಮುವರಿಯದವರು ತನ್ನ ತಾನರಿಯದವರು ಇವರಿಗೆ ಗುರು ಘನವ ಹೇಗೆ ಗೊತ್ತಾಗಬೇಕು.

ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು ನೆಲಿಸಿ ಲಿಂಗವೆನಿಸಿತ್ತಯ್ಯ ಲಿಂಗವು : ಇದರಿರುವ ಅರುಹಿದಲ್ಲಿ ಗುರುವೆನಿಸಿತ್ತಯ್ಯ ಲಿಂಗವು, ಗುರು, ಲಿಂಗ, ಜಂಗಮಕ್ಕೆ ತಿಲಾಂಶ ಭೇದವಿಲ್ಲ ನೋಡಾ, ಎಲೆ ದೇವಾ ಭೇದಿಸಿದವಂಗೆ ಭವಬಾಧೆ ತಪ್ಪುವದೆ ? ದೇವ, ದೇವ ಕಪಿಲಸಿದ್ಧ ಮಲ್ಲಿಕಾರ್ಜುನ.

ಇದ್ದುದೊಂದೆ ಘನ ಲಿಂಗ, ಈ ಲಿಂಗದ ಘನವರಿಯದೆ ಲಿಂಗವಂತರು ವಿಪರೀತವಾಗಿ ತಿಳಿದು ತನ್ನ ಅಖಂಡತ್ವದಿಂದ ದೂರಾಗಿ ಖಂಡಿತ ದೃಷ್ಟಿಯುಳ್ಳವರಾದುದು ದುರದೃಷ್ಟ . ಇದರಿಂದ ತನ್ನ ಅಮೂಲ್ಯ ಜೀವನವೆ ನಾಶವಾದಂತಾಗಿದೆ. ಲಿಂಗ ಮಾಡಲು ಆರಾರ ಕೈಯಲ್ಲಿರುವುದು ? ಜಂಗಮವನ್ನು ಮಾಡಲು ಬರುವುದೆ ? ಕೃತ್ಯಕ್ಕೆ ಬಾರದ ಲಿಂಗವ ಕೃತ್ಯಕ್ಕೆ ತಂದವರಾರೊ ? ವಾಙ್ಮನಕ್ಕಗೋಚರ ಲಿಂಗ, ಕಥನಕ್ಕೊಳಪಡಿಸಿದವರಾರೊ ? ನೆನಹಿಂಗೆ ಒಳಪಡಿಸಿದವರಾರೊ ? ಲಿಂಗವರಿಯ ಹೋದವರು ಶರಣರು, ಶರಣೆಯರು ಲಿಂಗವೆ ಆಗಿಹರು. ಅವರು ಚರಿಸಿ ಜಂಗಮುವಾಗಿಹರು. ಸಕಲರ ಹೃದಯದೊಳ ನೆಲಿಸಿ ಲಿಂಗವಾಗಿಹರು. ಒಳಹೊರಗೆನ್ನದೆ ನೆಲಿಸಿ ಅಖಂಡವಾಗಿಹರು, ಇದರಿರವ ಹೇಳಿ ಗುರುವೆನಿಸಿಹರು. ಶರಣರೆಂದರೆ ಅನುಪಮ ಲಿಂಗ, ಅಪ್ರಮಾಣರು, ಅಚಿಂತ್ಯಾತ್ಮರು. ತಾವಾರೆಂದು ತಮ್ಮನರಿತಿಹರು. ಅವರು ಲಿಂಗವಹುದು. ಜಂಗಮವೂ

ಅಹುದು, ಗುರುವು ಅಹುದು ಹಾಗೂ ಏನೊಂದಾಗದ ಅನುಪಮರು, ಗುರುವಾಗಿ ತೋರಿದರೂ ತೋರಬಾರದ ಘನ, ಲಿಂಗವಾಗಿ ತೋರಿದರೂ ತೋರಬಾರದ ಘನ. ಜಂಗಮವಾಗಿ ತೋರಿದರೂ ತೋರಬಾರದ ಘನ, ತೋರಬಾರದ ಘನ, ಗುರು ಲಿಂಗ ಜಂಗಮವೆಂದು ಹೇಳಲೆಂತು ? ಅವರ್ಣೀಯವ ವರ್ಣಿಸುವರೆ ?

ಅನುಪಮ ನಿಲುವುಳ್ಳ ಲಿಂಗ ಜಂಗಮ ಸಂಬಂಧ ಸಯವ ಮಾಡಿಹೆನೆಂಬರು ಎಂದಲ್ಲಿ ಇವರ ದೃಷ್ಟಿಯಲ್ಲಿ ಲಿಂಗವು ಪೂಜಾಲಿಂಗವಾಗಿದೆ. ಜಂಗಮವು ಒಂದು ಸೀಮಿತ ವ್ಯಕ್ತಿಯಾಗಿದೆ. ಯಾರು ಲಿಂಗಸಂಬಂಧವಾಗಿಹರು ಅವರು ಜಂಗಮಲಿಂಗಿಗಳು, ಲಿಂಗ ಜಂಗಮ ಒಂದಾದವರು. ಸಯವಾದವರು ಎಂಬ ಕ್ರಿಯಾತ್ಮಕ ದೃಷ್ಟಿಯೆ. ಇದು ಕ್ರಿಯಾಚಾರವಾಗಿ, ಭಾವಾಚಾರವಾಗಿ ಜ್ಞಾನಾಚಾರದ ಘನವನ್ನೆ ತಿಳಿಯಗೊಡದಂತೆ ಮಾಡಿದೆ. ಶ್ರೀಗುರು ಕರುಣಿಸಿದುದು ಅರ್ಥವಾಯಿತೆ ? ಅರುವ ಅರಿಯ ಹೇಳಿದ ಕುರುಹ, ಅದು ಅನುಪಮ, ನುಡಿಗೆಡೆಗೊಡದ ಘನ, ಮೌನದ ಮೌನೇಶ ಇವರು ಲಿಂಗದ ಘನವ ಮರೆತು ಪೂಜಾಲಿಂಗವಾಗಿ ಕಂಡರೆ ? ಶೈವ ಗುಡಿಯಲ್ಲಿ ಇರುವ ದೇವನ ಮೂರ್ತಿಯಾಯಿತೆ ? ಇದೆಂಥ ಲಿಂಗವಂತರ ಲಿಂಗಾನುಭವ, ಅರುವ ಅರಿಯ ಹೋದ ಸ್ವಯಾನುಭವ, ಸ್ವಯಾನುಭವದಿಂದ ದೂರಾಗಿ ಪೂಜ್ಯ ಪೂಜಕಭಾವ ದಿಟವಾಗಿ ಲಿಂಗ ಪೂಜ್ಯವಾಯಿತ್ತು. ತಾನು ಪೂಜಕನಾದ, ಪೂಜಿಸುವವ ಭಕ್ತನಾದ. ಲಿಂಗಕೊಟ್ಟವರು ಗುರುಮೂರ್ತಿಯಾದರು. ಅದನ್ನು ತಕ್ಕೊಂಡವ ಶಿಷ್ಯನಾದ, ಇದೆಂಥ ಹೊಲಬುದಪ್ಪಿದ ಕಥೆ ? ಇದನ್ನು ತಿದ್ದಿ ನೇರ ಮಾರ್ಗಕ್ಕೆ ತರುವವರಾರು ? ಗುರು ಮುನ್ನವೊ ? ಶಿಷ್ಯ ಮುನ್ನವೊ ? ಆವುದು ಮುನ್ನವೆಂದು ಅರಿಯರು ನೋಡಾ, ಗುರುವೆಂದಲ್ಲಿ ಶಿಷ್ಯ, ಶಿಷ್ಯನೆಂದಲ್ಲಿ ಗುರು, ಇವರಿಗೆ ಕರ್ಮವೆಂಬ ಕೌಟಿಲ್ಯವೆ ಘನವಾದಲ್ಲಿ ಇವರಿಗೆ ಗುರುತತ್ವವು ತಿಳಿಯದು, ಶಿಷ್ಯತ್ವವು ತಿಳಿಯದು.

ಗುರುವೆಂದರಿದವನು ತಾನೆ, ಶಿಷ್ಯನೆಂದರಿದವನು ತಾನೆ. ತನ್ನನ್ನು ಅರಿಯದ್ದರಿಂದ ಕಲ್ಪಿತವೆ ಮುನ್ನವಾಗಿತ್ತು. ತನ್ನ ಅರಿತಲ್ಲಿ ತಾನೆ ಮುನ್ನ, ಮುನ್ನ ಮುನ್ನಲಾದ ಘನವೆ ತಾನಾಗಿರುವಲ್ಲಿ ಗುರು ಮುನ್ನ ಹೇಗಾಗುವನು, ಶಿಷ್ಯ ಮುನ್ನ ಹೇಗಾಗುವನು. ಕಲ್ಪಿತವು ಅಕಲ್ಪಿತವರಿಯದು, ಗುರುವೆಂಬುದು ಹೆತ್ತರಿವು ತಾನೆ, ಸ್ವಯಮೇವ ಘನ ತಾನೆ ನಿಸ್ಸೀಮ, ಅಪಾರ ನಿಜವರಿತ ನಿರಾಲಂಬ ಇದು ಕಾರಣ ಆವ ಸಂಬಂಧವನು ಅರಿಯರು ಗುಹೇಶ್ವರಾ.

ಸೀಮಿತರಿಗೆ ನಿಸ್ಸೀಮದ ಘನವು ಹೇಗೆ ಗೊತ್ತಾಗಬೇಕು, ಸಂಬಂಧ ಸಂಕಲ್ಪ ಕಲ್ಪಿಸುವವರು ಕಲ್ಪಿತರು, ಕಲ್ಪಿತರ ದೃಷ್ಟಿಗೆ ಸಕಲವು ಕಲ್ಪಿತವಾಗಿಯೆ ಕಾಣುವುದು. ಅಕಲ್ಪಿತನಿಗೆ ಸಂಬಂಧವೆಲ್ಲಿ ? ಸಂಕಲ್ಪವೆಲ್ಲಿ ? ಮಾಟವೆಲ್ಲಿ ? ನೋಟವೆಲ್ಲಿ ? ಕೂಟವೆಲ್ಲಿ ? ಇದು ಕಾರಣ ಅರಿತ ಶರಣಂಗೆ ಲಿಂಗ ಸಂಬಂಧವಿಲ್ಲ, ಜಂಗಮ ಸಂಬಂಧವಿಲ್ಲ, ಗುರು ಸಂಬಂಧವಿಲ್ಲ, ಶಿಷ್ಯ ಸಂಬಂಧವಿಲ್ಲ, ಅಂಗವಿಲ್ಲದವಂಗೆ ಸಂಗವಿಲ್ಲ, ಸಂಬಂಧವಿಲ್ಲ, ನಿಸ್ಸಂಗಿಗೆ ನಾಮವಾವುದು ? ಅನಾಮಯವಾವುದು ? ಅಹುದಾವುದು ? ಅಲ್ಲಾವುದು ? ಮರವು ಆವುದು ? ಅರಿವಾವುದು ? ನುಡಿಗೆಡೆಗೊಡದ ಘನವಾವುದು, ಇದ್ದಂತೆ ಇದೆ. ಗುರುವೆಂದರೂ ತಾನು ಇದ್ದಂತೆ ಇದೆ, ಶಿಷ್ಯನೆಂದರೂ ಇದ್ದಂತೆ ಇದೆ, ಲಿಂಗ, ಜಂಗಮವೆಂದರೂ ಇದ್ದಂತಿದ್ದ ಘನವ ಶರಣರು ಅರಿತಿಹರು. ಅದಕ್ಕಾಗಿ ಅವರಿಗೆ ಆವ

ಸಂಬಂಧವನರಿಯರು ಗುಹೇಶ್ವರ ಎಂದು ವರ್ಣಿಸಿಹರು. ಇದ್ದಂತಿದ್ದ ಘನವನರಿಯದೆ ನಾನು ಘನ, ನಾನು ಘನವೆಂಬುವವರದೆ ಜಗದೊಳಗೆ ಹಿರಿತನ ಇದು ನಿಜವಾದ ಹಿರಿತನವಾಗದು.

62

**ನಾನು ಘನ, ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ ?**
**ಹಿರಿದು ಕಿರಿದೆಂದಲ್ಲಿ ಏನಾಯಿತ್ತು ?**
**ಹಿರಿದು ಕಿರಿದೆಂಬ ಶಬ್ದವಡಗಿದರೆ,**
**ಆತನೆ ಶರಣ ಗುಹೇಶ್ವರಾ.** ॥ 335 ॥

**ತಾತ್ಪರ್ಯ** : *ನಾನು ಘನ, ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ* : ನಾನು ಘನವೆಂಬ ಹಿರಿಯರು ಇವರಾರು ? ತಾನು ಘನವೆಂಬ ಹಿರಿಯರು ಇವರಾರು ? ಈ ಹಿರಿಯರು ಸಿಕ್ಕುವರೆ, ಜಗದೊಳಗೆ ? ಸಿಕ್ಕುವುದು ವಿರಳ ! ನಾನು ಎಂಬುದು ಬಹು ಗಹನಾರ್ಥವು. ಯಾರು ನಾನು ಎಂಬ ಪದ ಅರಿಯ ಹೋಗಿಹರು ಅವರು ಘನ. ಅವರು ಕಂಡುದೆಲ್ಲ ಘನ, ಅಲ್ಲಿ ಬದುಕಿದುದಿಲ್ಲ, ಸತ್ತುದಿಲ್ಲ, ಅಹುದಾದುದಿಲ್ಲ, ಅಲ್ಲವಾದುದಿಲ್ಲ, ಬೇಕಾದುದಿಲ್ಲ, ಬೇಡಾದುದಿಲ್ಲ ಇವರು ನಿಶಬ್ದವೇದಿಗಳು, ವೇದದ ಮೊದಲಿಗರು, ಶಾಸ್ತ್ರದ ಶಸ್ತ್ರ ಪುರುಷರು, ಪುರಾಣದ ಪುಣ್ಯ ಪುರುಷರು, ಇವರ ಅನುಭವ ಅತೀಂದ್ರಿಯವಾದುದು, ಸಕಲರು ಈ ಮಹಾಂತರ ಮಹಾನುಭವಗಳ ಅನುಭವಿಗಳಾಗುವುದು. ಆಗ ಮಾನವರಲ್ಲಿ ನಿಜವಾದ ಜ್ಞಾನಲಭ್ಯವಾಗಿ ಸ್ವಸುಖಿಗಳು ಆಗುವರು.

ನಾನು ಯಾರು ? ಎಂಬ ಘನವರಿಯದೆ ಕೆಲಬರು ನಾಹಂ ಎಂದರು. ದೇಹ ನಾನಲ್ಲ, ಇಂದ್ರಿಯಂಗಳು, ಪ್ರಾಣಂಗಳು ನಾನಲ್ಲ, ಕರಣಂಗಳು ನಾನಲ್ಲ, ಜೀವ ನಾನಲ್ಲ, ಆವುದು ನಾನಲ್ಲವೆಂಬ ವೈರಾಗ್ಯ ಮತಿಯರೆ ಆಗಿ ಇವರಿಂದ ಜಗತ್ತಿನೊಳಗೆ ಆವುದು ನಾನಲ್ಲವೆಂಬ ನೇತಿ, ನೇತಿ ಜ್ಞಾನವಾಯಿತಲ್ಲದೆ, ನಿಜದ ಜ್ಞಾನವಾಗಲಿಲ್ಲ , ಹಾಗಾದರೆ ಕೋಹಂ, ನಾನು ಯಾರು ಎಂಬ ಪ್ರಶ್ನೆಯ ಅರ್ಥವೆ ಕೆಲಬರಿಗೆ ಸರಿಯಾಗಿ ಆಗದೆ ವ್ಯರ್ಥ ಸತ್ತು ಹೋದರು, ಇನ್ನು ಕೆಲಬರು ಸೋಹಂ, ಸೋಹಂ ಎಂದು ಅದರ ಅರ್ಥ ಪೂರ್ಣವಾಗದೆ ಅವರಿಗೂ ಸದ್ಗುರು ದೊರೆಯದೆ ಸೋಹಂ ಎನ್ನುವುದರಲ್ಲಿಯೆ ಸರಿ ಹೋದರು. ಇನ್ನು ಕೆಲಬರು ಚಿದಹಂ, ಚಿದ್ರೂಪವೆ ನಾನು ಎಂಬ ಅರುವಿನ ಅಹಂಕಾರಿಗಳಾಗಿ ತೂರ್ಯವೆ ಅವರಿಗೆ ತಮ್ಮ ಇರುವಾಗಿ ಅವರೆ ಜಗದ ಹಿರಿಯರಾಗಿ ಅವರಿಂದಲೂ ನಿಜ ಜ್ಞಾನವಾಗದೆ ಜಗವು ಕಲ್ಪಿತ ಜ್ಞಾನದಲ್ಲಿ ನಿಂದಿತ್ತು.

ಇತ್ತ ಲಿಂಗಾರ್ಚಕರು ಶ್ರೀಗುರು ಅರುವ ಅರಿಯ ಹೇಳಿದ ಕಾರುಣ್ಯ (ಲಿಂಗ)ವದು ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವೆಂದು ತಿಳಿಯದೆ ಅದನ್ನು ಕುರುಹು (ರೂಪಾಗಿ) ಕಂಡು ಅದು ಪೂಜಿಸಿಕೊಳ್ಳುವ ಲಿಂಗವೆಂದು ಪೂಜಿಸುವುದರಲ್ಲಿ ಸರಿಹೋಗಿ ಇಂಥವರೆ ಜಗದೊಳಗೆ ಹಿರಿಯರೆನಿಸಿಕೊಂಡರು. ಇನ್ನು ಕೆಲಬರು ಈ ಪೂಜಾಲಿಂಗವ

ಪೂಜಿಸಿದಷ್ಟು ಘನತ್ವ ಸಿದ್ಧಿಸುವುದೆಂದು, ಎರಡು ಸಲ, ಮೂರು ಸಲ, ಲಿಂಗಾರ್ಚನೆ ಮಾಡುವುದರಲ್ಲಿಯೆ ಕಾಲ ಕಳೆದು ಅವರೆ ಜಗತ್ತಿನ ಮಹಾಂತರಾಗಿಹರು. ಇವರ ನೇಮ, ನಿತ್ಯ, ಜಪತಪಂಗಳು ಲಿಂಗವರಿದ ಸಕೀಲಗಳಾಗಿ, ಭಕ್ತಿ, ಜ್ಞಾನ, ವೈರಾಗ್ಯ ಅನುಭಾವ ಇವು ಲಿಂಗಪೂಜೆಯಾಗದ್ದರಿಂದ ಲಿಂಗದ ಅರಿವು ಆರಿಗೂ ಯತಾರ್ಥವಾಗಲಿಲ್ಲ.

ಬಸವಣ್ಣನವರಿಗೆ ಭಕ್ತಿಯೆ ಲಿಂಗಪೂಜೆಯಾಗಿತ್ತು, ಚೆನ್ನಬಸವಣ್ಣಂಗೆ ಜ್ಞಾನಕ್ರಿಯೆ ಲಿಂಗಪೂಜೆಯಾಗಿತ್ತು. ಪ್ರಭುವಿಂಗೆ ವೈರಾಗ್ಯವೆ ಲಿಂಗ ಪೂಜೆಯಾಗಿತ್ತು, ಸಿದ್ಧರಾಮ ಶಿವಯೋಗಿಗೆ ಅನುಭಾವವೆ ಲಿಂಗಪೂಜೆಯಾಯಿತ್ತು. ಪುರಾತನರ ಲಿಂಗಪೂಜೆಗೆ ಭಕ್ತಿ, ಜ್ಞಾನಕ್ರಿಯೆ, ವೈರಾಗ್ಯ ಅನುಭಾವವೆ ಮುಖ್ಯ ಪ್ರಧಾನವಾಗಿ ಲಿಂಗದಿರುವು ಅಳವಡಿಸಿ ಕೊಂಡರು. ಇವರಲ್ಲಿ ಭಕ್ತನಾರು, ಜ್ಞಾನಿಗಳಾರು, ವೈರಾಗ್ಯವಂತರಾರು, ಅನುಭಾವಿಗಳಾರು ಎಂಬುದು ವಿವರಿಸಲಾಗದೆ ಅನುಪಮ ಲಿಂಗವಾದರು. ಸಕಲರು ಸಮಪ್ರಕಾಶಮಾನವಾದ ತತ್ವ ತಿಳಿದುಕೊಂಡು ಅದುವೆ ಆಗಿಹರು. ಲಿಂಗವ ತಿಳಿಯದೆ ಪೂಜಾಲಿಂಗವೆ ಲಿಂಗವೆಂದು ಸಕಲರು ಲಿಂಗವ ಪೂಜಿಸಿದರೂ ಇವರಿಗೆ ಸಮ್ಯ ಜ್ಞಾನವಿಲ್ಲ, ಸಮತ್ವವಿಲ್ಲ, ಲಿಂಗಕೊಟ್ಟ ಗುರುವಿನಲ್ಲಿ ಸಮಪ್ರಕಾಶಮಾನವಾದ ತತ್ವ ಅರಿವು ಇಲ್ಲ, ಲಿಂಗ ಕಟ್ಟಿಸಿಕೊಂಡ ಶಿಷ್ಯರುಗಳಲ್ಲಿ ಸಮವು ಇಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಜಂಗಮ, ಜಂಗಮರಲ್ಲಿ ಸಮವಿಲ್ಲ. ಇವರಿಂದ ಜಗದೊಳಗೆ ವಿಷಮ ಜ್ಞಾನ, ವಿಷಮ ದೃಷ್ಟಿ, ಅಹಂಕಾರವೆ ಹೆಚ್ಚಾಗಿ ಹೃದಯ ಅಜ್ಞಾನರೂಪಿ ಅಂಧಃಕಾರದಲ್ಲಿ ಮುಳುಗಿ ಅಸುರೀವೃತ್ತಿಯ ಒಡೆತನವಾಗಿದೆ.

ನಾನಾರು ? ಎಂಬುದು ತಿಳಿಯದ ಮಾನವ ಅಜ್ಞಾನಕ್ಕೊಳಪಟ್ಟ ಮಾನವ, ಸದ್ಗುರು ಕರುಣೆಯಿಲ್ಲದ ಮಾನವ. ಲಿಂಗವ ಕಟ್ಟಿಕೊಂಡರೂ ಲಿಂಗದರಿವು ಇಲ್ಲ ; ಇಲ್ಲದ್ದರಿಂದ ಇಲ್ಲದ ಮಾಯೆ ಇಲ್ಲವಾಗಲಿಲ್ಲ, ಇಲ್ಲದ ಪ್ರಪಂಚ ಇಲ್ಲವಾಗಲಿಲ್ಲ, ಇಲ್ಲದ ಮರವು ಇಲ್ಲವಾಗಲಿಲ್ಲ, ಇಲ್ಲದ ಸಂಚಿತ, ಆಗಾಮಿ, ಪ್ರಾರಾಬ್ಧವೆಂಬ ಕರ್ಮಪಾಶ ಇಲ್ಲವಾಗಲಿಲ್ಲ, ಲಿಂಗವ ಪೂಜಿಸಿದರೂ ಲಿಂಗ ಅಳವಡಲಿಲ್ಲ, ಇವರ ಆಚಾರ ನೇಮ ನಿತ್ಯಂಗಳು ಹಿರಿದಾಗಿ ಜಗವೆಲ್ಲ ಬರಡು ಆಚಾರವುಳ್ಳದ್ದಾಗಿ ಅಹಂಭಾವಕ್ಕೀಡು ಮಾಡಿತ್ತು. ಅರಿಯದ ಹಿರಿತನ ತನ್ನ ಹಾಳು ಮಾಡಿತ್ತು. ಅಂತಪ್ಪ ಪೂಜಕರ ಹಿರಿತನದಿಂದ ವಿಶ್ವದ ಮಾನವರು ಜೀವಂತ ಮೃತ್ಯುಗೀಡು ಮಾಡಿತ್ತು. ಚಿಂತೆ, ಭಯ, ದುಃಖ, ಭೇದ ಇವುಗಳೆ ಹೃದಯದಲ್ಲಿ ವಾಸ ಮಾಡಿದವು. ಇದು ಕಾರಣ ಸಕಲರು, ನಾನು ಯಾರು ಎಂಬುದು ಅರಿಯ ಹೋಗಿ ನುಡಿಗೆಡೆಗೊಡದ ಘನವಾಗಬೇಕು. ಈ ಘನ ನಾನು ಈ ನಾನುವಿನ ವರ್ಣನೆ ಅವರ್ಣೀಯ. ಏಕೆಂದರೆ ಇದುವೆ ತಾನೆ ಘನವಾಗುವುದು. ಆಗ ಸಕಲವು ಆತ್ಮಮಯ, ಚಿನ್ಮಯ, ತಾನೆ ತಾನಾಗುವುದು. ತನ್ನ ತಾನರಿತ ಮೇಲೆ ಇನ್ನೇನಿನ್ನೇನು ? ತಾನೆ ಪೃಥ್ವಿ, ತಾನೆ ಅಪ್ಪು, ತಾನೆ ತೇಜ, ತಾನೆ ವಾಯು, ತಾನೆ ಆಕಾಶ, ತಾನೆ ಅಂಗ, ತಾನೆ ಲಿಂಗ, ತಾನೆ ಸಂಗ, ತಾನೆ ನಿಸ್ಸಂಗ, ತಾನು ತಾನಾದ ಮೇಲೆ ಇನ್ನೇನಿನ್ನೇನು ಎಂಬ ಮಹಾಂತರ ಮಹಾನುಭವದಿಂದ ಜಗದೊಳಗೆ ಹಿರಿದು, ಕಿರಿದು ಎಂಬುದು ಅಡಗಿ ಶರಣರ ಸಂತತಿಯಾಯಿತ್ತು, ಸುಖವಾಯಿತ್ತು, ನಿಶ್ಚಿಂತವಾಯಿತ್ತು, ನಿರ್ಭಯವಾಯಿತ್ತು, ತನ್ನ ಘನ ಮಹಿಮೆಯಲ್ಲಿ ತಾನೆ ತಾನಾ ಯಿತ್ತು. ಇದು ನಾನು ಘನವಾದವರ ಹಿರಿಯರ ಹಿರಿತನ, ಮಹಾಂತರ ಹಿರಿತನ, ಸಕಲರಿಗೆ ಅವಶ್ಯಬೇಕಾದ ಹಿರಿತನ, ಹಿರಿದು, ಕಿರಿದು ಎಂಬ

ಸಲ್ಲಡಗಿದ ಹಿರಿತನ.

ನಾನೀನೆಂಬುದಕ್ಕೆ ತೆರಹಿಲ್ಲದ ಜ್ಞಾನ, ಶರಣರ ಸಮ್ಯಜ್ಞಾನದ ಹಿರಿತನ, ಸಕಲರ ಸುಖದ ಸುಖಿಗಳಾಗುವ ಹಿರಿತನ, ಅರು ಹೃದಯ ಹಿರಿತನ, ಅಖಂಡ ಜ್ಞಾನ ಅಖಂಡಾನಂದದಲ್ಲಿರುವ ನಿಶ್ಚಿಂತರು ಅಮರರು. ಇವರು ಜಗದೊಳಗೆ ಹಿರಿಯರು. ಇವರ ಹಿರಿತನದಿಂದ ಮರವು ನಷ್ಟ, ಭ್ರಾಂತಿ ನಷ್ಟ, ಅಹಂ, ಮಮ ನಷ್ಟ, ಶೋಕ ನಷ್ಟ, ಸಾವು ನಷ್ಟ, ಜನನ ನಷ್ಟ, ಸಕಲವು ನಷ್ಟವಾಗಿ ಅಮರತ್ವದಲ್ಲಿ ನಿಂತು ಅವಿರಳಾನಂದ ದಲ್ಲಿರು ವುದರಿಂದ ನಾನು ಘನ, ತಾನು ಘನವೆಂಬ ಹಿರಿಯರುಂಟೆ ಜಗದೊಳಗೆ ? ಶರಣರು ಹಿರಿಯರಾದಲ್ಲಿ ಹಿರಿದು ಕಿರಿದೆಂಬುದು ಅಳಿದು ಸ್ವಯಾನಂದದಲ್ಲಿರುವರು, ಇದು ಆರಾರ ಹಂಗಿಲ್ಲದ ಹಿರಿತನ, ಈ ಸಮತತ್ವ ಅರಗಿಸಿಕೊಂಡವರ ಹಿರಿತನ, ಇವರ ದೃಷ್ಟಿಗೆ ವಿಶ್ವವೆ ಲಿಂಗ, ಲಿಂಗವೆ ವಿಶ್ವ, ವಿಶ್ವ ತಾನು ಎಂಬ ನಿಸ್ಸೀಮತ್ವ ಸಿದ್ಧಿಸಿ ಎಲ್ಲೆಲ್ಲೂ ಚಿತ್ಸೂರ್ಯನೆ ಪ್ರಜ್ವಲಿಸುವನು, ಈ ಅರು ಹೃದಯವೆಂಬ ಜ್ಞಾನ ಸೂರ್ಯನಿಂದ ಜಗತ್ತಿನ ಅಂಧಃಕಾರ ಸ್ವಭಾವತಃ ನಷ್ಟವಾಗಿ ಸಕಲರ ಅಬ್ಯುದಯವಾಗುವುದು. ಆಗ ಮೊದಲು ತನ್ನ ಮಜ್ಜನ ಹಿಂದಿನಿಂದ ಲಿಂಗದ ಮಜ್ಜನ ಆಗುವುದು ಕಾಣುವನು.

**63**

**ತಾನು ಮಿಂದು ಕಾಲು ತೊಳೆದ ಬಳಿಕ**
**ಲಿಂಗಕ್ಕೆ ಮಜ್ಜನಕ್ಕೆರೆವರು.**
**ತಾನು ಲಿಂಗವೊ ? ಲಿಂಗ ಲಿಂಗವೊ ?**
**ಏನು ಲಿಂಗವೊ ? ಬಲ್ಲಡೆ ನೀವು ಹೇಳಿರೆ.**
**ಲಿಂಗಸಂಬಂಧವನರಿಯದೆ ಕೆಟ್ಟರು ಗುಹೇಶ್ವರಾ.** ॥ 341 ॥

**ತಾತ್ಪರ್ಯ:** ತಾನು ಮಿಂದು ಕಾಲು ತೊಳೆದ ಬಳಿಕ, ಲಿಂಗಕ್ಕೆ ಮಜ್ಜನಕ್ಕೆರೆವರು ತಾನು ಲಿಂಗವೊ ? ಲಿಂಗ ಲಿಂಗವೊ ? ಏನು ಲಿಂಗವೊ ? ಬಲ್ಲಡೆ ನೀವು ಹೇಳಿರೆ : ಎಂಬ ಪ್ರಭುವಿನ ಪ್ರಶ್ನೆಗೆ ಉತ್ತರ ಅದಾರು ವಿವರಿಸುವುದು. ಪ್ರಥಮ ಆರ ಮಜ್ಜನ, ಆರ ಸ್ನಾನ ? ತನ್ನ ಸ್ನಾನವಲ್ಲವೆ, ಹಿಂದಿನಿಂದ ಲಿಂಗಯ್ಯನ ಮಜ್ಜನ. ಇದು ಎಲ್ಲರಿಗೆ ತಿಳಿದ ವಿಷಯ. ಪ್ರಭುವಿನ ದೃಷ್ಟಿ, ಲಿಂಗದ ಲಿಂಗವಾಗಿಹ ದೃಷ್ಟಿ ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವಾದುದರಿಂದ ಅಜಾತನಾದ ತನ್ನ ಮಜ್ಜನ ಮೊದಲಾಗುವುದು.

ವಿಶ್ವವೆಲ್ಲ ಅಜಾತ ಲಿಂಗ, ಅಜ್ಞಾನಿಗಳಿಗೆ ವಿಶ್ವ, ಸುಜ್ಞಾನಿಗಳಿಗೆ ಚಿನ್ಮಯ ಲಿಂಗ, ಕರಗದ ತುಪ್ಪ, ತಿಳಿದುಪ್ಪ ಭೇದವೆ. ಶ್ರಿಗುರು ಕೃಪೆಯಿಂದ ಸಾಕಾರ, ನಿರಾಕಾರ ಒಂದೆ ಆಗಿಹ ಘನ ಲಿಂಗ, ಇದರ ವರ್ಣನೆ ಅದೆಂತು, ಸಾಕಾರ ಅದುವೆ, ನಿರಾಕಾರ ಅದುವೆ. ತುಪ್ಪ ಕರಗಿದರೇನು, ತುಪ್ಪ ಘಟ್ಟಿ ಇದ್ದರೇನು, ತುಪ್ಪವಲ್ಲವೆ ಹಾಗೆ ತೋರಿದರೇನು, ತೋರದಿದ್ದಡೇನು, ಲಿಂಗವಲ್ಲವೆ. ವ್ಯಕ್ತವಾಗಿರಲಿ, ಅವ್ಯಕ್ತವಾಗಿರಲಿ ಲಿಂಗವಲ್ಲದೆ ಅನ್ಯವೆಲ್ಲವು ಆಚಾರ, ಅನಾಚಾರವಾಯಿತ್ತು. ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯತಪ್ಪಿ ಲಿಂಗ

ಸಂಚಯವಾಯಿತ್ತು. ಎಲ್ಲಿ ರೂಪವಲ್ಲಿಯೆ ಲಿಂಗ ಸ್ವಾಯತವಾಯಿತ್ತು, ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು, ಎಲ್ಲಿ ಗಂಧವಲ್ಲಿಯೆ ಲಿಂಗ ಸಂಚಯವಾಯಿತ್ತು, ಎಲ್ಲಿ ಸೋಂಕು ಅವಲ್ಲಿಯೆ ಲಿಂಗ ಸ್ವಾಯತವಾಯಿತ್ತು, ಎಲ್ಲಿ ರಸವಲ್ಲಿಯೆ ಲಿಂಗ ಸ್ವಾಯತವಾಯಿತ್ತು ಕೂಡಲ ಸಂಗಮದೇವಾ, ಕರುಣಾರಸಾಬ್ದಿ ಕಡಕೋಡಿ ವಡಿಯಿತ್ತಯ್ಯ ಎನ್ನ ಮೇಲೆ. ಇದು ಎಲ್ಲೆಲ್ಲೂ ಲಿಂಗಯ್ಯನ ಕಂಡ ದಿವ್ಯ ದೃಷ್ಟಿ, ಲಿಂಗವಾಗಿಹ ದೃಷ್ಟಿ.

ಶರಣರ ಲಿಂಗ ದೃಷ್ಟಿ ಎತ್ತ, ರೂಪವೆತ್ತ, ನಿರೂಪವೆತ್ತ, ಅಜ್ಞಾನವೆತ್ತ, ಸುಜ್ಞಾನವೆತ್ತ, ಮರವೆತ್ತ, ಅರುವಿನ ಅರುವೆತ್ತ, ತನ್ನಿಂದ ತಾನಾಗಿಹ ಘನವಂತರೆತ್ತ, ಲಿಂಗಾರ್ಚಕರೆತ್ತ, ಸೀಮಿತವೆತ್ತ, ನಿಸ್ಸೀಮವೆತ್ತ, ಕೆಡದ ಆಚಾರವೆತ್ತ, ಕೆಡುವ ಆಚಾರವೆತ್ತ, ಉದಯಾಸ್ತದಿಂದು ಕ್ತವಾಗಿಹ ಬೆಳಕೆತ್ತ, ಉದಯಾಸ್ತಗಳಿಲ್ಲದ ಬೆಳಗುಳ್ಳ ಘನವೆತ್ತ, ಚಿದ್ಘನ ಶರಣ ವಿಶ್ವವು ಅಜಾತ ಲಿಂಗವಾಗಿ ಕಂಡಿತು. ಶಬ್ದಾದಿ ಪಂಚ ವಿಷಯಂಗಳು ಅಖಂಡ ಲಿಂಗವಾಗಿ ಕಂಡವು. ಇದು ಕಾರಣ ತನ್ನಿಂದ ತನಗಾಗುವ ಮಜ್ಜನವ ಮಾಡುವರೆಂಬುದಿಲ್ಲ.

ಪ್ರತಿಯೊಂದು ಸಮಾಜದವರು ಮೊದಲು ತಮ್ಮ ಸ್ನಾನ ಮಾಡಿಕೊಂಡು ಹಿಂದಿನಿಂದ ತಮ್ಮ ಇಷ್ಟದೈವಕ್ಕೆ ಮಜ್ಜನವ ಮಾಡುವರು. ಪ್ರಥಮ ಮಜ್ಜನ ಆರದಾಯಿತ್ತು, ಹಿಂದಿನಿಂದ ಆರದಾಯಿತ್ತು, ಇದು ನಮ್ಮಿಂದ ನಾವೆ ವಿಚಾರ ಮಾಡುವುದು. ಯಾರು ವಿಚಾರವಂತರೊ ಅವರಿಗೆ ಪ್ರಭುವಿನ ಪ್ರಸಾದವಾಣಿ ವೇದ್ಯವಾಗುವುದು.

*ತಾನು ಲಿಂಗವೊ ? ಲಿಂಗ ಲಿಂಗವೊ ? ಏನು ಲಿಂಗವೊ ? ಬಲ್ಲಡೆ ನೀವು ಹೇಳಿರೆ* : ಎಂದು ಪ್ರಶ್ನಿಸಿದ್ದಾನೆ. ಇದರ ಉತ್ತರ ಆರಿಂದ ! ಲಿಂಗ ಸಂಬಂಧವನರಿಯದೆ ಕೆಟ್ಟರು ಗುಹೇಶ್ವರಾ ಎಂದು ತಾನೆ ತನ್ನ ಪ್ರಶ್ನೆಗೆ ಉತ್ತರವ ನೀಡಿಹನು. ಲಿಂಗಾರ್ಚಕರಿಗೆ ಲಿಂಗ ಸಂಬಂಧವಾಗಿದೆಯಲ್ಲವೆ ? ಇನ್ನುಳಿದವರಿಗೆ ಲಿಂಗ ಸಂಬಂಧವಾಗಿಲ್ಲ ಎನ್ನಬೇಕೆ ? ಆರು ಲಿಂಗಸಂಬಂಧವರಿದಿಹರು ಅವರು ಲಿಂಗಾರ್ಚಕರು. ಆರು ಅರಿತಿಲ್ಲ ಲಿಂಗಾರ್ಚಕ ರಾಗಿಯೂ ಲಿಂಗ ಸಂಬಂಧವಿಲ್ಲವೆಂದಲ್ಲಿ ಇದೆಂಥ ಲಿಂಗವಂತರ ದೃಷ್ಟಿ , ತತ್ವವೇತ್ತರ ದೃಷ್ಟಿ, ಲಿಂಗವಂತ ಘನವಂತನ ದೃಷ್ಟಿ, ಲಿಂಗಸಂಬಂಧ ಆರಿಗಿಲ್ಲವೆನ್ನಬೇಕು, ತನುವಿನ ತನುವಾದ ಲಿಂಗ, ಮನದ ಮನವಾದ ಲಿಂಗ, ಜೀವರ ಜೀವವಾದ ಲಿಂಗ, ಅಧಿಷ್ಠಾನ ಲಿಂಗ ಇದಾರಿಗೆ ಸಂಬಂಧವಾಗಿಲ್ಲವೆನಬೇಕು, ಲಿಂಗ ಸಂಬಂಧವಾಗದಿದ್ದಲ್ಲಿ ತನುವೆಂಬುದೆಲ್ಲಿ ? ಮನವೆಂಬುದೆಲ್ಲಿ ? ಜೀವವೆಂಬುದೆಲ್ಲಿ ? ಭೂಮಿಯೆ ಮನೆಗಳಿಗೆ ಆಧಾರ, ಆಧಾರವಾದ ಭೂಮಿಯೆ ಸಂಬಂಧವಿಲ್ಲವೆಂದಲ್ಲಿ ಜಗ್ತತೆಲ್ಲಿ ? ಜಗತ್ತಿನ ವ್ಯವಹಾರವೆಲ್ಲಿ ? ಮನೆ ಎಲ್ಲಿ ? ಮಠವೆಲ್ಲಿ ? ಜನವೆಲ್ಲಿ ? ಲೋಕವೆಲ್ಲಿ ? ಲಿಂಗ ಸಂಬಂಧವಾಗದಿದ್ದರೆ ಅಂಗವೆಲ್ಲಿಯದು, ಈ ಕಟ್ಟಿಕೊಂಡ ಲಿಂಗವೆಲ್ಲಿಯದು, ಲಿಂಗವದು ಸ್ಥೂಲವಲ್ಲ, ಸೂಕ್ಷ್ಮವಲ್ಲ, ಸ್ಥೂಲ, ಸೂಕ್ಷ್ಮದ ಮೇಲಣ ಜ್ಞಾನ ರೂಪು ಪರಾನಂದ ಪರಬ್ರಹ್ಮವೆಂದರಿದ ಸ್ವತಂತ್ರ ಸಿದ್ಧ ಲಿಂಗೇಶ್ವರ ತಾನೆ ಬೇರಿಲ್ಲವೆಂದು ಹೇಳಿದ ಶರಣರ ಮಹಾನುಭವ ಅರಿಯದೆ ಕೆಟ್ಟು ಹೋದರು, ಇವರ ಸಂಕುಚಿತ ಬುದ್ಧಿಯೆ, ಇವರ ಅರು ಹೃದಯಕ್ಕೆ ಅಡ್ಡಿಯಾಯಿತ್ತು. ಈ ವಿಷಮ ದೃಷ್ಟಿ ಹೋಗದನ್ನಕ್ಕರ ಲಿಂಗದ ರಹಸ್ಯವ ತಿಳಿಯದು. ಇದು ಕಾರಣ ತಾನು ಲಿಂಗವೊ ? ಲಿಂಗ ಲಿಂಗವೊ ? ಏನು ಲಿಂಗವೊ ? ಬಲ್ಲಡೆ ನೀವು ಹೇಳಿರೆ ಎಂಬುದು ತಿಳಿಯುವದೆಂತು. ತಾನು ಲಿಂಗವೆನ್ನಲು ಲಿಂಗವರಿತರೆ ತಾನೆ ಲಿಂಗವೆಂಬುದು ಸಹಜವಾಗಿದೆ.

ತನ್ನಿಂದ ತನ್ನ ಅರಿತರೂ ತಾನು ಘನ ಲಿಂಗವೆನ್ನವುದು ಸಹಜವಾಗಿದೆ. ಇತ್ತ ಲಿಂಗವರಿಯಲಿಲ್ಲ, ತನ್ನ ಅರಿಯಲಿಲ್ಲ, ತನ್ನ ಅರಿಯಲಿಲ್ಲವೆಂದಲ್ಲಿ ಪ್ರಭುವಿನ ಪ್ರಶ್ನೆಗೆ ಉತ್ತರ ಹೊಳೆಯುವುದದೆಂತು ?

ಲಿಂಗಸಂಬಂಧವೆಂದರೆ ಸ್ಥೂಲ, ಸೂಕ್ಷ್ಮದ ಮೇಲಣ ಜ್ಞಾನ ಸಂಬಂಧ ಸಚ್ಚಿದಾನಂದ ಸಂಬಂಧ ಪರಾನಂದ ಸುಜ್ಞಾನ ಸಂಬಂಧ ಅರಿದರುಹಿಸಿಕೊಳ್ಳಲು ಮೀರಿದ ಘನ ಸಂಬಂಧ, ಈ ಸಂಬಂಧವಾದುದೆ ಜ್ಞಾನಿ ಜನ್ಮ. ಸದ್ಗುರು ತೋರಿದ ಅನುವಿನಂತೆ ಅರಿಯ ಹೋದವರಿಗೆ ಲಿಂಗ ತಾನೆ, ವಿಶ್ವ ತಾನೆ, ಸಕಲ ತಾನೆ ನಿಃಕಲ ತಾನೆಂಬ ಅಖಂಡತ್ವ ಸಿದ್ಧವಾಗಿ ಅಚಿಂತ್ಯತ್ವನೆಲೆಗೊಳ್ಳುವುದು. ಇದರಿಂದ ನಿಶ್ಚಿತತ್ವ, ನಿರ್ಭಯತ್ವ, ಅಮರತ್ವ ಸಿದ್ದಿಸಿ, ಅಮರಾನಂದ ಮಗ್ನನಾಗುವನು. ಇದು ತಿಳಿಯದೆ ಏನು ತಿಳಿದರೂ ವ್ಯರ್ಥ, ಎಂತು ತಿಳಿದರೂ ವ್ಯರ್ಥವೆಂದು ಹೇಳಿಹರು.

**64**

**ಏನೆಂದರಿಯರು ಎಂತೆಂದರಿಯರು,**
**ಅರಿವನರಿದೆವೆಂಬರು. ಮರಹ ಮರದೆವೆಂಬರು.**
**ಒಂದನರಿದೆನೆಂದಡೆ ಮುಖ ಮೂರಾಯಿತ್ತು.**
**ಮೂರು ಮುಖವ ಏಕಗ್ರಾಹಕವ ಮಾಡಿದಲ್ಲದೆ**
**ಶರಣನಲ್ಲ ಗುಹೇಶ್ವರಾ.** ॥ 345 ॥

**ತಾತ್ಪರ್ಯ:** ಏನೆಂದರಿಯರು ಎಂತೆಂದರಿಯರು: ಆವುದು ಅಜ್ಞಾನ ದೃಷ್ಟಿಗೆ ಕಂಡುದು ಏನೆಂದರಿಯರು, ಎಂತೆಂದರಿಯರು, ಹೀಗೆ ಅನ್ನುವವರು ಇವರಾರು ? ಶರಣರು, ಒಂದನರಿದಡೆ ಮುಖ ಮೂರಾಯಿತ್ತು. ಮೂರು ಮುಖ ಏಕ ಗ್ರಾಹಕ ಮಾಡಿದವರು. ಅಸ್ತಿ, ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪು ಎಂಬ ಹುಸಿಯೆಂತು ಜನಸಿತೆಂದರಿಯನಯ್ಯ, ಇಲ್ಲದ ಹೆಸರುಳ್ಳ ಚಿದ್ರದಂತೆ ರೂಪು ನಾಮವೀತೆರನೆಂದರಿಯದೆ ತೊಳಲಿ, ಬಳಲುತಿರ್ದೆನಯ್ಯ ಕೂಡಲ ಸಂಗಯ್ಯ ಸಂಸಾರ ಬಂಧನವೆನಗಿದೆ ಕಂಡಯ್ಯ.

ಅಸ್ತಿ, ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪು ಹುಸಿಗೆ ಏನೆಂದರಿಯರು, ಎಂತೆಂದರಿಯರು ಬಂಜೆ ಹಡದುದಕ್ಕೇನನ್ನಬೇಕು, ಹಡದರೆ ಬಂಜೆ ಎಂದು ಹೇಗೆ ಅನಿಸಿಕೊಳ್ಳುವ ಬಂಜೆ ಅನ್ನಿಸಿಕೊಳ್ಳವಳೆಂದಲ್ಲಿ ಅವಳು ಹಡೆದುದೆಲ್ಲಿ ? ಹಡೆದೆ ಇಲ್ಲವೆಂದಲ್ಲಿ ಏನೆಂದರಿಯರು, ಎಂತೆಂದರಿಯರು. ಅಸ್ತಿ, ಭಾತಿ ಎಂಬ ಸತ್ಯ, ಅದು ಬಂಜೆ. ಈ ಸಚ್ಚಿದ್ರೂಪವಾದ ಸತ್ಯದಲ್ಲಿ ನಾಮರೂಪವೆಂಬ ಹುಸಿ ಮಗ ಹೇಗೆ ಹುಟ್ಟಿತೆಂದರಿಯೆನಯ್ಯ, ಹುಟ್ಟಿ ತೋರುವುದೆಂದಲ್ಲಿ ಇದಕ್ಕೆ ಏನಂದರಿಯರು, ಎಂತೆಂದರಿಯರು ಹುಸಿಗೆ ಗಂಡು ಎಂಬುದು ಹೇಗೆ, ಹೆಣ್ಣು ಎಂಬುದು ಹೇಗೆ, ತನುವೆಂಬುದು ಹೇಗೆ, ಇಂದ್ರಿಯಂಗಳು, ಪ್ರಾಣಾದಿಗಳು ಎಂಬುದು ಹೇಗೆ ? ಒಳಗೆ ಕರಣಾದಿಗಳು ಎಂಬುದು ಹೇಗೆ ? ಜೀವನೆಂಬುದು ಹೇಗೆ ? ಅಂತರಾತ್ಮನೆಂಬುದು ಹೇಗೆ, ಪರಮಾತ್ಮನೆಂಬುದು ಹೇಗೆ, ಇದು ಕಾರಣ ನುಡಿಗೆಡೆಗೊಡದ ಘನದಲ್ಲಿ ನುಡಿದು

ಹೇಳುವುದಕ್ಕೆ ಏನೆಂದು ಅನ್ನಬೇಕು, ಅನ್ನುವದೆಲ್ಲ ಹುಸಿ, ಹುಸಿಯಾದುದರಿಂದ ಏನೆಂದರಿಯರು, ಎಂತೆಂದರಿಯರು.

ತನುವಿಡಿದಿಹುದು ಪ್ರಕೃತಿ, ಪ್ರಕೃತಿವಿಡಿದಿಹುದು ಪ್ರಾಣ, ಪ್ರಾಣವಿಡಿದಿಹುದು ಜ್ಞಾನ, ಜ್ಞಾನವಿಡಿದಿಹುದು ಗುರು, ಇಂತೀ ಗುರು, ಲಿಂಗ, ಜಂಗಮ, ಪ್ರಸಾದ ಸಗುಣವೆಂದು ಹಿಡಿದು ನಿರ್ಗುಣವೆಂದು ಕಂಡ ಸಂದೇಹಿ ವ್ರತಗೇಡಿಗಳ ನೇನೆಂಬೆ ಅವರ ಮುಖವ ತೋರದಿರು ಕೂಡಲಸಂಗಮದೇವಾ. ಬಸವರಸ ನುಡಿಗೆಡೆಗೊಡದ ಘನವರಿತವರು, ಅದುವೆ ಆದುದರಿಂದ ಕೂಡಲಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ! ಇಂತಪ್ಪ ಯತಾರ್ಥ ಜ್ಞಾನಿಗಳು. ಕಲ್ಪಿತವೆಲ್ಲ ಹುಸಿ, ಈ ಹುಸಿಗೆ ಏನೆಂದರಿಯರು, ಎಂತೆಂದರಿಯರು. ಅರುವನರಿದೆವೆಂಬರು, ಮರಹ ಮರದೆವೆಂಬರು ಇವರಾರು ? ಇವರು ನುಡಿಗೆಡೆಗೊಡದ ಘನವರಿತುದರಿಂದ ಅರುವ ಅರಿತವರು. ಮರಹ ಮರೆತವರು. ನಾಮರೂಪವೆಂಬುದು ಮರತವರಾದುದರಿಂದ ಏನೊಂದರಿಯರು, ಎಂತೆಂದರಿಯರು. ಅರುವ ಅರಿತುದರಿಂದ ಅರುವಿಂಗರುವಾಗಿಹ ಲಿಂಗ. ಇದು ಒಂದ, ನರಿದೆನೆಂದರೆ ಮುಖ ಮೂರಾಯಿತ್ತು. ಗುರು, ಲಿಂಗ, ಜಂಗಮ ಮೂರು ಮುಖವಾಯಿತ್ತು. ಮೂರು ಮುಖ ಏಕ ಗ್ರಾಹಕ ಮಾಡಿದನಲ್ಲದೆ ಶರಣನಲ್ಲ.

ಮೂರು ಮುಖ ಏಕಗ್ರಾಹಕ ಮಾಡಿದ ಶರಣನೆಂದರೆ ಚೆನ್ನಬಸವಣ್ಣ, ಗುರು, ಲಿಂಗ, ಜಂಗಮದ ಏಕಾರ್ಥವನೇನೆಂದುಪಮಿಸುವುದು? ಗುರು ಪ್ರಾಣ, ಲಿಂಗ ದೇಹ, ಜಂಗಮ ಆಪ್ಯಾಯನ ಎಂದುದಾಗಿ ಪ್ರಾಣ ಮುಟ್ಟಿಬಂದಡೇನು, ಜಿಹ್ವೆ ಮುಟ್ಟಿಬಂದಡೇನು, ಜಂಗಮ ಮುಖ ಆಪ್ಯಾಯನ ಕೂಡಲ ಚೆನ್ನಸಂಗಮದೇವಾ ಪ್ರಸಾದ ಸರ್ವಸಿದ್ಧಿ.

ಮೂರೊಂದಾದ ಘನವನೇನೆಂದು ಉಪಮಿಸಬಹುದು, ಗುರುವಿಂಗೆ ಗುರುವಾದುದು ಲಿಂಗಕ್ಕೆ ಲಿಂಗವಾದುದು, ಆನಂದಕ್ಕೆ ಆನಂದವಾದುದು. ಈ ಮೂರು ತಾನೆ. ಗುರುವಿಂಗೆ ಗುರುವಾದವ ತಾನೆ. ಲಿಂಗಕ್ಕೆ ಲಿಂಗವಾದವ ತಾನೆ. ಆನಂದಕ್ಕೆ ಆನಂದವಾದವನು ತಾನೆ. ಅಬಾಧಿತ ಗುರು, ಅಬಾಧಿತ ಲಿಂಗ, ಅಬಾಧಿತ ಜಂಗಮ, ಉಪದೇಶ ನಷ್ಟ ಮಾಡಿದುದೆ ಗುರುವಿನ ಗುರು. ಪೂಜೆಗೆ ಬಾರದ ಲಿಂಗವಾದುದೆ ಲಿಂಗದ ಲಿಂಗ. ಅನುಪಮನಾದುದು ಜಂಗಮ ಸುಖ, ಆನಂದ ಉಪಮಿಸಲು ಬಾರದಂತಾದುದೆ ಜಂಗಮದ ಜಂಗಮತ್ವ. ಈ ಮೂರು ಮುಖ ಏಕ ಮುಖ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು, ತನ್ನಲ್ಲಿ ಕಂಡುದು ಗುರು, ಲಿಂಗ, ಜಂಗಮವೆಂಬಿವು ಹೆತ್ತರಿವು. ಏಕೆಂದರೆ ಗುರುವೆಂದರಿದವನು ತಾನೆ, ಲಿಂಗವೆಂದರಿದವನು ತಾನೆ, ಜಂಗಮವ ತಾನೆ ಅರಿಯುವವನಾದ್ದರಿಂದ ಜಂಗಮದ ಜಂಗಮ ತಾನೆ. ತಾನೆ ತೆರಹಿಲ್ಲದ ಘನವಾದ್ದರಿಂದ ಮೂರು ಮುಖ ಏಕ ಗ್ರಾಹಕ ಮಾಡಿದ ಶರಣ. ಸದ್ರೂಪವನರಿದು ಸದ್‌ಜ್ಞಾನಭರಿತನಾದ, ಚಿದ್ರೂಪವನರಿದು, ನಿಜಚಿತ್‌ಸೂರ್ಯನಾದ. ಉದಯಾಸ್ತವ ಕಾಣದ ನುಡಿಗೆಡೆಗೊಡದ ಘನವಾದ. ಆನಂದವರಿದು ಸ್ವಯಸುಖಿಯಾಗಿ ಶಬ್ದಮುಗ್ಧನಾದ. ಈ ಮೂರು ಮುಖ ಏಕ ಗ್ರಾಹಕ ಮಾಡಿದುದು ಶರಣತ್ವ, ಶರಣರ ಹಿರಿಮೆ ಶರಣರಾದವರೆ ಬಲ್ಲರು.

65

**ತನ್ನ ತಾನರಿದೆನೆಂಬವನ ಮುನ್ನ ನುಂಗಿತ್ತು ಮಾಯೆ,**
**ನಿನ್ನೊಳಗೆ ಅರಿವು ಭಿನ್ನವಾಗಿರುತ್ತಿರಲು**
**ಮುನ್ನವೆ ನೀನು ದೂರಸ್ಥ ನೋಡಾ !**
**ಭಿನ್ನವಿಲ್ಲದ ಅಜ್ಞಾನವ ಭಿನ್ನವ ಮಾಡಬಲ್ಲಡೆ**
**ತನ್ನಲ್ಲಿ ಅರಿವು ನಿಜವಪ್ಪುದು ಗುಹೇಶ್ವರಾ.** ॥ 349 ॥

**ತಾತ್ಪರ್ಯ :** *ತನ್ನ ತಾನರಿದೆನೆಂಬುವನ ಮುನ್ನ ನುಂಗಿತ್ತು ಮಾಯೆ :* ಪ್ರಭುದೇವರ ಮಹದರಿವು ಬಹು ಯತಾರ್ಥವಾದುದು. ಈ ಘನವಂತ ಅನುಪಮ. ಶಬ್ದವೇದಿ. ಮಾಯೆ ಆವುದು ಎಂಬುದನ್ನು ನೇರವಾಗಿ ತಿಳಿದು, ಅದನ್ನು ಸಕಲರಿಗೆ ತಿಳಿಸಲು ಬಂದ ಮಾಯಾಕೋಲಾಹಲ. ಕೆಲಬರು ಮಾಯೆ ಬಹುವಾಗಿ ಅರ್ಥ ಮಾಡುವರು. ಮಾಯೆ ಮಾ ಅಂದರೆ ಯಾವುದು, ಯೆ ಅಂದರೆ ಇಲ್ಲವೊ, ಯಾವುದು ಇಲ್ಲವೊ ಅದು ಮಾಯೆ. ತಾನಿದಿರೆಂಬುದು ಮಾಯೆ, ತೋರಿತ್ತಾಗಿ ತಾನಲ್ಲ, ಈ ತೋರುವುದು ಉಳುವೆ ಜ್ಞಾನಾನಂದ ತಾನೆಂಬುದನಾರೂ ಅರಿಯರಲ್ಲ . ನೋಡಲೇನೂ ಇಲ್ಲವಾಗಿ ನಿಜಸಿದ್ಧ ನೀನೆ ಚಿಮ್ಮಲಿಗೆಯಚೆನ್ನರಾಮ.

ಅಹಂ, ಇದಂ ತನಗೆ ಇದಿರಾಗಿ ತೋರುವುದರಿಂದ ಇದು ತಾನಲ್ಲ, ಯತಾರ್ಥವಾಗಿ ತಿಳಿದರೆ ಈ ತೋರುವುದು, ತೋರದಡಗದ ಘನ, ನಿರಂತರ ಘನ, ನುಡಿಗೆಡೆಗೊಡದ ಘನ, ಇದನಾರು ಅರಿಯರಲ್ಲಾ ನೋಡಲೇನೂ ಇಲ್ಲವಾಗಿ ನಿಜಸಿದ್ಧ ನೀನೆ ಚಿಮ್ಮಲಿಗೆಯ ಚೆನ್ನರಾಮಲಿಂಗ ತಾನೆ. ಆನು ನೀನೆಂಬುದು ಇಲ್ಲ, ತಾನಿಲ್ಲ ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದಿಲ್ಲಾದುದೆಂದಿಪ್ಪುದು, ಇಲ್ಲಾದುದಿಲ್ಲಾದುದೆಂತಿಪ್ಪುದು ಅನುವರಿದು ತನುವ ಮರೆದಡೆ ಭಾವರಹಿತ ಗುಹೇಶ್ವರಾ ಬಯಲು. ನಾನೀನೆಂಬುದು ಮಾಯೆ, ಗಂಡು ನಾನು, ಹೆಣ್ಣು ನೀನೆಂಬುದು ಮಾಯೆ. ಗಂಡ ನಾನು, ಹೆಂಡತಿ ನೀನು ಎಂಬುದು ಮಾಯೆ. ಧರ್ಮಾಧರ್ಮಂಗಳು ಮಾಯೆ. ಪುಣ್ಯ, ಪಾಪ ಮಾಯೆ. ಅಹುದು ಅಲ್ಲಾ ಮಾಯೆ. ತತ್ವ, ಅತತ್ವವೆಂಬ ವಿವೇಕ ಮಾಯೆ. ಆನು ಅರಿದೆ ಮರದೆನೆಂಬುದು ಮಾಯೆ. ಅಳಿದೆ, ಉಳಿದೆನೆಂಬುದು ಮಾಯೆ. ಅಂತರ್ಮುಖ, ಬಹಿರ್ಮುಖವೆಂಬುದು ಮಾಯೆ. ಅಜ್ಞಾನ, ಜ್ಞಾನ ಬಂಧಮೋಕ್ಷವೆಂಬುದು ಮಾಯೆ. ಜೀವ ಪರಮರೆಂಬುದು ಮಾಯೆ. ನಿತ್ಯವೆಂಬುದು ಅನಿತ್ಯವೆಂಬುದು ಮಾಯೆ. ನಾಹಂ ಎಂಬುದು ಕೋಹಂ ಎಂಬುದು ಮಾಯೆ. ಸೋಹಂ ಎಂಬುದು ಚಿದಹಂ ಎಂಬುದು ಮಾಯೆ. ಇವೆಲ್ಲವು ಕಲ್ಪಿತನ ಮರವಿನ ಅರುವಿನ ಮನದ ಅಲೆಗಳು. ಇವುಗಳೆಲ್ಲವು ತನ್ನಿಂದ ತಿಳಿಸಿಕೊಳ್ಳುವವು ನಾನು ಇವುಗಳನ್ನು ಅರಿಯುವ ಚಿದ್ರೂಪನಾಗಿದ್ದೇನೆಂದು ಆರು ಅಭಿಮಾನಿಸುವರು ಅದುವೆ ಅವನನ್ನು ನುಂಗಿತ್ತು. ಮಾಯೆ, ಈ ಅಭಿಮಾನಾತ್ಮಕ ಅರಿವು, ತನ್ನ ಅರಿಯದರುವನ್ನು ಬೆಳಗದಂತೆ ಮಾಡುತ್ತದೆ. ಅದಕ್ಕಾಗಿ ನುಂಗಿತ್ತು ಮಾಯೆ ಎಂದು

ಹೇಳಿಹರು.

ನಿನ್ನೊಳಗೆ ಅರಿವು ಭಿನ್ನವಾಗಿರುತ್ತಿರಲು ಮುನ್ನವೆ ನೀನು ದೂರಸ್ಥನು. ನಿನ್ನೊಳಗೆ ಅರಿವು ಎಂದರೆ ನಿನ್ನೊಳಗಿನ ಜ್ಞಾನ, ನಿನಗಿಂತ ಭಿನ್ನವಾಗಿರುತ್ತಿರಲು ಮುನ್ನವೆ ದೂರಸ್ಥನು. ತನ್ನೊಳಗಿನ ಜ್ಞಾನ ಅದು ತನಗಿಂತ ಬೇರಾದುದು ಆಗಿದ್ದರೆ ಮುನ್ನವೆ ತನ್ನಿರುವಿನಿಂದ ದೂರನು. ತನ್ನೊಳಗೆ ತನ್ನಿರುವಿನ ಅರುವು ತನಗಿಂತ ಬೇರಾಗಿರಬಾರದು, ತನ್ನಿಂದ ತಿಳಿಸಿಕೊಳ್ಳುವದಾಗಿರಬಾರದು, ಅದು ತಾನೆ ಆಗಿರಬೇಕು ಅದು ಯತಾರ್ಥ ಜ್ಞಾನವು, ಸಮ್ಯಕದರ್ಶನವು. ಇಲ್ಲಿ ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಇಲ್ಲದ ಗುರು, ಇಲ್ಲದ ಲಿಂಗ ಕಲ್ಪಿತನಾಗಿ ಅಕಲ್ಪಿತವ ಅರಿಯಬಹುದೆ ? ತನ್ನಿಂದ ತಾನರಿವುದೆ ಅರಿವು ಗುಹೇಶ್ವರಾ.

ತನ್ನೊಳಗೆ ತನಗೆ ಜ್ಞಾನವಾದುದು ಕಲ್ಪಿತಕ್ಕೊಳಪಟ್ಟ ಜ್ಞಾನವಾಗಬಾರದು ಗುರುವಿನಿಂದ ಬಂದ ಅರಿವು ಆಗಬಾರದು, ಲಿಂಗದಿಂದ ಬಂದುದು ಆಗಬಾರದು, ಬಾಧೆ ಹೊಂದುವ ಜ್ಞಾನವಾಗಬಾರದು, ಅಂದಲ್ಲಿ ಅದು ಅಬಾಧಿತ ಜ್ಞಾನವಾಗುವುದು. ನಿನ್ನೊಳಗಿನ ಅರಿವು ಅಂದರೆ ತರ್ಕದಿಂದುಕ್ತವಾದ ಅರಿವು ಅಲ್ಲ, ಸಮಾಧಿಯೋಗದಿಂದುಕ್ತವಾದ ಅರಿವು ಅಲ್ಲ, ಗುರೋಪದೇಶದಿಂದುಕ್ತವಾದುದು ಅಲ್ಲ, ಅದು ಜ್ಞಾನದ ಸಹಜತ್ವ.

ಭಿನ್ನವಿಲ್ಲದ ಅಜ್ಞಾನವ ಭಸ್ಮ ಮಾಡಬಲ್ಲಡೆ ತನ್ನಲ್ಲಿ ಅರಿವು ನಿಜವಪ್ಪುದು ಗುಹೇಶ್ವರಾ: ಭಿನ್ನವಿಲ್ಲದ ಅಜ್ಞಾನ ಭಸ್ಮವಾಗಿ ಬಲ್ಲಡೆ ತನ್ನಲ್ಲಿ ಅರಿವು ನಿಜವಪ್ಪುದೆಂಬ ಈ ಸಂಜ್ಞೆಗೆ ಏನನ್ನಬೇಕು ? ಶರಣ ಶರಣೆಯರಿಗಾಗಿ ಈ ಮಹಾಂತನ ಕರುಣಾರಸದ ಕಡಕೋಡಿಯೆ ಅವರ ಮೇಲೆ ಹಾದು ಹೋದಂತಾಗಿದೆ. ಇದು ತನ್ನಂತೆ ಮಾಡಿಕೊಳ್ಳುವ ಮಹಾಪ್ರಸಾದ. ಅರಿದರಿದು ನೋಡಿದವರಿಗೆ ಪ್ರಭು ಹೃದಯದ ಇದೆಂಥ ಗುಟ್ಟು, ಇದೆಂಥ ರಹಸ್ಯ, ಇದನ್ನು ಅರಿಯ ಬಂದ ಶರಣರೆ ನಿಜ ಶರಣರು, ಭಿನ್ನವಿಲ್ಲದ ಅಜ್ಞಾನ, ಭಸ್ಮ ಮಾಡಬಲ್ಲ ಹೃದಯ ಶರಣ ಹೃದಯ, ಅರು ಹೃದಯ, ತನ್ನಿಂದ ತಾನೆ ಅರಿದು ನೋಡಿದ ಹೃದಯ, ಸ್ವಯಮೇವೆ ಸ್ವಪ್ರಕಾಶ ಇದಾರ ಹಂಗಿಲ್ಲದ ಪ್ರಕಾಶ.

ಭಿನ್ನವಿಲ್ಲದ ಅಜ್ಞಾನ ಯಾವುದು ? ಈ ಅಜ್ಞಾನ ಬಹು ಸೂಕ್ಷ್ಮವಾಗಿದೆ. ತನ್ನನ್ನೆ ಮುಚ್ಚಿ ಹಾಕಿದ ಅಜ್ಞಾನ, ತಾನಾರೆಂದು ತಿಳಿಯಗೊಡದಂತೆ ಮಾಡಿದುದು, ಮರವುಳ್ಳವರನ್ನಷ್ಟೆ ತಿಳಿಯಗೊಡದಂತೆ ಮಾಡಿದೆ ಎಂದು ತಿಳಿಯಕೂಡದು. ಅರಿತೆನೆನ್ನುವವರಲ್ಲಿಯೂ ತನ್ನ ತಿಳಿಯಗೊಡದಂತೆ ಮಾಡಿದೆ. ಆರನ್ನಾದರೂ ನೀನು ಇದ್ದೀಯೊ, ಇಲ್ಲವೊ ಎಂದು ಪ್ರಶ್ನಿಸಿದರೆ, ಎಂಟು ವರ್ಷದ ಬಾಲಕನಿದ್ದರೂ ನಾನು ಇದ್ದೇನೆಂದು ಸಾಮಾನ್ಯ ಅರುವಿನ ಇರುವು ಹೇಳುವನು. ಈ ಸಾಮಾನ್ಯ ಅರಿವು ತನ್ನ ನಿಜದಿರುವು ತಿಳಿಯಗೊಡದಂತೆ ಮಾಡಿದೆ. ಈ ಭಿನ್ನವಿಲ್ಲದ ಅಜ್ಞಾನ ಭಸ್ಮ ಮಾಡಲು ಬರಬೇಕು. ಆಗ ತನ್ನಲ್ಲಿ ಅರಿವು ನಿಜವಪ್ಪುದು. ಕಲ್ಪಿತ ವಿಶೇಷ ಜ್ಞಾನವು ಕೂಡ ಭಿನ್ನವಿಲ್ಲದ ಅಜ್ಞಾನವು ಅದನ್ನು ಭಸ್ಮ ಮಾಡಲು ಬರಬೇಕು. ವಿಶೇಷ ಜ್ಞಾನವು ಭಿನ್ನವಿಲ್ಲದ ಅಜ್ಞಾನವು ಅದನ್ನು ಭಸ್ಮ ಮಾಡಲು ಬರಬೇಕು. ಕಲ್ಪಿತ ವಿಶೇಷ ಜ್ಞಾನವು ಹೀಗಿದೆ: ಮರವಿನಿಂದ ಕಲ್ಪಿಸಿಕೊಂಡ ಜ್ಞಾನ, ಭ್ರಾಂತಿ ಜ್ಞಾನ. ಉಪಾಧಿ ಧರ್ಮ ತಾನಾದ ಜ್ಞಾನ. ಗೃಹಸ್ಥ, ಬ್ರಹ್ಮಚರ್ಯ, ವಾನಪ್ರಸ್ಥ ಸನ್ಯಾಸಿ, ಅವುಗಳ ಧರ್ಮ ಧರ್ಮಂಗಳು ತನ್ನ ಮೇಲೆ ಆರೋಪ

ಮಾಡಿಕೊಳ್ಳುವುದು. ಶರೀರದ ಸರ್ವಕಾಯಂಗಳ ಆರೋಪ ತನ್ನ ಮೇಲೆ ಹಾಕಿಕೊಂಡಿರುವ ಜ್ಞಾನ. ಇದು ಭಿನ್ನವಲ್ಲದ ಅಜ್ಞಾನ, ಇದು ಭಸ್ಮ ಮಾಡಲು ಬರಬೇಕು. ವಿಶೇಷ ಜ್ಞಾನವೆಂಬುದು ಹೀಗೆ ಅದೆ. ಇದು ಅರುವಿನಿಂದ ಬಂದ ಜ್ಞಾನ. ತಾನು ಸಚ್ಚಿದಾನಂದ ನಿತ್ಯ ಪೂರ್ಣ, ನಿರುಪಾಧಿ ನಿರ್ವಿಕಾರಿ, ನಿಸ್ಸಂಗ, ನಿರ್ಗುಣ, ನಿರ್ವಿಕಲ್ಪ ಎಂಬ ಆತ್ಮ ಲಕ್ಷಣಾತ್ಮಕ ಜ್ಞಾನವೆ ವಿಶೇಷ ಜ್ಞಾನವೆಂದು ಹೇಳಿಸಿಕೊಳ್ಳುವುದು. ಇದು ಕೂಡ ಭಸ್ಮವಾಗಬೇಕು. ಆಗ ತನ್ನಲ್ಲಿ ಅರಿವು ನಿಜವಪ್ಪುದು ಗುಹೇಶ್ವರಾ ಎಂದು ಪ್ರಭು ಹೇಳಿದರು.

ಭಿನ್ನವಿಲ್ಲದ ಅಜ್ಞಾನ ಭಸ್ಮ ಮಾಡಬಲ್ಲ ಅರಿವು ತನ್ನ ನಿಜದಿರುವಿನ ಅರುವು ಇದು ನಿಶಬ್ದ ವೇದಿಗಳ ಅರಿವು. ಕಲ್ಪಿತ ಜ್ಞಾನವೆಲ್ಲವು ಭಿನ್ನವಿಲ್ಲದ ಅಜ್ಞಾನವು. ಅದು ಸಾಮಾನ್ಯ ಜ್ಞಾನವಿರಲಿ, ಕಲ್ಪಿತ ವಿಶೇಷವಿರಲಿ, ಆತ್ಮನ ಲಕ್ಷಣಾಯುಕ್ತವಾದ ವಿಶೇಷ ಜ್ಞಾನವಿರಲಿ, ಅದು ಭಿನ್ನವಿಲ್ಲದ ಅಜ್ಞಾನವಾದ್ದರಿಂದ ಇದರ ಭಸ್ಮವಾಗಲು ನಿರಾಲಂಬ ಜ್ಞಾನ, ನಿರವಧಿ ಜ್ಞಾನ, ಅನುಪಮ ಜ್ಞಾನ ಅವಶ್ಯಕ. ಈ ನಿರುಪಮ ಜ್ಞಾನಿಗಳು ಅವರು ಭಿನ್ನವಲ್ಲದ ಅಜ್ಞಾನ ಭಸ್ಮ ಮಾಡಬಲ್ಲವರು. ಅವರಲ್ಲಿ ಅರಿವು ನಿಜವಪ್ಪುದು ಸ್ಥಲವೆನ್ನೆ, ನಿಸ್ಥಲವೆನ್ನೆ, ನಿರ್ಣಯವೆನಗಾದ ಬಳಿಕ ಏನೆಂದರಿಯೆನಯ್ಯ ಕೂಡಲ ಚೆನ್ನಸಂಗಯ್ಯ. ಲಿಂಗೈಕ್ಯವೆಂದನ್ನೆ ಏನೆಂದುಸರಲು ಬಾರದ ನುಡಿಗೆಡೆಗೊಡದ ಘನದಿರುವಿನ ಅರುವು ತನ್ನೊಳ ಎಚ್ಚರವಾದುದು ಅದು ನಿರಾಲಂಬ ಜ್ಞಾನವಿದೆ, ನಿರವಧಿ ಜ್ಞಾನವಿದೆ, ಅನುಪಮ ಜ್ಞಾನವಿದೆ. ನಿಶಬ್ಧ ಬ್ರಹ್ಮದರಿವುಳ್ಳ ಅರುವಿನ ಜಾಗ್ರತೆ ಆದುದೆ ನಿಶಬ್ದ ವೇದಿಗಳ ಜ್ಞಾನವು. ಅದು ಅವರ್ಣೀಯವು. ಇಂತಪ್ಪ ಪರಮಜ್ಞಾನವ ಆರು ಅಳವಡಿಸಿಕೊಂಡಿಹರು ಅವರು ಭಿನ್ನವಿಲ್ಲದ ಅಜ್ಞಾನವ ಭಸ್ಮ ಮಾಡದವರು, ತನ್ನ ಇರುವಿನ ಅರುವು ಅಳವಟ್ಟುದು ಗುಹೇಶ್ವರಾ ಎಂದು ಹೇಳಿಹರು.

**66**

**ಆದಿಯನರಿಯರು ಅನಾದಿಯನರಿಯರು,**
**ಒಂದರೊಳಗಿಪ್ಪ ಎರಡನರಿಯರು,**
**ಎರಡರೊಳಗಿಪ್ಪ ಮೂರರ ಕೀಲನರಿಯರು,**
**ಮೂರರ ಸಂದು ಆರಾದುದನರಿಯರು.**
**ಆರೆಂದು ನುಡಿವ ಗಾರು ಮಾತು ತಾನಲ್ಲ**
**ಗುಹೇಶ್ವರನ ನಿಲವನರಿದಡೆ,-ಒಂದೂ ಇಲ್ಲ,**
**ಅರಿಯದಿರ್ದಡೆ ಬಹುಮುಖವಯ್ಯಾ,** ॥ 357 ॥

**ತಾತ್ಪರ್ಯ :** ಆದಿಯನರಿಯರು, ಅನಾದಿಯನರಿಯರು : ಆದಿ ಯಾವುದು ಮುನ್ನ, ಮುನ್ನ ಇದ್ದುದು ಆವುದೊ ಅದುವೆ ಆದಿ, ಈ ಆದಿಯನರಿಯರು. ಇದು ಅರುವ ಅರಿಯ ಹೇಳಿ, ಶ್ರೀಗುರು ಕರುಣಿಸಿದ ಕುರುಹ ಆದಿ. ಇದು ನಿರೂಪ, ವಾಙ್ಮನಕ್ಕಗೋಚರವಾದುದು. ಅರಿದಿಹೆನೆಂದಡೆ ಅರುವಿಂಗಸಾಧ್ಯ, ನೆನದಿಹೆನೆಂದಡೆ

ನೆನಹಿಂಗಸಾಧ್ಯ, ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ, ವಾಙ್ಮನಕ್ಕಗೋಚರವ ಅರಿವಪರಿ ಎಂತು ? ಗುರುತೋರದನ್ನಕ್ಕರ. ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಲಿಂಗ, ಉದಯವುದೆಂಬ ಶೃತಿ ಹುಸಿ ಕೂಡಲಸಂಗಮದೇವಾ, ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾಪ್ರಭುವೆ. ಆದಿ ಎಂದರೆ ಶ್ರೀಗುರು ಕರುಣಿಸಿದ ಲಿಂಗ ಆದಿ. ಅರುವ ಅರಿಯ ಹೇಳಿ, ಶ್ರೀಗುರು ಕೊಟ್ಟ ಕುರುಹು(ನಿರೂಪ) ಆದಿ. ಮೌನಮುದ್ರಿತವಾದುದು ಆದಿ, ಅಂಗಾಂಗಗಳಿಲ್ಲದುದು ಆದಿ.

ಅನಾದಿ ಎಂದಲ್ಲಿ *ಶಬ್ದಕ್ಕಿಂಬಾಯಿತ್ತು ಶಬ್ದವೆಂದರೆ ಗುಹೇಶ್ವರ* : ಇದು ಅನಾದಿ. ಇದನ್ನು ಆರು ಅರಿಯರಲ್ಲಾ, ಅರುವು ಸಚ್ಚಿದಾನಂದ, ಚೈತನ್ಯ ಇದು ಅನಾದಿ. ಅಂಗ ಜೀವಿಗಳೆಲ್ಲ ಅಶನಕ್ಕೆನೆರೆದು ಲಿಂಗವಾರ್ತೆ ಮಾಡುವರಯ್ಯ, ಕಾಯದ ಜೀವಿಗಳೆಲ್ಲ ಕಳವಳಿಸಿ ನುಡಿವರಯ್ಯ, ಮನಬಂದ ಪರಿಯಲ್ಲಿ ನುಡಿವಿರಿ ಗುಹೇಶ್ವರನೆಂಬುದು ನಿಮಗೆಲ್ಲಿಯದೊ !

ದೇಹವೆ ತಾವಾದವರು, ದೇಹದ ಮೋಹಿಗಳು ಅಹಂಕಾರಿಗಳು, ಇಂದ್ರಿಯರಾಮರು, ವಿಷಯಬೋಗೋಪ ಬೋಗಿಗಳು ಕಾಮಾಂಧರು, ವಿಷಯಲೋಲುಪ್ತರು. ಇವರುಗಳೆಲ್ಲ ಇಂದ್ರಿಯಜನ್ಯ ವಿಷಯೋಪ ಭೋಗಕ್ಕಾಗಿ ಆಸೆ ಮಾಡುವವರು. ನಾಲಿಗೆಯ ರುಚಿಗಾಗಿ ಕೂಡಿದವರು. ಇಂಥವರಿಗೆ ಲಿಂಗವಾರ್ತೆ ಹೇಳುವುದು, ಇದಲ್ಲದೆ ಇಂಥವರು ಲಿಂಗವಾರ್ತೆಯ ಮಾಡುವರು, ಇವರು ಲಿಂಗದ ರಹಸ್ಯವೇನು ಬಲ್ಲರು , ಕಾಯವೆ ತಾವಾದವರು ಇವರ ಮತಿ ಕಾಯದ ಯೋಗ ಕ್ಷೇಮಕ್ಕಾಗಿ ದುಡಿಯುವವರು ಅದರದೆ ಚಿಂತೆ, ಅದರದೆ ಕಳವಳ, ಅದರದೆ ಆರೈಕೆಯೆ ಅವರ ಜೀವನ. ಇಂಥವರು ಆದಿಯ ನರಿಯರು, ಅನಾದಿಯ ನರಿಯರು, ಒಂದರೊಳಗಿಪ್ಪ ಎರಡುವನರಿಯರು. ಒಂದೆಂದರೆ ಆವುದು ? ಒಂದೆಂದರೆ ತಾನೊಂದೆ. ತನ್ನೊಳಗಿಪ್ಪುದು ಆದಿ ಅನಾದಿ. ಆದಿ ಎಂದರೆ ಇದು ಹೃದಯದೊಳಗೆ ನ್ಯಸ್ತವಾಗಿಹ ಸದ್ವಸ್ತು, ಶ್ರೀಗುರು ಕರುಣಿಸಿದ ಮೌನಮುದ್ರೆ, ಸಚ್ಚಿದಾನಂದ ಗುಹೇಶ್ವರ. ಅನಾದಿ, ಈ ಆದಿ ಅನಾದಿ ರಹಸ್ಯ, ಬಹು ಗುಟ್ಟಾದುದು, ನೋಡುವುಡೆ ಅದುವೆ ಎರಡಾಗಿಹುದು. ಕುರುಹು ಆಗಿ ತೋರಿದುದು, ಅದುವೆ ನಿರೂಪವಾದುದು. ಅದುವೆ ಕುರುಹಾದಲ್ಲಿ ಆದಿ ಎನಿಸಿತ್ತು. ಈ ಆದಿಯೆ ನಿರೂಪವಾದಲ್ಲಿ ಅನಾದಿ ಎನಿಸಿತ್ತು. ಆದಿರೂಪು ಅನಾದಿ ನಿರೂಪವಾಯಿತ್ತು, ಎರಡರೊಳಗಿಪ್ಪ ಮೂರರ ಕೀಲವನರಿಯರು, ಆದಿ ಅನಾದಿಯೊಳಗಿಪ್ಪ ವಸ್ತು ಭರಿತವು, ಕುರುಹಿನೊಳಗೂ ಭರಿತವು, ಶಬ್ದದೊಳಗೂ ಭರಿತವು, ಇದರ ರಹಸ್ಯವನರಿಯರು. ಭರಿತವಾಗಿಹ ವಸ್ತುವ ತಿಳಿಯದ್ದರಿಂದ ಕುರುಹಾಗಿ ಪೂಜಾಲಿಂಗವಾಗಿ ತೋರುವುದು. ಶಬ್ದದೊಳಗಿಪ್ಪ ಭರಿತವಸ್ತು ತಿಳಿಯದ್ದರಿಂದ ಲಿಂಗ, ಲಿಂಗ ಎಂದು ಹಲುಬುವುದಾಗಿದೆ. ಒಂದರೊಳಗಿಪ್ಪ ಎರಡವರಿತವರು ಎರಡರೊಳಗಿಪ್ಪ ಮೂರರ ಕೀಲ ಅರಿವರು ಇವರಾರು ? ಬಸವರಸ, ಬಸವಪ್ರಭು, ಈ ಮೂರರ ಕೀಲವರಿತಾತ. ಅರಿಯದವರಿಗೂ ಅರಿತವರಿಗೂ ಮಹದಂತರವಿದೆ. ಅಜ್ಞಾನವೆತ್ತ, ಸುಜ್ಞಾನವೆತ್ತ, ಕತ್ತಲೆ ಎತ್ತ, ಬೆಳಕೆತ್ತ, ಅರಿಯದವರು ತಿಳಿದ ಆದಿಯೆ ಬೇರೆ ಅನಾದಿಯೆ ಬೇರೆ. ಇವರು ತಿಳಿಯದೆ ಕಲ್ಪಿಸುವವರು. ಅವರು ತಿಳಿದು ಅಕಲ್ಪಿತರಾಗಿಹರು. ಅರಿಯದವ ಆದಿ ಆವುದು,

ಅನಾದಿ ಆವುದು ? ಅರಿಯದವರು ಚತುರ್ಮುಖ ಬ್ರಹ್ಮನನ್ನೆ ಆದಿ ಮಾಡಿಹರು, ನಾರಾಯಣನನ್ನು ಅನಾದಿ ಮಾಡಿಹರು. ಕೆಲಬರು ನಾರಾಯಣನನ್ನೆ ಆದಿ ಮಾಡಿಹರು, ರುದ್ರನನ್ನೆ ಅನಾದಿ ಮಾಡಿಹರು.

ಅರಿತ ಶರಣ ಬಸವದೇವ ಕೂಡಲಸಂಗಮ ಏನೆಂದೂ ಅರಿಯದೆ ಇದ್ದ ಘನವು ಆದಿಯಾಗಿದೆ. ಅದುವೆ ಅನಾದಿಯಾಗಿದೆ. ಆದಿಯನರಿಯ ಹೋಗಿ ಅದುವೆ ಆಗಿಹ ಬಸವದೇವ, ಅನಾದಿಯನರಿಯ ಹೋಗಿ ಅದುವೆ ಆಗಿಹ ಬಸವನಾದುದರಿಂದ ಒಂದರೊಳಗಿಪ್ಪ ಎರಡುವನರಿದಾತ, ಎರಡರೊಳಗಿಪ್ಪ ಮೂರರ ರಹಸ್ಯವರಿದಾತ, ಒಂದು ಒಂದಾದುದು ಒಂದೆನಲಿಲ್ಲ, ಒಂದೆನ್ನುವವರು ತನ್ನೊಳಗಿನ್ಯಸ್ತವಾಗಿಹ ತತ್ವ ಅರಿಯರು. ಅರಿತವರಿಗೆ ಒಂದರೊಳಗಿಪ್ಪುದೆಂದರೆ ತನ್ನ ಅಂತರಂಗದೊಳನ್ಯಸ್ತವಾಗಿಹ ತತ್ವ ಒಂದೆ. ಆ ತತ್ವದೊಳಗಿಪ್ಪುದು ಅದುವೆ, ಶ್ರೀಗುರು ಕರುಣೆಯಿಂದ ತನ್ನ ಕರಕಮಲದಲ್ಲಿ ಬೆಳಗುವ ಚಿದ್ಘನ ಲಿಂಗ, ಅಂತಪ್ಪ ಚಿದ್ಘನ ಲಿಂಗವರಿತು ತಾನು ಅದು ಒಂದಾಗಿರ್ದ ಜಂಗಮ. ಈ ರಹಸ್ಯವ ಪೂಜಾಲಿಂಗ ಪೂಜಿಸುವ ಲಿಂಗಾರ್ಚಕರು, ಪೂಜಾಲಿಂಗವ ತಿಳಿಯರು. ಪೂಜಿಸುವ ತನ್ನ ತಿಳಿಯರು. ಈ ಎರಡುವನರಿಯರು, ಎರಡರೊಳಗಿಪ್ಪ ಮೂರರ ಕೀಲವನರಿಯರು ತನ್ನ ಅಂತರಂಗದೊಳುನ್ಯಸ್ತವಾಗಿಹ ತತ್ವವೆ ಸತ್ ಅದುವೆ ಎರಡಾಗಿ ಬಂದುದು ಚಿತ್ ಅದುವೆ ಮೂರಾಗಿ ನಿಂದುದು ಆನಂದ. ಅಂದರೆ ಗುರು, ಲಿಂಗ, ಜಂಗಮದ ರಹಸ್ಯವರಿಯರು.

ಅರಿಯದವರು : ಗುರು ಬೇರೆ, ಲಿಂಗ ಬೇರೆ, ಜಂಗಮ ಬೇರೆ ಈ ಮೂರು ಬೇರಾಗಿ ಕಾಣುವವರು ಅರಿಯದವರು. ಗುರುದೇವನಿಗೆ ಲಿಂಗ ಕರುಣಿಸಿದ ಕರ್ತಾರನೆಂದು ತಿಳಿದಿಹರು. ಜಂಗಮಯ್ಯನನ್ನು ಲಿಂಗವಂತರಲ್ಲಿ ಶ್ರೇಷ್ಠ, ಹಿರಿಯ ಸ್ವಾಮಿ ಒಡೆಯ ಅಧಿ ಪತಿ ಎಂದು ಬೇರಾಗಿ ತಿಳಿದವರಿಗೆ ಒಂದಾದ ರಹಸ್ಯ ಅದೆಂತು ಗೊತ್ತಾಗುವುದು. ಮೂರರ ಸಂದೆ ಆರಾದುದನರಿಯರು. ಗುರು, ಲಿಂಗ, ಜಂಗಮರ ಭೇದದೃಷ್ಟಿ, ಭೇದ ಜ್ಞಾನ, ಭೇದ ಭಾವ ಮೂರು ಸಂದಾಗಿದೆ, ಬಿರುಕಾಗಿದೆ. ಪೂರ್ಣವಾದುದು ಅಪೂರ್ಣವಾದಂತಾಗಿ ಆರಾದುದ ಅರಿಯರು. ಆರೆಂದರೆ ಆರುಸ್ಥಲವಾದುದನರಿಯರು. ಆರು ಎಂದು ನುಡಿವಗಾರು ಮಾತು ತಾನಲ್ಲ, ಆರು ಸ್ಥಲವರಿತವರು ಸಿಕ್ಕುವುದು ವಿರಳ, ತಿಳಿಯದೆ ತಿಳಿದವರಂತೆ ಮಾತಾಡುವ ಜನ ಬಹು ಜನ ಸಿಕ್ಕುತ್ತಾರೆ. ಇವರ ಮಾತು ಜಾಣತನ ಮಾತು, ಕಲಿತ ಮಾತು, ಇವರಿಗೆ ಸ್ಥಲದ ಪರಿಜ್ಞಾನವಿಲ್ಲ, ಮಾತಿನ ಮಾತಿನ ಮಹಾಂತರು ಶಬ್ದಾಡಂಬರವುಳ್ಳವರು. ಅದಕ್ಕಾಗಿ ತಾನಲ್ಲ ತನ್ನಿರುವು ಅಲ್ಲ.

ಗುಹೇಶ್ವರ ನಿಲವನರಿದಡೆ ಒಂದೂ ಇಲ್ಲ, ಅರಿಯದಿದ್ದಡೆ ಬಹುಮುಖವಯ್ಯ ಗುಹೇಶ್ವರ : ಗುಹೇಶ್ವರನೆಂದರೆ ಗುಹೆಗೆ ಈಶ್ವರನಾಗಿಹ ಘನಲಿಂಗ. ಪರಾತ್ಪರ ಲಿಂಗ. ನಿರಂತರವಾಗಿಹ ಚಿದ್ಘನ. ಚಿದ್ಘನದ ನಿಲುವ ಅರಿಯ ಹೋದಾಗ ಒಂದೂ ಇಲ್ಲ, ಅಂದರೆ ಗುರು ಇಲ್ಲ, ಲಿಂಗ ಇಲ್ಲ, ಜಂಗಮ ಇಲ್ಲ, ಇಲ್ಲ ಇಲ್ಲವೆಂಬುವ ತಾನಿಲ್ಲ ಈ ಮೂರು ಇಲ್ಲದಿರುವಲ್ಲಿ ಆರು ಸ್ಥಲವೆಲ್ಲ ಅವರ್ಣನೀಯವು.

ಅರಿಯದಿದ್ದಡೆ ಬಹುಮುಖವಯ್ಯ: ತಾನಾರು ತನ್ನ ಅರಿಯದ್ದರಿಂದ ಗುರು ಮುಖ, ಲಿಂಗ ಮುಖ, ಜಂಗಮ ಮುಖ ಇದಲ್ಲದೆ ಭಕ್ತನ ಮುಖ, ಮಹೇಶ್ವರನ

ಮುಖ, ಪ್ರಸಾದಿ ಮುಖ, ಪ್ರಾಣಲಿಂಗಿ ಮುಖ, ಶರಣನ ಮುಖ, ಐಕ್ಯನ ಮುಖ ಹೀಗಾಗಿ ಅರಿಯದ್ದರಿಂದ ತನಗೂ ಬಹುಮುಖವಾಗಿ ಅಚ್ಚ ಸುಖಕ್ಕೆ ದೂರಾಗಿಹರು. ಬಹುಮುಖ ಆವುದು ಅದಕ್ಕೆ ಸುಖವಿಲ್ಲ, ಎಲ್ಲಿ ಬಹು ಶೀಲವುಳ್ಳದ್ದಾಗಿಹುದು ಬಹುನಿತ್ಯನೇಮಂಗಳು ಆಗುವುದು ಸಹಜ. ಅರಿತ ಶರಣ ಈ ಶಿವ ನೋಡಲಾರ ಮಾಡಲಾರ.

67

**ಸುಖವಿಲ್ಲ ಸೂಳೆಗೆ ಪಥವಿಲ್ಲ ಶೀಲಕ್ಕೆ**
**ಮಾಡಲಾಗದು ನೇಮವ, ನೋಡಲಾಗದು ಶೀಲವ.**
**ಸತ್ಯವೆಂಬುದೆ ಸತ್‌ಶೀಲ,-ಗುಹೇಶ್ವರ ಲಿಂಗವನರಿಯ ಬಲ್ಲವಂಗೆ !** ॥ 358 ॥

**ತಾತ್ಪರ್ಯ :** ಸುಖವಿಲ್ಲ ಸೂಳೆಗೆ: ಸೂಳೆ ಆರು ? ಅವರಿಗೆ ಸುಖವಿಲ್ಲ, ಸುಖವಿಲ್ಲದವರು ಸೂಳೆಯರು. ತಮ್ಮಗಳ ಹೃದಯ ನೋಡಿಕೊಂಡವರಿಗೆ ವಿದಿತವು. ಸೂಳೆ ಎಂದರೆ ಹಲವು ಮುಖದ ಪ್ರೀತಿಯುಳ್ಳವರು. ಇವಳು ಚಂಚಲೆ, ಇಂದ್ರಿಯಂಗಳ ಪ್ರೇಮಿ, ವಿಷಯ ಲೋಲುಪ್ತಳು, ಅತಿಕಾಮಿ, ಇಂದ್ರಿಯಜನ್ಯ ವಿಷಯೋಪಭೋಗಿ, ರತಿಸುಖದ ಬಹು ಆಸಕ್ತಿವುಳ್ಳವಳು, ಇವಳಿಗೆ ಸುಖವೇತರದು.

ಸೂಳೆ ಯಾರು ? ಸುಖ ಆವುದು ? ಆವಲ್ಲಿ ಮನವು ಬಹಿರ್ಮುಖವಾಗಿ ಇಂದ್ರಿಯ ಜನ್ಯ ವಿಷಯೋಪಭೋಗ ಸುಖದತ್ತ ಪ್ರವೃತ್ತವಾಗಿದೆಯೊ ಅದು ಸೂಳೆ ಎನಿಸಿಕೊಳ್ಳುವದು. ಅದಕ್ಕೆ ಇಹಲೋಕದ ಅಧಿಕಾರ, ಧನ, ಧಾನ್ಯ ಇಷ್ಟಾರ್ಥ ಭೋಗವಿದ್ದರೂ ಸಾಕೆನಿಸದೆ ಇನ್ನು ವಿಷಯದಾಶೆಯುಳ್ಳದ್ದಾಗಿ ಅದನ್ನು ಪಡೆಯಲು ಈಶ್ವರಾರ್ಚನೆ ಮಾಡುವುದು. ಇಂದ್ರಿಯ ನಿಗ್ರಹವ ಮಾಡುವುದು, ತಪವ ಮಾಡುವುದು, ಧ್ಯಾನಾಸಕ್ತನಾಗುವುದು, ಇದಕ್ಕೆ ಈಶ್ವರನು ಮೆಚ್ಚಿ, ಆನೆ ಕೊಟ್ಟರೇನು, ಹಿರಿದಿಪ್ಪ ರಾಜ್ಯವ ಕೊಟ್ಟರೇನು, ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿ ಕೊಟ್ಟರೂ ಸಾಕೆನಿಸದೆ ಇನ್ನು ಬಯಕೆಯಿಂದುಕ್ತವಾದುದೆ ಸೂಳೆ ಎನಿಸುವುದು.

ಈ ಮನಸ್ಸಿಗೆ ತನ್ನ ಒಡೆಯನ ಸುಖಬೇಕಿಲ್ಲ, ಅಲ್ಪಕಾಲದ ಭೋಗ ಸುಖಕ್ಕೆ ಮೆಚ್ಚಿ ತನ್ನ ಘನತ್ವ ಮರೆತು, ಇಚ್ಛೆ ಬಂದಂತೆ ವರ್ತಿಸುವುದೆ ಸೂಳೆ ಎನಿಸುವುದು. ಸೂಳೆ ಎಂದರೆ ಸಂಕಲ್ಪ, ವಿಕಲ್ಪ ತಾನಾಗಿಹುದೆ ಸೂಳೆಯಾಗಿದೆ. ಇವಳದು ಭೇದ ಬುದ್ಧಿ, ಭೇದ ಭಾವ, ಅಂಗವ ಪ್ರೀತಿಸುವಳಲ್ಲದೆ ಲಿಂಗವ ಪ್ರೀತಿಸುವಳಲ್ಲ. ಭ್ರಮಾತ್ಮ ಬುದ್ಧಿಗೆ ಮೆಚ್ಚುವಳಲ್ಲದೆ, ಬ್ರಹ್ಮಕ್ಕೆ ಮೆಚ್ಚುವಳಲ್ಲ, ಸಟೆಯ ಸುಖವೆ ದಿಟ ಸುಖವೆನ್ನುವವಳು, ಇದು ಕಾರಣ ಇವಳು ಅಚ್ಚಸುಖ ಕಾಣದವಳು.

ಪಥವಿಲ್ಲ ಶೀಲಕ್ಕೆ ಪಥವಾವುದು ? ಶೀಲವಾವುದು ? ಪಥವಾವುದು ಎಂದಲ್ಲಿ ನಡೆ ನುಡಿ ಚೈತನ್ಯವುಳ್ಳನ್ನಬರ ಒಡಲ ಗುಣಗಳಾರಿಗೆಯೂ ಬಿಡವು ನೋಡಾ. ನೋಡುವ ನಯನ, ಕೇಳುವ ಶ್ರೋತ್ರ, ವಾಸಿಸುವ ಘ್ರಾಣಕ್ಕೆ ಗಂಧಾದಿಗಳು ತಾಗಿದವೆನಬೇಡ. ನೋಡುತ್ತ, ನಡೆಯುತ್ತ, ಕೇಳುತ್ತ, ಲಿಂಗಾರ್ಪಿತ ಮಾಡುವ ಲಿಂಗ ಭೋಗೋಪಭೋಗಿಗೆ

ಸರ್ವಾಂಗ ಶುದ್ಧವೆಂಬುದು ಇದೆ ಕಂಡಯ್ಯ, ಕಾಲತ್ರಯಂಗಳ ಜೀವತ್ರಯಂಗಳ, ಭಾವತ್ರಯಂಗಳನೊಂದು ಮಾಡಿ ಸುಖ-ದುಃಖ, ಸಗುಣ, ನಿರ್ಗುಣವೆಂಬುಭಯ ಲಿಂಗದಲ್ಲಿ ಏಕ ಮಾಡಿ ಅಹುದು ಅಲ್ಲ, ಬೇಕು, ಬೇಡ ಎಂಬ ಸಂದು ಸಂಶಯ ಕಳೆದಿಪ್ಪುದು ಕೂಡಲಸಂಗಯ್ಯನಲ್ಲಿ ಆದಿ ಪುರಾತನರು ಮಾಡಿದ ಪಥವು.

ಬಹು ಲಿಂಗಾರ್ಚಕರಲ್ಲಿ ಪಥವಾವುದು, ಅದರ ಜ್ಞಾನವಿಲ್ಲ, ಜ್ಞಾನಾಚಾರವಿಲ್ಲ, ಅರ್ಪಣವಿಲ್ಲ, ಲಿಂಗ ಭೋಗೋಪ ಭೋಗವಿಲ್ಲ, ಲಿಂಗದಲ್ಲಿ ಒಂದು ಮಾಡುವ ಅಖಂಡ ಜ್ಞಾನವಿಲ್ಲ, ಭಾವವಿಲ್ಲ, ದೃಷ್ಟಿ ಇಲ್ಲವಾದಲ್ಲಿ ಕಾಲತ್ರಯಂಗಳು ಇದ್ದವು. ಜೀವತ್ರಯಂಗಳು ಇದ್ದವು, ಭಾವತ್ರಯಂಗಳು ಇದ್ದವು, ಇವು ಇದ್ದಲ್ಲಿ ಮನವು ಲಿಂಗದಲ್ಲಿ ಲೀಯವಾಗದು ಅಕಲ್ಪಿತನಾಗಿ ಬೆಳಗನು, ಆವಲ್ಲಿ ಲಿಂಗ ಮನವಾಗಿದೆ ಅದು ಘನಮನವಾಗಿದೆ. ಅಲ್ಲಿ ಅಹುದಾವುದು ಅಲ್ಲಾವುದು ? ಬೇಕಾವುದು ಬೇಡಾವುದು ? ಚಿದಾಕಾಶಕ್ಕೆ ಬೇಕಾವುದು ಬೇಡಾವುದು ? ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮನಕ್ಕೆ ಒಡಲೆಲ್ಲಿ ಸಂದೇಹವೆಲ್ಲಿ ? ನಿಶ್ಚಿಂತವು ನಿರಾಮಯವು ಆಗಿರುವುದಕ್ಕೆ ಶೀಲವೇತರದು, ನಿಷ್ಕಳಂಕಕ್ಕೆ ಶೀಲವು ಆವುದರ ದೆಶೆಯಿಂದ ಮಾಡುವುದು. ಆವುದು ದೋಷದಿಂದುಕ್ತವು ಅದು ಶೀಲ ಮಾಡುವುದು ಸಹಜವು.

ಮರವಿಂಗೆ ಆಚಾರ ಉಂಟು, ಗುರು ಉಂಟು, ಲಿಂಗ ಉಂಟು, ಜಂಗಮ ಉಂಟು, ಪ್ರಸಾದ ಉಂಟು, ಅರುವಿಂಗೆ ಆಚಾರವಿಲ್ಲ, ಗುರುವಿಲ್ಲ ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ, ಆವುದು ಲಿಂಗಜ್ಞಾನದಿಂದ ವಂಚಿತವಾಗಿದೆ, ಅದಕ್ಕೆ ನಿಜವಾದ ಪಥವಿಲ್ಲ, ಅರುವ ಅರಿಯುವ ಪಥವಿಲ್ಲವಾಗಿದೆ. ಅದು ಶೀಲ ಮಾಡುವುದು. ಇದು ಕಾರಣ ಪಥವಿಲ್ಲ ಲಿಂಗಕ್ಕೆ ಎಂದು ಹೇಳಿದ್ದಾರೆ. ಮಾಡಲಾಗದು ನೇಮವ, ನೋಡಲಾಗದು ಶೀಲವ ಎಂದು ಹೇಳಿಹರು. ಆವ ನೇಮವ ಮಾಡಲಾಗದು ? ಆವ ನೇಮವ ಮಾಡಲಾಗದು ಎಂದಲ್ಲಿ ಪತ್ರೆ ನೇಮದವರೊಂದು ಕೋಟಿ, ಲಿಂಗಾರ್ಚನೆಯ ನೇಮದವರೊಂದು ಕೋಟಿ, ಜಂಗಮಾರ್ಚನೆಯ ನೇಮದವರೊಂದು ಕೋಟಿ, ಜಂಗಮ ತೃಪ್ತಿಯರೊಂದು ಕೋಟಿ, ತನ್ನ ತಿಳಿಯುವ ನೇಮದವರು ಒಬ್ಬರೂ ಇಲ್ಲವಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನ.

ಮಾಡಲಾಗದ ನೇಮವೆಂದರೆ ಪತ್ರೆ ನೇಮ, ಲಿಂಗಾರ್ಚನೆಯ ನೇಮ, ಜಂಗಮಾರ್ಚನೆಯ ನೇಮ, ಜಂಗಮ ತೃಪ್ತಿಯ ನೇಮ, ಈ ನೇಮ ಮಾಡಲಾಗದು ತನ್ನ ತಿಳಿಯುವ ನೇಮ ಮಾತ್ರ ಮಾಡುವುದು, ಇನ್ನುಳಿದ ನೇಮಂಗಳು ಎಷ್ಟೆಷ್ಟು ಮಾಡ ಹತ್ತುವನು ಅಷ್ಟೆ ಬಂಧನಕ್ಕೊಳಪಡುವನು. ಮುಗ್ಧ ಜೀವಿಯಾಗುವನು. ಅಂಧ ಶ್ರದ್ಧೆಯುಳ್ಳವನಾಗುವನು. ಇದರಿಂದ ವಿಚಾರ ಶಕ್ತಿ ಕುಗ್ಗುವುದು. ಅಲ್ಲಿ ಅರು ಹೃದಯವಾಗಲು ಇಂಬಿಲ್ಲ ಕಾರಣ ತನ್ನ ತಿಳಿಯುವ ನೇಮವೊಂದೆ ಮಾಡುವುದು.

ನೋಡಲಾಗದು ಶೀಲವ : ಉಂಬಲ್ಲಿ, ಉಡುವಲ್ಲಿ ಶೀಲ, ಕೊಂಬಲ್ಲಿ ಕೊಡುವಲ್ಲಿ ಶೀಲ, ತೊಳೆಯುವಲ್ಲಿ ಬಳಿಯುವಲ್ಲಿ ಶೀಲ, ಇವರ ಶೀಲ ಶುದ್ಧವಾಗುವುದು ತಡವಿಲ್ಲ, ಅಶುದ್ಧವಾಗುವುದು ತಡವಿಲ್ಲ, ಇವರು ಒಮ್ಮೆ ಅಹಂಕಾರಿಗಳು, ಒಮ್ಮೆ ನಿರಹಂಕಾರಿಗಳು, ಒಮ್ಮೆ ಭವಿಗಳು, ಒಮ್ಮೆ ಭಕ್ತರು, ಒಮ್ಮೆ ಲಿಂಗಾಭಿಮಾನಿಗಳು, ಒಮ್ಮೆ ಅಂಗಾಭಿಮಾನಿಗಳು.

ಒಮ್ಮೆ ಮಲತ್ರಯದ ಪ್ರೀತಿವಂತರು. ಒಮ್ಮೆ ಮಂತ್ರ ಪ್ರೀತಿವಂತರು. ಇವರದು ಆವುದು ಸ್ಥಿರವಿಲ್ಲ, ಇವರ ಪ್ರಪಂಚ ನಾಸ್ತಿಯಾಗಿಲ್ಲ, ಸೀಮಿತ ಬುದ್ಧಿ ನಷ್ಟವಾಗಿಲ್ಲ, ಪಂಚೇಂದ್ರಿಯಂಗಳು ಬಹಿರ್ಮುಖದಿಂದ ನಿವೃತ್ತವಾಗಿಲ್ಲ, ಕಲ್ಪಿತ ಕೆಡದವಂಗೆ ಅದೆಂತು ಶೀಲ, ಇಂತವರ ಶೀಲ ನೋಡಲಾಗದು ಎಂದು ಹೇಳಿದ್ದಾರೆ.

ಸತ್ಯವೆಂಬುದೆ ಶೀಲ, ಅದು ಸತ್ಯ ಶೀಲ ಗುಹೇಶ್ವರನರಿಯ ಬಲ್ಲವಂಗೆ, ಗುಹೇಶ್ವರನರಿಯ ಬಲ್ಲವರಿಗೆ ಮಾತ್ರ ಅವರು ಸತ್ಯವನರಿಯುವವರಾದ್ದರಿಂದ ಅವರಿಗೆ ಸತ್ಯವೆಂಬುದು ಶೀಲ ಅದು ಸತ್ಯಶೀಲವಾಗಿದೆ. ಅವರು ತಮ್ಮ ದೇಹವೆಂಬ ಗುಹೆಗೆ ಈಶ್ವರನಾಗಿರುವ ಘನಲಿಂಗವ ಅರಿಯಬಲ್ಲವರಾದ್ದರಿಂದ ಅದು ಸತ್ಯವಾಗಿದೆ. ಇದು ಕಾರಣ ಅವರದು ಸತ್ಯಶೀಲವಾಗಿದೆ ನಿಜವರಿತವರ ಶೀಲ, ಅದು ಕೆಡದ ಶೀಲ, ಅಲ್ಲಿ ಸ್ವೀಕರಿಸುವದಿಲ್ಲ ತ್ಯಜಿಸುವುದಿಲ್ಲ ನಿರಂತರ ಸತ್ಯನು.

**68**

**ಆಕಾರ, ನಿರಾಕಾರವೆಂಬೆರೆಡೂ ಸ್ವರೂಪಂಗಳು ;**
**ಒಂದು ಆಹ್ವಾನ, ಒಂದು ವಿಸರ್ಜನ.**
**ಒಂದು ವ್ಯಾಕುಳ, ಒಂದು ನಿರಾಕುಳ.**
**ಉಭಯಕುಳರಹಿತ ಗುಹೇಶ್ವರಾ-ನಿಮ್ಮ ಶರಣ ನಿಶ್ಚಿಂತನು.** ॥ 359 ॥

**ತಾತ್ಪರ್ಯ** : ಆಕಾರ ನಿರಾಕಾರವೆಂಬೆರಡು ಸ್ವರೂಪಂಗಳು : ಈ ಎರಡು ಸ್ವರೂಪಂಗಳು ಆರಿಗೆ ? ಇವು ಸಕಲರ ಸ್ವರೂಪಂಗಳು, ಮಾನವರಿಗೊಂದೆ ಅಲ್ಲಾ, ಎಲ್ಲೆಲ್ಲೂ ಇವೆರಡು ಸ್ವರೂಪಂಗಳು, ಒಂದು ಬಿಟ್ಟು, ಒಂದು ಇಲ್ಲದಿರುವು. ಎಲ್ಲಿ ಸಾಕಾರವೊ ? ಅಲ್ಲಿ ನಿರಾಕಾರವು. ಎಲ್ಲಿ ಕ್ಷೀರವಿದೆ ಅಲ್ಲಿ ಅಮೃತವಿದೆ. ಎಲ್ಲಿ ಕುಸುಮ, ಅಲ್ಲಿ ಪರಿಮಳ. ಹಾಗೆ ಎಲ್ಲಿ ತೋರುವದಿದೆ, ಅಲ್ಲಿ ತೋರದುದು ಅದೆ. ಒಂದು ವ್ಯಕ್ತವು, ಇನ್ನೊಂದು ಅವ್ಯಕ್ತವು. ಅಜ್ಞಾನಿಗಳಿಗೆ ಸಾಕಾರವು ದಿಟವಾಗಿದೆ. ಜ್ಞಾನಿಗಳಿಗೆ ನಿರಾಕಾರವು ದಿಟವು, ಒಂದು ಬಾಧಿತವು, ಒಂದು ಅಬಾಧಿತವು. ಸಾಕಾರವು ನಾಮರೂಪದಿಂದುಕ್ತವು, ದೃಶ್ಯರೂಪವು, ಅವಯವವುಳ್ಳದು, ಷಡ್ವಿಕಾರವು, ಶರೀರದ ತೋರಿಕೆಯೆ ಷಡ್ವಿಕಾರವು. ಇದಕ್ಕೆ ಸ್ಥೂಲವಾದುದು, ಸೂಕ್ಷ್ಮವಾದುದು ಕಾರಣವಾದುದು, ನಿರಾಕಾರವು. ಅದು ತೋರುವುದಿಲ್ಲ, ಅಡಗುವುದು ಅಲ್ಲ, ದೃಶ್ಯಾದಿಗಳ ಸಾಪೇಕ್ಷೆಯಿಂದ ದೃಕ್‌ರೂಪವಾಗಿದೆ. ಅವಿಕಾರಿಯು ಅಸಂಗ ಸ್ವಯಂ ಪ್ರಕಾಶವು, ನಿರವಯವಾಗಿದೆ, ಸತ್ಯವಾಗಿದೆ, ಅದು ನಿರಾಕಾರವು, ನಿರಾಕುಳವಾಗಿದೆ ಎಂದು ಹೇಳಿಹರು.

ದೇವರಲ್ಲಿಯೂ ಕೆಲಬರು ಸಾಕಾರ ಪೂಜೆ ಮಾಡುವರು, ಕೆಲವರು ನಿರಾಕಾರ ಪೂಜೆ ಮಾಡುವರು. ದೇವಾಲಯದಲ್ಲಿರುವ ದೇವನು, ಹಿಂದುಗಳಿಗೆ ಸಾಕಾರನು, ಇವರು ಆಕಾರಕ್ಕೆ ಮಹತ್ವ ಮಾಡಿಹರು. ಮುಸಲ್ಮಾನರು ನಿರಾಕಾರಕ್ಕೆ ಮಹತ್ವ ಮಾಡಿಹರು. ಇವರೀರ್ವರ ಮತಗಳಿಗೆ ನಿಜವಾದ ದೇವನ ಅರಿವು ಅವರವರ ಹೃದಯಕ್ಕೆ ವಿದಿತವು, ದೇವನು ಅವಯವವುಳ್ಳವನೋ ನಿರವಯನೊ ಜಡನೊ ಚೇತನನೊ ಚೈತನ್ಯನೊ

ಸಾಕಾರನೊ ನಿರಾಕಾರನೊ ಪೂರ್ಣನೊ ಅಪೂರ್ಣನೊ ಆವುದು ಹೇಳಿರಿ ಎಂದು ಪ್ರಶ್ನಿಸಿದಲ್ಲಿ ದೇವನ ಬಗ್ಗೆ ಸರಿಯಾದ ನಿರ್ಣಯ ಕೊಡುವವರೆಂದರೆ ತತ್ವವೇತ್ತರು ಶರಣರು.

ದೇವನು ಅಕ್ಷರಾಕ್ಷರ ಮೀರಿದ ಘನ, ಅವಿನಾಶಿ. ನಾನೀನೆಂಬುದಕ್ಕೂ ತೆರಹಿಲ್ಲದ ಘನನು, ಅಖಂಡಿತನು, ಅಪ್ರಮಾಣ, ಅಜ ಅಚಿಂತ್ಯನು, ಅಕಲ್ಪಿತನು, ಚೈತನ್ಯನು. ಸಚ್ಚಿದಾನಂದ ಘನ ಇರುವಲ್ಲಿ ಅವನು ಜಡನು ಹೇಗಾಗುವನು, ಗುಣಮಯಿ ಪ್ರಕೃತಿಧರನಾದಲ್ಲಿ ದೇವನು ಹೇಗಾಗುವನು. ಕೆಲಬರು ದೇವನು ಸರ್ವಜ್ಞನು, ಸರ್ವಾಂತರ್ಯಾಮಿ ಆರಾರಿಗೂ ಕಾಣುವವನಲ್ಲವೆಂದು ಅವ್ಯಕ್ತನೆಂದು ಒಪ್ಪಿಕೊಳ್ಳುವರು. ಮತ್ತು ಗೋಚರನು ಭಕ್ತರ ಇಷ್ಟಾರ್ಥ ಪೂರ್ತಿ ಮಾಡುವ ಮೇರೆಗೆ ಬ್ರಹ್ಮವಾಗಿ, ವಿಷ್ಣುವಾಗಿ, ಶಿವನಾಗಿ, ಶಂಕರನಾಗಿ, ಗಣಪತಿಯಾಗಿ ದೇವಿಯ ನಾನಾ ರೂಪವುಳ್ಳವನಾಗಿ ದರ್ಶನ ಕೊಡುತ್ತಿಹನು ಎಂಬ ಭಾವಿಕರು ಇದ್ದಾರೆ. ಇದು ಕಾರಣ, ಸಾಕಾರ, ನಿರಾಕಾರ ಸ್ವರೂಪಗಳ ವಿಷಯದಲ್ಲಿ ತತ್ವವೇತ್ತರು ಯತಾರ್ಥ ತಿಳಿದಷ್ಟು ಭಾವಿಕರಿಗೆ ಜ್ಞಾನವಿರುವುದಿಲ್ಲ, ಶರಣರು ತತ್ವವೇತ್ತರು, ತಾವಾರೆಂದರಿತವರು. ಅವರ ದೃಷ್ಟಿಗೆ ಎರಡು ಸ್ವರೂಪಂಗಳು. ಒಂದು ಆಹ್ವಾನ, ಒಂದು ವಿಸರ್ಜನ, ಒಂದು ವ್ಯಾಕುಳ, ಒಂದು ನಿರಾಕುಳವೆಂದು ಹೇಳಿದರು.

ಆವುದು ವ್ಯಥೆಗೊಳಪಟ್ಟುದು ಅದು ಸಾವು, ನೋವುಗಳುಳ್ಳದು, ರೋಗ ರುಜಿನಿಯಿಂದುಕ್ತವು. ಅವಯವವುಳ್ಳದ್ದಾದುದರಿಂದ ಚಿಂತೆ, ಭಯ, ಸಂತಾಪದಿಂದುಕ್ತವು, ಅದು ಸಾಕಾರ, ಅದು ವಿಸರ್ಜನೆ, ವ್ಯಾಕುಳವಾದುದು ಆಹ್ವಾನ. ಇದಾವುದು, ಇದು ತತ್ವ ದೃಷ್ಟಿಯುಳ್ಳವರ ಆಹ್ವಾನ, ಪರಮಾರ್ಥದವರ ಆಹ್ವಾನ, ಗುರುಕೃಪೆಯುಳ್ಳವರ ಆಹ್ವಾನ ಸ್ವರೂಪ. ಇದನ್ನು ಜ್ಞಾನದೃಷ್ಟಿಯಿಂದ ಆಹ್ವಾನ ಮಾಡಿಕೊಳ್ಳುವುದು. ಇಲ್ಲಿ ಮುಖ್ಯವಾಗಿ ನಿತ್ಯಾನಿತ್ಯ ವಿವೇಕವು ಅವಶ್ಯವು. ಈ ದೇವನು ಅವಿವೇಕಿಗಳಿಗೆ ಕಾಣನು, ವಿವೇಕಿಗಳಿಗೆ ದರ್ಶನವಾಗುವನು. ಈ ದೇವನು ನಿರಾಕಾರನು, ದೃಕ್ ರೂಪನು, ಸಾಕ್ಷಿಯು, ಸ್ವಯಂ ಪ್ರಕಾಶನು. ಈ ಘನವಂತನನ್ನು ಲೌಕಿಕರು, ಶ್ರಾವಣ ಮಾಸಾದಿಗಳಲ್ಲಿ ಆಹ್ವಾನಿಸುವರು. ಹಾಗೆ ಈ ದೇವನಿಗೆ ಆಹ್ವಾನ, ವಿಸರ್ಜನೆ ಬರುವುದಿಲ್ಲ, ದೇವನೆಂದರೆ ತನ್ನೊಳಗಿರುವ ದೇವನು. ತನ್ನೊಳಗೆ ಜ್ಞಾನದಿಂದ ನೋಡುವುದು. ಆಗ ತನಗೆ ಎರಡು ಸ್ವರೂಪಂಗಳು ಎಂಬುದು ತನ್ನಿಂದ ತನಗೆ ವಿದಿತವು. ಆಗ ಆವ ಸ್ವರೂಪವನ್ನು ವಿಸರ್ಜನೆ ಮಾಡುವುದು, ಆವುದನ್ನು ಆಹ್ವಾನಿಸಬೇಕೆಂಬುದು ವಿದಿತವಾಗಿ ವ್ಯಾಕುಳವಾದುದನ್ನು ತ್ಯಜಿಸುವನು. ನಿರಾಕುಳವಾದುದನ್ನು ಆಹ್ವಾನಿಸುವುದೆಂದರೆ ಅದು ತನ್ನ ಸ್ವರೂಪವೆಂದು ಒಪ್ಪಿಕೊಳ್ಳುವುದು. ಒಪ್ಪಿಕೊಂಡರೆ ಆಹ್ವಾನ ಮಾಡಿದಂತೆ. ನಾಮರೂಪವುಳ್ಳದೆಲ್ಲವನ್ನು ವಿಸರ್ಜಿಸುವುದು. ಅಸ್ತಿ, ಭಾತಿ, ಪ್ರಿಯವಾದುದು ಆವುದು ಅದನ್ನು ಆಹ್ವಾನಿಸುವುದು. ಈ ನಿರಾಕುಳ ದೇವನು ಸಚ್ಚಿದಾನಂದನು, ದೃಕ್ ರೂಪನು, ನಿಸ್ಸಂಗನು, ಸ್ವಯಂಪ್ರಕಾಶನೆಂದು ಹೀಗೆ ಯಾರು, ಈ ದೇವನು ನನ್ನ ಸ್ವರೂಪನು, ಆತ್ಮನೆಂದು ಅನುಸಂದಾನ ಮಾಡುವನು, ಅವರು ದುಃಖದಿಂದ ಮುಕ್ತರು, ಬ್ರಹ್ಮಾಕಾರವುಳ್ಳವರು, ಜೀವನ್ಮುಕ್ತರು, ಪ್ರವೃತ್ತಿಯಿಂದ ನಿವೃತ್ತರಾದವರು. ದೃಕ್ ರೂಪಾತ್ಮನೆ ತಾನಾದವನು ಇವನಿಗೆ ನಿರಾಕುಳನೆಂದು ಹೆಸರು.

ಉಭಯ ಕುಳರಹಿತ ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತರು: ಆರು ನಿಶ್ಚಿಂತರು ಅವರು ಗುಹೇಶ್ವರನ ಶರಣರು. ಅವರು ಉಭಯ ಕುಳರಹಿತರು. ಅವರು

ಅನುಪಮರು, ನಿಸ್ಸೀಮರು. ಅವರಲ್ಲಿ ಆಹ್ವಾನವಿಲ್ಲ, ವಿಸರ್ಜನೆಯಿಲ್ಲ, ಸಾಕಾರವೆಂಬುದಿಲ್ಲ, ನಿರಾಕುಳವೆಂಬುದಿಲ್ಲ, ವ್ಯಾಕುಳವೆಂಬುದಿಲ್ಲ, ಶಬ್ದಮುಗ್ಧರು, ನಿಶಬ್ದವೇದಿಗಳು, ಅಚಿಂತ್ಯವೆ ತಾವಾಗಿಹ ಘನವಂತರು. ಘಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದ ಉಂಟೆ ಅಯ್ಯ? ಅಂಗಕ್ಕೆ ಆತ್ಮಕ್ಕೆ ಭೇದ ಉಂಟೆ ? ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಸಾವಯವ ನಿರವಯಕ್ಕೆ ಭೇದವಿಲ್ಲವಯ್ಯ ಚೆನ್ನಮಲ್ಲಿಕಾರ್ಜುನ. ಎಂದು ತಾವಾರೆಂದರಿತ ಘನವಂತ ನಿಸ್ಸೀಮನು ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದು ತಾನೆ ತಾನಾಗಿಪ್ಪ ಮಹಿಮನು. ಆತನ ದಿವ್ಯ ದೃಷ್ಟಿಗೆ ಸಕಳ ತಾನೆ, ನಿಃಕಳ ತಾನೆ, ಸಾವಯವ ತಾನೆ, ನಿರವಯ ತಾನೆ, ಅಂಗ ತಾನೆ, ಆತ್ಮ ತಾನೆ. ಶ್ರೀಗುರು ಅರುವಿನ ಅರುವು ಮಾಡಿ ತೋರಿದಾಗ ಇನ್ನೆನಿನ್ನೇನು. ಲೌಕಿಕರ ಕಂಡ ಸಾಕಾರ ಸಾಕಾರವಾಗಲಿಲ್ಲ, ನಿರಾಕಾರ ನಿರಾಕಾರವಾಗಲಿಲ್ಲ, ಎತ್ತ ನೋಡಿದಡತ್ತತ್ತ ತಾನೆ ಪ್ರಜ್ವಲಿಸುವುದರಿಂದ ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತರು ಎಂದು ಹೇಳಿಹರು. ಆರು ನಿಶ್ಚಿಂತರು ಅವರು ಅರಿಯಬಾರದ ಘನವರಿದವರು ಅರಿಯದಂತಿಪ್ಪರು.

**69**

**ಅರಿದೆವರಿದೆವೆಂಬಿರಿ ಅರಿದ ಪರಿಯೆಂತು ಹೇಳಿರೆ ?**
**ಅರಿದವರು ಅರಿದೆವೆಂಬರೆ ?**
**ಅರಿಯಬಾರದ ಘನವರಿದು,**
**ಅರಿಯದಂತಿಪ್ಪರು ಗುಹೇಶ್ವರಾ.** ॥ 362 ॥

**ತಾತ್ಪರ್ಯ :** *ಅರಿದೆವರಿದೆವೆಂಬಿರಿ ಅರಿದ ಪರಿ ಎಂತು ಹೇಳಿರೆ :* ಅರಿದೆ ವರಿದೆವೆಂಬುದು ಏನನ್ನು ಅರಿದುದು ? ಆವುದು ಅರಿಯುವುದು ಅದನ್ನು ಅರಿದೆವೆನ್ನುವಿರಾ ? ಹಾಗಾದರೆ ಅದನ್ನು ಅರಿದ ರೀತಿ ಆವುದು ? ಬಗೆ ಆವುದು ಹೇಳಿರೆ ? ಅರಿವುದನ್ನು ನೀವು ಏನಾಗಿ ಅರಿದಿರಿ, ಅರಿಸಿಕೊಳ್ಳುವುದನ್ನಾಗಿ ಮಾಡಿ ಅರಿದಿರಾ ? ದೃಕ್ ಎಂದು ಅರಿದಿರಾ ? ಜಡ ಮಾಡಿ ಅರಿದಿರಾ ? ಚೇತನವೆಂದು ಅರಿದಿರಾ ? ಎಲ್ಲವನ್ನು ಅರಿಯುವುದು ಅದನ್ನು ಏನಾಗಿ ಅರಿದಿರಿ.

ಆಧ್ಯಾತ್ಮರುಗಳು ಗುರುಪುತ್ರರು, ಸಾಧಕರು, ಜಿಜ್ಞಾಸುಗಳು, ಇವರೆ ಅರಿದೆವರಿದೆ ಎನ್ನುವವರು. ಪ್ರಭುದೇವ ದಯಾಮಯ. ತನ್ನಂತೆ ಮಾಡುವ ಮಹಾಮಹಿಮ, ಇವರು ಅರಿದ ಪರಿಯ ಕೇಳುತ್ತಿದ್ದಾನೆ. ಇದಲ್ಲದೆ ಅರಿದವರು ಅರಿದೆವೆಂಬರೆ ಎಂದು ಪ್ರಶ್ನಿಸಿ ಹಾಗೆ ತಾನೆ ಇವರು ತಿಳಿದ ಘನದಿರುವ ಯತಾರ್ಥ ವಿವರಿಸುತ್ತಿದ್ದಾನೆ. ಅರಿಯಬಾರದ ಘನವ ಅರಿತವರು ಅರಿಯದಂತಿಪ್ಪರು ಎಂದು ತಾನೆ ಇವರ ನಿಜದಿರುವ ತಿಳಿಸಿಹನು.

ಮಹಾತ್ಮರ ದರ್ಶನವಾಗುವುದು ದುರ್ಲಭ, ಅದರಲ್ಲಿ ಆಧ್ಯಾತ್ಮರುಗಳಿಗೆ ಗುರು ಪುತ್ರರಿಗೆ, ಸಾಧಕರಿಗೆ ದರ್ಶನವಾಗುವುದು ಅವಶ್ಯವು, ಒಂದು ವೇಳೆ ಕೆಲಬರಿಗೆ ದರ್ಶನವಾದರೂ ಇವರೆ ಮಹಾತ್ಮರು ಎಂದು ತಿಳಿಯುವುದು ದುರ್ಲಭವು. ತಿಳಿದರೂ

ಅವರಲ್ಲಿ ಶರಣಾಗತ ಭಾವದಿಂದುಕ್ತರಾಗಿ ಅವರಿಂದ ನೇರವಾಗಿ ಸ್ವ ಸ್ವರೂಪವು ತಿಳಿಯುವುದು ಅತಿ ದುರ್ಲಭ. ಹೀಗಾಗಿ ಮಹಾತ್ಮರ ಮಹಾನುಭವವ ಅರಿದರಿದು ನೋಡುವಷ್ಟು ಹೃದಯುದ ಪರಿಶುದ್ಧತ್ವವು ಅವಶ್ಯಕವು. ಆರದು ಪರಿಶುದ್ಧ ಹೃದಯವಾಗಿಹುದು ಅಲ್ಲಿ ಅರಿದರಿದು ನೋಡುವ ಸುಜ್ಞಾನ ಬಂದರೆ ಬಹು ಸುಕೃತವೆಂದು ತಿಳಿಯುವುದು. ಇಲ್ಲವಾದರೆ ವಿಚಾರ ಮಥನವೆ ಪ್ರಧಾನವಾಗಿ ತನ್ನ ಅನುಪಮ ನಿಲುವು ಕಾಣದಂತಾಗುವನು.

ಅರಿದೆವರಿದೆವೆಂಬಿರಿ ಅರಿದ ಪರಿ ಎಂತು ಹೇಳಿರೆ ? ಎಂಬ ಪ್ರಭುವಿನ ಮಾರ್ಮಿಕ ಪ್ರಶ್ನೆ ಬಹುಗಹನವಾದುದು. ಈ ಮಹಾಂತರ ಮಹದರುವು ಆವುದು ಮುನ್ನ ಮುನ್ನಲಾದ ಘನವು, ತನ್ನಿಂದ ತಾನಾದ ಘನ ಅದು ತನ್ನಿರುವು ಆಗಿದೆ. ಅದನ್ನೆ ತನ್ನ ಪ್ರಶ್ನೆಯ ಮೂಲಕ ಹೃದಯವನ್ನೆ ಕೆರಳಿಸುವ ಅರು ಸ್ವರೂಪ ಸ್ವಯಂಜ್ಯೋತಿ. ಅದಕ್ಕಾಗಿ ಅರಿಯುವುದನ್ನು ಅರಿದೆವೆನ್ನುವಿರಿ ಅದನ್ನು ಅರಿದ ಪರಿ ಎಂತು ಹೇಳಿರಿ ಎಂದು ಕೇಳಿಹನು.

ಅರಿಯುವುದನ್ನು ಅರಿಯುವುದು ಹೇಗೆ ? ಅದು ಮುನ್ನ ಮುನ್ನವೆ ಅರಿಯುವುದಾಗಿದೆ. ಅಕಲ್ಪಿತವು, ಅಚಿಂತ್ಯವು, ಅಪ್ರಮಾಣವು, ಅಪ್ರಮೇಯವಾಗಿದೆ. ಅದನ್ನು ನೀವು ಹೇಗೆ ಅರಿಯುವುದು. ಇದನ್ನು ನೀವು ಹೇಗೆ ಅರಿತು ಅರಿದೆವೆನ್ನುವಿರಿ ಎಂದು ಪ್ರಶ್ನಿಸಿ ಅರಿಯುವುದನ್ನು ನೀವು ಅರಿಯ ಹೋಗಿ ಅರಿದೆವರಿದೆವೆನ್ನುವಿರಾ ? ಅರಿಯದೆ ಅನ್ನುವಿರಾ ? ಅರಿಯ ಹೋದವರು ಅರಿದವರು ಅವರು ಅರಿದೆವೆಂಬರೆ ? ನೀವು ಅರಿದೆವರಿದೆವೆನ್ನುವಿರಿ ಅಂದಲ್ಲಿ ನೀವು ಅರಿಯುವುದನ್ನು ನಿಮಗಿಂತನ್ಯವಾಗಿ ತಿಳಿದಿಹರೆ ? ಅದನ್ನು ವೇದ ವೇದಾಂತವೆಂದು ತಿಳಿದಿಹರೆ ? ಗುರೂಪದೇಶವೆಂದು ತಿಳಿದಿರುವಿರಾ ? ಇದಲ್ಲದೆ ನಿಮ್ಮನ್ನು ನೀವು ಅರಿತು ಹೇಳಿರುವಿರೊ ? ಹಾಗೆಯೆ ಹೇಳಿರುವಿರಿ.

ಅರಿಯುವುದನ್ನು ನೀವು ಅರಿಯ ಹೋಗದಿದ್ದರೆ ಅರಿದೆವರಿದೆವೆನ್ನುತ್ತಿದ್ದಿಲ್ಲ, ಏಕೆಂದರೆ ಆವುದು ಅರಿಯವದು ಅದನ್ನು ಅರಿಯ ಹೋದವರು ಅದುವೆ ಆಗಿಹರು. ಅರಿಯುವುದು ಆವುದು ಇದೆ. ಅದು ತಾನೆ ತನಗಿಂತನ್ಯವಿಲ್ಲ . ತಾನೆಂಬುದು ತಾನೆ ಭಾವಕ್ಕಿಂಬಿಲ್ಲ ಶಬ್ದ ಮೀಸಲು ನುಡಿಗೆಡೆಯಿಲ್ಲ, ಎಡೆಗೆ ಕಡೆಯಿಲ್ಲ, ಗುಹೇಶ್ವರ ಲಿಂಗ ವೇಧಿಸಲೊಡನೆ ಅರಿಯುವುದು ಆವುದು ಇದೆ. ಅದನ್ನು ತನ್ನೊಳಗೆ ಅರಿಯ ಹೋದವರು, ಅದು ಗುಹೇಶ್ವರ ಲಿಂಗ ತಾನೆ ಅರಿಯಬಾರದ ಘನವಾಗಿಹನು. ಅರಿಯ ಬಾರದ ಘನವೆಂದರೆ ಕಲ್ಪಿತನಾಗಿ ಅರಿಯ ಹೋದರೆ ಅಸಾಧ್ಯವು. ಜೀವನೆಂಬ ಭಾವನೆಗೆ ನಿಲುಕದ ಇರವು ಅಂತರಾತ್ಮನೆಂಬ ಭಾವನೆಗೆ ನಿಲುಕದ ಇರವು, ಪರಮಾತ್ಮನೆಂಬ ಭಾವನೆಗೂ ನಿಲುಕದ ಇರವು, ಅವಿವೇಕಿಯಾದುದು ಜೀವ, ವಿವೇಕಿಯಾದುದು ಅಂತರಾತ್ಮ . ಅರುವು ಆದುದು ಪರಮಾತ್ಮ. ಇವು ಮೂರು ಆದವುಗಳು ಭಾವನಾಮಯವು, ಭಾವಕ್ಕಗಮ್ಯವಾದುದು, ಭಾವಕ್ಕಿಂಬುಕೊಡುವದದೆಂತು ಅರಿಯಬಾರದ ಘನ, ಅದು ಆವಾವ ಭಾವಂಗಳ ಅರಿಯದುದು, ಅರಿಯಬಾರದ ಘನ ಅದು ಅರಿಯದರವು, ಅಲ್ಲಿ ಅರಿವುದಿಲ್ಲ, ಮರೆವುದಿಲ್ಲ, ಅದು ದೃಶ್ಯವಾಗಿಲ್ಲ, ದೃಕ್ ಎಂಬುದು ಆಗಿಲ್ಲ, ಏನೊಂದಾಗದ ಘನ ಅದು ಅರಿಯಬಾರದ ಘನವು, ಶಬ್ದ ಮೀಸಲು ಅದು ನಿಶಬ್ದವೇದಿಗಳ ಸಮ್ಯಜ್ಞಾನವು.

ಅರಿಯಬಾರದ ಘನ ತಾನೆ. ತನ್ನನ್ನು ದೃಶ್ಯ. ಅದೃಶವೆನಲು ಬರದು, ವ್ಯಾಪ್ತ

ವ್ಯಾಪಕನೆನ್ನಲುಬರದು, ಅಪರ ಪರ ಎನ್ನಲು ಬರದು, ಖಂಡಾಖಂಡವೆನ್ನಲು ಬರದು, ಸಂಗ ಸಮರಸವೆನ್ನಲುಬರದು, ಅರಿತೆ ಅರಿಯೆನೆನ್ನಲು ಬರದು. ನುಡಿಗೆಡೆಗೊಡದ ಘನವೆ ತನ್ನಿರುವು ಆಗಿರುವಲ್ಲಿ ಶಬ್ದದಿಂದ ಉಸುರುವದೆಂತು, ಅದನ್ನು ವೇದ ವೇಧಿಸದು, ಶಾಸ್ತ್ರ ಸಾಧಿಸದು, ಅದು ಗುರುವಿಡಿದ ಅರುವು ಆಗದು, ಲಿಂಗವಿಡಿದ ಅರುವು ಆಗದು. ಇಲ್ಲದ ಗುರು, ಇಲ್ಲದ ಲಿಂಗ ಕಲ್ಪಿತಕ್ಕೆ ಅರವಹುದೆ ? ತನ್ನಿಂದ ತಾನರಿವುಡೆ ಗುಹೇಶ್ವರ. ಎಂದು ಪ್ರಭು ತನ್ನಿಂದ ತಾನೆ ಅರಿದರಿದು ನೋಡಿದುದರಿಂದ ತಾನೆ ಅರಿಯಬಾರದ ಘನವಾಗಿಹನು. ನುಡಿವುದೆಲ್ಲ ಹೆತ್ತರಿವು, ಇವು ತನ್ನಿಂದ ತಿಳಿಸಿಕೊಳ್ಳುವುಗಳಾಗಿವೆ. ತನ್ನಿರುವು ಆಗವು, ತಾನೆ ಅರಿಯಬಾರದ ಘನವಾಗಿದ್ದುದು ತನ್ನಿಂದ ತನಗೆ ವಿದಿತವಾದಲ್ಲಿ ಅವರು ಅರಿಯದಂತಿಪ್ಪರು.

ಅರಿಯದಂತಿಪ್ಪರು ಇವರಾರು ? ತನ್ನಿಂದ ತನ್ನ ಅರಿತವರು ತನ್ನ ಹೊರತು ಏನನ್ನು ಅರಿಯದವರು. ಅವರು ಅರಿಯಬಾರದ ಘನವಾಗಿಹರು. ಅವರು ಅರಿಯದಂತಿಪ್ಪರು. ಅವರು ಅಲ್ಪ ಜ್ಞಾನಿಯ ಅವನೆಂತು ಅರಿವನು, ಮಧ್ಯಮಜ್ಞಾನಿಯ ಅವನೆಂತು ಅರಿವನು. ಅತೀತ, ಅತೀತ ಎಂಬುವ ಜ್ಞಾನಿಯನ್ನಾದರೂ ಅವನೆಂತು ಅರಿಯುವನು ಇವಾವುಗಳ ಕಾಣದ್ದಂತಿದ್ದುದರಿಂದ ಅರಿಯದಂತಿಪ್ಪರು ಅವರೆ ಅರಿಯಬಾರದ ಘನವರಿತವರು ಎಂದು ಹೇಳಿದೆ.

**70**

**ಅಲ್ಪ ಜ್ಞಾನಿ ಪ್ರಕೃತಿ ಸ್ವಭಾವಿ, ಮಧ್ಯಮ ಜ್ಞಾನಿ ವೇಷಧಾರಿ,**
**ಅತೀತ ಜ್ಞಾನಿ ಆರೂಢ, ಆರೂಢನನಾರೂ ಅರಿಯಬಾರದಯ್ಯಾ.**
**ಜ್ಞಾನವರಿಯದಾತ ಅಜ್ಞಾನಿ, ನಾಮನಷ್ಟ,**
**ಈ ಚತುರ್ವಿದದೊಳಗೆ ಆವಂಗವೂ ಇಲ್ಲ,**
**ಗುಹೇಶ್ವರಾ-ನಿಮ್ಮ ಶರಣ.** ॥ 363 ॥

**ತಾತ್ಪರ್ಯ** : *ಅಲ್ಪಜ್ಞಾನಿ ಪ್ರಕೃತಿ ಸ್ವಭಾವಿ:* ಈ ಅಲ್ಪ ಜ್ಞಾನಿ ಯಾರು ? ಪ್ರಕೃತಿ ಸ್ವಭಾವಿಯೆ ಅಲ್ಪ ಜ್ಞಾನಿ. ಇವರು ಗುಣಮಯಿಗಳು, ಗುಣವಂತರು, ಗುಣಾದಿ ಕಾರ್ಯವೆ ತಾವಾದವರು. ಬಹುಪಾಲು ಮಾನವರು, ದೇವತೆಗಳು, ದೈತ್ಯರು ಇವರು ಗುಣಂಗಳಿಗೆ ಒಪ್ಪಿ ಮಾನವ ಮಾನವರಲ್ಲಿ ವಿಷಮತೆ. ಸತ್ವಗುಣಿಯು ರಜೋಗಣವನ್ನು ಸೇರನು. ರಜೋಗುಣವು ತಮೋಗುಣವನ್ನು ಸೇರದು. ಧರ್ಮಾತ್ಮನು ಅಧರ್ಮಾತ್ಮನನ್ನು ಸೇರನು, ದೈತ್ಯರು ದೇವತೆಗಳನ್ನು ಸೇರರು, ದೇವತೆಗಳು ದೈತ್ಯರನ್ನು ಸೇರರು. ಇವರೀರ್ವರು ಬಹುಪರಾಕ್ರಮಿಯ ಸೇರರು. ಕೌರವರು ಪಾಂಡವರ ಸೇರರು, ಇವರಲ್ಲಿಯೂ ಸಮವಿಲ್ಲ, ವಿಷಮ ದೃಷ್ಟಿಯುಳ್ಳವರು, ಪ್ರಕೃತಿ ಸ್ವಭಾವಕ್ಕೆ ಒಪ್ಪಿಕೊಂಡವರು ಇವರಲ್ಲಿಯೂ ಸಮವಿಲ್ಲ,

ಪರಮಾರ್ಥವನ್ನು ಒಪ್ಪಿಕೊಂಡ ಬಹುಜ್ಞಾನಿಗಳು ಪ್ರಕೃತಿ ಸ್ವಭಾವವಾಗಿಹ ಕಾರ್ಯವ ನೋಡಿ ಅಲ್ಲಿಯು ಹಿರಿದು ಕಿರಿದಾಗಿ ಇವರಲ್ಲಿಯು ಸಹ ಸಮವಿಲ್ಲ, ಇವರು ಸೀಮಿತರು. ಸತ್ವಗುಣವಾಗಿಹ ತಪಸ್ಸು, ತ್ಯಾಗ ಬ್ರಹ್ಮಚರ್ಯ ಧ್ಯಾನ, ಮೌನಗಳಿಗೆ ಮಹತ್ವಕೊಟ್ಟು

ಒಬ್ಬರಿಗೊಬ್ಬರು ಪ್ರಕೃತಿ ಸ್ವಭಾವ ನೋಡುವರಲ್ಲದೆ ಸಮದರ್ಶನವಿಲ್ಲವಾದ್ದರಿಂದ ಪ್ರಕೃತಿಯ ವಶಗತರು ಇವರು ಅಲ್ಪಜ್ಞಾನಿಗಳು ಎಂದು ಹೇಳಿದೆ.

ಮಧ್ಯಮ ಜ್ಞಾನಿ ವೇಷಧಾರಿ : ಈ ವೇಷಧಾರಿಗಳು ಇವರಾರು ? ಇವರು ಅಜ್ಞಾನಿಗಳಲ್ಲ, ಜ್ಞಾನಿಗಳಲ್ಲ, ಜ್ಞಾನಿಗಳಂತೆ ಕಾಣಿಸಿಕೊಳ್ಳುವ ವೇಷಧಾರಿಗಳು. ಈ ವೇಷಧಾರಿ ಸಂಖ್ಯೆ ಬಹಳ ಇದೆ. ಸಗುಣೋಪಾಸಕರು, ಪ್ರಣವೋಪಾಸಕರು, ಶಿವೋಪಾಸಕರು, ವಿಷ್ಣೋಪಾಸಕರು, ದೇವಿ ಉಪಾಸಕರು, ನಿರಾಕಾರ ಉಪಾಸಾಕರು, ಇವರು ದೇವರ ಸಮೀಪದಲ್ಲಿರುವ ಭಕ್ತರು. ಒಬ್ಬವ ಲಿಂಗವ ಕಟ್ಟಿಕೊಂಡು ತ್ರಿಪುಂಡ್ರ ಭಸ್ಮವ ಹಚ್ಚಿ, ಗಂಧ ಧೂಪ ಪತ್ರಿ ಪುಷ್ಪವ ಧರಿಸಿಕೊಂಡು ಲಿಂಗಾರ್ಚನೆಯಲ್ಲಿ ಮಗ್ನನಾಗಿಹನಾಗಿ ತೋರುವ ; ಇವನೊಬ್ಬ ವೇಷಧಾರಿ. ಜನಿವಾರವ ಹಾಕಿಕೊಂಡು ಗಾಯತ್ರಿ ಮಂತ್ರವ ಪಟಿಸುತ್ತ ತುಳಸಿಯನ್ನು ಕಿವಿಯಲ್ಲಿ ಧರಿಸಿಕೊಂಡು ಹರಿ ಓಂ, ಹರಿ ಓಂ ಮಂತ್ರಾನುಸಂದಾನದಲ್ಲಿ ಮಗ್ನನಾಗಿಹನಂತೆ ತೋರುವ ಇವನೊಬ್ಬ ವೇಷಧಾರಿ. ಗುಡಿಯೊಳಗೆ ದೇವನನ್ನು ಪೂಜಿಸುವ ಇವನೊಬ್ಬ ಪೂಜಾರಿ, ಮಸೂದಿಯಲ್ಲಿ ನಿರಾಕಾರ ಉಪಾಸನೆ ಮಾಡುವನೆಂದು ಅಲ್ಲೋ ಎಂಬ ಜಪದಲ್ಲಿ ಮತ್ತು ಸಮಾಜದಲ್ಲಿ ಮಗ್ನನಾಗಿರುವ ಇವನೊಬ್ಬ ವೇಷಧಾರಿ. ಪ್ರಣವೋಪಾಸಕನಾಗಿ ಓಂ ಎಂಬ ಮಂತ್ರದಲ್ಲಿ ಮಗ್ನನಾಗಿಹನಂತೆ ಕಾಣಿಸುವ ಇವನೊಬ್ಬ ವೇಷಧಾರಿ. ಇವರು ಭಾವಿಕರು, ತಮ್ಮ ತಮ್ಮ ಭಾವಕ್ಕನುಸಾರವಾಗಿ ತಮ ತಮಗೆ ತಿಳಿದಂತೆ ಭಾವಿಸುವುದರಿಂದ ಇವರು ಮಧ್ಯಮ ಜ್ಞಾನಿಗಳು. ಇವರ ಭಾವ ವೇಷಧಾರಿ ಭಾವ, ನಡುವೆ ಕಲಿತುಕೊಂಡ ಭಾವ, ಭಾವಕ್ಕಗಮ್ಯನಾದ ಘನದ ತಿಳುವಳಿಕೆಯಾದರೆ ಇದು ಮಧ್ಯಮ ಜ್ಞಾನವೆಂದು ತಿಳಿದು ನಿಜಜ್ಞಾನವಾದಾಗ ಈ ವೇಷಧಾರಿತನಕ್ಕೆ ಒಪ್ಪಲಾಗದು.

ಅತೀತ ಜ್ಞಾನಿ ಆರೂಢ : ಆರು ಅತೀತ ಜ್ಞಾನಿಗಳು ಈ ಜ್ಞಾನ ಭಾವಾತೀತ, ಕಲ್ಪನಾತೀತ, ತ್ರಿಗುಣತೀತ, ಅವಸ್ಥಾತೀತ, ಧ್ಯಾನಾತೀತ ಅತೀತ ತತ್ವಕ್ಕೆ ಒಪ್ಪಿಕೊಂಡಾತ ಈ ಮಹಾಂತ ಅತೀತದರುವುಳ್ಳಾತ, ಅದುವೆ ತನ್ನಿರುವು ಆಗಿಹ ಮಹಾಪುರುಷ, ಈತನು ಕರ್ಮಕಾಂಡಿಯಲ್ಲ ಉಪಾಸನಾಕಾಂಡಿಯೂ ಅಲ್ಲ ಜ್ಞಾನಕಾಂಡಿಯು, ಭಾವರೂಪ ಭ್ರಾಂತನಲ್ಲ, ಪರಬ್ರಹ್ಮವೆ ತಾನೆಂಬ ಜ್ಞಾನಸ್ವರೂಪ ಜೀವತ್ರಯಕ್ಕೂ ಮೀರಿದ ನಿಸ್ಸಂಗದರುವುಳ್ಳ ಮಹಾಂತ ದೃಕ್‌ರೂಪವೆ ತಾನಾದ ಪರಬ್ರಹ್ಮ, ನಿಸ್ಸಂಗವೆ ತಾನಾದ ನಿರುಪಾಧಿ, ನಿರಾಲಂಬ ತಾನಾದ ನಿರಾಳ, ಈ ಮಹಾಂತ ಅತೀತಜ್ಞಾನಿ, ಆರೂಢ ಈ ಆರೂಢತ್ವ ಆರು ಅರಿಯಬಾರದಯ್ಯ.

ಅಜ್ಞಾನಿಯ ನಾಮ ನಷ್ಟವಾದುದರಿಂದ ಜ್ಞಾನವನರಿಯದಾತ ಇದಕ್ಕಾಗಿ ಆರು ಅರಿಯಬಾರದಯ್ಯ. ಅಲ್ಲಿ ಇವನು ಅಲ್ಪನು ಪ್ರಕೃತಿ ಸ್ವಭಾವದವನೆಂಬುದಿಲ್ಲ, ಮಧ್ಯಮ ಜ್ಞಾನಿ, ವೇಷಧಾರಿ ಎಂಬುದನ್ನು ಅರಿಯನು, ಅತೀತ ಜ್ಞಾನಿ, ಆರೂಢ ಎಂಬುದನ್ನು ಅರಿಯನು, ಈ ಘನವಂತನ ದೃಷ್ಟಿಯಲ್ಲಿ ಅಜ್ಞಾನಿ ನಾಮನಷ್ಟವಾಗಿಹುದು, ಅಂದರೆ ಅಲ್ಪಜ್ಞಾನಿ, ಮಧ್ಯಮಜ್ಞಾನಿ, ಅತೀತ ಜ್ಞಾನಿ, ಈ ಮೂರು ಜ್ಞಾನವ ನರಿಯದಿದ್ದುದೊಂದು ಜ್ಞಾನ.

ಈ ಚತುರ್ವಿಧದೊಳಗೆ ಆವಂಗವೂ ಇಲ್ಲ ಗುಹೇಶ್ವರ ನಿಮ್ಮ ಶರಣ:

ಮರವಿನಿಂದ ಅಂಗವುಳ್ಳವನಾಗಿ ಕಲ್ಪಿತನಾಗಿಹನು, ಕಲ್ಪಿತ ಪುರುಷನಾದಲ್ಲಿ

ಶರಣನೆನಿಸಿಕೊಳ್ಳುವನು. ಇದು ಕಾರಣ, ಶರಣನು ಅನುಪಮನು, ಅಖಂಡ ಸ್ವರೂಪನು, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನಕ್ಕೆ ಘನನು, ಮಹಾಂತ ಸ್ವಭಾವ ಕಂಡವನಲ್ಲ, ವೇಷಧಾರಿಯ ಕಂಡವನಲ್ಲ, ಅತೀತ ಅತೀತ ಎಂಬುವರ ಕಂಡವನಲ್ಲ. ಅತೀತವೆ ನಾನಾಗಿಹೆನೆಂಬ ಆರೂಢರ ಕಂಡವನಲ್ಲ, ಶರಣ ತನ್ನ ಕಂಡುದರಿಂದ ಇವಾವ ಜ್ಞಾನವನರಿಯದಾತ, ಅಜ್ಞಾನಿ ನಾಮನಷ್ಟ, ಈ ನಾಲ್ಕು ರೀತಿಯಲ್ಲಿ ಕಾಣಿಸಿಕೊಳ್ಳುವ, ಹೇಳಿಸಿಕೊಳ್ಳುವ ಆವಂಗವೂ ಇಲ್ಲ, ಗುಹೇಶ್ವರ ನಿಮ್ಮ ಶರಣ ಎಂದು ಹೇಳಿಹರು. ಶರಣ ಲೋಕ ವಿರಹಿತ, ಶರಣಹಿರಿಮೆಯು ಅಪಾರವು.

71

**ಲೋಕವಿರಹಿತ ಶರಣ, ಶರಣವಿರಹಿತ ಲೋಕ.**
**ಹದಿನಾಲ್ಕು ಭುವನ ಒಬ್ಬ ಶರಣನ ಕುಕ್ಷಿಯೊಳಗು.**
**ಅರಿವು ಮರಹಿಲ್ಲದ ಘನವು**
**ಗುಹೇಶ್ವರಾ ನಿಮ್ಮ ಶರಣ.** ॥ 369 ॥

**ತಾತ್ಪರ್ಯ :** ಲೋಕ ವಿರಹಿತ ಶರಣ, ಶರಣ ವಿರಹಿತ ಲೋಕ ಲೋಕ ಕಾಣದಾತ ಶರಣ, ಶರಣನ ಕಾಣದ ಲೋಕ, ಶರಣ ಆರು ಗೊತ್ತೆ ? ಲೋಕ ಕಾಣದವ ಲೋಕದೊಳಗಿದ್ದವನೆಂದು ಹೇಗೆ ಹೇಳುವುದು. ಲೋಕವೆಂದರೆ ಆವುದು ? ಲೋಕವೆಂದರೆ, ಪುಸಿ, ಭ್ರಮ ದೃಷ್ಟಿಗೆ ಕಾಣುವ ಲೋಕ, ಸುಜ್ಞಾನಿಗಳಿಗೆ ತೋರದುದು. ಮಾಯಿಕ ಬಹು ವಿಧವಾಗಿಹುದು, ಲೋಕವೆಂದರೆ ಮಾಯಿಕವು, ನಾಮರೂಪದಿಂದುಕ್ತವಾದ ಲೋಕ, ಇಂದ್ರಿಯಂಗಳ ಜನ್ಯ ವಿಷಯಂಗಳು ಭೋಗಿಸುವ ಲೋಕ, ಇಂದ್ರಿಯರಾಮರ ಲೋಕ. ಗಂಡು ಹೆಣ್ಣಿನ ಸಂಗಮದ ಲೋಕ, ಹೆಣ್ಣು ಕಂಡರೆ ಗಂಡಿಗೆ ಬಹು ಇಷ್ಟ, ಗಂಡು ಕಂಡರೆ ಹೆಣ್ಣಿಗೆ ಬಹು ಇಷ್ಟ, ಈ ಗಂಡು ಹೆಣ್ಣೆ ತಂದೆ-ತಾಯಿಯಾಗಿ ಮಡದಿ, ಮಕ್ಕಳಾಗಿ, ಅಕ್ಕ, ತಂಗಿಯರಾಗಿ, ಅತ್ತೆ ಸೊಸೆಯರಾಗಿ ಭಾವ, ಮೈದುನರಾಗಿ ಇನ್ನು ಏನೇನೊ ಆಗಿ ಇಂದ್ರಿಯಂಗಳ ವಿಷಯೋಪ ಭೋಗಕ್ಕಾಗಿ ಕೂಡುವ ಲೋಕ. ಇದು ವಿಷಯ ವ್ಯಾಮೋಹಕ್ಕೊಳಪಟ್ಟ ಲೋಕ, ಇದು ಭೋಗಿಗಳ ಲೋಕ.

ತ್ಯಾಗಿಗಳ ಲೋಕ, ತಪಸ್ವಿಗಳ ಲೋಕ, ಯೋಗಿಗಳ ಲೋಕ, ಉಪಾಸಕರ ಲೋಕ, ಜ್ಞಾನಿಗಳ ಲೋಕ, ಮುಕ್ತಾತ್ಮರ ಲೋಕ, ಅರಿವರಿತವರ ಲೋಕ, ಅರಿಯದವರ ಲೋಕ, ಹೀಗೆ ನಾನಾ ವಿಧದಿಂದುಕ್ತವಾದ ಲೋಕ, ನೋಡಲು ನಾಮರೂಪುಳ್ಳ ಲೋಕ. ಒಂದಾಗಿ ಕಂಡರೂ ಕಾರ್ಯಗಳ ಮೇಲಿಂದ ಬಹು ರೂಪಾಂತರ ಹೊಂದಿದ ಲೋಕವಾಗಿದೆ. ಹೀಗೆ ತೋರಿ ಇಲ್ಲವಾಗುವ ಲೋಕ, ಒಂದು ಕರ್ಮದಿಂದುಕ್ತವಾದರೆ ಇನ್ನೊಂದು ಉಪಾಸನೆಯಿಂದ, ಮತ್ತೊಂದು ಜ್ಞಾನದಿಂದುಕ್ತವಾದುದು. ಒಂದು ಅವಿವೇಕದಿಂದುಕ್ತವಾದರೆ, ಇನ್ನೊಂದು ವಿವೇಕದಿಂದುಕ್ತವಾಗಿದೆ, ಒಂದು ಬ್ರಹ್ಮ ಲೋಕವಾದರೆ ಇನ್ನೊಂದು ವಿಷ್ಣು ಲೋಕ. ಮಗದೊಂದು ರುದ್ರಲೋಕವಾಗಿದೆ. ಇವೆಲ್ಲವು ತೋರಿ ಇಲ್ಲವಾಗುವ ಮಾಯಿಕ ಲೋಕ. ಇನ್ನೊಂದು ಕೂಡಲ ಸಂಗಮದೇವ, ಏನೊಂದು ಅರಿಯದುದೆ ಲೋಕ. ವಿರಹಿತ

ಶರಣ, ಶರಣನೆಂದರೆ ಕೂಡಲಸಂಗಮದೇವ, ಶರಣನೆಂದರೆ ಗುಹೇಶ್ವರ ಲಿಂಗ, ಲಿಂಗವರಿತು ಲಿಂಗವಾಗಿಹ ಘನಕ್ಕೆ ಘನ. ಇದು ಕಾರಣ ಲೋಕ ವಿರಹಿತ ಶರಣನೆಂದು ಹೇಳಿಹರು.

ಶರಣನನ್ನು ಶರಣನಾದವನೆ ತಿಳಿವನು, ಅಲ್ಪ ಜ್ಞಾನಿಯು ತಿಳಿಯನು, ಮಧ್ಯಮ ಜ್ಞಾನಿಯು ತಿಳಿಯನು, ಅತೀತ ಜ್ಞಾನಿಯು ತಿಳಿಯನು, ತಿಳಿದವನೆಂಬುವವನು ತಿಳಿಯನು, ಅಂದರೆ ಗುಣಪ್ರೇಮಿಗಳು ತಿಳಿಯರು, ವೇಷಧಾರಿಗಳಾದ ಉಪಾಸಕರು ತಿಳಿಯರು, ಇವರು ಪೂಜ್ಯ ಪೂಜಕ ಭಾವಿಕರು ಇವರು ತಿಳಿಯರು. ಅಹಂ ಗ್ರಹ ಉಪಾಸಕರು ತಿಳಿಯರು, ಅರಿತೆನೆನ್ನುವ ಅರುವಿನ ಅಭಿಮಾನಿಯು ತಿಳಿಯನು, ಸಕಲವೂ ನೀನೆಂಬ ದಾಸೋಹಂ ಭಾವಿಯು ತಿಳಿಯನು ಕಾರಣ ಶರಣನನ್ನು ಶರಣನು ತಿಳಿವನು ಎಂದು ಹೇಳಿಹರು.

ಅಜಗಣ್ಣ ಶರಣನನ್ನು ಮುಕ್ತಾಯಕ್ಕ ತಿಳಿಯಲಿಲ್ಲ, ಅಲ್ಲಮನೆಂಬ ಶರಣ ಅಜಗಣ್ಣನನ್ನು ತಿಳಿದ, ಮುಕ್ತಾಯಕ್ಕ ಅಜಗಣ್ಣನನ್ನು ತನ್ನ ಗುರು ಘನವಾಗಿ ಕಂಡಿದ್ದಳು, ಶಬ್ದ ಮುಗ್ಧನನ್ನಾಗಿ ಕಂಡಿದ್ದಳು, ಶರಣನು ತನಗಿಂತ ಬೇರೆಂದು ತಿಳಿದು ಆತನನ್ನು ಶ್ರೇಷ್ಠಾತಿ ಶ್ರೇಷ್ಠ ಮಾಡಿ ತಾನು ಕಿರಿ ಕಿರಿದಾಗಿದ್ದಳು. ಪ್ರಭು, ಅಜಗಣ್ಣ ಶರಣನ ತಿಳಿದ ತಿರಳು ಆಗಿಹರು. ಅದಕ್ಕಾಗಿ ಅಜಗಣ್ಣನನ್ನು ಮುಕ್ತಾಯಕ್ಕಾನನ್ನು ತನಗಿಂತ ಬೇರೆಂದು ತಿಳಿಯಲಿಲ್ಲ, ಇದು ಕಾರಣ ಮುಕ್ತಾಯಕ್ಕನಿಗೆ ಪ್ರಭು ನಿನ್ನ ನೀನು ಅರಿ, ಆಗ ಅಜಗಣ್ಣ ನಿನಗಿಂತ ಅನ್ಯವಲ್ಲವೆಂದು ಅರುಹಿದ. ಇದಲ್ಲದೆ ಶರಣ ಅಳಿದವನಲ್ಲ ಉಳಿದವನಲ್ಲ ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ, ತನ್ನ ತಪ್ಪಿಸಿ ಇದಿರನೊಪ್ಪಿಸಿದೆನೆಂಬ ಭಿನ್ನಭಾವಿಯಲ್ಲ ಗುಹೇಶ್ವರ ಶರಣ, ಅಂತಿಂತೆನಬಾರದು ಕೇಳಾ ತಾಯೆ ಎಂದು ಮುಕ್ತಾಯಕ್ಕನಿಗೆ ಉತ್ತರಿಸಿದ ಶರಣನೆಂದರೆ ಅಳಿದುದು ಉಳಿದುದು ಕಂಡವನು ಶರಣನೆ ? ಲೋಕವಾಗಲಿ ದೇಹಂಗಳಾಗಲಿ ಅಳಿದುದಾಗಿ ಉಳಿದುದಾಗಿ ತೋರುತ್ತದೆ ಶರಣ ಇವೆರಡನ್ನು ಕಾಣನು.

ಆಧುನಿಕ ಶರಣರು ಲೋಕದ ಭವಿಷ್ಯ ಹೇಳುವವರೆ ಬಹಳ, ದುರ್ಭಿಕ್ಷಯೆಂತಲೂ ಸುಭಿಕ್ಷಯೆಂತಲೂ ಹೇಳುವವರಿಗೆ ಇವರು ಶರಣನೆನ್ನುತ್ತಾರೆ. ಇವರು ಅಲೌಕಿಕದ ಘನವನೇನು ಬಲ್ಲರು. ಬುದ್ಧಿಗೆ ನಿಲುಕದಾತ ಶರಣ, ಬುದ್ಧಿ ಅರುವು ಮರವುಳ್ಳುದು, ಈ ಅರುವು ಮರವಿಂಗೆ ಮೀರಿದಾತ ಶರಣ, ಅರುವು ಮರುವುವುಳ್ಳವರಿಗೆ ಗೋಚರವಾಗುವವನಲ್ಲ ಶರಣ, ತನ್ನ ತಪ್ಪಿಸಿಕೊಳ್ಳುವವನಲ್ಲ, ತನಗಿಂತ ಬೇರಾದುದು ಘನವೆನ್ನುವವನಲ್ಲ, ನಾಹಂ ಎನ್ನುವವನಲ್ಲ, ಕೋಹಂ ಎಂದು ವಿಚಾರಿಸ ಹೋಗುವವನಲ್ಲ , ಸೋಹಂ ಭಾವಿಯಲ್ಲ, ಚಿದಹಂ ಜ್ಞಾನಿಯಲ್ಲವಾದ್ದರಿಂದ ಘನಕ್ಕೆ ಗಮನನಲ್ಲವೆಂದು ಹೇಳಿಹರು. ತನ್ನ ತಪ್ಪಿಸಿ ಇದಿರನೊಪ್ಪಿಸಿದೆನೆಂಬ ಭಿನ್ನಭಾವಿಯಲ್ಲ, ಗುಹೇಶ್ವರನ ಅರಿತ ಶರಣನನ್ನು ಹಾಗೆ ಹೀಗೆ ಅನ್ನಕೂಡದು ಅನುಪಮ ಎಂದು ಹೇಳಿಹರು.

ಶರಣವಿರಹಿತ ಲೋಕ: ಶರಣ ಇವಾವು ಲೋಕದಲ್ಲಿಲ್ಲದವನು, ಶರಣನು ನುಡಿಗೊಳಪಟ್ಟ ಲೋಕದಲ್ಲಿ ಇಲ್ಲದವನು, ಮರವುಳ್ಳ ಲೋಕಕ್ಕೂ ವಿರಹಿತ ಅರುವಿನ ಅಭಿಮಾನಿಗಳಾಗಿಹ ಗುಣಗಂಧಾವಸ್ಥೆಯ ಲೋಕಕ್ಕೂ ವಿರಹಿತ, ಅರಿತೆ ಅರಿಯೆನೆಂಬ ಮತಿವಂತರ ಲೋಕಕ್ಕೂ ವಿರಹಿತ, ತತ್ವ ಅತತ್ವವೆಂಬ ವಿಭಾಗಿಸುವ ವಿವೇಚನೆವುಳ್ಳ ಲೋಕಕ್ಕು ವಿರಹಿತ, ಲಿಂಗ ಲಿಂಗ ಎಂಬುವರ ಲೋಕಕ್ಕೂ ವಿರಹಿತ, ಜಂಗಮ ಜಂಗಮ ಎಂಬ ಲೋಕಕ್ಕೂ ವಿರಹಿತ ಕಾರಣ ಶರಣ ಲೋಕ ವಿರಹಿತನೆಂದು ಹೇಳಿಹರು.

ಹದಿನಾಲ್ಕು ಲೋಕ ಭುವನ, ಒಬ್ಬ ಶರಣನ ಕುಕ್ಷಿಯೊಳಗೆ : ಶರಣ ಒಡಲೊಳಗೆ ಹದಿನಾಲ್ಕು ಲೋಕ ಭುವನ. ಶರಣನೆಂದರೆ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಅಚಿಂತ್ಯಾತ್ಮನಾದುದರಿಂದ ಆತನ ಒಡಲೊಳಗೆ ಹದಿನಾಲ್ಕು ಭುವನಂಗಳು. ಅಂದರೆ ಕಲ್ಪಿತವಾದ ಲೋಕಂಗಳು, ಶರಣನ ಪಿಂಡದಲ್ಲಿಯೆ ಇರುತ್ತವೆ. ಈ ಲೋಕಂಗಳು ಇಂತಿವೆ. ಅತಲ ಲೋಕ, ವಿತಲ ಲೋಕ, ಸುತಲಲೋಕ, ರಸಾತಲ ಲೋಕ, ತಲಾತಲ ಲೋಕ, ಪಾತಾಳ ಲೋಕ, ಭೂಲೋಕ, ಭುವರ್‌ಲೋಕ, ಸುವರ್ಲೋಕ, ಮಹರ್ಲೋಕ, ಜನರ್ಲೋಕ, ತಪರ್ಲೋಕ, ಸತ್ಯರ್ಲೋಕವೆಂದು ಹೀಗೆ ಶರಣನ ಗರ್ಭದೊಳಗೆ ಎಂದು ಹೇಳಿಹರು.

ಅರವು ಮರವಿಲ್ಲದ ಘನವು ಗುಹೇಶ್ವರಾ ನಿಮ್ಮ ಶರಣ: ಏಕ ಏವ ಅದ್ವಯ ಮೂರ್ತಿ ಗಗನದಂತೆ ಅಖಂಡವಾಗಿರುವ ಸ್ವಯಂ ಜ್ಯೋತಿ, ಈ ಘನ ಜ್ಯೋತಿ ತಾನೆ ತಾನಾಗಿ ಬೆಳಗುಳ್ಳ ಬೆಳಕು, ಇಲ್ಲಿ ಬೆಳಗಿಸಿಕೊಳ್ಳುವುದಿಲ್ಲ, ಬೆಳಗುವುದಿಲ್ಲ, ಬೆಳಗುಳ್ಳ ಘನ, ನಿರಂತರ ಅದುವೆ ತಾನಾಗಿಹ ಶರಣ, ಅಪ್ರತಿಮ ಅದಕ್ಕಾಗಿ ಅರವು ಮರವಿಲ್ಲದ ಘನವು ಎಂದು ಹೇಳಿಹರು. ಶರಣನೆಂದರೆ ನಿಸ್ಸೀಮ ಅರುವು ಮರವು ಕಾಣದ ಘನ, ಆವಾವುದರಲ್ಲಿಯೂ ಕೂಡದಗಲದ ಘನ, ಮರವಿನಲ್ಲಿಯೂ ಕೂಡನು, ಅರುವು ಅರುವು ಎಂಬುದರಲ್ಲಿಯೂ ಕೂಡನು, ಆವುದು ಅರುವು ಮರವಿಲ್ಲದ ಘನವು ಅದುವೆ ಆವುದರಲ್ಲಿಯೂ ಕೂಡದ್ದು . ತನ್ನಿಂದ ತಾನೆ ತಾನಾದುದು. ಇದು ಅರುವು ಮರವು ಇಲ್ಲದ ಘನವು. ಅದು ಗುಹೇಶ್ವರ ಲಿಂಗ. ಅದುವೆ ಶರಣನ ನಿಲುವು ತನ್ನ ಅರಿತ ಅರುವು, ತನ್ನ ಮರೆತ ಮರಹು ಅದು ತನ್ನ ಪ್ರತಿಬಿಂಬದಂತಿಪ್ಪುದು.

72

**ತನ್ನನರಿದ ಅರಿವೆಂತುಟೊ ? ತನ್ನ ಮರೆದ ಮರಹು ಎಂತುಟೊ!**
**ಅರಿದವರು ಮರೆದವರು**
**ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ ಗುಹೇಶ್ವರಾ.** || 372 ||

**ತಾತ್ಪರ್ಯ** : *ತನ್ನನರಿದದರಿವೆಂತುಂಟು ? ತನ್ನ ಮರೆದ ಮರಹು ಎಂತುಂಟು ? :* ಈ ಪ್ರಶ್ನೆಯ ಉತ್ತರ ಆವಲ್ಲಿ ಲಭ್ಯವಾಗುವುದು ? ವೇದ ವೇದಾಂತಗಳಿಂದ ಲಭ್ಯವಾಗುವುದೆ ? ಶೃತಿ, ಸ್ಮೃತಿಗಳಿಂದ ಲಭ್ಯವಾಗುವುದೆ ? ಗುರುಗಳ ಬೋಧದಿಂದ ಲಭ್ಯವಾಗುವುದೆ ? ಆರಿಂದ ಲಭ್ಯವಾಗುವುದು ? ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಇಲ್ಲದ ಗುರು, ಇಲ್ಲದ ಲಿಂಗ, ಕಲ್ಪಿತಕ್ಕೆ ಅರುವಹುದೆ ? ತನ್ನಿಂದ ತಾನರಿವುದೆ ಅರಿವು ಗುಹೇಶ್ವರ ತನ್ನನರಿದ ಅರಿವೆಂತುಂಟು ? ಎಂಬ ಪ್ರಶ್ನೆಯ ಉತ್ತರ ಗುರುವಿಡಿದ ಅರಿವಿನಿಂದಲೂ ತನ್ನನರಿದ ಅರಿವೆಂತುಂಟು ಎಂದು ಹೇಳಲು ಅಸಾಧ್ಯವಾದುದು. ಲಿಂಗ ಅಖಂಡ, ಪೂರ್ಣ, ಜ್ಞಾನರೂಪು ಪರಾನಂದ ಎಂಬ ಕಲ್ಪಿತ ಜ್ಞಾನದಿಂದಲೂ ತನ್ನಿರುವಿನ ಘನವ ಹೇಳಲು ಅಸಾಧ್ಯವಾದುದು.

ಬಹು ಆಧ್ಯಾತ್ಮವಾದಿಗಳು ತನ್ನನರಿಯಲು ಗುರುದೇವನ ಬೋಧವೆ

ಮುಖ್ಯವಾದುದು. ಪರಮಾತ್ಮನ ಕೃಪೆ ಮುಖ್ಯವಾದುದು. ಗುರು ಕರುಣೆಯಿಂದ ತನ್ನ ತಾನರಿತೆನೆನ್ನುವನು. ಇದಲ್ಲದೆ ಪರಮಾತ್ಮನ ಕೃಪೆಯಿಂದ ನನ್ನ ನಾನು ಅರಿತೆ, ಇವರೀರ್ವರ ಕೃಪೆಯಿಲ್ಲದಿದ್ದರೆ ಅದೆಂತು ಸಾಧ್ಯ ? ಇಲ್ಲಿ ಶರಣರ ತೀರ್ಪು ಹೀಗೆ ಇದೆ.

ತನ್ನ ಮುಖ ನೋಡಿಕೊಳ್ಳಲು ತನ್ನ ಕನ್ನಡಿ, ತನ್ನ ಕಣ್ಣು ಮುಖ್ಯವಲ್ಲವೆ ? ತನ್ನ ಸುಜ್ಞಾನರೂಪ ಕನ್ನಡಿಯಲ್ಲಿ ತನ್ನ ಅರಿವಿನಿಂದ ತಾನು ಅರಿದರಿದು ನೋಡಿದಾಗ ಯತಾರ್ಥ ದರ್ಶನವು. ಇದು ಸಕಲರಿಗೂ ತಿಳಿದ ವಿಷಯ. ತಾನಿಲ್ಲದ ಮುನ್ನ ಗುರುವೆಲ್ಲಿಯದೊ ? ತಾನಿಲ್ಲದ ಮುನ್ನ ಲಿಂಗವೆಲ್ಲಿಯದೊ ? ಜಂಗಮವೆಲ್ಲಿಯದೊ ? ಪ್ರಸಾದವೆಲ್ಲಿಯದೊ? ಸ್ವಯವೆಲ್ಲಿಯದೊ ? ಪರವೆಲ್ಲಿಯದೊ ? ಗುರುವೆಂದರಿದವನು ತಾನೆ ಲಿಂಗವೆಂದರಿದವನು ತಾನೆ ಜಂಗಮವೆಂದರಿದವನು ತಾನೆ, ಪ್ರಸಾದವೆಂದರಿದವನು ತಾನೆ, ಸ್ವಯಪರವೆಂದರಿದವನು ತಾನೆ, ಇವೆಲ್ಲವು ಹೆತ್ತರಿವು. ತಾನೆ ಸ್ವಯಂಜ್ಯೋತಿ ಕಲ್ಲೇಶ್ವರ. ಎಂಬ ಮಹದರಿವು ಅರಿದು ನೋಡುವುಡೆ ತಾನೆ ಘನಕ್ಕೆ ಘನವಾಗಿರುವಲ್ಲಿ ತನ್ನಿರುವು ಹೆತ್ತರಿವಿನಿಂದ ಅರಿವುದು ಹೇಗೆ ಸಾಧ್ಯ, ಹೆತ್ತರವು ಎಂಬುದು ಕಲ್ಪಿತ, ಈ ಕಲ್ಪಿತ ಜ್ಞಾನದಿಂದ ಅಕಲ್ಪಿತ ಜ್ಞಾನವಾಗಬ ಹುದೆ ? ಶಬ್ದ ಬ್ರಹ್ಮವು ನಿಶಬ್ದ ಘನದಿರುವು ಪ್ರಜ್ವಲಿಸಬಹುದೆ ? ಗುರು, ಲಿಂಗ, ಜಂಗಮ, ಪ್ರಸಾದ, ಸ್ವಯ, ಪರವೆಂಬುದು ಸಾಪೇಕ್ಷದಿಂದ ಬಂದ ಸಂಜ್ಞೆ. ಉಪಮೆಗಳು ಅವುಗಳ ಅರಿಯುವ ತಾನು ಅನುಪಮನು. ಉಪಮೆಗಳ ಬೋಧವ ತಾನೆ ಅರಿವನಲ್ಲದೆ ಇವುಗಳು ತನ್ನನ್ನು ಅರಿಯವು, ಕಾರಣ ತಾನು ಅನುಪಮನೆಂದು ಹೇಳಿದೆ. ಖಂಡಾ ಖಂಡಸಂಯೋಗವಿಲ್ಲದ ಖಂಡಿತನ ನಿಲುವು ತನ್ನಲ್ಲಿಯೆ ನೋಡುವುದು.

ತನ್ನನರಿದಅರಿವೆಂತುಂಟು ? ಆರು ತನ್ನಿಂದ ತನ್ನ ಅರಿತಿಹರು ಅವರಿಗೆ ಅರಿದ ಅರುವು ಹೇಗೆ ಅದೆ ಎಂಬುದು ವಿದಿತವಾದುದು. ಏಕೆಂದರೆ ತನ್ನ ನೋಡ ಹೋದ ಅರುವಿಗೆ ಇದ್ದಕ್ಕಿದ್ದಂತೆ ಅರುವಾದುದು ಅಂತಪ್ಪ ಅರಿವಿಂಗೆ ಅದಕ್ಕೆ ಎಂತುಂಟು ಎಂದು ಕೇಳಿದ ಪ್ರಶ್ನೆಗೆ ಅದು ಅಲ್ಲಿಯೆ ಸಿಗುವ ಉತ್ತರ.

ತನ್ನ ತಾನರಿಯ ಹೋದ ಆಧ್ಯಾತ್ಮ ಜ್ಞಾನಿಗಳು ಎಷ್ಟು ಜನ ಸಿಕ್ಕಬಹುದು. ಬಹು ಆಧ್ಯಾತ್ಮಿಗಳು ತಮ್ಮ ಅರಿತ ಘನವ ಹೇಳದೆ ಗುರುವಿನ ಘನವ ಹೇಳುವವರೆ ಬಹಳ. ಇದಲ್ಲದೆ ವೇದ ವೇದಾಂತದ ಘನವ ಹೇಳುವರು. ಶಾಸ್ತ್ರ ಉಪನಿಷದ್ ಗೀತಾದಿಗಳ ಘನ ಹೇಳುವವರೆ ಕಾಣುವರಲ್ಲದೆ ತನ್ನಿರುವಿನ ಘನವ ನೋಡಿದವರು ಬಹು ಕಡಿಮೆ, ಹೀಗಾಗಿ ತನ್ನ ಕಾಣದ್ದರಿಂದ ಗುರು ಘನ, ವೇದ ಘನ, ವೇದಾಂತ ಘನ, ಶಾಸ್ತ್ರ ಘನ, ಬೋಧ ಘನವಾಯಿತಲ್ಲದೆ ತಾನು ಘನವಾಗಲಿಲ್ಲ, ತಾನು ಘನಕ್ಕೆ ಘನನಾಗದವನು ತನ್ನ ನರಿದಅರಿವೆಂತುಂಟು ಎಂಬ ಪ್ರಶ್ನೆಗೆ ಉತ್ತರ ಅವರಿಂದ ಲಭ್ಯವಾಗುವುದೆ ? ತನ್ನ ಮುಖವ ತಾ ನೋಡದವನು ಅದನೆಂತು ವರ್ಣಿಸುವನು.

ತನ್ನನರಿಯದ ಪ್ರಭುದೇವ ನಿಮ್ಮ ಪ್ರತಿಬಿಂಬದಂತಿಪ್ಪರು ಎಂದು ತಾನೆ ಉತ್ತರವ ಹೇಳಿಹನು. ಇದನ್ನು ಯತಾರ್ಥವಾಗಿ ತಿಳಿಯುವಷ್ಟು ಹೃದಯ ದೊರೆಯುವುದು ದುರ್ಲಭವಾಗಿದೆ. ತನ್ನನರಿದ ಅರಿವೆಂತುಂಟು? ಎಂಬ ಪ್ರಶ್ನೆಗೆ ಪರಿಹಾರವೆಂದರೆ ಕಣ್ಣು ತನ್ನ ಕಾಣಲು ಹೋದ ಕಣ್ಣಿಗೆ ಕನ್ನಡಿ ದೊರೆತಾಗ ಅದು ಕಣ್ಣು ಹೇಗಿದೆ ಎಂಬುದು ಕಣ್ಣಿಗೆ ಗೊತ್ತು. ಗೊತ್ತಾದ ಕಣ್ಣು ಮೌನ ಮುದ್ರೆ ಧರಿಸಿದ ಕಣ್ಣು, ಕಣ್ಣಿನಂತೆ ಇದೆ ಎನ್ನಲಿಲ್ಲ,

ಹಾಗೆನಲಿಲ್ಲ, ಹೀಗೆನಲಿಲ್ಲ, ಕಣ್ಣು ಕಂಡ ಕಣ್ಣು, ಕಣ್ಣಿನ ಪ್ರತಿಬಿಂಬದಂತಿದ್ದಿತ್ತು ಎಂದು ಹೇಳಿದೆ. ಅನುಪಮವೆಂಬುದು ನಿಜವು, ಹಾಗೆ ಇಲ್ಲಿ ಸತ್‌ಗುರುವಿನ ಕಾರುಣ್ಯವ ಸತ್ತಕೊಂಬ ಶಿಷ್ಯಂಗೆ ಭಕ್ತಿ ವಿಸ್ತರಿಸುವುದು ಎಂದಂತೆ. ಈರ್ವರ ಹೃದಯ ಅದಾರು ವರ್ಣಿಸುವುದು, ಅರು ಹೃದಯವಾದ ಅರುವು ಅದುವೆ ಅದನ್ನು ಅರಿಯ ಹೋದ ಅರು ಹೃದಯ ಅರುವು ಅದುವೆ ಆಗಿರುವಲ್ಲಿ ಅದನೆಂತು ಬಣ್ಣಿಸುವುದು.

ಅರುವು ? ಅರುವೆನ್ನದ ಅರುವು ಅದನ್ನು ಅರಿಯಹೋದ ಅರುವು. ಅದು ಅರುವೆನ್ನದ ಅರುವು ಇದು ಹೇಗಿದೆ ಎಂದು ಕೇಳಿದ ಪ್ರಶ್ನೆಗೆ ಪ್ರಭುವಿನ ಉತ್ತರ. ಅರುವಿನ ಪ್ರತಿಬಿಂಬವಾಗಿಹ ಅರಿವು. ಮೌನಮುದ್ರೆ ಮಾತಾಡಿ ಹೇಳುವುದು ಅದು ಹೇಗೆ ಸರಿಹೋಗುವುದು ? ಮೂಕನ ಬೋಧವ ಕಿವುಡ ಕೇಳಿದಂತೆ. ಮೂಕನ ಜ್ಞಾನ ಕಿವುಡ ತಿಳಿದಂತೆ. ಮೂಕನ ನಿಲವು ಮೂಕ ತಿಳಿದಂತೆ, ತಾನು ಮೂಕ, ತನ್ನನರಿದ ಅರಿವು ಮೂಕ. ಅರಿವು ಮೂಕ, ಅರುವ ಅರಿಯ ಹೋದ ಅರಿವು ಮೂಕ. ಈ ಮೂಕತನ ಅದಾರಿಗೆ, ನಿಶಬ್ದವೇದ ಆದಾರಿಗೆ, ತನ್ನನರಿಯ ಹೋದವರಿಗೆ. ಇವರ ಮೂಕತನ ಶೃತಿ ಸ್ಮೃತಿಗಳರಿಯವು, ವೇದ ವೇದಾಂತವು ಅರಿಯದು, ಈ ನಿರ್ವಾಣನ ಜ್ಞಾನ ತರ್ಕವಲ್ಲ, ಸಮಾಧಿ ಯೋಗವೂ ಅಲ್ಲ, ಗುರೂಪದೇಶವೂ ಅಲ್ಲ, ಇದು ಅರುವರಿತ ಇರವು ಸಹಜ ಇರವು ಆಗಿಹುದು.

ತನ್ನ ಮರೆದ ಮರಹು ಎಂತುಂಟು : ಬಹು ಜ್ಞಾನಿಗಳು ತನ್ನ ಮರೆದ ಮರಹು ಎಂದರೆ ಮರವು ಎಂದು ಹೇಳುವರಿದ್ದಾರೆ. ತಾನು ಅರುಸ್ವರೂಪನಾಗಿದ್ದು, ತಾನು ಅರುವು ಎನ್ನುವದು ಮರೆತುದೆ ಎಂಬುವವರು ಇದ್ದಾರೆ. ಆದರೆ ಇದರ ನಿರ್ಣಯ ಇಷ್ಟಕ್ಕೆ ನಿಲುಕದು. ಅರುವ ಅರಿಯ ಹೋದವರಿಗೆ ಮಾತ್ರ ತಾನು ಅರುವೆಂಬುದು ಕೂಡ ಮರವು ಎಂಬುದು ಸಿದ್ಧವಾಗುವುದು. ತಾನಾರೆಂದರಿತ ಘನವಂತ ತನ್ನ ಅರಿತೆನೆನ್ನುವುದು ಮರೆತು ಹೋಗಿದೆ. ಅರಿಯನೆಂಬ ಮರವು ಕೂಡ ಮರೆತು ಹೋಗಿದೆ. ತಾನು ಅರುವು ಮರವಿಲ್ಲದ ಘನವಾಗಿ ಪ್ರಜ್ವಲಿಸುವದೆ ತನ್ನ ಮರೆದ ಮರಹು ಎಂತುಂಟು ಎಂಬ ಪ್ರಶ್ನೆಗೆ ಉತ್ತರವು.

ರವಿ ಮೂಡಿ ಜಗವೆಲ್ಲ ಬೆಳಗುವಲ್ಲಿ ಆಗ ಕತ್ತಲೆ ಸಿಕ್ಕುವದೆ? ಪರಪ್ರಕಾಶದ ಮುಂದೆ ಕತ್ತಲೆ ಸಿಕ್ಕದಿರುವಾಗ ಸ್ವಮಹಿಮನಾದ ತನ್ನ ಮುಂದೆ ಅರುವೆಂಬುದು ಮರವು ಆಗಿ ನಾಚಿಹೋದಾಗ ನಾನು ನನ್ನ ಅರಿಯೆನೆಂಬ ಮರವು ಕೂಡ ಅಲ್ಲಿ ಸುಳಿಯಬಹುದೆ ? ರವಿಗೆ ಕತ್ತಲೆಯ ದರ್ಶನ ಹೇಗಿಲ್ಲವೊ ಹಾಗೆ ತಾನಾರೆಂದು ಅರಿದ ಅರುವಿಂಗೆ ಮರವು, ಅರವು, ಎಂಬ ದ್ವಂದ್ವಗಳು ಅಲ್ಲಿ ಸುಳಿಯಬಹುದೆ ? ಇದು ಕಾರಣ ಇಲ್ಲದುದು ಇಲ್ಲವಾಗಿ ಇದ್ದ ಘನವು ಬೆಳಗುವಲ್ಲಿ ಅದನಾರು ವರ್ಣಿಸುವುದು.

ಅರಿದು ಮರೆದವರು ನಿಮ್ಮ ಪ್ರತಿಬಿಂಬದಂತಿಪ್ಪರು ಗುಹೇಶ್ವರಾ : ಏನನ್ನು ಅರಿದು ? ತನ್ನಿಂದ ತನ್ನನ್ನು ಅರಿದು. ಮರೆದವರು ಏನನ್ನು ಮರೆದವರು ? ನನ್ನ ನಾನು ಅರಿತೆನೆನ್ನುವುದು ಮರೆತವರು. ನನ್ನ ನಾ ಅರಿಯೆ ಎಂಬುದನ್ನು ಮರೆತವರು. ಇವರು ತೆರಹಿಲ್ಲದ ಅಭವರು, ನುಡಿಗೆಡೆಗೊಡದ ಘನ. ಆದುದರಿಂದ ನಿಮ್ಮ ಪ್ರತಿಬಿಂಬದಂತಿಪ್ಪರು. ನುಡಿಗೆಡೆಗೊಡದ ಘನವಾವುದು, ಅದು ಬಿಂಬ, ಅದನು ಅರಿಯ ಹೋದ ಚೇತನ

ಪ್ರತಿಬಿಂಬ. ಬಿಂಬವು ಮೌನ, ಪ್ರತಿ ಬಿಂಬವು ಮೌನ. ಮೌನದ ಮೌನವಾದುದರಿಂದ ಶರಣರು ನಿಶಬ್ಧವೇದಿಗಳೆಂದು ಹೇಳಿಹರು.

73

**ಇಹಲೋಕ ಪರಲೋಕ ತಾನಿರ್ದಲ್ಲಿ ,**
**ಗಗನ ಮೇರುಮಂದಿರ ತಾನಿರ್ದಲ್ಲಿ ,**
**ಸಕಲ ಭುವನ ತಾನಿರ್ದಲ್ಲಿ ,**
**ಸತ್ಯ ನಿತ್ಯ ನಿರಂಜನ ಶಿವತತ್ವ ತಾನಿರ್ದಲ್ಲಿ ,**
**ಅಂತರ ಮಹದಂತರ ತಾನಿರ್ದಲ್ಲಿ ,**
**ಸ್ವತಂತ್ರ ಗುಹೇಶ್ವರಲಿಂಗ ತಾನಿರ್ದಲ್ಲಿ .** ॥ 370 ॥

**ತಾತ್ಪರ್ಯ :** ಇಹಲೋಕ, ಪರಲೋಕ ತಾನಿದ್ದಲ್ಲಿ : ಮಾನವರಿದ್ದ ಲೋಕ ಇಹಲೋಕ. ದೇವತೆಗಳಿದ್ದ ಲೋಕ ಪರಲೋಕ. ಆವುದು ಸುಖ ದುಃಖ ಮಿಶ್ರಿತದಿಂದುಕ್ತವಾದುದು ಅದು ಇಹಲೋಕವಾಗಿದೆ. ಇಲ್ಲಿರುವ ನರರು ಧರ್ಮಾಧರ್ಮ ಮಿಶ್ರವುಳ್ಳವರು ಇವರಿಗೆ ಸಿಗುವ ಭೋಗವಾದರೂ ಸುಖ ದುಃಖ, ಇಷ್ಟಾನಿಷ್ಟ , ಲಾಭ ಹಾನಿಯಿಂದುಕ್ತವಾದುದು. ಇದು ಅನಿತ್ಯವಾದುದು. ಇಲ್ಲಿರುವ ನರರು ಇಂದ್ರಿಯ ನಿಗ್ರಹವುಳ್ಳವರಾಗಿ ಸಕಾಮ ತಪಸ್ಸಿನಿಂದ ಈಶ್ವರಾರ್ಚನೆಯಿಂದ ಲಭ್ಯವಾಗುವ ಲೋಕ, ಪುಣ್ಯಲೋಕ, ಸ್ವರ್ಗಲೋಕ, ಪರಲೋಕ, ಇಲ್ಲಿಯ ಭೋಗವು ಕೂಡಾ ತ್ರಿವಿಧ ರೂಪವು. ಕನಿಷ್ಠ ಮಧ್ಯಮ, ಉತ್ತಮ, ವಿಷಯೋಪಭೋಗದಿಂದ ಘನೈಶ್ವರ್ಯವುಳ್ಳದ್ದಾಗಿದೆ. ಕನಿಷ್ಠ ಪುಣ್ಯವಂತರಿಗೆ ಕನಿಷ್ಠ ಭೋಗ, ಮಧ್ಯಮ ಪುಣ್ಯವಂತರಿಗೆ ಮಧ್ಯಮ ಭೋಗ, ಉತ್ತಮ ಪುಣ್ಯವಂತರಿಗೆ ಉತ್ತಮ ಭೋಗ. ಹೀಗೆ ಅವರವರು ಮಾಡಿದ ಕರ್ಮಗಳ ಮೇರೆಗೆ ಫಲಪದಂಗಳು ಲಭ್ಯವಾಗಿಹವು. ಕನಿಷ್ಠ ಪುಣ್ಯವಂತರು ತನ್ನ ಕನಿಷ್ಠ ವಿಷಯೋಪ ಭೋಗ ಭೋಗಿಸುತ್ತ ಮಧ್ಯಮ ಪುಣ್ಯವಂತನಾದವನ ಭೊಗೈಶ್ವರ್ಯ ನೋಡಿ ಮರಗುವನು. ತಾನು ಅವನಿಗಿಂತ ನಿಕೃಷ್ಠವೆಂದು ತಿಳಿವನು. ಮಧ್ಯಮನು ನಿಕೃಷ್ಠವಂತನ ಭೋಗವ ಕಂಡು ಅದಕ್ಕಿಂತ ತನ್ನದು ಅಧಿಕವಾದುದೆಂದು ತಾನು ಶ್ರೇಷ್ಠನೆಂದು ಅಭಿಮಾನಿಯಾಗುವನು. ಅವನನ್ನು ಕೀಳು ಎಂದು ತಿಳಿವನು. ಉತ್ತಮ ಪುಣ್ಯವಂತನ ಭೋಗೈಶ್ವರ್ಯ ಕಂಡು ಮರಗುವನು. ನನಗೆ ಇಂಥ ಭೋಗ ಇಲ್ಲವಲ್ಲ ಎಂದು ಕೊರಗುವನು. ಉತ್ತಮ ಭೋಗೈಶ್ವರ್ಯವಂತನು ಮಧ್ಯಮ ಮತ್ತು ಕನಿಷ್ಠ ಭೋಗಿಗಳ ಕಂಡು ಇವರದು ತುಚ್ಛ ಭೋಗ, ನನ್ನ ಸಮಾನ ಹೇಗಾಗುವರು ಎಂದು ದುರಾಭಿಮಾನಿಯಾಗುವನು. ಪರಲೋಕದಲ್ಲಿಯು ಈ ವಿಷಮ ದೃಷ್ಟಿ ಈ ವಿಷಯ ಭೋಗದಿಂದುಕ್ತವಾದುದು. ಇಹಲೋಕವು ವಿಷಮದೃಷ್ಟಿ, ವಿಷಮ ಭೋಗದಿಂದುಕ್ತವಾದುದು ಕಂಡು ಇಲ್ಲಿಯ ರಾಗದ್ವೇಷವೆ ತಾಂಡವಾಡುತ್ತದೆ ಎಂದಲ್ಲಿ ಇವೆರಡು ಅಜ್ಞಾನಿಗಳ ಲೋಕ. ತಮ್ಮ ತಾವರಿಯದವರ ಲೋಕ.

ಶರಣರು ತಾವಾರೆಂದು ಅರಿತಿರುವುದರಿಂದ ಇಹಲೋಕ, ಪರಲೋಕ ತಾನಿದ್ದಲ್ಲಿ ತಾನು ಅಂದು, ಇಂದು, ಎಂದೆಂದೂ ಇದ್ದವನು. ನಿರಂತರ ಇದ್ದವನು, ಇಹಲೋಕ,

ಪರಲೋಕ, ತೋರಿ ಇಲ್ಲವಾಗುವ ಲೋಕ. ಅಜ್ಞಾನ ದೃಷ್ಟಿಗೆ ಇಹ, ಪರ ಲೋಕವಾಗಿ ಭಾಸಿಸುವವು. ತಾನಾರೆಂದರಿಯುವುಡೆ ತಾನಿದ್ದಲ್ಲಿ ತನ್ನ ಸತ್ತೆಯ ಪಡಕೊಂಡು ತೋರುವವು. ತಾನು ಸತ್ತೆಯ ಸತ್‌ಸ್ವರೂಪನಾದುದರಿಂದ ತಾನಿದ್ದವನು. ಆರು ಸತ್ತೆಯ ಸತ್ ಸ್ವರೂಪವರಿತಿದ್ದಾರೆ ಅವರ ದಿವ್ಯ ದೃಷ್ಟಿಗೆ ಇಹಲೋಕ ಪರಲೋಕವೆಂಬುದು ತನ್ನ ಸತ್ತಾ ಸ್ವರೂಪವೆಂಬುದು ತನಗದು ಸ್ವತಃ ಸಿದ್ಧವು.

ಗಗನ ಮೇರುಮಂದಿರ ತಾನಿದ್ದಲ್ಲಿ : ಪಂಚ ಭೌತಿಕದಲ್ಲಿ ತೋರುವ ಆಕಾಶವಾಗಲಿ, ಮಹಾ ಮೇರು ಪರ್ವತವಾಗಲಿ, ಜಗತ್ತಿನಲ್ಲಿ ತೋರುವ ಮಂದಿರವಾಗಲಿ, ತನ್ನ ಸತ್ತೆಯ ಪಡೆದುಕೊಂಡು ಗಗನವಾಗಿದೆ, ಮೇರುವಾಗಿದೆ, ಮಂದಿರವಾಗಿದೆ. ತಾನು ಸತ್ತೆಯ ಸತ್ ಆದುದರಿಂದ ತಾನಿದ್ದವನು. ಆವಲ್ಲಿ ಗಗನ ಮೇರು ಮಂದಿರ ಅವೆ, ಅಲ್ಲಿ ತಾನಿದ್ದುದರಿಂದ ತನ್ನ ಸತ್ತೆಯ ಗಗನವಾಗಿ ಮೇರುವಾಗಿ ಮಂದಿರವಾಗಿರುವುದರಿಂದ ತಾನು ಸತ್ತೆ ಸತ್ ಸ್ವರೂಪನಾದುದರಿಂದ ತಾನಿದ್ದವನು ಎಂದು ಹೇಳಿದೆ.

ಸಕಲ ಭುವನ ತಾನಿದ್ದಲ್ಲಿ ಈ ತೋರುವ ಪಿಂಡಾಂಡ, ಬ್ರಹ್ಮಾಂಡ ರೂಪಿ ಭುವನ ಅದು ಸ್ಥಾವರವೆ ಇರಲಿ, ಜಂಗಮವೆ ಇರಲಿ, ಅದು ವ್ಯಷ್ಠಿಯೆ ಇರಲಿ, ಸಮಷ್ಠಿಯೆ ಇರಲಿ, ಸ್ವಗತ ಭೇದದಿಂದುಕ್ತವಾದದ್ದಿರಲಿ, ಸಜಾತಿ ಭೇದದಿಂದುಕ್ತವಾದದ್ದಿರಲಿ, ವಿಜಾತಿ ಭೇದದಿಂದುಕ್ತವಾದದ್ದಿರಲಿ, ತೋರುವುದೆಲ್ಲ ಭುವನವೆ ಆಗಿದೆ. ಇದು ಕೂಡ ತನ್ನ ಸತ್ತೆಯ ಪಡೆದುಕೊಂಡು ಸಕಲ ಭುವನವಾಗಿ ತೋರುವುದು. ಈ ಸತ್ತೆಯ ಸತ್ ಸ್ವರೂಪ ತಾನೆ ಆಗಿಹನು, ಸಕಲ ಭುವನದ ಮೂಲ ಸ್ವರೂಪನೆ ತಾನಿಹನು. ಅದು ಕಾರಣ ಸಕಲ ಭುವನಂಗಳು ತಾನಿದ್ದಲ್ಲಿ ಎಂದು ಹೇಳಿಹರು.

ಸತ್ಯ ನಿತ್ಯ ನಿರಂಜನ ಶಿವತತ್ವ ತಾನಿದ್ದಲ್ಲಿ ಸತ್ಯವೆಂಬುದರ ಮೂಲ ತಾನು ನಿತ್ಯವೆಂಬುದರ ಮೂಲ ತಾನು, ನಿರಂಜನ ಎಂಬುದರ ಮೂಲ ತಾನು, ಶಿವತತ್ವ ಚೈತನ್ಯ ಸಚ್ಚಿದಾನಂದ ಜ್ಞಾನಸ್ವರೂಪದ ಮೂಲ ತಾನು ಇಹನು. ಬಹುಜ್ಞಾನಿಗಳು ಲಕ್ಷಣ ಲಕ್ಷ್ಯಕ್ಕೆ ಒಪ್ಪಿಹರು. ಅಲಕ್ಷ್ಯವಾದ ತನ್ನ ಸ್ವಮಹಿಮೆಗೆ ಒಪ್ಪಿದವರು ವಿರಳ. ಸತ್ತಾದ ಸತ್ ಚಿತ್ತಾದ ಚಿತ್ ಸ್ವರೂಪ ಅಧಿಷ್ಠಾನವೆಂದು ಹೇಳುವವರು ಇರುವರು. ಇವಾವು ಏನೊಂದರಿಯದೆ ಇದ್ದ ಅರಿಯದರುವಿಗೆ ಒಪ್ಪಿದುದು ಬಹು ವಿರಳವಾಗಿದೆ. ಶರಣರು ಇವಾವು ಅರಿಯದೆ ಇದ್ದ ಅರಿಯದರುವಿಗೆ ಒಪ್ಪಿ ಅದರ ಸಾಕ್ಷಾತ್ಕಾರವಂತರಾದುದರಿಂದ ಸತ್ಯ ನಿತ್ಯ ನಿರಂಜನ ಶಿವತತ್ವ ತಾನಿದ್ದಲ್ಲಿ ಎಂದು ಹೇಳಿಹರು.

ಉತ್ತರೋತ್ತರ ಚತುರ್ವಳಯ ತಾನಿದ್ದಲ್ಲಿ : ಉತ್ತರೋತ್ತರ ಚತುರ್ವಳಯ ಇವಾವು ? ಇವು ಅರುವಿನ ಘನವ ಸೂಚಿಸುವ ಸಂಜ್ಞೆಗಳು, ಇದ್ದ ಒಂದಕ್ಕೊಂದು ಅರುವಿನ ಹಿರಿಮೆಯ ಪ್ರದೇಶವಾಗಿವೆ. ಸತ್ಯವೆಂಬುದು ಅರುವಿನ ಸಂಜ್ಞೆಯು, ನಿತ್ಯವೆಂಬುದು ಅರುವಿನ ಸಂಜ್ಞೆಯು, ನಿರಂಜನವೆಂಬುದು ಅರುವಿನ ಸಂಜ್ಞೆಯು, ಶಿವತತ್ವವೆಂಬುದು ಅರುವಿನ ಸಂಜ್ಞೆಯು, ಇವು ತಾನಾರೆಂದರಿಯುವ ಪ್ರದೇಶದಲ್ಲಿ ಉತ್ತರೋತ್ತರ ಚತುರ್ವಳಯಂಗಳು.

ಸತ್ಯವೆಂಬ ಪ್ರದೇಶ, ನಿತ್ಯವೆಂಬ ಪ್ರದೇಶ, ನಿರಂಜನವೆಂಬ ಪ್ರದೇಶ, ಶಿವತತ್ವವೆಂಬ ಪ್ರದೇಶ, ಇವು ಅರುವಿನ ನಾಲ್ಕು ಪ್ರದೇಶಗಳು. ತಾನಿದ್ದಲ್ಲಿ ಎಂದು ಹೇಳಿದೆ. ಇವೆಲ್ಲವು

ತನ್ನ ಸತ್ತಾಸ್ವರೂಪ. ತಾನು ಸತ್ತೆಯ ಸತ್ ಸ್ವರೂಪನಾದುದರಿಂದ ಇವೆಲ್ಲವು ತಾನಿದ್ದಲ್ಲಿ ಎಂದು ಹೇಳಿದೆ.

ಚಂದ್ರ ಸೂರ್ಯ ತಾರಾಮಂಡಲ ತಾನಿದ್ದಲ್ಲಿ : ಚಂದ್ರನಾಗಲಿ, ಸೂರ್ಯನಾಗಲಿ ತಾರೆಯುಳ್ಳ ಗಗನಮಂಡಲವಾಗಲಿ ಇವು ಪರ ಪ್ರಕಾಶವು ತನ್ನ ಸತ್ತೆಯ ಪಡೆದುಕೊಂಡು ಚಂದ್ರ ಸೂರ್ಯರು ತಾರೆಗಳು ಭೂಮಂಡಲಕ್ಕೆ ಬೆಳಗುತ್ತಿಹವು, ತಾನು ಇವುಗಳಿಗೆಲ್ಲ ಬೆಳಗುವ ಬೆಳಗುಳ್ಳ ಬೆಳಕು. ಅಖಂಡ ಬೆಳಗು ತಾನಿಹನಾಗಿ ತನ್ನಿಂದಲೆ ಇವುಗಳು ಸಿದ್ಧಿಸುವವು. ತನ್ನ ಸತ್ತೆಯ ಚಂದ್ರ ಸೂರ್ಯ ತಾರಾ ಮಂಡಲವಾಗಿ ತಾನೆ ಸತ್ ಸ್ವರೂಪನಾದುದರಿಂದ ಚಂದ್ರ, ಸೂರ್ಯ, ತಾರಾಮಂಡಲ ತಾನಿದ್ದಲ್ಲಿ ಎಂದು ಹೇಳಿದೆ.

ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ : ಈ ದೇಹವೆಂಬ ಗುಹೆಗೆ ಈಶ್ವರನಾಗಿರುವ ಘನವು ಅದು ಗುಹೇಶ್ವರವಾಗಿದೆ. ಇದು ಸ್ವತಂತ್ರವಾಗಿದೆ, ಚಿತ್‌ಸ್ವರೂಪವಾಗಿದೆ. ಆನಂದ ಸ್ವರೂಪವಾಗಿದೆ, ಘನವಾಗಿದೆ, ಘನ ಗಂಭೀರವಾದುದನು ಅರಿಯ ಹೋಗಿ ತಾನು ಘನಕ್ಕೆ ಘನನಾಗಿಹನು. ಗುಹೇಶ್ವರ ರೂಪಿ ಚಿದಾನಂದ ಬೆಳಗಿನೊಳಗೆ ತಾನು ಬೆಳಗಾಗಿದ್ದುದರಿಂದ ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ ಎಂದು ಹೇಳಿಹರು. ಗುಹೇಶ್ವರ ನಿಲುವುಳ್ಳವರಾದಲ್ಲಿ ಕಾಯದಲ್ಲಿ ಕಳವಳವಿರದು, ಕಳವಳವಿದ್ದಲ್ಲಿ ಅರುವಿನಲ್ಲಿ ಮರವು ತಾನೆ ನಿಂದಿಹುದು.

**74**

**ಕಾಯದಲ್ಲಿ ಕಳವಳವೆಡೆಗೊಂಡ ಬಳಿಕ,**
**ಅರಿವಿನಲ್ಲಿ ಮರವೆ ತಾನೆ ನಿಂದಿತ್ತು ನೋಡಾ,**
**ಕಾಯದ ಕಳವಳವ ವಾಯುವೆಂದರಿಯ ಬಲ್ಲಡೆ**
**ದೇವ ಗುಹೇಶ್ವರನ ನಿಲವು ತಾನೆ ನೋಡಾ.** || 386 ||

**ತಾತ್ಪರ್ಯ :** ಕಾಯದಲ್ಲಿ ಕಳವಳ ಎಡೆಗೊಂಡ ಬಳಿಕ, ಅರುವಿನಲ್ಲಿ ಮರವೆ ತಾನೆ ನಿಂದಿತ್ತು : ಕಾಯ ? ಇದಾವ ಕಾಯ, ಭ್ರಾಂತಿಯಿಂದುಕ್ತವಾದ ಕಾಯ. ಎಲ್ಲಿ ಭ್ರಾಂತಿ ಅದೆ, ಅಲ್ಲಿ ವಿಪರೀತ ಬುದ್ಧಿ ಅದೆ, ಅಲ್ಲಿ ಕಾಯದ ವಿಕಾರ, ಇಂದ್ರಿಯಂಗಳ ವಿಕಾರ, ಮನದ ವಿಕಾರ, ಧನದ ವಿಕಾರ, ಈ ವಿಕಾರವಿದ್ದಲ್ಲಿ ಅಧಿಕಾರದಾಹ ಉಂಟು. ಫಲಪದಂಗಳ ಬಯಕೆ ಉಂಟು, ಬಯಕೆ ಇದ್ದಲ್ಲಿ ಕಾಯದಲ್ಲಿ ಆವುದಾದರೊಂದು ವ್ಯಥೆ ಸಂತಾಪ ಇದ್ದುದು. ಕಳವಳದಲ್ಲಿ ಪ್ರಧಾನ ಆವುದೆಂದಲ್ಲಿ ಹೊನ್ನು, ಹೆಣ್ಣು, ಮಣ್ಣಿನದು. ಇವು ಮುಖ್ಯವು. ಇದರಿಂದ ನಾನಾ ಚಿಂತೆ, ಭಯ, ಇಷ್ಟಾನಿಷ್ಟವು ಲಾಭ ಹಾನಿಯು ಸುಖ-ದುಃಖ ಈ ರೂಪದಿಂದ ಸದಾ ಬಳಲುತ್ತಿರುವುದು.

ಕಾಯ ಅರುವಿನ ಕಾಯವಾಗಬೇಕು, ನಿರುಪಾಧಿ ಕಾಯವಾಗಬೇಕು, ಇಲ್ಲವೆ ಸರ್ವಾರ್ಪಣ ಕಾಯವಾಗಬೇಕು, ಇದರಿಂದ ತತ್ವದೃಷ್ಟಿಯುಳ್ಳ ಕಾಯವಾಗುವುದು. ಲಿಂಗಾರ್ಪಿತ ಕಾಯವಾಗುವುದರಿಂದ ಇಲ್ಲದುದು ಇಲ್ಲವಾಗುವುದು. ಆಗ ಇಲ್ಲವೆಂಬುದು ಕೂಡಾ ಇಲ್ಲವಾದಲ್ಲಿ ಅಲ್ಲಿ ಏತರ ಕಳವಳ, ಏತರ ವ್ಯಥೆ, ಏತರ ಚಿಂತೆ, ಏತರ ವಾಸನೆ,

ಏತರ ವ್ಯಸನ, ಅಲ್ಲಿ ಕಳವಳಕ್ಕೆಂಬು ಏತರದು.

ಕಾಯದಲ್ಲಿ ಕಳವಳ ಇದು ಆಶ್ಚರ್ಯ, ಭ್ರಾಂತಿ, ಪುಸಿ, ನಸುಗತ್ತಲೆಯಲ್ಲಿ ಹಗ್ಗದಲ್ಲಿ ತೋರಿದ ಹಾವು ನಿಜವೆ ? ಬೆಳಕಿನಿಂದ ನೋಡುವುಡೆ ಅಲ್ಲಿ ಹಾವು ಇದೆಯಾ, ಮೊದಲು ಹಗ್ಗ, ಹಾವೆಂದು ತಿಳಿದಾಗಲೂ ಹಗ್ಗ, ಬೆಳಕಿನಲ್ಲಿ ನೋಡಿದಾಗ ಹಗ್ಗವಲ್ಲವೆ ? ಹಾಗೆ ಕಲ್ಪಿತನಾಗಿ ತಾನು ಕಾಯವೆಂದು ತಿಳಿದಾಗಲೂ ಘನ ಕಾಯ, ಗುರು ಕಾರುಣ್ಯದಿಂದ ಅರಿದು ನೋಡಿದಾಗಲೂ ಘನ ಕಾಯ, ಭ್ರಾಂತಿ ಕಾಯ ಅದು ಇಲ್ಲದ ಕಾಯ, ಮರವಿನ ಅರುವುಳ್ಳವನಾಗಿ ಕಾಯವೆಂದಾಗಲೂ ಅದು ಇಲ್ಲದ ಕಾಯ, ಇದ್ದುದಾಗಿ ಕಾಯದಲ್ಲಿ ಕಳವಳ ಉಂಟಾಗಿದೆ. ಅಜ್ಞಾನದಿಂದ ಉಂಟಾದ ಕಳವಳ, ಅರುವ ಮರೆತುದರಿಂದ ಬಂದ ಕಳವಳ, ನಿತ್ಯಾನಿತ್ಯ ಜ್ಞಾನವಿರಹಿತನಾಗಿ ಬಂದ ಕಳವಳ, ಈ ವ್ಯಥೆ, ಈ ಸಂತಾಪ, ತಪ ಮಾಡಿದರೂ ಹೋಗದು, ಜಿತೇಂದ್ರಿಯನಾದರೂ ಹೋಗದು, ಧ್ಯಾನಸ್ತನಾದರೂ ಹೋಗದು, ಕತ್ತಲಲ್ಲಿ ಕಂಡ ವಿಪರೀತ ದೃಷ್ಟಿ ಬೆಳಕಿನಿಂದ ಹೋಗುವದಲ್ಲದೆ ಕ್ರಿಯಾಕರ್ಮದಿಂದ ಹೋಗದು, ಮರವಿನಲ್ಲಿ ಕಂಡ ಕಾಯದ ಚಿಂತೆ ಭಯ, ಜನನ, ಮರಣಂಗಳು ಅದು ಅರುವಿನಿಂದ ಹೋದುದಲ್ಲದೆ, ಪೂಜಾ, ಪಾಠ, ಜಪತಪಗಳಿಂದ ಹೋಗದು. ಇದು ಕಾರಣ ಸುಜ್ಞಾನದಿಂದ ನೋಡುವುಡೆ ಅರುವಿನ ಕಾಯವಾಗುವುದು. ಆವರಣದಿಂದುಕ್ತನಾಗಿ ತ್ರಿವಿಧ ವಾಸನೆ ಉಂಟಾಗಿದೆ. ಅದಕ್ಕೆ ಸದ್ಗುರು ಕಾರುಣ್ಯವೆ ಮುಖ್ಯ ಔಷಧವು. ಈ ಔಷಧವೆಂದರೆ ಅರುವ ಅರಿಯ ಹೇಳಿದ ಕಾರುಣ್ಯ. ಈ ಕಾರುಣ್ಯವ ಆರು ತಿಳಿಯುವರು, ಆಗ ತನ್ನ ಕಾಯ ಘನ ಕಾಯವಾಗುವುದು. ಅತೀಂದ್ರಿಯನಾಗುವನು. ಪ್ರಾಣದ ಪ್ರಾಣವಾಗುವನು. ಮನ, ಘನಮನವಾಗಿ ಸರ್ವಾಂಗ ಲಿಂಗಿಯಾಗಿಹನು, ಆಗ ತನಗೆ ಭ್ರಾಂತಿ ತೋರಲು ಅವಕಾಶವಿಲ್ಲವಾಗಿದೆ. ಸೂರ್ಯನಿಗೆ ಕತ್ತಲೆ ಕಾಣಬಹುದೆ ? ಚಿತ್ ಸೂರ್ಯನಾದ ತನಗೆ ಮರವಿನಲ್ಲಿ ತೋರಿದ ಭ್ರಾಂತಿ ಕಾಯ ಕಾಣಬಹುದೆ ? ಅಲ್ಲಿ ದೇಹವಾಸನೆ, ಲೋಕ ವಾಸನೆ, ಶಾಸ್ತ್ರ ವಾಸನೆ ಇರದು. ಏಕೆಂದರೆ ತಾನು ಅರುವು ಮರವಿಲ್ಲದ ಸಮ್ಯಜ್ಞಾನಿ, ಅಖಂಡ ಜ್ಞಾನಿ, ಇಂತಪ್ಪ ಮಹದರುವಿನ ಅರುವು ಪ್ರಜ್ವಲಿಸುವಲ್ಲಿ ಕಾಯವಿಲ್ಲ, ಮಾಯೆ ಇಲ್ಲ, ನಾನು ಇಲ್ಲ, ನೀನು ಇಲ್ಲ, ಇಲ್ಲದುದು ಕಳವಳವಾದುದೆಂತು, ಒಂದು ವೇಳ್ಯ ಕಾಯದಲ್ಲಿ ಕಳವಳ ಕಂಡರೆ, ಅದಕ್ಕೆ ಬೆದರುವುದು ಏಕೆ ? ಹೆದರುವುದು ಏಕೆ ? ಅದು ನಿನಗಿಂತ ಬೇರಾದುದು ಅದಕ್ಕೂ ನಿನಗೂ ಸಂಯೋಗವಿಲ್ಲ, ವಿಯೋಗವು ಇಲ್ಲ, ಬಂಜೆ ಮಗನ ಸಂಯೋಗವು ನಿಜವೆ ? ವಿಯೋಗವು ನಿಜವೆ ? ಹಾಗೆ ಇಲ್ಲದ ಕಾಯದ ಕಳವಳ ನಿರಂತರ ಮಂಗಲಮಯನಾಗಿರುವ ಘನ ನೀನೆತ್ತ, ಈ ಕಳವಳ ಕಾಯವೆತ್ತ, ಹೀಗೆ ಅರಿದರಿದು ಕಾಯದ ಕಳವಳ ವಾಯು ಎಂದರಿಯ ಬಲ್ಲಡೆ ದೇವ ಗುಹೇಶ್ವರ ನಿಲವು ತಾನೆ. ಇದು ತತ್ವ ಜ್ಞಾನವಾದ ಪರಿಣಾಮ ಆತನಲ್ಲಿ ತತ್ವ ಜ್ಞಾನವು ಬೆಳಗುಳ್ಳದ್ದಾಗಿ ಬೆಳಗಿರುವುದು, ಅಲ್ಲಿ ಕಾಯ ಸತ್ಯವಿಲ್ಲ, ಕಳವಳ ಸತ್ಯವಾಗಿಲ್ಲ, ಅದು ಸತ್ಯವಾಗದ್ದರಿಂದ ಅದರಭಿಮಾನವಿಲ್ಲ, ಮೋಹವಿಲ್ಲ, ಅಲ್ಲಿ ತತ್ವ ಜ್ಞಾನವೆ ಅಬಾಧಿತವಾಗಿದೆ. ಇದು ಅರುವಿನ ಹಿರಿತನ, ಅರುವು ಅರಿತ ಗಂಭೀರತ್ವವ ಗಾಳಿಗೆ ಆಕಾಶದಲ್ಲಿರುವ ಮೋಡವು ಹೇಗೆ ಇಲ್ಲವಾಗುವುದೊ, ಹಾಗೆ ಸ್ವಾನುಭವರೂಪಿ ಗಾಳಿಗೆ ಹೃದಯಾಕಾಶದಲ್ಲಿರುವ ಭ್ರಾಂತಿರೂಪ ಕಳವಳದ ಮೋಡ ತಾನೆ ಇಲ್ಲವಾಗುವುದು, ಆಗ ತನ್ನದು ದೇವನ ನಿಲುವು.

ದೇವನ ನಿಲವು ? ಅದಾವ ದೇವನ ನಿಲವು, ನೆನಹು ನಷ್ಟವಾಗಿ ತಾನೆ ಘನ ಮನವಾಗಿಹ ನಿಲವು, ಇದು ಗುಹೇಶ್ವರ ನಿಲವು ಅವರ್ಣನೀಯವು, ಕಾರಣ ಅಚಿಂತ್ಯ ನಿಲವು, ಅಚ್ಚ ಸುಖವುಳ್ಳ ನಿಲವು, ನೆನಹು ನಷ್ಟವಾಗಿ ತಾನೆ ಘನಮನವಾಗಿಹ ನಿಲವು. ಇದು ಗುಹೇಶ್ವರ ನಿಲವು ಅವರ್ಣನೀಯವು ಕಾರಣ ತತ್ತ್ವವೇತ್ತನ ಕಾಯವಾಗಬೇಕು, ಆಗ ಅದು ದಿವ್ಯದೃಷ್ಟಿಯುಳ್ಳದ್ದಾಗಿ ತನ್ನ ಘನವ ನೋಡ ಹತ್ತುವದು. ಅಂತರಂಗ ಅರಿವು ಬಹಿರಂಗ ಕ್ರಿಯೆ ಇದು ಜ್ಞಾನಾಚಾರ ಜ್ಞಾನಾನಂದ ಇವುಗಳಿಂದ ಒಂದಾದ ಅರುಹೃದಯ ಇದು ಶರಣ ಹೃದಯ ಅಲ್ಲಿ ತನು ಸೂತಕ ಹಿಂಗಿತ್ತು, ಮನ ಸೂತಕ ಹಿಂಗಿತ್ತು, ಸೂತಕ ಹಿಂಗಿದ ಕಾಯ, ದೇವ ಗುಹೇಶ್ವರ ನಿಲುವಳ್ಳ ಕಾಯ, ದೇವನೊಲಿದ ಕಾಯ, ಅದು ತತ್ವ ದೃಷ್ಟಿಯುಳ್ಳ ಕಾಯ, ಅದುವೆ ಕಾಯದ ಕಳವಳ ವಾಯುವೆಂದರಿದ ಕಾಯ, ಇದು ಕಾಯವಾಗಿ ಕಂಡರೂ ಅಕಾಯ, ಇದು ಘನಮನವುಳ್ಳ ಕಾಯ, ಇಲ್ಲಿ ಬೇಕೆಂಬುದಿಲ್ಲ, ಬೇಡೆಂಬುದಿಲ್ಲ, ಘನಾಂಗವಾದುದರಿಂದ ಬಂದ ಸುಖವ ತಿರಸ್ಕೃತವಾದುದಿಲ್ಲ, ಈ ದೇವನೊಲಿದ ಕಾಯ, ಗುಹೇಶ್ವರ ನಿಲುವುಳ್ಳ ಕಾಯ, ಉಂಡು ಉಪವಾಸವಾಗಿಪ್ಪ ಕಾಯ, ಬಳಸಿ ಬ್ರಹ್ಮಚಾರಿಯಾಗಿಹ ಅಲುಪ್ತ ಕಾಯ, ಅಂಗವನತಿಗಳೆದ ಕಾಯ, ಸಂಗವಿಲ್ಲದ ಕಾಯ, ಸುಸಂಗವಾಗಿಹ ಕಾಯವಾದುದರಿಂದ ಕೇವಲ ಚಿದಂಗ, ಚಿದ್ರಸದ ಘನಸುಖದಲ್ಲಿದ್ದುದು ತನ್ನಿಂದ ತನಗೆ ವಿದಿತವು, ಇದು ಕಾರಣ ಕಾಯದ ಕಳವಳ ತತ್ವದೃಷ್ಟಿಯಿಂದ ನೋಡಿದಡೆ ಈ ಕಾಯದ ಕಳವಳ ತಾನಾಗದ್ದು, ತನ್ನದಾಗದ್ದು ಎಂಬುದು ಸಹಜ ವಿದಿತವಾಗುವುದು. ಆಗ ತನ್ನಿರುವು ಗುಹೇಶ್ವರ ನಿಲುವು ಎಂದು ಹೇಳಿದುದು, ಮರಹು ನಷ್ಟವಾಗಬೇಕೆಂದಲ್ಲಿ ಅರುವಿನಲ್ಲಿ ಉದಯಿಸುವುದು ಅರುವಿನಲ್ಲಿ ಉದಯಿಸಿದ ಘನವ ಉಪಮಿಸಬಹುದೆ ?

75

**ಅರಿವಿನಲ್ಲಿ ಉದಯಿಸಿ ಮರಹು ನಷ್ಟವಾಗಿರ್ದ**
**ಶರಣನ ಪರಿಯನರಸಲುಂಟೆ ? ಗತಿ ಹೇಳಲುಂಟೆ ?**
**ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರಾ ನಿಮ್ಮ ಶರಣರು !** ॥ 384 ॥

**ತಾತ್ಪರ್ಯ :** ಅರುವಿನಲ್ಲಿ ಉದಯಿಸಿ : ಅರುವಿನಲ್ಲಿ ಉದಯಿಸಿದನೆ ಶರಣ; ಈ ಘನತ್ವ ಅದಾರಿಗೆ ? ಮರವಿನಲ್ಲಿ ಉದಯಿಸಿದುದು ಕೋಟ್ಯಾನುಕೋಟಿ. ಅರುವಿನಲ್ಲಿ ಉದಯಿಸಿದವರೆಂದರೆ ಶರಣ ಶರಣೆಯರು. ಶರಣನು ಉದಯಿಸಿದ ಅರುವು, ಅದು ಅರುವೆನ್ನದರುವು. ಇಂತಪ್ಪ ಅಗಮ್ಯವಾದುದರಲ್ಲಿ ಶರಣ ಉದಯಿಸಿದನೆ ? ಇದರ ಘನವ ಉಪಮಿಸಬಹುದೆ ? ಅರುವಿನಲ್ಲಿ ಉದಯಿಸಿದುದು ಉಪಮಿಸಬಾರದು.

ಬಯಲಿನಲ್ಲಿ ಉದಯಸಿದನೆ ? ಉದಯಿಸಿದುದು ಬಯಲು, ಅದು ಬಯಲು, ಬಯಲು ಬಯಲೆ, ಆವುದರಲ್ಲಿ ಕೂಡಿದುದು ಅಲ್ಲ, ತನ್ನ ಹಿರಿಮೆಯಿಂದ ಅಗಲಿದುದು ಅಲ್ಲ, ತಾನೆ ತಾನಾಗಿದ್ದ ಘನ ! ಇದನೆಂತುಪಮಿಸುವುದು ಇದಕ್ಕೆ ಚಿದಾಕಾಶವೆನ್ನಲೆ ? ಇದು ಸರಿಹೋಗದು, ಚಿದ್ಘನನೆನ್ನಲೆ ? ಸರಿ ಹೋಗದು. ಚಿತ್ರ್ಪಣವವೆನ್ನಲೆ ? ಇದು

ಸರಿಹೋಗದು, ಚಿದ್ರಸವೆನ್ನಲೆ ? ಸರಿಹೋಗದು, ಚಿನ್ಮಯವೆನ್ನಲೆ ಸರಿಹೋಗದು. ಕಥನದಿಂದುಕ್ತವಾದುದೆತ್ತ, ಅಕಥನೀಯವೆತ್ತ ? ಕಥನ, ಅಕಥನೀಯವೆಂಬುದಕ್ಕೂ ಮೌನ, ಮೌನವೆಂಬುದರ ಮೌನವಾಗಿಹ ಘನ ಅದನೆಂತು ವರ್ಣಿಸುವುದು.

ತಾನು ತನ್ನಿಂದ ತನ್ನ ಅರಿದರಿದು ನೋಡಿದಲ್ಲಿ ಅದುವೆ ತಾನಿರುವಲ್ಲಿ ತನ್ನನೆಂತು ವರ್ಣಿಸುವುದು. ಮೂಕನೆನ್ನುವುದಕ್ಕಿಂತ ಮುನ್ನ ಮುನ್ನವೆ ಮೂಕನಾಗಿರುವುದು ಕಂಡು, ಮೂಕನೆಂಬುದು ಪರಿಹಾಸ್ಯವಲ್ಲವೆ ? ಅರುವೆನ್ನದರುವು ಮುನ್ನ ಮುನ್ನವೆ ಮೌನವಾಗಿಹ ಘನ, ಮೌನ, ಮೌನನೆನಲಿಲ್ಲದ ಈ ಸಂಜ್ಞೆ ಅದಾರು ಸೂಚಿದರೊ ಕರುಣಿಸಿದರೊ, ತಿಳಿಯದು. ಅರುವೆನ್ನದರುವು ಅನ್ನಲುಬಾರದಿದ್ದುದು, ಕರುಣಿಸಿದವರಾರು ? ಇದನು ಅರಿಯ ಹೋಗಿ ಬೆರಗುಗೊಂಡಿಹರು ನೋಡಾ, ಅಂತಪ್ಪ ಶಿವಶರಣನೆ ಶಬ್ದಮುಗ್ಧ ನೋಡಾ, ನುಡಿದು ನಿಶಬ್ದಘನನಾಗಿಹನು, ಅಲ್ಲಿ ಶಬ್ದಬ್ರಹ್ಮವು ನಾಚಿ, ತನ್ನಿರುವಿನ ಹಿರಿಮೆಯು ಘನವಾಗಿ ತಾನದುವೆ ಆಗಿ ಪ್ರಜ್ವಲಿಸುತ್ತಿಹುದು ನೋಡಾ, ಇದುವೆ ವಾಙ್ಮನಕ್ಕಗೋಚರ ನೋಡಾ, ಇದರಿರುವ ಅನುಪಮವೆಂಬುವ ಸಂಜ್ಞೆಯು ಕೂಡ ನಾಚಿದುದು ನೋಡಾ, ಶರಣನ ಉದಯ, ಮುನ್ನ ಮುನ್ನವೆ ಇದ್ದ ಅರುವೆನ್ನದರುವಿನಲ್ಲಿ ಉದಯಿಸಿದ ಶರಣ, ಅದುವೆ ಆಗಿಹ ಶರಣ. ಈ ಘನವಂತ ಅರುವು ಮರವೆನ್ನದ ಘನ, ಮುನ್ನ ಮುನ್ನವೆ ಇದ್ದಂತಿದ್ದ ಘನ, ಅರುವೆನ್ನದರುವು ಎಂಬುದು ಇದು ಔಪಚಾರಿಕ ವರ್ಣನೆ, ಇಲ್ಲಿ ಶಬ್ದವೆ ಮೀಸಲವಾಗಿಹುದರಲ್ಲಿ ಶಬ್ದವ ಉಸರುವುದು ಸರಿಹೋಗದು, ಇದ ಕಂಡು ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರಾ ನಿಮ್ಮ ಶರಣರು ಎಂದು ಹೇಳಿಹರು.

ತಾಯಿಯು ಮೌನ, ತಾಯಿಯ ಉದರದಲ್ಲಿಂದ ಹೊರಹೊಮ್ಮಿದುದು ಮೌನ, ಕಥನವೆಂಬುದು ಉಪಚಾರ. ಇದು ಶಿಶುಕಂಡ ಕನಸು. ಇದೆಂಥ ಶಿಶು, ಇದೆಂಥ ಶಿಶು ಕಂಡ ಕನಸು ಆಶ್ಚರ್ಯ, ಅರುವ ಅರಿಹೋದ ಶರಣ ಅರುವೆನ್ನದರುವು. ಅದನು ಅರಿಯಹೋಗಿ ಅರುವು ಮರವೆನ್ನದ ಘನ. ಇದು ಅರುವಿನಲ್ಲಿ ಉದಯಿಸಿದ ಉದಯ, ಇಲ್ಲಿ ಆವುದು ಮುನ್ನವೆಂಬುದು ಅದನಾರಯ್ಯ ಹೀಗೆ ಎಂದು ವಿವರಿಸುವುದು. ಮರಹು ನಷ್ಟವಾಗಿಪ್ಪ ಶರಣನ ಪರಿಯನರಸಲುಂಟೆ ? ಶರಣನೆಂದರೆ ತಾನು ತಾನೆ, ಈ ಘನ ಮಹಿಮನ ಮರಹು ನಷ್ಟವಾಗಿಪ್ಪ ಶರಣನ ಪರಿ ಅದೆಂತು ವರ್ಣಿಸುವುದು ? ಮರವೆಂಬುದು ಇಲ್ಲದುದು, ಇಲ್ಲದುದೆಂಬೆನೆ ? ಸಕಲರಿಗೆ ಆವರಿಸಿಕೊಂಡಿಹುದು, ಆವರಿಸಿ ಕೊಂಡಿಹುದೆಂಬೆನೆ ? ಇಲ್ಲದುದು ಅದೆಂತು ಆವರಿಸುವುದು, ಇದ್ದ ಘನಕ್ಕೆ ಇಲ್ಲದುದು ಆವರಿಸುವದೆ ? ಹಗ್ಗದಲ್ಲಿ ತೋರಿದ ಹಾವು, ಆರ ಕಾಲಿಗಾಗಲಿ ಸುತ್ತಿರಬಹುದೆ ? ಇದ್ದ ಘನ ನಿರಂತರವಿದ್ದುದರಿಂದ ಇದ್ದ ಘನವೆಂಬ ಸಂಜ್ಞೆ ಬಂದಿದೆ, ಇದ್ದ ಘನವು ಇದ್ದುದೆನಲಿಲ್ಲ, ಇಲ್ಲದುದೆನಲಿಲ್ಲ, ಘನವೆಂಬುದು ನಿರಂತರ ಮಂಗಲಮಯವಾದುದು ಇದನು ಅರಿಯ ಹೋದವರಿಗೆ ಶರಣರಿಗೆ ಮರಹು ನಷ್ಟವಾಗಿಪ್ಪ ಪರಿಯನರಸಲುಂಟೆ ? ಎಂದು ಹೇಳಿಹರು.

ಶಬ್ದಕ್ಕೊಳಪಟ್ಟುದೆಲ್ಲವು ಉಪಚಾರ, ಉಪಚಾರ ನಷ್ಟ ಮಾಡುವುದಕ್ಕೂ ಶಬ್ದಬೇಕು, ಉಪಚರಿಸುವುದಕ್ಕೂ ಬೇಕು, ಉಪಚರಿಸುವ ಶಬ್ದಂಗಳು ಸಾಕಷ್ಟು ಲಭ್ಯವಾಗುವುವು. ಉಪಚಾರ ನಷ್ಟ ಮಾಡುವ ಶಬ್ದ ಅದು ಬಹು ಗುಟ್ಟಾದುದು, ರಹಸ್ಯವಾದುದು. ಅದನ್ನು ವೇದವು ವೇಧಿಸದು, ಶಾಸ್ತ್ರವು ಸಾಧಿಸದು, ಪುರಾಣ ಪೂರೈಸದು. ಅದಕ್ಕಾಗಿ ಪ್ರಪಂಚ

ಸತ್ಯ ಮಿಥ್ಯೆ ಎನ್ನುವವರಿಗೂ ದಕ್ಕದ ತುತ್ತಾಗಿದೆ. ಪರಮಾರ್ಥ ಸತ್ಯ ಮಿಥ್ಯೆ ಎನ್ನುವವರಿಗೂ ದಕ್ಕದ ತುತ್ತಾಗಿದೆ. ಸಮ ಸಮ ಎನ್ನುವವರಿಗೂ ದಕ್ಕದ ತುತ್ತಾಗಿದೆ. ಆರಿಗೆ ಸಮದೃಷ್ಟಿ ಪ್ರಜ್ವಲಿಸಿದೆ, ಅವರಿಗೆ ಉಪಚಾರ ನಷ್ಟ ಮಾಡುವ ಸಂಜ್ಞೆ ಹಾಗೂ ಮುನ್ನ ಮುನ್ನವೆ ಇದ್ದ ಘನವ ಕರುಣಿಸುವ ಕರುಣಾರಸದ ಕಡಕೋಡಿಯಾಗಿದೆ. ಈ ಮಹಾಂತನ ಮಹದರುವು ಅವರ್ಣೀಯವು.

ಅರುವಿನಲ್ಲಿ ಉದಯಿಸಿದ ಶರಣನ, ಶರಣನು ತಿಳಿವನು. ಶರಣ ಶರಣನಾಗಿ ತಿಳಿವನು. ಅದು ಕಾರಣ ಶರಣನ ಪರಿ ಹುಡುಕಿದರೆ ಶರಣರಾಗದವರಿಗೆ ಹೇಗೆ ಸಾಧ್ಯ, ಶರಣಂಗೆ ಗತಿಯನರಸಲುಂಟೆ ? ಶರಣನ ಗತಿ ಅದೆಂತು ಹುಡುಕುವುದು ? ಬ್ರಹ್ಮ, ವಿಷ್ಣು, ರುದ್ರ ಗತಿ ವೇದ ವೇದಾಂತದಿಂದ ಹುಡುಕಬಹುದು. ಆವುದು ಕಲ್ಪಿತವಾಗಿದೆ, ಅದು ಆದಿ ಅಂತ್ಯವು ಸಿದ್ಧವಾಗುವುದು. ಆವುದು ಅನಂತವಾಗಿದೆ ಅದಕ್ಕೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ.

ಹೇಳಬಾರದ ಘನ, ತೋರಬಾರದ ಘನ, ಇದರ ಗತಿಯ ಹೇಗೆ ಹುಡುಕುವುದು, ಶರಣ ತನ್ನ ತಾನರಿತ ಅನುಪಮ ನುಡಿಗೆಡೆಗೊಡದ ಘನ, ಎಡೆಯಿಲ್ಲದ ಪರಿಪೂರ್ಣ, ಭಾವಕ್ಕಿಂಬು ಕೊಡದ ಭಾಸ್ಕರ, ಈ ಭಾಸ್ಕರ ಭರಿತ ಭಾಸ್ಕರ. ಅರಿಯದರವು ಅಲ್ಲಿ ಗತಿಯನರಸಲುಂಟೆ ? ಮತಿಯೆ ಭಸ್ಮವಾಗಿರುವಲ್ಲಿ ಗತಿಯ ಹುಡುಕಲುಂಟೆ ? ಜೀವ, ಪರಮರೆಂಬ ಕಲ್ಪಿತರುಂಟೆ ? ಅಲ್ಲಿ ಐಕ್ಯವಾವುದು ? ಅನೈಕ್ಯವಾವುದು ?

ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರಾ ನಿಮ್ಮ ಶರಣರು, ಗುಹೇಶ್ವರಾ ನಿಮ್ಮ ಶರಣ ಶಿಶು ಮೌನಮುದ್ರೆ ಧರಿಸಿದ ಶಿಶು, ಈ ಕೂಸಿಗೆ ಕನಸು ಕಂಡರೂ ಅದನ್ನು ಬಹಿರ್ಪಡಿಸದ ಕೂಸು, ಇದೆಂಥ ಕೂಸು ಇದ್ದುದನರಿತು ಅದುವೆ ಆಗಿಹ ಕೂಸು, ಈ ಕೂಸಿಂಗೆ ಕಥನವೆ ಕನಸಾಗಿದೆ ಅದು ಪ್ರಪಂಚದ್ದಿರಲಿ, ಪರಮಾರ್ಥದ್ದಿರಲಿ ತಾನೆ ತಾನಾಗಿಹ ಘನ, ನಿಃಶಬ್ದ ಬ್ರಹ್ಮ ಇದು ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರ ಲಿಂಗವರಿತು ಸುಖಿಯಾದ ಸುಖರೂಪು ಇವರಿಗೆಲ್ಲಿ ? ಕರಣಂಗಳು, ನವಚಕ್ರಗಳು.

**76**

**ಕರಣಾದಿ ಗುಣಂಗಳಳಿದು ನವಚಕ್ರಂಗಳು ಭಿನ್ನವಾದ ಬಳಿಕ**
**ಇನ್ನೇನೊ ? ಇನ್ನೇನೊ ?**
**ಪುಣ್ಯ-ಪಾಪವಿಲ್ಲ ಇನ್ನೇನೊ ? ಇನ್ನೇನೊ ?**
**ಸ್ವರ್ಗ-ನರಕವಿಲ್ಲ ಇನ್ನೇನೊ ? ಇನ್ನೇನೊ ?**
**ಗುಹೇಶ್ವರಲಿಂಗವ ವೇಧಿಸಿ ಸುಖಿಯಾದ ಬಳಿಕ**
**ಇನ್ನೇನೊ ? ಇನ್ನೇನೊ ?** ॥ 388 ॥

**ತಾತ್ಪರ್ಯ :** ಬಹು ಜಿಜ್ಞಾಸುಗಳು, ತಾವಾರೆಂದರಿಯದವರು ಸಾಕಷ್ಟು ಸಿಕ್ಕುತ್ತಾರೆ, ತಮ್ಮ ತಾವರಿಯಲು ತತ್ವ ಜ್ಞಾನವೆ ಮುಖ್ಯ ಪ್ರಧಾನವಾದುದು, ತತ್ವನರಿಯದವರಿಗೆ ಆವುದು ದಿಟ ಆವುದು ಸಟೆ ಎಂಬುದು ವಿದಿತವಾಗುವುದಿಲ್ಲ, ದಿಟಸಟೆಯ ವಿದಿತವಾಗಲು

ನಿತ್ಯಾನಿತ್ಯ ವಿವೇಕ, ವಿವೇಕ ಪರಿಶುದ್ಧವಾಗಿದ್ದರೆ ವೈರಾಗ್ಯವು ಇರುವುದು. ಅದರ ಜೊತೆಗೆ ಅಂತರ್ ಬಹಿರ್ ಇಂದ್ರಿಯ ನಿಗ್ರಹ, ಮುಮುಕ್ಷುತ್ವ ಶ್ರದ್ಧೆ, ಸಮಾಧಾನ, ತಿತಿಕ್ಷೆ ಉಪರಾತಿಯುಳ್ಳ ಶಮಾದಿಷಟ್‌ಸಂಪತ್ತುಳ್ಳವನಾಗಿದ್ದರೆ ತಾನಾರೆಂದರಿಯಲು ಬಹು ಸಹಾಯಕವಾಗುವುದು, ಇದರಿಂದ ಸದ್ಗುರುನಾಥನ ದರ್ಶನದ ಹಂಬಲವು ಅಧಿಕಾಧಿಕವಾಗಿ ತತ್ವ ತಿಳಿಯಬೇಕೆಂಬ ಕುತೂಹಲ ಅರಳುವುದು. ಸದ್ಗುರು ದರ್ಶನದಿಂದ ಬಹುಲಾಭವು. ಆ ಮಹಾಂತನ ಕೃಪೆಯಾಗುವುಡೆ ಕರಣಂಗಳಳಿದು ನವಚಕ್ರಗಳು ಭಿನ್ನವಾದ ಬಳಿಕ ಇನ್ನೇನೊ ಇನ್ನೇನೊ ? ತಾನಾರೆಂಬ ತನ್ನ ಸ್ವರೂಪ ಜ್ಞಾನವಾದ ಮೇಲೆ ಇನ್ನೇನೊ ಎಂಬ ಸಿಂಹಗರ್ಜನೆ ಹೊರ ಬರುವುದು. ''ದೇಹೇಂದ್ರಿ ಮನೋಬುದ್ಧಿ ಪ್ರಕೃತಿಭ್ಯೋವಿಲಕ್ಷಣಃ ಸಚ್ಚಿದಾನಂದ ಮದ್ವೈತಂ ಪರಂ ಬ್ರಹ್ಮಸ್ಮಿಕೇವಲಂ '' ನಾನು ದೇಹದಿಂದ ಇಂದ್ರಿಯಂಗಳಿಂದ ಮನಸ್ಸಿನಿಂದ, ಬುದ್ಧಿಯಿಂದ, ಪ್ರಕೃತಿಯಿಂದ, ತ್ರಿಗುಣಾತ್ಮಕದಿಂದ, ನವಚಕ್ರದಿಂದ ವಿಲಕ್ಷಣನಾಗಿದ್ದೇನೆ, ಈ ತೋರತಕ್ಕ ದೃಶ್ಯಪದಾರ್ಥಗಳೆಲ್ಲ ಜಡವಾಗಿಯೂ ದುಃಖರೂಪವಾಗಿಯೂ ಇರುತ್ತವೆ.

ಎಲೈ ಮಾನವ ನೀನು ಅಮರ ಆತ್ಮನಿರುವಿ. ನೀನು ಈ ತೋರುವ ಮೂರು ಶರೀರಗಳಿಂದ ಭಿನ್ನನಾಗಿರುವಿ. ಮೂರು ಅವಸ್ಥೆಗಳಿಗೂ ಭಿನ್ನನಾಗಿರುವಿ, ಪಂಚಕೋಶಾತೀತನಿರುವಿ. ನೇತಿ ನೇತಿ ಸಾಧನ ಅಭ್ಯಾಸ ಮಾಡು, ಅನ್ವಯ ವ್ಯತಿರೇಕ ರೂಪದಿಂದ ಲಯ ಚಿಂತನ ಮಾಡು, ನಾಮ ರೂಪಗಳನ್ನು ನಿರಾಕರಣ ಮಾಡು, ಅಸ್ತಿ, ಭಾತಿ, ಪ್ರಿಯಗಳನ್ನು ಗ್ರಹಣ ಮಾಡು. ನೀನು ಸಾಕ್ಷಿಯಾಗಿರುವಿ. ಹಸಿವು ತೃಷೆ ನಿನ್ನ ಧರ್ಮವಲ್ಲ ಇವು ಪ್ರಾಣ ಧರ್ಮಂಗಳು. ಜನನ-ಮರಣ ನಿನ್ನ ಧರ್ಮವಲ್ಲ ಇವು ದೇಹ ಧರ್ಮಗಳು. ಪ್ರಿಯ ಮೋಹ ನಿನ್ನವಲ್ಲ ಇವು ಕಾರಣ ಶರೀರದ ವ್ಯಾಪಾರಗಳು. ಜಾಗ್ರದಿಂದ ಮೂರು ಅವಸ್ಥೆಗಳು ನಿನ್ನವಲ್ಲ ಇವು ಮನಸ್ಸಿನ ಅವಸ್ಥೆಗಳು. ನೀನು ಮೂರು ಅವಸ್ಥೆಗಳಿಗೆ ಸದಾ ಮುಗ್ಧ ಸಾಕ್ಷಿಯಾಗಿರುವಿ. ನಾನು ಶರೀರವೂ ಅಲ್ಲ ಕರಣಾದಿಗುಣಂಗಳೂ ಅಲ್ಲ, ನವಚಕ್ರಂಗಳೂ ಅಲ್ಲ, ಇವು ಆಯಾ ಹೃದಯದಲ್ಲಿರುವ ದಳಗಳು (ಚಕ್ರಗಳು).

ನವ ಚಕ್ರಗಳೆಂದರೆ, ಗುದದಲ್ಲಿರುವುದು ಆಧಾರ, ಲಿಂಗದಲ್ಲಿರುವುದು ಸ್ವಾಧಿಷ್ಠಾನ, ನಾಭಿಯಲ್ಲಿರುವುದು ಮಣಿಪುರ, ಹೃದಯದಲ್ಲಿರುವುದು ಆಜ್ಞಾಚಕ್ರ, ನೆತ್ತಿಯ ಆಚೆ ಶಿರದಲ್ಲಿರುವವು ಮೂರು ಚಕ್ರ, ಬ್ರಹ್ಮರಂಧ್ರ, ಶಿಖ, ಪಶ್ಚಿಮ. ಹೀಗೆ ಒಂಭತ್ತು ಚಕ್ರಗಳು. ಇವು ಹಠಯೋಗಿಯು ತನ್ನ ಪ್ರಾಣವನ್ನು ಕುಂಭಕ ಮಾಡಲು ಉಪಯೋಗಿಸಿಕೊಂಡಿರುವ ಆಯಾ ಸ್ಥಾನಂಗಳು. ಇವೆಲ್ಲವೂ ತನ್ನಿಂದ ತಿಳಿಸಿಕೊಳ್ಳವುಗಳು ಆಗಿವೆ. ಅದಕ್ಕಾಗಿ ತಾನಲ್ಲ, ತನ್ನವೂ ಅಲ್ಲವೆಂದು ಇವುಗಳಿಗೆ ಬೇರಾದ ಮೇಲೆ ಇನ್ನೇನೋ ಇನ್ನೇನೋ !

ಎಲೈ ಸಾಧಕನೆ, ನೀನು ಶುದ್ಧ ವೇದಾಂತದಲ್ಲಿ ಕಾಲ ಕಳೆಯುವವನಾರು. ವೇದಾಂತವೆಂದರೆ ವೇದದ ಅಂತವದೆ, ವೇದಾಂತವೆಂದರೆ ಜ್ಞಾನ. ಯಾವುದನ್ನು ತಿಳಿಯುವುದರಿಂದ ಪ್ರತ್ಯಕ್ಷ ವಸ್ತುವಿನ ತಿಳುವಳಿಕೆಯಾಗುವುದೊ, ಅಂದರೆ ಜ್ಞಾನವಾಗುವುದೊ ಅದಕ್ಕೆ ವೇದಾಂತವೆನ್ನುವರು. ಇದು ಅಮರಾನಂದದಾಯಿಕವಿದೆ. ಸುಖರೂಪ ಪ್ರದರ್ಶನ ಮಾಡುವುದು. ಜ್ಞಾನರೂಪ ಸತ್ಯ ಸಾಕ್ಷಾತ್ಕಾರ ಹೊಂದುವನಾಗು, ಜ್ಞಾನಮಯ ಜೀವನದಲ್ಲಿಯೆ ಕಾಲಕಳೆಯುವನಾಗು, ಗುಣಾತೀತನಾಗು, ಬ್ರಹ್ಮಧ್ಯಾನ ಮಾಡು ಇದರಿಂದ

ಜ್ಞಾನವೃದ್ಧಿಯಾಗುವುದು, ನಿನ್ನ ಮನಸ್ಸು ಶುದ್ಧವಾಗುವುದು. ವಿಷಯಾಕಾರ ವೃತ್ತಿ ನಷ್ಟವಾಗುವುದು, ಬ್ರಹ್ಮಕಾರ ವೃತ್ತಿ ಜಾಗೃತವಾಗುವುದು, ನಿನ್ನಲ್ಲಿಯೆ ಸುಖವಿದೆ. ಕಸ್ತೂರಿ ಮೃಗದ ಒಕ್ಕಳದಲ್ಲಿಯೆ ಕಸ್ತೂರಿಯಿದೆ, ಪರಂತು ಕಸ್ತೂರಿಮೃಗವು ಅದನ್ನು ಹೊರಗೆ ಹುಡುಕುತ್ತದೆ. ಓ ಮಾನವಾ, ನಿಜವಾಗಿ ವಿಚಾರ ಮಾಡಿದ್ದಾದರೆ ನಿತ್ಯಾನಂದ ನಿನ್ನಲ್ಲಿಯೆ ಇದೆ. ಕುಳಿತುಕೊಳ್ಳು, ದೇವನಾಗಿ ಕುಳಿತುಕೊಳ್ಳುವುದು ಕಲಿ, ನೀನು ದೇವನೆ ಇರುವಿ.

ಕಣ್ಣುಗಳನ್ನು ಮುಚ್ಚು, ಧ್ಯಾನ ಮಾಡು, ಇಂದ್ರಿಯ ಮನಾದಿಗಳ ವಶಪಡಿಸಿಕೊಳ್ಳು, ಮನಸ್ಸು ನಿಜಾತ್ಮನಲ್ಲಿ ಏಕಾಗ್ರ ಮಾಡು, ಸ್ವರೂಪಾನಂದದಸಲುವಾಗಿ ನಿನ್ನ ಅಂತರದಲ್ಲಿಯೆ ನೋಡು, ನೀನು ಸುಖ ಸ್ವರೂಪನೇ ಇರುವಿ, ವ್ಯರ್ಥ ಕಾಲ ಕಳೆಯುತ್ತ ತಿರುಗಬೇಡ, ಮನೆಯಲ್ಲಿ ಬೆಣ್ಣೆ ಇರುತ್ತಿರಲಾಗಿ ತುಪ್ಪದ ಸಲುವಾಗಿ ಅನ್ಯರ ಮನೆಗೆ ಹೋಗುವುದು ಬೇಡ, ಹೋಗುವ ಅವಶ್ಯಕತೆಯಾದರೂ ಏನು ? ಇದು ನಿನ್ನ ಜನ್ಮಸಿದ್ಧ ಅಧಿಕಾರ. ಅದನ್ನು ಹೊಂದುವನಾಗು.

ಒಂದು ಕ್ಷಣ ಅಥವಾ ಒಂದು ನಿಮಿಷವಾದರೂ ನಾನು ಸುಖ ಸ್ವರೂಪನಿರುವುದರಿಂದ ಸಾಮ್ರಾಟರ ಸಾಮ್ರಾಟನಿದ್ದೇನೆಂದು ತಿಳಿದುಕೊಳ್ಳು, ಬ್ರಹ್ಮವೆಂದರೆ ನೀನು, ನೀನೆಂದರೆ ಗುಹೇಶ್ವರಲಿಂಗ, ಪೂರ್ಣನಿರುವಿ. ಯಾವ ಪ್ರಕಾರ ಉಪ್ಪಿನ ರಾಶಿಯ ರುಚಿಯನ್ನು ಒಳಗೂ, ಹೊರಗೂ, ಸುತ್ತಲೂ ರುಚಿ ನೋಡಿದರೆ, ಒಂದೇ ತೆರಹನಿರುವಿ. ಅರಿದರಿದು ನೋಡು, ಆವ ಗುಹೇಶ್ವರ ಲಿಂಗ ತಿಳಿದು ಸುಖಿಯಾದ ಬಳಿಕ ಉಳಿದುದೇನು ? ತಿಳಿಯಬೇಕಾದದ್ದು ತಿಳಿದು ಸುಖಿಯಾದ ಬಳಿಕ ಇನ್ನು ಉಳಿದುದು ಮತ್ತಾವುದು, ತಾನೆ ಸುಖ ಸ್ವರೂಪನಾದ ಮೇಲೆ ಇನ್ನೇನು, ಯಾವ ಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲವೊ ? ಯಾವ ಸುಖಕ್ಕಿಂತ ಹೆಚ್ಚಿನ ಸುಖವಿಲ್ಲವೊ ? ಯಾವ ಗುಹೇಶ್ವರಲಿಂಗ ಜ್ಞಾನಕ್ಕಿಂತ ಹೆಚ್ಚಿನ ಜ್ಞಾನವಿಲ್ಲವೊ ಅದುವೆ ತನ್ನಿರುವಿನ ಅರುವಾಗಿ ಸುಖದ ಸುಖಿಯಾದ ಬಳಿಕ ಇನ್ನೇನೊ, ಇನ್ನೇನೊ.

ಪುಣ್ಯವಾವುದು ? ಪಾಪವಾವುದು ? ಇಲ್ಲದುದು ಇಲ್ಲವಾಗಿ ಇದ್ದ ಘನವು ತಾನಾಗಿ ಪ್ರಜ್ವಲಿಸುವಲ್ಲಿ ಇನ್ನೇನೊ, ಇನ್ನೇನೊ ನಿರಂತರವಾಗಿರುವ ಮಂಗಳಮಯ ಗುಹೇಶ್ವರ ಲಿಂಗ ತಿಳಿದು ಸುಖಿಯಾದ ಬಳಿಕ ಸ್ವರ್ಗವಿಲ್ಲ ನರಕವಿಲ್ಲ . ಇಲ್ಲದುದ ಇಲ್ಲವೇ ಇಲ್ಲ, ಈ ಇಲ್ಲವೆಂಬ ಇಲ್ಲವಾಗಿ ತಾ ಅಚ್ಚ ಸುಖಿಯಾದ ಬಳಿಕ ಇನ್ನೇನೊ, ಇನ್ನೇನೊ ಗುಹೇಶ್ವರ ಲಿಂಗ ತಾನಾಗಿರುವಲ್ಲಿ ಇನ್ನೇನೊ, ಇನ್ನೇನೊ.

ಕರುಣಾದಿ ಗುಣಂಗಳ ಅಳಿಯಬೇಕಾದಲ್ಲಿ ಕರಣಂಗಳು ಲಿಂಗ ಕರಣಂಗಳು ಆಗುವುವು, ಇದು ಗುಹೇಶ್ವರ ಲಿಂಗ ಅರಿಯ ಹೋದಾಗ ಕಲ್ಪಿತ ಮನಕೆಟ್ಟು, ಅಕಲ್ಪಿತ ಮನವಾಗುವುದು. ಬುದ್ಧಿಯೇ ಭಸ್ಮವಾಗಿ ನಿಜ ಚಿದ್ರೂಪವಾಗಿ ಬೆಳಗುವುದು. ಆಗ ಅಚಿಂತ್ಯತ್ವ ಸಿದ್ಧಿಸಿ ನಿಶ್ಚಿಂತನಾಗಿ ಅಕರ್ತನಾಗುವನು, ಅದು ಕರಣಂಗಳಳಿದ ಸಂಕೇತ.

ನರಚಕ್ರಗಳು ಭಿನ್ನವಾಗಬೇಕಾದರೆ ತತ್ವಜ್ಞಾನವೇ ಪ್ರಧಾನವು, ಇದು ಕೂಡ ಅರುವ ಅರಿಯ ಹೋಗದನ್ನಕ್ಕರ ಹಠಯೋಗದ ಕುಂಭಕ ಕ್ರಿಯೆಗಳು ಘನವಾಗಿ ತೋರುವವು. ಈ ಕುಂಭಕಯೋಗದಲ್ಲಿ ಸಮಾಧಿಸ್ತನಾಗಿದ್ದರೂ ಇದು ಕುಂಭಕರ್ಣನ ನಿದ್ರೆಯಂತೆ ಜ್ಞಾನಶೂನ್ಯವದೆ. ಅರುವ ಅರಿಯಹೋಗಿ ಜ್ಞಾನಾನಂದವೆ ತಾನಾಗಿರುವ ಜ್ಞಾನಸ್ವರೂಪವೆತ್ತ,

ಕೇವಲ ಕುಂಭಕಯೋಗದಿಂದುಕ್ತರಾಗಿ ನಿದ್ರಿತನಾಗಿರುವ ಜ್ಞಾನಶೂನ್ಯವೆತ್ತ, ಎತ್ತಣದಿಂದೆತ್ತ ಮರವೆತ್ತ, ಅರುವೆತ್ತ, ಜಡದ ಕುಂಭಕದ ಯೋಗವೆತ್ತ, ಸ್ವರೂಪಾನಂದದಲ್ಲಿ ಸಮರಸವಾಗಿಹ ಶಿವಯೋಗಿಯ ಸುಖವೆತ್ತ ಇದು ಕಾರಣ ಗುಹೇಶ್ವರ ಲಿಂಗವ ವೇದಿಸಿ ಸುಖಿಯಾದ ಬಳಿಕ ಇನ್ನೇನೊ ಇನ್ನೇನೊ.

77

**ಕಾಯ ಭಿನ್ನವಾಯಿತ್ತೆಂದು  ಮುಟ್ಟಿಸುವರು ಲಿಂಗವನು,**
**ಮುಟ್ಟಲಾಗದು ಲಿಂಗವನು ; ಮುಟ್ಟದಾತ ಮುಂದೆ ಹೋದ.**
**ಮುನ್ನ ಮುಟ್ಟಿದವರೆಲ್ಲ ಉಪಜೀವಿಗಳಾದರು.**
**ಇನ್ನು ಮುಟ್ಟಿದವರಿಗೆ ಗತಿಯುಂಟೆ ಗುಹೇಶ್ವರಾ ?** ॥ 402 ॥

**ತಾತ್ಪರ್ಯ :** *ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು* : ಕಾಯ ಲಿಂಗವಿಲ್ಲದೆ ಇರುವುದು ಎಂದು ಕಳಕಳಿಯಿಂದ ಮುಟ್ಟಿಸುವರು ಲಿಂಗವನು. ಇವರಾರು ? ಇವರು ಇಷ್ಟಲಿಂಗದ ನಿಷ್ಠೆಯುಳ್ಳ ಲಿಂಗವಂತರು. ಇವರು ಲಿಂಗವ ತಿಳಿಯದ ಮುಗ್ಧರು, ಕುರುಹನ್ನೆ ಲಿಂಗವೆಂದು ತಿಳಿದ ಬುದ್ಧಿವಂತರು. ಲಿಂಗಧರಿಸದ ಕಾಯ ಇರಬಾರದು ಎಂದು ಅಂಗದ ಮೇಲೆ ಈ ಪೂಜಾಲಿಂಗ ಇರಬೇಕಾದುದು ಅವಶ್ಯಕವು ಎಂದು ಭಾವಿಸಿಹ ಲಿಂಗಾಭಿಮಾನಿಗಳು, ಲಿಂಗಭಾವಿಗಳು, ಇವರಿಗೆ ಕಾಯ ಬೇರೆ, ಲಿಂಗ ಬೇರೆ. ಕಾಯ ಮಲಮಯ, ಲಿಂಗ ಅಮಲ. ಕಾಯ ನಾಶವುಳ್ಳದ್ದು ಲಿಂಗ ಅವಿನಾಶಿ. ಲಿಂಗ ಘನ, ಕಾಯ ಕಾಲಾಧೀನ. ಇದು ಲಿಂಗ ಧರಿಸಿ ಲಿಂಗ ಪೂಜಾ ಮಾಡುವುದರಿಂದ ಕಾಲ ಕರ್ಮಂಗಳು ಕೆಡುವವು ಎಂಬ ಮತಿವಂತರು. ತಮ್ಮ ತಮ್ಮ ಭಾವದಂತೆ ಲಿಂಗ ವಿರಹಿತ ಕಾಯ ಇರಬಾರದು ಎಂದು ಇವರು ತಾಯಿಯ ಗರ್ಭವಾದ ಎಂಟನೇ ತಿಂಗಳಕ್ಕೆ ಲಿಂಗವನು ಮುಟ್ಟಿಸುವರು. ಆ ಕೂಸು ಹುಟ್ಟಿದ ತಕ್ಷಣ ತೊಟ್ಟಿಲಕ್ಕೆ ಲಿಂಗ ಕಟ್ಟುವರು. ಕೂಸು ದೊಡ್ಡದಾದ ಮೇಲೆ ಅದರ ಕೊರಳಿಂಗೆ ಪೂಜಾ ಲಿಂಗವ ಕಟ್ಟುವರು. ಪೂಜಾಲಿಂಗಕ್ಕೆ ಇವರು ಇಷ್ಟಲಿಂಗವೆಂದು ಭಾವಿಸಿಹರು.

*ಮುಟ್ಟಲಾಗದು ಲಿಂಗವನು, ಮುಟ್ಟದಾತ ಮುಂದೆ ಹೋದ* : ಮುಟ್ಟಲಾಗದ ಲಿಂಗವನು ? ಲಿಂಗ ಆರು ಮುಟ್ಟಲಾಗದು ? ಲಿಂಗ ಆರಾರು ಮುಟ್ಟರು. ಕೈಯಿಂದ ಮುಟ್ಟರು, ನೆನಹಿನಿಂದಲೂ ಮುಟ್ಟರು, ಭಾವಿಸಿಯೂ ಮುಟ್ಟರು.

*ಅಂಗದ ಮೇಲಣ ಲಿಂಗವು ಲಿಂಗವಲ್ಲ, ಮನದ ಮೇಲಣ ಲಿಂಗವು ಲಿಂಗವಲ್ಲ, ಭಾವದ ಮೇಲಣ ಲಿಂಗವು ಲಿಂಗವಲ್ಲ, ಅಂಗದ ಮೇಲಣ ಲಿಂಗ ವ್ಯವಹಾರ, ಮನದ ಮೇಲಣ ಲಿಂಗ ಸಂಕಲ್ಪ, ಭಾವದ ಮೇಲಣ ಲಿಂಗ ಭ್ರಾಂತು ತತ್ವ, ಆಳಿನ ಆಳು ಅರಸನಪ್ಪನೆ, ಆಳನಾಳುವ ಅರಸನಲ್ಲದೆ ಅಂಗ, ಪ್ರಾಣ, ಭಾವಂಗಳನೊಳಕೊಂಡಿರ್ಪುದೆ ಲಿಂಗಕಾಣ ಮಸಣಯ್ಯಪ್ರಿಯ ಗಜೇಶ್ವರಾ.*

ಬಹು ಲಿಂಗಾರ್ಚಕರಿಗೂ ಲಿಂಗ ಕಟ್ಟುವ ಗುರು ವರ್ಗಕ್ಕೂ ಲಿಂಗದರಿವು ಬಹು ಜನರಿಗೂ ಇಲ್ಲದಂತೆ ಕಾಣುತ್ತದೆ. ಎಲ್ಲೋ ಒಬ್ಬ ಗುರುದೇವನು ಸಿಕ್ಕರು ಸಿಗಬಹುದು,

ಅದೇ ಪ್ರಕಾರ ಭಕ್ತರಿಗೂ ಎಲ್ಲೋ ಒಬ್ಬನಿಗೆ ಲಿಂಗ ಜ್ಞಾನ ಇರಬಹುದು. ಬಹು ಲಿಂಗವಂತರಿಗೆ ಲಿಂಗ ಜ್ಞಾನವಿಲ್ಲದಂತೆ ಕಂಡು ಬರುತ್ತದೆ. ಏಕೆಂದರೆ ಲಿಂಗಾಯತರಲ್ಲಿ ಬಹು ಭಾಗ ತಿಳಿಯದೆ ಲಿಂಗ, ಲಿಂಗ ಎನ್ನುವುದು ತಿಳಿಯದೆ ಲಿಂಗ ಅನ್ನುವುದು ಅದು ಪೂಜಾ ಲಿಂಗವೆಂದು ಪೂಜಿಸುವ ಭಾವ ಬೆಳೆದು ಬಂದಿದೆ. ಈ ಭಾವಿಕತನವೆ ಲಿಂಗದ ರಹಸ್ಯವ ತಿಳಿಯದಂತೆ ಮಾಡಿದೆ.

ಅಂಗದ ಮೇಲೆ ಕಾಣಿಸುವ ಲಿಂಗ ಇದು ವ್ಯವಹಾರ. ಲಿಂಗಯ್ಯ ಪೂಜಿಸಿಕೊಳ್ಳುವುದೆ ವ್ಯವಹಾರ, ಶುದ್ಧೋದಕದಿಂದ ಪತ್ರೆ-ಪುಷ್ಪದಿಂದ, ಭಸ್ಮ-ಗಂಧಾದಿಗಳಿಂದ, ಧೂಪದೀಪಗಳಿಂದ, ಮಂತ್ರದಿಂದ, ಜಪದಿಂದ ಪೂಜಿಸಿಕೊಳ್ಳುವುದೆ ಇದರ ವ್ಯವಹಾರ. ಮನದ ಮೇಲಣ ಲಿಂಗ ಸಂಕಲ್ಪ , ಲಿಂಗವೆಂಬುವದೊಂದು ಸಂಕಲ್ಪ, ಈ ಸಂಕಲ್ಪ, ಲಿಂಗವರಿಯದ ಸಂಕಲ್ಪ, ಇಲ್ಲದ ಕಲ್ಪನೆಗೊಳಪಟ್ಟ ಕಲ್ಪಿತ ಲಿಂಗ, ಸ್ವಯಂಜ್ಯೋತಿ ಲಿಂಗ ನಿರಂತರ ಇದು ಸಂಕಲ್ಪಕ್ಕೊಳಪಟ್ಟ ಲಿಂಗ ಹೇಗಾಗುವುದು. ಭಾವದ ಮೇಲಣ ಲಿಂಗ ಭ್ರಾಂತು, ಭಾವಕ್ಕಗಮ್ಯವಾದ ಘನವು ಭಾವಕ್ಕಿಂಬುಕೊಡುವುದು ಅದೆಂತು ? ಈ ಭಾವಿಕರ ಭಾವದ ಮೇಲಣ ಲಿಂಗವೆಂಬ ಭ್ರಾಂತಿ ಎತ್ತ ? ಭಾವಕ್ಕಗಮ್ಯವಾದ ನಿರ್ಭಾವಮಯವಾಗಿಹ ಘನವೆತ್ತ ಕತ್ತಲೆಯತ್ತ, ಬೆಳಗುಳ್ಳ ಘನವೆತ್ತ ಲಿಂಗವದು ತತ್ವ, ತತ್ವವೆಂಬುದು ಸತ್ಯ, ಜ್ಞಾನಾನಂದ, ಪರಾನಂದ, ಪರಬ್ರಹ್ಮ, ಪರಂಜ್ಯೋತಿಯಾಗಿಹ ಲಿಂಗ, ಈ ಘನಲಿಂಗವ ಅದಾರು ಮುಟ್ಟುವರು. ಮುಟ್ಟಲು ಕೈಗೆ ಸಿಲುಕದು, ನೆನೆಯಲು ಮನಕ್ಕೆ ನಿಲುಕುವುದೆ, ನಿರ್ಣಯಕ್ಕೆ ಬಾರದ ಘನವನ್ನು ಭಾವದಿಂದ ಭಾವಿಸುವುದು ಅದೆಂತು, ಆಳಿನ ಆಳು ಅರಸನಪ್ಪನೆ, ಆಳನಾಳುವವ ಅರಸನಲ್ಲದೆ ಎಂದು ತಿಳಿಸಿದುದು ಬಹುಮಾರ್ಮಿಕವಾದುದು. ಕರ್ಮೇಂದ್ರಿಯಂಗಳಾಗಲಿ, ಜ್ಞಾನೇಂದ್ರಿಯಂಗಳಾಗಲಿ, ಪ್ರಾಣಗಳಾಗಲಿ, ಕರ್ಣಂಗಳಾಗಲಿ, ಇವು ಚೇತನದ ಆಳು, ಇವನ ಸಂಜ್ಞೆಯಂತೆ ಆಚರಿಸುವ ಆಳು, ಚೇತನವೆಂದರೆ ಜೀವ ಕಲ್ಪಿತ, ಈ ಕಲ್ಪಿತನೇ ಆಳು, ಈ ಆಳಿನ ಆಳು ಅಂತರಿಂದ್ರಿಯ, ಬಹಿರಿಂದ್ರಿಯಂಗಳು, ಇವು ಹೇಗೆ ಅರಸನಾಗುವುವು? ಕಲ್ಪಿತಕ್ಕೆ ನಿಲುಕದ ಘನವೆ ಅರಸನು, ವಾಙ್ಮನೋತೀತವಾಗಿಹ ಘನವೆ ಅರಸನು.

ಆಳನ್ನು ಆಳುವವನು ಆರು ? ಅವನು ಅರಸನು. ಲಿಂಗವದು ಪೂಜಾಲಿಂಗ, ಕ್ರಿಯೆದಿಂದುಕ್ತವು, ಕುರುಹಿನಿಂದುಕ್ತವು, ಇದು ಹೇಗೆ ಘನತತ್ವವಾಗುವುದು, ಯಾವುದು ವಾಣಿಗೂ, ಮನಕ್ಕೂ, ಭಾವಕ್ಕೂ ನಿಲುಕದ್ದು ಅಕಲ್ಪಿತ ಘನವಾಗಿದೆ, ಅವನೇ ಅರಸನು. ಸತ್ತೆಯ ಸತ್ ಸ್ವರೂಪನು, ಚಿಂತನಕ್ಕೆ ಅಚಿಂತ್ಯನಾಗಿಹನು ಅವನೆ ಅರಸನು. ಈ ಅರಸನಿಲ್ಲದ ಸ್ಥಾನವಾವುದು ? ಗಗನವಿಲ್ಲದ ಸ್ಥಾನ ಸಿಗುವುದೆ ? ಚಿದಾಕಾಶವಿಲ್ಲದ ಸ್ಥಾನ ಸಿಕ್ಕುವುದೆ ? ಜ್ಞಾನರೂಪ ಲಿಂಗವಿಲ್ಲದ ಸ್ಥಾನ ಸಿಕ್ಕುವುದೆ ? ಪಿಂಡಾಂಡ ಬ್ರಹ್ಮಾಂಡದೋಳ ಭರಿತವಾವುದು ? ವೇದ ವೇದಾಂತದೋಳ ಭರಿತವು, ಶಾಸ್ತ್ರ ಆಗಮದೋಳ್ ಭರಿತವು, ಪುರಾಣ ಪುಣ್ಯಕಥೆಯೋಳ್ ಭರಿತವು, ಸಕಲದರೋಳ್ ಅವ್ಯಕ್ತವಾಗಿಹ ಘನ, ಸುಜ್ಞಾನ ದೃಷ್ಟಿಗೆ ಅದುವೆ ಆಗಿಹ ಘನ, ಇದನ್ನು ಕರ, ವಾಣಿ, ಮನದಿಂದ ಮುಟ್ಟಲಾಗದು.

ಮುಟ್ಟಿದಾತ ಮುಂದೆ ಹೋದ : ಆರು ಸುಜ್ಞಾನಿಗಳಾಗಿ ಲಿಂಗವರಿಯ ಹೋಗಿಹರು ಅವರು ಲಿಂಗವನ್ನು ಕುರುಹಾಗಿ ಕಾಣಲಿಲ್ಲ, ಕಲ್ಪಿತಕ್ಕೊಳಪಡಿಸಿ ಕಾಣಲಿಲ್ಲ, ಭ್ರಮಾತ್ಮರಾಗಿ

ಭಾವಿಸಲಿಲ್ಲ, ಭಾವಕ್ಕಗವ್ಯನಾಗಿಹ ಘನವೇ ತನ್ನಿರುವಾಗಿ ತಾನೇ ತಾನಾಗಿ ಅಚಿಂತ್ಯಾತ್ಮನಾದವನೆ ಮುಟ್ಟದಾತ, ಈ ಮಹಾಂತ ಮುಂದೆ ಹೋದ, ಕಲ್ಪಿತರಿಗಿಂತ ಮುಂದೆ ಹೋದ, ಪೂಜಾಲಿಂಗವ ಪೂಜಿಸುವ ಪೂಜಕರಿಗಿಂತ ಮುಂದೆ ಹೋದ, ಭಾವಿಕರಿಗಿಂತ ಮುಂದೆ ಹೋದ, ಧ್ಯಾನಸ್ತರಿಗಿಂತ ಮುಂದೆ ಹೋದ, ಲಿಂಗ ಅನುವರಿತು ಲಿಂಗವಾದುದೆ ಮುಂದೆ ಹೋದನೆಂದು ಹೇಳಿದೆ.

*ಮುನ್ನ ಮುಟ್ಟಿದವರೆಲ್ಲ ಉಪಜೀವಿಗಳಾದರು* : ಇವರು ಸ್ವಯಂಜ್ಯೋತಿ ಲಿಂಗವ ಕುರುಹೆಂದು ತಿಳಿದವರು ನಿರೂಪ ಲಿಂಗವ ಕುರುಹಾಗಿ ಭಾವಿಸಿದವರು, ಪೂರ್ವಿಕರಾದರು, ಇವರು ಲಿಂಗವ ಮುಟ್ಟಿದವರು. ಇವರ ಪೂಜೆ ಫಲಪದದಿಂದುಕ್ತವಾದುದರಿಂದ ಪಲಾಪೇಕ್ಷೆವುಳ್ಳವರಾಗಿ ಉಪಜೀವಿಗಳಾದರು.

*ಇನ್ನು ಮುಟ್ಟಿದವರಿಗೆ ಗತಿ ಉಂಟೆ ಗುಹೇಶ್ವರಾ* : ಚಿಜ್ಯೋತಿ ಲಿಂಗವನು ಪೂಜಾಲಿಂಗವೆಂದು ನೆನಹಿಂಗೊಳಪಡಿಸಿ ನೆನದವರು, ಚಿಂತಿಸಿದವರು ಧ್ಯಾನಸ್ಥರು. ಇವರಿಗೆ ಲಿಂಗಜ್ಞಾನವಾಗದು, ಅರಿವು ಮೂಡದು, ಪುರುಷಾರ್ಥವು ಪ್ರಾಪ್ತವಾಗದು, ಅವರು ಭವದ ಭಾರಿಗಳು, ಇವರಿಗಾವ ಗತಿಯೆಂದು ಮೋಕ್ಷವ ಹೇಳುವುದು ಸಟೆಯಿಂದುಕ್ತವಾದ ಕಾರ್ಯ. ಅದಾವ ಗತಿಯ ಕೊಡಬೇಕು, ಪುರುಷಾರ್ಥಹೀನವು ಅದು ಹೇಗೆ ಪುರುಷಾರ್ಥವಾಗುವುದು. ಇವರು ತಮ್ಮ ತಮ್ಮ ಮನಬಂದ ಪರಿಯಲ್ಲಿ ಗತಿಯನ್ನು ಕಾಣುವರು, ಒಬ್ಬನಿಗೆ ಕೈಲಾಸವೆ ಗತಿಯಾಗಿದೆ, ಇನ್ನೊಬ್ಬನಿಗೆ ವೈಕುಂಠವೇ ಗತಿಯಾಗಿದೆ. ಇನ್ನು ಹಲವರಿಗೆ ಸ್ವರ್ಗವೇ ಗತಿಯಾಗಿದೆ. ಇದು ಭಾವ ಭ್ರಮಿತವು. ಇದು ಪ್ರಭಾವಿನ ದೃಷ್ಟಿಗೆ ಸರಿಹೋಗದು, ಏಕೆಂದರೆ ಈ ಪೂಜಾಲಿಂಗದ ಲಿಂಗಾರ್ಚಕರು ಲೋಕದ ನಚ್ಚು ಮೆಚ್ಚಿಗೆ ಒಪ್ಪಿಕೊಂಡವರು. ಇವರ ಹೃದಯ ಲೋಕದ ನಂಬುಗೆಯ ಹೃದಯ, ಲೋಕದ ಸಮ್ಮತಿಯೇ ಕೈವಲ್ಯ, ಅದುವೆ ಗತಿಮತಿಯಾದುದರಿಂದ ಸುಜ್ಞಾನಿಗಳ ದೃಷ್ಟಿಗೆ ಒಪ್ಪಿಗೆಯಾಗದು, ಈ ಪೂಜಾಲಿಂಗಾರ್ಚಕರ ನಿಲುವು ಬೇರೆ, ಲಿಂಗವರಿತವರ ಶರಣರ ಪರಿ ಬೇರೆ.

**78**

**ಲೋಕದ ನಚ್ಚು ಮಚ್ಚು ಬಿಟ್ಟು ನಿಶ್ಚಿಂತವಾಯಿತ್ತು.**
**ಏನು ಹತ್ತಿತ್ತೆಂದರಿಯೆನಯ್ಯಾ,**
**ಏನು ಹೊದ್ದಿತ್ತೆಂದರಿಯೆನಯ್ಯಾ.**
**ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ**
**ನಾನೇನೆಂದರಿಯೆನಯ್ಯಾ.** || 405 ||

**ತಾತ್ಪರ್ಯ :** *ಲೋಕದ ನಚ್ಚು ಮಚ್ಚು ಬಿಟ್ಟು ನಿಶ್ಚಿಂತವಾಯಿತ್ತು* : ಈ ನಿಶ್ಚಿಂತತೆಯು ಅದಾರಿಗೆ ? ಅಚಿಂತಪದ ಕರಗತವಾದವರಿಗೆ, ಘನಕ್ಕೆ ಘನವಾದವರಿಗೆ, ಆವಲ್ಲಿ ಕಲ್ಪಿತ ನಷ್ಟವಾಗಿದೆ, ಅಲ್ಲಿ ಅಚಿಂತ್ಯತ್ವ ಬೆಳಗುಳ್ಳದ್ದಾಗಿ ಬೆಳಗುವುದು. ಶರಣರು ಅಚಿಂತ್ಯಾತ್ಮರು,

ಅಜಾತರು, ಅಯೋನಿಜರು, ಅವರಿಗೇಕೆ ಈ ಲೋಕದ ಹುಚ್ಚು, ಲೋಕದ ನಂಬಿಗೆ ಲೋಕದ ಪ್ರತಿಷ್ಠೆ, ಲೋಕಕ್ಕೆ ಒಪ್ಪಿಕೊಂಡ ಜನ ಇವರು ತೋರುವ ಜನಸಂದಣೀಯ ಪಂಚಭೌತಿಕ ಕಾರ್ಯವಾದ ಪಿಂಡಾಂಡ, ಬ್ರಹ್ಮಾಂಡ, ವ್ಯಷ್ಠಿಸಮಷ್ಠಿ, ಶರೀರಗಳ ಕಾರ್ಯಗಳ ಮೆಚ್ಚಿದವರು. ಇದು ಮೋಸದ ಲೋಕ, ಇಲ್ಲಿರುವ ಪಂಚ ವಿಷಯಂಗಳು ಜೀವನಿಗೆ ಮರಳುಗೊಳಿಸುವ ಪುಡಿ. ಈ ಮರುಳಿನ ಪುಡಿಯ ಸೇವನೆಯಿಂದ ಎಚ್ಚರದಪ್ಪಿ ಲೋಕದ ನಚ್ಚು ಮಚ್ಚು, ಇವು ಭಗವಂತನ ಕೃಪೆ, ಆಶೀರ್ವಾದವೆಂದು ತಿಳಿದಿಹನು.

ಆಧುನಿಕ ಸಮಾಜದಲ್ಲಿ ಲೋಕದ ವಿಶ್ವಾಸ, ಲೋಕದ ನಂಬಿಕೆ ಪ್ರತಿಷ್ಠೆ ಮಿತಿಮೀರಿದೆ, ಇವರೆ ನೀತಿವಂತರು, ನ್ಯಾಯವಂತರು, ಪ್ರತಿಭಾವಂತರು, ಪ್ರತಿಷ್ಠಿತ ವ್ಯಕ್ತಿಗಳು, ಇವರಿಗೆ ಲೋಕದ ನಂಬಿಗೆ ಬಹುಮುಖ್ಯವಾಗಿದೆ. ಏಕೆಂದರೆ ಇವರನ್ನು ಮರುವುಗೊಳಿಸಿ ಇವರಿಂದ ಮತದಾನ ಪಡೆದು, ಅಧಿಕಾರ ರೂಢರಾಗಿ, ಅಂಗ ಭೋಗೋಪಭೋಗಿಗಳಾಗಿ, ವಿಷಯಾನಂದದಲ್ಲಿಯೇ ಲೀನವಾಗಿರುವಡೆ ಮಾನವ ಜನ್ಮದ ಸಾರ್ಥಕವಾಗಿದೆ. ಇದು ಕಾರಣ ಲೋಕದ ಮೆಚ್ಚುಗೆ, ನಂಬಿಗೆ ಅತಿಯಾಗಿದೆ. ಇದರಿಂದ ತಾನಾರು, ತಾನು ಬಂದುದು ಏತಕ್ಕಾಗಿ, ಇಲ್ಲಿಯ ಗಳಿಕೆ ಯಾವುದೆಂಬುದನ್ನರಿಯದೆ, ತಮ್ಮ ನಿಜಸುಖದಿಂದ ವಂಚಿತರಾಗಿ, ಪುರುಷಾರ್ಥ ಜನ್ಮ ಹೋಗಿ, ಪಶು ಜನ್ಮವಾಗಿದೆ.

ಇತ್ತ ಜಿತೇಂದ್ರಿಯರು ತಪಸ್ವಿಗಳು, ತಮ್ಮ ಕ್ರಿಯಾಚಾರವೆ ಅತೀ ಶ್ರೇಷ್ಠವೆಂದು ಜಪ, ತಪ, ಈಶ್ವರಾರ್ಚನೆಯಿಂದ ಅನುಷ್ಠಾನ ಮಾಡುವೆವೆಂದು ಲೋಕದ ನಚ್ಚು, ಮಚ್ಚು ಅವರಿಗೆ ದೇವನ ಒಲುಮೆಯಾಗಿಹವು. ಇದಲ್ಲದೆ ಹಠಯೋಗಿಗಳು ಲೋಕಂಗಳು ತಮ್ಮಲ್ಲಿ ಕಾಣುವವು ಎಂದು, ನಾಬಿಸ್ತಾನ ಭೂಲೋಕವು, ಕುಕ್ಷಿಯು ಭುವರ್ಲೋಕವು, ಹೃದಯವು ಸ್ವರ್ಗಲೋಕವು,ಎದೆಯು ಮಹರ್ಲೋಕವು, ಕಂಠವು ಜನರ್ಲೋಕವು, ಹಣೆಯು ತಪೋ ಲೋಕವು, ಶಿರ, ತಲೆ ಸತ್ಯಲೋಕ, ಬ್ರಹ್ಮಲೋಕವಾಗಿದೆ ಹಠಯೋಗಿಗಳಿಗೆ.

ತಮ್ಮ ಪಿಂಡದಲ್ಲಿ ತೋರುವ ನಚ್ಚು ಮಚ್ಚುವುಳ್ಳವರಾಗಿಹರು. ಯೋಗಿಗಳಿಗೆ ಇವುಗಳ ನಂಬುಗೆ ವಿಶ್ವಾಸದಿಂದ ತಮ್ಮ ಯೋಗಭ್ಯಾಸದಲ್ಲಿ ಕಾಣುವ ಕುಂಭಕ ಯೋಗವೆ ಇವರಿಗೆ ಮರುಳಗೊಳಿಸಿ, ಯೋಗ ಮಾಡುವವನಾರು, ಜಿತೇಂದ್ರಿಯಾದವ ನಾನಾರು, ಈಶ್ವರಾರ್ಚನೆಯ ಮಾಡುವವ ನಾನಾರು ? ಎಂಬ ಪ್ರಶ್ನೆಯ ಉತ್ತರಕಡೆ ನೋಡಗೊಡದಂತೆ ಇವರ ಮಾಯಿಕ ಇವರನ್ನು ಹಾಳು ಮಾಡಿದೆ.

ಲೋಕವೆಂಬುದು ಮಾಯಿಕ, ತೋರಿ ಇಲ್ಲವಾಗುವ ಮಾಯಿಕ. ಇದು ಶಬ್ಧ ಜಾಲದಿಂದ ಮರಳುಗೊಳಿಸುತ್ತಿಹುದು. ಪ್ರಪಂಚ ಸತ್ಯವೆಂಬ ಶಬ್ದ ಜಾಲ, ಪ್ರವೃತ್ತಿ ಪ್ರೇಮಿಗಳಿಗೆ ಬಹು ಒಪ್ಪಿಗೆಯಾಗಿದೆ. ಪ್ರಪಂಚ ಮಿಥ್ಯೆವೆಂಬ ಶಬ್ದಜಾಲ ವೈರಾಗ್ಯವಂತರಿಗೆ ಬಹು ಒಪ್ಪಿಗೆಯ ವಿಷಯ, ಪರಮಾರ್ಥ ಸತ್ಯವೆಂಬ ಶಬ್ದ ಜಾಲ ವೇದವೇಂದಾಂತ ಶಾಸ್ತ್ರ ಆಗಮ ಪುರಾಣಂಗಳು ದೇವನ ದರ್ಶನವಾದಂತಾಗಿವೆ. ಪರಮಾರ್ಥ ಮಿಥ್ಯೆಯೆನ್ನುವ ಶಬ್ದ ಜಾಲ ನೇತಿನೇತಿ ಎಂದು ನೇತಾತ್ಮಕ ಅಭ್ಯಾಸ ಮಾಡುವವರಿಗೆ ಪರಮ ಪುರುಷಾ ರ್ಥವಾಗಿದೆ. ಈ ಶಬ್ದಜಾಲವ ಮೆಚ್ಚಿ ತಮ್ಮ ಅವರ್ಣೀಯವಾಗಿಹ ನಿಶಬ್ದ ಘನವ ಅರಿ ಯದಾಗಿಹರು. ಇದರಿಂದ ಸ್ವಯ ಸುಖದಿಂದ ವಂಚಿತರಾಗಿ, ಬಹಿರ್ದುಷ್ಟಿಯುಳ್ಳವರಾಗಿ ಲೋಕದ ನಚ್ಚುಮೆಚ್ಚಿಗೆಗೆ ಒಪ್ಪಿಕೊಂಡು ಮಾನವ ಹೃದಯ ಅರು ಹೃದಯವಿದ್ದು, ಮರ

ವುಳ್ಳದ್ದಾಗಿದೆ. ಇಷ್ಟಾ-ನಿಷ್ಟಾ, ಲಾಭ-ಹಾನಿ, ಮಾನಾಪಮಾನ, ಶೋಕ-ಮೋಹ, ಹಸಿವು-ತೃಷೆ, ಸುಖ-ದುಃಖ, ಈ ವಿಷಮಕ್ಕೀಡಾಗಿ ಲೋಕ ಕೊಡುವ ನಚ್ಚು ಮಚ್ಚುಳ್ಳವರಾಗಿ ತಮ್ಮ ನಿಶ್ಚಿಂತತೆಯ ಹಾಳು ಮಾಡಿಕೊಂಡಿಹರು.

ಪ್ರಭು, ಲೋಕ ವಿಶ್ವಾಸದಿಂದ ಒಪ್ಪಿಗೆಯಿಂದ ದೂರಾದವನು. ಘನವಂತನ ದಿವ್ಯ ದೃಷ್ಟಿಗೆ ಅಚಿಂತ್ಯ ಪದವೊಂದೆ ಒಪ್ಪಿಗೆಯಾದುದು, ಪರಮಾರ್ಥದ ಸತ್ಯ ನಿತ್ಯಗಳ ಒಪ್ಪದ ಮಹಾಂತ, ಪ್ರಪಂಚದ ಸತ್ಯ, ಮಿಥ್ಯ, ತ್ಯಾಗ, ಭೋಗದ ನುಡಿಗೆ ಅವನೆಂತು ಒಪ್ಪುವನು. ಮಾಯಾಕೋಲಾಹಲನಿಗೆ ಮಾಯದ ಆಟ ನಡೆಯುವುದೆಂತು, ಸೂರ್ಯನು ಕತ್ತಲೆ, ಕತ್ತಲೆಯಲ್ಲಿರುವ ಜಗವ ಕಾಣುವನೇ, ಚಿತ್ ಸೂರ್ಯನಾದ ಪ್ರಭು, ಪ್ರವೃತ್ತಿ, ನಿವೃತ್ತಿಯಿಂದಕೂಡಿದ ಶಬ್ದರೂಪಿ ಲೋಕವ ಕಾಣುವನೆ ? ಕಾಣದಿದ್ದಲ್ಲಿ ಲೋಕದ ನಚ್ಚು ಮಚ್ಚು ಅವನೆಂತು ಒಪ್ಪುವನು ? ಅಚಿಂತ್ಯ ಪದವ ಒಪ್ಪಿಕೊಂಡು ಅದುವೆ ಆಗಿಹ ಘನ ಮಹಿಮ ಲೋಕವ ಮೆಚ್ಚ ಶರಣ ! ತನ್ನ ನಚ್ಚಿದ ಮೆಚ್ಚಿದ ಮಹಾಮಹಿಮ ತನಗಿಂತನ್ಯವಾದುದನ್ನು ನಚ್ಚಲಿಲ್ಲ, ಮೆಚ್ಚಲಿಲ್ಲ ಇದು ಕಾರಣ ಅಚಿಂತ್ಯ ಪದವ ನಿಶ್ಚಿಂತರು.

ಏನು ಹೊದ್ದಿತ್ತೆಂದರಿಯೆನಯ್ಯ : ತನಗಿಂತ ಅನ್ಯವಾದುದು ಹತ್ತಿದರೆ, ಅಂಟಿದರೆ ಗೊತ್ತಾಗುವುದು. ತನಗೆ ತಾನೆ ಹತ್ತಿದುದು ಸೋಂಕಿದರೆ ಗೊತ್ತಾಗುವುದು. ಸೋಂಕದುದು ಸೋಂಕಿದಾಗ ಅದನೆಂತು ಅರಿವುದು, ಅಲ್ಲಿ ಬುದ್ಧಿಯೆ ಭಸ್ಮವಾಗಿರುವಲ್ಲಿ ಅದನಾರು ಅರಿಯುವುದು, ಘಟಾಕಾಶನ, ಮಠಾಕಾಶಕ್ಕೆ ಅಂಟಿದುದು, ಮಠಾಕಾಶ ಮಹಾಕಾಶಕ್ಕೆ ಅಂಟಿದುದು, ಅದು ಆಕಾಶವಾದುದು ಅರಿದುದು. ಅರಿದು ನೋಡಿದಡೆ ಶಬ್ದಮುಗ್ಧವು, ಹಾಗೆ ಚಿದಾಕಾಶಕ್ಕೆ ಚಿತ್ ಅಂಟಿದುದು, ಹತ್ತಿದುದು, ಏನು ಹತ್ತಿದೆಂದರಿಯೆನಯ್ಯ ಏನು ಹೊದ್ದಿತ್ತೆಂದರಿಯೆನಯ್ಯ, ಮಠಾಕಾಶವು ಘಟಾಕಾಶಕ್ಕೆ ಹೇಗೆ ಹೊದ್ದಿದೆ ಎಂಬುದು ಹೇಗೆ ತಿಳಿಯುವುದು, ಮಹಾಕಾಶವು, ಮಠಾಕಾಶವ ಹೇಗೆ ಹೊದ್ದಿದೆ ಎಂಬುದು ಹೇಗೆ ತಿಳಿಯುವುದು, ಹಾಗೆ ಚೈತನ್ಯವು ಚೇತನಕ್ಕೆ ಹೇಗೆ ಹೊದ್ದಿದೆ ಎಂಬುವುದು ಹೇಗೆ ತಿಳಿಯುವುದು, ಚೈತನ್ಯವೆಂಬುದಕ್ಕೆ ನುಡಿಗೆಡೆಗೊಡದ ಘನವು ಹೇಗೆ ಹೊದ್ದಿದೆ ಎಂಬುದು ಹೇಗೆ ತಿಳಿಯುವುದು.

ಹೇಳಬಾರದ ಘನ, ತೋರಬಾರದ ಘನ ನನ್ನಿಂದ ನನಗೆ ಪ್ರಾಪ್ತವಾದುದು, ಏನೆಂದು ಅರಿಯುವುದು, ಏನೆಂದು ಹೇಳುವುದು, ಏನೆಂದು ತೋರುವುದು. ಅರಿಯುವ, ಹೇಳುವ, ತೋರುವ, ತೋರಿಸುವ ವ್ಯವಹಾರ ನನ್ನೊಳ ಇಂಬಿಲ್ಲವಾಗಿದೆ. ನನಗೆ ನಾನೆ ಹೊತ್ತುದು, ನನಗೆ ನಾನೆ ಹತ್ತಿದು, ಅದು ಹೇಗೆ ಹೇಳುವುದು, ಅರು ಹೃದಯವಾಗಿಹ ಅರಿಯದರುವುಳ್ಳ ಇರುವು ನನ್ನೊಳ್ ಪ್ರಜ್ವಲಿಸಿದುದು ಶಬ್ದಕ್ಕೆ ತೆರಹಿಲ್ಲ.

*ಗುಹೇಶ್ವರನೆಂಬ ಗ್ರಹ ಒಳಕೊಂಡಿತ್ತಾಗಿ ನಾನೇನೆಂದರಿಯೆನಯ್ಯ* : ಗುಹೇಶ್ವರನೆಂಬ ಸೂರ್ಯ ತನ್ನೊಳು ಪ್ರಜ್ವಲಿಸುವಲ್ಲಿ ನಾನೇಂದರಿಯೆನಯ್ಯ ಗುಹೇಶ್ವರನೆಂಬ ಸೂರ್ಯ ಅರಿದರುಹಿಸಿಕೊಂಬುದಕ್ಕೆ ಮೀರಿದ ಘನ, ನುಡಿಗೆಡೆಗೊಡದ ಘನವಾಗಿರುವಲ್ಲಿ ಅರಿಯುವುದಿಲ್ಲ, ಅರಿಸಿಕೊಳ್ಳುವುದಿಲ್ಲವಾದ್ದರಿಂದ ನಾನೇಂದರಿಯೆನಯ್ಯ ಎಂದು ಹೇಳಿಹರು. ಗುಹೇಶ್ವರನೆಂಬ ಸೂರ್ಯನ ಕಾಣ ಹೋದ ಕಣ್ಣು ಸೂರ್ಯನೆನಲಿಲ್ಲ, ಕಣ್ಣು ಎನಲಿಲ್ಲ, ಗುಹೇಶ್ವರನೆಂಬ ಸೂರ್ಯ ಮೌನ, ಅದನ್ನು ಕಂಡ ಕಣ್ಣು ಮೌನ, ಈ ಮೌನ ಘನ

ಮೌನ, ನಿರಂತರ ಮೌನ ಈ ಮೌನವಾಗಿಹ ಶರಣರು, ಗುಹೇಶ್ವರನೆಂಬ ಗ್ರಹ, ಒಳಕೊಂಡಿತ್ತಾಗಿ ನಾನೇನೆಂದರಿಯೆನಯ್ಯ ಎಂದು ಹೇಳಿಹರು. ಲಿಂಗವರಿತ ಶರಣರಿಗೂ ಲಿಂಗವರಿಯದ ಲಿಂಗಾರ್ಚಕರಿಗೂ, ಬಹು ಅಂತರವಿದೆ. ಲಿಂಗಾರ್ಚಕರ ಪೂಜೆ ಕಂಡು ಪ್ರಭುದೇವರಿಗೆ ನಾಚಿಕೆಯಾಗಿಹುದು ಎಂದು ಹೇಳಿಹನು.

79

**ಹೊರಗನೆ ಕೊಯ್ದು ಹೊರಗನೆ ಪೂಜಿಸಿ**
**ಹೊರಗಾಗಿ ಹೋಯಿತ್ತು ತ್ರೈಜಗವೆಲ್ಲ.**
**ಆನದನರಿಯದಂತೆ ಲಿಂಗವ ಪೂಜಿಸ ಹೋದಡೆ,**
**ಕೈ ಲಿಂಗದಲ್ಲಿ ಸಿಲುಕಿತ್ತಲ್ಲಾ !**
**ಮನ ದೃಢದಿಂದ ನಿಮ್ಮ ನೆನೆದಿಹೆನೆಂದಡೆ**
**ತನು ಸಂದಣಿಸಿತ್ತು ಗುಹೇಶ್ವರಾ.** || 632 ||

**ತಾತ್ಪರ್ಯ :** *ಹೊರಗನೆ ಕೊಯ್ದು ಹೊರಗನೆ ಪೂಜಿಸಿ* : ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು ನಾಚಿದೆನಯ್ಯ. ಇವರಾರು ? ಅರುವ ಅರಿಯ ಹೇಳಿದುದು ಅರಿಯದೆ ಕುರುಹೆಂದು ಪೂಜಿಸುವ ಭಾವಿಕರು, ಭಕ್ತರು, ಲಿಂಗವಂತರು. ಇವರಿಗೆ ನಿರೂಪ ಲಿಂಗ, ರೂಪವಾಗಿ ಕಂಡು, ಹೊರಗೆ ಶುದ್ಧೋದಕ, ಭಸ್ಮ, ಪತ್ರಿ, ಪುಷ್ಪದಿಂದ ಗಂಧ ದೀಪಗಳಿಂದ ಹೊರಗನೆ ಕೊಟ್ಟು, ಹೊರಗನೆ ಪೂಜಿಸಿದವರು. ಇವರ ಜಪ-ತಪ ಹೊರಗೆ, ಲಿಂಗನೋಟ ಹೊರಗೆ, ಲಿಂಗ ಹೊರಗೆ ಅದನ್ನು ನೋಡುವ ನೋಟ ಹೊರಗೆ ಪೂಜಾ ಸಾಮಗ್ರಿಗಳು ಹೊರಗೆ, ಭಾವ ಹೊರಗೆ, ಇವರು ಬಾಹ್ಯೋಪಚಾರದವರು. ಡಾಂಭಿಕರು, ಲಿಂಗದ ಗುಟ್ಟು ತಿಳಿಯದವರು, ತಿಳಿದವರಂತೆ ಅಭಿನಯಿಸುವ ಮಹಾನು ಭವಿಗಳು. ಇವರ ಜ್ಞಾನದಿಂದ ಲಿಂಗ ಪೂಜಿಸುವ ಲಿಂಗಾರ್ಚಕರ ಹೃದಯ ಭ್ರಾಂತಿಯಲ್ಲಿಯೆ ವಾಸ. ಇವರು ಲಿಂಗವಂತರ ಹೃದಯ ಹಾಳು ಮಾಡಿದ ದ್ರೋಹಿಗಳು, ನಿಸ್ಸೀಮತ್ವವನ್ನೇ ಕೆಡಿಸಿ ಸೀಮಿತ ಮಾಡಿದ ಸಂದೇಹಿಗಳು. ಅರುಹೃದಯವನ್ನೆ ಮರು ಹೃದಯ ಮಾಡಿದ ಅಂಧರು. ತಾವು ಅಂಧರಾಗಿಹರಲ್ಲದೆ ಲಿಂಗವಂತರನ್ನು ಅಂಧರು ಮಾಡಿದ ಇವರಿಗೇ ನನ್ನವುದು, ಇವರಾವ ಕಥನ ಮಾಡಿದರೂ ಅದನ್ನು ಲಕ್ಷ್ಯಕ್ಕೆ ತಾರದೆ, ತಮ್ಮ ಮೂಢತ್ವವನ್ನು ಮುಂದುವರಿಸುವ ಮೌಢ್ಯರು. ಇವರೆ ಸಕಲರಿಗೆ ಲಿಂಗ ಧರಿಸುವ ಗುರುವರ್ಗವು. ಇವರ ಕೈಯಲ್ಲಿ ಭಾವಿಕರು ಸಿಕ್ಕು ಭೇದ ಜ್ಞಾನ, ಭೇದ ಭಾವದ ತವರೂರು ಆಗಿದೆ. ಇದನು ಕಂಡು ನಾಚಿದೆನಯ್ಯ ಎಂದು ಹೇಳಿಹರು.

ಹೊರಗನೆ ಕೊಯ್ದು ಹೊರಗನೆ ಪೂಜಿಸು ಮೌಢ್ಯತನ ಪ್ರಭುವಿದ್ದ ಸಮಯದಲ್ಲಿತ್ತು, ಈಗ ಇಲ್ಲವೆನ್ನುವ ಹಾಗಿಲ್ಲ, ಅದಕ್ಕೂ ಅತಿಯಾಗಿದೆ. ಪ್ರಭು ಮಾಯಾ ಕೋಲಾಹಲ ಮಾಡಿದ ನಿರಂಜನ ನಿರ್ಮಾಯ, ನಿರಂತರವಾಗಿಹ ಸ್ವಮಹಿಮನಾಗಿ ತನ್ನ ಪ್ರಸಾದ ವಾಣಿಯಿಂದ ಶರಣರ ಸಹೃದಯಗಳನ್ನು ಅಖಂಡಿತ ನಿಲುವುಳ್ಳವರನ್ನಾಗಿ ಮಾಡಿದುದು, ಅವರ ವಚನ ಸಾಹಿತ್ಯದಿಂದ ವಿದಿತವಾಗುವುದು.

ಹನ್ನೆರಡನೆ ಶತಮಾನದಲ್ಲಿ ಲಿಂಗತತ್ವ ಅಷ್ಟು ಪ್ರಬಲವಾಗಿ ಸಕಲರ ಹೃದಯದೊಳ ಪ್ರಜ್ವಲಿಸಿದರೂ ಹೊರಗನೆ ಕೊಯ್ದು, ಹೊರಗನೆ ಪೂಜಿಸುವ ಈ ಮೂಢಭಾವ ಇನ್ನು ಹೋಗಿಲ್ಲವಲ್ಲ, ಇನ್ನು ಹೆಚ್ಚಾಗಿದೆ ಎಂದರೂ ಅಡ್ಡಿ ಇಲ್ಲ. ಏಕೆಂದರೆ ದಿನೆ ದಿನೆ ಎಷ್ಟೋ ಗುರುವರ್ಗವಿದೆ. ವಿರಕ್ತವರ್ಗವಿದೆ. ಇವರು ಲಿಂಗವ ತಿಳಿಯ ಹೋಗಲೊಲ್ಲರು, ಲಿಂಗವೆಂಬುದು ಚಿಜ್ಯೋತಿ, ಸ್ವಯಂಜ್ಯೋತಿ. ಲಿಂಗವಾಗದೆ ಕುರುಹಾಗಿ ಇವರ ಭಾವದಲ್ಲಿ ಹಾಗೆ ಉಳಿದಿದೆ. ಅದು ಪೂಜಿಸಿಕೊಳ್ಳುವ ಪೂಜಾಲಿಂಗವೆಂಬುದು ದೃಢವಾಗಿ ಕರಿಗೊಂಡಿರುವುದರಿಂದ ತನ್ನ ಭಕ್ತರಿಗೂ, ಭಾವಿಕರಿಗೂ, ಹೊರಗನೆ ಕೊಯ್ದು, ಹೊರಗನೆ ಪೂಜಿಸುವ ಪಾಠವೆ ಕೊಡುವರು. ಈ ಸಾಂಪ್ರದಾಯ ವೃದ್ಧಿಯಾಗುವುದರಲ್ಲಿಯೆ ಇದೆ. ಇವರು ಆಚಾರವ ಕಂಡರಲ್ಲದೆ ವಿಚಾರವ ಕಾಣರು, ಇದು ಕಾರಣ ಒಳಗೆ ಅನಿಮಿಷ ಲಿಂಗ ಕಾಣುವ ಭಾಗ್ಯವಿಲ್ಲವಾದ್ದರಿಂದ ಅಜ್ಞಾನ ದೂರವಾಗಲಿಲ್ಲ, ಲಿಂಗದರಿವು ಸಕಲರಿಗೆ ಬೆಳಗಲಿಲ್ಲ, ಅಂಗಭಾವಿಗಳಾಗಿಹರಲ್ಲದೆ ಭಾವಕ್ಕಗಮ್ಯವಾಗಿಹ ಘನದರಿವು ಆದಾರಿಗೆ ? ಲಿಂಗವೆಂಬುದ ಸಕಲರೊಳಗಿರುವ ಅನಿಮಿಷಲಿಂಗ ಈ ಲಿಂಗವ ಕಂಡವರಾರು, ಕಾಣಲು ಅನುವು ತಿಳಿಸಿಕೊಟ್ಟ ಗುರು ಘನರಾರು ? ಅರುವ ಅರಿಯ ಹೋದಾಗ ತನ್ನೊಳಗೆ ಅನಿಮಿಷ ಲಿಂಗವ ಕಾಣುವ ಸಂಧಿಯು ದೊರೆಯುವುದು, ಗುರು ಘನವನು ತಿಳಿಸಿ ಕೊಡುವವನಾಗಿದ್ದರೂ ತನ್ನೊಳಗಿನ ಅನಿಮಿಷಲಿಂಗ ಕಾಣಬೇಕೆಂಬ ಬಯಕೆ ಇದ್ದಲ್ಲಿ ಈ ಮೂಢ ಸಂಸ್ಕಾರದಿಂದುಕ್ತವಾಗಿಹ ಬಹಿರ್‌ಸಂಸ್ಕಾರ ತಾತ್ಸಾರವಾಗುವುದು, ಆಗ ಶ್ರೀಗುರು ಕೊಟ್ಟ ಸುಜ್ಞಾನದಿಂದ ನೋಡುವುಡೆ ತನುವಿನ ತನುವಾಗಿರುವ ಅನಿಮಿಷ ಲಿಂಗ, ಮನದ ಮನವಾಗಿಹ ಅನಿಮಿಷ ಲಿಂಗ ಕಣ್ಣಿನ ಕಣ್ಣಾಗಿಹ ಘನ ಲಿಂಗ. ಅದುವೆ ಅನಿಮಿಷ ಲಿಂಗವು. ಅನಿಮಿಷಲಿಂಗವೆಂದರೆ ರೆಪ್ಪೆ ಹೊಡೆಯದ ಲಿಂಗ, ಲಿಂಗ ನೋಡ ಹೋಗಿ ಲಿಂಗವೆ ಆಗಿಹ ಅನಿಮಿಷ ದೃಷ್ಟಿ, ಇದು ನಿಶಬ್ದವೇದಿಗಳ ದೃಷ್ಟಿ ಅಚಿಂತ್ಯಾತ್ಮ ದೃಷ್ಟಿಯಿಂದ ಲಿಂಗವ ಕಂಡು ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದಡೆ ನಾಚಿಕೆ ಮಾದು, ನಿಸ್ಸಂದೇಹಿಯಾದೆನು ಗುಹೇಶ್ವರಾ ಲಿಂಗವರಿಯದ ವಿನಃ ಮನವು ಅನಿಮಿಷ ಲಿಂಗಕ್ಕೇರಿಸುವ ಪುಷ್ಪವಾಗದು. ಆರು ಅರಿವು ಅರಿಯಹೋದ ಮನವಾಗಿದೆ ಅದು ಪುಷ್ಪವಾಗಿದೆ. ಇದು ಲಿಂಗವರಿಯ ಹೋಗಿ ಲಿಂಗದಲ್ಲಿ ಲೀಯವಾಗಿಹ ಮನ, ಘನ ಮನ. ಲಿಂಗವು ಹೇಗೆ ಕಲ್ಪಿತವಲ್ಲವೊ ಹಾಗೆ ಅನಿಮಿಷ ಲಿಂಗ ಕಂಡ ಮನ ಕಲ್ಪಿತವಾಗಿಲ್ಲ, ಅನಿಮಿಷ ಲಿಂಗ ನೆನಹಿಂಗೆ ನಿಲುಕದ ಲಿಂಗ, ಭಾವಕ್ಕಗಮ್ಯವಾಗಿಹ ಲಿಂಗ, ಮನವು ನೆನೆಯದ ಮನ, ಶಬ್ದವನ್ನೆ ಉಸುರದ ಮನ ಅನಿಮಿಷ ಲಿಂಗವರಿತ ಮನ, ಇದು ಮನೋಪುಷ್ಪವಾಗಿದೆ. ಮನೋಪುಷ್ಪದಿಂದ ಪೂಜೆಯ ಮಾಡಿದವರು ಬಸವಾದಿ ಪ್ರಮಥರು. ಅರುವ ಅರಿದು ನೋಡಿದ ಮಹದರುವುಳ್ಳವರು, ಮಹಾನುಭಾವಿಗಳು, ಅಕ್ರಿಯರು, ಜ್ಞಾನಾಚಾರಿಗಳು, ಜ್ಞಾನಾನಂದಮಯರು. ಇವರ ಆಚಾರ ಕರ್ಮಿಗಳ ಆಚಾರವಲ್ಲ, ಉಪಾಸಕರ ಆಚಾರವಲ್ಲ, ಒಂದನ್ನು ತೆಗಳಿ, ಮತ್ತೊಂದನ್ನು ಪುರಸ್ಕರಿಸುವ ಮತಿವಂತರ ಆಚಾರವೂ ಅಲ್ಲ, ಇವರದು ಅಚಿಂತ್ಯನ ಕಂಡ ಆಚಾರ, ಅಪ್ರಮಾಣ ಆಚಾರ, ಇವರ ಜ್ಞಾನ ಅನುಪಮವಾದ್ದರಿಂದ ಆಚಾರ, ಭಾವ, ಅನುಭಾವ, ಆನಂದ, ಅಗಮ್ಯವಾಗಿಹುದು. ಗಗನದ ಶುದ್ಧತೆ ಗಗನಬಲ್ಲುದು ಗಗನದ ಇರುವಿಗೆ ಗಗನಬಲ್ಲುದು, ಗಗನಸದೃಶವಾಗಿರುವ ಗಗನಾಚಾರಿಗಳು

ತಮ್ಮ ತಾವರಿತ ಶರಣರು. ಗಗನವೆಂದರೆ ಅಖಂಡವಾಗಿರುವ ಜ್ಞಾನಾಮೃತ, ಜ್ಞಾನಾಮೃತ ಹೇಗಿದೆ ಎಂದಲ್ಲಿ, ಜ್ಞಾನಾಮೃತ ಬಲ್ಲುದು, ಜ್ಞಾನಾಮೃತವನಾರು ಅರಿಯ ಹೋಗಿಹರು, ಅವರು ಅದರಿರುವ ಬಲ್ಲರು, ಜ್ಞಾನಾಮೃತವೆಂಬುದು ನುಡಿಗೆಡೆಗೊಡದ ಘನವಾಗಿರುವಲ್ಲಿ ಅವರ ಆಚಾರವು ಅವರ್ಣಿಯವಾಗಿದೆ.

ಅಮೃತ ಹೇಗಿದೆ, ಅಮೃತದಂತಿದೆ. ಜ್ಞಾನ ಬರಹೋಗುವ ಜ್ಞಾನವಾಗಿದ್ದರೆ ಅದು ಕಥನಕ್ಕೊಳಪಡುತ್ತಿತ್ತು, ಅಕಥನೀಯವಾದುದು, ಜ್ಞಾನಾಮೃತ ಅದಕ್ಕೆ ಭಾಷೆ ಆವುದು ? ಅನಿಮಿಷ ಲಿಂಗ ಕಂಡ ಮನ, ಅನಿಮಿಷ ಲಿಂಗದಂತಿದೆ, ಕನ್ನಡಿಯೊಳಗಿರುವ ತನ್ನ ಮುಖ ಹೇಗಿದೆ, ತನ್ನಂತೆ ಅದೆ. ತನ್ನ ಕಂಡುದು ತನ್ನಂತೆ ಇದೆ. ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನರೂಪ ಕನ್ನಡಿಯಲ್ಲಿ ಮನೋರೂಪ ಪುಷ್ಪ ನೋಡುವುಡೆ ತಾನು ಅಕಲ್ಪಿತ ಘನವೆಂಬುದು ಸಹಜವು.

ಆವಲ್ಲಿ ಮನವು ಘನಮನವಾಗಿಹುದು, ಅದುವೆ ಮನೋಪುಷ್ಪದಿಂದ ಪೂಜೆಯ ಮಾಡಿ ನಾಚಿಕೆ ಮಾದು, ನಿಸ್ಸಂದೇಹಿಯಾಗಿಹುದಾಗಿದೆ. ತಾನೆ ಲಿಂಗವಾಗಿಹ ಮನ, ತಾನೆ ಪುಷ್ಪವಾಗಿಹುದು, ತಾನೆ ತಾನಾಗಿಹ ಮನ, ಇದಕ್ಕಾಗಿ ಪ್ರಭು ಒಳಗೆ ಅನಿಮಿಷ ಲಿಂಗವ ಕಂಡು, ಮನೋಪುಷ್ಪದಿಂದ ಪೂಜೆಯ ಮಾಡಿ ನಾಚಿಕೆ ಮಾದು, ನಿಸ್ಸಂದೇಹಿಯಾದುದು ಎಂದು ಹೇಳಿದುದು. ಇದು ಶರಣರನಿಲವು, ಲಿಂಗ ತಾವಾಗಿಹ ನಿಲುವುಳ್ಳವರಿಗೂ ಲಿಂಗಾರ್ಚಕರಿಗೂ ಬಹು ಅಂತರವು, ಇವರದು ಹಂಗಿಗೆ ಒಳಪಟ್ಟ ಪೂಜೆ, ಅವರದು ಹಂಗು ಹರಿದು ನಾಚಿಕೆ ಮಾದು ನಿಸ್ಸಂದೇಹಿಯಾದ ಸ್ವತಂತ್ರರು.

**80**

**ಮನವೆ ಲಿಂಗವಾದ ಬಳಿಕ ಇನ್ನಾರ ನೆನೆವುದಯ್ಯಾ ?**
**ಭಾವವೆ ಐಕ್ಯವಾದ ಬಳಿಕ ಬಯಸುವುದಿನ್ನಾರನು ?**
**ಭ್ರಮೆಯಳಿದ ನಿಜವು ಸಾಧ್ಯವಾದ ಬಳಿಕ**
**ಅರಿವುದಿನ್ನಾರನು ಗುಹೇಶ್ವರಾ ?** ॥ 421 ॥

**ತಾತ್ಪರ್ಯ** : ಮನವೆ *ಲಿಂಗವಾದ ಬಳಿಕ ಇನ್ನಾರ ನೆನೆವುದಯ್ಯಾ* : ಮನ, ಲಿಂಗವಾದ ಸಂಕೇತ, ನೆನೆಯದ ಮನವಾದುದು, ನೆನೆಯದ ಮನ, ಇದಾರ ಮನ ? ಶರಣರ ಮನ ಲಿಂಗವಾದ ಮನ, ಮನ ಲಿಂಗವಾದ ಪರಿಯ ಹೇಳಿರೆ ? ಮನ ಲಿಂಗವಾದ ಪರಿಯ ನೋಡಿರೆ ? ಲಿಂಗವು ಮೌನ ಅದನು ಅರಿಯ ಹೋದ ಮನ, ಮೌನದ ಮೌನ, ಲಿಂಗ, ಜ್ಯೋತಿಯಾದರೆ ತಾನು ಜ್ಯೋತಿಯ ಜ್ಯೋತಿ, ಲಿಂಗ ಘನವಾದರೆ ಅದನು ಅರಿಯಹೋದ ಮನ ಘನಕ್ಕೆ ಘನವಾಗಿಹ ಸಂಕೇತ.

ಘನಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯ ಬಸವರಸರ ಮನ ಲಿಂಗವರಿಯ ಹೋಗಿ ಲಿಂಗವೆ ಆಗಿಹ ಮನ, ಹಾಗೆ ಬಸವರಸರಂತೆ, ಲಿಂಗ ಅನುಪಮ, ಅಖಂಡ, ಅಚಲಿತವಾದುದರಿಂದ ಘನ ಗಂಭೀರ ಮಹಾಘನವೆಂದು ಸಂಬೋಧಿಸಿಹರು. ಯಾರು ಈ ಅನುಪಮ, ಅಖಂಡವೆಂಬುದು ಅರಿಯ ಹೋಗಿಹರು,

ಈ ಅನುಪಮ ಸಂಜ್ಞೆ ಕರಗಿ ಮುಂದೆ ಕಥನ ಮಾಡಲು ಬಾರದಂತಾಗಿ ಮೌನವಾದುದು ಮನ ಲಿಂಗವಾದ ಸಂಕೇತ ಇಲ್ಲಿ.

ಹೇಳಬಾರದ ಘನ ತೋರಲೆಂದೇನೊ ? ತೋರಬಾರದ ಘನ ಹೇಳಲೆಂದೇನೊ ? ಸರಸಂದಾನದ ಪರಿಯಲ್ಲ ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ ಶೃತಿ ಗಗೋಚರವಾದುದು, ಅನುಸಂದಾನ ಮಾಡುವ ಪರಿ ಹೇಗೆ ? ನಿಷೇಧ ಲಕ್ಷಣಕ್ಕೂ ನಿಲುಕದ ಘನ, ವಿಧೇಯ ಲಕ್ಷಣಕ್ಕೂ ನಿಲುಕದ ಘನ, ಅಂದರೆ ಇವುಗಳನ್ನು ಕಾಣದ ಘನ, ಅಲಕ್ಷ್ಯವಾಗಿಹ ಸ್ವಮಹಿಮವು, ಕಲ್ಪಿತಕ್ಕೆ ಒಳಪಡುವದದೆಂತು ? ಮನವೆ ಸ್ವಮಹಿಮವಾದ ಬಳಿಕ ನೆನೆವುದಿನ್ನಾರನ್ನಯ್ಯ ಅಲ್ಲಿ ಅಂಗನೆಂಬ ನೆನಹು ನಷ್ಟವು, ಲಿಂಗನೆಂಬ ನೆನಹು ನಷ್ಟವು ಆಗಿರುವಲ್ಲಿ ನೆನೆಯುವುದು ಆರನ್ನು ? ಆವಲ್ಲಿ ಭೇದ ಜ್ಞಾನವಿದೆ ಅಲ್ಲಿ ನೀನೆಂಬುದಿದೆ, ನಾನೆಂಬುದಿದೆ, ಸ್ವಾಮಿ ಸೇವಕನೆಂಬುದಿದೆ, ಪೂಜ್ಯ ಪೂಜಕನೆಂಬುದಿದೆ, ಅಲ್ಲಿ ಅರ್ಚನೆ ಉಂಟು, ಅರ್ಪಿತ ಉಂಟು. ನೆನಹು ಉಂಟು, ಆವಲ್ಲಿ ನಾನೀನೆಂಬುದಕ್ಕೂ ತೆರಹಿಲ್ಲದ ಘನವಾಗಿ ಪ್ರಜ್ವಲಿಸುವುದೊ ಅಲ್ಲಿ ಆರನ್ನು ನೆನೆಯುವುದು.

ಭಾವವೆ ಐಕ್ಯವಾದ ಬಳಿಕ ಬಯಸುವದಿನ್ನಾರನ್ನು ? : ಆವುದು ಸಕಲ ಭಾವಂಗಳ ಮೂಲವಾಗಿಹುದು ಅದು ಅಪ್ರಾಪ್ತವಾಗಿರುವಲ್ಲಿ ಅದನ್ನು ಬಯಸುವುದು ಸಹಜವಾಗಿದೆ. ನಿರಂತರ ಪ್ರಾಪ್ತರೂಪವಿದ್ದುದನ್ನು ಬಯಸುವುದಾದರೂ ಹೇಗೆ ? ಭಾವಂಗಳೆಂಬಿವು ಭ್ರಮರೂಪವು ತಾನು ಸಕಲ ಭಾವಂಗಳ ಮೂಲನು, ಮೊದಲಿಗನು, ತಾನು ತೋರದಗಡದ ಘನ, ತನ್ನೊಳ ಭಾವಂಗಳು, ನಾನಾ ಮುಖವಾಗಿ ತೋರುವವು ಮತ್ತು ತನ್ನೋಳ್ ಲೀನವಾಗುವವು, ಈ ಭಾವಂಗಳು ದಶವಿಧವಾಗಿ ಭಾವಿಸುವವು, ಅಜ್ಞಾನಾವಸ್ಥೆಯಲ್ಲಿ ಐದು ವಿಧವಾಗಿ ಜ್ಞಾನಾವಸ್ಥೆಯಲ್ಲಿ ಐದು ವಿಧವಾಗಿ ಭಾವಿಸಿಸುವವು. ತನು, ಇಂದ್ರಿ, ಪ್ರಾಣ, ಮನ, ಬುದ್ಧಿ ಇವುಗಳು ಅಜ್ಞಾನದಲ್ಲಿ ತೋರುವ ಭಾವ ರೂಪು. ಇವು ಬಂಧನರೂಪಾಗಿ ಭಾವಿಸುವವು : ಸಾಕ್ಷಿ, ಸ್ವಯಂಪ್ರಕಾಶ, ಅಸಂಗ, ಆತ್ಮ, ಪರಮಾತ್ಮನೆಂಬ ಭಾವದಿಂದ ಭಾವಿಸುವವು. ಇವು ಜ್ಞಾನದಲ್ಲಿ ತೋರುವ ಮುಕ್ತಾತ್ಮನ ಭಾವಂಗಳು. ಇಲ್ಲಿ ಭಾವಂಗಳು ಬಹು ವಿಧವಾಗಿ ತೋರಿ ಅಡಗುವವು, ಜೀವನು ಇವುಗಳನ್ನು ಚೆನ್ನಾಗಿ ತಿಳಿಯದ್ದರಿಂದ ನರರು, ಸುರರು, ತನು, ಮನ, ಪ್ರಾಣಾದಿಗಳ ಕ್ರಿಯೆ, ಕರ್ಮಂಗಳಲ್ಲಿ ತಾದಾತಮ್ಯಹೊಂದಿ ತಮ್ಮ ತಾವರಿಯದಂತಾಗಿಹರು.

ರುದ್ರಗಣ, ದೇವಗಣ, ಪ್ರಮಥಗಣ ಮೊದಲಾದವರು ಈಶ್ವರನ ಅನುಸಂದಾನದಲ್ಲಿ ತಲ್ಲೀಯವಾಗಿ ಅದರಲ್ಲಿಯೆ ತಾದಾತ್ಮ್ಯ ಹೊಂದಿ ತಾವಾರೆಂದು ತಿಳಿಯದಾಗಿಹರು. ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರು, ಜ್ಞಾನ ಕಾಂಡದ ಅಭಿಮಾನಿಗಳಾಗಿ ಅದರಲ್ಲಿಯೆ ತಾದಾತ್ಮ್ಯಹೊಂದಿ ತಮ್ಮ ಸ್ವರೂಪದ ಘನವ ತಿಳಿಯದಂತಾಗಿಹರು. ಗುರುಭಾವವಾಗಲಿ, ಲಿಂಗ ಭಾವವಾಗಲಿ, ಜಂಗಮ ಭಾವವಾಗಲಿ, ಇವು ಹೆತ್ತರಿವು, ತಾನೆ ಸ್ವಯಂಜ್ಯೋತಿ, ಭಾವಕ್ಕಗಮ್ಯನು, ಆವಾವ ಭಾವಕ್ಕೆಡೆಗೊಡದ ಘನನಾಗಿದ್ದುದು ತನ್ನಿಂದ ತಾನರಿಯಲು ಆಗ ಭಾವಂಗಳು ತನ್ನೊಳು ಲೀನವು. ಸಮುದ್ರದಲ್ಲಿ ಸಣ್ಣ ಹಳ್ಳಗಳಾಗಲಿ, ದೊಡ್ಡ ಹಳ್ಳಗಳಾಗಲಿ, ಹೊಳೆಗಳಾಗಲಿ, ನದಿಗಳಾಗಲಿ, ಹೇಗೆ ಲೀನವಾಗುವವು ಹಾಗೆ

ಸಕಲ ಭಾವಂಗಳು ತನ್ನೊಳ ಲೀನ ಆಗಿ ತನಗಿಂತ ಅನ್ಯವಾವುದು ಇಲ್ಲವೆಂಬುದು ಇಲ್ಲವೆನ್ನಲ ಸಂದಿಲ್ಲದಿಪ್ಪ ತನ್ನಿರವು ತನಗೆ ವೇದ್ಯವಾಗುವುಡೆ ಎತ್ತನೋಡಿದಡತ್ತತ್ತ ತಾನೆ ಆಗಿರುವ ಬಯಸುವುದು.

ಭ್ರಮೆಯಳಿದ ನಿಜವು ಸಾಧ್ಯವಾದ ಬಳಿಕ ಅರಿವುದಿನ್ನಾರನ್ನು ಗುಹೇಶ್ವರಾ : ನಿಜವು ಸಾಧ್ಯವಾದವರು ಅವರು ನಿಜವೆನಲಿಲ್ಲ ನಿಜವೆಂಬುದು ಕೂಡ ಇದು ಭ್ರಮವು ಎಂಬುದು ಆರಿಗೆ ವಿದಿತವಾಗಿದ ಅವರು ತಾವು ನಿಜವೆಂದು ನುಡಿದು ಹೇಳದವರಾಗಿ ಅದುವ ಆಗಿಹರು. ಭಾವಂಗಳೆಲ್ಲವು ಭ್ರಮವು ಮನದ ಕಲ್ಪಿತವೆಲ್ಲವು ಭ್ರಮವು, ನೆನಹು ನಿರ್ಣಯಗಳು ಭ್ರಮವು ಅವಿಚಾರ ವಿಚಾರವೆಂಬವು ಭ್ರಮವು, ಮನದ ಕಲ್ಪಿತಂಗಳೆಲ್ಲ ಪುಸಿಯಾದಲ್ಲಿ ಮನವು ಪುಸಿ, ಮನ ಲಿಂಗವೆಂಬುದು ಪುಸಿ, ಮರವರುವಿನ ಭಾವಂಗಳು ಪುಸಿ, ವಿಶ್ವ ತೈಜಸ, ಪ್ರಾಜ್ಞರೆಂಬುದು ಪುಸಿ, ಜೀವ ಶಿವರೆಂಬುದು ಪುಸಿ, ಅವರ ಏಕತ್ವವು ಪುಸಿ, ಅಂಗಲಿಂಗವೆಂಬುದು ಪುಸಿ, ಜೀವಾತ್ಮ ಅಂತರಾತ್ಮ, ಪರಮಾತ್ಮರೆಂಬುದು ಪುಸಿ, ಉಸುರುವುದೆಲ್ಲ ಪುಸಿಯಾದಲ್ಲಿ ಇವರ ಐಕ್ಯವು ಪುಸಿ, ಸಕಲವು ಪುಸಿಯಾದುದೆ ಭ್ರಮೆಯಳಿದು ನಿಜವು ಸಾಧ್ಯವಾದ ಸಂಕೇತ. ತಾನೆ ಅರಿಯದರವು ಅರುವೆನ್ನದರುವು ಇದ್ದಂತಿರುವ ನಿಜವು ತಾನೆ ಆದುದು ಕರಿಗೊಂಡಲ್ಲಿ ಅರಿವುದಿನ್ನಾರನಯ್ಯ ಎಂದು ಹೇಳಿಹರು.

ಶರಣನು ಅಪ್ರಮಾಣಗಮ್ಯ, ಘನಕ್ಕೆ ಘನ ತಾನಿದ್ದು, ಕುರುಹೆ ಘನವೆಂದು ಅದಕ್ಕೆ ಮಜ್ಜನ ಮಾಡುವನು, ಮಾಡಿದರೂ ಅಡ್ಡಿ ಇಲ್ಲ, ನಿರೂಪ ಲಿಂಗವೆಂದು ಅರಿತನೆ ? ಅರಿಯದ ಕಾರಣ ಅದು ಪೂಜಾಲಿಂಗವಾಗಿ ಮಜ್ಜನ ಮಾಡುತಿಹರು, ಇವರಿಗೆಲ್ಲಿ ನಿರ್ಮಲದೇಹಿಯಾದ ಲಿಂಗದರಿವು ?

**81**

**ಮಲಿನ ದೇಹಕ್ಕೆ ಮಜ್ಜನವಲ್ಲದೆ, ನಿರ್ಮಲದೇಹಕ್ಕೆ ಮಜ್ಜನವೇಕೊ ?**
**ಉಂಟೆ ವಿಷಯ ಲಿಂಗ ನಿಷ್ಪತ್ತಿಯಾದ ಶರಣಂಗೆ ?**
**ಅಗಮ್ಯ ಅಗೋಚರ ಅಪ್ರಮಾಣ ಗುಹೇಶ್ವರಾ-ನಿಮ್ಮ ಶರಣ.** || 423 ||

**ತಾತ್ಪರ್ಯ** : ಮಲಿನ ದೇಹಕ್ಕೆ ಮಜ್ಜನವಲ್ಲದೆ, ನಿರ್ಮಲ ದೇಹಕ್ಕೆ ಮಜ್ಜನವೇಕೊ ? : ಆವುದು ಮಲಿನವುಳ್ಳದ್ದಾಗಿದೆ ಅದಕ್ಕೆ ಸ್ನಾನದ ಅವಶ್ಯಕತೆ ಇದೆ. ದೇಹ ಮಲಮಯವಾದುದರಿಂದ, ಅದಕ್ಕೆ ಮಜ್ಜನ ಮಾಡುವುದು. ಆವುದು ಮಲರಹಿತವು ಅದಕ್ಕೇಕೆ ಮಜ್ಜನ ! ಅರುವ ಅರಿಯ ಹೇಳಿದ ಗುರು ಸಂಜ್ಞೆಗೆ ಮಜ್ಜನವೇಕೆ ? ಅದು ನಿಷ್ಕಳಂಕ, ಅದಕ್ಕೇಕೆ ಮಜ್ಜನ !

ಲಿಂಗಾರ್ಚಕರಲ್ಲಿ ಮಲಿನದೇಹವಾವುದು, ನಿರ್ಮಲದೇಹವಾವುದು ಎಂಬ ಪರಿಜ್ಞಾನವಿಲ್ಲದವರು ಬಹಳಷ್ಟು ಇದ್ದಂತೆ ಕಾಣುತ್ತದೆ. ಮಲಿನ ದೇಹವೆಂಬುದು ಮೂರುವರಿ ಮೊಳ ಶರೀರವೆ ಮಲಿನ ದೇಹ. ಇದು ಮಲಮಯವಾದುದು ದುರ್ಗಂಧದಿಂದುಕ್ತವು ಇದಕ್ಕೆ ಸ್ನಾನವಿಲ್ಲದಿದ್ದರೆ ಹೊಲಸು ನಾರುವುದು, ಅದಕ್ಕಾಗಿ ಇದಕ್ಕೆ ಮಜ್ಜನ ಮಾಡುವುದು

ಅವಶ್ಯಕವು.

ಇನ್ನೊಂದು ನಿರ್ಮಳಾಂಗ, ಘನಾಂಗ, ಚಿದಂಗ, ಚಿಲ್ಲಿಂಗ, ಇದಕ್ಕೆ ಮಜ್ಜನ ಮಾಡುವದೆಂದರೆ ಇದು ತಿಳಿಯದ ಅಜ್ಞರ ಕಾರ್ಯ. ಅರೆ ಮರುಳರ ಕಾರ್ಯ ನಿರ್ಮಳಾಂಗ ತಿಳಿಯದ್ದರಿಂದ ಮಜ್ಜನ ಮಾಡುವುದು ನಡೆದಿದೆ. ಮಲಿನ ದೇಹ ಎಷ್ಟು ತೊಳೆದರೂ ಮಲಿನವೆ ? ನಿರ್ಮಲ ದೇಹಕ್ಕೆ ಮಜ್ಜನದ ಅವಶ್ಯಕತೆ ಇಲ್ಲವಾದರೆ ನಿರ್ಮಲ ದೇಹವ ತಿಳಿಯುವುದು. ಶರಣರು ಅತೀಂದ್ರಿಯರು, ಚರ್ಮಚಕ್ಷುವಿಂಗೆ ಅಗಮ್ಯರು, ಅಗೋಚರರರು, ಅಪ್ರಮಾಣವ ತಿಳಿಯರು. ಇದು ಕಾರಣ ಆರು ಅತೀಂದ್ರಿಯ ಜ್ಞಾನವುಳ್ಳವರಾಗಿ ತನುವಿನತ್ತಾಚೆಯ ತನುವಾಗಿಹರು ; ಅಲ್ಲಿ ತನುವಿನ ವರ್ಣನೆಗಿಂಬಿಲ್ಲ ಅದು ಅವರ್ಣೀಯ ತನು. ಸದ್‌ಜ್ಞಾನಭರಿತ ತನು, ಅಲ್ಲಿ ನೇತಾತ್ಮಕ ಜ್ಞಾನದವರಿಗಿಂಬಿಲ್ಲ, ಸರ್ವಾತ್ಮ ಜ್ಞಾನದವರಿಗಿಂಬಿಲ್ಲ ನಿಶಬ್ದವೇದಿಗಳ ಜ್ಞಾನವಾದಲ್ಲಿ ನಿರ್ಮಲ ದೇಹದ ಘನವು ವಿದಿತವು, ಅಖಂಡಿತನ ನಿಲುವುಳ್ಳವರ ತನು, ಅಲ್ಲಿ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು, ತನ್ನಲ್ಲಿ ಅಲ್ಲದೆ, ಮರವಿನಲ್ಲಿ ಅರುವೆಂಬುವರಲ್ಲಿ ನಿಲುಕದ ಇರವು, ಅಂತಪ್ಪ ಶರಣ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತ ಈತನಿಗೆ ಅದಾವ ಮಜ್ಜನ ಮಾಡುವುದು.

*ವಿಷಯ ಉಂಟೆ ? ಲಿಂಗನಿಷ್ಪತ್ತಿಯಾದ ಶರಣಂಗೆ ?* : ಶರಣ ಲಿಂಗಕ್ಕೆ ಲಿಂಗವಾಗಿಹ ಶರಣ ಅರುವಿಂಗರುವಾಗಿಹ ಶರಣ, ದೇಹಿಗೆ ದೇಹಿಯಾಗಿಪ್ಪ ಶರಣಂಗೆ ಲಿಂಗನಿಷ್ಪತ್ತಿಯಾದುದು, ಅಲ್ಲಿ ವಿಷಯವುಂಟೆ, ರೂಪ, ನಿರುಪಮ ನಿರಾಳವು . ಶಬ್ದವು ನಿರುಪಮ ನಿರಾಳವು. ಸ್ಪರ್ಶವು ನಿರುಪಮ ನಿರಾಳವು, ರಸವು ನಿರುಪಮ ನಿರಾಳವು. ಗಂಧವು ನಿರುಪಮ ನಿರಾಳವು. ಎಲ್ಲೆಲ್ಲೂ ನುಡಿಗೆಡೆಗೊಡದ ಘನವಾಗಿ ಪ್ರಜ್ವಲಿಸುವುದರಿಂದ ವಿಷಯವಾಗಿ ತೋರಲಿಲ್ಲ ; ಅದು ಸ್ವಯಂಜ್ಯೋತಿ ಲಿಂಗವು ಆಗಿ ಪ್ರಜ್ವಲಿಸಿಹುದು.

ಶರಣಂಗೆ ವಿಷಯವೆ ಜ್ಞಾನಾಮೃತ ಲಿಂಗವಾಗಿಹುದಲ್ಲದೆ ಶರಣನ ಇಂದ್ರಿಯಂಗಳು ಅತೀಂದ್ರಿಯಂಗಳು. ಘ್ರಾಣವಾಗಿದ್ದರೆ ಗಂಧವೆಂಬ ವಿಷಯವ ಕಂಡುದುಂಟು. ಘ್ರಾಣದ ಘ್ರಾಣವಾಗಿಹ ಘನವಂತ. ಜಿಂಹ್ವೆಯಾಗಿದ್ದರೆ ರಸವೆಂಬ ವಿಷಯವ ಕಂಡುದುಂಟು, ಜಿಂಹ್ವೆಯ ಜಿಂಹ್ವೆಯಾಗಿಹ ಚಿದ್ರಸರೂಪಿಶರಣಂಗೆ ಅದಾವ ರಸ ತೋರಬೇಕು. ನೇತ್ರವುಳ್ಳವನಾಗಿದ್ದಲ್ಲಿ ರೂಪವೆಂಬ ವಿಷಯ ತೋರುತ್ತಿತ್ತು, ನೇತ್ರದ ನೇತ್ರವಾಗಿಹ ಚಿತ್‌ಸ್ವರೂಪಕ್ಕೆ ಅದಾವ ರೂಪವ ತೋರುವುದು. ತ್ವಕ್ಕಾಗಿದ್ದಲ್ಲಿ ಸ್ಪರ್ಶವೆಂಬ ವಿಷಯ ತೋರುತ್ತಿತ್ತು. ತ್ವಕ್ಕಿನ ತ್ವಕ್ಕಾಗಿಹ ಅರುವಿಂಗೆ ಅದಾವ ಸ್ಪರ್ಶವ ತೋರುವುದು. ಶ್ರೋತೃವಾದವಂಗೆ ಶಬ್ದಂಗಳು ಕೇಳುವುದು ಸಹಜ, ಶ್ರೋತೃವಿನ ಶ್ರೋತೃವಾದವಂಗೆ ಅದಾವ ಶಬ್ದವ ಕೇಳುವುದು. ಶರಣ ಅತಿಶುದ್ಧವೆಂಬುದು ನಿರ್ಮಲ ದೇಹ ಅತೀಂದ್ರಿಯನಾದುದರಿಂದ ವಿಷಯಂಗಳಿಲ್ಲ, ಗಗನ ಸದೃಶನಾಗಿಹ ಜ್ಞಾನಾಮೃತನಾದುದರಿಂದ ಲಿಂಗನಿಷ್ಪತ್ತಿಯಾದುದು ಎಂದು ಹೇಳಿದೆ.

*ಅಗಮ್ಯ ಅಗೋಚರ ಅಪ್ರಮಾಣ ಗುಹೇಶ್ವರಾ ನಿಮ್ಮ ಶರಣ* : ನಿಮ್ಮ ಶರಣರೆಂದರೆ ಗುಹೇಶ್ವರರು, ಗುಹೇಶ್ವರ ಲಿಂಗ ಎಷ್ಟು ಅಗಮ್ಯವಾಗಿದೆ; ಅಷ್ಟು ಗುಹೇಶ್ವರ ಅರಿತ ಅಗಮ್ಯ. ಇವರು ವೇದ, ವೇದಾಂತಕ್ಕೂ ನಿಲುಕದವರು, ಶೃತಿಗೂ ಅಗಮ್ಯರು, ಸ್ಮೃತಿಗೂ

ಅಗಮ್ಯರು, ಶ್ರವಣಕ್ಕೂ ಅಗಮ್ಯರು, ಮನನಕ್ಕೂ ಅಗಮ್ಯರು, ಅಗೋಚರರು, ಕಥನದಿಂದ ಗೋಚರವಾಗದವರು, ನೆನಹಿಂಗೂ ಗೋಚರವಾಗದವರು, ಅರಿತೆ ಅರಿಯೆನೆಂಬುವವರಿಗೂ ಗೋಚರವಾಗದವರು, ಉಪಾಸಕರಿಗೂ ಗೋಚರವಾಗದವರು, ಚಿಂತನ ಮಾಡುವ ಧ್ಯಾನಸ್ತರಿರಲಿ, ಅವರಿಗೂ ಗೋಚರವಾಗದವರು, ಕಲ್ಪಿತ ಪುರುಷನಿಗೆ ಗೋಚರವಾಗದವರು ಅದಕ್ಕಾಗಿ ಅಗೋಚರವೆಂದರು.

ಅಪ್ರಮಾಣ ಪ್ರಮಾತ್ಯವಾಗಿ ತಿಳಿಯ ಹೋದವರಿಗೂ ಲಭ್ಯವಾಗದ ಶರಣ . ಪ್ರಮಾಣವಾಗಿ ತಿಳಿಯ ಹೋದರೂ ಲಭ್ಯವಾಗದ, ಪ್ರಮೇಯವಾಗಿ ತಿಳಿಯ ಹೋದವರಿಗೂ ಲಭ್ಯವಾಗದ ಶರಣ. ತ್ರಿಪುಟಿಗಳೆ ಭಸ್ಮವಾಗಿಹ ಶರಣ, ಅಕಲ್ಪಿತ ಘನವು ಕಲ್ಪಿತಕ್ಕೆ ನಿಲುಕುವುದೆ, ಅಗಣಿತವು ಗಣಿತಕ್ಕೆ ಲಭ್ಯವಾಗುವುದೆ, ಅನುಪಮವು ಉಪಮೆಯಿಂದ ಲಭ್ಯವೆ ? ಶರಣ ಅಪ್ರಮಾಣವೆಂದರೆ ಪ್ರಮಾಣಕ್ಕೆ ನಿಲುಕದವನು, ಗಣಿತಕ್ಕೆ ನಿಲುಕದು ಈ ಮಹಾಂತ ತಾನಾಗಿಹ ಘನ ತನ್ನೊಳ ತಾನೆ ತಾನಾದ ಏಕತ್ವ, ಇದು ನಿರುಪಮ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿಹ ಶರಣ.

**82**

**ಭಕ್ತಂಗೆ ಉತ್ಪತ್ತಿ ಇಲ್ಲಾಗಿ, ಸ್ಥಿತಿಯಿಲ್ಲ.**
**ಸ್ಥಿತಿಯಿಲ್ಲಾಗಿ ಲಯವಿಲ್ಲ.-ಮುನ್ನ ಎಲ್ಲಿಂದ ಬಂದನಲ್ಲಿಗೆ ಹೋಗಿ,**
**ನಿತ್ಯನಾಗಿರ್ಪ ಗುಹೇಶ್ವರಾ ನಿಮ್ಮ ಶರಣ.** ॥ 428 ॥

**ತಾತ್ಪರ್ಯ** : *ಭಕ್ತಂಗೆ ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ, ಸ್ಥಿತಿಯಿಲ್ಲಾಗಿ ಲಯವಿಲ್ಲ* : ಭಕ್ತ ಆರು, ಈತ ಅವರ ಭಕ್ತ, ಅನುಪಮ ಭಕ್ತ, ಅಖಂಡಿತ ಘನವೆ ತನ್ನಿರುವಾಗಿಹ ಭಕ್ತ, ಈ ಭಕ್ತ ಸಾಮಾನ್ಯನೆ ? ಉಪಮೆಗೆ ಒಳಪಟ್ಟ ಭಕ್ತರು ಸಿಕ್ಕುವರು, ಕಲ್ಪಿತ ಭಕ್ತರು ಸಿಕ್ಕುವರು, ಅಕಲ್ಪಿತ ಸಿಕ್ಕುವುದು ವಿರಳ. ಭೇದಜ್ಞಾನಿಗಳು ಕಲ್ಪಿತರು, ಅಂಗ ಬೇರೆ, ಲಿಂಗ ಬೇರೆ ಎನ್ನುವ ಭೇದ ಜ್ಞಾನಿಗಳು, ಗುರು ಬೇರೆ, ಶಿಷ್ಯ ಬೇರೆ, ಸ್ವಾಮಿ ಬೇರೆ, ಸೇವಕ ಬೇರೆ, ಪೂಜ್ಯ ಬೇರೆ, ಪೂಜಕರು ಬೇರೆಂಬ ಭಾವರೂಪಿ ಭಕ್ತರು, ಇವರು ಕುರುಹುಳ್ಳ ಭಕ್ತರು. ಈ ಭಕ್ತರು ಕೂಡುವವರು ಅಗಲುವವರು, ಇವರ ಭಕ್ತಿ ಉತ್ಪತ್ತಿ ಭಕ್ತಿ, ಸ್ಥಿತಿಯುಳ್ಳದ್ದಾಗಿ ತೋರುವ ಭಕ್ತಿ, ಕೊನೆಗೆ ಲಯವಾಗುವ ಭಕ್ತಿ.

ಪೂರ್ವದಲ್ಲಿ ಸಿದ್ಧರಾಮ ಶಿವಯೋಗಿ ಶೈವ ಭಕ್ತನಾಗಿದ್ದ ಅದು ಸ್ಥಿತಿಯುಳ್ಳದ್ದಾಗಿತ್ತು, ಕೊನೆಗೆ ಚನ್ನಬಸವರಾಜನ ಸಮ್ಯಜ್ಞಾನ ದರ್ಶನವಾಗುವುಡೆ ಲಯವಾಗಿತ್ತು. ಶಿವೋಪಾಸಕರೆ ಇರಲಿ, ಗಣಪತಿ ಉಪಾಸಕರೆ ಇರಲಿ, ಆರ ಉಪಾಸಕರೆ ಇರಲಿ ಅದು ಭೇದಜ್ಞಾನದಿಂದುಕ್ತವಾಗಿದೆ. ಹಿರಿದು, ಕಿರಿದೆಂಬ ಭಾವ ದೃಢವಾಗಿದೆ, ಅದು ಉತ್ಪತ್ತಿವುಳ್ಳದ್ದಾಗಿ, ಸ್ಥಿತಿವುಳ್ಳದ್ದಾಗಿ ಕೊನೆಗೊಂದು ದಿವಸ ಲಯವಾಗುವುದು.

ಎರಡೊಂದಾದ ಬಳಿಕ ಅರ್ಚನೆಯಿಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ, ಶಬ್ದಕ್ಕೆ ತೆರಹಿಲ್ಲ ಗುಹೇಶ್ವರಾ. ಇದು ಪ್ರಭುವಿನ ಭಕ್ತಿ ಎರಡೊಂದಾದ ಭಕ್ತಿ. ಗುರು, ಶಿಷ್ಯರೊಂದಾದ ಭಕ್ತಿ, ಭಕ್ತ ಜಂಗಮರೊಂದಾದ ಭಕ್ತಿ, ಗುರು ಗುರು ಒಂದಾದ ಭಕ್ತಿ, ಶಿಷ್ಯ ಶಿಷ್ಯರೊಂದಾದ

ಭಕ್ತಿ, ಅನುಪಮ ಭಕ್ತಿ, ಲಿಂಗ ಭಕ್ತ ಒಂದಾದ ಭಕ್ತಿ, ಪೂಜ್ಯ ಪೂಜಕ ಒಂದಾದ ಭಕ್ತಿ, ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದನಯ್ಯ ಕೂಡಲಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿದ್ದು ಶಬ್ದಮುಗ್ಧವಾದುದನೇನೆಂಬೆ ಇದು ಬಸವರಸರ ಭಕ್ತಿ. ಇದು ಲಿಂಗವರಿಯ ಹೋಗಿ ಲಿಂಗಕ್ಕೆ ಲಿಂಗವಾಗಿಹ ಭಕ್ತ, ಲಿಂಗ ಘನ ಗಂಭೀರ ಮಹಾ ಘನವಾಗಿದ್ದರೆ ಅದನು ಅರಿಯ ಹೋದ ತಾನು ಘನಕ್ಕೆ ಘನವಾಗಿಹನು, ಕೂಡಲ ಸಂಗಯ್ಯನು ಬೆಳಗಿನ ಘನವಾದರೆ ಆ ಬೆಳಗ ಅರಿಯ ಹೋದ ತಾನು ಬೆಳಗಿನೊಳಗೆ ಬೆಳಗುಳ್ಳ ಘನವಾಗಿದ್ದು, ಶಬ್ದಮುಗ್ಧನಾದುದು. ಇದು ಅನುಪಮ, ಅಖಂಡ, ಅಚಲವಾಗಿಹ ಭಕ್ತನಾದುದರಿಂದ ಇದಕ್ಕೆ ಉತ್ಪತ್ತಿ ಇಲ್ಲ, ಸ್ಥಿತಿ ಇಲ್ಲ, ಆವುದು ಉತ್ಪತ್ತಿಯೆ ಆಗದಿರುವಲ್ಲಿ ಅದಕ್ಕೆ ಸ್ಥಿತಿ ಆವುದು ಲಯವಾವುದು ? ಈ ಭಕ್ತ ಅರುವಿಂಗರುವಾಗಿಹ ಭಕ್ತ, ನಿಶಬ್ದವೇದಿಯಾಗಿಹ ಭಕ್ತ, ಗುರುವಿಂಗೆ ಗುರುವಾಗಿ ಗುರು ಪ್ರಸಾದಕೊಂಡ ಭಕ್ತ, ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದಕೊಂಡ ಭಕ್ತ, ಈ ಜ್ಞಾನ ಮುನ್ನ ಮುನ್ನವೆ ಇದ್ದಕ್ಕಿದ್ದ ಘನದ ಜ್ಞಾನ, ಇದು ತನ್ನಿರುವ ಅರಿಯ ಹೋದಾಗ ತನ್ನಿಂದ ತನಗೆ ವಿದಿತವಾದ ಜ್ಞಾನ, ಇಲ್ಲಿ ಕಲ್ಪಿತ ಗುರು, ಕಲ್ಪಿತ ಲಿಂಗದ ಜ್ಞಾನ ನಷ್ಟವಾಗಿ ತನ್ನಿರುವಿನ ಅರುವಾದ ಜ್ಞಾನವಾದ್ದರಿಂದ ಇದಕ್ಕೆ ಉತ್ಪತ್ತಿ ಇಲ್ಲ, ಸ್ಥಿತಿ ಇಲ್ಲ, ಲಯವಿಲ್ಲ.

*ಮುನ್ನೆಲ್ಲಿಂದ ಬಂದ ನಲ್ಲಿಗೆ ಹೋಗಿ ನಿತ್ಯನಾಗಿಪ್ಪ ಗುಹೇಶ್ವರಾ, ನಿಮ್ಮ ಶರಣ :* ಆವುದು ಮುನ್ನ ? ಅರಿಯುವುದು ಮುನ್ನವಲ್ಲ, ಅರಿಸಿಕೊಳ್ಳುವದಿದ್ದಲ್ಲಿ ಅರಿಯುವದಿದೆ. ಇವೆರಡು ಮುನ್ನವಾಗವು, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನ ಆವುದು ಅದು ಮುನ್ನವು, ಅರಿಯದರುವು ಮುನ್ನವೆ ಇದ್ದುದು ಅರಿಯದರುವಿನಲ್ಲಿಂದ ಬಂದ ಪುನಃ ಇಲ್ಲಿ ಅರಿಸಿಕೊಳ್ಳುವವನಾಗಲಿಲ್ಲ, ಅರಿಯುವವನಾಗದೆ ಅರಿಯದರುವಿನಲ್ಲಿಗೆ ಹೋಗಿ ನಿತ್ಯನಾಗಿಪ್ಪನು. ಅದಕ್ಕಾಗಿ ಶರಣರೆಂದರೆ ನುಡಿಗೆಡೆಗೊಡದ ಘನರು, ನಡೆ ನುಡಿ ಕೆಟ್ಟವರು. ಎಡೆಯಿಲ್ಲದ ಪರಿಪೂರ್ಣ ಮುನ್ನವೆ ಇದ್ದುದು, ಅಲ್ಲಿಂದ ಬಂದು ಮತ್ತೆ ಅಲ್ಲಿಗೆ ಹೋದುದು ಭಾಷೆ ಪ್ರಸಾದದಿಂದ ಹೇಳಲದೆಂತು ಸಾಧ್ಯ ! ಅವರದು ಮುನ್ನೆಲ್ಲಿಂದ ಬಂದ ಇರವು, ಹೇಳಬಾರದ ಘನ ತೋರಲೆಂದೇನೊ ? ತೋರಬಾರದ ಘನ ಹೇಳಲೆಂದೇನೊ ? ಕಲ್ಪಿತವಲ್ಲದುದು ಅಲ್ಲಿ ಭಾವವೇತರದು, ನುಡಿಗೆಡೆಯಿಲ್ಲವಾಗಿ ಶಬ್ದವೇ ಮೀಸಲುವಾಗಿಹ ಮಹಾಂತ ಎಲ್ಲಿಂದ ಬಂದ ಅಲ್ಲಿಗೆ ಹೋದ.

ಘಟಾಕಾಶ, ಮಠಾಕಾಶ ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ನಿಲವು ಅದಾರು ಗುರುತಿಸಬೇಕು, ಅದು ಆಕಾಶವತ್ ಆಕಾಶ ಇದ್ದಂತಿರುವ ಆಕಾಶ, ಅದು ಬಂದುದಲ್ಲವೆಂದರೆ ಘಟಾಕಾಶ, ಮಠಾಕಾಶವಾಗಿ ಬಂದಂತಾಗಿದೆ. ಬಂದುದೆಂದರೆ ಆಕಾಶವತ್ ಆಕಾಶವಾಗಿದೆ. ಅದು ಮುನ್ನಿನಂತೆ ಇದೆ ಬಂದುದಲ್ಲ, ಹೋದುದಲ್ಲ ಇದ್ದಂತಿದ್ದ ಘನವು, ಭಾಷೆ ಪ್ರಸಾದದಿಂದ ಉಸುರಬಾರದು ನೋಡಾ.

ಮುನ್ನ ಮುನ್ನವೆ ಇದ್ದ ತಾನು, ತನ್ನ ಹಿರಿಮೆಯ ಅದನೆಂತು ವರ್ಣಿಸುವುದು, ಇದ್ದವನೆನಲಿಲ್ಲ, ಬಂದವನೆನಲಿಲ್ಲ, ಹೋದವನೆನಲಿಲ್ಲ . ಮುನ್ನ ಮುನ್ನವೆ ಇದ್ದಂತಿದ್ದ ಘನ ತನ್ನಿಂದ ತಾನಾದ ಘನ, ಅದು ನಿತ್ಯವಾಗಿಹ ಶರಣ, ಅನುಪಮ ಶರಣ ಇದು ಮೂಕ ಮೂಕರ ಪ್ರಸಂಗ, ಮುನ್ನ ಮುನ್ನವೆ ಇದ್ದುದು ಮೂಕ, ಅಲ್ಲಿಂದ ಹೊರ ಬಂದುದು

ಮೂಕ, ಎಲ್ಲಿಂದ ಬಂದನಲ್ಲಿಗೆ ಹೋದಾಗ ಮೂಕ ಅಂದರೆ ಮುನ್ನ ಮುನ್ನವೆ ಇದ್ದಲ್ಲಿಗೆ ಹೋದಾಗ ಮೂಕ, ಈ ಮಾತಿಲ್ಲದವನ ಪ್ರಸಂಗ, ಇದು ಭಾಷೆ ಪ್ರಸಾದಕ್ಕಿಂಬಿಲ್ಲ. ಇದು ನುಡಿಗೆಡೆಗೊಡದ ಘನವಾಗಿರುವಲ್ಲಿ ಅವರ್ಣನೀಯವೆಂಬುದು ನಾಚಿ ಶಬ್ದಮುಗ್ಧವಾದುದನ್ನು ಅದನೆಂತುಸರುವುದು ಮುನ್ನ ಮುನ್ನವೆ ಇದ್ದ ಆಕಾಶ ಅದು ಆಕಾಶವೆನಲಿಲ್ಲ. ಅದಕ್ಕೆ ಘಟಾಕಾಶ, ಮಠಾಕಾಶ, ಮಹಾಕಾಶವೆಂದು ಕಲ್ಪಿಸಿದರೂ ಅದು ಇದ್ದಂತೆ ಇದೆ. ಹಾಗೆ ಮುನ್ನ ಮುನ್ನವೆ ಇದ್ದ ಘನ ಅದು ನಿಶಬ್ದ ಬ್ರಹ್ಮ ; ಅದಕ್ಕೆ ಜೀವಾತ್ಮ ಅಂತರಾತ್ಮ ಪರಮಾತ್ಮ ಎಂದು ಕಲ್ಪಿಸಿದರೂ ನಿಶಬ್ದ ಬ್ರಹ್ಮವಾಗಿಯೆ ಇದೆ. ಅಂಗವೆಂದಾಗಲೂ ಮುನ್ನ ಮುನ್ನವೇ ಇದ್ದ ಘನವಾಗಿದೆ. ಲಿಂಗ ಹೇಳಬಾರದ ಘನವೆಂದಾಗಲೂ ಮುನ್ನ ಮುನ್ನವೆ ಇದ್ದ ಘನವಾಗಿದ್ದುದರಿಂದ ಶರಣ ಕಲ್ಪಿತನಾಗದೆ ಅಕಲ್ಪಿತ ಜ್ಞಾನೋದಯವಾಗಿ ಅಕಲ್ಪಿತ ಘನನಾಗಿರುವುದರಿಂದ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪ ಗುಹೇಶ್ವರಾ ನಿಮ್ಮ ಶರಣ. ಶರಣನ ಒಲುಮೆ ಮುನ್ನ ಮುನ್ನಲಾದ ಘನದೊಲಿಮೆ ಅದಕ್ಕೆ ಹಾಸಿನ ಹಂಗೇಕೆ.

**83**

**ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ ?**
**ಬೇಟದ ಮರುಳಗೆ ಲಜ್ಜೆ ಮುನ್ನುಂಟೆ ?**
**ನಿಮ್ಮನರಿದ ಶರಣಂಗೆ ಪೂಜೆಯ ಹಂಬಲ, ದಂದುಗವೇಕೆ ?**
**ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ ?**
**ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನುಂಟೆ ?** ॥ 425 ॥

**ತಾತ್ಪರ್ಯ** : ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ ? : ಇದಾವ ಒಲುಮೆಯ ಕೂಟ ? ಹಾಸಿನ ಹಂಗೆ ಹರಿದಾಗ ಇದೆಂಥ ಒಲುಮೆ, ಇದೆಂಥ ಕೂಟ ? ಹೆಣ್ಣು, ಗಂಡೊಂದಾದ ಕೂಟ ? ಎರಡೊಂದಾದ ಕೂಟ, ಇವು ಒಲುಮೆಯ ಕೂಟ, ಗಂಡು, ಹೆಣ್ಣು ಒಲಿದ ಕೂಟ, ಹೆಣ್ಣನ್ನು ಗಂಡು ಒಲಿಸಿಕೊಂಡಿತೆ ? ಗಂಡನ್ನು ಹೆಣ್ಣು ಒಲಿಸಿಕೊಂಡಿತೆ ? ಈ ಒಲಿಸಿಕೊಂಡ ಒಲುಮೆಯ ಕೂಟ ಅದಾರು ನಿರ್ಣಯಿಸುವುದು. ಒಂದಕ್ಕೊಂದು ಒಲಿತೆ ಒಂದಾದ ನಿಲವು ಹಾಸಿಗೆಯ ಹಂಗೆ ಹರಿದು ಹೋಗಿದೆ. ಈ ಒಲುಮೆ ಅದಾರಿಗೆ ? ಈ ಕೂಟ ಅದಾರಿಗೆ ಓಹೊ ! ಇದು ಪ್ರೀತಿ ಪ್ರೀತಿ ಒಂದಾದ ಘನ, ಈ ಪ್ರೀತಿಗೇನನ್ನಬೇಕು, ಹೆಣ್ಣೆನ್ನಬೇಕೆ ? ಗಂಡೆನ್ನಬೇಕೆ ? ಹೆಣ್ಣಾಗಿದ್ದರೂ ಅದನ್ನು ತೊರೆದು ಪ್ರೀತಿಯಾಗಿ ನಿಂತಿದೆ. ಪ್ರೀತಿಯ ನೋಟ, ಪ್ರೀತಿಯ ಆಲಿಂಗನ, ಪ್ರೀತಿಯ ಸಮರಸವು, ಪ್ರೀತಿ ಪ್ರೀತಿಯಾಗಿ ಪ್ರಜ್ವಲಿಸುವಲ್ಲಿ ಹಾಸಿನ ಹಂಗೇಕೆ ?

ಎರಡೊಂದಾದುದು: ಶರಣಸತಿ, ಲಿಂಗಪತಿ ಒಂದಾದುದು, ಅಂಗ ಲಿಂಗ ಒಂದಾದುದು ಲಿಂಗಾಂಗ ಸಮರಸ. ನಾನೀ ಒಂದಾದುದು. ಶಬ್ದಕ್ಕೆ ತೆರಹಿಲ್ಲದ ಕೂಟ, ಶಬ್ದಮುಗ್ಧ ಕೂಟ, ಸುಖ ಸುಖ ಒಂದಾದ ಕೂಟ, ಈ ಒಲುಮೆ ಕೂಟ ನಾ ಎಂಬ ಹಂಗು, ನೀ ಎಂಬ ಹಂಗ ಹರಿದ ಕೂಟ, ಶರಣನು ಹಂಗು ಹರಿದಿದ್ದಾನೆ. ಲಿಂಗ ಹಂಗು ಹರಿದ ಕೂಟ, ಸತಿಯಳೆಂಬ ಹಂಗು ಹರಿದು ಹೋಗಿದೆ. ಪತಿಯೆಂಬ ಹಂಗು ಹರಿದು

ಹೋಗಿದೆ. ಸತಿ ನಾನೆಂಬ ಹಂಗು ಹರಿದು ಹೋಗಿದೆ. ಪತಿ ನೀನೆಂಬ ಹಂಗು ಹರಿದು ಹೋಗಿದೆ. ನಾನೀ ಎಂಬುದು ಕಾಣದಂತಾದುದೆ ಪ್ರೀತಿ ಪ್ರೀತಿ ಒಂದಾದ ಘನ. ಸುಖದ ಸುಖಿಯಾದುದೆ ಶಬ್ದಮುಗ್ಧವಾದ ಸಂಕೇತ, ಸುಖದ ಸುಖಿಯಾದುದಕ್ಕೆ ನೆನಹೆಂಬ ಹಾಸಿಗೆಯೇಕೆ ? ಭಾವವೆಂಬ ಹಾಸಿಗೆ ಏಕೆ ? ಚಿಂತನವೆಂಬ ಹಾಸಿಗೆಯೇಕೆ ? ನಾನು ಸಚ್ಚಿದಾನಂದ ನೀನು ಸಚ್ಚಿದಾನಂದವೆಂಬ ನುಡಿಯುಳ್ಳ ಹಾಸಿಗೆಯ ಹಂಗೇಕೆ ? ಹಂಗು ಹರಿದವನಿಗೆ ಲಿಂಗದ ಪರಿವೇನು ಎಂಬ ಗಾದೆಯ ಮಾತಿನಂತೆ ಶರಣನೆಂಬ ಕಲ್ಪಿತನ ಕಲ್ಪನೆ ಅದು ಪ್ರವೃತ್ತಿಯದ್ದಿರಲಿ, ನಿವೃತ್ತಿಯದ್ದಿರಲಿ, ಪ್ರಪಂಚದ್ದಾಗಿರಲಿ, ಪರಮಾರ್ಥದ್ದಾಗಿರಲಿ, ಸಕಲದರಲ್ಲಿ ತಾತ್ಸಾರ ಬಂದಿರುವದೆ ಹಾಸಿಗೆಯ ಹಂಗ ಹರಿದಂತೆ. ಅಕಲ್ಪಿತ ತಾನಾಗಿ ಬೆಳಗುವ ಶಬ್ದಮುಗ್ಧವೆ ಹಾಸಿಗೆಯ ಹಂಗು ಹರಿದ ಸಂಕೇತ. ಅಲ್ಲಿ ಶರಣ ಸತಿ, ಲಿಂಗಪತಿ, ಎಂಬ ಕಲ್ಪನೆಯ ಹಂಗು ಹರಿದು ಒಂದಾದ ಕೂಟ ; ಲಿಂಗಾಂಗ ಸಮರಸ ಕೂಟ. ಇದು ಒಲುಮೆಯ ಕೂಟ, ಈ ಕೂಟ ಅರುಹೃದಯದ ಕೂಟ, ಅರುವು ಅರುವು ಒಂದಾದ ಕೂಟ, ಪ್ರೀತಿ ಪ್ರೀತಿ ಒಂದಾದ ಕೂಟ, ಅಂಗನೆಂದರೂ ಅರುವಿಂಗೆ ಲಿಂಗವೆಂದರೂ ಅರುವಿಂಗೆ. ಅಂಗನೆಂದರೂ ತನಗೆ, ಲಿಂಗವೆಂದರೂ ತನಗೆ, ತನ್ನ ಒಲುಮೆ ತನಗೆ. ತನ್ನ ಕೂಟ ತನಗೆ, ತನ್ನ ಪ್ರೀತಿ ತನಗೆ, ತನ್ನ ಪರಾನಂದ ತನಗೆ, ತನ್ನ ಅಚ್ಚ ಸುಖ ತನಗೆ. ಈ ಅವಿರಳಾನಂದ ತನಗೆ ವಿಕಸಿತವಾಗಿರುವಲ್ಲಿ ಅಲ್ಲಿ ನೆನಹಿನ ಹಂಗೇತರದು, ಅನುಸಂದಾನವೇತರದು. ತನ್ನ ಸ್ವಯಮೇವ ತೇಜವು ಘನಕ್ಕೆ ಘನವಾದುದು, ಇದು ಶರಣರ ಒಲುಮೆಯ ಕೂಟ ಇದು ಹಾಸಿಗೆಯ ಹಂಗು ಹರಿದ ಕೂಟ.

*ಬೇಟದ ಮರುಳಿಂಗೆ ಲಜ್ಜೆ ಮುನ್ನುಂಟೆ ? :* ದಿಗಂಬರಕ್ಕೆ ಮರುಳಾದವರಿಗೆ ನಾಚಿಕೆ ಏತರದು ? ಪ್ರಪಂಚದಲ್ಲಿ ನಾಮರೂಪಕ್ಕೆ ಮರುಳಾದವರು ಸಿಕ್ಕುವರು. ಲಿಂಗಪತಿ ಎಂಬ ನಿರೂಪಕ್ಕೆ ಮರುಳಾದವರು ಸಿಕ್ಕುವರೆ ? ಗುರುವಿಂಗೆ ಮರುಳಾದವರು ಸಿಕ್ಕಬಹುದು. ಗುರುವಿಗೆ ಗುರುವಾದ ಘನಕ್ಕೆ ಮರುಳಾದವರು ಸಿಕ್ಕುವರೆ ? ಅರುವಿಂಗೆ ಮರುಳಾದವರು ಸಿಕ್ಕಬಹುದು ಅರುವಿಂಗರುವಾಗಿಹ ಘನಕ್ಕೆ ಮರುಳಾದವರು ಸಿಕ್ಕುವರೆ ? ರೂಪಕ್ಕೆ ಮರುಳಾಗಿ ದಿಗಂಬರ ಸುಖವ ಬಯಸಿ ಕಾಮುಕತನದಿಂದ ಶರೀರ ದಿಗಂಬರವಾಗಲು ನಾಚಿಕೆ ಇರದು, ಗಂಡು ಹೆಣ್ಣು ಒಂದಾಗುವ ತವಕ ಅತಿಯಾದಲ್ಲಿ ದೇಹದ ನಾಚಿಕೆ ಇರದು. ದಿಗಂಬರಂಗೆ ಮರುಳಾದುದು ಶರಣರ ಹೃದಯ, ಗುಹೇಶ್ವರನೆಂಬ ದಿಗಂಬರಂಗೆ ಮರುಳಾದವರಿಗೆ ಈ ಲೋಕದ ಲಜ್ಜೆ ಇರಬಹುದೆ ? ತನ್ನಂಗದ ಲಜ್ಜೆಯಾದರೂ ಇರಬಹುದೆ ? ಗುಹೇಶ್ವರನೆಂಬ ದಿಗಂಬರ ನಿರಂತರ ಮಂಗಲಮಯವಾಗಿಹ ಜ್ಞಾನಜ್ಯೋತಿ, ಜ್ಞಾನಸ್ವರೂಪ. ಈ ಜ್ಞಾನಸ್ವರೂಪಕ್ಕೆ ಮರುಳಾದವಂಗೆ ಲೋಕದ ನಚ್ಚೇನು, ಮೆಚ್ಚೇನು, ಪ್ರೀತಿಸಿದರೇನು, ಅಪ್ರೀತಿಯಾದರೇನು, ಲೋಕವು ಒಪ್ಪಿದರೇನು, ಒಪ್ಪದಿದ್ದರೇನು, ಲೋಕದ ವಿಶ್ವಾಸ ಅವನಿಗೇಕೆ ಬೇಕು ? ತನ್ನಂಗದ ಹಂಗೆ ತನಗೆ ಕೆಟ್ಟು ಹೋಗಿರುವಲ್ಲಿ ಲೋಕದ ನಾಚಿಕೆ ಏತರದು, ಲೋಕವೆಂಬುದು ವ್ಯಷ್ಠಿ, ಸಮಷ್ಠಿ ಸಮೂಹವೆ ಲೋಕ, ಪಿಂಡಾಂಡ ಬ್ರಹ್ಮಾಂಡವಾಗಿ ತೋರುವುದೆ ಲೋಕ, ಇದರ ನಾಚಿಕೆ ಏತರದು.

*ನಿಮ್ಮನರಿದ ಶರಣಂಗೆ ಪೂಜೆಯ ಹಂಬಲ ದಂದುಗವೇಕೆ ? :* ಶರಣನೆಂದರೆ ಗುಹೇಶ್ವರಲಿಂಗವರಿತವರು ಇವರೆ ನಿಮ್ಮನರಿದ ಶರಣ. ಆ ಶರಣಂಗೆ ಲಿಂಗವು ಕುರುಹಾಗಿ

ಕಂಡಿದ್ದರೆ, ಪೂಜಾ ಸಂಭ್ರಮುದವನಾಗುತ್ತಿದ್ದ; ನೈವೇದ್ಯ ಪಾಲುಗಾರನಾಗುತ್ತಿದ್ದ, ಅಡಿವಿಯಲ್ಲಿರುವ ಗಿಡಗಳಿಗೆ ಮೃತ್ಯುರೂಪನಾಗುತ್ತಿದ್ದ ಅಂದರೆ ಪತ್ರಿ ಪುಷ್ಪಗಳು ಗಿಡಗಳಲ್ಲಿ ಉಳಿಸುತ್ತಿದ್ದಿಲ್ಲ, ಶ್ರೀಗುರು ಕರುಣಿಸಿದ ಲಿಂಗ ಕುರುಹಾಗಿ ಕಾಣಲಿಲ್ಲ, ಅರುವ ಅರಿಯಹೋಗಿ ಅದು ಅನುಪಮ ಲಿಂಗವಾಗಿ ತಾನು ಅದುವೆ, ಅಖಿಲ ಜಗವು ಅದುವೆ ಆಗಿ ತಾನೆ ಬೆಳಗುಳ್ಳ ಘನವಾಗಿ ಪ್ರಜ್ವಲಿಸುವಲ್ಲಿ ಪೂಜಾ ಸಂಭ್ರಮಕ್ಕೆ ಒಪ್ಪಬಹುದೆ ? ಈ ಪೂಜಾ ಸಂಭ್ರಮದವರು ಲಿಂಗವರಿಯದವರು, ತನ್ನ ಅರಿಯದವರು . ಲಿಂಗವ ಕುರುಹಾಗಿ ಕಂಡು, ಅದು ಪೂಜ್ಯವಾಗಿ ತಾನು ಪೂಜಕನಾದುದರಿಂದ ಪೂಜಾದಂದುಗವಾಗಿದೆ. ಶರಣ ಎರಡೊಂದಾದ ಘನ, ಪೂಜ್ಯ ತಾನೆ, ಪೂಜಕ ತಾನೆ ಆಗಿರುವಲ್ಲಿ ಶರಣಂಗೆ ಪೂಜಾ ಸಂಭ್ರಮದ ಹಂಬಲವೇಕೊ ? ಎಂದು ಹೇಳಿಹರು.

*ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ ? :* ಮಿಸುನಿಯಲ್ಲಿ ತಯ್ಯಾರಾದ ಬಂಗಾರಕ್ಕೆ ಒರೆಗಲ್ಲ ಹಂಗೇಕೆ ? ಬಂಗಾರ ತೆಗೆಯುವ ಗಣಿಯಲ್ಲಿ ತಯ್ಯಾರಾದ ಸಿದ್ಧವಾದ ಬಂಗಾರಕ್ಕೆ ಒರೆಗಲ್ಲಿಗೆ ತಿಕ್ಕಿನೋಡುವದೇಕೆ ? ಆವುದು ಟಂಕದಿಂದುಕ್ತವಾದ ಬಂಗಾರವದೆ, ಅದನ್ನು ಒರೆಗಲ್ಲಿಗೆ ತಿಕ್ಕಿ ನೋಡುವುದು ಸಹಜವಾಗಿದೆ. ಹಾಗೆ ಅರಿದರಿದು ನೋಡಿದ ಅರುಹೃದಯವೆಂಬ ಮಿಸುನಿಯಲ್ಲಿ ತಯ್ಯಾರಾದ ಶಬ್ದಮುಗ್ಧವಾಗಿಹ ಅರುವಿಂಗೆ ತನ್ನಿಂದ ತಿಳಿಸಿಕೊಳ್ಳುವ ಹೆತ್ತರುವಿನ ಒರೆಗಲ್ಲು ಏಕೆ ಬೇಕು.

ತಾನಿಲ್ಲದ ಮುನ್ನ ಗುರುವೆಲ್ಲಿಯದು, ಲಿಂಗವೆಲ್ಲಿಯದು, ಜಂಗಮವೆಲ್ಲಿಯದು, ಪ್ರಸಾದವೆಲ್ಲಿಯದು, ಸ್ವಯವೆಲ್ಲಿಯದು, ಪರವೆಲ್ಲಿಯದು, ಗುರುವೆಂದರಿದವನು ತಾನೆ, ಲಿಂಗವೆಂದರಿದವನು ತಾನೆ, ಜಂಗಮವೆಂದರಿದವನು ತಾನೆ, ಪ್ರಸಾದವೆಂದರಿದವನು ತಾನೆ, ಸ್ವಯಪರವೆಂದರಿದವನು ತಾನೆ, ಇವೆಲ್ಲವು ಹೆತ್ತರಿವು ತಾನೆ ಸ್ವಯಂಜ್ಯೋತಿ ಕಲ್ಲೇಶ್ವರಾ ಎಂಬ ಮಹಾತ್ಮರ ಮಹದರುವು. ನಮ್ಮಗಳ ಇರವು ಅರಿವು ಒಂದಾಗಿದೆಯೋ ಹೇಗೆ ಎಂಬುದು ತನ್ನಿಂದ ತನ್ನ ನೋಡಿಕೊಳ್ಳುವುದು, ಈ ಸಮ್ಯಜ್ಞಾನ ಬಿಟ್ಟು ವಚನಗಳ ಕಂಠಪಾಠ ಮಾಡಿ ಸಭೆಗೆ ಒಪ್ಪಿಸಿ ಒಪ್ಪಿಗೆಯಾದರೆ ತೀರಲಿಲ್ಲ, ತಾನು ಹೆತ್ತರಿವು ಆಗಬಾರದು, ತನ್ನಿಂದ ತಿಳಿಸಿಕೊಳ್ಳುವ ಅರಿವು ಆರು ಆಗಿಹರು ಅವರು ಹೆತ್ತರಿವು ಆಗಿಹರು. ಇದು ಕಾರಣ ತಾನು ಸ್ವಯಂಜ್ಯೋತಿಯಾದುದು ಅನುಪಮ, ತನ್ನಿರುವು ಅನುಪಮ. ತನ್ನಿಂದ ತನಗಾದ ಜ್ಞಾನ ಅನುಪಮ ಇಲ್ಲಿ ಹೀಗೆ ಹಾಗೆ ಎನ್ನಲು ಶಬ್ದಕ್ಕೆ ತೆರಹಿಲ್ಲ, ಹೀಗೆ ತನ್ನೊಳು ಅರಿದರಿದು ತನ್ನಿರವು ತನಗೆ ಸ್ವತಃ ಸಿದ್ಧವಾದುದು ಮಿಸುನಿಯ ಚಿನ್ನವಿದ್ದಂತೆ ಅದಕ್ಕೆ ಗುರು, ಲಿಂಗ, ಜಂಗಮ ಪ್ರಸಾದದ ಒಪ್ಪಿಗೆ ಏಕೆ ಬೇಕು ಅಂದರೆ ಒರೆಗಲ್ಲು ಏಕೆ ಬೇಕು.

*ಗುಹೇಶ್ವರ ಲಿಂಗಕ್ಕೆ ಕುರುಹು ಮುನ್ನಂಟೆ :* ಶರಣಂಗೆ ಕುರುಹು ಮುನ್ನಿಲ್ಲ ಏಕೆಂದರೆ ಗುಹೇಶ್ವರ ಲಿಂಗವರಿತುದರಿಂದ ಗುಹೇಶ್ವರ ಲಿಂಗವೆ ತಾನಾದುದಕ್ಕೆ ತನ್ನ ದಿವ್ಯ ದೃಷ್ಟಿಗೆ ಗುರು, ಲಿಂಗ, ಜಂಗಮ, ಪ್ರಸಾದ ಈ ವಿಶ್ವ ಆವುದು ಕುರುಹು ಆಗಿಲ್ಲವೆಂದು ಹೇಳಿಹರು.

**84**

**ಎನ್ನಲ್ಲಿ ನಾನು ನಿಜವಾಗಿ ನಿಮ್ಮನರಿದೆಹೆನೆಂದಡೆ**

**ಅದು ನಿಮ್ಮ ಮತಕ್ಕೆ ಒಪ್ಪುವುದೆ ?**
**ಎನ್ನ ನಾನು ಮರೆದು, ನಿಮ್ಮನರಿದಡೆ,**
**ಅದು ನಿಮ್ಮ ರೂಪೆಂಬೆ,**
**ಎನ್ನ ನಿನ್ನೊಳು ಮರೆದಡೆ, ಕನ್ನಡಿಯೊಳಗಣ ಪ್ರತಿಬಿಂಬದಂತೆ**
**ಭಿನ್ನವಿಲ್ಲದೆ ಇದ್ದೆನು ಕಾಣಾ ಗುಹೇಶ್ವರಾ.** ॥ 427 ॥

**ತಾತ್ಪರ್ಯ :** ಎನ್ನಲ್ಲಿ ನಾನು ನಿಜವಾಗಿ ನಿಮ್ಮನರಿದೆಹೆನೆಂದಡೆ ಅದು ನಿಮ್ಮ ಮತಕ್ಕೆ ಒಪ್ಪುವದೆ : ಬಹು ಆಧ್ಯಾತ್ಮರುಗಳು ಗುರುವಿನಿಂದ ಮಹಾವಾಕ್ಯಗಳ ಶ್ರವಣ ಮಾಡಿ, ಸಾಕ್ಷಿ ನಾನು, ಅಸಂಗ ನಾನು, ಸಚ್ಚಿದ್ರೂಪ ನಾನು, ನಿತ್ಯ ಪೂರ್ಣ ನಾನಿದ್ದೇನೆ. ಏಕೆಂದರೆ ಅರಿಸಿಕೊಳ್ಳುವ ಅನಾತ್ಮ ನಾನಲ್ಲ, ಅರಿಯುವ ಸಚ್ಚಿದ್ರೂಪ ನಾನೆಂದು ನಾನು ನೀವಾಗಿ ಬ್ರಹ್ಮವರಿತೆನೆನ್ನುವರು. ಇವರ ಈ ಅನುಭವ ಪ್ರಭುವಿಂಗೆ ಸಮ್ಮತವಾಗದಿರುವುದರಿಂದ ಎನ್ನಲ್ಲಿ ನಾನು ನಿಜವಾಗಿ ನಿಮ್ಮನರಿದೆನೆಂದಡೆ ಅದು ನಿಮ್ಮ ಮತಕ್ಕೆ ಒಪ್ಪುವುದೆ ಎಂದು ಅರು ಹೃದಯಕ್ಕೆ ಪ್ರಶ್ನಿಸಿಹನು.

ಮಾಯಾ ಕೋಲಾಹಲ ಮಾಡಿದ ಪ್ರಭು ತನ್ನಲ್ಲಿ ಅವಿದ್ಯೆ ಅದರ ಕಾರ್ಯವಾದ ನಾಮರೂಪದಿಂ ರಚಿತವಾದ ಮಾಯಾ ಮೋಹವನ್ನೆ ಕೋಲಾಹಲ ಮಾಡಿದ ಪ್ರಭು ; ಅಂಗ ಸುಖದ ಹಂಗಿನಗಿಲ್ಲ, ನಿನ್ನಂಗ ಜ್ಯೋತಿರ್ಲಿಂಗವ ಮಾಗಳ್ ಆಗ ಎನ್ನಂಗದೋಳ್ ಇಂಬುಂಟು ನೋಡಾ ಗುಹೇಶ್ವರಾ. ಎಂದು ಮಾಯಕ್ಕೆ ಬುದ್ಧಿ ಕಲಿಸಿದ ಬುದ್ಧ, ಸತ್ವಾಂಶೀಸಂಭೂತನಾದ ದೇವ, ನಿವೃತ್ತಿರೂಪ ಮಾದ ವೈರಾಗ್ಯದಿಂದ ನಾನು ಅರಿಯೆ, ಅಲ್ಲಯ್ಯನೆಂಬ ನಾನು ನಿಮ್ಮನ್ನು ತಿಳಿದಿರುವೆನೆಂದರೆ ಅದು ನಿಮಗೆ ಸಮ್ಮತವಾಗಬಹುದೆ ? ಒಪ್ಪಿಗೆಯಾಗಬಹುದೆ ? ಸೀಮಿತನಾಗಿರುವ ನಾನು, ನಿಸ್ಸೀಮನಾಗಿಹ ನೀನು, ನಾಮರೂಪಂಗಳ ಸೇರದ ನಾನು, ರೂಪ ಅರೂಪ ಕಾಣದ ನೀನು, ನಾಮ ಅನಾಮ ಕಾಣದ ನೀನು, ಅನುಪಮ ನೀನು, ನಿಮ್ಮನ್ನು ಈ ಕಲ್ಪಿತನಾದ ಅಲ್ಲಯ್ಯನೆಂಬ ನಾನು, ನಿವೃತ್ತಿರೂಪಿ ಅಭಾಸ ನಾನು ಅದೆಂತು ನಿಮ್ಮನ್ನು ಅರಿಯುವುದು ಅರುವಿನ ಅಭಿಮಾನಿಯಾಗಿ ಅರಿದಿಹೆನೆಂದರೆ ನಿಮ್ಮ ಅರು ಹೃದಯ ಒಪ್ಪುವುದೆ ? ಅರಿಯದರುವೆತ್ತ ? ಅರಿದ ಅರುವೆತ್ತ ? ಏನೊಂದಾಗದ ಘನವೆತ್ತ ? ಆದುದೆತ್ತ ? ಕಲ್ಪಿತನ ಭಾವವೆತ್ತ ? ಅಕಲ್ಪಿತನ ನಿರ್ಭಾವವೆತ್ತ ? ಆಲಂಬನವೆತ್ತ ? ನಿರಾಲಂಬವೆತ್ತ ? ಸೀಮಿತವೆತ್ತ। ನಿಸ್ಸೀಮವೆತ್ತ? ಎತ್ತಣದಿಂದೆತ್ತ.

ಎನ್ನ ನಾನು ಮರೆದು ನಿಮ್ಮನರಿದಡೆ ಅದು ನಿಮ್ಮ ರೂಪೆಂಬೆ. ಇಲ್ಲೆಂಬುದ ಕೊಂಡ ಮಹಾವೈರಾಗ್ಯ ಅಲ್ಲಮ ಅರುವಿನ ಅಹಂಭಾವ ಮರೆತು ನಿಮ್ಮನರಿತಾಗ ಅದು ನಿಮ್ಮ ರೂಪವಾಗುವುದು. ಪ್ರಭು, ಪ್ರಭುವೆ ! ಪ್ರವೃತ್ತಿ ರೂಪಮಾದ ಜಗವನ್ನೆ ಸೇರದವನು ಎಂದು ತಿಳಿಯಬಾರದು. ನಿವೃತ್ತಿ ರೂಪಮಾದ ತೂರ್ಯಜ್ಞಾನವನ್ನು ಸೇರದಾತ, ಪ್ರಕೃತಿ ಪುರುಷರೆಂಬುದನ್ನೆ ಒಪ್ಪದಾತ, ಮಹಾವಾಕ್ಯಗಳ ಒಪ್ಪದಾತ, ಶೃತಿ ಸ್ಮೃತಿಗಳನ್ನೆ ಒಪ್ಪದ ಸ್ವಮಹಿಮ, ನಿಃಶಬ್ದವೇದಿಯು. ಎನ್ನ ನಾನು ಮರೆದು ನಿಮ್ಮನರಿದಡೆ ಅದು ನಿಮ್ಮ ರೂಪೆಂಬೆ ಎಂದು ಹೇಳಿಕೊಂಡಿಹನು.

ಪಿಂಡಾಂಡ, ಬ್ರಹ್ಮಾಂಡ ಮರೆತ ಪ್ರಭು, ನರರ ಸುರರ ಮರೆತ ಪ್ರಭು. ದೇವಗಣ, ರುದ್ರಗಣ, ಪ್ರಮಥ ಗಣವನ್ನೆ ಮರೆತ ಪ್ರಭು. ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾ ಮಹಿಮರ ಮರೆತ ಪ್ರಭು. ಸೀಮಿತ ಜ್ಞಾನವನ್ನೆ ಮರೆತ ಪ್ರಭುವಾದುದರಿಂದ ಎನ್ನ ನಾನು ಮರೆದು ಎಂದು ಹೇಳಿಕೊಂಡು ನಿಮ್ಮನರಿದಡೆ ಅದು ನಿಮ್ಮ ರೂಪೆಂಬೆ ಎಂದು ಹೇಳಿದುದು ನೋಡಿದಡೆ ಪ್ರಭು ಅಖಂಡಿತ ಘನ ಪರಿಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಘನವಂತನಾದುದರಿಂದ ನಿಮ್ಮನರಿದಡೆ ನಿಮ್ಮ ರೂಪೆಂಬೆ ಎಂದು ಹೇಳಿಕೊಂಡುದು ಯತಾರ್ಥವಾಗಿಹುದು. ಪ್ರಭು ನಿಜೈಕ್ಯ ಲಿಂಗೈಕ್ಯನಾದುದರಿಂದ ನಿಜವೆಂಬುದನ್ನೆ ತನ್ನೊಳುಲೀನ ಮಾಡಿದಾತ. ಲಿಂಗ, ಲಿಂಗವೆಂಬುದನ್ನೆ ಲೀನ ಮಾಡಿದ ಮಹಿಮನು. ಉಪಮಿಸಲಿಲ್ಲಾಗಿ, ರೂಹಿಸಲಿಲ್ಲಾಗಿ, ಭಾವಿಸಲಿಲ್ಲ, ಭಾವಿಸಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯಲಿಲ್ಲ ದರುಹೆ ತಾನಾಗಿ, ಗುಹೇಶ್ವರನೆಂಬುದು ಬೇರಿಲ್ಲವೆಂದುದು ಪ್ರಭುವಿನ ಪ್ರಸಾದವಾಣಿಯು. ಎನ್ನ ನಾನು ಮರೆದು ನಿಮ್ಮನರಿದೆನೆಂದಡೆ ಅದು ನಿಮ್ಮ ರೂಪೆಂದುದು.

ಎನ್ನ ನಿಮ್ಮೊಳು ಮರೆದಡೆ ಕನ್ನಡಿಯೊಳಗಣ ಪ್ರತಿಬಿಂಬದಂತೆ ಭಿನ್ನವಿಲ್ಲದಿದ್ದೆನು ಕಾಣಾ ಗುಹೇಶ್ವರಾ; ಎನ್ನ, ನನ್ನ ಈ ಕಲ್ಪಿತನಾದ ಅಲ್ಲಯ್ಯನೆಂಬ ಎನ್ನ ಅರಿಯಲಿಲ್ಲದರುವಾದ ನಿಮ್ಮೊಳು ಮರೆದಾಗ ಅಂದರೆ ಅರಿಯದರುವಾಗಿ ನಿಂದುದೆ ನಿಮ್ಮೊಳ ಮರೆದ ಸಂಕೇತ. ಆಗ ಕನ್ನಡಿಯೊಳಗಣ ಪ್ರತಿಬಿಂಬದಂತೆ ಭಿನ್ನವಿಲ್ಲದಿದ್ದೆನು ಕಾಣಾ ಗುಹೇಶ್ವರಾ.

ಕನ್ನಡಿಯೊಳಗಿನ ಪ್ರತಿಬಿಂಬಕ್ಕೂ ಬಿಂಬಕ್ಕೂ ಹೇಗೆ ಒಂದಾಗಿದೆ ಹಾಗೆ, ಅರುಹೃದಯ ರೂಪಿ ಕನ್ನಡಿಯೊಳಗೆ ಅರಿಯದರುವೆ ಬಿಂಬವಾಗಿ ಅರುವೆನ್ನದರುವೆ ಪ್ರತಿಬಿಂಬ ಒಂದಾದುದು, ಅದನೆಂತು ವರ್ಣಿಸುವುದು, ಅದು ಅಗಮ್ಯ, ಅಗೋಚರ, ಅಪ್ರಮಾಣವಾದುದರಿಂದ ಉಪಮಿಸಲಿಲ್ಲಾಗಿ ರೂಹಿಸಲಿಲ್ಲ, ಭಾವಿಸಲಿಲ್ಲ, ಅರಿಯಲಿಲ್ಲ ಅರಿಯದರುವೆ ತಾನಾಗಿ ಭಿನ್ನವಿಲ್ಲದಿದ್ದೆನು ಎಂದು ಹೇಳಿಹರು.

ಪ್ರಭುವಿನ ದೃಷ್ಠಾಂತ, ದ್ರಷ್ಟಾಂತವು. ಅತ್ಯಂತ ಘನಕ್ಕೆ ಘನವಾದುದು. ಕನ್ನಡಿಯೊಳಗಣ ಪ್ರತಿಬಿಂಬದಂತೆ ಭಿನ್ನವಿಲ್ಲದಿದ್ದೆನು ಎಂದು ಹೇಳಿದುದು ಅಪ್ರಮಾಣವಾದುದು. ಕನ್ನಡಿ ಶಬ್ದಮುಗ್ಧ ಅದು ಕನ್ನಡಿ ಎನಲಿಲ್ಲ, ಅದರೊಳಗಣ ಪ್ರತಿಬಿಂಬವು ಶಬ್ದಮುಗ್ಧ . ಇವೆರಡಕ್ಕೂ ಬಿಂಬ ಭೂತವಾದುದು, ಶಬ್ದಮುಗ್ಧ ಇದರ ದೃಷ್ಟಾಂತವು ಉಪಮಿಸಲು ಬಾರದಂತಾಗಿ ಶಬ್ದಮುಗ್ಧವು. ಅರುಹೃದಯವೆಂಬ ಕನ್ನಡಿ ಅದು ಅರುಹೃದಯವೆನ್ನದೆ ಶಬ್ದಮುಗ್ಧವಾಗಿಹುದು, ಅರುಹೃದಯದಲ್ಲಿ ಪ್ರತಿಫಲಿತವಾದ ಪ್ರತಿಬಿಂಬರೂಪಿ ಅರುವೆನ್ನದರುವು ಶಬ್ದಮುಗ್ಧವಾಗಿಹುದು. ಬಿಂಬಭೂತವಾದ ಅರಿಯಲಿಲ್ಲದರುವು ಶಬ್ದಮುಗ್ಧವಾಗಿಹುದು. ಇದು ಮೌನ ಮುದ್ರಿತವು. ಇದು ಮುನ್ನ ಮುನ್ನವೆ ಮೌನವಾಗಿಹ ಮೌನ ಮುದ್ರಿತ. ನಿಮ್ಮನರಿದ ಘನವಾದುದರಿಂದ ನಿಮ್ಮ ರೂಪವು ಇದು ಎನ್ನಮರೆತು ನಿಮ್ಮ ಘನವಾಗಿಹ ಮಹಾ ಘನವು ಆಗಿ ಭಿನ್ನವಿಲ್ಲದಿದ್ದೆನು. ನಿಮ್ಮಯ ಇರುವುಳ್ಳ ಅರಿವು ಗಮನವಿಲ್ಲದೆ ಸುಳಿದಾಡಿ ನಿರ್ಗಮನಿಯಾಗಿ ನಿಂತ ಹಿರಿಮೆ ಅದಾರು ವರ್ಣಿಸುವುದು ವರ್ಣಿಸುವುದೆಂದರೆ ಸೋಜಿಗ.

85

**ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ !**
**ಇದೇನು ಸೋಜಿಗ ಹೇಳಾ ?**
**ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ,**
**ದೇವ ಬಂದಡೆ ದೇಗುಲ ಓಡಿತ್ತ ಕಂಡೆ-ಗುಹೇಶ್ವರಾ.** || 429 ||

**ತಾತ್ಪರ್ಯ :** *ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ :* ಏನು ಸೋಜಿಗ ಹೇಳಾ, ಪರಿಮಳವಿದ್ದಲ್ಲಿ ತುಂಬಿ ಓಡಿ ಬರುವುದು ಸಹಜ. ಅದರ ಸುವಾಸನೆ ಹೀರುವುದು ಅದಕ್ಕೆ ಬಹು ಇಷ್ಟ. ಇಲ್ಲಿ ತುಂಬಿ ಬಂದಡೆ ಮಕರಂದವ ಓಡಿತ್ತು ಕಂಡುದು ಇದೆಂಥ ಸೋಜಿಗ, ಇದೆಂಥ ನಿಕಟ ಸಂಬಂಧ, ಈ ಸಂಬಂಧದ ಸಂಬಂಧವನಾರು ಬಲ್ಲರು, ಇದೆಂಥ ತುಂಬಿ, ಇದೆಂಥ ಪರಿಮಳ, ಲೋಕ ದೃಷ್ಟಿಗೆ ಇದು ಬಹು ವಿರೋಧವಾಗಿ ಭಾಸಿಸುವುದರಿಂದ ಸೋಜಿಗವಾಗಿದೆ.

ತುಂಬಿ ಇದಾವ ತುಂಬಿ, ಪರಿಮಳ ? ಇದಾವ ಪರಿಮಳ ? ದೇವ ಲೋಕ, ಮರ್ತ್ಯಲೋಕದಲ್ಲಿಲ್ಲದ ತುಂಬಿ, ದೇವತಾ ದೈತ್ಯರಿಂದ ಮಾನವರಿಂದ ಜನಿಸದ ತುಂಬಿ, ತಪಸ್ವಿ, ತ್ಯಾಗಿಗಳ ಲೋಕದಲ್ಲಿಲ್ಲದ ತುಂಬಿ, ಪರಮಾರ್ಥ ಸುಖಕ್ಕಾಗಿ ಹೊರಬಂದ ತುಂಬಿ, ಘನ ಪುರುಷಾರ್ಥ ಸುಖದ ಹಂಬಲವುಳ್ಳ ತುಂಬಿ, ಲಿಂಗಾಂಗ ಸಮರಸ ಜ್ಞಾನದ ಹಸಿವುಳ್ಳ ತುಂಬಿ, ಸುಜ್ಞಾನಸುಖಕ್ಕಾಗಿ ಬಂದ ತುಂಬಿ, ಅರುವಿನರುವಿಗಾಗಿ ಬಂದ ತುಂಬಿ, ಅನಿತ್ಯ ಸುಖವ ಸೇರದ ತುಂಬಿ, ಶರಣರ ಸೂಳ್ನುಡಿಗಾಗಿ ಬಂದ ತುಂಬಿ, ಮುಕ್ತಾಯಕ್ಕನೆಂಬ ತುಂಬಿ, ಸಿದ್ಧರಾಮನೆಂಬ ತುಂಬಿ, ಜಿಜ್ಞಾಸು ತುಂಬಿ, ಶಿಷ್ಯರೆಂಬ ತುಂಬಿ, ಕಳವಳದ ತುಂಬಿ, ಸಮ್ಯಜ್ಞಾನಕ್ಕಾಗಿ ಬಂದ ತುಂಬಿ.

ಪರಿಮಳ ? ಇದಾವ ಪರಿಮಳ ? ಇದು ಸಸ್ಯಜಾತಿಯಿಂದ ಪ್ರಕಟವಾದ ಪರಿಮಳವಲ್ಲ . ಇದು ಘನ ಮರ, ಸರಳ ಲಭ್ಯವಾಗುವ ಮರವಲ್ಲ, ಅನಂತ ನಿಷ್ಕಾಮ ಪುಣ್ಯದಿಂದ ತುಂಬಿಗಳ ಮನೋರಥವ ಪೂರ್ತಿ ಮಾಡಲು ತಾನಾಗಿ ಓಡೋಡಿ ಬರುವ ದಯಮಯವಾಗಿಹ ಘನಮರ. ಘನಾನಂದದಿಂದ ಘಮ ಘಮಿಸುವ ಘನಕ್ಕೆ ಘನವಾದ ಮಹಾಮರ. ಈ ಮಹಾದರುವು, ನಿರಂತರ ಮಕರಂದದಿಂದ ಘಮ ಘಮಿಸುವುದು.

ಭರಿತ ಭಾವರೂಪಿ ತುಂಬಿ ಮರ್ತ್ಯಕ್ಕೆ ಬಂದಡೆ, ಅದರ ಲಾಲನೆ ಪಾಲನೆಗಾಗಿ ತಾನೆ ಓಡೋಡಿ ಬರುವ ಪರಿಮಳದ ಘನವ ಅದಾರು ವರ್ಣಿಸುವುದು, ಈ ಸಂಬಂಧದ ಸಂಬಂಧ ಅದಾರು ಗುರುತಿಸುವುದು, ಈ ಹೃದಯ ಪ್ರೇಮ ಅದಾರು ಗುರುತಿಸುವುದು, ಮುಕ್ತಾಯಕ್ಕನೆಂಬ ತುಂಬಿ ಬಂದಡೆ ಪ್ರಭುವೆಂಬ ಪರಿಮಳ ಓಡಿತ್ತು. ಎಲ್ಲಿಯ ತುಂಬಿ, ಎಲ್ಲಿಯ ಪರಿಮಳ, ಎಲ್ಲಿ ಕೂಸಿನ ಕೊರಗು, ಕೂಸಿನ ತಲ್ಲಣ, ಕೂಸಿನ ದುಃಖ ಅಲ್ಲಿ ತಾಯಿ ಓಡೋಡಿ ಬಂದಿತ್ತು.ಇದೆಂಥ ಕರುಣಾರಸ, ಹೃದಯದ ಕಕ್ಕುಲತೆ, ಮುಕ್ತಾಯಕ್ಕನೆಂಬ ಕೂಸು ಅಳುವುದು ಕಂಡು ಪ್ರಭುವೆಂಬ ತಾಯಿ ಓಡೋಡಿ ಬಂದಿತ್ತೆ ? ಇದೆಂಥ ಕೂಸು ತಾಯಿಯ ಹೃದಯ ಪ್ರೇಮ ಅದಾರು ಗುರುತಿಸುವುದು.

ಬಸವರಸನೆಂಬ ತುಂಬಿ ಕಲ್ಯಾಣಕ್ಕೆ ಬಂದಡೆ, ಶರಣರ ಗಣ ತಿಂಥಿಣಿಯನ್ನೊಡಗೂಡಿ

ಪ್ರಭುವೆಂಬ ಪರಿಮಳ ತುಂಬಿ ಇದ್ದಲ್ಲಿಯೆ ಓಡೋಡಿ ಬಂದುದು ಸೋಜಿಗ. ಸಿದ್ಧರಾಮನೆಂಬ ತುಂಬಿ ಸೊನ್ನಲಾಪುರಕ್ಕೆ ಬಂದಡೆ ಪ್ರಭುವೆಂಬ ನಿಜೈಕ್ಯ ಜಂಗಮ ರೂಪಿ ಪರಿಮಳ ಅದು ಸೊನ್ನಲಾಪುರಕ್ಕೆ ಓಡಿದುದು ಆಶ್ಚರ್ಯ ನೋಡಾ! ಭಕ್ತರಿದ್ದಲ್ಲಿ ಜಂಗಮವು ಓಡಿ ಬರುವುದೆಂದರೆ ಇದೆಂಥ ಆಶ್ಚರ್ಯ, ಸೇವಕರಿದ್ದಲ್ಲಿ ಸ್ವಾಮಿ ಓಡಿ ಬರುವುದೆಂದರೆ ಇಂದೆಂಥ ಸೋಜಿಗ!

ಜಗವಿದ್ದಲ್ಲಿ ಜಗದೊಡೆಯ ಓಡಿ ಬರುವುದೆಂದರೆ ಇದೆಂಥಾ ಸೋಜಿಗ, ಭಕ್ತರಿದ್ದಲ್ಲಿ ಜಂಗಮ ಘನ ಓಡಿ ಬರುವುದೆಂದರೆ ಇದೆಂಥಾ ಸೋಜಿಗ, ಹಸಿವು ಇದ್ದಲ್ಲಿಗೆ ತೃಪ್ತರೂಪ ತೃಪ್ತಿಯ ಪ್ರಸಾದ ತಾನೆ ಓಡೋಡಿ ಬಂದಿತೆ ? ಇದೆಂಥ ನಿಕಟ ಸಂಬಂಧ, ಶರಣರ ಹಸಿವು ಶರಣರೆ ಬಲ್ಲರು, ಅನುಭಾವಿಗಳ ಕೊರಗು ಘನ ಶರಣನೆ ಬಲ್ಲನು, ಲೋಕವೇನು ಬಲ್ಲದು, ಅದಕ್ಕಾಗಿ ಇದು ಸೋಜಿಗವಾಗಿದೆ ನೋಡಾ.

ಮನ ಬಂದಡೆ ಬುದ್ಧಿ ಓಡಿತ್ತು ಕಂಡೆ : ಇದಾವ ಮನ ಬಂದಡೆ, ಇದಾವ ಬುದ್ಧಿ ಓಡಿತ್ತು ಕಂಡೆ, ಶರಣ ಮನ, ಲಿಂಗಾಂಗ ಸಮರಸ ಜ್ಞಾನದ ತವಕವುಳ್ಳಮನ ಬಂದಡೆ ಅಖಂಡ ಜ್ಞಾನ ಅಖಂಡ ಭಾವ ಓಡಿತ್ತು ಕಂಡೆ, ದಾಸೋಹಂ ಭಾವವುಳ್ಳ ಮನ ಬಂದಡೆ ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನರೂಪಿ ಪ್ರಭು ಓಡಿ ಬಂದದ್ದು ಕಂಡೆ. ನೆನಹುಳ್ಳ ಮನ ಬಂದಡೆ ನೆನಹಿಂಗೆ ನಿಲುಕದ ನಿರ್ಣಯಕ್ಕೆ ಮೀರಿದ ಪರವಸ್ತು ಓಡೋಡಿ ಬಂದುದು ಕಂಡೆ. ಇದೆಂಥ ಭಕ್ತ ಹೃದಯ! ಇದೆಂಥ ಜಂಗಮ ನಿಲಯ! ಅಖಂಡ ಮನ, ಅಖಂಡ ಭಕ್ತಿ, ಅಖಂಡ ಭಾವರೂಪಿ ಮನ ಬಂದಡೆ ನುಡಿಗೆಡೆಗೊಡದ ಘನವು ಓಡಿ ಬಂದಿತ್ತೆ ? ನಡೆನುಡಿಗೆಟ್ಟ ಪರಿಪೂರ್ಣ ಓಡಿ ಬಂದಿತ್ತೆ ? ನಿಶಬ್ಧವೇದಿಯಾಗಿಹ ಸುಜ್ಞಾನರೂಪಿ ಸುಬುದ್ಧಿ ಓಡಿಬಂದಿತ್ತೆ.

ದೇವ ಬಂದಡೆ ದೇಗುಲ ಓಡಿತ್ತು ಕಂಡೆ: ಇದೆಂಥ ಸೋಜಿಗ ಭರಿತ ಭಾವವುಳ್ಳದೇವ ಬಂದಡೆ ಸರ್ವಾಂಗ ಲಿಂಗಿಯಾಗಿಹ ದೇಗುಲ ಓಡಿತ್ತು ಕಂಡೆ. ಅಜ್ಞಾನ ಸುಜ್ಞಾನ ನೀನೆ ದೇವ, ಶಿವಶಕ್ತಿ ನೀನೆ ದೇವ, ಪೂಜ್ಯ ಪೂಜಕನೆಂಬ ಭರಿತ ಭಾವ ದೇವ ಬಂದಡೆ ತನುವಿಂಗೆ ತನುವಾಗಿಹ ಪ್ರಾಣದ ಪ್ರಾಣವಾಗಿರುವ, ಮನದ ಮನವಾಗಿಹ, ಅರುವಿಂಗರುವಾಗಿಹ ಸರ್ವಾಂಗ ಲಿಂಗಿಯಾಗಿಹ ಜಂಗಮನೆಂಬ ದೇಗುಲ ಓಡಿತ್ತು ಕಂಡೆ ಸುಮನ ಬಂದಡೆ ಸುಬುದ್ಧಿ ಓಡಿ ಬಂದುದು ಕಂಡೆ. ದೇವ, ನಿರಾಲಂಬ ದೇವ, ಗುಹೇಶ್ವರನೆಂಬ ಅನಿಮಿಷನೆಂಬ ದೇವ ಬಂದಡೆ ಕಾಯ ಒಂದು, ಪ್ರಾಣ ಒಂದು, ಮನ ಒಂದು, ಭಾವ ಒಂದು, ಅನುಭಾವ ಒಂದು ಈ ಒಂದು ಒಂದಾಗಿದ್ದ ತೆರಹಿಲ್ಲದ ಜ್ಞಾನರೂಪಿ ಜಂಗಮ ದೇಗುಲ ಓಡಿ ಬಂದುದು ಕಂಡೆ ಗುಹೇಶ್ವರಾ ಎಂದು ಹೇಳಿಹರು.

**86**

**ರಂಗ ಒಂದೇ ಕಂಭ ಒಂದೇ ದೇವರೊಂದೇ ದೇಗುಲ ಒಂದೇ,**
**ಗುಹೇಶ್ವರಾ ನಿಮ್ಮ ಮನ್ನಣೆಯ ಶರಣರ ದೇವರೆಂದೆಂಬೆ.** ॥ 430 ॥

**ತಾತ್ಪರ್ಯ** : *ರಂಗವೊಂದೆ, ಕಂಭ ಒಂದೆ, ದೇವನೊಂದೆ, ದೇಗುಲ ಒಂದೆ :*

ಎಲ್ಲೆಲ್ಲೂ ಒಂದೆ ಕಾಣುವ ದೇವಾಲಯಗಳಿವೆ, ನೋಡುವವರ ದೃಷ್ಟಿ ದೋಷವಿದ್ದುದರಿಂದ ಒಂದಾಗಿ ಕಾಣುವ ಭಾಗ್ಯವಿಲ್ಲವಾಗಿದೆ. ರಂಗ ಮಧ್ಯ ಬೇರೆ ? ಕಂಭ ಬೇರೆ, ದೇಗುಲ ಬೇರೆ, ದೇವ ಬೇರೆ, ಹೀಗೆ ಭೇದ ದೃಷ್ಟಿಯುಳ್ಳವರಾಗಿ ನೋಡುವ ಸಂಖ್ಯೆಯೆ ಬಹಳವಿದೆ. ಒಂದಾಗಿ ಕಾಣುವರೆಂದರೆ ಶರಣರು. ಅವರು ರಂಗ, ಕಂಭ, ದೇವ, ದೇಗುಲ, ಒಂದಾಗಿ ಕಂಡರು, ಆರು ಒಂದಾಗಿ ಕಂಡಿಹರು, ಅವರು ಮೂಲವ ನೋಡಿಹರು, ಮಧ್ಯ ರಂಗದ ಮೂಲ ಕಂಭದ ಮೂಲ ಒಂದೆ, ದೇಗುಲ ಮೂಲ ದೇವನ ಮೂಲ ಒಂದೆ, ಸಕಲದರ ಮೂಲವಾವುದು, ಅದು ಶಬ್ದಮುಗ್ಧವು, ಈ ಶಬ್ದ ಮುಗ್ಧ ರಹಸ್ಯ ಶರಣರು ಬಲ್ಲರು.

ರಂಗ, ಕಂಭ, ದೇವ, ದೇಗುಲ ಒಂದಾಗಿ ಕಂಡುದು ಘನಕ್ಕೆ ಘನ ನೋಡಾ. ಎರಡೊಂದಾದುದು ಅವರ್ಣನೀಯವು. ಶಬ್ದಕ್ಕೆ ತೆರಹಿಲ್ಲ .ಒಂದಾಗಿ ಕಂಡ ರಂಗ ಒಂದಾಗಿ ಕಂಡ ಕಂಭ, ಒಂದಾಗಿ ಕಂಡ ದೇಗುಲ, ಒಂದಾಗಿ ಕಂಡ ದೇವ, ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗವ ಕೂಡಿ ಅಚಲಾನಂದದೊಳಿಪ್ಪನ ತೀರ್ಪಿಗೆ ಭಾವವಿಲ್ಲ, ಭಾವವಿಲ್ಲಾಗಿ ಜ್ಞಾನವಿಲ್ಲ, ಜ್ಞಾನವಿಲ್ಲಾಗಿ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ, ಇಲ್ಲ, ನಿಲ್ಲು ಮಾಣು.

ಒಂದಾದ ಅಭಿನಯ ಶರಣರ ಅಭಿನಯ. ಲಿಂಗವರಿಯ ಹೋಗಿ ತಾನು ಲಿಂಗ ಒಂದಾದ ಅಭಿನಯ. ಈ ಅಭಿನಯ ಅದಾರಿಗೆ, ಅನಿಮಿಷ ದೇವನ ದೃಷ್ಟಿ ಅರಿಯ ಹೋಗಿ ಲಿಂಗವಾದುದು. ಕಂಗಳು ಲಿಂಗನೋಡ ಹೋಗಿ, ಕಂಗಳಂಗವೆ ಲಿಂಗನಿವಾಸವಾದುದು, ಕಂಗಳು ಲಿಂಗದತ್ತಸಾಗಿ, ಲಿಂಗ ಮುಖವಾಗಿಹವು. ಕಂಗಳು ತನ್ನ ಪೂರ್ವ ಸ್ವಭಾವ ಬಿಟ್ಟು ಅಪೂರ್ವ ನೋಟವಾಯಿತೆ, ವಾಙ್ಮನಕ್ಕೆ ಬಾರದ ಅಪ್ರತಿಮ ಲಿಂಗ ನೋಡುವ ನೋಟವಾಯಿತೆ ? ಇದು ಲಿಂಗಯ್ಯನ ನೋಟ ನೋಡ ಹೋಗಿ ನಿಜದಲ್ಲಿರ್ದ ನಿಬ್ಬೆರಗಿನ ಘನ ಸುಖದ್ದಾಯಿತೆ ?

ನೋಡುವುದ ನೋಡಲರಿಯದೆ ಕೆಟ್ಟಿತ್ತೇ ಜಗವೆಲ್ಲ, ನೋಡುವುದ ನೋಡುವುಡೆ ಕೂಡಲಿಲ್ಲ, ಅಗಲಲಿಲ್ಲ ; ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿ. ಶರಣರು ಲಿಂಗವರಿಯ ಹೋಗಿ ಲಿಂಗ ತಾನು ಒಂದಾದ ನೋಟ, ನೋಡದ ನೋಟ, ಇದು ಕೂಡಿ ಅಗಲುವ ನೋಟವಲ್ಲ, ಕೂಡದಗಲದ ನೋಟ. ಲಿಂಗವಾಗಿಹ ನೋಟ, ಅನಿಮಿಷ ನೋಟ, ಅನುಪಮ ನೋಟವೆಂದು ಹೇಳಿದೆ.

ಶ್ರೋತೃ ಸೊಗಸಿನ ಘನಾನುಭವದಲ್ಲಿಹ ಶ್ರೋತೃ, ಜ್ಞಾನೇಂದ್ರಿಯಂಗಳ ಸಮುದಾಯ ಲಿಂಗದತ್ತ ಸಾಗಿ ತಮ್ಮ ಮೂಲದಿರುವುಳ್ಳ ಶಬ್ದಮುಗ್ಧವಾಗಿಹ ಅಕ್ಷಯ ಸುಖದತ್ತ ಸಾಗಿಹವು ನೋಡಾ. ಸುಖದ ಸುಖಿಯಾಗಿ ಘನಾನುಭವದಲ್ಲಿದ್ದುದು ರಂಗ ಒಂದೆ, ಕಂಭ ಒಂದೆ, ದೇವ ಒಂದೆ, ದೇಗುಲ ಒಂದೆ ಒಂದಾದುದು. ಇದು ಶರಣರ ಮನ್ನಣೆಯ ದೇವರೆಂಬೆ. ಇದು ಲಿಂಗವರಿಯ ಹೋಗಿ ಲಿಂಗವಾಗಿಹ ಜ್ಞಾನೇಂದ್ರಿಯಗಳ ಜ್ಞಾನಾರ್ಜನೆ. ಇದು ಲಿಂಗಾರ್ಚನೆ. ಇಲ್ಲಿ ಅರ್ಪಿತ, ಅರ್ಚನೆಗೆ ಇಂಬಿಲ್ಲ, ಮನಲಿಂಗವಾಗಿಹ ಘನ ಅದನೆಂತು ಹೇಳುವುದು, ಕಲ್ಪಿತ ಮನಕೆಟ್ಟು ಅಕಲ್ಪಿತ ಘನವಾದುದು ಅದೆಂತು ಹೇಳುವುದು, ಓಹೊ ! ಎಲೆ ಮನವೆ ನೀನು ಸುಮನವಾದೆಯಾ, ನೆನಹೆ ನಷ್ಟವಾಗಿ ನೆನೆಯದಂತಾದ ಘನವ ಅದೆಂತು ಬಣ್ಣಿಸುವುದು. ಭಾವಕ್ಕಗಮ್ಯವಾದುದು ಭಾವಿಸುವುದದೆಂತು. ನಿರ್ಭಾವವು ಭಾವಕ್ಕೊಳಪಡಬಹುದೆ ? ರಂಗವು ಭಾವಕ್ಕಗಮ್ಯವು, ಕಂಭವು ಭಾವಕ್ಕಗಮ್ಯವು ಅದನ್ನು

ಅರಿಯ ಹೋದುದು ನಿರ್ಭಾವವು ಈ ಒಂದಾದುದು ದೇವನೊಂದೆ. ದೇವನೊಂದೆ ಅಪ್ರತಿಮ. ದೇವನಿಗೆ ಅಗೋಚರ, ದೇಗುಲ ಒಂದಾದುದು. ಇದನ್ನು ಕಂಡವರು ಶರಣರು.

ಇದು ಶರಣರಿಗೆ ಮನ್ನಣೆಯು, ಅನುಭಾವ ಅನುವು, ತಾನು ಒಂದಾದ ನಿಲುವು, ಅಪ್ರತಿಮ ದೇವರನ್ನು ಕಂಡು ತಾನು ಅಪ್ರತಿಮನಾದುದು ಅಗೋಚರ ದೇಗುಲವ ಕಂಡು ತಾನು ಅಗೋಚರ ದೇಗುಲವಾಗಿಹನು. ಇದು ಅರುವ ಅರಿಯ ಹೋದ ಘನವಂತರ ಹಿರಿಮೆ. ಘನವಂತನ ಅನುಭಾವ ಅನುವು ಇದು ನಿಶಬ್ದವೇದಿಗಳ ನಿಲುವು, ಒಂದಾದ ನಿಲುವು, ರಂಗವು ನಿಶಬ್ದವಾಗಿಹ ಘನ, ಕಂಭವೂ, ನಿಶಬ್ದವಾಗಿಹ ಘನವು, ದೇವನು ನಿಶಬ್ದವಾಗಿಹ ಘನವು, ದೇಗುಲ ನಿಶಬ್ದವಾಗಿಹ ಘನವು, ಶರಣರ ಮನ್ನಣೆ ಎಂಬುದು ಮುನ್ನ ಮುನ್ನವೆ ಇದ್ದಂತಿದ್ದ ಘನವು ಎಲ್ಲೆಲ್ಲೂ ಒಂದೆಯಾಗಿ ಕಂಗೊಳಿಸುವುದು. ದೇಗುಲವು ನಿಶಬ್ದ ಘನವು, ದೇವನು ನಿಶಬ್ದ ಘನವು, ಎಲ್ಲೆಲ್ಲೂ ಒಂದೆಯಾಗಿ ಕಾಣುವ ನಿಶಬ್ದವಾಗಿಹ ಘನವು, ಇದು ಶರಣರ ಮನ್ನಣೆಯ ದೇವನು, ಒಂದಾಗಿ ಕಾಣುವ ದೇವನು, ಅವನು ಇದ್ದಂತಿದ್ದ ಸ್ವಮಹಿಮ.

**87**

**ಆದಿಯಾಧಾರವುಳ್ಳನ್ನಕ್ಕರ ಉಪಚಾರ,**
**ಎರಡೂ ಒಂದಾದಡೆ ಶಿವಾಚಾರ,**
**ಆ ಶಿವಾಚಾರ ಸಯವಾದಡೆ ಬ್ರಹ್ಮಾಚಾರ,**
**ಗುಹೇಶ್ವರನರಿದಡೆ ಅನಾಚಾರ !** ॥ 437 ॥

**ತಾತ್ಪರ್ಯ :** *ಆದಿ ಆಧಾರವುಳ್ಳನ್ನಕ್ಕರ ಉಪಚಾರ :* ಇದು ಆರ ಉಪಚಾರ, ಈ ಸತ್ಕಾರ ಆರದು, ಈ ಶುಶ್ರೂಷೆ ಆರದು. ಅತಿಥಿಗಳು ಮನೆಗೆ ಬಂದರೆ ಮಾಡುವ ಸತ್ಕಾರ ಅಲ್ಲ ; ಇವರು ಮಾಡುವ ಸತ್ಕಾರವೆ ಬೇರೆ, ಇದು ಪ್ರಭುವಿನ ಸತ್ಕಾರ, ಬಸವಾದಿ ಪ್ರಮಥರ ಸತ್ಕಾರ, ಪಿಂಡವನ್ನೆ ಪ್ರಕಾಶಮಯವನ್ನಾಗಿ ಮಾಡುವ ಸತ್ಕಾರ, ಬ್ರಹ್ಮಾಂಡವನ್ನೆ ಪರಬೊಮ್ಮವಾಗಿ ಕಂಡ ಸತ್ಕಾರ, ಅತಿಥಿಗಳು ಯಾರು, ಪುರುಷಾರ್ಥ ಹಸಿವುಳ್ಳವರು ಅತಿಥಿಗಳು, ಮುಮುಕ್ಷು ವೃಂದವು ಅತಿಥಿಗಳು, ಜಿಜ್ಞಾಸುಗಳು ಅತಿಥಿ. ತಾನಾರೆಂದು ತನ್ನ ಅರಿಯಬೇಕೆನ್ನುವವರೆಲ್ಲ ಅತಿಥಿಗಳು, ಈ ಅತಿಥಿ ಮಹಾಂತರು, ಮಹಾಮನೆಗೆ ಬಂದರೆ ಮಾಡುವ ಸತ್ಕಾರ ಶುಶ್ರೂಷೆ.

ಶ್ರೀ ಗುರುವಿನ ಮಹಾಮನೆಗೆ ಶಿಷ್ಯನಾಗಿ ಅತಿಥಿ ಬಂದರೆ ಮಾಡುವ ಉಪಚಾರವನೇನೆಂಬೆ. ಇದು ಅರು ಹೃದಯ ಉಪಚಾರ, ಹೃದಯದಿಂ ಹೊರಬರುವ ಜ್ಞಾನೋದಕದಿಂ ಮುಖವ ತೊಳೆಯುವುದು. ಜ್ಞಾನಾಮೃತದಿಂ ಅವರ ಹಸಿವು ನೀಗಿಸಿ ತೃಪ್ತರ ಮಾಡುವುದು. ಈ ಉಣ್ಣದ ಊಟವ ಉಣಿಸುವುದು. ಈ ಉಪಚಾರ ಅಗಮ್ಯ, ಅಪ್ರಮಾಣವು, ಚತುರ್ದಶ ಭುವನಂಗಳಲ್ಲಿ ಯಾರಾರು ಮಾಡದ ಸತ್ಕಾರ ಸೇವೆ, ಇದು ಗುರುರಾಯನಲ್ಲಿ ನಡೆಯುವ ಸೇವೆ.

ಆದಿ ಆಧಾರವುಳ್ಳನ್ನಕ್ಕರ ಉಪಚಾರ, ರೂಪ ನಿರೂಪ ಮಾಡುವುದು, ತನುವ

ಅನುವು ಮಾಡುವುದು, ಆಚಾರ ವಿಚಾರಕ್ಕೆ ತರುವುದು. ತೋರುವುದೆಲ್ಲ ಗುರು ಗುಹೇಶ್ವರ ಮಾಡುವುದು. ಗುರು ಸೇವೆ ತನ್ನಂತೆ ಮಾಡುವ ಸತ್ಕಾರವು. ಅತಿಥಿಯ ಆದಿಯ ಪರಿಚಯ ಮಾಡಿಕೊಟ್ಟ ಶ್ರೀಗುರು. ಆದಿಯೆಂದರೆ ಮುನ್ನವೆ ಇದ್ದ ಘನ. ಸೃಷ್ಟಿಗಿಂತ ಮುನ್ನ ದೇವಗಣ, ರುದ್ರ ಗಣ, ಪ್ರಮಥ ಗಣ, ಶಂಕರ, ಶಶಿಧರ, ಈಶ್ವರ, ಸದಾಶಿವರುಗಳಿಗಿಂತ ಮುನ್ನ ಇದ್ದುದ ಪರಿಚಯ ಮಾಡಿಕೊಟ್ಟುದು ಆದಿ ಲಿಂಗ. ಅತಿಥಿ ಸಮೂಹವನ್ನೇ ಆದಿ ಲಿಂಗವ ಮಾಡಿದ ಮಹಾಗುರುವಿನ ಉಪಚಾರ ಸಾಮಾನ್ಯವೆ ? ಸಕಲಕ್ಕೂ ಲಿಂಗವೇ ಆದಿ, ಲಿಂಗವೇ ಆಧಾರವೆಂದು ತಿಳಿಸಿಕೊಟ್ಟ ಜ್ಞಾನರೂಪ ಸತ್ಕಾರ ! ಇದೆಂಥ ಸತ್ಕಾರ, ಇದೆಂಥ ಸೇವೆ, ಹೃದಯವನ್ನೇ ತಿರುವು ಮುರುವು ಮಾಡಿದ ಉಪಚಾರ ಅದನೆಂತು ವರ್ಣಿಸುವುದು, ಓಹೊ ! ಮರವುಳ್ಳ ಹೃದಯ ಕೆಡಿಸಿ, ಅರು ಹೃದಯ ಮಾಡಿದ ಘನತೆಗೇನೆನ್ನಬೇಕು ?

ಸ ಬಾಹ್ಯಭ್ಯಂತರೋಸಿ ತ್ವಂ ಶಿವಃ ಸರ್ವತ್ರ ಸರ್ವದಾ ಎಂದು ಉಪಚರಿಸಿದ ಹೃದಯ ಇದೆಂಥ ಹೃದಯ ? ನೀನು ಶಿವಃ, ಸರ್ವತ್ರ ಸರ್ವದಾ, ಒಳಗೆ ಮತ್ತು ಹೊರಗೆ ವ್ಯಾಪಿಸಿರುವುದರಿಂದ ನೀನೇ ಆದಿ, ನೀನೇ ಆಧಾರನೆಂದು ಒಂದುಗೂಡಿಸುವುದು ಸಾಮಾನ್ಯವೇ ? ನಿಜವಾಗಿ ನೀನು ಅವ್ಯಯ, ಎಲ್ಲದರಲ್ಲಿಯೂ ನೀನೇ ಸಮನಾಗಿರುವೆ, ನಿನ್ನ ಕಾಂತಿಗೆ ಕುಂದಿಲ್ಲ, ನೀನು ಯಾವಾಗಲೂ ಉದಿತನಾಗಿರುವೆ. ನಿನಗೆ ಅಸ್ತವಿಲ್ಲ, ಕತ್ತಲೆ ಬೆಳಕನ್ನು ಕುರಿತು ಅಲೋಚಿಸುವುದೇಕೆ ? ಎಂದು ಜ್ಞಾನಾಮೃತದ ಸೇವೆ ಮಾಡಿದುದು ಸಾಮಾನ್ಯವೆ ? ಇಂತಪ್ಪ ಮಹಾಂತರ ಮಹಾನುಭವ ರೂಪ ಸೇವೆ ದೊರೆತಾಗ, ಸಹಜ ಶಿವಾಚಾರ, ಘನತ್ವ ಭಕ್ತ ಆಗುವುದು.

*ಎರಡೂ ಒಂದಾದಡೆ ಶಿವಾಚಾರ :* ಈ ಶಿವಾಚಾರ ಶ್ರೀಗುರುವಿನಿಂದ ಲಭ್ಯವಾಗಿರುವ ಶಿವಾಚಾರ, ಸೃಷ್ಟಿಗಿಂತ ಪೂರ್ವದಲ್ಲಿದ್ದವ ಆದಿ, ಸೃಷ್ಟಿಗೆ ಆಧಾರವಾದವನು ಅವನೆ, ಆದಿಯಾದುದು ಅದುವೆ ಆಧಾರವಾದುದು ಅದುವೆ, ಒಳಗೆ ಅದುವೆ, ಹೊರಗೆ ಅದುವೆ, ಅಂತರ, ಬಹಿರ ಎನ್ನದೆ ಭರಿತವಾದುದು. ಅದುವೆ ಅಂದರೆ ಶಿವ, ಶಿವನೆಂದರೆ ತಾನೆ. ಶಿವನಾದ ತನಗೆ ಕತ್ತಲೆಯೂ ಇಲ್ಲ, ಬೆಳಕೂ ಇಲ್ಲ, ಮರವು ಇಲ್ಲ, ಅರುವು ಇಲ್ಲ, ನಿರಂತರ ಬೆಳಗುಳ್ಳ ಶಿವನಿಗೆ ಉದಯವಿಲ್ಲ, ಅಸ್ತವಿಲ್ಲ, ಹೀಗೆ ನಿರಂತರ ಭಾವ ಭರಿತವಾದುದೆ ಶಿವಾಚಾರ. ಇದು ತುಂಬಿ ತುಳಕದ ಶಿವಾಚಾರ, ನಂಬಿದವರ ಆಚಾರ, ಭರಿತ ಭಾವದವರ ಆಚಾರ, ಅದು ಶಿವಾಚಾರ. ಶಿವಾಚಾರ ಸಯವಾದಡೆ ಬ್ರಹ್ಮಾಚಾರ. ಶಿವಚಾರ ತನ್ನದಾಗಬೇಕು, ತಾನಾಗಬೇಕು, ಭರಿತಭಾವ ಹೋಗಿ ಜ್ಞಾನಾಚಾರವಾಗಬೇಕು. ಭರಿತಭಾವವೆಂಬುದು ಶ್ರೀಗುರುವಿನ ಮಹಾನುಭವದಲ್ಲಿ ಅಪಾರ ಶ್ರದ್ಧೆಯುಳ್ಳವರಾದಲ್ಲಿ, ಈ ಶಿವಾಚಾರ ದಕ್ಕುವುದು, ಈ ಶಿವಾಚಾರ ಯಾವಾಗ ಅರಿದು ನೋಡುವನೊ ಆಗ ಇದು ತನ್ನದಾಗುವುದು. ತನ್ನದಾಗಿರುವ ಆಚಾರವೆ ಬ್ರಹ್ಮಾಚಾರವೆಂದು ಹೇಳಿದೆ.

*ಶಿವಾಚಾರ ಸಯವಾದಡೆ ಬ್ರಹ್ಮಾಚಾರ :* ಶಿವಾಚಾರ ತನ್ನದಾದುದು ಬ್ರಹ್ಮಾಚಾರ, ಒಳಗೂ ತಾನೆ, ಹೊರಗೂ ತಾನೆ, ಒಳಹೊರಗೂ ಭರಿತನಾದವ ತಾನೆ, ತನ್ನ ಕಾಂತಿಗೆ ಕುಂದಿಲ್ಲ, ನಿರಂತರ ಉದಯರೂಪ ತಾನೆ, ತನ್ನಲ್ಲಿ ಕತ್ತಲೆ ಬೆಳಕನ್ನು ಕುರಿತು, ಇಂಬಿಲ್ಲದಿರುವಲ್ಲಿ , ಶಿವನೆಂದರೆ ತಾನು, ತಾನೆಂದರೆ ಶಿವ, ಹೀಗಿರುವಲ್ಲಿ ಶಿವ ತಾನೆ, ಅನ್ಯವಾಗಿರಲು ಸಂದೆಲ್ಲಿ, ಅವಕಾಶವೆಲ್ಲಿ ? ಆದಿಯೂ ತಾನೆ, ಆಧಾರನೂ ತಾನೆ,

ಒಳಗಿದ್ದವನು ತಾನೆ, ಎಲ್ಲೆಲ್ಲೂ ತಾನೆ, ಎಡೆಯಿಲ್ಲದ ಪರಿಪೂರ್ಣ ತಾನೆ, ನಿರಂತರ ತಾನೆ, ತನಗೆ ಉದಯವಿಲ್ಲ, ಅಸ್ತವಿಲ್ಲ, ಅಜ್ಞಾನವಿಲ್ಲ, ಜ್ಞಾನವಿಲ್ಲ, ಕೇವಲ ಪರಬ್ರಹ್ಮ ತಾನೆಂಬ ಅರುವು ಪ್ರಜ್ವಲಿಸಿದುದೆ ಬ್ರಹ್ಮಾಚಾರ.

ಗುಹೇಶ್ವರನರಿದಡೆ ಅನಾಚಾರ: ಬಹು ಆಧ್ಯಾತ್ಮ ಪ್ರೇಮಿಗಳು ಸ್ವರೂಪ ಲಕ್ಷಣ ತಿಳಿದುಕೊಂಡವರು ಇರುವರು, ಏನೊಂದುಸರಲು ಬಾರದ ನುಡಿಗೆಡೆಗೊಡದ ಘನವಾಗಿಹ ತನ್ನ ಗುಹೆಯೊಳಗಿರುವ ಘನತತ್ವ ತಿಳಿದವರು ಅಪರೂಪ. ಇದನ್ನು ತಿಳಿದವರೆಂದರೆ ಬಸವಾದಿ ಪ್ರಮಥರು. ಶರಣ, ಶರಣೆಯರು, ಅವರಲ್ಲಿ ಪ್ರಧಾನರೆಂದರೆ ಅಲ್ಲಯ್ಯನು. ಈ ಮಹಾಂತನಿಗೆ ಆದಿ, ಆಧಾರವೆಂಬುದು ಯತಾರ್ಥ ಜ್ಞಾನವಾಗಲಿಲ್ಲ, ಶಿವ ಶಿವವೆನ್ನುವ ಭಾವಭರಿತವು ಯತಾರ್ಥವಾಗಲಿಲ್ಲ, ಕೊನೆ ಪೂರ್ಣ ತಾನೆನ್ನುವ ಅರುವಿನ ಜ್ಞಾನವು ಯತಾರ್ಥವಾಗಲಿಲ್ಲ, ಗುಹೇಶ್ವರ, ಗುಹೇಶ್ವರನೆನ್ನುವುದು ಯತಾರ್ಥ ಜ್ಞಾನವಾಗಲಿಲ್ಲ, ಗುಹೇಶ್ವರನರಿದ ಶರಣಂಗೆ ಇವೆಲ್ಲವೂ ಉಪಚಾರವು, ಉಪಚಾರವಾದುದು ಅನಾಚಾರ, ಶಿವಾಚಾರವು ಅನಾಚಾರ, ಬ್ರಹ್ಮಾಚಾರವು ಅನಾಚಾರವಾಗಿಹುದು ಕೊನೆಗೆ ಗುಹೇಶ್ವರ ಅನ್ನುವುದು ಅನಾಚಾರವಾಗಿಹುದು. ಜ್ಞಾನಾಚಾರಿಗಳು ಸಿಕ್ಕುವರು, ಈ ಜ್ಞಾನಾಚಾರವೆ ಹೆತ್ತರಿವು ಆದವರು ಸಿಕ್ಕುವುದು ವಿರಳ. ಗುಹೇಶ್ವರನ ಅರಿತವನು ಸ್ವಮಹಿಮ, ಅವರು ಯರವಲ ಜ್ಞಾನದಿಂದ ತನ್ನ ಅರಿತವನಲ್ಲ, ತನ್ನಿಂದ ತನ್ನ ಅರಿತವರು, ಅದಕ್ಕಾಗಿ ಸಕಲವೂ ಅನಾಚಾರವಾಗಿಹುದು. ಏಕೆಂದರೆ ಅವರು ಪರತತ್ವದಲ್ಲಿ ತದ್ಗತವಾದವರು.

**88**

**ಪರಮ ಪರ ತತ್ವದಲ್ಲಿ ತದ್ಗತವಾದ ಬಳಿಕ**
**ಬೇರೆ ಮತ್ತೆ ಅರಿದೆಹೆನೆಂಬ ಭ್ರಾಂತೇಕೆ ?**
**ಅರಿವು ಸಯವಾಗಿ ಮರಹು ನಷ್ಟವಾದ ಬಳಿಕ**
**ತಾನಾರೆಂಬ ವಿಚಾರವೇಕೆ ?**
**ಗುಹೇಶ್ವರನ ಬೆರಸಿ ಭೇದಗೆಟ್ಟ ಬಳಿಕ**
**ಮತ್ತೆ ಸಂಗವ ಮಾಡಿಹೆನೆಂಬ ತವಕವೇಕಯ್ಯಾ ?** || 440 ||

**ತಾತ್ಪರ್ಯ** : *ಪರಮ ಪರತತ್ವದಲ್ಲಿ ತದ್ಗತವಾದ ಬಳಿಕ ಬೇರೆ ಮತ್ತೆ ಅರಿದೆಹೆನೆಂಬ ಭ್ರಾಂತೇಕೆ :* ಪರತತ್ವದಲ್ಲಿ ತದ್ಗತವಾದವರು ಇವರಾರು ? ತತ್ವವೆಂದರೆ ಸತ್ಯ ಜ್ಞಾನಾನಂದವು, ಈ ಸತ್ಯಜ್ಞಾನವೆಂಬುದು ಆವುದರಲ್ಲಿ ಲೀನವಾಗುವುದು ಅದುವೆ ಪರತತ್ವ, ಸತ್ಯಜ್ಞಾನವೆಂಬುದು ಅಬಾಧಿತವು, ಅಬಾಧಿತವಾವುದು ಅದು ಜ್ಞಾನವು ಜ್ಞಾನ ಸ್ವರೂಪ, ಜ್ಞಾನಸ್ವರೂಪವಾವುದು ಆನಂದವು, ಸತ್ಯ-ಜ್ಞಾನಾನಂದ ಒಂದೆ. ಸತ್ಯ ಬೇರೆ, ಜ್ಞಾನಬೇರೆ, ಆನಂದ ಬೇರೆಂದು ಕಲ್ಪಿತಕ್ಕೊಳಪಡಿಸಿ ನೋಡಬಾರದು. ಸತ್ಯ ಜ್ಞಾನಾನಂದವು ತೋರಬಾರದ ಘನ, ಇದು ತೋರದಿದ್ದಲ್ಲಿ ಹೇಳಲೆಂದೇನೋ ? ಇದು ಕಾರಣ ಇದು ಕಲ್ಪಿತವಲ್ಲ, ತತ್ವ ಹೇಳುವವರು ಬಹಳ ಅದನ್ನು ತಿಳಿಯ ಹೋದವರು ಬಸವಾದಿ ಪ್ರಮಥರು, ಬಸವರಸರ ಕಾಲದಲ್ಲಿ ಇದ್ದವರು, ಮುನ್ನ ಇದ್ದಿಲ್ಲವೆಂತಲ್ಲ ಇವರು ನಿರಂತರ ಇದ್ದವರು, ಮುನ್ನ

ಮುನ್ನವೆ ಇದ್ದವರು, ಅಂದು ಇದ್ದವರು. ಇಂದು ಇದ್ದವರು, ಎಂದೆಂದೂ ಇದ್ದವರು. ಇವರು ಆಗು ಹೋಗುವನರಿಯರು ನಿಃಶಬ್ದವೇದಿಗಳು.

ಪರತತ್ವದಲ್ಲಿ ತದ್ಗತವಾದವರೆಂದರೆ ನಿಶಬ್ದವೇದಿಗಳು, ಸತ್ಯಜ್ಞಾನಾನಂದವು, ಅಬಾಧಿತವೆಂದು ಅಮರವೆಂದು ಹೇಳುವುದು ನುಡಿಗೊಳಪ್ಪಟುದರಿಂದ ಇದು ಪರತತ್ವವಾಗುವುದಿಲ್ಲ, ಸತ್ಯಜ್ಞಾನವೆಂಬುದು ಆವುದರಿಂದ ಸಿದ್ಧವಾಗುವುದು, ಅದುವೆ ಪರತತ್ವವು, ಅದು ಇದ್ದಂತಿರುವ ನಿರಂತರ. ಈ ಸಂಜ್ಞೆಯ ಅರಿತವರು ಸುಜ್ಞಾನಿಗಳು, ಸತ್ಯ ಜ್ಞಾನವೆಂಬುದು ಯಾರು ಅರಿತಿಹರು, ಅವರು ಸತ್ಯ ಜ್ಞಾನವೆಂಬುದು ಆದವರಲ್ಲ, ಏನೊಂದಾಗದ ಘನವಾವುದು ಅದುವೆ ತಾನಾದವರು, ಪರತತ್ವ ತಾನಾದವರು. ತನ್ನಲ್ಲಿ ತಾನು ತದ್ಗತವಾದುದೆ ಪರತತ್ವದಲ್ಲಿ ಲೀಯವಾದ ಸಂಕೇತ, ತಾನೆ ತಾನಾದುದೆ ಪರತತ್ವದಲ್ಲಿ ಲೀಯವಾದ ಸಂಕೇತ ಕೂಡದಗಲದ ಘನದಿರುವಿನ ಅರುವಾಗಿ ಅರಿಯಲಿಲ್ಲದರುವಾಗಿಹುದೆ ಪರತತ್ವದಲ್ಲಿ ತದ್ಗತವಾದ ಸಂಕೇತ.

ಅರಿಯಲಿಲ್ಲದರುವಿನ ಇರುವೆ ತನ್ನರುವೆಂದರಿದವಂಗೆ ಮತ್ತೆ ತನ್ನ ಅರಿದಿಹೆನೆಂಬ ಭ್ರಾಂತಿ ಎಲ್ಲಿಯದು, ತನ್ನನ್ನು ಮರತೆ ಇಲ್ಲವೆಂದವಂಗೆ ಅರಿತಿಹೆನೆಂಬುದಾದರೂ ಹೇಗೆ ಬರುವುದು, ನಿಶಬ್ದ ಬ್ರಹ್ಮವು ತನ್ನಿರುವು ಆದವಂಗೆ ಈಗ ನನ್ನ ಅರಿದೆನೆಂಬುದು ಅಲ್ಲಿ ಬರದು. ಅದಕ್ಕಾಗಿ ಪರತತ್ವದಲ್ಲಿ ತದ್ಗತವಾದವಂಗೆ ಮತ್ತರಿದಿಹೆನೆಂಬ ಭ್ರಾಂತಿ ಏಕೆ ಎಂದು ಹೇಳಿಹರು.

*ಅರಿವು ಸಯವಾಗಿ ಮರಹು ನಷ್ಟವಾದ ಬಳಿಕ ತಾನಾರೆಂಬ ವಿಚಾರವೇಕೆ ? :* ಅರಿವು ತಾನಾದವನು, ಅರಿವು ತಾನೆನಲಿಲ್ಲ, ಅನ್ನದವಂಗೆ ಅರುವು ತಾನಾಗಿಹನು. ಏಕೆಂದರೆ ಮರಹು ನಷ್ಟವಾದುದರಿಂದ ತಾನಾರೆಂದು ವಿಚಾರ ಮಾಡಲಾರ, ಆರು ವಿಚಾರ ಮಾಡುತ್ತಿಹರು, ಅವರಿಗೆ ಅರಿವು ತನ್ನಿರುವು ಆಗಿರದು, ಇದು ನುಡಿಗೊಳಪಟ್ಟ ಅರುವು ಅಲ್ಲ, ಅರುವೆನ್ನದರುವಿನ ಇರವು ತನ್ನದಾಗಿರುವುದು ಅವರಿಗೆ ಮರಹು ನಷ್ಟವಾಗಿಹುದು. ನಿಶಬ್ದವೇದಿ-ಶಬ್ದ ಸಂಭ್ರಮವುಳ್ಳವನಾಗಬಹುದೆ ? ಶಬ್ದವೇದಿಯು ಒಮ್ಮೆ ಅರುವುಳ್ಳವನಾಗುವನು. ಒಮ್ಮೆ ಮರವುಳ್ಳವನಾಗುವನು. ಅರ್ಥಾತ್ ಅವನ ಮನೋವೃತ್ತಿ ಅಜ್ಞಾನದಿಂದುಕ್ತವಾಗಿ ತನು, ಇಂದ್ರಿ, ಪ್ರಾಣ, ಮನ, ಬುದ್ಧಿಯ ಕಾರ್ಯಗಳಲ್ಲಿ ತಾದಾತ್ಮ್ಯ ಹೋಗಿ ಶೋಕ ಮೋಹವುಳ್ಳವನಾಗುವನು. ಇಷ್ಟಾನಿಷ್ಟ ಬುದ್ಧಿಯಲ್ಲಿ ತಾದಾತ್ಮ್ಯ ಹೊಂದುವನು, ಇದು ಮರವು. ಒಮ್ಮೆ ಜ್ಞಾನದಿಂದುಕ್ತನಾಗಿ ಸಾಕ್ಷಿ, ಸ್ವಯಂ ಪ್ರಕಾಶ ಕೂಟಸ್ಥ, ಸಚ್ಚಿದಾನಂದವೆಂಬ ಅರುವಿನ ಲಕ್ಷಣದಲ್ಲಿ ತಾದಾತ್ಮ ಹೊಂದಿ ಆತ್ಮನ ಅಭಿಮಾನಿಯಾದುದು ಬುದ್ಧಿಯ ಕಾರ್ಯ. ಇಂತಪ್ಪ ಜ್ಞಾನಿಗಳಿಗೆ ಅರಿವು ಸಯವಾಗಿರುವುದಿಲ್ಲ, ಮರಹು ನಷ್ಟವಾಗದ್ದರಿಂದ ಅಲ್ಲಿ ತಾನಾರೆಂಬ ವಿಚಾರ ಉಂಟು. ಏಕೆಂದರೆ ತಾನು ವಾಙ್ಮನೋತೀತವಾಗಿಹ ತನ್ನ ಘನದಿರುವು ಇದ್ದು, ತನ್ನನ್ನು ನೇರವಾಗಿ ತಿಳಿಯಲಿಲ್ಲ, ತಿಳಿಯದ್ದಕ್ಕಾಗಿ ಕಲ್ಪಿತ ಪುರುಷನಾಗಿಹನು. ಆವಲ್ಲಿ ತನ್ನ ಅಕಲ್ಪಿತದ ಘನದಿರುವು ಜಾಗ್ರತವಾಗಿರುವುದು ಇದು ಎಚ್ಚರದ ಎಚ್ಚರ ಇಲ್ಲಿ ವಿಸ್ಮೃತಿ, ಸ್ಮೃತಿಗಳ ಗಜಿಬಿಜಿಯಿಲ್ಲ, ಅದಕ್ಕಾಗಿ ಅರಿವು ಸಯವಾಗಿ, ಮರಹು ನಷ್ಟವಾದ್ದರಿಂದ ತಾನಾರು ಎಂಬ ವಿಚಾರವನ್ನು ಮಾಡನು ಎಂದು ಹೇಳಿಹರು.

*ಗುಹೇಶ್ವರ ಬೆರಸಿ ಭೇದಗೆಟ್ಟ ಬಳಿಕ ಮತ್ತೆ ಸಂಗವ ಮಾಡಿಹೆನೆಂಬ ತವಕವೇಕಯ್ಯ:* ಗುಹೇಶ್ವರನ ಬೆರಸಿದವರಾರು, ಗುಹೇಶ್ವರನ ಅರಿಯ ಹೋದವರು. ಇವರು ಗುಹೇಶ್ವರನ ಆವಲ್ಲಿ ಅರಿಯ ಹೋದರು ? ಗುಹೇಶ್ವರನೆಂಬುದು ಒಂದು ವ್ಯಕ್ತಿಯಲ್ಲ, ಸೀಮಿತಕ್ಕೊಳಪಟ್ಟ ಈಶ್ವರನಲ್ಲ, ಭಾವಕ್ಕು, ನೆನಹಿಂಗೂ, ನುಡಿಗೂ, ಕುರುಹಿಂಗೂ, ಒಳಪಟ್ಟವನಲ್ಲ, ದೇಹವೆಂಬ ಗುಹೆಗೆ ಒಡೆಯನಾಗಿರುವ ಚೈತನ್ಯ ಘನನೆ ಈಶ್ವರನು. ಈ ಚೈತನ್ಯವು ವಾಙ್ಮನೋತೀತವು ನುಡಿಗೆಡೆಗೊಡದ ಘನನು ಎಂಬ ಸಂಜ್ಞೆಯಿಂದ ಯಾರು ಅರಿಯ ಹೋಗಿಹರು ಅವರಿಗೆ ಮಿಗೆ ಮಿಗೆ ಮೀಸಲವಾಗಿಹ ತನ್ನಿರುವೆ ಗುಹೇಶ್ವರನು ಎಂಬುದು ತನ್ನಿಂದ ತನಗೆ ವೇದ್ಯವಾಗಿರುವುದೆ ಗುಹೇಶ್ವರನ ಬೆರಸಿದಂತೆ.

ಘಟದೊಳಿರುವ ಆಕಾಶ ಅದು ತಿಳಿದು ನೋಡುವುಡೆ ಅದು ಆಕಾಶವತ್ ಆಕಾಶವಾಗಿಹುದು. ಅದು ಹೇಗೆ ನಿಸ್ಸೀಮವು ನಿರಾಲಂಬವು, ಶಬ್ದ ಮುಗ್ಧ ಹಾಗೆ ದೇಹವೆಂಬ ಗುಹೆಗೆ ಒಡೆಯನಾಗಿಹ ಚೈತನ್ಯ ಜ್ಞಾನಸ್ವರೂಪ, ಇದು ಅರಿಯ ಹೋಗುವುಡೆ ಚೈತನ್ಯವು, ಚೈತನ್ಯವೆನ್ನದೆ ಶಬ್ದಮುಗ್ಧವು, ತನ್ನಿರುವಿನ ಘನವು ಅದಾವ ಭಾಷೆಯಿಂದ ವರ್ಣಿಸಲು ಅಸಾಧ್ಯವು, ಈ ಮಹಾಂತ ಗುಹೇಶ್ವರನ ಬೆರಸಿ, ಭೇದ ಕೆಟ್ಟಿರುವುದು, ಗುಹೇಶ್ವರ ಬೇರೆ ತಾನು ಬೇರೆಂಬ ಭೇದ ಕೆಟ್ಟು ಹೋಗಿದೆ, ಅಂಗ ಬೇರೆ, ಲಿಂಗ ಬೇರೆ, ಗುರು ಬೇರೆ, ಶಿಷ್ಯ ಬೇರೆ, ಜಂಗಮ ಬೇರೆಂಬ ಭೇದ ಕೆಟ್ಟು ಹೋಗಿರುವುದರಿಂದ ಮತ್ತೆ ಸಂಗ ಮಾಡಿಹೆನೆಂಬ ತವಕವೇಕಯ್ಯ ಎಂದು ಹೇಳಿಹರು.

ನಿಸ್ಸಂಗಿಗೆ ಸಂಗದ ತವಕವಿದ್ದರೆ ಅವನು ನಿಸ್ಸಂಗದ ಘನ ಅರಿತವನೆನಬೇಕೆ ? ನಿಸ್ಸಂಗನಿಗೆ ಅದಾವ ಸಂಗದ ತವಕ ? ನಿರಾಲಂಬನಿಗೆ ಆವುದರ ಅವಲಂಬನ ನಾನೀನೆಂಬದಕ್ಕೂ ತೆರಹಿಲ್ಲದ ಘನವೆ ತನ್ನಿರುವು ಅದುವೆ ಗುಹೇಶ್ವರನೆಂಬುದು ತನ್ನಿಂದ ತನಗದು ಸ್ವತಃ ಸಿದ್ಧವಾಗಿರುವಲ್ಲಿ ಅಲ್ಲಿ ಆವಾವ ಸಂಗದ ತವಕವಿರದು ಎಂದು ಹೇಳಿಹರು.

**89**

**ಸುಳಿಯಬಲ್ಲಡೆ ಸುಳುಹೆ ಲೇಸಯ್ಯ,**
**ಗಮನವಿಲ್ಲದೆ ಸುಳಿಯಬಲ್ಲಡೆ, ನಿರ್ಗಮನಿಯಾಗಿ ನಿಲ್ಲಬಲ್ಲಡೆ,**
**ಅದಕ್ಕದೆ ಪರಿಣಾಮ ಅದಕ್ಕದೆ ಸಂತೋಷ,**
**ಗುಹೇಶ್ವರಲಿಂಗದಲ್ಲಿ ಅವರ ಜಗದಾರಾಧ್ಯರೆಂಬೆ.** ॥ 447 ॥

**ತಾತ್ಪರ್ಯ** : *ಸುಳಿಯ ಬಲ್ಲಡೆ ಸುಳುಹೇ ಲೇಸಯ್ಯ :* ಅದಾವ ಸುಳುಹೆ ಲೇಸಯ್ಯ, ಪ್ರಣವಾರೂಢನು, ಪ್ರಣವ ಸ್ವರೂಪನು, ಪ್ರಣವ ಪ್ರಕೃತಿ ಸಂಜ್ಞನು, ಪ್ರಣವ ಷಡಂಗ ಸಮರಸ ಕೂಡಲಸಂಗಮದೇವರು, ದೇವನಾಗಿ ಸುಳಿಯಬಲ್ಲಡೆ ಸುಳುಹೇ ಲೇಸು. ನರನಾಗಿ ದೇವತಾ ದೈತ್ಯನಾಗಿ ಸುಳಿಯುವುದು ಅಯೋಗ್ಯವು. ದೇವತಾಗಣ, ರುದ್ರಗಣ, ಪ್ರಮಥ ಗಣನಾಗಿ ಸುಳಿದಾಡುವುದು ಸರಿಯಾಗದು. ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರಾಗಿ ಚಿದಹಮ್ಮುಳ್ಳವರಾಗಿ ಸುಳಿದಾಡುವುದು ಸರಿಯಾಗದು. ಗುರುವಾಗಿ ಶಿಷ್ಯರಾಗಿ ಬೋಧಕರಾಗಿ ಬಾಧಕರಾಗಿ ಚರಿಸ್ಯಾಡುವುದು ಸರಿಯಾದುದಲ್ಲ, ಇದು ಅಚ್ಚ

ಸುಖದ ಸುಳಿದಾಟವಲ್ಲ, ಸುಳಿಯಬಲ್ಲಡೆ ಸುಳಿಯದವನಾಗಿ ಸುಳಿದಾಡುವುದು ಸುಖಕರ ಸುಳಿದಾಟ.

ಸುಖದ ಸುಳಿದಾಟ ಆವುದು ಗೊತ್ತೆ ? ಪ್ರಣವಾರೂಢರಾದುದು, ಪ್ರಣವಾರೂಢರೆಂದರೆ, ಜ್ಞಾನಾನಂದ ಮಯರಾಗಿ ಸಂಚಿಸಿದವರೆ ಪ್ರಣವಾರೂಢರು. ಪ್ರಣವಾರೂಢರಾಗಲು, ಪ್ರಣವನುಚ್ಚರಿಸಿದರೆ ಪ್ರಣವದ ಆರೂಢರಾಗಲಿಲ್ಲ, ಪ್ರಣವದರ್ಥವ ತಿಳಿದು ಅದುವೆ ತಾನಾದಲ್ಲಿ ಪ್ರಣವರೂಢನಾಗುವನು. ಪ್ರಣವ ಅದು ಓಂ ಎಂದು ಆಗುವದು, ಪ್ರಣವದರ್ಥ ಇದು ಓಂ, ಅರ್ಥ ಜ್ಞಾನಸ್ವರೂಪ ಆರು ತಿಳಿಯ ಹೋದವರಿಗೆ ಜ್ಞಾನಮಯ, ಚಿನ್ಮಯ ತಾನೆ, ಜ್ಞಾನಮಯ ಅದು ಜ್ಞಾನಮಯವೆನಲಿಲ್ಲ, ಜ್ಞಾನಮಯವಾವದು ಅಬಾಧಿತವು. ಆರದು ಅಬಾಧಿತ ಇರುವಿನ ಅರುವಾಗಿದೆ. ಅವರದು ಜ್ಞಾನಮಯ ಸ್ವರೂಪವಾಗಿದೆ. ಅಂತಪ್ಪ ಮಹಾಂತ ಪ್ರಣವಾರೂಢ, ಜ್ಞಾನಾರೂಢ, ಸಿದ್ಧಾರೂಢನೆಂದು ಹೇಳಿದೆ. ಆತನದು ಸಮಪ್ರಕೃತಿ, ಗುಣಮಯಿ ಆಗದಾತ, ಸತ್ವಗುಣಿ ಆಗದಾತ, ರಾಜ್ಯಗುಣಿ ಆಗದಾತ, ಸಗುಣವು ನಿರ್ಗುಣವು ಆಗದಾತ, ಏನೊಂದಾಗದಾತ, ಸಮತೆಯು ತನ್ನಿರುವು ಆದಾತ. ಮರವು ಅರುವು ಎಂಬುದು ಆಗದಾತ, ಅರಿಯಲಿಲ್ಲದರುವು ಆದಾತ. ಸಗುಣ, ನಿರ್ಗುಣ ಒಂದು ಮಾಡಿಹ ಘನ ಸಂಪನ್ನ, ಅಖಂಡ ಸಂಪನ್ನ, ಅನುಪಮ ಸಂಪನ್ನ ನಿಶಬ್ದವೇದಿಯಾಗಿಹ ಘನವಂತ ತನ್ನಿಂದ ತನ್ನ ಅರಿದ ಸ್ವಮಹಿಮ, ಅರಿಯಲಿಲ್ಲದರುವೆ ತನ್ನಿರುವು ಆಗಿಹ ಸ್ವಯಂಜ್ಯೋತಿ.

ಗಮನವಿಲ್ಲದೆ ಸುಳಿಯಬಲ್ಲಡೆ ನಿರ್ಗಮನಿಯಾಗಿ ನಿಲ್ಲಬಲ್ಲಡೆ ಅದಕ್ಕದೆ ಪರಿಣಾಮ, ಅದಕ್ಕದೆ ಸಂತೋಷ, ಘಟಾಕಾಶ, ಘಟದ ಹಂಗು ಇಲ್ಲದೆ ಆಕಾಶವಿದ್ದಂತೆ ಭಾಸವಾಗುವುದು. ಘಟವು ಇದ್ದಲ್ಲಿದ್ದರೂ ಅದರೊಳಗಿರುವ ಆಕಾಶ, ಒಳಹೊರಗೆನ್ನದೆ ಭರಿತವಾಗಿದೆ. ಘಟವು ಅತ್ತಿಂದಿತ್ತ ಇತ್ತಿಂದತ್ತ ಚರಿಸ್ಯಾಡಿದರೂ ತಾನು ಇದ್ದಂತೆ ಅದೆ ಹಾಗೆ ಸಮತೆಸಯವಾದ ಶರಣ, ತನ್ನ ಕಾಯವೆಂಬ ಘನವ ಅರುವು ಮರವುಳ್ಳದ್ದಾಗಿ ಚರಿಸ್ಯಾಡಿದರೂ ತಾನು ಅದರ ಸಂಬಂಧವಿಲ್ಲದೆ ನಿರುಪಮನಾಗಿ ನಿತ್ಯನಾಗಿ, ಎಡೆಯಿಲ್ಲದ ಪರಿಪೂರ್ಣನಾಗಿ ಸಂಚರಿಸುವುದರಿಂದ ಗಮನವಿಲ್ಲದೆ ಸುಳಿಯಬಲ್ಲಡೆ ಎಂದು ಹೇಳಿಹರು. ನಿರ್ಗಮನಿಯಾಗಿ ನಿಲ್ಲಬಲ್ಲಡೆ ಅದಕ್ಕದೆ ಪರಿಣಾಮ, ಅದಕ್ಕದೆ ಸಂತೋಷ, ನಿರ್ಗಮನವಾವುದು, ಏನೊಂ ದಾಗದ ಘನವು ಅದು ನಿರ್ಗಮನವು ಅರಿಯಲಿಲ್ಲದರುವು ಅದು ನಿರ್ಗಮನವು, ನಡೆ ನುಡಿಕೆಟ್ಟುದು ಆವುದು ಅದು ನಿರ್ಗಮನವು ನುಡಿಗೆಡೆಗೊಡದ ಘನವಾವುದು ಅದು ನಿರ್ಗಮನವು ಎಡೆಯಿಲ್ಲದ ಪರಿಪೂರ್ಣವಾವುದು ಅದು ನಿರ್ಗಮನವು, ಅಂತಪ್ಪ ಪರಾತ್ಪರ ಜ್ಞಾನಿಯು ನುಡಿಗೆಡೆಗೊಡದ ಘನವಾಗಿ ತನ್ನ ಸ್ವಮಹಿಮೆಯಲ್ಲಿ ನಿಂತಿಹನು, ನಡೆನುಡಿ ತಾನಾಗದ್ದರಿಂದ ಮರವು, ಅರವು, ತಾನಾಗದ್ದರಿಂದ ಸಗುಣ, ನಿರ್ಗುಣ, ತಾನಾಗದ್ದರಿಂದ ಸಕಲ ನಿಃಕಲ ತಾನಾಗದ್ದರಿಂದ ನಿಶಬ್ದ ಬ್ರಹ್ಮದಿರುವೆ ತನ್ನಿರುವಾದುದರಿಂದ ಸ್ವಮಹಿಮೆಯಲ್ಲಿ ನಿಂತುದರಿಂದ ನಿರ್ಗಮನಿಯಾಗಿ ನಿಲಬಲ್ಲಡೆ ಎಂದು ಹೇಳಿಹರು. ಅದಕ್ಕದೆ ಪರಿಣಾಮ, ಅದಕ್ಕದೆ ಸಂತೋಷ, ಗಮನವಿಲ್ಲದೆ ಸುಳಿದಾಡುವುದೆ ತನ್ನ ತಾನರಿತ ಪರಿಣಾಮ, ಉಪಾದಿಯುಳ್ಳವನಾಗಿ ಕಂಡರು, ನಿರುಪಾದಿಯಾಗಿ ಸುಳಿದಾಡುವುದು ಆಶ್ರಮವುಳ್ಳವನಾಗಿ ಕಂಡರೂ ಅತ್ಯಾಶ್ರಮಿಯಾಗಿರುವುದು, ಸಂಗ, ಸಂಬಂಧವಿಲ್ಲದೆ ನಿಸ್ಸಂಗಿಯಾಗಿರುವುದೆ

ಗಮನವಿಲ್ಲದೆ ಸುಳಿಯುವುದು ತಿಳಿದಂತೆ ದೇಹವಾಗಿ ಕಂಡರೂ ನಿರ್ದೇಹಿಯಾಗಿ ಸುಳಿಯುವುದೆ ಗರ್ವವಿಲ್ಲದೆ ಸುಳಿದಂತೆ, ಅಹಂಕಾರಿಯಾಗದೆ ಅಹಂಮಿಲ್ಲದೆ ಚಿದ್ಘನವಾಗಿ ಸುಳಿದಡೆ ಗಮನವಿಲ್ಲದೆ ಸುಳಿದಾಡಿವುದು ನಿಜವಾದ ತಿರುವು, ಎಲ್ಲಿ ನಿಜಜ್ಞಾನದರಿವು ಪ್ರಜ್ವಲಿಸುವುದು ಅದಕ್ಕದೆ ಸಂತೋಷ, ಗುಹೇಶ್ವರ ಲಿಂಗದಲ್ಲಿ ಅವರು ಜಗದಾರಾಧ್ಯರೆಂಬೆ ಗುಹೇಶ್ವರಾ. ಆರು ಜಗದಾರಾಧ್ಯರು ಗಮನವಿಲ್ಲದೆ ಸುಳಿಯಬಲ್ಲವನು ನಿರ್ಗಮನಿಯಾಗಿ ನಿಲಬಲ್ಲವರು ಇವರು ಗುಹೇಶ್ವರ ಲಿಂಗವ ಬಲ್ಲವರಾದುದರಿಂದ ಜಗದಾರಾಧ್ಯರೆಂದು ಹೇಳಿಹರು. ಇತ್ತ ಮರವಿಂಗೂ ಅಂಟದವರು, ಅರವಿಂಗೂ ಅಂಟದವರು, ಅರುವಿಂಗರು ವಾಗಿಹ ಘನ ಸಂಪನ್ನರು, ಪ್ರಕೃತಿ ಪುರುಷವೆಂಬ ಕಲ್ಪಿತವ ಕಾಣದವರು ಅಕಲ್ಪಿತ ಘನವೆ ತನ್ನಿರುವಾಗಿಹ ಅರುವುಳ್ಳವರು, ಅಕ್ಷರೋತ್ತಮರು, ಅನುಪಮರು, ಖಂಡಾಖಂಡನ ಯೋಗವಿಲ್ಲದ ಅಖಂಡಿತನ ನಿಲುವುಳ್ಳವರು ಗುಹೇಶ್ವರನಲ್ಲಿ ಅವರು ಜಗದಾರಾಧ್ಯರೆಂದು ಹೇಳಿಹರು.

**90**

**ಮನದೊಡೆಯ ಮಹಾದೇವ ಮನವ ನೋಡಿಹೆನೆಂದು**
**ಮನುಜರ ಕೈಯಿಂದ ಒಂದೊಂದ ನುಡಿಸುವನು,**
**ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರು ಮನವೆ,**
**ನಿಜವ ಮರೆಯದಿರು ಕಂಡಾ, ನಿಶ್ಚಿಂತನಾಗಿರು ಮನವೆ**
**ಬಸವಣ್ಣ ಪ್ರಿಯ ಚೆನ್ನಸಂಗಯ್ಯನು ಬೆಟ್ಟದನಿತಪರಾಧವನು**
**ಒಂದು ಬೊಟ್ಟಿನಲ್ಲಿ ತೊಡೆವನು.**

**ತಾತ್ಪರ್ಯ** : ಮನದೊಡೆಯ ಮಹಾದೇವ ಮನವ ನೋಡಿಹೆನೆಂದು : ಈ ದೇವ ಘನ, ಸರ್ವತ್ರವು ಸದಾ ಇರುವ ಆತ್ಮದೇವ ಒಳಹೊರಗೆನ್ನದೆ ವ್ಯಾಪಿಸಿದ ದೇವ, ಈ ದೇವನ ಚಿಂತಿಸುವುದು ? ನಾನು ಧ್ಯಾನಿ ಧ್ಯೇಯ ಬೇರೆ ಎಂದು ಅಖಂಡವಾದುದನ್ನು ಹೇಗೆ ವಿಭಾಗಿಸುವುದು, ಕೆಲವರು ಬ್ರಹ್ಮಾದಿಗಳಿಗೆ ದೇವನೆನ್ನುವರು, ಕೆಲವರು ನಾರಾಯಣನಿಗೆ ದೇವನೆನ್ನುವರು, ನಾರಾಯಣನೆಂಬುವನ ಕಾಣೆ, ಗೀರಾಯಣನೆಂಬುವನ ಕಾಣೆ, ಬೊಮ್ಮನೆಂಬುವನ ಕಾಣೆ, ಗಿಮ್ಮನೆಂಬುವನ ಕಾಣೆ, ವಿಷವಟ್ಟು ಸುಡವಲ್ಲಿ ವೀರಭದ್ರನ ಕೊಲ್ಲುವಲ್ಲಿ ಕೂಡಲಸಂಗಯ್ಯನಿಗೆ ಶರಣೆಂದು ಮೊರೆಯಿಟ್ಟೆನು.

ಪ್ರಣವನುಚ್ಚರಿಸುವ ಅಪ್ರಮಾಣಿಕರೆಲ್ಲರು ಪ್ರಣವ ಯತಾರ್ಥ ನೋಡಿ ಮಂತ್ರಾರ್ಥವನರಿಯರು, ಪ್ರಣವ ಓಂನಮಃ ಶಿವಾಯ ಎಂದವು ಶೃತಿಗಳೆಲ್ಲ ಪ್ರಣವ ಬರ್ಗೋದೇವ ಎಂದವು. ಕೂಡಲಸಂಗಮದೇವನರಿಯದ ದ್ವಿಜರೆಲ್ಲ ಭ್ರಮಿತರು. ಬಹುದ್ವಿಜರು, ಮಹಾದೇವನ ಅರಿಯದವರು ಇದ್ದಾರೆ, ಇವರಿಗೆ ಮಹಾದೇವನ ಕಾಣುವ ಭಾಗ್ಯವಿಲ್ಲದ್ದರಿಂದ ಭ್ರಮಿತರಾಗಿಹರು. ಸರ್ವತ್ರ ಸರ್ವದಾ, ಇರುವ ಮಹಾದೇವ ಒಳಹೊರಗೆನ್ನದೆ ಭರಿತವಾಗಿಹ ದೇವ, ನಾನೀನೆಂಬುದಕ್ಕೆ ತೆರಹಿಲ್ಲದ ದೇವ, ನುಡಿಗೆಡೆಗೊಡದದೇವ, ಭಾವಕ್ಕಿಂಬುಕೊಡದ ಅಭವ, ಮಹಾದೇವನೆನ್ನಲು ಸಂದು ಕೊಡದ ಅಭವ ಈ

ದೇವನರಿವುಡೆ ತಾನೆ ತನ್ನ ತಾನರಿಯದ್ದರಿಂದ ಮನವು ನಾನಾ ಭಾವರೂಪ ಭ್ರಮೆಯುಳ್ಳದ್ದಾಗಿದೆ. ಭ್ರಮನಿರಸನವಾಗಲು, ಅಖಂಡ ಜ್ಞಾನ, ಅಖಂಡ ಭಾವವುಳ್ಳವನಾಗಬೇಕು. ಸೀಮಿತ ದೃಷ್ಟಿ ಕೆಟ್ಟು ನಿಸ್ಸೀಮವಾಗಬೇಕು, ಆಗ ಅಹುದಾದುದಿಲ್ಲ, ಅಲ್ಲವಾದುದಿಲ್ಲ ಅಸತ್ ಇಲ್ಲ, ಸತ್ ಇಲ್ಲ, ಆಗ ದೇವನೊಂದೆ ಸ್ವತಃ ಸಿದ್ದವು, ಇದು ಕಾರಣ ಮನದೊಡೆಯ ಮಹಾದೇವ ಮನವ ನೋಡಿಹೆನೆಂದು ಮನುಜರ ಕೈಯಿಂದ ಒಂದೊಂದ ನುಡಿಸುವನು.

ಮಹಾದೇವ ಖಂಡಿತವಲ್ಲದ ಅಖಂಡಿತ, ಅನುಪಮ, ಅಚಲ, ಸದ್ಗುರು ಕಾರುಣ್ಯ ದಿಂದ ಎಲ್ಲೆಲ್ಲೂ ಕಾಣುವ ದೇವ, ಈ ದೇವ ಮನವ ನೋಡಿಹೆನೆಂದು ಒಂದೊಂದು ನುಡಿಸುವನು. ಮನವು ಪುರವನ್ನು ನಂಬಿದೆಯೊ ? ಪುರುಷನನ್ನು ನಂಬಿದೆಯೊ ? ಅಥವಾ ಪುರುಷೋತ್ತಮನ ನಂಬಿದೆಯೊ ? ಯಾರನ್ನು ನಂಬಿದೆ, ದೇವನೆಂದರೆ ಅನುಪಮ, ಈತನೆ ಮನದೊಡೆಯ, ಮನದೊಡೆಯನ ನಂಬಿದ ಮನ ಘನಮನ, ನಿಸ್ಸೀಮ ಮನ, ಮನಸ್ಸಿಗೆ ನಿಸ್ಸೀಮತ್ವ ಬಂದಿದೆ ಹೇಗೆಂದು ಮನುಜರ ಕೈಯಿಂದ ಒಂದೊಂದ ನುಡಿಸುವನು ಕಳವಳಿಸದಿರು ಕಾತರಿಸದಿರು ಮನವೆ.

*ಕಳವಳಿಸದಿರು ಮನವೆ, ಕಾತರಿಸದಿರು ಮನವೆ :* ಮಹಾದೇವನ ಕಾಣುವ ಮನ, ಕಾತರಿಸದಿಹ ಮನ, ಕಳವಳಿಸದಿರುವ ಮನ, ಏಕೆಂದರೆ ಮನ ಮನುಜರ ಮಾತ ದಿಟ ಮಾಡದೆ ಅದು ಕಳವಳಿಸಬಹುದು, ಕಾತರಿಸಬಹುದು ಆರಿಗೆ ಗುರುಕಾರುಣ್ಯವಿದೆ ಅವರು ಮನಸ್ಸಿಗೆ ಹೀಗೆ ಸಂಬೋಧಿಸುವವರಾಗಿಹರು, ಎಲೆ ಮನವೆ ನಿನ್ನೊಡಲು ಮಹಾ ದೇವನು, ಈ ಮನುಜರ ಕೈಯಿಂದ ಒಂದೊಂದ ನುಡಿಸುವನು, ಇದಕ್ಕೆ ಕಳವಳಿಸುವುದು ಬೇಡ, ಕಾತರಿಸುವುದು ಬೇಡ, ನೀನು ಎಲ್ಲೆಲ್ಲೂ ಮಹಾದೇವನ ಕಾಣು, ಸ್ತುತಿಸುವಲ್ಲಿಯೂ, ನಿಂದಿಸುವಲ್ಲಿಯೂ ದೇವನ ಕಾಣು, ಈ ಸ್ತುತಿನಿಂದೆ ಇವು ಶಬ್ದ, ಶಬ್ದ ಹೇಗೆ ನಿಶಬ್ದ ಬ್ರಹ್ಮವಾಗುವವು, ಅರಿವುಡೆ ಸ್ತುತಿಸಿದವನಿಲ್ಲ, ಸ್ತುತಿಸಿಕೊಂಡವನಿಲ್ಲ, ಮಹಾದೇವನ ನಿಲುವು ಅನುಪಮ, ಎಲೆ ಮನವೆ ನೀನು ಶಬ್ದವೇದಿಯಾಗಬೇಡ, ಶಬ್ದಸಂಭ್ರಮದವರೆಲ್ಲ ಹಿಂದು ಗಾಣರು, ಮುಂದುಗಾಣರು, ತಮ್ಮ ತಾವರಿಯದವರು, ಮೂರು ಲೋಕವೆಲ್ಲ ಬರುಸೂರೆ ಹೋಯಿತ್ತು ಗುಹೇಶ್ವರಾ ಎಂದು ಮನಸ್ಸಿಗೆ ಬೋಧಿಸುವನು, ಆಗ ಅದು ಶಬ್ದದ ತಾದಾತ್ಮ್ಯದಿಂದಾಗುವ ಕಳವಳವು ಕಾತರವು ದೂರವಾಗುವುದು.

*ನಿಜವ ಮರೆಯದಿರು ಕಂಡಾ ನಿಶ್ಚಿಂತವಾಗಿರುವ ಮನವೆ :* ಎಲೆ ಮನವೆ ನಿಜವರಿಯ ಹೋಗು, ನಿಜವು ನಿನ್ನಯ ಇರವು, ನಿನ್ನಯ ಇರವು ನಿನ್ನಿಂದ ನಿನಗೆ ಸಿದ್ಧವಾದಲ್ಲಿ ನೀನಿದ್ದು, ನಿನ್ನ ನೀನು ನಿನಗೆ ಮರೆಯಲು ಬರುವುದೆ ? ಏಕೆಂದರೆ ನಿಜ; ನಿರಂತರ ನಿಜ. ನೀನು ಅವರ್ಣನೀಯ. ನುಡಿಗೆಡೆಗೊಡದ ಘನವಾದುದರಿಂದ ನುಡಿಗೊಳಪಟ್ಟುದು ನೀನಾವುದು ಆಗಲಾರೆ, ಮಹಾದೇವನಕ್ಕಿಂತ ನೀನು ಅನ್ಯವಲ್ಲ, ಇದನ್ನು ಮರೆಯದಿರು ವ್ಯರ್ಥನೀನಾಗದ ಉಪಾಧಿಯುಳ್ಳವನೆಂದು ತಿಳಿದು ಕಳವಳಿಸುತ್ತಿರುವೆ ನಿರುಪಾಧಿ ನಿರಾಲಂಬನಾಗಿ ಅದಾವ ಕಾರಣದಿಂದ ಕಾತುರವುಳ್ಳವನಾಗಿರುವೆ, ಉಪಾಧಿ ಯುಳ್ಳವನೆಂದು ತಿಳಿವುದಕ್ಕಾಗಿ ನಿನ್ನ ನೀನರಿಯಲು ಕಾತರವುಳ್ಳವನಾಗಿರುವೆ ಇವು ಎರಡು ತನ್ನ ಸ್ವರೂಪವು ಆಗವು ಎಂದು ನಿಶ್ಚಿಂತನಾಗಿರುವ ಮನವೆ.

ಬಸವಣ್ಣ ಪ್ರಿಯ ಚೆನ್ನಸಂಗಯ್ಯನು ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು: ಎಲೆ ಮನವೆ ನೀನು ನಿಜವ ಮರೆತುದು ನಿನ್ನ ಅಪರಾಧ ಗುಡ್ಡದಷ್ಟು ಆಗಿದೆ. ಸಟೆಯ ನಂಬಿದುದು ನಿನ್ನ ಅಪರಾಧ, ನಾಮರೂಪ ನಂಬಿದುದು ನಿನ್ನ ಅಪರಾಧ, ಅಸ್ತಿ, ಭಾತಿ, ಪ್ರಿಯನರಿಯದೆ ಮಾತಿಗೊಳಪಟ್ಟುದು ನಿನ್ನ ಅಪರಾಧ, ವೇದ ವೇದಾಂತಗಳ ವಾಕ್ಯವ ನಂಬಿ ಅದನ್ನು ನೆನೆಯುವುದು ನಿನ್ನ ಗುರಿಯಾಯಿತಲ್ಲದೆ ಮಹಾವಾಕ್ಯಂ ಗಳನರಿಯುವುದು ನಿನ್ನ ಮುಖ್ಯ ಗುರಿಯಾಗಲಿಲ್ಲ, ನಿಜವ ಮರೆತು ಸಟೆಯ ನಂಬಿದ್ದರಿಂದ ನಿಶಬ್ದವೇದಿಯಾಗಲಿಲ್ಲ, ಶಬ್ದವೆ ನಿನ್ನ ಭ್ರಾಂತಿಗೀಡು ಮಾಡಿ ಕಳವಳಿಸಲು ಕಾರಣ ಕಾತರಿಸಲು ಕಾರಣ, ಯಾವಾಗ ನುಡಿಗೆಡೆಗೊಡದ ಘನದರಿವು ನಿನ್ನದಾಗುವುದು, ಆಗಳೆ ನೀನು ನೆನೆಯುವ ನಿರ್ಣಯಿಸುವ ಹಂಬಲದಿಂದ ದೂರಾಗಿ ನಿಶ್ಚಿಂತನಾಗುವಿ, ಅಚಿಂತ್ಯಾತ್ಮನಾಗುವಿ, ಆಗ ತನ್ನ ಪೂರ್ವಾಶ್ರಮವೆಲ್ಲ ಸುಳ್ಳಾಗುವುದೆ ಬೆಟ್ಟದನಿತಪರಾಧವನು ಬೊಟ್ಟಿನಲ್ಲಿ ತೊಡೆದಂತೆ ಎಂದು ಹೇಳಿಹರು. ಬಹು ಭಾವಿಕರು ಮಹಾದೇವನ ಅರಿಯದ್ದರಿಂದ ಹೊರಗಿಹನೆಂದು ದೇವಾಲಯಗಳಲ್ಲಿ ತೀರ್ಥಂಗಳಲ್ಲಿ ನೋಡುವರಾದ್ದರಿಂದ ಶರಣರು ಅವರನ್ನು ಕುರಿತು ಎಚ್ಚರಿಸುತ್ತಿಹರು.

**91**

**ಹೊರಗಿದ್ದಹನೆಂದು ನಾನು ಮರೆದು ಮಾತನಾಡಿದೆ,**
**ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು ತೆರಹಿಲ್ಲದಭವ,**
**ನುಡಿಗೆಡೆಗೊಡನು, ಆತನ ಬಯಲಿಂಗೆ ಬೇಟೆಗೊಂಡೆನವ್ವಾ,**
**ನಾನೇನ ಮಾಡುವೆ ನೆಲೆ ತಾಯೆ, ಮರೆದಡೆ ಎಚ್ಚರಿಸುವ**
**ಕುರುಹಿಲ್ಲದ ಗಂಡನು ತನ್ನ ನರಿದಡೆ ಒಳ್ಳಿದನವ್ವಾ ನಮ್ಮ ಶಂಭುಜಕ್ಕೇಶ್ವರನು.**

**ತಾತ್ಪರ್ಯ :** ಹೊರಗಿದ್ದಹನೆಂದು ನಾನು ಮರೆದು ಮಾತನಾಡಿದೆ ಅರಿಯಲೀಯದೆ ಎನ್ನ ಅಂತರಂಗದಲ್ಲಿಪ್ಪನು, ತೆರಹಿಲ್ಲದ ಭವ ನುಡಿಗೆಡೆಗೊಡನು : ಶರಣರ ಮಹದರವು ಲಭ್ಯವಾಗುವುದು ಪುಣ್ಯದಲ್ಲಿ ಶ್ರೇಷ್ಠವು, ಅದರಲ್ಲಿ ಅರಿದರಿದು ನೋಡುವುದು ಬಹು ಭಾಗ್ಯವು. ಸಕಾಮಭಕ್ತರು, ನಿಷ್ಕಾಮಿಗಳು, ಆತ್ಮಭಕ್ತರು ಅರ್ಥಾರ್ಥಿ ಭಕ್ತರು, ದೇವನು ಹೊರಗಿದ್ದವನೆಂದು ಮರೆದು ಮಾತಾಡುವವರೆ ಹೆಚ್ಚು ಇರುವರು. ಅವರು ದೇವನನ್ನು ಆಹ್ವಾನ ಮಾಡುವುದು ವಿಸರ್ಜನೆ ಮಾಡುವುದು ಮತ್ತು ಅವತಾರಿ ಪುರುಷನೆಂದು ತಿಳಿವರು ಇದಲ್ಲದೆ ಮಹಾನ್ ತೀರ್ಥ ಕ್ಷೇತ್ರಗಳಲ್ಲಿರುವನೆಂದು ಹೊರಗಿದ್ದಿಹನೆಂದು ತಿಳಿದಿರುವರು, ಇವರುಗಳೆಲ್ಲ ಮರೆದು ಮಾತನಾಡಿದವರೆ. ಹಾಗೂ ದೇವನಿಗೆ ಹರಿ, ಹರ, ಶಿವ, ಶಂಕರ, ಗಣಪತಿ, ವೀರಭದ್ರ, ದೇವಿ, ಇವರುಗಳನ್ನು ಹೊರಗಿದ್ದಹನೆಂದು ದುಷ್ಟಶಿಕ್ಷಕ ಶಿಷ್ಟ ಪರಿಪಾಲಕನಾಗಿ ಕಂಡರು. ಶರಣರ ಮಹಾನುಭವ ಅರಿತವರು ವಿರಳ. ಅವರ ಜ್ಞಾನವೆಂ ಬುದು ಯತಾರ್ಥದರ್ಶನ. ಅಲ್ಲಿ ಮೋಸವಂಚನೆ ಇರವು, ಇದ್ದಕ್ಕಿದ್ದಂತೆ ತಿಳುವಳಿಕೆ ಮಾಡಿ ಕೊಡುವುದೆ ಅವರ ಕರುಣಾಹೃದಯ. ಅದು ಕೇವಲ ಸುಖದೇಕರಸವಾದ ಜ್ಞಾನಾಮೃತ ಅರಿದರಿದು ನೋಡಿದವರ ಪರಮಾಮೃತ, ಈ ಪರಮಾಮೃತವನುಂಡವರು ಶೋಕಾತೀತರು

ಅಮರರು.

ಮರೆದು ಮಾತನಾಡುವ ಭಕ್ತರೆ ಬಹಳ, ದೇವನನ್ನು ಹೊರಗಿದ್ದಹನೆಂದು ಆರು ಭಾವಿಸಿರುವರೊ ಅವರೆಲ್ಲರು ಶರಣರ ಅನುಭಾವಮೃತವ ಕಾಣದವರು, ಕಂಡವರು ಹೊರಗಿದ್ದಹನೆಂದು ತಿಳಿಯದವರು, ಮರೆದು ಮಾತನಾಡದವರು. ತನ್ನ ಅಂತರಂಗದಲ್ಲಿದ್ದುದ ಅರಿಯ ಹೋದವರು. ಅದಕ್ಕವರು, ದೇವನಿಗೆ ಪ್ರಕೃತಿ ಎನ್ನಲೆ ? ಪುರುಷನೆನ್ನಲೆ ? ಪುರುಷೋತ್ತಮನೆನ್ನಲೆ ? ಎನ್ನಲಾಗದು, ಏಕೆಂದರೆ ಅವರು ತೆರಹಿಲ್ಲದಭವ, ನುಡಿಗೆಡೆ ಗೊಡನು ಎಂಬ ಮಹಾಂತರ ಕಾರುಣ್ಯವ ಅರಿದು ನೋಡುವುಡೆ ಇವಾವು ಆಗಲಾರವು. ಇವು ಸಾಪೇಕ್ಷದಿಂದ ಬಂದ ಕಲ್ಪಿತ ಪುರವನ್ನು ಆಪೇಕ್ಷಿಸಿ ಪುರುಷ, ಪುರುಷ ಆಪೇಕ್ಷಿಸಿ ಪುರುಷೋತ್ತಮನೆಂಬ ಭಾವ ಬಂದಿದೆ. ಇವಾವುದಕ್ಕೆಡೆಗೊಡದ ಘನವಾವುದು, ಅದು ತೆರಹಿಲ್ಲದಭವ, ನುಡಿಗೆಡೆಗೊಡದ ಘನನೆಂದು ಹೇಳಿಹರು. ಇದು ಅರಿದರಿದು ನೋಡಿದವರ ಮಹಾನುಭವ ಮಹದರುವು.

ಏನನ್ನು ಅರಿದರಿದು ನೋಡಿದರು, ಅರಿಯಲೀಯದೆ ಬಂದೆನ್ನ ಅಂತರಂಗ ದಲ್ಲಿಪ್ಪನು, ತೆರಹಿಲ್ಲದಭವ ನುಡಿಗೆಡೆಗೊಡನು ಎಂಬುದನ್ನು ಅರಿದರಿದು ನೋಡಿದವರು ಇದು ಕಾಂಡತ್ರಯದವರಿಗೂ ಅವಕಾಶಕೊಡದ ಘನ, ತಾನೆ ತಾನಾಗಿಹ ಘನ, ತನ್ನಯ ಇರವು ಅದುವೆ ತೆರಹಿಲ್ಲದಭವ, ನುಡಿಗೆಡೆಗೊಡದ ಘನ, ಇದು ಮುನ್ನ ಮುನ್ನವೆ ಇದ್ದುದು, ತನ್ನಿಂದ ತಾನಾದುದು ಇದನ್ನಾರು ಅರಿಯುವುದು ?

ಅರಿದರುಹಿಸಿ ಕೊಂಬುದಕ್ಕೂ ಮೀರಿದ ಘನ, ವಾಙ್ಮನೋತೀತ, ವರ್ಣಾತೀತ, ಅರಸುವವರ ನಿಲುವಲ್ಲ, ಪ್ರವೃತ್ತಿಯುಳ್ಳವರ ನಿಲುವು ಅಲ್ಲ, ನಿವೃತ್ತಿಯುಳ್ಳವರ ನಿಲವು ಅಲ್ಲ, ಅನುಪಮರ ನಿಲುವು ನಿಶಬ್ದವೇದಿಗಳ ನಿಲವು, ಶೃತಿಗಗೋಚರವಾಗಿಹ ನಿಲವು ತಾನೆ ತಾನಾಗಿರುವುದರಿಂದ ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು ಎಂದು ಹೇಳಿದುದು ಬಹು ರಹಸ್ಯವಾದುದು, ಈ ಅರು ಹೃದಯ, ಮರವು ಅರುವೆಂಬುದಕ್ಕೂ ಮೀರಿದ ಹೃದಯ, ಇದು ತನುವಿಂಗೆ ತನುವಾಗಿಹ ಘನವು, ಅದು ತೆರಹಿಲ್ಲದಭವ, ನುಡಿಗೆಡೆಗೊಡದ ಘನವಾಗಿದೆ. ಆವಲ್ಲಿ ಅರುಹೃದಯವೆ ಅಂತರಂಗವಾಗಿದೆ. ಅಲ್ಲಿ ತೆರಹಿಲ್ಲದಭವ ನುಡಿಗೆಡೆಗೊಡದ ಘನ ನಿವಾಸವಾಗಿದೆ. ಅದಕ್ಕಾಗಿ ಆತನ ಬಯಲಿಂಗೆ ಬೇಟೆಗೊಂಡೆನವ್ವ ಎಂದು ಹೇಳಿಹರು.

ಆ ಮಹಾಂತ ಶಂಬುಜಕ್ಕೇಶ್ವರ ಬಯಲು, ಅದರ ವಿಸ್ತಾರ, ಅದಾವ ಭಾಷೆಯಿಂದ ವಿಸ್ತರಿಸುವುದು, ನೋಡದ ಕಣ್ಣಿಗೆ ಹೇಳಲು ವಾಣಿಯೆ ಇಲ್ಲ ಕಣ್ಣಿನ ಕಣ್ಣಾದವಂಗೆ ಒಡಲೆ ಇಲ್ಲ, ನಾನೆಂಬುದಿಲ್ಲ, ನೀನೆಂಬುದಿಲ್ಲ, ತಾನಿಲ್ಲವಾದ ಅನುಪಮ ಘನವು, ಸುಖದೇಕರಸವಾದುದರಿಂದ ಆತನ ಬಯಲು ಬಯಲಿಂಗೆ ಬೇಟೆಗೊಂಡೆನವ್ವ ಎಂದು ಹೇಳಿಹರು.

ಅರಿಯದರುವಿನ ವಿಸ್ತಾರ, ಅದರ ಇರುವಿಕೆ ಅರು ಹೃದಯಕ್ಕೆ ವಿದಿತವು, ಅರು ಹೃದಯವು ಅರಿಯದರುವಿನ ವಿಕಾಸವ ಕಂಡು ತಾನು ಅದರಲ್ಲಿಯೆ ಲೀಯವಾಯಿತ್ತು, ಅರಿಯದರುವ ನೋಡ ಹೋದ ಅರು ಹೃದಯ ಇದು ಅರಿಯದರುವಾದುದರಿಂದ ಆತನ ಬಯಲಿಂಗೆ ಬೇಟೆಗೊಂಡೆನವ್ವಾ ಎಂದು ಹೇಳಿಹರು. ನಾನೇನ ಮಾಡುವೆನೆಲೆ

ತಾಯಿ ಮರದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು ತನ್ನನರಿದಡೆ ಒಳ್ಳಿದನವ್ವಾ ನಮ್ಮ ಶಂಭುಜಕ್ಕೇಶ್ವರನು.

ಅರಿಯದರುವಿನ ದರ್ಶನವಾಗದಿದ್ದಲ್ಲಿ ಅಲ್ಲಿ ಅರಿಯುವ ಹಂಬಲವಿರುತ್ತದೆ, ಖಂಡಿತವಲ್ಲದ ಅಖಂಡನ ದರ್ಶನವಾಗುವುಡೆ ಆಗ ಕರ್ತವ್ಯ ಇತಿಯಾಯಿತ್ತು ಅರಿಯುವ ಹಂಬಲವು ಇತಿಯಾಯಿತ್ತು, ಕಲ್ಪಿತನ ಕಲ್ಪನೆಯೆ ನಷ್ಟವಾಗಿಹವು, ಅದು ದೇವನ ಹೃದಯ, ದೇವನಿಗಾಗಿ ಮೀಸಲವಾಗಿರುವ ಹೃದಯ, ಎಚ್ಚರ ಎಚ್ಚರಿಸುವ ಕರುಣೆ, ಕುರುಹಿಲ್ಲದ ಗಂಡನದು, ತಾನಾರೆಂದರಿಯುವವರಿಗೆ ಬಹುಶ್ರೇಯಸ್ಕರವು, ಯತಾರ್ಥದರ್ಶನವು, ಹೀಗೆ ತನ್ನಿಂದ ತನಗೆ ಅರಿವು ಆದಡೆ ಒಳ್ಳಿದನವ್ವ ನಮ್ಮ ಶಂಭು ಜಕ್ಕೇಶ್ವರನು, ಶರಣರು ತ್ರಿವಿಧ ಒಂದಾದ ಅರವುಳ್ಳವರು ಖಂಡಿತವಲ್ಲದ ಅಖಂಡಿತರು ಅವರ ಉದಯ ಲಿಂಗದಲ್ಲಿ ಉದಯು, ಜಂಗಮುದಲ್ಲಿ ಉದಯ, ಪ್ರಸಾದದಲ್ಲಿ ಉದಯ, ಉದಯುದ ಉದಯವಾಗಿಹರು ಇದು ಕಾರಣ ತನು, ಮನ, ಧನ ಏಕಾರ್ಥವಾದ ಶರಣ.

**92**

**ತನು, ಮನ, ಧನ, ಏಕಾರ್ಥವಾದ ಕಾರಣ ಉದಯದಲ್ಲಿ**
**ಲಿಂಗವೆ ಶರಣು, ಜಂಗಮವೆ ಶರಣು ಪ್ರಸಾದವೆ ಶರಣು ಕಂಡಯ್ಯ,**
**ಈ ತ್ರಿವಿಧ ಗುಣ ಸಂಪನ್ನರು ಕೂಡಲಸಂಗನ ಶರಣರು ಮಹಾಘನವಯ್ಯ.**

**ತಾತ್ಪರ್ಯ** : *ತನು, ಮನ, ಧನ ಏಕಾರ್ಥವಾದ ಕಾರಣ ಉದಯದಲ್ಲಿ ಲಿಂಗವೆ ಶರಣು, ಜಂಗಮವೇ ಶರಣು, ಪ್ರಸಾದವೇ ಶರಣು ಕಂಡಯ್ಯ :* ಶರಣು ಶರಣಾರ್ಥಿ, ಶರಣರಿಗೆ ಶರಣು ಶರಣಾರ್ಥಿ, ತನು, ಮನ, ಧನ, ಏಕಾರ್ಥವಾದ ಮಹಾಂತರ ಮಹಾನುಭವಕ್ಕೆ ಶರಣು, ಮೂರರ ಮೂಲವನರಿದು ಏಕಾರ್ಥವಾದ ಮಹಿಮರು. ಮೂರೊಂದಾದ ಏಕಾರ್ಥ ಇದನಾರಯ್ಯ ಉಪಮಿಸುವುದು, ಈ ಏಕಾರ್ಥ ದಿವ್ಯ ದೃಷ್ಟಿ ಯುಳ್ಳವರಿಗಿದು ಸಹಜ, ತ್ಯಾಗಿಗಳು,ತಪಸ್ವಿಗಳು,ಯೋಗಿಗಳು ಇವರು ಮೂಲವನರಿ ಯದವರು, ಮೂರೊಂದು ಮಾಡಲು ಅಸಾಧ್ಯವು.

ಲೌಕಿಕರು, ತನು, ಮನ, ಧನ, ಸತ್ಯವೆನ್ನುವರು. ತ್ಯಾಗಿಗಳು, ತಪಸ್ವಿಗಳು, ಮೂರನ್ನು ಮಿಥ್ಯಾದೃಷ್ಟಿಯುಳ್ಳವರಾಗಿ ಕಾಣುವರು. ಯೋಗಿಯು ಇವು ಮೂರನ್ನು ಸದುಪಯೋಗ ಮಾಡುವುದು ಮುಖ್ಯವೆಂದು, ಇಂದ್ರಿಯಂಗಳಿಗೆ, ಜಿತೇಂದ್ರಿಯತ್ವದ ಅಭ್ಯಾಸ ಮಾಡಿಸಿದನು, ಮನವನ್ನು ಯೋಗಾಭ್ಯಾಸದಲ್ಲಿ ಲೀನವಾಗುವಂತೆ ಮಾಡಿ ಸಹಸ್ರಾರು ವರ್ಷಗಳವರೆಗೆ ಶರೀರ, ಇಂದ್ರಿ, ಪ್ರಾಣ ಮನ ಮೊದಲಾದವುಗಳನ್ನು ಬದುಕಿರುವಂತೆ ಮಾಡಿದ. ಶರಣರು ಮಾತ್ರ ತನು, ಮನ, ಧನ ಏಕಾರ್ಥ ಮಾಡಿದರು. ಏಕಾರ್ಥ ಮಾಡಿದ ಪರಿಯ ನೋಡಿರೆ ? ತನುವಿನ ತನುವಾದುದೆ ಮನದ ಮನವಾಗಿದೆ. ಮನದ ಮನವಾದುದೆ ಧನದ ಧನವಾಗಿದೆ. ಶರಣರು ಬಹಿರ ತನು, ಮನ, ಧನವ ಕಾಣಲಿಲ್ಲ, ಅವರು ಅತೀಂದ್ರಿಯರು, ಅಜಾತರು, ಮನ ಘನ ಮಾಡಿದ ಮಹಿಮರಾದುದರಿಂದ ಮೂರು ಏಕಾರ್ಥ ಮಾಡಿದ ಘನ ಸಂಪನ್ನರು, ಮೂರೊಂದು ಮಾಡಲು ಇವುಗಳ

ಮೂಲವರಿಯಲು ಹೋದಲ್ಲಿ ಏಕಾರ್ಥವಾಗಿ ಪ್ರಜ್ವಲಿಸಿತು, ಆವುದು ಅದೆ; ಅದು ಅಂದು ಅದೆ, ಇಂದು ಅದೆ ಎಂದೆಂದು ಅದೆ. ಇಲ್ಲದುದು ಅಂದು ಇಲ್ಲ, ಇಂದು ಇಲ್ಲ, ಎಂದೆಂದೂ ಇಲ್ಲ, ಇಲ್ಲದುದು ಇದ್ದಂತಾಗಿ ತೋರಿದುದು ತನು, ಮನ, ಧನ ಇದು ಭ್ರಾಂತಿ ದೃಷ್ಟಿ . ಆವುದು ತನುವಿನ ತನುವಾಗಿದೆ, ಮನದ ಮನವಾಗಿದೆ ಧನದ ಧನವಾಗಿದೆ ಅದು ಏಕಾರ್ಥವಾಗಿದೆ, ಅದು ನಿರಂತರವಾಗಿದೆ, ನುಡಿಗೆಡೆಗೊಡದ ಘನವಾಗಿದೆ. ಈ ಮೂರು ಏಕಾರ್ಥವಾದುದು ಶೃತಿಗಗೋಚರವಾಗಿದೆ. ವಾಙ್ಮನೋತೀತವು ಅವರ್ಣೀಯವಾಗಿದೆ. ಇದರ ಅಸ್ತಿತ್ವ ಅದಾವ ವಿವೇಕಕ್ಕೂ ನಿಲುಕದು. ವೇದ, ವೇದಾಂತಗಳಿಗೂ ನಿಲುಕದು.

ಮೂಲ ಅಸ್ತಿತ್ವವರಿತು ತೋರಬಾರದ ಘನವಾಗಿ ಪ್ರಜ್ವಲಿಸಿದುದು ಅದನಾವ ಭಾಷೆಯಿಂದ ವಿಸ್ತರಿಸುವುದು. ಶರಣರು ಕಲ್ಪಿತ ಮನಕ್ಕೆ ಮುಖ್ಯತೆ ಕೊಡದೆ ಅದರ ಮೂಲವರಿಯಲು ಅವರ ದಿವ್ಯ ದೃಷ್ಟಿಗೆ ನಿರಂಜನವಾಗಿ ಪ್ರಜ್ವಲಿಸಿತ್ತು, ಸತಿ, ಸುತ, ಧನ, ಕನಕ ಮೊದಲಾದವುಗಳು ಇದಲ್ಲದೆ ಅಧಿಕಾರ ಫಲಪದಂಗಳೆಲ್ಲವು ಧನವೆಂದು ತಿಳಿದು ಬಹುಭ್ರಾಂತರಾಗಿಹರು.

ತೋರಿ ಕೆಡುವುದು ಅದು ಹೇಗೆ ಅಕ್ಷಯ ಧನವಾಗುವುದು ಭಾವಕ್ಕಗಮ್ಯವಾದ ಘನವು ಭಾವರೂಪ ಭ್ರಾಂತಿಯಿಂದುಕ್ತರಾಗಿ ನೋಡುವುಡೆ ಅದರ ಘನವ ತಿಳಿಯದಾಗಿದೆ. ನಿಜವಾದ ಧನವೆಂದಲ್ಲಿ ಸತ್ಯಜ್ಞಾನಾನಂದವು ಪ್ರಜ್ವಲಿಸುತ್ತಿರಲು ಅವರಿಗೆ ನಿಜವಾದ ಧನದ ತಿಳುವಳಿಕೆಯಾಗಿದೆ ಲಿಂಗ ಹೇಗೆ ಅನುಪಮವಾಗಿದೆ, ಹಾಗೆ ತಾನೆ ಅನುಪಮ ಜಂಗಮವಾಗಿ ಪ್ರಜ್ವಲಿಸಿಹುದು.

ಉದಯದಲ್ಲಿ ಲಿಂಗವೆ ಶರಣು, ಜಂಗಮವೆ ಶರಣು, ಪ್ರಸಾದವೆ ಶರಣು ಕಂಡಯ್ಯ. ಉದಯದಲ್ಲಿ ಲಿಂಗವೆ ಶರಣು, ಉದಯ ಇದಾವ ಉದಯ ? ನಿರಂತರ ಉದಯ, ಉದಯಾಸ್ತವ ಕಾಣದ ಉದಯ, ಸತ್ಯಾಸತ್ಯವ ಕಾಣದ ಉದಯ, ನಾಶ ಅವಿನಾಶ ಕಾಣದ ಉದಯ, ರೂಪಾ ರೂಪ ಕಾಣದ ಉದಯ, ಅಬಾಧಿತ ಉದಯ, ಅಭೇದ್ಯ ಉದಯ, ಅನುಭಾವದಲ್ಲಿ ಹುಟ್ಟಿತ್ತು ಲಿಂಗ, ಅನುಭಾವದಲ್ಲಿ ಹುಟ್ಟಿತ್ತು ಜಂಗಮ, ಅನುಭಾವದಲ್ಲಿ ಹುಟ್ಟಿತ್ತು ಪ್ರಸಾದ, ಇದು ಅತೀಂದ್ರಿಯಾಗಿಹ ಮಹಾಂತರ ಅನುಭಾವ, ಅಖಂಡ ಜ್ಞಾನಾಮೃತವನುಂಡವರ ಅನುಭಾವ, ಇಂತಪ್ಪ ಅನುಭಾವದದುಯದಲ್ಲಿ ಲಿಂಗವೆ ಶರಣು ಎಂದು ಹೇಳಿಹರು. ಮರವು ಅರುವು ಕಾಣದ ಜಂಗಮ. ಜ್ಞಾನ, ಅಜ್ಞಾನ ಕಾಣದ ಜಂಗಮ, ಬಂಧ ಮೋಕ್ಷವ ಕಾಣದ ಜಂಗಮ, ನಿಸ್ಸೀಮ ಜಂಗಮ, ನಿರ್ನಾಮ ಜಂಗಮ, ನಿರ್ಲಿಖಿತ ಜಂಗಮ, ಜಂಗಮವೆನ್ನದ ಜಂಗಮ, ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯವಾದ ಜಂಗಮ, ಇಂತಪ್ಪ ನಿಜಚೈತನ್ಯದಲ್ಲಿ ಉದಯ ಜಂಗಮವೆ ಶರಣು ಎಂದು ಹೇಳಿಹರು. ಇದು ಅಖಂಡ ಜ್ಞಾನಾಮೃತವನುಂಡವರ ಉದಯ ಪ್ರಸಾದ. ಇದು ಅರಿಯಲಿಲ್ಲದರುವಿನ ಪ್ರಸಾದ, ತೆರಹಿಲ್ಲದ ಪ್ರಸಾದ, ನಾ ನೀನೆಂಬುದಕ್ಕೆಡೆಗೊಡದ ಪ್ರಸಾದ, ಅಹಮಿಲ್ಲದ ಚಿದ್ಘನದ ಪ್ರಸಾದದುದಯದಲ್ಲಿ ಪ್ರಸಾದವೆ ಶರಣು ಎಂದು ಹೇಳಿಹರು.

ಈ ತ್ರಿವಿಧ ಗುಣ ಸಂಪನ್ನರು ಕೂಡಲ ಚೆನ್ನಸಂಗನ ಶರಣರು ಮಹಾಘನವಯ್ಯ. ಶರಣರು ಲಿಂಗ, ಜಂಗಮ ಪ್ರಸಾದ, ಒಂದಾದ ಗುಣಸಂಪನ್ನರು. ಇವರು ಲಿಂಗ

ಸಂಪನ್ನರು, ಜಂಗಮ ಸಂಪನ್ನರು, ಸಮಪ್ರಕಾಶವಾಗಿಹ ಪರತತ್ವದಲ್ಲಿ ಲೀಯವಾದವರು, ನುಡಿಗೆಡೆಗೊಡದ ಘನ ಸಂಪನ್ನರು, ಸದ್‌ಜ್ಞಾನಭರಿತ ಸಂಪನ್ನರು, ಸುಜ್ಞಾನ ಭರಿತ ಸಂಪನ್ನರು, ವಾಙ್ಮನೋತೀತವಾಗಿಹ ಪರಾನಂದ ಪರಮಾತ್ಮದ ಸಂಪನ್ನರು ಆದುದರಿಂದ ಕೂಡಲಚೆನ್ನಸಂಗನ ಶರಣರು ಮಹಾಘನವಯ್ಯಾ ಎಂದು ಹೇಳಿಹರು.

93

**ಭಾವ ಬಲಿಸಬೇಕಲ್ಲದೆ ವಿಭಾವ ಮಾಡಲುಂಟೆ ?**
**ಗುರುಭಕ್ತಿಯಲ್ಲಿ,ಭಾವಬಲಿದುದೆ ಬ್ರಹ್ಮಜ್ಞಾನ, ಗುರುಭಕ್ತಿಯಲ್ಲಿ**
**ಭಾವನಿಂದುದೆ ಸಹಜ ಸ್ಥಿತಿ, ಗುರುಭಕ್ತಿ ಮರೆವ ಅರಿವ**
**ಮರೆತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನ ಮಹಾಮನೆ,**
**ಇದು ಸತ್ಯ ಕೇಳಾ ಶಿವ ತಾಯೆ.**

**ತಾತ್ಪರ್ಯ** : ಭಾವ ಬಲಿಸಬೇಕಲ್ಲದೆ, ವಿಭಾವ ಮಾಡಲುಂಟೆ : ಭಾವ ಭಲಿಸುವುದು ಅವಶ್ಯವು, ಆವಭಾವ ಬಲಿಸುವುದು ? ಭಾವವೆ ಜನ್ಮಕ್ಕೀಡು ; ನಿರ್ಭಾವವೆ ಜನ್ಮಕ್ಕೆ ಕಾಡುಗಿಚ್ಚು, ನಿರ್ಭಾವದ ಭಾವ ಬಲಿಸಬೇಕೆ ವಿನಃ ಜನ್ಮಕ್ಕೀಡು ಮಾಡುವ ಭಾವ ಬಲಿಸಬಾರದು. ನಿರ್ಭಾವದ ಭಾವ ಅದಾವ ಭಾವ ?

ಇಬ್ಬರ ಮಧ್ಯದಲ್ಲಿ ಒಂದು ವಸ್ತು ವುಂಟು ಕಂಡಿರೆ ಗಣಂಗಳಿರಾ, ಕಂಡಿರೆ ಅಣ್ಣಗಳಿರಾ ? ಗುರುವಿನ ಗುರು ಬೇಗಲರಿಯಿರೆ ಗುಹೇಶ್ವರಾ.

ವಿಭಾವ ಮಾಡದಂತೆ ಭಾವಬಲಿಯಬೇಕಾದರೆ, ಗುರುವಿಂಗೆ ಗುರುವಾಗಿಹ ಘನವರಿತಲ್ಲಿ ವಿಭಾವ ಮಾಡದಂತೆ ಗುರುಭಾವ ಬಲಿಸಲು ಸಾಧ್ಯ. ನಿರ್ಭಾವದ ಭಾವ ಬಲಿಸಿದವರು, ಸಿದ್ಧರಾಮ ಶಿವಯೋಗಿ ತಂದೆ, ಚೆನ್ನಬಸವಣ್ಣ, ಬಸವಣ್ಣ, ನೀಲಾಂಬಿಕೆ, ಅಮುಗೆಯ ರಾಯಮ್ಮ, ಮುಕ್ತಾಯಕ್ಕ, ಅಕ್ಕಮಹಾದೇವಿ, ಇನ್ನು ಅನೇಕ ಶರಣ, ಶರಣೆಯರು ಭಾವ ಬಲಿಸಿದವರು; ನಿರ್ಭಾವ ಮಾಡಿದವರು. ಗುರು ಘನವನ್ನು ಅಜಾತ ಲಿಂಗವನ್ನಾಗಿ ಕಂಡವರು. ಗುರು ಭಕ್ತಿಯಲ್ಲಿ ಭಾವ ಬಲಿದುದೆ ಬ್ರಹ್ಮಜ್ಞಾನ. ಈ ಗುರುಭಕ್ತಿ ಅದಾರಿಗೆ, ಇಹ ಪರ ಗುರುವ ಕಂಡವರ ಭಕ್ತಿ. ಎಲ್ಲೆಲ್ಲೂ ಗುರುವಿಂಗೆ ಗುರುವಾಗಿಹ ಘನವ ಕಂಡರು. ಈ ಭಾಗ್ಯ ಅದಾರಿಗೆ ಅರು ಹೃದಯ ಅದಾರಿಗೆ ? ಘನ ಗುರು, ಕಾಣಬಾರದ ಗುರು, ಗುರು ಶಿಷ್ಯತ್ವ ಕಾಣದ ಗುರು. ಮರವು, ಅರವು, ಕಾಣದ ಗುರು. ಜ್ಞಾನ, ಅಜ್ಞಾನ ಕಾಣದ ಗುರು. ಬಂಧ, ಮೋಕ್ಷವ ಕಾಣದ ಗುರು, ಇದು ಪರತತ್ವ ಪರಿಶುದ್ಧ ಹೃದಯದಲ್ಲಿ ಪ್ರಜ್ವಲಿಸುವ ಅರುವಿಂಗರುವು. ಈ ಅರುವಿಂಗರುವಾಗಿಹ ಘನಗುರುವಿನ ಅನುವಿನಲ್ಲಿ ಆರು ಅಪಾರ ಭಕ್ತಿಯುಳ್ಳವರಾಗಿಹರು, ಶ್ರದ್ಧೆ ಇದೆ, ನಿಷ್ಟೆ ಇದೆ, ಅವರಲ್ಲಿ ಗುರುಭಕ್ತಿವಾಸವಾಗಿಹುದು. ಆವಲ್ಲಿ ಗುರುಭಕ್ತಿಯ ನಿವಾಸವಾಗಿದೆ, ಅಲ್ಲಿಯೆ ನಿರ್ಭಾವದ ಭಾವ ಬಲಿತಿದೆ. ಅಲ್ಲಿಯೆ ಬ್ರಹ್ಮದಿರುವು ಪ್ರಜ್ವಲಿ ಸುತ್ತಿದೆ. ಆವಲ್ಲಿ ನಿಶಬ್ದವೇದಿಗಳು ಅಲ್ಲಿಯೆ ಘನ ಗುರುವ ಕಂಡವರು. ಈ ಭಕ್ತಿ ಕೆಡುವ ಭಕ್ತಿಯಲ್ಲ ಇದು ಮಾಯಿಕ ಭಕ್ತಿಯಲ್ಲ, ಗುರುವನ್ನು ಸ್ತುತಿಸುವ ಭಕ್ತರು ಸಿಕ್ಕುತ್ತಾರೆ ಸ್ತುತಿಸದ ಭಕ್ತರು

ಸಿಕ್ಕುವುದು ವಿರಳ. ಎಲ್ಲರ ವರ್ಣಿಸಬಹುದು, ಎನ್ನ ವಲ್ಲಭ ಗುರು ಮೂರ್ತಿಯ ವರ್ಣಿಸಬಾರದೆಂದುದು ಅರಿದು ನೋಡಿದಡೆ ಅವರು ಇಬ್ಬರ ಮಧ್ಯದಲ್ಲಿದ್ದ ವಸ್ತುವ ಕಂಡವರು. ಗುರುವಿನ ಗುರು ಅನುಪಮ ಜ್ಯೋತಿಯಕಂಡವರು. ವರ್ಣಾತೀತವಾಗಿಹ ಜ್ಯೋತಿ ತಮ್ಮ ಅಂತರಂಗದಲ್ಲಿ ಕಂಡು ಎಲ್ಲೆಲ್ಲೂ ಶ್ರೀಗುರುವ ಕಂಡು ಗುರು ಭಕ್ತಿ ಅಪಾರವಾಯಿತ್ತು, ಶ್ರದ್ಧೆ ಬೆಳೆಯಿತ್ತು, ನಿಷ್ಠೆ ಘಟ್ಟಿಗೊಂಡಿತ್ತು, ಅಲ್ಲಿಯೆ ಪರತತ್ವ ಪ್ರಜ್ವಲಿಸಿತ್ತು, ಗುರುಭಕ್ತಿಯಲ್ಲಿ ಭಾವನಿಂದುದೆ ಸಹಜ ಸ್ಥಿತಿ. ಎಲ್ಲೆಲ್ಲೂ ಗುರುಭಕ್ತರು, ಗಣನೆಗೆ ಬಾರದಷ್ಟು ಅಸಂಖ್ಯ ಭಕ್ತರು ಇರುವರು, ಇವರುಗಳಲ್ಲಿ ಗುರು ಭಕ್ತಿಯಿಲ್ಲ, ಭಾವ ಅಚಲವಾಗಿ ಉಳಿದವರು ಕೋಟಿಗೊಬ್ಬರು. ಲಕ್ಷಕ್ಕೊಬ್ಬರು ಎಂದು ಹೇಳಲು ಅಸಾ ಧ್ಯವಾದುದಾಗಿದೆ. ಇವರಲ್ಲಿ ಬಹು ಭಕ್ತರು ಗುರುವ ಕಾಣದವರು, ಗುರುದರ್ಶನ ವಿಲ್ಲದಿರುವಲ್ಲಿ ಭಕ್ತಿಯಾದರೂ ಹೇಗೆ ಸಾಧ್ಯ ಭಾವ ನಿಲ್ಲುವದಾದರೂ ಹೇಗೆ ಸಾಧ್ಯ? ಏಕೆಂದರೆ ಗುರುಭಕ್ತಿ ಸಾಮಾನ್ಯವೆ ? ಆರಾರ ಭಕ್ತಿ ಮಾಡಬಹುದು ಗುರು ಭಕ್ತಿ ಅಸಾಮಾನ್ಯವು.ಲಿಂಗ, ಜಂಗಮ, ಪ್ರಸಾದ ಈ ಮಹಾಂತನಿಂದ ಭಕ್ತರ ಕಲ್ಯಾಣಕ್ಕಾಗಿ ಹೊರ ಬಂದವುಗಳು. ಇವು ಆತನಿಗೆ ಹೆತ್ತರಿವು, ಪರಾತತ್ವಗುರು ಅವರ್ಣೀಯವು. ಇಂತಪ್ಪ ಗುರು ಭಕ್ತಿ, ಶರಣ ಶರಣೆಯರಿಗೆ ಸಾಧ್ಯವಲ್ಲದೆ, ಗುರು ಒಂದು ಚಾರಿತ್ರ ಪುರುಷ, ಶಿಷ್ಯರೊಂದು ಚಾರಿತ್ರ ಪುರುಷ, ಭಕ್ತರೊಂದು ಚಾರಿತ್ರ ಪುರುಷರಾದವರಿಗೆ ತಿಳಿಯದ ಘನವು. ಈ ಗುರು ಶಿಷ್ಯ ಮೇಳ, ಭಕ್ತ, ಜಂಗಮರ ಮೇಳ, ಕೆಲವು ದಿವಸ ಗುರು ಲಿಂಗ, ಜಂಗಮ, ಭಕ್ತರಾಗುವುದು ಭಾವಿಕರಾಗುವುದು ಅರುವಿನ ಬಗ್ಗೆ ತಮ್ಮ ತಮ್ಮೊಳಗೆ ವಿಚಾರ ಮಾಡುವುದು; ಕೊನೆಗೊಂದು ದಿವಸ ಎಲ್ಲದರಿಂದ ದೂರವಾಗಿ ಚಾರಿತ್ರವೆ ಘನವಾಗಿ ಭವದ ಲೆಂಕಿಗರಾದರು. ಇದು ಕಾರಣ ಗುರುಭಕ್ತಿ ಸಕಲರಿಗೂ ದಕ್ಕುವ ಭಕ್ತಿಯಲ್ಲ, ಗುರು ಭಕ್ತಿ ಇದು ಅರುವ ಅರಿದರಿದು ಅರಿಯಬಾರದ ಘನವರಿತು ಅದುವೆ ತಾನಾಗಿಹ ಭಕ್ತಿ. ಅರಿಯಬಾರದ ಘನವರಿತು, ಅದುವೆ ತಾನಾದ ಘನ. ಇದು ಗುರು ಭಕ್ತಿ. ಲಿಂಗವೆಂದಲ್ಲಿ ಭಕ್ತಿ, ಭಕ್ತಿ ಎಂದಲ್ಲಿ ಗುರು. ಎಲ್ಲಿ ಪರಿಮಳ ಅಲ್ಲಿ ಸುಗಂಧವೆಂದಂತೆ, ಅರುವಿಂಗರುವಾದುದೆ ಗುರು ಅದನು ಅರಿಯ ಹೋದ ಅರು ಹೃದಯ ಅರುವಿಂಗರುವು ತಾನಾದುದೆ ಭಕ್ತಿ. ಇಂತಪ್ಪ ಪರಾತತ್ವ ಭಾವ, ಭರಿತ ಭಾವ, ಕರಿಗೊಂಡುದೆ ಸಹಜ ಸ್ಥಿತಿ ಎಂದು ಹೇಳಿಹರು.

ಗುರುಭಕ್ತಿ ಮರೆವ ಅರಿವ ಮರೆತಂದೆ : ಮರವು ಅರುವು ಎಂಬ ದ್ವಂದ್ವಗಳ ಗಜಿಬಿಜಿ ಮರೆಯಬೇಕಾದರೆ ಗುರುವಿನ ಗುರುವಾಗಿಹ ಗುರುಭಕ್ತಿ ನಮ್ಮಲ್ಲಿ ಉದಯಿಸಿದಾಗ, ಮರವನ್ನು ಸಹಜ ಮರೆಯುತ್ತಾನೆ. ಅರುವೆಂಬುದನ್ನು ಸಹಜ ಮರೆಯುತ್ತಾನೆ. ಆರು ತನ್ನೊಳು ಅರುವಿಂಗರುವಾಗಿಹ ಗುರು ಘನವ ಕಂಡು ಅದಲ್ಲಿಯೆ ತನ್ನ ಮನ ಲೀನವಾಗುವುದು, ಭಾವ ಲೀನವಾಗುವುದು, ಅಲ್ಲಿ ನನ್ನ ನಾನು ಅರಿಯದಿದ್ದೆನು ಎಂಬುದು ನಷ್ಟ, ನಾನು ನನ್ನ ಅರಿತೆನೆಂಬುದು ನಷ್ಟವಾಗಿ; ಅರಿಯದರುವು ತನ್ನ ನಿಜದಿರು ವಾಗಿರುವುದರಿಂದ ಗುರುಭಕ್ತಿಯ ಘನವು ಅಪಾರವಾದ್ದರಿಂದ ಮರೆವ ಅರಿವ ಮರೆತಂದೆ ಎಂದು ಕೊಂಡಾಡಿಹರು.

ಕಪಿಲಸಿದ್ಧ ಮಲ್ಲಿಕಾರ್ಜುನ ದೇವನ ಮಹಾಮನೆ, ಇದು ಸತ್ಯ ಕೇಳಾ ಶಿವ ತಾಯೆ : ಗುರುಭಕ್ತಿ ಸಾಮಾನ್ಯವಲ್ಲ, ಕಪಿಲಸಿದ್ಧ ಮಲ್ಲಿಕಾರ್ಜುನ ದೇವನ ಮಹಾಮನೆ

ಎಂದು ಹೇಳಿಹರು. ಅರಿಯದರುವಿನ ಅಪಾರಭಕ್ತಿ ಅಲ್ಲಿಯೆ ನೆಲಸಿರುವುದು. ಅಲ್ಲಿಯೆ, ಇದು ಸತ್ಯ ಕೇಳು, ಇದು ಶಿವ, ಇದು ತಾಯೆ. ಅರಿಯದರುವು ಗುರು ಅದುವೆ ಸತ್ಯ, ಅದುವೆ ಶಿವ, ಅದುವೆ ಸಕಲ ಗುರು ತಾಯೆ, ಅಂದರೆ ಅರಿಯದರುವೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವ, ಮಹಾಮನೆಯ ಅರಿಯದರುವು ಈ ಅರುವಿನ ಭಕ್ತಿ ಅಚಲ ಭಕ್ತಿ, ಅಖಂಡ ಭಕ್ತಿ, ಅನುಪಮ ಭಕ್ತಿ, ಇದು ಸತ್ಯ ಕೇಳಾ ಶಿವತಾಯೆ ಎಂದು ಪ್ರತಿಜ್ಞೆ ಮಾಡಿ ಹೇಳಿಹರು. ಇದು ಕಾರಣ ಶ್ರೀಗುರು ಕಾರುಣ್ಯವುಳ್ಳವಂಗೆ ಪಂಚಸೂತಕಗಳಿಲ್ಲವೆಂದು ಹೇಳಿಹರು.

**94**

**ಶ್ರೀಗುರು ಕಾರುಣ್ಯ ಕಟಾಕ್ಷದಲ್ಲಿ ಉತ್ಪತ್ತಿಯಾದ ಅಜಾತಂಗೆ,**
**ಜಾತಿಸೂತಕ, ಜನನ ಸೂತಕ, ಪ್ರೇತಸೂತಕ, ರಜಸ್ಸೂತಕ,**
**ಎಂಜಲಸೂತಕವುಂಟೆಂಬುವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ,**
**ಪ್ರಸಾದವಿಲ್ಲವಯ್ಯ ಕೂಡಲ ಚೆನ್ನಸಂಗಮದೇವಾ.**

**ತಾತ್ಪರ್ಯ :** ಶ್ರೀಗುರು ಕಾರುಣ್ಯ ಕಟಾಕ್ಷದಲ್ಲಿ ಉತ್ಪತ್ತಿಯಾದ ಅಜಾತಂಗೆ: ಪಂಚಸೂತಕವೆಂದರೆ, ಜಾತಿದೋಷ, ಜನನ ದೋಷ, ಮರಣದೋಷ, ಋತುದೋಷ, ಎಂಜಲ ದೋಷ, ಈ ದೋಷವುಳ್ಳವರು ಗುರು ಕಾರುಣ್ಯವಾಗದವರು. ಇದು ಕಾರಣ ಶ್ರೀಗುರು ಕೃಪೆಯಲ್ಲಿ ಉತ್ಪತ್ತಿಯಾದವರು ಸಿಕ್ಕುವುದು ವಿರಳ.

ಗುರುಗಳು ಸಿಕ್ಕುತ್ತಾರೆ ಶ್ರೀಗುರುಗಳು ಸಿಕ್ಕುವುದು ವಿರಳ. ಮತವಾದಿಗಳು ಸಿಕ್ಕುತ್ತಾರೆ, ಮತ ಕಾಣದವರು ಸಿಕ್ಕುವುದು ವಿರಳ, ದ್ವೈತಮತದ ಗುರುಗಳು ಸಿಕ್ಕುತ್ತಾರೆ, ವಿಶಿಷ್ಟಾದ್ವೈತ ಮತದ ಗುರುಗಳು ಸಿಕ್ಕುತ್ತಾರೆ, ಶಕ್ತಿ ವಿಶಿಷ್ಟಾದ್ವೈತ ಗುರುಗಳು ಸಿಕ್ಕುತ್ತಾರೆ, ಅದ್ವೈತ ಗುರುಗಳು ಸಿಕ್ಕುತ್ತಾರೆ, ಗುರುವಾಗದ ಗುರು ಸಿಕ್ಕುವುದು ವಿರಳ. ಈ ಮಹಾಂತನೆ ಕಾಣಬಾರದ ಗುರು. ಈತನ ದಿವ್ಯದೃಷ್ಟಿಗೆ ಮತಗಳಾವು ಕಾಣವು, ಅಜ್ಞಾನಿಗಳಾರು ಕಾಣದ್ದರಿಂದ ಶಿಷ್ಯರಾರು ಕಾಣರು. ಶ್ರೀಗುರುವೆಂದರೆ ಅನುಪಮ ಜ್ಯೋತಿ, ಸಮಪ್ರಕಾಶಮಾನವಾದ ತತ್ವವ ತಿಳಿಸುವ ಅರುಹೃದಯ, ಜ್ಯೋತಿಯ ಮುಟ್ಟಿದ ಜ್ಯೋತಿಯಂತೆ ಈತನ ಕಾರುಣ್ಯ. ಗುರುದೇವನು ಜ್ಯೋತಿ, ಶಿಷ್ಯನು ಜ್ಯೋತಿ, ಸಮಪ್ರಕಾಶಮಾನವಾದ ಜ್ಯೋತಿ, ಅವರ್ಣೀಯ ಜ್ಯೋತಿ, ಇದು ಜ್ಯೋತಿ ಎನ್ನದ ಜ್ಯೋತಿ ಸ್ವಯಂಜ್ಯೋತಿ. ಇಂತಪ್ಪ ಪರಾತ್ಪರ ಜ್ಞಾನಿಯಾಗಿಹ ಶ್ರೀಗುರು ಕಾರುಣ್ಯ ಕಟಾಕ್ಷದಲ್ಲಿ ಉತ್ಪತ್ತಿಯಾದವರು ಅಜಾತರು. ಅಂದರೆ ಆರಾರಿಂದಲೂ ಹುಟ್ಟದವರು, ಶ್ರೀಗುರುವಿನ ಹೃದಯದಿಂದ ಹೊರಬಂದವರು, ಮಹಾನುಭವದಲ್ಲಿ ಉದಯವಾದುದರಿಂದ ಅಜಾತರು ಎಂದು ಹೇಳಿಹರು.

ಆವಲ್ಲಿ ದೇಹಬುದ್ಧಿ ದೇಹಾಭಿಮಾನ ಬಲಗೊಂಡಿದೆ ಅಲ್ಲಿ ಜಾತಿಸೂತಕ, ಜನನಸೂತಕ, ಮರಣಸೂತಕ, ಋತುಸೂತಕ, ಎಂಜಲ ಸೂತಕವಿದ್ದುದು. ಶ್ರೀಗುರು ಕೃಪೆಯಿಂದ ದೇಹಬುದ್ಧಿ ಆತ್ಮ ಬುದ್ಧಿಗೂ ಮೀರಿದ ಸಮಪ್ರಕಾಶಮಾನವಾದ ತತ್ವದ

ಜ್ಞಾನೋದಯವಾದುದರಿಂದ ನನಗೆ ಬುದ್ಧಿಯೆ ಭಸ್ಮವಾಗಿ ಎಲ್ಲೆಲ್ಲೂ ಅಖಂಡಲಿಂಗ ಪ್ರಜ್ವಲಿಸುವುದರಿಂದ ನನಗೆ ಪಂಚಸೂತಕಗಳಿಲ್ಲ, ಅಜಾತಂಗೆ ಜಾತಿ ಉಂಟೆ ? ಅಭವನಿಗೆ ಭವ ಉಂಟೆ ? ಭವವಿರಹಿತನಾದವಂಗೆ ಜನನ ಸೂತಕ, ಮರಣ ಸೂತಕ ಎಲ್ಲಿಯದು. ದೇಹಗುಣಗಳಳಿದು, ಲಿಂಗದೇಹಿಯಾದವಂಗೆ ಋತುದೋಷವಾಗಲಿ, ಎಂಜಲು ದೋಷವಾಗಲಿ ಇರಬಹುದೆ ಇರಲಾರವು. ಶ್ರೀಗುರು ಕೃಪೆಯಿಂದ ತಾನೆ ನಾಮರೂಪ ಜಗತ್ತಿಗೆ ಆದಿಯು ಅಹುದು.ಆಧಾರವು ಅಹುದು, ಇವೆರಡು ಒಂದಾದುದರಿಂದ ಶಿವಾಚಾರ ಅಳವಟ್ಟಿತ್ತು, ಶಿವಾಚಾರವೆ ನನ್ನದಾಗಿ ಬ್ರಹ್ಮಾಚಾರವಾಯಿತ್ತು.ಗುಹೇಶ್ವರ ರೂಪಿ ನನ್ನ ಅರಿದು ಅನಾಚಾರವಾಯಿತ್ತು.

ಶ್ರೀಗುರು ಕರುಣಾಬುದ್ಧಿಯಲ್ಲಿ ಪಾಲುಗೊಂಡವರೆಲ್ಲ ಆದಿ, ಆಧಾರವಾಗಿಹ ಪರಬೊಮ್ಮದ ಪರಿಚಿತರು. ಇವೆರಡು ಒಂದೆಯಾಗಿರುವ ಶಿವಾಚಾರವಂತರು, ನಿಷ್ಕಳಂಕ ಆಚಾರವಂತರು, ಕೆಡದ ಆಚಾರವಂತರು, ಗಗನಸದೃಶರು, ಇವರು ಸಟೆಯ ಸೇರರು, ದಿಟದ ಗಾಢ ನಿಷ್ಠೆವುಳ್ಳವರು, ಇಲ್ಲದ ನಾಮರೂಪ ಇಲ್ಲವಾಗಿ, ಇದ್ದ ಪರಮಸತ್ಯದಲ್ಲಿ ಕಾತುರರು, ಸತ್ಯವರಿತ ಸಮಸ್ವರೂಪಿಗಳು, ಶಬ್ದಮುಗ್ಧರು, ನಿಶಬ್ದವೇದಿಗಳು, ಗುರು ಕಾರುಣ್ಯಮಯರು. ಇವರು ಆದಿ ಅಹುದು ಅಂದರೆ ಸೃಷ್ಟಿಗಿಂತ ಮುನ್ನವೆ ಇದ್ದವರು. ಆಧಾರವಾದವರು. ಎರಡೊಂದಾದ ಶಿವಾಚಾರ. ಶಿವಾಚಾರ ಸಯವಾದುದು ಬ್ರಹ್ಮಾಚಾರ, ಕೊನೆಗೆ ಶ್ರೀಗುರು ತನ್ನಂತೆ ಮಾಡಿಕೊಂಡಾಗ ಆವಾವು ಘನವಾಗಿ ಕಾಣದೆ, ಘನಕ್ಕೆ ಘನವಾದುದು ತನ್ನಿರುವಾಗಿರುವುದರಿಂದ ತಾನು ಅಜಾತನೆಂದು ಸಿದ್ಧವಾಗಿರುವಲ್ಲಿ ನನಗಾವ ಪಂಚಸೂತಕಗಳಿಲ್ಲವೆಂದು ಹೇಳಿಹನು. ಆರು ಸೂತಕರಾಗಿಹರು ಅವರಿಗೆ ಶ್ರೀಗುರು ಕಾರುಣ್ಯದ ಘನವ ತಿಳಿವದೆಂತು.

ಶ್ರೀಗುರು ಕರುಣೆಯಲ್ಲಿ ಉತ್ಪತ್ತಿಯಾದವರಿಗೆ ಪಂಚಸೂತಕ ಉಂಟೆಂಬುವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ ಪ್ರಸಾದವಿಲ್ಲವಯ್ಯ ಕೂಡಲಸಂಗಯ್ಯ: ಗುರುಕಾರುಣ್ಯದ ಹಿರಿಮೆ ತಿಳಿಯದವರಿಗೆ ಪಂಚ ಸೂತಕ ಉಂಟಾಗಿ ತೋರುವುದು ಸಹಜ. ಆರು ಸಮಪ್ರಕಾಶ ಮಾನವಾದ ತತ್ವವ ತಿಳಿದಿಹರು, ಅವರು ಸ್ವಯಂಜ್ಯೋತಿ ಲಿಂಗವೆಂಬುದು ತನ್ನಿಂದ ತನಗೆ ವಿದಿತವಾಗುವಲ್ಲಿ ಪಂಚಸೂತಕಗಳಿಲ್ಲವೆಂದು ಹೇಳಿಹರು.

**95**

**ದಾಸೋಹವೆಂಬ ಸೋಹೆಗೊಂಡು ಹೋಗಿ ಗುರುವ ಕಂಡೆ,**
**ಲಿಂಗ ಕಂಡೆ, ಪ್ರಸಾದ ಕಂಡೆ, ಇಂತೀ ಚತುರ್ವಿಧ**
**ಸಂಪನ್ನನಾದೆನು ಕಾಣಾ ಕೂಡಲಸಂಗಮದೇವಾ.**

**ತಾತ್ಪರ್ಯ** : *ದಾಸೋಹವೆಂಬ ಸೋಹೆಗೊಂಡು ಹೋಗಿ ಗುರುವ ಕಂಡೆ :* ಬಸವರಸರು ತಾನು ಚತುರ್ವಿಧ ಸಂಪನ್ನನಾದ ಪರಿಯ ವರ್ಣಿಸುತ್ತಿಹನು. ತಾನು ದಾಸೋಹ ಭಾವಕ್ಕೂ ಮೀರಿ ನಿಂತಲ್ಲಿ ಗುರುವ ಕಂಡೆ ಲಿಂಗ ಕಂಡೆ, ಜಂಗಮ ಕಂಡೆ ಪ್ರಸಾದ ಕಂಡೆನೆಂದು ಹೇಳುವಲ್ಲಿ ಇಲ್ಲಿ ಬಾಹ್ಯದಲ್ಲಿ ತೋರುವ ಗುರು, ಲಿಂಗ, ಜಂಗಮ,

ಪ್ರಸಾದ ಹೇಳಲಿಲ್ಲ, ತನ್ನೊಳಗೆ ಗುರುವಿನ ಗುರು ಲಿಂಗದ ಲಿಂಗ ಜಂಗಮದ ಜಂಗಮ, ಪ್ರಸಾದದ ಪ್ರಸಾದ ಕಂಡುದು ಬಿತ್ತರಿಸಿಹನು.

ಬಹುಭಾವಿಕರಾಗಿಹ ವೀರಶೈವರು ಬಸವಣ್ಣನವರ ದಾಸೋಹ ಭಾವವನ್ನ ಕಂಡಿಹರಲ್ಲದೆ, ಅದಕ್ಕೂ ಮೀರಿ ನಿಂತ ಮಹಾನುಭವ ನೋಡಿದವರು ವಿರಳ, ಇದಲ್ಲದೆ ದಾಸೋಹವನ್ನಾದರೂ ಅರಿತವರು ವಿರಳ, ದಾಸೋಹವೆಂಬುದು ಜ್ಞಾನ ದಾಸೋಹ ನಿರಹಂಭಾವದಲ್ಲಿ ನಿಂತ ದಾಸೋಹ, ಎಲ್ಲೆಲ್ಲೂ ನೀವೆಂಬ ಭಾವದಲ್ಲಿ ಭರಿತವಾದ ದಾಸೋಹ. ಮರಳು ತಲೆ, ಹುರುಳು ತಲೆ ನೀನೆ ದೇವಾ ಎಂಬ ದಾಸೋಹ, ಹೆಂಗೂಸು, ಗಂಡುಗೂಸು, ನೀನೆಂಬ ದಾಸೋಹ, ಎಮ್ಮಕ್ಕನ ಗಂಡ ನೀನೆಂಬ ದಾಸೋಹ, ಭ್ರಾಂತಳಿದು ಭಾವ ನೆಲೆಗೊಂಡ ದಾಸೋಹ, ಎಲ್ಲೆಲ್ಲೂ ಪರಿಪೂರ್ಣವಾಗಿಹ ಅಖಂಡಲಿಂಗ ಕಂಡ ದಾಸೋಹ, ತ್ರಿಕಾಂಡಗಳಿಗೂ ಎಡೆಗೊಡದ ದಾಸೋಹ. ಇದು ಕಾಂಡತ್ರಯಗಳೂ ಮೀರಿದ ದಾಸೋಹ. ಕರ್ಮ, ಉಪಾಸನಾ ಜ್ಞಾನವೆಂಬುದಕ್ಕೂ ಮೀರಿದ ದಾಸೋಹ, ಇಂತಪ್ಪ ಜ್ಞಾನದಾಸೋಹವೇ ಸೋಹೆಗೊಂಡು ಹೋಗಿ ಗುರುದರ್ಶನ, ಲಿಂಗದರ್ಶನ, ಜಂಗಮದರ್ಶನ, ಪ್ರಸಾದ ದರ್ಶನವೆಂದು ತನ್ನೊಳಗೆ ಅರಿದರಿದು ಅರುವೆ ಆಗಿಹ ಮಹಾಂತ. ಇದು ಕಾರಣ, ಚತುರ್ವಿಧ ಸಂಪನ್ನನಾದೆನು ಎಂದು ಹೇಳಿಹರು.

ಈ ಸಂಪನ್ನತ್ವ ಗುರುವರಿತು ಗುರುವಾಗಿಹ ಸಂಪನ್ನತ್ವ , ಲಿಂಗವರಿತು ಲಿಂಗವಾಗಿಹ ಸಂಪನ್ನತ್ವ, ಜಂಗಮವರಿತು, ಜಂಗಮವಾಗಿಹ ಸಂಪನ್ನತ್ವ, ಪ್ರಸಾದವರಿತು ಪ್ರಸಾದವಾಗಿಹ ಸಂಪನ್ನತ್ವ ಇದು ನಿಸ್ಸೀಮ ಸಂಪತ್ತು. ಇಲ್ಲಿ ಗುರು, ಲಿಂಗ, ಜಂಗಮ ಪ್ರಸಾದ ಬೇರೆಂಬ ಖಂಡ ದೃಷ್ಟಿಗಿಂಬಿಲ್ಲ ಒಂದಾದ ದೃಷ್ಟಿ, ತಾನೆ ತಾನಾಗಿಹ ದೃಷ್ಟಿ, ಶಬ್ದಕ್ಕೆ ತೆರಹಿಲ್ಲದ ದೃಷ್ಟಿ, ನಿಜದಲ್ಲಿ ನಿಂದ ನಿರವಯದ ಅರವು.

ಬಹು ಪರಮಾರ್ಥ ಸಂಪನ್ನರು ಗುರುವೆಂದರೆ ಬೋಧಾಮೂರ್ತಿ ಎಂದು ತಿಳಿದವರು ಬಹಳ ಇದ್ದಾರೆ. ಈ ತಪ್ಪು ತಿಳುವಳಿಕೆ ಪರಿಹಾರವಾಗಲು ಬಸವಣ್ಣನವರು ಕಂಡ ಗುರು, ಲಿಂಗ, ಜಂಗಮ ಪ್ರಸಾದವ ಕಂಡಾಗ ಸೀಮಿತ ಭಾವ, ಸೀಮಿತ ಜ್ಞಾನ ಇಲ್ಲವಾಗಿ, ಹೃದಯವೆ ಗುರು ಹೃದಯ ಲಿಂಗ ಹೃದಯ, ಜಂಗಮ ಹೃದಯ, ಪ್ರಸಾದ ಹೃದಯವಾಗಿ ಪರಿಣಮಿಸಿ ತೆರಹಿಲ್ಲದ ಘನವಾಗುವುದು. ಆಗ ಸಕಲವು ಗುರು ಘನವೆ, ಲಿಂಗ ಘನವೆ, ಜಂಗಮ ಘನವೆ, ಪ್ರಸಾದ ಘನವೆ ಆಗಿ ಘನಕ್ಕೆ ಘನವಾಗಿಹ ಸಂಪನ್ನತ್ವ ಸಹಜವೆ ಸಿದ್ಧವಾಗುವುದು. ಇದು ಅಂಗದಲ್ಲಿ ಗುರುಲಿಪಿ ಮನದಲ್ಲಿ ಲಿಂಗ ಲಿಪಿ ಜೀವದಲ್ಲಿ ಜಂಗಮ ಲಿಪಿ ಪ್ರಾಣದಲ್ಲಿ ಪ್ರಸಾದ ಲಿಪಿ ತಿಳಿದು ಸ್ವಸುಖಿಯಾದುದು.

**96**

**ಅಂಗದಲ್ಲಿ ಗುರುಲಿಪಿಯ ತಿಳಿಯಬೇಕು, ಮನದಲ್ಲಿ ಲಿಂಗ ಲಿಪಿಯ ತಿಳಿಯಬೇಕು,**
**ಜೀವದಲ್ಲಿ ಜಂಗಮ ಲಿಪಿಯ ತಿಳಿಯಬೇಕು,**
**ಪ್ರಾಣದಲ್ಲಿ ಪ್ರಸಾದ ಲಿಪಿಯ ತಿಳಿಯಬೇಕು,**
**ಚತುರ್ವಿಧ ಏಕವಾದ ಅನುಭವ ಲಿಪಿ ತಿಳಿದು ನೋಡಲು**
**ಮಹಾಲಿಂಗ ಲಿಪಿ ಕಾಣಬಂದಿತ್ತು**

**ಆ ಮಹಾಲಿಂಗ ಲಿಪಿ ಮುಟ್ಟದ ಸುಜ್ಞಾನಿ ಬಚ್ಚಬರಿಯ ನಿರಾಳ**
**ನೀನೆ ಕೂಡಲ ಚೆನ್ನಸಂಗಮದೇವಾ.**

**ತಾತ್ಪರ್ಯ** : *ಅಂಗದಲ್ಲಿ ಗುರುಲಿಪಿಯ ತಿಳಿಯಬೇಕು, ಮನದಲ್ಲಿ ಲಿಂಗಲಿಪಿಯ ತಿಳಿಯಬೇಕು* : ಬಾಹ್ಯದಲ್ಲಿ ಗುರುವ ಕಂಡವರುಂಟು ಗುರುಲಿಪಿಯ ಕಂಡವರುಂಟು, ಗುರುವೆಂದರೆ ಬೋಧಾ ಮೂರ್ತಿಯೆಂದು ಹೊರಗೆ ಕಂಡರು, ಗುರುವಿನ ಬೋಧೆಯಾಗಿಹ ಉಪನಿಷತ್, ಭಗವದ್ಗೀತಾ, ಬ್ರಹ್ಮಸೂತ್ರ, ವಚನ ಸಾಹಿತ್ಯ ಮೊದಲಾದವುಗಳ ಕಂಡವರುಂಟು ; ತನ್ನಂಗದೊಳಗೆ ಗುರುಲಿಪಿ ತಿಳಿದವರು ಅತಿ ವಿರಳ. ಅಂಗದೊಳಗೆ ಗುರುಲಿಪಿ, ಮನದೊಳಗೆ ಲಿಂಗ ಲಿಪಿ, ಜೀವದೊಳಗೆ ಜಂಗಮಲಿಪಿ, ಪ್ರಾಣದೊಳಗೆ ಪ್ರಸಾದ ಲಿಪಿ, ಇವುಗಳ ಅನುಭವ ಲಿಪಿ, ಈ ಅನುಭವ ಲಿಪಿ ತಿಳಿದು ನೋಡಲು ಮಹಾಲಿಂಗ ಲಿಪಿ.ಇವೆಲ್ಲವುಗಳ ತಿಳಿದ ಮಹಾಂತನೆಂದರೆ ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವಣ್ಣ ಶರಣ ತನ್ನಂಗದೊಳಗೆ ಪಂಚ ವಿಧದ ಲಿಪಿ ಕಂಡ ; ಸುಜ್ಞಾನ ಬಚ್ಚಬರಿಯ ನಿರಾಳ ತಾನೆ ಎಂದು ಹೇಳಿಕೊಂಡ.

ಷಟ್‌ಸ್ಥಲದ ದೇವ ದೇವ ಗುರುಲಿಪಿಯ ತಿಳಿಯ ಹೋಗಿ ಶಬ್ದಮುಗ್ಧನಾದ ನಿಶಬ್ದವೇದಿಯಾದ ಲಿಂಗ ಲಿಪಿ ತಿಳಿಯ ಹೋಗಿ, ಹೇಳಬಾರದ ಘನವಾದ ತೋರಬಾರದ ಅವರ್ಣೀಯನಾದ. ಜಂಗಮ ಲಿಪಿಯ ತಿಳಿಯ ಹೋಗಿ, ಜಂಗಮವೆನ್ನದಾದ, ನಿರ್ನಾಮಿಯಾದ. ಪ್ರಸಾದ ಲಿಪಿ ತಿಳಿಯ ಹೋಗಿ, ತೆರಹಿಲ್ಲದ ಘನವಾದ. ಈ ನಾಲ್ಕು ಶರಣಂಗೆ ಬೇರಾಗಿ ಕಾಣಲಿಲ್ಲ, ಗುರು ಲಿಪಿಯೆ ಲಿಂಗಲಿಪಿ, ಲಿಂಗ ಲಿಪಿಯೆ ಜಂಗಮ ಲಿಪಿ, ಜಂಗಮ ಲಿಪಿಯೆ ಪ್ರಸಾದ ಲಿಪಿ, ಈ ನಾಲ್ಕು ಒಂದೆಯಾದುದೆ ಅನುಭವ ಲಿಪಿ ಕಾಣ ಬಂದಿತ್ತು. ಮಹಾಲಿಂಗ ಕಂಡುದಲ್ಲದೆ ಯತಾರ್ಥವರಿತುದರಿಂದ ನಿರಾಳ ತಾನೆ ಆದನೆಂದು ಹೇಳಿಹನು.

ಗುರುಲಿಪಿ ಇದು ತನ್ನಂಗದೊಳ ತನ್ನನ್ನು ಗುರುವನ್ನು ಒಂದಾಗಿ ಕಾಣಿಸಿದ ಲಿಪಿ, ಇದು ಅರಿದರುಹಿಸಿಕೊಂಬುದಕ್ಕೆ ಮೀರಿದ ಘನ ಲಿಪಿ ದಿಟಲಿಪಿ. ಈ ಲಿಪಿ ತಿಳಿಯ ಹೋದವರು ಶೃತಿಗಗೋಚರರು, ವಾಙ್ಮನವಾಗದವರು, ನಿಶಬ್ದವೇದಿಗಳು. ಇವರು ಕಾಣಬಾರದ ಗುರು ಘನವ ತನ್ನೊಳಗೆ ಕಾಣಹೋಗಿ ಅದುವೆ ಆದವರು. ಶಬ್ದಸಂಭ್ರಮದ ಹಂಗಿಗರಾಗದ್ದರಿಂದ ಶೃತಿಯು ಹೆತ್ತರಿವು ಆಯಿತ್ತು. ಗುರು ಲಿಪಿಯ ತಿಳಿಯ ಹೋಗಿ ಉಪದೇಶವೆ ನಷ್ಟವಾದುದರಿಂದ ಅನುಪಮರು, ಮಹಾಲಿಂಗ ಮುಟ್ಟದ ಸುಜ್ಞಾನಿಯೆ ಅನುಪಮ.

ತನ್ನಂಗದೊಳು ಗುರುಲಿಪಿ ತಿಳಿದವರು, ತನ್ನಿಂದ ತಿಳಿಸಿಕೊಳ್ಳುವ ಆವಾವ ಲಿಂಗವೂ ಆಗಲಿಲ್ಲ, ಅರಿಯುವ ದೃಕ್ ತಾನಾಗಲಿಲ್ಲ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನ ಲಿಪಿಯ ತಿಳಿದು ಅದುವೆ ಆದವರು. ಅಲ್ಲಿ ಬೋಧ, ಅಬೋಧ, ಬೋಧಾಬೋಧವೆಂದು ಹುಡುಕಬಹುದೆ ? ಅರುಹೃದಯ ಅರುವೆ ಬೆಳಗುಳ್ಳ ನಿಲಯವಾಗಿರುವಲ್ಲಿ ಉಪಮಿಸಲುಂಟೆ ?

ಮನದಲ್ಲಿ ಲಿಂಗಲಿಪಿಯ ತಿಳಿಯಬೇಕು: ಮನವೆಂಬುದು ಸಂಕಲ್ಪ, ವಿಕಲ್ಪ ಇಲ್ಲದುದ

ಕಲ್ಪಿಸುವುದು, ಇದ್ದುದನರಿಯದಿರುಹುದು. ಈ ಲಕ್ಷಣವುಳ್ಳ ಮನವು ಲಿಂಗಲಿಪಿಯ ತಿಳಿಯಹೋಗಲು ಸಂಕಲ್ಪವು ನಷ್ಟವು, ವಿಕಲ್ಪವು ನಷ್ಟವು ಆವಲ್ಲಿ ಸಂಕಲ್ಪ, ವಿಕಲ್ಪ ರೂಪಿಮನ ಇದ್ದುದಾಗಿದೆ, ಅಲ್ಲಿ ಮನದಲ್ಲಿಹ ಲಿಂಗ ಲಿಪಿ ತಿಳಿದ ಚಿನ್ಹವಲ್ಲ, ಮನದ ಪ್ರವೃತ್ತಿಯಾಗಲಿ, ನಿವೃತ್ತಿಯಾಗಲಿ, ಉಪಾಧಿಕ ಮನವಾಗಲಿ, ಉಪಾಧಿರಹಿತ ಮನವಾಗಲಿ, ಇವೆರಡು ಇಲ್ಲವಾಗಬೇಕು, ಅದು ಮನದಲ್ಲಿ ಲಿಂಗ ಲಿಪಿ ತಿಳಿದ ಸಂಕೇತ. ಇದಲ್ಲದೆ ಬೋಧ ಮನ, ಅಬೋಧ ಮನ, ಇವೆರಡು ಇಲ್ಲವಾಗಬೇಕು, ಅಲ್ಲಿ ಲಿಂಗ ಲಿಪಿ ತಿಳಿದ ಘನವು ಎಂದು ತಿಳಿವುದು, ಸಮತೆ ಸಯವಾದುದು, ಲಿಂಗ ಲಿಪಿ ತಿಳಿದ ತಿರಳು.

ಜೀವದಲ್ಲಿ ಜಂಗಮ ಲಿಪಿಯ ತಿಳಿಯಬೇಕು : ಈ ಜಂಗಮ ಲಿಪಿ ಭಾವಕ್ಕಗಮ್ಯವಾಗಿಹ ಲಿಪಿ, ಇದು ಅಖಂಡ ಜ್ಞಾನಿಗಳು, ಓದುವ ಲಿಪಿ, ತಿಳಿಯುವ ಲಿಪಿ, ಈ ಲಿಪಿಯ ತಿಳಿಯ ಹೋದವರಿಗೆ, ಸಕಲ ಭಾವನೆಗಳು ಪುಸಿಯಾಗಿ ನಿರ್ಭಾವದ ನಿಲುವೆ ತನ್ನಯ ನಿಲುವಾಗಿದೆ. ಅಲ್ಲಿಯೆ ಜಂಗಮ ಲಿಪಿ ತಿಳಿದ ಸಂಕೇತ. ಸೀಮಿತ ದೃಷ್ಟಿ, ಸೀಮಿತ ಭಾವ, ಸೀಮಿತ ಜ್ಞಾನ ಲಯವಾಗಿ ನಿಸ್ಸೀಮವಾಗಿದೆ. ಅದು ಜಂಗಮ ಲಿಪಿಯ ಸಂಕೇತ. ಜೀವನಿಗೆ ತಾನು ಉಪಾಧಿಯಲ್ಲಿ ಪ್ರತಿಬಿಂಬಿತವಾದ ಚೇತನವೆಂಬ ಅಜ್ಞಾನ ನಷ್ಟವಾಗಬೇಕು, ಉಪಾಧಿರಹಿತ ಚೇತನವೆಂಬ ಅರಿವು ನಷ್ಟವಾಗಬೇಕು, ತನ್ನದು ಉಪಮಿಸದ ಅರಿವು ಎಂಬುದು ತನ್ನಿಂದ ತನಗದು ವಿದಿತವಾದಾಗ ತನ್ನ ನಿರ್ಲಿಖಿತ ಜಂಗಮತ್ವ ತಿಳಿಯುವುದು. ಈ ಜಂಗಮ ಲಿಪಿ ತಿಳಿಯದ್ದರಿಂದ ಶಿವನು ಸರ್ವಜ್ಞನು ಸರ್ವಾಂತರ್ಯಾಮಿಯು.ಜೀವನು ಅಲ್ಪ ಜ್ಞಾನ, ಅಲ್ಪಶಕ್ತಿಯುಳ್ಳವನೆಂಬ ಭೇದಜ್ಞಾನಿಯಾಗಿದ್ದನು. ಈ ಭೇದಜ್ಞಾನ ನಷ್ಟ ಮಾಡಲು ನಿರುಪಮ ಜ್ಞಾನ ತನ್ನೊಳ್ ಪ್ರಕಟವಾದಾಗ ಭೇದಜ್ಞಾನ ತನ್ನಿಂದ ತಾನೆ ನಷ್ಟವಾಗುವುದು. ಆಗ ಜೀವ ಶಿವನೆಂಬ ನಾಮವು ಸಹ ಪುಸಿಯಾಗಿ ಅಲ್ಲಿ ಜೀವ ಶಿವ ಬೇರೆಂಬುದಿಲ್ಲ, ಒಂದೆಂಬುದಿಲ್ಲ, ಇಲ್ಲವೆಂಬುದು ಇಲ್ಲವಾಗಿ ನಿರ್ಲಿಖಿತ ಜಂಗಮ ತತ್ವ ಬೆಳಗುಳ್ಳದ್ದಾಗಿರುವಲ್ಲಿ ಜಂಗಮ ಲಿಪಿ ತಿಳಿದ ಸಂಕೇತ.

ಪ್ರಾಣದಲ್ಲಿ ಪ್ರಸಾದ ಲಿಪಿ ತಿಳಿಯುವುದು : ಪ್ರಸಾದ ಲಿಪಿಯೆಂಬುದು ತೆರಹಿಲ್ಲದ ಜ್ಞಾನಾನಂದ ಈ ಜ್ಞಾನಾನಂದ ಲಭ್ಯವಾದುದು ಪ್ರಸಾದ ಲಿಪಿಯ ತಿಳಿದ ಸಂಕೇತ. ಪ್ರಾಣವೆಂಬುದು ಪುಸಿ. ಇಲ್ಲದ ಪ್ರಾಣ ತನ್ನೊಳು ಕಂಡು, ಇದ್ದ ತನ್ನ ತೆರಹಿಲ್ಲದ ಜ್ಞಾನಾನಂದದಿಂದ ದೂರನಾಗಿಹನು. ಇದು ಲಿಂಗ ಪ್ರಾಣಿಗಳ ಜ್ಞಾನಾಮೃತ, ಈ ಜ್ಞಾನಾಮೃತವನುಂಡವರು ತೆರಹಿಲ್ಲದ ಜ್ಞಾನಾಮೃತವ ತಿಳಿದವರು. ಅರಿಯದರುವೆ ತಾನಾಗಿ ನಿಂತ ನಿಜ ನಿಲವು. ಇಲ್ಲಿ ಪ್ರಾಣವೆಂಬುದು ಪುಸಿಯಾದುದರಿಂದ ಎಮ್ಮವರಿಗೆ ಸಾವು ಇಲ್ಲ, ಸಾವೆಂಬುದು ಸಯವಲ್ಲ, ಸಾವನರಿಯರು ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ ಮತ್ತೊಂದೆಡೆಯುಂಟೆ ಗುಹೇಶ್ವರಾ ಎಂಬ ಪ್ರಭುವಿನ ಪ್ರಬೋಧದಂತೆ ಪ್ರಾಣದಲ್ಲಿ ಪ್ರಸಾದ ಲಿಪಿ ತಿಳಿದವರು ಸಾವನರಿಯದವರು, ಲಿಂಗದಲ್ಲಿ ಉದಯವಾದವರು, ಲಿಂಗವೆ ತಾವಾದವರು. ಇವರಿಗೆ ಗುರು ಲಿಪಿ, ಜಂಗಮ ಲಿಪಿ, ಪ್ರಸಾದ ಲಿಪಿ, ಬೇರಾಗಿ ಕಂಡುದಿಲ್ಲ ಒಂದಾಗಿ ಕಂಡವರು. ಇವರದು ನಿಸ್ಸೀಮ ನಿಲವು. ಮಹಾ ಲಿಂಗಿಗಳು.

ಆ ಮಹಾಲಿಂಗ ಲಿಪಿ ಮುಟ್ಟದ ಸುಜ್ಞಾನಿ ಬಚ್ಚಬರಿಯ ನಿರಾಳ ನೀನೆ

ಕೂಡಲಚೆನ್ನಸಂಗಮದೇವಾ:

ಈ ಮಹಾಲಿಂಗ ಲಿಪಿ ಮುಟ್ಟದ ಸುಜ್ಞಾನಿ ಆರು ಗೊತ್ತೆ ? ಈ ಮಹಾಂತ ಶಬ್ದ ಸೂತಕಿಯಲ್ಲ, ಶಬ್ದಂಗಳೆಲ್ಲ ಹೆತ್ತರಿವು ಆಗಿವೆ ಕಲ್ಪಿತವಾಗಿವೆ. ತನ್ನಯ ಇರುವೆ ಮಹಾ ಲಿಂಗವ ಮುಟ್ಟದುದಾಗಿದೆ. ಅದಕ್ಕಾಗಿ ಬಚ್ಚಬರಿಯ ನಿರಾಳ ತಾನೆ, ಮಹಾಲಿಂಗವೆ ತನ್ನನ್ನು ಮುಟ್ಟದಿರುವಲ್ಲಿ ಗುರುಲಿಪಿ, ಲಿಂಗ ಲಿಪಿ, ಜಂಗಮ ಲಿಪಿ, ಪ್ರಸಾದ ಲಿಪಿ ಇವುಗಳು ತನ್ನನ್ನು ಮುಟ್ಟುವುದು ಅದೆಂತು ? ಇದು ಕಾರಣ ಬಚ್ಚ ಬರಿಯ ನಿರಾಳತ್ವವು ತನ್ನದಾಗಬೇಕೆಂದಲ್ಲಿ ಈ ಚತುರ್ವಿಧ ಲಿಪಿ ಒಂದಾಗಬೇಕು. ಈ ಒಂದಾದುದು ಅನುಭವ ಲಿಪಿ, ಈ ಅನುಭವ ಲಿಪಿ ತಿಳಿದಾಗ ಮಹಾಲಿಂಗ ಲಿಪಿ ಕಂಡ ಸಂಕೇತ. ಈ ಮಹಾಲಿಂಗ ಲಿಪಿ ಘನವಾಗಬಾರದು, ಘನವಾದಲ್ಲಿ ತಾನು ಬಚ್ಚ ಬರಿಯ ನಿರಾಳವಾದ ಸಂಕೇತವಲ್ಲ, ತನ್ನಿರುವಿನ ಅರುವು ತನ್ನಿಂದ ತನಗದು ವಿದಿತವಾದುದೆ ಬಚ್ಚ ಬರಿಯ ನಿರಾಳ ತಾನಾದುದು. ಅದು ಮಹಾಲಿಂಗ ಮುಟ್ಟದ ಸುಜ್ಞಾನವು ಎಂದು ಹೇಳಿದೆ. ಇಂತಪ್ಪ ಪರಮ ಜ್ಞಾನಿ ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ, ಬಹು ಅಗಮ್ಯವಾದುದು.

97

**ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ,**
**ಭಾವವೆ ಕರ್ಪರವಾಗಿ ಪರಮದೇಹಿ ಎಂದು ಬೇಡುವ**
**ಪರಮನ ತೋರಾ ಗುಹೇಶ್ವರಾ.** || 449 ||

**ತಾತ್ಪರ್ಯ :** ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ: ಇದಾರ ಗಮನ, ಇದಾರ ಸೋಂಕು, ಇದಾರ ರುಚಿ ? ಇದು ಪರಮನ ಗಮನ ಪರಮನ ಸೋಂಕು. ಪರಮನೆಂದರೆ ಇವರಾರು ? ಸದ್ಗುರು ಕರುಣಿಸಿದ ಅನುಪಮ ಲಿಂಗವರಿಯ ಹೋಗಿ ಪರಮನಾಗಿಹ ಶರಣನ ಗಮನ, ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ. ಈ ಮಹಾಂತನ ಗಮನ ಗಮನವಿಲ್ಲದ ಗಮನ, ಬಂದು ಬಾರದಿರುವ ಗಮನ. ಮುಟ್ಟಿ ಮುಟ್ಟದಿರುವ ಸೋಂಕು, ಉಂಡವನಾಗದೆ ಉಂಡುದು. ಭಾವವೆ ಭಿಕ್ಷಾಪಾತ್ರೆಯಾಗಿ ಸಂಚಾರ ಮಾಡುವ ಮಹಾಮಹಿಮನ ನಡೆ, ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ರುಚಿ, ತೆರಹಿಲ್ಲದ ಭಾವ, ಅದಾರು ಗುರುತಿಸುವುದು, ಇದು ಶರಣರ ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿಯಾಗಿದೆ.

ಲೌಕಿಕರ ಗಮನ ಆವುದಾದರೂ ಒಂದು ಉದ್ದೇಶವಿಟ್ಟುಕೊಂಡು ಇವರ ಸಂಚಾರವಿರುತ್ತದೆ. ಇವರು ಫಲಪದಂಗಳ ಆಸಕ್ತಿವುಳ್ಳವರು. ತಮ್ಮ ಬಯಕೆ ಈಡೇರಿಸಿ ಕೊಳ್ಳಲು ಇವರುಗಳ ಹರದಾಟವಿರುತ್ತದೆ. ಜೀವನಾಗಿರುವುದು ತನ್ನ ಬಯಕೆಯಿಂದ, ಇಹದಿಂದ ಪರಕ್ಕೆ ಪರದಿಂದ ಇಹಕ್ಕೆ ತಿರುಗಿದರೂ ತೃಪ್ತಿ ಇಲ್ಲ, ಬಯಕೆ ನಷ್ಟವಾಗಿಲ್ಲ, ಆವಾವುದಾದರೊಂದು ಫಲಾಪೇಕ್ಷೆ ಇದ್ದುದೆ ಇವನ ಸಂಚಾರ. ಇಂದ್ರಿಯ ಜನ್ಯ ವಿಷಯೋಪಭೋಗವು ಲಭ್ಯವಾಗಲಿ ಎಂಬುದು ಇವನ ಮುಖ್ಯ ಗುರಿ. ತನ್ನ ಗುರಿ ಸಾಧನೆಗಾಗಿ ಹಲವು ಅಭಿನಯ ಮಾಡುವನು. ಒಮ್ಮೆ ತ್ಯಾಗಿ, ಒಮ್ಮೆ ತಪಸ್ವಿ ಮತ್ತೊಮ್ಮೆ

ಯೋಗಿ, ರಾಜಯೋಗಿ, ಒಮ್ಮೆ ಸಾಕಾರ ಭಕ್ತ, ಒಮ್ಮೆ ನಿರಾಕಾರ ಭಕ್ತ ಹೀಗೆ ತನ್ನ ಉದ್ದೇಶವಿಟ್ಟೆ ಸಂಚರಿಸುವಲ್ಲಿ, ಶರಣರಂತೆ ಕಾಲಿಲ್ಲದ ಗಮನ ಮಾಡುವುದು ಅದೆಂತು ಸಾಧ್ಯ.

ಲಿಂಗವರಿತು ಲಿಂಗಾಂಗಿಯು ಉದ್‌ಭ್ರಮಿಯಲ್ಲ, ಉದ್ದೇಶಿಯಲ್ಲ, ನಿದ್ರೆಗೆಟ್ಟವನು ನಿಜವನೆ ಬೆಳಗುತ್ತಿಹನು, ನಿಶ್ಚಿಂತ ಶರಣ, ಚಿಂತೆ ಕೆಟ್ಟು ಸ್ಥಿರವಾಗಿ ನಿಂದ ಸೀಮೆಯ ಕೆಡಿಸಿ, ನಿಸ್ಸೀಮನಾಗಿ ನಿಂದ ಬೋಧವ ಕೆಡಿಸಿ, ನಿರ್ಬೋಧಕನಾದ ಕಾಯವ ಕೆಡಿಸಿ, ನಿರಾಶಕನಾದ. ಇದು ಕಾರಣ ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ ಆರೂ ಸರಿಯಲ್ಲ, ನಿಜವನೆ ಬೆಳಗುತ್ತಿಹ ಬೆಳಗುಳ್ಳ ಘನ, ಈ ಮಹಿಮನ ಗಮನ ಕಾಲಿಲ್ಲದ ಗಮನವಾಗಿದೆ. ಪರಪ್ರಕಾಶವುಳ್ಳ ರವಿಯು ಅಚಲನಾಗಿ ವಿಶ್ವವನೆಲ್ಲ ಬೆಳಗುತ್ತಿಹನು, ಎಡೆಯಿಲ್ಲದ ಪರಿಪೂರ್ಣನಾಗಿಹ ಶರಣ, ಅಚಲಿತ ಶರಣ. ಆ ಮಹಿಮನೆಂದು ಚರಿಸ್ಯಾಡನು. ಶರಣ ಉದಯಾಸ್ತವೆನ್ನದೆ, ನಿರಂತರ ಬೆಳಗುಳ್ಳ ಬೆಳಗು, ಸೀಮೆಯ ಕೆಡಿಸಿ ನಿಸ್ಸೀಮನಾಗಿ ನಿಂತ ನಿಲವು ಬೋಧವ ಕೆಟ್ಟು, ನಿರ್ಬೋಧನಾಗಿ ನಿಂತ ಘನ, ಸುಖದ ಸುಖಿಯಾದುದರಿಂದ ಬಾಯಿಲ್ಲದ ರುಚಿ ಎಂದು ಹೇಳಿದೆ. ಉಣ್ಣದ ಊಟ ಉಂಡ ಮಹಿಮ. ಎಲ್ಲರು ಉಣ್ಣುವ ಊಟ ಉಂಡರೆ ಈತ ಉಣ್ಣದ ಊಟವನುಂಡ ಶರಣ, ಜ್ಞಾನಾಮೃತವನುಂಡ ಶರಣನಾದುದರಿಂದ ಬಾಯಿಯಿಲ್ಲದ ರುಚಿಯೆಂದು ಹೇಳಿದೆ.

ಭಾವಕಪ್ಪರ, ನೋಡಲು ಭಾವ ಭಿಕ್ಷಾಹಾರಿಯಂತೆ ಕಂಡರೂ ನಿತ್ಯ ತೃಪ್ತ, ಆತನು ಬೇಡ ಬಂದ ಭಿಕ್ಷಾಹಾರವೆ ಬೇರೆ, ಭಕ್ತರ ಭಾವ ಬೇಡಿದ ಭಕ್ತರ ಭಾವದ ಬಿಕ್ಷಾಹಾರಿಯಾಗಿಹನಲ್ಲದೆ ತಿರದುಣ್ಣುವ ಭಿಕ್ಷುಕರಂತೆ ಬಿಕ್ಷಾಹಾರ ಬೇಡಿದವನಲ್ಲ, ಭಕ್ತರ ಭಾವಕೆಡಿಸಲು ಬಂದ ಭಿಕ್ಷಾಹಾರಿ ಭಾವಕ್ಕಗಮ್ಯರ ಮಂಡಲ ಭಾವ ಕಪ್ಪರ ಮಾಡಿದ ಪರಮು. ಇವರನ್ನು ಬಸವರಸ ತನುವ ಬೇಡಿದಡೀವೆ ಮನವ ಬೇಡಿದಡೀವೆ ಧನಬೇಡಿದಡೀವೆ ಎಂದು ಹೇಳಿಕೊಂಡಿಹರು. ಜಂಗಮನು ಕಾಲಿಲ್ಲದ ಗಮನ ಮಾಡುವವನು, ಕೈಯಿಲ್ಲದೆ ಮುಟ್ಟುವವನು, ಬಾಯಿಲ್ಲದೆ ರುಚಿಸುವವನು, ಭಕ್ತರನ್ನು ಭಾವಕ್ಕಗಮ್ಯರ ಮಾಡಲು ಪೂಜ್ಯ ಪೂಜಕರೊಂದು ಮಾಡಲು ಭಾವಕಪ್ಪರವಾಗಿ ಪರಮದೇಹಿಯಾಗಿ ಬೇಡುವ ಪರಮನ ತೋರಾ ಗುಹೇಶ್ವರಾ.

ಪರಮದೇಹಿ ಆರು ಗೊತ್ತೆ ? ದೇಹಿಗೆ ದೇಹಿಯಾಗಿರ್ಪುದರ ಭೇದನಾರು ಬಲ್ಲರು, ಹರಿಬ್ರಹ್ಮಾದಿಗಳರಿಯರು, ಮನು, ಮುನಿಗಳರಿಯರು, ಸಿದ್ಧಸಾಧಕರರಿಯರು, ಅರುವಿಂಗೆ ಅರುವಾಗಿರ್ಪುದನು ನಿನ್ನಿರುವಿಂಗರಿಯಬಹುದೆ, ಗುಹೇಶ್ವರ ಲಿಂಗವನರಿವುಡೆ ನೀನರಿಯದಂತಿರಬೇಕು, ಪರಮದೇಹಿ, ದೇಹಿ ಅನ್ನುವವರಿಗೆ ನಿಲುಕದವನು, ವಿದೇಹಿ ಅನ್ನುವವರಿಗೆ ನಿಲುಕದವನು, ನಿರ್ದೇಹಿ ಎಂಬುದಕ್ಕೂ ನಿಲುಕದವನು, ನುಡಿಗೆಡೆಗೊಡದ ಘನನೆಂದರೂ ನಿಲುಕದವನು, ಇವನಿಗೇನನ್ನಬೇಕು, ಕಥನಕ್ಕೊಳಪಡದವನಿಗೆ ಪರಮದೇಹಿ ಎಂದು ಹೇಳಿದೆ.

ಈತನೊಬ್ಬ ಘನಯಾಚಕ, ಭಕ್ತರ ಭಾವ ಬೇಡ ಬಂದ ಯಾಚಕ, ಅಲ್ಲಯ್ಯನೆಂಬ ಭಿಕ್ಷುಕ, ಕಾಲಿಲ್ಲದ ಗಮನವ ಕಾಣುವ ಭಿಕ್ಷುಕ, ಲಿಂಗವರಿತು ಸರ್ವಾಂಗಲಿಂಗಿಯಾಗಿಹ ಶರಣರ ಕಾಣುವ ಭಿಕ್ಷುಕ, ಇಂತಪ್ಪ ಪರತತ್ವದಲ್ಲಿ ಲೀನವಾಗಿಹ ಪರಮವ ತೋರಾ

ಎಂದು ಪ್ರಾರ್ಥಿಸಿಹನು.

ಶರಣನ ಗಮನ ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ, ಇದು ಚಿದಾಕಾಶದ ಗಮನ, ಚಿದ್ರೂಪದ ಸೋಂಕು, ಚಿದ್ರಸದ ಸವಿ, ನಿರ್ಭಾವದ ಭಾವ, ಪರಬೊಮ್ಮದ ಅರುವು, ಇದು ಅರುವಿಂಗರುವು ಜ್ಞಪ್ತಿ ಅರುವು, ಇದನೆಂತುಪಮಿಸುವುದು, ಗಗನದ ಗಮನ, ಗಗನದ ಸೋಂಕು, ಗಗನದ ಪ್ರಶಾಂತತೆ ವ್ಯಾಪಕತ್ವ, ಇದು ಅಡೆ ತಡೆಯಿಲ್ಲದಿರುವುಳ್ಳದ್ದು, ಇದನೆಂತು ವರ್ಣಿಸುವುದು, ಗಗನವು ಗಗನವೆನ್ನದೆ, ಶಬ್ದಮುಗ್ಧವು, ಇದು ನಿಶಬ್ದವೇದಿಗಳಿಗೆ ಸಹಜವು. ಶಬ್ದವೇದಿಗಳಿಗೆ ನಿಲುಕದ ನಿಲುವು ಮನಮೇರೆದಪ್ಪಿದ ನಿಲವು. ಕಲ್ಪಿತ ಕೆಟ್ಟು ಘನಮನವಾಗಿ ಮನ ಘನವಾಗಿ ಆವುದು ಮುಂದೆ, ಆವುದು ಹಿಂದು ಎಂದರಿಯದೆ ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕುಳ್ಳ ಶರಣರ ನಿಲವು ಅಪ್ರಮಾಣ ಅಗಮ್ಯವು ನೋಡಾ. ಇಂತಪ್ಪ ಪರಮನ ತೋರಾ ಗುಹೇಶ್ವರಾ ಎಂದು ಹೇಳಿಹರು.

**98**

**ಮನದೊಳಗೆ ಘನ ವೇದ್ಯವಾಗಿ, ಘನದೊಳಗೆ ಮನ ವೇದ್ಯವಾದ ಬಳಿಕ**
**ಪುಣ್ಯವಿಲ್ಲ, ಪಾಪವಿಲ್ಲ, ಸುಖವಿಲ್ಲ ದುಃಖವಿಲ್ಲ,**
**ಕಾಲವಿಲ್ಲ ಕರ್ಮವಿಲ್ಲ, ಜನನವಿಲ್ಲ, ಮರಣವಿಲ್ಲ,**
**ಗುಹೇಶ್ವರಾ ನಿಮ್ಮ ಶರಣನು ಘನಮಹಿಮ ನೋಡಯ್ಯಾ.** || 453 ||

**ತಾತ್ಪರ್ಯ** :ಮನದೊಳಗೆ ಘನವೇದ್ಯವಾಗಿ ಘನದೊಳಗೆ ಮನವೇದ್ಯವಾದ ಬಳಿಕ ಪುಣ್ಯವಿಲ್ಲ, ಪಾಪವಿಲ್ಲ :ಮನದೊಳಗೆ ಘನವೇದ್ಯವಾಯಿತೆ? ಇದಾವ ಮನ ? ಮನದೊಳಗೆ ಘನ ತಿಳಿಯಿತೆ ? ಇದಕ್ಕೆ ಮನವೆನಬೇಕೆ ? ಎನಲಾಗದು, ನಿಭ್ರಾಂತ ಮನ, ತನ್ನೊಳಗೆ ನಿಜವ ಕಂಡ ಮನ, ಸುಮನ, ಮೂಲದಿಂದ ಬಂದು ಪುನಃ ಮೂಲವನ್ನೆ ತನ್ನೊಳಗೆ ಕಂಡ ಮನ, ಸುಜ್ಞಾನದಿಂದುಕ್ತವಾದುದು, ಪರಬ್ರಹ್ಮದಿಂದಾದ ಮನ, ಪರಬ್ರಹ್ಮವನ್ನೆ ತನ್ನೊಳಗೆ ಕಂಡ ಮನ, ಇದು ಲೀಲಾ ಮನ, ಶ್ರೀಗುರು ಕಾರುಣ್ಯ ರೂಪಿ ಮನ, ಈ ಮನದೊಳಗೆ ಘನವು ತಿಳಿಯಿತೆ ? ಇಲ್ಲಿ ಮನವು ಹೆತ್ತರಿವು ಆಗಿದೆ, ತಾನು ಘನವಾಗಿಹನು. ಅಂದರೆ ಅರುವಿನರುವು ಆಗಿಹನು, ಆವಲ್ಲಿ ಘನವೆಂಬರಿವು ಹೆತ್ತರಿವು ಆಗಿದೆ, ಅಲ್ಲಿ ಮನವು ಘನಕ್ಕೆ ಘನವು ಆಗಿದೆ. ಇಲ್ಲಿ ತನ್ನಿಂದ ತಾನು ಸಮಪ್ರಕಾಶಮಾನವಾಗಿ ಆರು ತಿಳಿದಿಹರು, ಅವರಿಗೆ ಘನದ ಯತಾರ್ಥ ಅರಿವು ಇದೆ. ಅಲ್ಲಿ ಮನದೊಳಗೆ ಘನವು ವೇದ್ಯವು ಘನದೊಳಗೆ ಮನವು ವೇದ್ಯವು, ಇದ್ದುದೊಂದು ಸಮಪ್ರಕಾಶಮಾನವಾದ ಪರತತ್ವ, ಅದನ್ನು ತಿಳಿಯ ಹೋದವರು ತಿಳಿಸಹೋದವರು ಅವರೆ. ಪೂರ್ವದಲ್ಲಿ ತಿಳಿಸ ಹೋದ ಶ್ರೀಗುರು ಘನವಾಗಿದ್ದ, ತಿಳಿಯುವ ಶಿಷ್ಯನ ಹೃದಯ ಮನವಾಗಿತ್ತು. ಆ ಮನಸ್ಸಿಗೆ ಸಮಪ್ರಕಾಶ ತತ್ವ ತಿಳಿಯ ಹೋಗಿ ಘನ ವೇದ್ಯವಾಯಿತ್ತು, ಆ ಘನದೊಳಗೆ ಸಮಪ್ರಕಾಶಮಾನವಾದ ಪರತತ್ವದೊಳಗೆ ತಿಳಿಸುವ ಮನ, ತಿಳಿಯುವ ಮನ ಸುಮನವಾಗಿ ವೇದ್ಯವಾಯಿತ್ತು. ಮನದೊಳಗೆ ಘನವೇದ್ಯವಾಯಿತ್ತು, ಸುಮನ ಸಮಪ್ರಕಾಶಮಾನವಾದ ತತ್ವ ತಿಳಿಯದೆ

ಹೋದ ಮನ, ತಿಳಿಸುವ ಮನ ಇದೊಂದು ಸುಮನ. ಈ ಸುಮನದೊಳಗೆ ಸಮಪ್ರಕಾಶಮಾನದ ತತ್ವವ ತಿಳಿದುದರಿಂದ ಘನವೇದ್ಯವಾಯಿತ್ತು ಎಂದು ಹೇಳಿಹರು. ಅಚಿಂತ್ಯವೆಂಬುದು ಸುಮನ, ಇದು ತಿಳಿಯ ಹೋಗಿ ಅಚಿಂತ್ಯವೆನ್ನಲು ಬಾರದಂತಾದುದು, ಘನವೇದ್ಯವಾದ ಸಂಕೇತ. ಏನೊಂದು ಉಸರದೆ ಇದ್ದುದು ಘನವು. ಆ ಘನದೊಳಗೆ ಅಚಿಂತ್ಯವೆಂದು ಸುರಿದುದೆ ಸುಮನವಾಗಿದೆ. ಘನದೊಳಗೆ ಮನವು ವೇದ್ಯವಾದ ಬಳಿಕ ಎಂದು ಹೇಳಿಹರು. ಶ್ರೀಗುರು ಕರುಣೆಯಿಂದ ಲಭ್ಯವಾದ ಅರುವ ಅರಿಯ ಹೇಳಿ ಕುರುಹು ಕೊಟ್ಟುದು (ಲಿಂಗ) ಸುಮನವಾಗಿದೆ. ಅದನ್ನು ಅರಿಯ ಹೋಗಿ, ಲಿಂಗವೆನ್ನಲು ಅರುವೆನ್ನಲು ಬಾರದಂತಾದುದೆ ಘನವಾಗಿದೆ. ಆ ಘನದೊಳಗೆ ಮೌನಮುದ್ರಿತ ಸಂಜ್ಞೆ ಸುಮನವಾಗಿದೆ. ಆ ಮೌನ ಮುದ್ರಿತ ಸಂಜ್ಞೆಯ ಅರಿಯ ಹೋಗಿ ಮೌನದ ಮೌನ ವಿದಿತವಾದುದು ಸುಮನದೊಳಗೆ ಘನವೇದ್ಯವಾದುದು.

ಅಖಂಡವೆಂಬ ಸಂಜ್ಞೆ ಸುಮನವಾಗಿದೆ, ಈ ಸಂಜ್ಞೆ ಅರಿಯ ಹೋಗಿ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನೊಳ ತನಗೆ ಪ್ರಜ್ವಲಿಸಿದುದೆ ಮನದೊಳಗೆ ಘನ ವೇದ್ಯವಾದ ಸಂಕೇತ. ಅಖಂಡಿತನ ನಿಲುವು ತನ್ನೊಳ ಕಂಡುದು ತಾನು ಅದುವೆ ಘನವೇದ್ಯವಾದ ಸಂಕೇತ. ಆ ಘನದಲ್ಲಿ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲುವುವೆಂಬ ಸಂಜ್ಞೆಯ ಸುಮನವು ವೇದ್ಯವಾಯಿತ್ತು. ಘನ ಗಂಭೀರವೆಂಬ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯ, ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ. ಇದು ಶ್ರೀಗುರು ಕಾರುಣ್ಯರೂಪಿ ಸುಮನ. ಇದನ್ನು ಆರು ಅಱಿಯ ಹೋಗಿಹರು; ಘನಗಂಭೀರ ಮಹಾ ಘನವೆಂಬ ಲಿಂಗವು ಸುಮನ. ಅದನ್ನು ಅರಿಯ ಹೋಗಿ, ಘನಕ್ಕೆ ಘನವಾದುದು ಘನವಾಗಿದೆ. ಕೂಡಲಸಂಗಯ್ಯನೆಂಬ ಬೆಳಗು ಸುಮನವಾಗಿದೆ. ಅದನ್ನು ಅರಿಯ ಹೋಗಿ ಆ ಬೆಳಗ ಅರಿಯ ಹೋಗಿ ಬೆಳಗಿಂಗೆ ಬೆಳಗಾಗಿದ್ದು ಶಬ್ದಮುಗ್ಧವಾದುದು ಘನವಾಗಿದೆ. ಇಲ್ಲಿ ಶ್ರೀಗುರು ಕಾರುಣ್ಯ ಘನಗಂಭೀರವೆಂಬ ಮಹಾಘನವು ಸುಮನವಾಗಿದೆ. ಈ ಸುಮನದಿಂದ ಘನಕ್ಕೆ ಘನವಾದ ತನ್ನಿರುವು ಲಭ್ಯವಾದುದರಿಂದ ಮನದೊಳಗೆ ಘನವೇದ್ಯವಾಯಿತ್ತು, ಘನವೇದ್ಯವಾದುದು ಘನಕ್ಕೆ ಘನವು, ಅದನೆಂತು ಉಪಮಿಸುವುದು.

ಘಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದವುಂಟೆ ? ದೀಪ್ತಿಗೆ ದೀಪಕ್ಕೆ ಭೇದವುಂಟೆ ? ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಆತ್ಮಕ್ಕೆ ಅಂಗಕ್ಕೆ ಭೇದವುಂಟೆ ? ಸಾವಯವ ನಿರವಯಕ್ಕೆ ಭೇದವಿಲ್ಲವಯ್ಯ ಚೆನ್ನಮಲ್ಲಿಕಾರ್ಜುನ.

ಗಟ್ಟಿದುಪ್ಪವೆಂಬುದು ಸುಮನವಾಗಿದೆ, ತಿಳಿದುಪ್ಪವೆಂಬುದು ಘನವಾಗಿದೆ, ದೀಪವು ಸುಮನವಾಗಿದೆ, ದೀಪ್ತಿಯು ಘನವಾಗಿದೆ. ಆತ್ಮವು ಸುಮನವಾಗಿದೆ, ಅಂಗವು ಘನವಾಗಿದೆ, ಶ್ರೀಗುರುಮಂತ್ರ ಅಜಾತ ಮಂತ್ರ, ಕಿವಿಗೆ ಕೇಳದ ಮಂತ್ರ, ಇದು ಸುಮನವಾಗಿದೆ. ಇದನು ಅರಿಯಹೋದಡೆ ತನ್ನಂಗವು ಅನುಪಮ ಘನವಾಗಿದೆ. ಗಟ್ಟಿದುಪ್ಪ ಇದ್ದಲ್ಲಿ ತಿಳಿದುಪ್ಪ ಸಹಜ ಲಭ್ಯ, ಸುಮನವಿದ್ದಲ್ಲಿ ಅನುಪಮ ಘನ ಸಹಜ ವಿದಿತವು, ದೀಪವಿದ್ದಲ್ಲಿ ದೀಪ್ತಿಯು ಸಹಜ ಲಭ್ಯವು, ಈ ಸಂಜ್ಞೆಯೆ ಸುಮನವಾಗಿದೆ. ಇದನ್ನು ಅರಿಯ ಹೋದಾಗ ಏನೊಂದಸುರಲು ಬಾರದಂತಾದುದು ಘನವಾಗಿದೆ. ಆತ್ಮಕ್ಕೆ ಅಂಗಕ್ಕೆ ಭೇದವಿಲ್ಲವೆಂದು

ತಿಳಿಸಿದ ಸಂಜ್ಞೆ ಸುಮನವಾಗಿದೆ ಅದನು ಅರಿಯ ಹೋಗಿ ತಾನು ಏನೊಂದುಸರಲು ಬಾರದವನಾದುದು ಘನವಾಗಿದೆ.

ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನೆಂಬ ಸಂಜ್ಞೆ, ಸುಮನವಾಗಿದೆ. ಅದನು ಅರಿಯ ಹೋಗಿ ಸಾವಯವ ನಿರವಯವೆಂದು ವಿವರಿಸಬಾರದಂತಾದುದು ಘನವಾಗಿದೆ. ಆವಲ್ಲಿ ಸುಮನವಿದೆ ಅಲ್ಲಿ ಏನೊಂದುಸರಲು ಬಾರದಂತಾದ ಘನವಿದೆ, ಘನವಿದ್ದಲ್ಲಿ ಘನವರಿಯುವ ಕಾರುಣ್ಯರೂಪಿ ಸುಮನವಿದೆ, ಇದು ಕಾರಣ ಮನದೊಳಗೆ ಘನವೇದ್ಯವಾಗಿ ಘನದೊಳಗೆ ಮನವೇದ್ಯವಾದ ಬಳಿಕ ಪುಣ್ಯವಿಲ್ಲ, ಪಾಪವಿಲ್ಲ, ಸುಖವಿಲ್ಲ, ದುಃಖವಿಲ್ಲ, ಕಾಲವಿಲ್ಲ, ಕರ್ಮವಿಲ್ಲ, ಜನನವಿಲ್ಲ, ಮರಣವಿಲ್ಲ, ನಿಭ್ರಾಂತದೊಳ ಭ್ರಾಂತಿ ಏತರದು, ನಿಶ್ಚಿಂತದೊಳ ಚಿಂತೆ ಏತರದು. ಗುಹೇಶ್ವರ ಲಿಂಗದೋಳ್ ಕುರುಹು ಏತರದು, ಅರುವಿಂಗರುವು ಇರುವಲ್ಲಿ ಮರವು ಏತರದು, ಅರುವು ಏತರದು, ಬೆಳಕಿನೊಳ ಕತ್ತಲೆ ಏತರದು, ಬೆಳಗಿನೊಳ್ ಬೆಳಗಾಗಿಪ್ಪವಂಗೆ ಕತ್ತಲೆ ಏತರದು, ಬೆಳಕು ಏತರದು ಅಂಗವನ್ನೆ ಅಜಾತ ಮಂತ್ರ ಮಾಡಿದ ಮೇಲೆ ಜನನ ವೇತರದು, ಮರಣವೇತರದು ? ಸಾವಯವ ನಿರವಯ ಒಂದು ಮಾಡಿದವಂಗೆ ಪುಣ್ಯವೇತರದು, ಪಾಪವೇತರದು. ಅರುವಿಂಗರುವಾಗಿಹ ಘನವಂತಂಗೆ ಸುಖವೇತರದು, ದುಃಖವೇತರದು. ನಿರಂಜನ ನಿಜಚಿದ್ರೂಪವದು ತನ್ನಿರುವೆಂದರಿದವಂಗೆ ಕಾಲವೇತರದು, ಕರ್ಮವೇತರದು ಗುಹೇಶ್ವರಾ ನಿಮ್ಮ ಶರಣ ಘನ ಮಹಿಮ ನೋಡಯ್ಯ. ಇಂತಪ್ಪ ಪರಾತ್ಪರ ಜ್ಞಾನಿಯಾದುದರಿಂದ ನಿಮ್ಮ ಶರಣ ಘನ ಮಹಿಮ ನೋಡಯ್ಯ ಎಂದು ಹೇಳಿಹರು.

**99**

**ಪರುಷವೇದಿಯ ಸಾಧಿಸಹೋದಡೆ ದಾರಿದ್ರ ಘನವಾಯಿತ್ತು,**
**ಮರುಜವಣಿಯ ಹಣ್ಣು ಮೆದ್ದು, ಮರಣವಾಯಿತ್ತು ಕಂಡೆ, ಎಲ್ಲವನು**
**ಸಾಧಿಸ ಹೋದಡೆ ಏನೂ ಇಲ್ಲದಂತಾಯಿತ್ತು, ನಾನು**
**ನಿಜವನು ಸಾಧಿಸಿ ಬದುಕಿದೆನು ಗುಹೇಶ್ವರಾ.**

**ತಾತ್ಪರ್ಯ** : *ಪರುಷವೇದಿಯ ಸಾಧಿಸ ಹೋದಡೆ ದಾರಿದ್ರ ಘನವಾಯಿತ್ತು* : ಅಮೃತ ಸೇವನೆಯ ಮಾಡಿ ಆಪ್ಯಾಯನ ಘನವಾಗಿತ್ತು, ಅಮೃತ ಸೇವನೆಯ ಮಾಡಿ ಹಸಿವೆ ದೊಡ್ಡದಾಯಿತ್ತು, ಅಮೃತ ಸೇವನೆ ಮಾಡಿದವರು ಇವರಾರು ? ಸ್ವರ್ಗದಲ್ಲಿ ವಾಸವಾಗಿಹ ದೇವತೆಗಳು ದೇವತೆಗಳ ಒಡೆಯನಾಗಿಹ ದೇವೇಂದ್ರ ಇವರಿಗೆ ಅಮೃತ ಸೇವನೆ ಮಾಡಿದಷ್ಟು ತೃಪ್ತಿಯದಾಹಕ ಅಧಿಕವಾಯಿತ್ತು. ಅಮೃತ ಇದೆಂಥ ಅಮೃತ, ರುಚಿಯಲ್ಲಿ ಬಹುರುಚಿಯಾದುದು ; ಸಿಹಿಯಲ್ಲಿ ಮೇಲಿಂದ ಸವಿ, ಸವಿಯಲ್ಲಿ ಅಧಿಕ ಸವಿಯಾದುದು. ಬಹು ಸವಿಯುಳ್ಳ ಅಮೃತ ಸೇವನೆಯ ಮಾಡಿ ಇನ್ನು ಸೇವಿಸಬೇಕೆಂಬ ಹಂಬಲ ಅಧಿಕವಾಯಿತಲ್ಲದೆ ತೃಪ್ತರೂಪ ತೃಪ್ತಿ ಸಿಗಲಿಲ್ಲ, ತಾತ್ಕಾಲಿಕ ತೃಪ್ತಿಯಾಯಿತಲ್ಲದೆ ಅಖಂಡಾನಂದವಾಗಲಿಲ್ಲ.

ಅಮೃತ ಸೇವನೆಯಿಂದ ಅಮರತ್ವ ಲಭಿಸಿತೆ ? ಅಮರರಾದರೆ ? ಇದು

ಸ್ವರ್ಗದಲ್ಲಿರುವ ಮಾಯಿಕ ಪಾಯಸ. ಎಲ್ಲಾ ಪಾಯಸಕ್ಕಿಂತ ಮಿಗಿಲಾದ ಪಾಯಸ. ಇದು ರಸನೇಂದ್ರಿಗೆ ಬಹು ಇಷ್ಟವಲ್ಲದೆ ಹೃದಯಕ್ಕೆ ಪರಮಾನಂದ ಜ್ಞಾನಾನಂದ ಲಭ್ಯವಾಯಿತೆ ? ದೇವತೆಗಳು ಇದು ನಿಜವಾದ ಅಮೃತವೆಂದು ; ತಾವಾರೆಂದು ತಿಳಿಯದೆ ಮೋಸಹೋದರು, ನಿಜವಾದ ಜ್ಞಾನಾಮೃತಕ್ಕೆ ದೂರಾದರು. ತಾನೆ ಅಮೃತ ರೂಪನಿದ್ದು, ತನಗಿಂತನ್ಯವಾದುದು ಅಮೃತ ಹೇಗಾಗುವುದು. ಎಷ್ಟೊ ದಿವಸ ಜಿತೇಂದ್ರಿಗಳಾಗಿ ತಪಸ್ವಿಗಳಾಗಿ ತ್ಯಾಗಿಗಳಾಗಿ ಯೋಗಾರೂಢರಾಗಿ ಆ ಪುಣ್ಯದ ಫಲದಿಂದ ಸ್ವರ್ಗದ ಅಧಿಪತಿಗಳಾಗಿ ಕೊನೆಗೆ ಮೋಸದ ಅಮೃತಕ್ಕೆ ಮೆಚ್ಚಿದರೆ ? ಇವರದೆಂಥ ಬುದ್ಧಿ, ಈ ಬುದ್ಧಿ ನಿತ್ಯಾನಿತ್ಯವನರಿಯದ ಬುದ್ಧಿ, ಸಕಾಮಿಯಾಗಿ ತಮ್ಮ ಸುಕೃತವ ತಾವೆ ಹಾಳು ಮಾಡಿಕೊಂಡರೆ ? ಇವರಿಗೆ ಪರಿಶುದ್ಧ ಹೃದಯವಿಲ್ಲ, ನಿಷ್ಕಾಮಿಗಳಲ್ಲ, ಗುರುವ ಕಾಣದವರು, ತತ್ವ ಜ್ಞಾನವಿಲ್ಲದವರು ಇವರಿಗೆ ಪುರುಷಾರ್ಥ ಜ್ಞಾನವಿಲ್ಲದ್ದರಿಂದ ಅಮೃತ ಸೇವನೆ ಮಾಡಿದರೂ ಮೃತ್ಯುಗೀಡಾದರು.

ಪರುಷವೇದಿಯ ಸಾಧಿಸ ಹೋದಡೆ ದಾರಿದ್ರ ಘನವಾಯಿತ್ತು : ಪರುಷವೇದಿ, ಪರುಷಮಣಿ ಪಡೆಯ ಹೋದವರಿಗೆ ದಾರಿದ್ರವೆ ಅಧಿಕವಾಯಿತಲ್ಲದೆ ಶಿರಿವಂತರಾಗಲಿಲ್ಲ.

ಹಿಂದಕ್ಕೆ ಪಾರಶಿದೇಶದ ಒಬ್ಬ ರಾಜನಿದ್ದನು, ಅವನಿಗೆ ಪರಶುಮಣಿ ಲಭ್ಯವಾದುದರಿಂದ ಬಹು ಐಶ್ವರ್ಯವಂತನಾಗಿದ್ದನು. ಅದರ ಸಹಾಯದಿಂದ ತನ್ನ ಅರಮನೆಯನ್ನೆ ಚಿನ್ನದಿಂದ ರಚಿಸಿದ್ದನು, ಅಂತಃಪುರವಂತು ರತ್ನ, ವಜ್ರ, ವೈಢೂರ್ಯದಿಂದ ರಚಿತವಾದದ್ದಿತ್ತು, ನಾನು ಅಧಿಕ ಐಶ್ವರ್ಯವಂತನೆಂಬ ಅಹಂಕಾರಿಯಾಗಿದ್ದನು. ಸ್ವಲ್ಪ ದಿನಗಳೆದ ನಂತರ ಹಿಂದುದೇಶ ರಾಜನಲ್ಲಿಗೆ ಹೋದಾಗ, ತನ್ನ ಅರಮನೆಯನ್ನು ಅಂತಃಪುರವನ್ನು ತೋರಿಸಿದುದಲ್ಲದೆ, ನಿಮ್ಮ ದೇಶದಲ್ಲಿ ಪರಶುಮಣಿ ಸಿಗುತ್ತವೆಯೆ ಎಂದು ಪ್ರಶ್ನಿಸಿದನು, ಹಿಂದು ರಾಜನು ನಮ್ಮ ದೇಶದೊಳಗೆ ಇವುಗಳು ಇಲ್ಲವೆಂದು ಹೇಳಿದನು. ಆಗ ಪಾರಸಿ ದೇಶದ ರಾಜನು, ನಿಮ್ಮ ದೇಶ ಬಡದೇಶ, ಚಿನ್ನವಿಲ್ಲದ ದೇಶ, ದರಿದ್ರ ದೇಶ, ಭಿಕಾರಿಗಳ ದೇಶ, ದರಿದ್ರರು ಇರುವ ದೇಶ, ಆ ದೇಶದಲ್ಲಿರುವ ರಾಜನು ದರಿದ್ರನೆ ಎಂದು ಅಪಹಾಸ್ಯ ಮಾಡಿದನು, ಹಿಂದು ದೇಶದ ರಾಜನು ಬಹುಕುಶಲಮತಿಯು ತತ್‌ಕ್ಷಣ ಮಾತಿಗೆ ಮಾತು ಪ್ರಶ್ನೆಗೆ ಸರಿಯಾದ ಉತ್ತರ ಕೊಡುವ ಅತಿಚಾಣಾಕ್ಷನಾಗಿದ್ದನು. ಆತನು ಇವನ ಗರ್ವ ನೋಡಿ ಗಹಗಹಿಸಿ ನಕ್ಕು, ನನ್ನ ದೇಶದ ಮುಂದೆ ನಿನ್ನ ದೇಶ ಬೆಲೆಯಿಲ್ಲದ ದೇಶ, ನಿಕೃಷ್ಟದೇಶ, ನನ್ನ ದೇಶದಲ್ಲಿ ಒಂದು ರತ್ನವಿದೆ, ನಿನ್ನ ದೇಶದಲ್ಲಿ ಮಣಿ ಇದೆ, ರತ್ನವೆತ್ತ ? ಮಣಿ ಎತ್ತ ? ನೀನೆ ವಿಚಾರ ಮಾಡು, ನಿನ್ನ ಪರಶು ಮಣಿ ಕಬ್ಬಿಣ, ಬಂಗಾರ ಮಾಡುತ್ತದಷ್ಟೆ, ರತ್ನ ಮಾಡದು, ಅದು ಅಮೌಲ್ಯ ರತ್ನ, ನನ್ನ ದೇಶದಲ್ಲಿರುವ ರತ್ನ ಅದು ಆವುದನ್ನು ಮುಟ್ಟುವುದು ಅದು ತನ್ನಂತೆ ಮಾಡುವ ರತ್ನ, ಈ ರತ್ನ ಸಹಾಯದಿಂದ ನನ್ನ ದೇಶದಲ್ಲಿ ಅಧಿಕಾಧಿಕ ರತ್ನಗಳು ಇವೆ. ಆ ರತ್ನಗಳಿದ್ದುದು ನೋಡಿದರೆ ಅದರ ಮುಂದೆ ನಿನ್ನ ದೇಶ ಬಹು ಹಿಂದುಳಿದ ದೇಶ, ಜ್ಞಾನಶೂನ್ಯ ದೇಶ ಅಂತಪ್ಪ ರತ್ನವಿಲ್ಲದ ದೇಶ, ಅದು ಬಹು ನಿಕೃಷ್ಟದೇಶ, ಅಲ್ಲಿ ವಾಸಿಸುವವರೆಲ್ಲ ನಿಕೃಷ್ಟರೆ ಎಂದು ತನ್ನ ದೇಶಕ್ಕೆ ಬಂದನು.

ಈ ವಿಷಯ ಕೇಳಿ ಪಾರಸಿ ದೇಶದ ಅರಸನಿಗೆ ಹಿಂದು ದೇಶದಲ್ಲಿರುವ ರತ್ನವ ನೋಡಲು ರಾಜನಲ್ಲಿಗೆ ಬಂದನು, ರಾಜನ ಮನೆಯಲ್ಲಿ ಬಹುಪರಿಯಾಗಿ ಪರಿಶೋಧಿಸಿ

ನೋಡಿದನು. ರತ್ನವ ಕಾಣಲಿಲ್ಲ, ರತ್ನದಿಂದಾದ ರತ್ನಂಗಳು ಕಾಣಲಿಲ್ಲ, ಕೊನೆಗೆ ಈ ವಿಷಯ ರಾಜನ ಮುಂದೆ ಇಡದ ವಿನಃ ಗತ್ಯಂತವಿಲ್ಲವಾಗಿ ಹೇ ರಾಜನ್, ನಮ್ಮ ದೇಶದಲ್ಲಿ ರತ್ನವಿದೆ ಎಂದು ತಾವು ಹೇಳಿದಿರಿ, ಅದು ಕಾಣಲೊಲ್ಲದೆಂದನು, ಆಗ ಹೇ ಪಾರ್ಶಿದೇಶದ ರಾಜನೆ, ನನ್ನ ದೇಶದಲ್ಲಿರುವ ರತ್ನದ ಘನತ್ವ ಹೀಗಿದೆ. ಅದು ಕಣ್ಣುಳ್ಳವರಿಗೆ ಕಾಣಿಸುವುದು ಎಂದನು. ಪಾರಶಿ ದೇಶದ ರಾಜನು ನನಗೆ ಕಣ್ಣಿವೆ ಎಂದನಂತೆ. ಆಗ ಹಿಂದು ದೇಶದ ರಾಜನು, ನಿನ್ನ ಈ ಕಣ್ಣಿಗೆ ಕಾಣಿಸುವುದಲ್ಲ ಶ್ರೀಗುರುವಿನ ಕೃಪೆಯಿಂದ ಲಭ್ಯವಾದ ಕಣ್ಣು ಇದ್ದರೆ ಮಾತ್ರ ಆ ರತ್ನವ ಕಾಣುವೆ ಇಲ್ಲವಾದರೆ ಅದು ಮುಂದಿದ್ದರೂ ನಿನಗೆ ಕಾಣಿಸುವುದಿಲ್ಲವೆಂದನಂತೆ. ಓ ರಾಜನ್ ನಿನ್ನ ಪರಶುಮಣಿಯಿಂದ ನಿನಗೆ ತೃಪ್ತಿ ಇದೆಯಾ ? ನಿಶ್ಚಿಂತತೆ ಇದೆಯಾ ? ಅಚ್ಚ ಸುಖಿಯಾಗಿರುವಿಯಾ ನೀನು ಭವದ ಭೀತಿಯಿಂದ ವಿರಹಿತನೆ ? ಎಂದು ಪ್ರಶ್ನಿಸಿ ನನ್ನ ದೇಶದಲ್ಲಿರುವ ರತ್ನದಿಂದ ನಾನು ತೃಪ್ತರೂಪ ತೃಪ್ತನಾಗಿರುವೆ ನಿಜಸುಖಿಯಾಗಿರುವೆ. ನಿರ್ಭೀತನಾಗಿರುವೆ, ಹುಟ್ಟುಸಾವುಗಳೆ ನನಗೆ ಕಾಣದಾಗಿವೆ. ನಿನ್ನ ಪರಶುಮಣಿ ಘನವೊ ? ನನ್ನ ದೇಶದಲ್ಲಿದ್ದ ರತ್ನ ಘನವೊ ? ನೀನೆ ವಿಚಾರ ಮಾಡು, ಅದಕ್ಕೆ ರಾಜನು ಒಪ್ಪಿ, ತನ್ನ ಅಹಂಕಾರವ ಬಿಟ್ಟು ಬಹು ಕಿಂಕರನಾಗಿ ಆ ರತ್ನವ ತೋರಿಸೆನಲು ಆಗ ತನ್ನ ದೇಶದಲ್ಲಿರುವ ಮಹಾತ್ಮರ ತೋರಿಸಿ, ಆ ಮಹಾಂತರಲ್ಲಿರುವ ನುಡಿಗೆಡೆಗೊಡದ ಘನದ ಜ್ಞಾನವು ಅಪಾರವಾದುದು, ಆ ಜ್ಞಾನ ರತ್ನ ಆರನ್ನು ಮುಟ್ಟುವುದು ಅವರು ಅದುವೆ ಆಗುವರು ಎಂದು ಹೇಳುವುಡೆ ತಾನು ಆ ಮಹಾತ್ಮನಿಂದ ಮಹಾಜ್ಞಾನವ ಪಡೆದು ಕೃತಕೃತ್ಯನಾದನು.

ಮರುಜವಣಿಯ ಹಣ್ಣುಮೆದ್ದು, ಮರಣವಾದುದು ಕಂಡೆ : ಮರುಜವಣಿ ಹಣ್ಣು ಎಂದರೆ ಅಮರ ಫಲ. ಅಮರ ಫಲವ ಮೆದ್ದ ಮೇಲೆ ಅಮರರಾಗುವುದು ಸಹಜವಾದುದು, ಅದನ್ನು ಸೇವಿಸಿ ಮರಣವಾಗುವುದೆಂದಲ್ಲಿ ಅದು ಹೇಗೆ ಅಮರ ಫಲವಾಗುವುದು.

ಪೂರ್ವದಲ್ಲಿ ಲಕ್ಷ್ಮಣ ಮೂರ್ಛಿತ ಸಮಯದಲ್ಲಿ ಆಂಜಿನೇಯನು ಸಂಜೀವಿನಿ ಕಡ್ಡಿಯನ್ನು ತೆಗೆದುಕೊಂಡು ಬಂದನೆಂದು ಕಥೆ ಇದೆ. ಆ ಕಡ್ಡಿ ಮೆದ್ದು ಲಕ್ಷ್ಮಣ ಅಮರನಾದನೆ ? ಅದನ್ನು ಹೊತ್ತು ತಂದ ಆಂಜನೇಯನು ಅಮರನಾದನೇ ? ಯುಗ ಜುಗಂಗಳು ಗತವಹವಲ್ಲದೆ. ಅಮರತ್ವವೆ ? ಎಲ್ಲವನು ಸಾಧಿಸಿದರೂ ತನಗೆ ಏನೂ ಇಲ್ಲದಂತಾಯಿತ್ತು ಅಮೃತವನ್ನು ಸೇವಿಸಿದ ಪರುಶಮಣಿಯು ಹಸ್ತಗತವಾಯಿತು, ಕೊನೆಗೆ ಸಂಜೀವಿನಿ ಕಡ್ಡಿ ದೊರೆತರು ತನಗೆ ಮರಣದ ಕಾಲಕ್ಕೆ ಇವಾವು ಇಲ್ಲವೆಂದು ಹೇಳಿಹರು.

ನಾನು ನಿಜವ ಸಾಧಿಸಿ ಬದುಕಿದೆನು ಗುಹೇಶ್ವರಾ : ನಿಜವ ಸಾಧಿಸಿದವರು ಯಾರು ? ಲಿಂಗೈಕ್ಯ ಶರಣ, ಇವರು ನಿಜವ ಸಾಧಿಸಿ ಸಹಜವೆನ್ನದೆ ನಿಜವೆನ್ನದೆ ಅಚಲವೆನ್ನದೆ, ಅಖಂಡಿತವೆನ್ನದೆ, ಶೂನ್ಯನೆನ್ನದೆ, ನಿಶೂನ್ಯನೆನ್ನದೆ, ಏನೂ ಎನ್ನದೆ ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು. ಇವರು ನಿಜವ ಸಾಧಿಸಿದವರು ಗುರುವಿಡಿದ ಅರುವಿನವರಲ್ಲ, ಲಿಂಗವಿಡಿದ ಅರುವಿನವರಲ್ಲ, ತನ್ನಿಂದ ತಾನರಿದ ತನ್ನಿರವು ತಾನೆ ನಿಜ, ನಿಜವ ಸಾಧಿಸಲು ಮುಖ್ಯವಾಗಿ ಬ್ರಹ್ಮಚರ್ಯ ಅವಶ್ಯಕವಾದುದು, ಈ ಬ್ರಹ್ಮಚರ್ಯವ ನಾನಾ ವಿಧವಾಗಿ ತಿಳಿದಿಹರು. ಶರಣರು ತಿಳಿದ ತಿರುಳೆ ಬ್ರಹ್ಮಚರ್ಯವಾಗಿಹುದು.

100

**ಪೂರ್ವಬೀಜ ಬ್ರಹ್ಮಚರ್ಯವೆ ? ಅರಿವು ತಾ ಬ್ರಹ್ಮಚರ್ಯವೆ ?**
**ಜ್ಞಾನಾ ಜ್ಞಾನದುದಯ ತಾ ಬ್ರಹ್ಮಚರ್ಯವೆ ? ಗುಹೇಶ್ವರಾ**
**ನಿಮ್ಮ ಶರಣರ ಪರಿಣಾಮವೆ ಬ್ರಹ್ಮಚರ್ಯವು.**

**ತಾತ್ಪರ್ಯ** : ಬ್ರಹ್ಮಚರ್ಯದ ವಿಷಯದಲ್ಲಿ ಸರಿಯಾಗಿ ತಿಳಿದವರು ವಿರಳ. ಹಲವರು ಹಲವು ವಿಧವಾಗಿ ತಿಳಿದಿಹರು, ಕೆಲಬರು ಇಂದ್ರಿಯ ನಿಗ್ರಹಕ್ಕೆ ಬ್ರಹ್ಮಚರ್ಯವೆಂದು ತಿಳಿದವರು ಹೆಚ್ಚಾಗಿ ಅವರೆ! ಬ್ರಹ್ಮವೆಂದರೆ ಇಂದ್ರಿಯಂಗಳೆ ? ಇಂದ್ರಿಯಾಗಿದ್ದರೆ ಅದನ್ನು ನಿಗ್ರಹಿಸಿದರೆ ಬ್ರಹ್ಮಚರ್ಯವೆನ್ನುವುದು ಸರಿ.

ನರರು ಸುರಾಸುರರು, ತಪಸ್ವಿಗಳು, ತ್ಯಾಗಿಗಳು, ಹಠಯೋಗಿಗಳು, ಇಂದ್ರಿಯ ನಿಗ್ರಹಕ್ಕೆ ಬ್ರಹ್ಮಚರ್ಯವೆಂದಿಹರು, ಪೂರ್ವದಲ್ಲಿ ಇಂದ್ರಿಯ ನಿಗ್ರಹಕ್ಕೆ ಬ್ರಹ್ಮಚರ್ಯವೆಂದು ತಿಳಿದು ಆಚರಿಸಿಹರು. ಪೂರ್ವದಲ್ಲಿ ಚಾಂಗದೇವ, ಇಂದ್ರಿ ನಿಗ್ರಹಕ್ಕೆ ಬ್ರಹ್ಮಚರ್ಯವೆಂದು ತಿಳಿದು 1400 ವರ್ಷ ಬಾಳಿ ಬದುಕಿಹರು. ಹೆಚ್ಚಾಗಿ ವಿರತಿ ವಿರತಿಗಳು ಇಂದ್ರಿಯ ನಿಗ್ರಹಕ್ಕೆ ಬ್ರಹ್ಮಚರ್ಯವೆಂದು ತಿಳಿದು ಆಚರಿಸುತ್ತಿಹರು. ಇಂದ್ರಿನಿಗ್ರಹವೆ ಬ್ರಹ್ಮಚರ್ಯವಾದರೆ ಇದು ಬ್ರಹ್ಮನ ನಡತೆಯೆ ? ಬ್ರಹ್ಮನಾಗಿ ನುಡಿದಿಹನೆ ? ನಡೆದಿಹನೆ ? ಬ್ರಹ್ಮವೆಂಬುದು ಆವುದು ಗೊತ್ತೆ ? ಬ್ರಹ್ಮದ ಅರಿವೆ ಇಲ್ಲದವಂಗೆ ಬ್ರಹ್ಮದ ಆಚಾರವ ಹೇಗೆ ಆಚರಿಸಿದನು, ಆಚರಿಸದೆ ಬ್ರಹ್ಮಚರ್ಯ ಹೇಗಾಗುವುದು.

ಪೂರ್ವ ಬೀಜ ಬ್ರಹ್ಮಚರ್ಯವೆ ? ಇಂದ್ರಿಯ ನಿಗ್ರಹಕ್ಕೆ ಜಿತೇಂದ್ರಿ ಎಂದು ಹೇಳಬಹುದು. ಬ್ರಹ್ಮವು ಅತೀಂದ್ರಿಯು. ಅತೀಂದ್ರಿ ವಿದ್ಯೆ ಆರು ಅಭ್ಯಾಸ ಮಾಡಿಹರು ಅವರಿಗೆ ಬ್ರಹ್ಮಚರ್ಯವೆಂದು ಹೇಳುವುದು. ಇದನ್ನು ಬಿಟ್ಟು ಇಂದ್ರಿನಿಗ್ರಹ ಬ್ರಹ್ಮಚರ್ಯವಾದರೆ ಈ ವಿರತಿಯು ಬ್ರಹ್ಮನಿಂದ ಜನಿಸಿದನೆ ? ವಿರತಿಗಳು ಜನ್ಮಿಸಿದ ಮೂಲವಾವುದು ? ವಿರತಿಯು ವಿರತಿಯಿಂದ ಹುಟ್ಟಿದನೆ ? ಅಥವಾ ಗೃಹಸ್ಥರಿಂದ ಹುಟ್ಟಿದನೆ ? ಗೃಹಸ್ಥರಿಂದ ಉದಯಿಸಿದ ಮೇಲೆ ಬ್ರಹ್ಮಚರ್ಯವಂತರ ಪೂರ್ವ ಬೀಜ ಗೃಹಸ್ಥನ ಬೀಜವಲ್ಲವೆ ? ಮುನ್ನವೆ ಗೃಹಸ್ಥನ ಬೀಜವಾದ ಮೇಲೆ ಅದು ವಿರತಿ ಹೇಗಾಗುವುದು, ಇದು ಕಾರಣ ಪ್ರಭು ಇಂದ್ರಿಯ ನಿಗ್ರಹ ಮಾಡಿದಾಗ ಬ್ರಹ್ಮಚರ್ಯವಾಗಲಿಲ್ಲವೆಂದು ಪೂರ್ವಬೀಜ ಬ್ರಹ್ಮಚರ್ಯವೆ ಎಂದು ವಿರತಿ ಸಮೂಹಕ್ಕೆ ಪ್ರಶ್ನಿಸಿಹನು.

ಅರಿವು ತಾ ಬ್ರಹ್ಮಚರ್ಯವೆ : ಅರಿವು ತಾನೆನ್ನುವದಾದರೂ ಬ್ರಹ್ಮಚರ್ಯವೆ ? ಅಂದರೆ ಬ್ರಹ್ಮದ ಆಚಾರವೆ ? ಬ್ರಹ್ಮವು ವಾಙ್ಮನೋತೀತವು ನುಡಿಗೆಡೆಗೊಡದ ಘನವು, ನುಡಿಗೊಳಪಟ್ಟ ಅರಿವು ; ಅದು ಬ್ರಹ್ಮವರಿತ ಬ್ರಹ್ಮಚರ್ಯವಾಗಬಹುದೆ ? ಇದು ಗುರುವಿನಿಂದ ಉಪದೇಶ, ಅರುವೆ ನೀನೆಂದು ಸದ್ಗುರು ಪೇಳೆ, ತಿಳಿವನೆ ಜಾಣರ ದೇವನೆಂದು ಶ್ರೀಮನ್ನಿಜಗುಣ ಶಿವಯೋಗಿಗಳು ಹೇಳಿಹರು. ಇತ್ತ ಪ್ರಜ್ಞಾನಂಬ್ರಹ್ಮವೆಂದು ಉಪನಿಷದ್ ವಾಕ್ಯವು ಬೋಧಿಸುತ್ತದೆ, ಈ ಮಹಾ ವಾಕ್ಯಗಳ ಶ್ರವಣ ಮಾಡಿ, ಅರುವೆ ಪರಬ್ರಹ್ಮವು, ಅದುವೆ ನಾನೆಂದು ನುಡಿವವನು, ಬ್ರಹ್ಮಚರ್ಯವಂತನಾದನೆ ? ಬ್ರಹ್ಮವು

ಅನುಸಂಧಾನಕ್ಕೊಳಪಟ್ಟಿತೆ ? ಯತಾವಾಚ್ಯ ನಿವರ್ತ್ಂತೆ ಅಪ್ರಾಪ್ಯಮನಸಾಸಹ ಕಥನಕೊಳ್ಳಪಟ್ಟುದು ಬ್ರಹ್ಮವೆ ? ನೆನಹಿಂಗೆ ಒಳಪಟ್ಟುದು ಬ್ರಹ್ಮವೆ ? ವಾಙ್ಮನೋತೀತವಾದುದು, ಬ್ರಹ್ಮಾನುಸಂಧಾನ ಮಾಡಿದುದು ಹೇಗೆ, ಈ ಅನುಸಂಧಾನ ಮಾಡಿದವರು ಬ್ರಹ್ಮನಡತೆಯುಳ್ಳವರೆ ? ಶ್ರೀಗುರು ಅರುವೆ ನೀನೆಂದು ಸದ್ಗುರು ಪೇಳೆ ತಿಳಿವನೆ ಜಾಣರ ದೇವನೆಂಬ ಕಾರುಣ್ಯ ಅದು ನುಡಿನಡೆಗೆ ಒಳಪಟ್ಟಿತೆ ? ಇದೆಂಥ ಜಿಜ್ಞಾಸು ಹೃದಯ, ಅನುಭವ ಹೃದಯ, ಅರುವರಿತ ಹೃದಯ ಅರುವ ತಿಳಿಯಿತೆ ? ಅವರು ಅರುವ ತಿಳಿದವನೆ ಜಾಣರ ದೇವನೆಂದು ಹೇಳಿದುದು ಕೇವಲ ನುಡಿ ಮಾತ್ರಕ್ಕೆ ನೆನಹು ಮಾತ್ರಕ್ಕೆ ಸರಿಹೋಯಿತೆ ? ಇದೆಂಥ ಅಭ್ಯಾಸದ ಪ್ರಭಾವ, ಅನುಭಾವದ ಪ್ರಭಾವ ಮಹಾತ್ಮರ ಸಂಜ್ಞೆ ಅರಿಯುವ ಭಾಗ್ಯ ಇಲ್ಲವಾಯಿತೆ ? ಅರುವ ತಿಳಿಯಹೋದ ಅಲ್ಲಮಪ್ರಭು ಅರುವು ತಾ ಎನ್ನುವ ಬ್ರಹ್ಮಚರ್ಯಕ್ಕೆ ಒಪ್ಪಲಿಲ್ಲ. ಏಕೆಂದರೆ ಅರಿವು ತಾ ಎನ್ನುವುದು ಅನುಸಂಧಾನದ ಪ್ರಭಾವ, ಇದು ಮನಸ್ಸಿನ ಕಾರ್ಯ ಜ್ಞಾನಾಜ್ಞಾನದುದಯ ತಾ ಬ್ರಹ್ಮಚರ್ಯವೆ ? ಮನವು ಒಮ್ಮೆ ಮರವಿನ ಮುಖದ್ದಾಗುವುದು, ಒಮ್ಮೆ ಅರುವಿನ ಮುಖದ್ದಾಗುವುದು, ಮರವಿನ ಮುಖದ್ದಾಗಿರುವಲ್ಲಿ ಅರು ತಾನೆನ್ನುವುದು ವಿಸ್ಮೃತಿಯಾಗಿ, ತಾನಾಗದ ಅನಾತ್ಮದಲ್ಲಿ ತಾದಾತ್ಮ್ಯತೆಯ ಹೊಂದಿ ತನು, ಇಂದ್ರಿ, ಪ್ರಾಣ, ಮನ, ಬುದ್ಧಿ, ಇವುಗಳೆ ತಾನೆಂದು ಇವುಗಳ ಕಾರ್ಯವು ತನ್ನದೆಂದು ಅಭಿಮಾನಿಸುವುದು ಅಜ್ಞಾನವಾಗಿದೆ. ಅದುವೆ ನಿತ್ಯಾನಿತ್ಯ ವಿವೇಕವುಳ್ಳದ್ದಾಗಿ ತನ್ನಿಂದ ತಿಳಿಸಿಕೊಳ್ಳುವ ಅನಾತ್ಮ ತಾನಾಗದೆ ಅದಕ್ಕೆ ಬೇರಾಗಿರುವ ದೃಕ್ ರೂಪಾತ್ಮನೆ ತಾನೆನ್ನುವುದು. ಹೀಗೆ ಮಿಶ್ರ ಜ್ಞಾನದಿಂದುಕ್ತವಾದ ಸ್ಥಿತಿಯುಳ್ಳ ಮನವು, ಬ್ರಹ್ಮಚರ್ಯವಾಗಬಹುದೆ ? ಆಗಲರಿಯದು.

ಗುಹೇಶ್ವರಾ ನಿಮ್ಮ ಶರಣನ ಪರಿಣಾಮವೆ ಬ್ರಹ್ಮಚರ್ಯವು : ಶರಣರು ಬ್ರಹ್ಮವ ತಿಳಿಯ ಹೋದ ಪರಿಣಾಮ, ಅರುವೆ ಪರಬ್ರಹ್ಮವೆಂದು ತಿಳಿಯಹೋದ ಪರಿಣಾಮ, ನುಡಿಗೆಡೆಗೊಡದ ಘನದ ಪರಿಣಾಮ, ನೆನಹಿಂಗೆ ಒಳಪಡದ ಪರಿಣಾಮದ ಮಹಾಂತರು. ಅವರು ತೋರಬಾರದ ಘನ ಹೇಳಲೆಂದೇನೊ ? ಹೇಳಬಾರದ ಘನ, ತೋರಲೆಂದೇನೊ ? ಸರಸಂಧಾನದ ಪರಿಯಲ್ಲ, ಗುಹೇಶ್ವರ ಲಿಂಗವದು ಕಲ್ಪಿತವಲ್ಲ ನೋಡಾ ಎಂದು ತಿಳಿಸಿದ ಘನವೇದ್ಯರು, ಬ್ರಹ್ಮವ ತಿಳಿಯಹೋಗಿ ಅದುವೆ ಆಗಿಹ ಮಹಾಂತರು ಬ್ರಹ್ಮಚರ್ಯವಂತರು.

ತಾವೆ ತೋರಬಾರದ ಘನವಾಗಿ ತಮ್ಮಿರವು ತಮಗೆ ಹೇಳಲು ಬಾರದಂತಾಗಿದೆ. ನೆನೆಯಲು ಬಾರದಂತಾಗಿ ಬ್ರಹ್ಮ ಹೇಗಿದೆ ಎಂದರೆ ಬ್ರಹ್ಮವಾಗಿ ನೀನೆ ನೋಡು, ಅದು ನಿನ್ನಂತೆ ಇದೆ. ಬ್ರಹ್ಮವೆಂಬುದು ನಿನಗಿಂತ ಅನ್ಯವಲ್ಲ ಅದು ತನ್ನಂತೆ ಅದೆ, ಆರು ತಾನಾರೆಂದು ತನ್ನಿಂದ ತನ್ನ ಅರಿತಿಹರು ಅವರು ಮುನ್ನ ಮುನ್ನಲಾಗದ ಘನವಾದುದರಿಂದ ಇದ್ದಂತಿಹರು.

ಶರಣರು ಬ್ರಹ್ಮವಾಗಿ ಸುಳಿದವರು, ಸುಳಿಯದವರು, ಅನುಪಮರು. ಬ್ರಹ್ಮವೆಂದರೆ ತಾನೆ ತಾನಾಗಿಹ ಸ್ವಯಂಜ್ಯೋತಿ ಅದು ನುಡಿದುದಲ್ಲ, ನಡೆದುದಲ್ಲ, ನೆನೆದುದಲ್ಲ ನಿರ್ಣಯಿಸಿದುದಲ್ಲ, ಶರಣರ ಪರಿಣಾಮವೆಂದರೆ ಬ್ರಹ್ಮಚರ್ಯವು ಅನುಪಮವಾಗಿದೆ, ಅಖಂಡಿತ ಘನವಾಗಿದೆ. ಶರಣರ ಪರಿಣಾಮವಾದ ಬ್ರಹ್ಮಚರ್ಯವು ನಾಲ್ಕು ವರ್ಣಾಶ್ರಮಕ್ಕೆ

ಒಳಪಟ್ಟುದಲ್ಲ, ಇದು ಬ್ರಹ್ಮಚರ್ಯದಿಂದುಕ್ತವಾದುದಲ್ಲ, ಗೃಹಸ್ಥವಲ್ಲ, ವಾನಪ್ರಸ್ಥವಲ್ಲ, ಸನ್ಯಾಸಿಯಲ್ಲ, ಈ ನಾಲ್ಕು ಆಶ್ರಯವಾಗದ್ದು, ಬ್ರಹ್ಮಣಾದಿ ವರ್ಣಂಗಳು ಆದುದಲ್ಲ, ಶರಣರ ಬ್ರಹ್ಮಚರ್ಯ ಪರಿಶುದ್ಧ ಹೃದಯವುಳ್ಳವರು, ಆರಾದರು ಆಚರಿಸಬಹುದು. ಈ ಬ್ರಹ್ಮಚರ್ಯವನ್ನು ವಿರತಿಗಳಾಗಿಹ ಪ್ರಭು, ಅಕ್ಕಮಹಾದೇವಿ, ಚೆನ್ನಬಸವಣ್ಣ ಅಳವಡಿಸಿಕೊಂಡಿಹುದಲ್ಲದೆ ಬಸವಣ್ಣ, ಅಪ್ಪಣ್ಣ, ಕಕ್ಕಯ್ಯ, ಚೆನ್ನಯ್ಯ, ನೀಲಾಂಬಿಕೆ, ಮೋಳಿಗೆಯ ಮಾರಿ ತಂದೆ, ಆ ತಂದೆಯ ಗೃಹಿಣಿಯಾದ ಮಹಾದೇವಮ್ಮ ಲಕ್ಕಮ್ಮ ಇವರು ಗೃಹಸ್ಥರೆನಿಸಿಕೊಂಡರೂ ಬಾಲ ಬ್ರಹ್ಮಚರ್ಯವಂತರೆನಿಸಿಕೊಂಡಿಹರು, ಇದು ಶ್ರೀಗುರುಕರುಣೆಯಿಂದ ಲಭ್ಯವಾಗುವ ಬ್ರಹ್ಮಚರ್ಯವು, ಈ ಬ್ರಹ್ಮಚರ್ಯವ ಆಚರಿಸಲು ಸಕಲರಿಗೂ ಅಧಿಕಾರವಿದೆ. ಇದು ಅಜಾತನ ಆಚಾರವು, ಇದು ಹಿರಿದು ಕಿರಿದೆಂಬುದಡಗಿದ ಆಚಾರವು, ನಾನೀನೆಂಬುದಕ್ಕೆ ತೆರಹಿಲ್ಲದ ಆಚಾರ, ನಿರಂತರ ಆಚಾರ, ಇದು ತನ್ನ ಆಚಾರ, ಅರಿಯದರುವುಳ್ಳ ಆಚಾರವೆ ಬ್ರಹ್ಮಚರ್ಯವೆಂದು ಹೇಳಿಹರು. ಇದು ಶರಣರ ಪರಿಣಾಮವಾಗಿಹ ಬ್ರಹ್ಮಚರ್ಯವು.

**101**

**ಹಗಲನಿರುಳ ಮಾಡಿ, ಇರುಳ ಹಗಲ ಮಾಡಿ,**
**ಆಚಾರವ ಅನಾಚಾರವ ಮಾಡಿ, ಅನಾಚಾರವ ಆಚಾರವ ಮಾಡಿ,**
**ಭಕ್ತನ ಭವಿಯ ಮಾಡಿ, ಭವಿಯ ಭಕ್ತನ ಮಾಡಿ**
**ನುಡಿವವರ ಮಾತ ಕೇಳಲಾಗದು ಗುಹೇಶ್ವರಾ.** ॥ 472 ॥

**ತಾತ್ಪರ್ಯ :** ಹಗಲನಿರುಳ ಮಾಡಿ : ಹಗಲನಿರುಳ ಮಾಡಿದ ಇವರಾರು ? ಕಣ್ಣುಳ್ಳವ ಈ ಕೆಲಸ ಮಾಡಲಾರ. ಹಗಲಿಗೆ ಕತ್ತಲೆ ಮಾಡುವ ಕಣ್ಣಿದ್ದವನು ಹೇಗಾಗುವನು? ಜಗಕ್ಕೆಲ್ಲ ಸೂರ್ಯನು ತನ್ನ ಪ್ರಕಾಶದಿಂ ಬೆಳಗುವುದು ಕಂಡು, ಆ ಬೆಳಕಿನಲ್ಲಿ ಜೀವಿಗಳ ಕಾರ್ಯ ನಡೆದುದು ಪ್ರತ್ಯಕ್ಷ ಕಂಡು, ಅದಕ್ಕೆ ಕತ್ತಲೆ ಮಾಡುವನೆಂದಲ್ಲಿ ಇದೆಷ್ಟು ಅಜ್ಞಾನ. ಕತ್ತಲೆಯನ್ನು ಹಗಲು ಮಾಡುವೆನೆಂದಲ್ಲಿ ಇದೆಂಥ ಪಿಶಾಚಿದೃಷ್ಟಿ, ! ಪಿಶಾಚಿಗಳಿಗೆ ರಾತ್ರಿಯೆ ಹಗಲು. ಅಮವಾಸ್ಯೆ ಕಗ್ಗತ್ತಲೆಯು ಅವುಗಳಿಗೆ ಶುಭದಿನ. ಪಿಶಾಚಿಗಳು ತಮ್ಮ ಮದುವೆ ಸಂಭ್ರಮ ಕಾರ್ಯ ಇಟ್ಟುಕೊಳ್ಳುತ್ತವೆಂದು ಪುರಾಣಗಳು ಹೇಳುತ್ತಿವೆ. ಇದೆಂಥ ಪಿಶಾಚಿಗಳ ಭ್ರಾಂತಿ.

ಹಗಲು ಇದಾವ ಹಗಲು ? ಕತ್ತಲೆಯ ಕಾಣದ ಹಗಲು. ಹಗಲು ಕಾಣದ ಕತ್ತಲು. ಉದಯಾಸ್ತದಿಂದುಕ್ತವಾದ ಹಗಲು ರಾತ್ರಿ ನೋಡಿದವರು ವಿಶ್ವ ತುಂಬ ಇದ್ದಾರೆ. ಆವುದು ಉದಯವಾಗುವುದು ಅದು ಅಸ್ತವಾಗುವುದು, ಉದಯ ಅಸ್ತಂಗಳ ಪರಿಜ್ಞಾನ ಸಕಲರಿಗೆ ವಿದಿತವಿದ್ದ ವಿಷಯ. ಇಂತಪ್ಪ ಹಗಲನ್ನೆ ರಾತ್ರಿ ಮಾಡಿ, ರಾತ್ರಿಯನ್ನೆ ಹಗಲು ಮಾಡಿ ಮಾತಾಡುವವರಿಗೆ ಏನನ್ನಬೇಕು.

ಆವ ದೇಶದಲ್ಲಿ ಸೂರ್ಯೋದಯವೊ, ಆಗ ಪರದೇಶದಲ್ಲಿ ಸೂರ್ಯಸ್ತವು. ಇದು ಮಹಾಮೇರು ಪರ್ವತವು ಸೂರ್ಯನ ಕಾಣದಂತೆ ಮಾಡಿದುದು. ಈ ಪರ್ವತದ ನೆರಳೆ

ನಮಗೆ ರಾತ್ರಿಯಾಗಿ ಪರಿಣಮಿಸುವುದು. ಆವಲ್ಲಿ ನೆರಳಿರುವುದಿಲ್ಲ ಅದು ಹಗಲಾಗಿ ಪರಿಣಮಿಸುವುದು. ನಿಜವಾಗಿ ಹಗಲು ರಾತ್ರಿಯ ಪರಿಜ್ಞಾನವಿಲ್ಲದವರಿದ್ದಾರೆ. ಇದಕ್ಕಾಗಿ ಮನಬಂದ ಪರಿಯಲ್ಲಿ ಕಲ್ಪಿಸಿ ಮೂಢಮತಿಯುಳ್ಳವರು ಸುಮತಿಯನ್ನೆ ಕಳೆದುಕೊಂಡುದಕ್ಕಾಗಿ ಇವರ ಮುಖವ ನೋಡಬಾರದು. ಹಗಲೆಂದರೆ ತಾನೆ, ಕತ್ತಲೆಯೆಂದರೆ ತನ್ನಯ ಮರವು. ತಾನಾರೆಂದು ತನ್ನ ಅರಿತಿಹರು, ಅವರು ಅನುಪಮರು. ಉದಯಾಸ್ತವೆನ್ನದೆ ಬೆಳಗುಳ್ಳ ಚಿಜ್ಯೋತಿ. ಚಿದಾಕಾಶ ತಾನಾಗಿಹ ಘನ, ಚಿಜ್ಯೋತಿ ಎನಲಿಲ್ಲ, ಚಿದಾಕಾಶವೆನಲಿಲ್ಲ, ಅದುವೆ ತಾನಾಗಿಹ ನುಡಿಗೆಡೆಗೊಡದ ಘನ, ಇಂತಪ್ಪ ಘನಕ್ಕೆ ಘನನಾಗಿಹ ತನ್ನನ್ನು ಮರೆತು, ಮರವರುವುಳ್ಳವನಾಗಿ ಮಾತಾಡುವವನು, ಹಗಲ ಇರುಳ ಮಾಡುವವನು. ಅರಿಯದರುವುಳ್ಳ ತನ್ನ ಮರೆತು ಅರಿಯುವುದನ್ನಾಗಿ ಅರಿಸಿಕೊಳ್ಳುವುದನ್ನಾಗಿ ಮಾಡುವವ ಹಗಲನಿರುಳ ಮಾಡುವವ. ಅಖಂಡಿತ ಘನಪೂರ್ಣವಪ್ಪ ತನ್ನಿರುವು ಮರೆತು, ನಿತ್ಯಾನಿತ್ಯವೆಂಬ ಪುರುಷಾರ್ಥ ಜ್ಞಾನವುಳ್ಳವನಾಗಿರುವುದೆ ಹಗಲನಿರುಳ ಮಾಡುವವ. ಶಬ್ದಮುಗ್ಧವಾಗಿಹ ತನ್ನಿರುವ ಮರೆತು, ಶಬ್ದಸಂಭ್ರಮದವನಾಗಿ ಚಿದಹಮ್ಮುಳ್ಳವನಾಗಿಹನೆ ಹಗಲನಿರುಳ ಮಾಡಿದವ. ಭಾವಕ್ಕಗಮ್ಯನಾಗಿಹ ತನ್ನ ಘನವಂ ಮರೆತು ಭಾವನಾಮಯನಾಗಿರುವವನೆ ಹಗಲು ಇರುಳ ಮಾಡಿದವ.

*ಇರುಳ ಹಗಲ ಮಾಡಿ* : ಇರುಳ ಹಗಲು ಮಾಡಿದವ ಇವನಾರು ? ತನ್ನ ತಾನರಿಯದೆ ಶಬ್ದ ಬ್ರಹ್ಮನಾಗಿ ನಿಶಬ್ದ ಬ್ರಹ್ಮ ನಿಲುವಿನಂತೆ ನಟಿಸುವವನೆ ಇರುಳ ಹಗಲು ಮಾಡಿದವ. ತಾನು ಕಲ್ಪಿತನೆಂಬುದು ಒಳಗೆ ಕರಿಗೊಂಡು ಹೊರಗೆ ತನ್ನಯ ಇರುವು ಅಕಲ್ಪಿತ ಘನದಿರುವೆಂದು ಮಂಡಿಸುವವನೆ ಇರುಳ ಹಗಲು ಮಾಡಿದವ. ತಾನು ಎಂಜಲ ಮಾತಿನ ಜ್ಞಾನದವನಾಗಿ ಮಿಗೆ ಮಿಗೆ ಮೀಸಲ ತತ್ವವಿದು ಎಂದು ನುಡಿವವನೆ ಇರುಳ ಹಗಲು ಮಾಡಿದವ. ತಾನು ಉಪಮೆಯ ಜ್ಞಾನಕ್ಕೆ ಮನಸೋತು, ಅನುಪಮ ಜ್ಞಾನದ ಘನವ ವರ್ಣಿಸುವವ ಇರುಳ ಹಗಲು ಮಾಡಿದವ. ತಾನು ಬೋಧ ಅಬೋಧ, ಬೋಧಾಬೋಧಂಗಳ ಒಪ್ಪಿದರೂ ನಿರಂತರ ನಿತ್ಯವಾಗಿಹ ತನ್ನಿರುವು ಎಂದು ಮಂಡಿಸುವವನೆ ಇರುಳ ಹಗಲ ಮಾಡಿದವ. ತಾನು ತನ್ನಂಅರಿಯದೆ ಹೆತ್ತರಿವು ದಿಟವಾಗಿ ಹೊರಗೆ ತನ್ನದು ಸ್ವಯಮೇವ ಘನ ತನ್ನದು ಹಂಗಿಲ್ಲದ ಸಂಯೋಗವೆಂದೆನ್ನುವವ ಇರುಳ ಹಗಲು ಮಾಡಿದವ.

ಆಚಾರ ಅನಾಚಾರ ಮಾಡಿ, ಅನಾಚರವ ಆಚಾರ ಮಾಡಿ : ಆಚಾರ ಅನಾಚಾರ ಮಾಡಿ, ಅನಾಚರವ ಆಚಾರ ಮಾಡಿದವ ಇವರಾರು ? ಇವರು ಆಚಾರದ ಹೊಲಬನರಿಯದವರು. ಅದಕ್ಕಾಗಿ ಆಚಾರವ ಅನಾಚಾರ ಮಾಡುವರು, ಅನಾಚಾರವ ಆಚಾರ ಮಾಡುವರು. ಆಚಾರದ ಹೊಲಬನರಿತವರು ಬಸವಾದಿ ಪ್ರಮಥರು. ಅವರು ನಿರಂತರವಿದ್ದ ಪರತತ್ವ ಕಂಡವರು. ಅದರಲ್ಲಿ ಲೀಯವಾದವರು ಅದುವೆ ಆಗಿಹರು, ಅತೀಂದ್ರಿಯರು, ಸಮತೆ ಸಯವಾದವರು, ಇವರದು ನಿಜವಾದ ಆಚಾರ, ಕೆಡದ ಆಚಾರ, ನಿಷ್ಕಳಂಕ ಆಚಾರ, ಅಖಂಡ ಆಚಾರ.

ನ ಕಾರವೆ ಆಚಾರ ಲಿಂಗ, ಮ ಕಾರ ಗುರು ಲಿಂಗ, ಶಿ ಕಾರ ಶಿವಲಿಂಗ, ವ ಕಾರವೆ ಜಂಗಮ ಲಿಂಗ ಯ ಕಾರವೆ ಪ್ರಸಾದ ಲಿಂಗ, ಓಂಕಾರವೆ ಮಹಾಲಿಂಗವೆಂದು ಆರು ತೆರನಾಗಿಪ್ಪುದು ಕೂಡಲ ಚೆನ್ನಸಂಗಮದೇವಾ. ಘ್ರಾಣದ ಘ್ರಾಣವೆ ಆಚಾರ ಲಿಂಗ,

ಜಿಹ್ವೆಯ ಜಿಹ್ವೆ ಗುರುಲಿಂಗ, ನೇತ್ರದ ನೇತ್ರವೆ ಶಿವಲಿಂಗ, ತ್ವಕ್ಕಿನ ತ್ವಕ್ಕೆ ಜಂಗಮ ಲಿಂಗ, ಶ್ರೋತೃದ ಶ್ರೋತೃವೆ ಪ್ರಸಾದ ಲಿಂಗ, ಹೃದಯದ ಹೃದಯವೆ ಮಹಾಲಿಂಗ ಕೂಡಲ ಚೆನ್ನಸಂಗಮದೇವಾ.

ಆರು ತೆರನಾಗಿಪ್ಪ ಲಿಂಗವರಿಯ ಹೋಗಿ ಸರ್ವಾಂಗ ಲಿಂಗಿಗಳಾಗಿಹರೆ ನಿಜ ಆಚಾರದವರು. ಇವರದು ವಿಷಮ ದೃಷ್ಟಿ, ವಿಷಮ ಭಾವ, ವಿಷಮ ಜ್ಞಾನ ನಷ್ಟವಾಗಿ ಸಮದೃಷ್ಟಿಯುಳ್ಳವರಾಗಿಹರು. ಅವರು ಅತೀಂದ್ರಿಯರು, ಮನದ ಮನವಾಗಿಹರು, ಅರುವಿಂಗರುವಾಗಿ ತೆರಹಿಲ್ಲದ ಘನ ಸುಖದ ಸುಖಿಗಳಾದುದರಿಂದ ಇವರು ಪರತತ್ವದಲ್ಲಿ ಲೀಯವಾಗಿಹ ಮಹಾಂತರು. ಆನು ನೀನೆನ್ನದಿಹ ನಿಶಬ್ದವೇದಿಗಳು, ಎಲ್ಲೆಲ್ಲೂ ತೆರಹಿಲ್ಲದ ಘನವ ಕಂಡವರು ಅಜಾತರು, ಅಯೋನಿಜರು, ಇದು ಆದಿಪುರಾತನರ ಪಥವಿದು ಆಚಾರವು ಘನಾಚಾರವೆಂದು ಹೇಳಿದೆ.

ಆಚಾರ, ಅನಾಚಾರ ಮಾಡುವರು, ಅನಾಚಾರ ಆಚಾರ ಮಾಡುವರು, ಆಚಾರಲಿಂಗ ದರ್ಶನವಿಲ್ಲ, ಗುರುಲಿಂಗ ದರ್ಶನವಿಲ್ಲ, ಶಿವಲಿಂಗ ದರ್ಶನವಿಲ್ಲ, ಜಂಗಮಲಿಂಗ ದರ್ಶನವಿಲ್ಲ, ಪ್ರಸಾದಲಿಂಗ ದರ್ಶನವಿಲ್ಲ, ಮಹಾಲಿಂಗ ದರ್ಶನವಿಲ್ಲ, ಏಕೆಂದರೆ ಇವರು ಅತೀಂದ್ರಿಯರಾಗಲಿಲ್ಲ, ಇಂದ್ರಿಯರಾಮರಾದರು. ಇಂದ್ರಿಯಂಗಳು ಸ್ವಭಾವತಃ ವಿಷಮತ್ವದಿಂದುಕ್ತವಾದವು, ಅವು ಶುಭಾಶುಭವನ್ನು ಕಂಡಿವೆ, ಧರ್ಮಾಧರ್ಮಕಂಡಿವೆ, ಪುಣ್ಯ ಪಾಪಾವ ಕಂಡಿವೆ, ಸ್ಮುಖದುಃಖವ ಕಂಡಿವೆ, ಕಾಲಕರ್ಮಂಗಳ ಕಂಡಿವೆ, ಜನನ-ಮರಣಂಗಳ ಕಂಡಿವೆ, ಇದು ಕಾರಣ ಅಶುಭ ಅಧರ್ಮವ ತ್ಯಜಿಸಿ ಪುಣ್ಯಪುರುಷನಾಗಲು ಸತ್ಯ ಅಹಿಂಸೆ ಬ್ರಹ್ಮಚರ್ಯ ಆಸ್ತೇಯ ಅಪರಿಗ್ರಹವೆಂಬ ಯಮಾಂಗವನ್ನು ಶುಚಿ, ಸಂತೋಷ, ತಪ, ಸ್ವಾಧ್ಯಾಯ ಈಶ್ವರ ಪ್ರಣಿಧಾನವೆಂಬ ನಿಯಮವನ್ನು ಆಚರಿಸುತ್ತಾರೆ. ಇದಲ್ಲದೆ ವಿವೇಕ, ವೈರಾಗ್ಯ ಶಮಾದಿ ಷಟ್‌ಸಂಪತ್ತು ಮುಮುಕ್ಷುತ್ವವೆಂಬ ಸಾಧನ ಚತುಷ್ಟಿಯ ಸಂಪನ್ನರಾಗಿ ಈ ಬಹಿರಂಗ ಆಚಾರದಿಂದ ಲೋಕದ ಪ್ರತಿಷ್ಠಿತವಂತರಾಗಿ ಜಗದ್ವಂದ್ಯರಾಗಿ ಕಾಣಿಕೊಳ್ಳುವ ಈ ಪೂಜ್ಯರು, ತಮ್ಮ ಅಂತರಂಗ ಆರು ತರದ ಲಿಂಗವ ಕಾಣಲು ಹೋಗಲಿಲ್ಲ, ಸರ್ವಾಂಗ ಲಿಂಗವಾಗಲಿಲ್ಲ, ತನು, ಇಂದ್ರಿ, ಪ್ರಾಣ, ಮನವಾಗಿ ಉಳಿದರಲ್ಲದೆ ಅವು ನಷ್ಟವಾಗಲಿಲ್ಲ, ನಷ್ಟವಾಗದೆ ನಷ್ಟವಾಗಿಹವು ಎಂದು ಹೇಳಿ, ಅಮರತ್ವ ಸಾಧಿಸದೆ ಅಮರರಾಗಿಹೆವು ಎಂದು ಶಬ್ದಸಂಭ್ರಮದಿಂದ ಲೋಕದ ನಚ್ಚುಮೆಚ್ಚು ಪಡೆದು ಅತೀಂದ್ರಿ ವಿದ್ಯೆ ಮುಚ್ಚಿಟ್ಟರು.

ಈ ಇಂದ್ರಿಯ ವಿದ್ಯೆಯ ಘನವಾಗಿ ಬೆಳಸಿ, ವಿಷಮತ್ವವೆ ಲೋಕದ ನ್ಯಾಯವಾಗಿ ಸಮದೃಷ್ಟಿ, ಸಮಭಾವವೆ ಕಾಣದಂತಾಗಿ, ಸಮತ್ವದ ಸಾಹಿತ್ಯವ ಸಂಗ್ರಹಿಸಿಕೊಂಡು ಭವದ ಲೆಂಕಿಗರಾಗಿ ಧರ್ಮವಂತನೆ ಇರಲಿ, ನೀತಿವಂತನೆ ಇರಲಿ, ಪುಣ್ಯರುಗಳಿರಲಿ, ತಪೋಮೂರತಿಗಳಿರಲಿ, ಗುರುವರ್ಗವಿರಲಿ, ಶಿಷ್ಯವರ್ಗವಿರಲಿ, ಭಕ್ತಜಂಗಮ ವರ್ಗವಿರಲಿ, ಇವರಿಗೆ ನಾನು ಘನವಾಗಲಿಲ್ಲವಾಗದ್ದರಿಂದ ಎಲ್ಲೆಲ್ಲೂ ತನ್ನ ಘನವು ಕಾಣಲಿಲ್ಲ, ಇದರಿಂದ ಹಿರಿದು ಕಿರಿದೆಂಬ ವಿಷಮದೃಷ್ಟಿನಷ್ಟವಾಗಲಿಲ್ಲ, ಸಮತೆಯು ತನ್ನದಾಗದೆ ಅಹಂಮಮವುಳ್ಳವರಾಗಿ ತೋರಿಕೆಗೆ ಯಮನಿಯಮಾಂಗಗಳ ಆಚಾರ ಸ್ವಲ್ಪ ಮಾಡಿ ಲೋಕದೃಷ್ಟಿಗೆ ಘನವುಳ್ಳವರಂತೆನಸುವವರೆಲ್ಲ ಆಚಾರ ಅನಾಚಾರ ಮಾಡುವವರು, ಅನಾಚಾರ

ಆಚಾರ ಮಾಡುವವರು ಇವರಿಗೆ ಪರತತ್ವ ಪರಿಜ್ಞಾನವಿಲ್ಲದವರು ಎಂದು ಹೇಳಿದೆ.

ಭಕ್ತನ ಭವಿಯ ಮಾಡಿ ಭವಿಯ ಭಕ್ತರ ಮಾಡುವವರ ಮುಖವ ನೋಡಬಾರದು: ಕ್ರಿಯಾಲಿಂಗದ ಲಿಂಗಿಗಳೆಲ್ಲರೂ ಕ್ರಿಯಾ ಅಳಿದ ಭಕ್ತನೆಂಬರು. ಕ್ರಿಯೆ ಅಳಿದ ಭಕ್ತಂಗೆ ಲಿಂಗವುಂಟೆ ? ಕ್ರಿಯೆ ಅಳಿದ ಭಕ್ತಂಗೆ ಜಂಗಮವುಂಟೆ ? ಕ್ರಿಯೆ ಅಳಿದ ಭಕ್ತಂಗೆ ಪ್ರಸಾದವುಂಟೆ ? ಕ್ರಿಯೆ ಅಳಿದು ನಿಃಕ್ರಿಯೆದಲ್ಲಿ ನಿಂದ ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣ. ಭಕ್ತನು ಭವಿಯಾಗಬಹುದೆ ? ಭವಿಯು ಭಕ್ತನಾಗುವನೆ ? ಅಜ್ಞಾನಿಯು ಸುಜ್ಞಾನಿಯೆ ? ಸುಜ್ಞಾನಿ ಅಜ್ಞಾನಿಯೆ ? ಭಕ್ತನ ಭವಿಯ ಮಾಡಿ ಭವಿಯ ಭಕ್ತನ ಮಾಡುವದೆಂದರೆ ಇದೆಂಥ ಮನದ ಸ್ವೇಚ್ಛಾ ಕಾರ್ಯ, ಇದು ಸಮಯಾಚಾರದ ವರ್ತನ. ಆರು ಅಂಗದ ಮೇಲೆ ಲಿಂಗ ಕಟ್ಟಿಕೊಂಡವರು ಆ ಲಿಂಗದ ಘನವರಿಯದೆ ಪೂಜಾಲಿಂಗವೆಂದು ತಿಳಿದು ಪೂಜಿಸುವ ಲಿಂಗಾರ್ಚಕರು ಭಕ್ತರಾದರು. ಅಂಗದ ಮೇಲೆ ಯಾರಿಗೆ ಲಿಂಗವಿಲ್ಲ, ಅವರಿಗೆ ಭವಿಗಳೆಂದು ಕರೆದವರು ಇವರು. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗ, ಮಹಾಲಿಂಗವರಿತವರಾದುದರಿಂದ ಕ್ರಿಯೆ ಅಳಿದ ಭಕ್ತರು, ಅವರು ಪೂಜಾಕ್ರಿಯಕ್ಕೆ ಒಪ್ಪದವರು, ಏಕೆಂದರೆ ಲಿಂಗವ ಕುರುಹಾಗಿ ಕಾಣಲಿಲ್ಲ, ಸ್ಥೂಲವಾಗಿ ಕಾಣಲಿಲ್ಲ, ಸೂಕ್ಷ್ಮವಾಗಿ ಕಾಣಲಿಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪ, ಪರಾನಂದ, ಪರಬ್ರಹ್ಮವೆಂದರಿದ ಅರಿವು.

ಲಿಂಗ : ಈ ಲಿಂಗವು ಹಾಕಿಕೊಳ್ಳಲು ಕಟ್ಟಿಕೊಳ್ಳಲು ಬರುವುದೆ ? ಇದನ್ನು ತಿರಸ್ಕರಿಸಲು ಬರುವುದೆ ? ತೆಗೆದಿಡಲು ಬರುವುದೆ ? ಇಲ್ಲಿ ಲಿಂಗಕಟ್ಟಿಕೊಂಡವರ ಸಾಂಪ್ರದಾಯ ಒಂದು, ಲಿಂಗಕಟ್ಟಿಕೊಳ್ಳದವರ ಸಾಂಪ್ರದಾಯ ಒಂದು. ಈ ಸಾಂಪ್ರದಾಯಕ್ಕೆ ನಿಲುಕದ ಲಿಂಗ, ಈರ್ವ ಸಾಂಪ್ರದಾಯಿಕರ ಒಳಹೊರಗೆನ್ನದ ಭರಿತವಾಗಿಹ ಲಿಂಗ. ಲಿಂಗವಿಲ್ಲದೆ ಇವರ ಒಂದಂಗ ಸುಳಿವುದೆ  ಇಂತಪ್ಪ ಘನಲಿಂಗವ ತಿಳಿಯದವರು, ಅಂಗಭಾವಿಗಳು ಪರತತ್ವವರಿಯದೆ ಸಾಂಪ್ರದಾಯಿಕಕ್ಕೆ ಒಪ್ಪಿದವರು ಭಕ್ತನ ಭವಿಯ ಮಾಡುವರು. ಭವಿಯ ಭಕ್ತನ ಮಾಡುವರು. ಲಿಂಗ ತಾನು ಒಂದುದು ಭಕ್ತನ ಇರವು. ಲಿಂಗ ಬೇರೆ, ತಾನು ಬೇರೆಂದು ಪೂಜಕ, ಪೂಜ್ಯಭಾವದಿಂದುಕ್ತರಾದ ಕ್ರಿಯಾಲಿಂಗಿಗಳು ಭವಿಗಳು. ತಾನು ಲಿಂಗ, ತನ್ನಿರುವು ಲಿಂಗ, ವಿಶ್ವವು ಲಿಂಗ, ಲಿಂಗಹೊರ್ತು ಅನ್ಯವ ಕಾಣದವನು ಭಕ್ತ. ಇವರು ಎರಡೊಂದಾದವರು, ಇವರಿಗೆ ಅರ್ಚನೆಯಿಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲವೆಂದು ಹೇಳಿಹರು. ಇವರು ಕ್ರಿಯೆಯಳಿದ ಜ್ಞಾನಭಕ್ತರು, ಈ ಜ್ಞಾನಿಭಕ್ತರನ್ನು ಪೂಜಾಲಿಂಗವ ಪೂಜಿಸುವ ಪೂಜಕರು, ಲಿಂಗವರಿತು ಸರ್ವಾಂಗ ಲಿಂಗಮಯವಾಗಿ ಕಂಡ ಮಹಾಂತರನ್ನು ಭವಿಗಳ ಮಾಡಿಹರು. ತಾವು ಲಿಂಗಾರ್ಚಕರಾದುದಕ್ಕಾಗಿ ಭಕ್ತರ ಮಾಡಿಹರು. ಇಂತಪ್ಪ ಅರೆಮರುಳರ ಮುಖವ ನೋಡಲಾಗದು ಎಂದು ಹೇಳಿಹರು.

ಇವರು ಪ್ರತಿನಿತ್ಯ ಲಿಂಗಾರ್ಚನರಾಗಿದ್ದರು, ಪ್ರಾರಬ್ಧ ದಿಟವಾಗಿಹುದು, ನೊಸಲಬರಹ ದಿಟವಾಗಿಹುದು. ಪ್ರಳಯವು ದಿಟವಾಗಿರುವುದರಿಂದ ಇವರಿಗೆ ಶ್ರೀಗುರುವಿನ ಹಸ್ತ, ಮಸ್ತಕ, ಸಂಯೋಗವಾಗಿರಬಹುದೆ ? ಇವರ ಅಂಗಾಂಗಗಳು ಲಿಂಗಮಯವಾಗಿರಬಹುದೆ ಅಥವಾ ಲಿಂಗಮಯವಾಗಿಹ ಘನವಂತನ ದೃಷ್ಟಿಗೆ ಪ್ರಾರಾಬ್ಧ

ಪ್ರಳಯ ಹಣೆಬರಹವೆಂದು ಕಲ್ಪಿಸಬಹುದೆ ?

102

**ಪಾರಬ್ಧವಂತೆ ನೊಸಲಬರಹವೆಂತು ಹೋಯಿತ್ತೆನಬಹುದು,**
**ಪ್ರಾರಬ್ಧ, ಪ್ರಾರಬ್ಧವೆಂದು ಬಹು ಜನರು ಈ ಕರ್ಮವ**
**ಉಪಭೋಗಿಸಲೇಬೇಕೆಂದು ಒಪ್ಪಿಹರು, ಇವರು**
**ನೊಸಲಬರಹವಂತೆ ಹಸ್ತ, ಮಸ್ತಕ ಸಂಯೋಗವೆಂತಾಯಿತ್ತು**
**ಪ್ರಳಯವಂತೆ ಪ್ರಾಣಲಿಂಗವೆಂತುಂಟು ಗುಹೇಶ್ವರಾ.**

**ತಾತ್ಪರ್ಯ** : ಪ್ರಾರಬ್ಧಕ್ಕೆ ಒಪ್ಪಿಕೊಂಡವರು, ಬಂದುದು ಉಂಡು ಹೋಗಲೇಬೇಕು, ಇದು ಉಪಭೋಗಿಸದ ವಿನಃ ತೀರದು ಎಂಬ ಭಾವ ಸಕಲರದಂದರೂ ಅಡ್ಡಿ ಇಲ್ಲವಾಗಿದೆ. ಈ ಪ್ರಾರಬ್ಧಕ್ಕೆ ತಮ್ಮ ತಾವರಿತು ಒಪ್ಪಿದರೊ ? ಭಾವ ಭ್ರಮಿತರಾಗಿ ಒಪ್ಪಿದರೊ ? ತ್ರಿವಿಧ ಕರ್ಮಗಳಲ್ಲಿ ಎರಡರ ಉಪಭೋಗಿಸುವುದು ಇಲ್ಲ, ಏಕೆಂದರೆ ಸಂಚಿತಕರ್ಮ ಬ್ರಹ್ಮಜ್ಞಾನವಾದ ಲಕ್ಷಣ ಹೇಗಾಗುತ್ತದೆ. ಆಗಾಮಿ ಕರ್ಮ ಬ್ರಹ್ಮಜ್ಞಾನಿಯ ಸ್ತುತಿ ನಿಂದಿಸುವವರಿಗೆ ಆ ಫಲವ ಕೊಡುವುದು ಪ್ರಾರಬ್ಧ ಕರ್ಮ ಬಂದುದು ಉಪಬೋಗಿಸಬೇಕು, ವಾಶಿಷ್ಠ ಮಹರ್ಷಿಗಳು ಪ್ರಾರಬ್ಧವ ಕಲ್ಪಿಸುವುದು. ಒಬ್ಬ ಮಹಾಮೂರ್ಖನ ಮಾತು, ಪುರುಷಾರ್ಥ ಸಂಪನ್ನರಿಗೆ ಇದು ಸರಿಯಾಗದು, ಇತ್ತ ಪ್ರಭುದೇವರಿಗೂ ಪ್ರಾರಾಬ್ಧ ವಿಷಯ ಒಪ್ಪಿಗೆಯಾಗಿರುದಿಲ್ಲ, ಇದು ಬ್ರಹ್ಮಬರಹವಾಗಬಹುದೆ ? ಹಣೆಬರಹವಾಗಬಹುದೆ ? ಇವುಗಳೆ ದಿಟವಾದಲ್ಲಿ

ಗುರುಕರುಣಿಸೆಬಿಟ್ಟಿತ್ತು ಮರವು, ಗುರುಕರುಣಿಸೆಬಿಟ್ಟಿತ್ತು ಮಾಯೆ, ಗುರುಕರುಣಿಸೆ ಬಿಟ್ಟಿತ್ತು ಪ್ರಪಂಚ, ಗುರುಕರುಣಿಸೆ ಬಿಟ್ಟಿತ್ತು ಕರ್ಮಪಾಶ ಕೂಡಲ ಚೆನ್ನಸಂಗಮದೇವಾ. ಎಂದು ಮಹಾನುಭವವಿರುವಲ್ಲಿ ಪ್ರಾರಬ್ಧವಾರಿಗೆ, ಹಣೆಬರಹವಾರಿಗೆ, ಪ್ರಳಯವಾರಿಗೆ ? ಪ್ರಾಣಲಿಂಗಕ್ಕೆ ಪ್ರಳಯವೆ ಪ್ರಾರಬ್ಧವೆ ಹಣೆಬರಹವೆ ? ಇದು ತಾನಾರೆಂದರಿತವರ ಇರವು ಅಲ್ಲ, ಅರಿವು ಅಲ್ಲ, ಮುಗ್ಧರ ಭಾವ ಇದೊಂದು ಭ್ರಮೆ.

ಕಲ್ಪಿತ ಪುರುಷ, ಅವನು ಕಲ್ಪನೆಗೆ ಒಪ್ಪಿಕೊಂಡಲ್ಲಿ ವಿಧಿ ಲಿಖಿತವಿದ್ದಂತೆ ಆಗುವುದು ಎನ್ನುವನು. ಕಲ್ಪಿತನು, ತಾನಾರು ಎಂಬುದು ತಿಳಿಯದೆ ಒಪ್ಪಿಕೊಂಡಿಹನು. ಬಹುಮತವಾದಿಗಳು ಕಲ್ಪಿತರು ಕಲ್ಪಿತ ಮತಗಳಿವೆ, ಹೀಗಾಗಿ ಪ್ರಾರಬ್ಧವೆಂಬುದನ್ನು ಸರಿಯಾಗಿ ತಿಳಿಯರು, ನೊಸಲಬರಹವೆಂಬುದು ತಿಳಿಯರು, ಹಸ್ತಮಸ್ತಕ ಸಂಯೋಗವೆಂಬುದು ತಿಳಿಯರು, ಇತ್ತ ಪ್ರಳಯವ ತಿಳಿಯರು, ಪ್ರಾಣಲಿಂಗದ ಘನವು ತಿಳಿಯರು, ತಿಳಿಯದುದಕ್ಕಾಗಿ ಈ ಕಥನ ಬಹುದೊಡ್ಡದಾಗಿದೆ. ಇದಲ್ಲದೆ ಸಕಲರಿಗೆ ಬಹು ಭಯಾನಕ ಮಾಡಿದೆ. ಶರೀರದೃಷ್ಟಿಯಿಂದ ಸಮರ್ಥನಿದ್ದರೂ ಹೃದಯ ದೃಷ್ಟಿಯಿಂದ ಭಯಾನಕರಾಗಿಹರು. ನಿರ್ಭಯುವಂತರೆಂದರೆ ಹೃದಯದ ಹೃದಯ. ಅರು ಹೃದಯವಾದವಂಗೆ ಭ್ರಾಂತಿ ದೃಷ್ಟಿಗೆ ತೋರುವ ನೊಸಲಬರಹವೆನ್ನಲಿ, ಪ್ರಾರಬ್ಧವೆನ್ನಲಿ,

ಪ್ರಳಯವೆನ್ನಲಿ, ಇವಾವುಗಳ ಕಲ್ಪಿತ ತನ್ನೊಳಗೆ ಉಳಿಯಬಾರದು. ಇಲ್ಲಿ ಹಸ್ತ ಮಸ್ತಕ ಸಂಯೋಗವು ಬಹು ಮಹತ್ತರವಾದ ಪರತತ್ವವನೊಳಕೊಂಡುದು. ಆದರೆ ಭಾವಿಕರ ಹಸ್ತ ಮಸ್ತಕ ಸಂಯೋಗ ಬೇರೆ, ಪರತತ್ವಪರಿತ ಶ್ರೀಗುರುವಿನ ಹಸ್ತ ಮಸ್ತಕ ಬೇರೆ.

ಶ್ರೀಗುರುವೆಂದರೆ ಗುರುವಿಂಗೆ ಗುರುವಾಗಿಹ ಮಹಾಮಹಿಮ, ಕಾಣಬಾರದ ಗುರು. ಈ ಮಹಾಂತ ಬೋಧಾಮೂರ್ತಿಯಲ್ಲ, ಬೋಧ ಅಬೋಧ ನಷ್ಟವಾಗಿ ತನ್ನಿರುವಿನಲ್ಲಿದ್ದ ಸ್ವಮಹಿಮ, ಈತನೆ ಕಾಣಬಾರದ ಗುರು. ಈ ಘನವಂತನ ದೀಕ್ಷೆ, ಸಕಲರ ದೀಕ್ಷದಂತಹ ದೀಕ್ಷೆಯಲ್ಲ, ತಿಳಿಯ ಹೋದವರಿಗೆ ನಿಬ್ಬೆರಗು ಮಾಡುವುದು. ಹಸ್ತ ಮಸ್ತಕ ಸಂಯೋಗವದು, ಮುಟ್ಟಲಿಲ್ಲದ ಹಸ್ತ ಮಸ್ತಕ ಸಂಯೋಗ. ಶ್ರೀಗುರುವಿಂಗೆ ಹಸ್ತವಿಲ್ಲ, ಶಿಷ್ಯಂಗೆ ಮಸ್ತಕವಿಲ್ಲ,

ಗುರುಶಿಷ್ಯರು, ಶರೀರಧಾರಿಗಳು ಎಂದು ತಿಳಿದ ಭಾವಿಕರೆ ಹೆಚ್ಚು. ಈ ಭಾವಿಕರ ಕೃಪಾ ಆಶೀರ್ವಾದ, ಅನುಗ್ರಹವು ಬೇರೆ. ಈ ಮಹಾಮಹಿಮನ ಕೃಪೆ ಅನುಗ್ರಹ ಬೇರೆ, ಇದು ಅರುವ ಅರಿಯ ಹೋಗಿ ಅದುವೆ ಆಗಿಹ ಮಹಾಪುರುಷರ ಪ್ರಸಾದವು. ಇಲ್ಲಿ ಮಹದರುವ ಅರಿಯ ಹೋಗುವ ಸಂಜ್ಞೆ. ಆ ಸಂಜ್ಞೆಯ ಯತಾರ್ಥ ತಿರುಳು ಅನುಭವಕ್ಕೆ ಬರುವಂತೆ ತಿಳಿಸುವುದೆ ಹಸ್ತ ಮಸ್ತಕ ಸಂಯೋಗವೆಂದು ತಿಳಿಯಬಹುದಾಗಿದೆ.

ಇಲ್ಲಿ ನೋಡಿ ! ಬಸವರಸರ ಹಸ್ತ ಮಸ್ತಕ ಸಂಯೋಗವ ನೋಡಿರುವಿರಾ ? ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ; ಇದಕ್ಕೆನ್ನಬೇಕು,ಶ್ರೀಗುರುಕಾರುಣ್ಯ ಹಸ್ತ ಮಸ್ತಕ ಸಂಯೋಗ, ಶ್ರೀಗುರುವಿನ ಮಹಾನುಭವಿರೂಪಿ ಹಸ್ತ, ಅನುಪಮ ಹಸ್ತ, ಇದನ್ನು ಅರಿದರಿದು ಅದುವೆ ಆದ ಶಿಷ್ಯನ ಮಸ್ತಕ. ಅದು ನಿಜವಾದ ಮಸ್ತಕ. ಮಹದರುವಿನ ಮಹಾನುಭವ ಆವುದು ಗೊತ್ತೆ ? ವೇದ ವೇದಾಂತದಲ್ಲಿ ದೊರೆಯುವ ಶೃತಿಪ್ರಮಾಣಂಗಳು ಮಹಾವಾಕ್ಯಂಗಳು ಘನ ಮಾಡಿ ತೋರಿಸಲಿಲ್ಲ, ಮೌನವಾಗಿ ಅರುವ ಅರಿಯ ಹೇಳಿದ ಶ್ರೀಗುರು ಕಾರುಣ್ಯ (ಲಿಂಗ) ನಿಶಬ್ದವೇದಿಯಾಗಿ ಮೌನಮುದ್ರಿತ ಘನ ಕರುಣಿಸಿದ. ಮೌನ ಮುದ್ರಿತನಾಗಿ ತಿಳಿದ, ಅದನೆಂತು ಹೇಳುವುದು, ಮೂಕನಾಗಿ ಕರುಣಿಸಿದ. ಮೂಕನಾಗಿ ತಿಳಿದ, ಮೂಕನೆ ಆದ. ಇದು ಅನುಪಮ ಲಿಂಗ ಕರುಣಿಸಿದ ಸಂಕೇತ. ಅನುಪಮನಾಗಿ ಲಿಂಗವ ಅರಿದರಿದ ಅನುಪಮನಾದುದರಿಂದ ಇದು ಮುಟ್ಟಲಿಲ್ಲದ ಹಸ್ತ, ಮುಟ್ಟಿಸಿಕೊಳ್ಳದ ಮಸ್ತಕ.

ನಿಃಶಬ್ದ ಬ್ರಹ್ಮನಾಗಿ ನಿಶಬ್ದಬ್ರಹ್ಮರೂಪಿ (ಲಿಂಗ) ಕರುಣಿಸಿದ ನಿಶಬ್ದನಾಗಿ ಲಿಂಗವ ಅರಿದರಿದು ನಿಶಬ್ದಬ್ರಹ್ಮವಾದುದು ಅದನೆಂತುಪಮಿಸುವುದು, ಇಂತಪ್ಪ ಹಸ್ತ ಮಸ್ತಕ ಸಂಯೋಗದಲ್ಲಿ ಪ್ರಾರಬ್ಧವೆಂಬ ಕಲ್ಪಿತ ಕಾಣಬಹುದೆ ? ನೊಸಲ ಬರಹವೆಂಬ ವಿಧಿ ಲಿಖಿತವ ಕಾಣಬಹುದೆ ? ಪರತತ್ವಕ್ಕೆ ಅದಾವ ಪ್ರಾರಬ್ಧ, ಅದಕ್ಕೆ ಹಣೆಬರಹವೆ ? ವಿಧಿ ಲಿಖಿತವೆ ? ತತ್ವಕ್ಕೆಲ್ಲ ಬೆಳಗುವ ಬೆಳಗುಳ್ಳ ಅನುಪಮ ತೇಜನಿದ್ದು, ಅರೆಮರುಳರ ಸಂಗಪ್ರಭಾವ. ಇದು ತನ್ನ ತಾ ತಿಳಿಯದ ವಿನಃ ಭ್ರಮರೂಪ ಕಲ್ಪಿತ ನಿರಸನವಾಗದು.

ಪ್ರಳಯವಂತೆ ಪ್ರಾಣಲಿಂಗವೆಂತುಂಟು ಹೇಳಾ ಗುಹೇಶ್ವರಾ: ಪ್ರಾಣಲಿಂಗವರಿಯದವರಿಗೆ ಪ್ರಳಯವು ಭಾಸಿಸುವುದು, ಪ್ರಾಣಲಿಂಗವರಿತವರು ಯಾರು ? ಉಪಮಾತೀತ ಶರಣರು, ಪ್ರಾಣಲಿಂಗವೆ ತಾವಾದವರು. ಪ್ರಾಣಲಿಂಗ

ಪರಾಪರವೆಂದರಿದು ಅಣು, ರೇಣು ತೃಣಕಾಷ್ಠದೊಳಗೆ ಕೂಡಿ ಪರಿಪೂರ್ಣ ಶಿವನೆಂದರಿದು ಇಂತು ಕ್ಷಣವೇದಿ ಅಂತರಂಗವೇದಿಸಲ್ಕೆ ಅಗಣಿತ ಅಕ್ಷರೇಶ್ವರ ತಾನೆಂದರಿದು, ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆ ಆದ ಘನವಂತನಾದುದರಿಂದ, ಗುಹೇಶ್ವರನ ಶರಣರು ಉಪಮಾತೀತರು. ಪ್ರಾಣವು ಶ್ರೇಷ್ಠವಲ್ಲ , ಪ್ರಾಣದ ಪ್ರಾಣವು ಪ್ರಾಣಲಿಂಗವು. ಚೈತನ್ಯದ ನಿಜ ಚೈತನ್ಯವು, ಇದು ಅಣುವಿಂಗಣು, ರೇಣುವಿನ ರೇಣುವು, ಕಾಷ್ಠದ ಕಾಷ್ಠವು. ಸಕಲದರಲ್ಲಿ ಭರಿತವು, ಇಂತಪ್ಪ ಜ್ಞಾನದ ಜ್ಞಾನರೂಪವಾದುದು ಪರಿಪೂರ್ಣ ಶಿವನೆಂದರಿದವರು ಶರಣರು. ಪರಾತ್ಪರವಾಗಿಹ ತತ್ವ ಒಂದು ಕ್ಷಣ ಅಂತರಂಗ ತಿಳಿಯಲು ಅಗಣಿತ ಅಕ್ಷರೇಶ್ವರ ತಾನೆಂದು ತಿಳಿದುದಕ್ಕಾಗಿ ಪ್ರಣವವಾಗಲಿಲ್ಲ, ಪ್ರಣವದ ಪ್ರಭೆಯು ಆಗಲಿಲ್ಲ .ಇವೆಲ್ಲವುಗಳಿಗೆ ಮೀರಿರುವ ಪರಂಜ್ಯೋತಿ ತಾನೆ ಆದ ಘನವಂತನು ಉಪಮಾತೀತನು, ಲಿಂಗವೆ ತಾನಾಗಿರುವ ಮಹಿಮನು, ಪ್ರಾಣವ ಕಾಣುವನೆ ? ಕಾಣದಿದ್ದಲ್ಲಿ ಪ್ರಳಯವ ಕಾಣುವದದೆಂತು ? ಆರು ಪ್ರಾಣವಾಗಿಹರು ಅವರಿಗೆ ಪ್ರಳಯವು ಭಾಸಿಸುವುದು, ಲಿಂಗವೆ ತಾನಾಗಿಹ ಮಹಾಂತಂಗೆ ಪ್ರಳಯವೆಂಬುದು ಪುಸಿ ತೋರಿಕೆ. ಇದು ಕಾರಣ ಪ್ರಳಯವೆಂತುಂಟು ಎಂದು ಕೇಳಿಹರು. ಲಿಂಗದ ಘನವ ತಿಳಿಯದೆ ಪ್ರಳಯವು ಕಲ್ಪಿತವಾಗಿದೆ.

**103**

**ಪರುಷದ ಪುತ್ಥಳಿಗೆ, ಕಬ್ಬುನದ ಆಭರಣಗಳುಂಟೆ ?**
**ಅಯ್ಯ ಲೋಕದೊಳಗೆ ಲಿಂಗ ಲಿಂಗದೊಳಗೆ ಲೋಕವಾದರೆ**
**ಹಿಂದಣ ಪ್ರಳಯ ಯುಗಗಳೇಕಾದವು, ಇನ್ನು ಮುಂದಣ**
**ಪ್ರಳಯ ಯುಗಗಳಿಗಿನ್ನೆಂತೊ ? ಲೋಕವು ಲೋಕದಂತೆ**
**ಲಿಂಗವು ಲಿಂಗದಂತೆ ಈ ಉಭಯದ ಭೇದವ**
**ಗುಹೇಶ್ವರ ನಿಮ್ಮ ಶರಣ ಬಲ್ಲ.**

**ತಾತ್ಪರ್ಯ** : ಪರುಷದ ಪುತ್ಥಳಿಗೆ ಕಬ್ಬುನದ ಆಭರಣಗಳುಂಟೆ ? :ಪರುಷದ ಪುತ್ಥಳಿಗೆ ಕಬ್ಬುನದ ಆಭರಣ ? ಪುತ್ಥಳಿ ತನ್ನ ಮುಟ್ಟಬಂದ ಕಬ್ಬುನವೆಲ್ಲ ಬಂಗಾರ ಮಾಡುವ ಪುತ್ಥಳಿ, ಅದರ ಮೇಲೆ ಕಬ್ಬಿಣದ ಆಭರಣವ ಹಾಕುವದೆಂತು ? ಹಾಕುವುಡೆ ಕಬ್ಬಿನವಾಗಿ ಉಳಿಯಬಹುದೆ ? ಹಾಗೆ ಬ್ರಹ್ಮವೆಂಬ ಪರುಷದ ಪುತ್ಥಳಿಗೆ ನಾಮರೂಪವೆಂಬ ಕಬ್ಬುನದ ನಾನಾ ಕಲ್ಪಿತದ ಆಭರಣ ಹಾಕಿದಡೆ ಅದು ಚಿನ್ನವಾದಂತೆ, ಸಚ್ಚಿದಾನಂದವಾದಂತೆ, ಶ್ರೀಗುರು ಕೃಪಾರೂಪಿ ಗುರುಪುತ್ರರೂಪಿ, ಪರುಷದ ಪುತ್ಥಳಿಗೆ ನಾಮರೂಪ ಕಬ್ಬುನದ ಹೆಣ್ಣು, ಗಂಡೆಂಬ ಆಭರಣವುಂಟೆ, ಸಚ್ಚಿದ್ಘನವಾದ ಪುತ್ಥಳಿಗೆ ಭಾವರೂಪಿ ಕಬ್ಬುನದ ಆಭರಣ ಹಾಕಿದಡೆ ಅದು ಬಂಗಾರವಾದಂತೆ ಹಾಗೆ ಭಾವರೂಪ ಹೋಗಿ ಭಾವಕ್ಕಗಮ್ಯವಾದುದು, ಅಸ್ತಿಭಾತಿ ಎಂಬ ಸತ್ಯವಾಗಿಹ ಪರುಷ ಪುತ್ಥಳಿಗೆ ನಾಮರೂಪ ಹುಸಿಯೆಂಬ ಕಬ್ಬುನದ ಆಭರಣ ಸಿಕ್ಕಿದಡೆ ಅದು ಅಸ್ತಿಭಾತಿ ಎಂಬ ಬ್ರಹ್ಮಭಾವವು ಪ್ರಜ್ವಲಿಸುವುದು.

ಅಕಲ್ಪಿತ ಘನಕ್ಕೆ ಕಲ್ಪಿತವೆಂಬ ಕಬ್ಬುನದ ಆಭರಣವುಂಟೆ ? ಗುಣಾತೀತವಾದ

ಪರುಷ ಪುತ್ಥಳಿಗೆ ಗುಣಮಯಿಯಾಗಿಹ ಕಬ್ಬುನದ ಆಭರಣವುಂಟೆ ? ಅಚಿಂತಾತ್ಮನಾಗಿಹ ಪರುಷ ಪುತ್ಥಳಿಗೆ ಚಿಂತನಾರೂಪಿ ಕಬ್ಬುನದ ಆಭರಣವುಂಟೆ ?

ಪರಬೊಮ್ಮವೆಂಬ ಪುತ್ಥಳಿ ನಿರಾಲಂಬವೆಂಬ ಪರುಷ ಪುತ್ಥಳಿಗೆ ಅಸಂಗವೆಂಬ ಪರುಷ ಪುತ್ಥಳಿಗೆ ನಾಮರೂಪ ಸಂಗ ಮಾಡಿದುದೆಂತು ? ನಿರ್ವಿಕಾರಕ್ಕೆ ವಿಚಾರದ ಸಂಗವೆ ? ಸಂಬಂಧವೆ, ಶಬ್ದ ಮುಗ್ಧಕ್ಕೆ ಶಬ್ದದ ಸ್ಪರ್ಶವೆ ? ಅಜಾತನಿಗೆ ಜಾತಿಯ ಸ್ಪರ್ಶವೆ ? ಅಸ್ಪೃಶ್ಯಂಗೆ ವಿಷಯಾದಿಗಳ ಸ್ಪರ್ಶವೆ ?

ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕವಾದರೆ ಹಿಂದಣ ಪ್ರಳಯ ಯುಗಂಗಳೇಕಾದವು ; ಇನ್ನು ಮುಂದಣ ಪ್ರಳಯ ಯುಗಗಳಿಗಿನ್ನೆಂತೊ ? ಲೋಕವು ಲೋಕದಂತೆ ಲಿಂಗವು ಲಿಂಗದಂತೆ ಈ ಉಭಯದ ಭೇದ ಗುಹೇಶ್ವರಾ ನಿಮ್ಮ ಶರಣಬಲ್ಲ;

ಬಹುಭಾವಿಕರು, ಜಿಜ್ಞಾಸುಗಳು, ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕ ಎನ್ನುವರು. ಇವರು ಲಿಂಗತತ್ವ ತಿಳಿಯದವರು, ಇತ್ತ ಲೋಕವ ತಿಳಿಯದವರು, ಬೆಳಕಿನೊಳಗೆ ಕತ್ತಲೆ ಇರುವುದೆ ? ಕತ್ತಲೊಳಗೆ ಬೆಳಕು ಇರುವುದೆ ? ಲಿಂಗ, ನಿರಂತರ ಇದ್ದುದು ನಾಮರೂಪುಳ್ಳ ಲೋಕ ಇಲ್ಲದುದು. ಲಿಂಗ ಇದ್ದುದು, ಲೋಕ ಇಲ್ಲದುದು, ಹಗ್ಗ ಇದ್ದುದು, ಹಾವು ಇಲ್ಲದುದು, ಹಗ್ಗವವಿದ್ದಂತೆ ಲಿಂಗ ಇದ್ದುದು, ಹಾವು ತೋರಿದಂತೆ ಲೋಕ ಇಲ್ಲದುದು, ಇದ್ದ ನಿರಂತರವಾಗಿಹ ಮಂಗಲಮಯ ತತ್ವದೊಳಗೆ ಇಲ್ಲದ ಲೋಕ ಹೇಗಿರುತ್ತದೆ. ಇಲ್ಲದ ಲೋಕ ಅದು ಇಲ್ಲವೆ ಇಲ್ಲವೆಂದಲ್ಲಿ ಅದರಲ್ಲಿ ಇದ್ದ ವಸ್ತು ಇದ್ದುದೆಂತು ? ಇದ್ದುದು ಇದ್ದಂತೆ ಇದೆ ಇಲ್ಲದುದು ಇಲ್ಲವೆ ಇಲ್ಲ, ಇದರ ನಿರ್ಣಯ ಪರತತ್ವದಲ್ಲಿ ಲೀನವಾದ ಶರಣರು ಬಲ್ಲರು, ಲಿಂಗದೊಳಗೆ ಲೋಕವು ಇದ್ದುದಾದರೆ ಅದಕ್ಕೆ ಪ್ರಳಯವು ಇರಬಹುದೆ ? ಅಮರಲಿಂಗದೊಳಗೆ ಇದ್ದ ಲೋಕ ಅಮರವಲ್ಲವೆ ? ಆವ ಲೋಕಂಗಳಾದರೂ ಅಮರವಾಗಿವೆಯೆ ? ಬದುಕಿದ ಗರ್ಭಿಣಿಯ ಉದರದಲ್ಲಿ ಸತ್ತ ಶಿಶು ಇರಬಹುದೆ ? ಸತ್ತ ಗರ್ಭಿಣಿಯ ಉದರದಲ್ಲಿ ಬದುಕಿದ ಶಿಶು ಇರಬಹುದೆ ? ಹಾಗೆ ಎಂದೆಂದೂ ಅವಿನಾಶಿಯಾಗಿಹ ಲಿಂಗ, ಅಮರಲಿಂಗ ಅದರಲ್ಲಿ ಪ್ರಳಯವಾಗುವ ಲೋಕವವಿರದು, ಪ್ರಳಯ ಲೋಕದಲ್ಲಿ ಅಮರಲಿಂಗವಿರದು, ಲಿಂಗವು ಲೋಕವರಿಯದು.

ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೊಂದು ದಿನವಾಯಿತ್ತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ಹಲವು ರುದ್ರಾವತಾರ ಅಳಿದಲ್ಲಿ ಕೂಡಲಸಂಗಮದೇವ ಏನೊಂದೂ ಅರಿಯದಿರ್ದನಯ್ಯ. ಏನೊಂದು ಅರಿಯದೆ ಇದ್ದುದು ಘನ ಲಿಂಗವು, ಅದುವೆ ಕೂಡಲಸಂಗಮದೇವನು, ಆ ಘನ ಲಿಂಗಕ್ಕೆ ಆರು ಕೋಟಿ ಬ್ರಹ್ಮರು ಪ್ರಳಯವಾದುದು ಅರಿಯದು, ನಾರಾಯಣರೊಂದು ಕೋಟಿ ಮಡಿದುದು ಅರಿಯದು, ಹಲವು ರುದ್ರಾವತಾರ ಅಳಿದುದು ಅರಿಯದು, ಆವಲೋಕಂಗಳು ಉತ್ಪತ್ತಿಯಾದುದು ಅರಿಯದು, ಪ್ರಳಯವಾದುದು ಅರಿಯದು, ಏಕೆಂದರೆ ಇಲ್ಲದ ಲೋಕ ಇಲ್ಲವೆ ಇಲ್ಲ, ಲೋಕದ ಒಡೆಯರು ಇಲ್ಲವೆ ಇಲ್ಲ, ಇಲ್ಲವೆಂಬುದಕ್ಕೆ ನಗುವರು. ಲೋಕದೃಷ್ಟಿ, ಭ್ರಾಂತಿ ದೃಷ್ಟಿ, ಲಿಂಗ ದೃಷ್ಟಿ, ನಿರ್ಭ್ರಾಂತ ದೃಷ್ಟಿ, ನಿರ್ಭಾವ ದೃಷ್ಟಿ, ನಿಜೈಕ್ಯ ದೃಷ್ಟಿ ಅದು ಲೋಕದೃಷ್ಟಿಯುಳ್ಳದ್ದಾಗದು.

ಲೋಕವು ಲೋಕದಂತೆ, ಲಿಂಗವು ಲಿಂಗದಂತೆ, ಲೋಕದೃಷ್ಟಿಗೆ ಲೋಕವಾಗಿ ಕಂಡರೂ

ಮಹಾಂತರ ದೃಷ್ಟಿಗೆ ಲಿಂಗ, ಲಿಂಗವು ಲಿಂಗದಂತೆ ಇದೆ. ಮುನ್ನವು ಇದ್ದಂತೆ ಇದೆ. ಈಗಲೂ ಇದ್ದಂತೆ ಇದೆ. ಎಂದೆಂದೂ ಇದ್ದಂತೆ ಇದೆ. ಇದ್ದ ಘನವ ಇದ್ದಂತೆ ತಿಳಿದವರು ಶರಣರು, ಇದು ಕಾರಣ ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕವೆಂಬ ಭೇದ ಇದರ ರಹಸ್ಯ ಶರಣರು ಬಲ್ಲರು.

ಘಟದೊಳಗೆ ಆಕಾಶ, ಆಕಾಶದೊಳಗೆ ಘಟ ಹೇಗೆ ಅದೆ ಹಾಗೆ ಚಿದಾಕಾಶದೊಳಗೆ ಪಿಂಡಾಂಡ, ಬ್ರಹ್ಮಾಂಡರೂಪಿ ಘಟ ಹೇಗೆ ಅದೆ ಎಂಬುದು ಚಿದಾಕಾಶಕ್ಕೆ ಗೊತ್ತು, ಗೊತ್ತಿದ್ದ ಚಿದಾಕಾಶ ನುಡಿದು ಹೇಳಲಿಲ್ಲ, ಶರಣರು ನಿಶಬ್ದವೇದಿಗಳು, ಅವರೊಳಗೆ ಶಬ್ದ ಹೇಗಿದೆ ಅವರು ಬಲ್ಲರು, ಅವರು ಅಕಲ್ಪಿತ ಅಲ್ಲ, ತನು, ಇಂದ್ರಿ, ಪ್ರಾಣ, ಮನ, ಬುದ್ಧಿ ಮೊದಲಾದವುಗಳು ಇತ್ತ ಸಾಕ್ಷಿ, ಅಸಂಗ, ಸ್ವಯಂಪ್ರಕಾಶ ಆತ್ಮ ಪರಮಾತ್ಮನೆಂಬ ಕಲ್ಪಿತ ಹೇಗೆ ಅವೆ ಎಂಬುದು ಅವರು ಬಲ್ಲರು, ಸ್ಥಳವಕುಳವ ಮಾಡಬಲ್ಲರು, ಕುಳಸ್ಥಳವ ಮಾಡಬಲ್ಲರು, ಏನೊಂದಾಗದೆ ತಮ್ಮ ಸ್ವಮಹಿಮೆಯಲ್ಲಿ ತಾವಿರಬಲ್ಲರು. ಅದಕ್ಕಾಗಿ ಉಭಯದ ಭೇದ ಶರಣರು ಬಲ್ಲರು ಎಂದು ಹೇಳಿಹರು. ಲೋಕ ಲೋಕದಂತೆ ಲಿಂಗವು ಲಿಂಗದಂತೆ ಎಂಬ ಮಾರ್ಮಿಕ ರಹಸ್ಯ ನಿಮ್ಮ ಶರಣರು ಬಲ್ಲರು ಎಂದು ಹೇಳಿಹರು.

**104**

**ವೇದಗಳೆಂಬಿವು ಬ್ರಹ್ಮವ ಭೂತಾಟ, ಶಾಸ್ತ್ರವೆಂಬುದು**
**ಸರಸ್ವತಿಯ ಗೊಡ್ಡಾಟ, ಆಗಮಗಳೆಂಬಿವು ಋಷಿಯ ಮರುಳಾಟ,**
**ಪುರಾಣಗಳೆಂಬಿವು ಪೂರ್ವದವರ ಗೊಡ್ಡಾಟ, ಇಂತಿವ ನರಿದವರ**
**ನೇತಿಗಳೆದು ನಿಜದಲ್ಲಿ ನಿಂದಿಪ್ಪಾತನೆ ಗುಹೇಶ್ವರದಲ್ಲಿ ಅಚ್ಚ ಲಿಂಗೈಕ್ಯನು.**

**ತಾತ್ಪರ್ಯ** : ವೇದಗಳೆಂಬಿವು ನಾಲ್ಕು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಇವು ಬ್ರಹ್ಮ ವಿಷಯದ ಪ್ರತಿಪಾದನವುಳ್ಳವುಗಳು, ಇವು ಕಲ್ಪಿತ ಪುರುಷನಿಗೆ ಬೋಧಿಸಿದ ಕರ್ಮ, ಉಪಾಸನೆ, ಜ್ಞಾನ, ಈ ಮೂರು ವಿಷಯಗಳನ್ನೊಳಗೊಂಡ ಬೃಹತ್ ಗ್ರಂಥಗಳು. ಇಲ್ಲಿ ಕಲ್ಪಿತ ಪುರುಷನೆ ಮುಖ್ಯನು, ಇವನಿಗೆ ಪಾಪದೋಷ ಕಳೆಯಲು ಕರ್ಮಭಾಗ ಹೇಳಿದೆ. ಮನಸ್ಸಿನ ಚಂಚಲತೆಯ ಕಳೆಯಲು ಉಪಾಸನೆ ಹೇಳಿದೆ, ಆವರಣ ದೋಷ ಕಳೆಯಲು ಜ್ಞಾನವ ಹೇಳಿದೆ. ಪ್ರಥಮ ಭಾಗದಲ್ಲಿ ಭಗ ದರ್ಪಣವನ್ನೆ ಹೇಳಿದೆ. ಬ್ರಹ್ಮಕ್ಕೆ ಅರ್ಪಿಸು, ಬ್ರಹ್ಮಾರ್ಪಣ ಮಾಡು, ಇಲ್ಲಿ ಕರ್ಮಕ್ಕೆ ಪ್ರಧಾನ ಮಾಡಿ 80 ಭಾಗದಷ್ಟು ಹೇಳಿದೆ. ಬ್ರಹ್ಮಾನು ಸಂಧಾನ ಮಾಡು, ಉಪಾಸನೆಯ ಮಾಡು, 16 ಭಾಗದಷ್ಟು ಹೇಳಿದೆ. ಬ್ರಹ್ಮದ ಲಕ್ಷಣವನ್ನು ಕೊನೆಯದಾಗಿರುವ ಜ್ಞಾನದಲ್ಲಿ 4 ಭಾಗದಷ್ಟು ಹೇಳಿದೆ. ಎಲ್ಲೆಲ್ಲೂ ಬ್ರಹ್ಮದ ವಿಷಯ ತುಂಬಿರುವುದನ್ನು ಶರಣರು ಕಂಡು ವೇದಗಳೆಂಬಿವು ಬ್ರಹ್ಮನ ಭೂತಾಟವೆಂದು ಹೇಳಿಹರು.

ನುಡಿಗೆಡೆಗೊಡದ ಘನವ, ಬ್ರಹ್ಮ ಬ್ರಹ್ಮ ಎಂದು ನುಡಿ ನುಡಿದು ಅದರ ವಿಷಯದಲ್ಲಿ ಪ್ರತಿಪಾದನೆ ಮಾಡುವುದು ಪ್ರಬಲವಾಗಿದೆ. ಇದರಿಂದ ಶಬ್ದವೇದಿಗಳೆ ಆಗಿರುವುದಲ್ಲದೆ ನಿಶಬ್ದವೇದಿಗಳಾಗಲಿಲ್ಲ, ಶಬ್ದಮುಗ್ಧವಾದ ವಾಙ್ಮನೋತೀತವಾದ ಘನವ

ತಿಳಿಯದ್ದರಿಂದ ವೇದಗಳೆಂಬಿವು ಬ್ರಹ್ಮನ ಭೂತಾಟವೆಂದು ಹೇಳಿಹರು.

ನೋಡಿ ನೋಡಿ ಹೋದರು ಹಲವರು, ಮಾಡಿ ಮಾಡಿ ಹೋದರು ಕೆಲವರು, ನೀಡಿ ನೀಡಿ ಹೋದರು ಕೆಲವರು, ಮಾಡದೆ ನೀಡದೆ ನೋಡದೆ ಹೋದವರು ಆರನು ಕಾಣೆ ಕಪಿಲಸಿದ್ಧ ಮಲ್ಲಿಕಾರ್ಜುನ. ಎಷ್ಟೆ ಮತವಾದಿಗಳು, ಕರ್ಮಿಗಳು, ಉಪಾಸಕರು, ವೇದವ ನೋಡಿ ನೋಡಿ, ಮಾಡಿ ಅರ್ಪಣ ಮಾಡಿ, ಕೂಡಿ ಉಪಾಸನ ಮಾಡಿ ಮಾಡಿ, ಶ್ರವಣ ಮನನ ನಿಧಿಧ್ಯಾಸ ಮಾಡಿ ಮಾಡಿ, ತ್ಯಾಗ ಮಾಡಿ, ಲಿಂಗಾರ್ಚನೆ ಮಾಡಿ, ಧ್ಯಾನ ಮಾಡಿ, ಸ್ವರೂಪ ಚಿಂತನೆ ಮಾಡಿ ಮಾಡಿ ಕೆಲಬರು ದಾನ ನೀಡಿ ನೀಡಿ, ಅನ್ನದಾನ, ವಸ್ತ್ರದಾನ, ಕನ್ಯಾದಾನ, ವಿದ್ಯಾದಾನ, ಜ್ಞಾನದಾನ ನೀಡಿ ನೀಡಿ ಹೋದರು, ಮಾಡದವರಾಗಲಿಲ್ಲ, ನೀಡದವರಾಗಲಿಲ್ಲ, ನೋಡದವರಾಗಲಿಲ್ಲ, ಕಲ್ಪಿತ ಪುರುಷರೆ ಆದರಲ್ಲದೆ ಅಕಲ್ಪಿತ ಘನರಾಗಲಿಲ್ಲ, ಇದು ಕಾರಣ ಬ್ರಹ್ಮಾರ್ಪಣ ಮಾಡು, ಬ್ರಹ್ಮಾನುಸಂಧಾನ ಮಾಡು, ಬ್ರಹ್ಮಾಬ್ರಹ್ಮವೆಂದು ವಿಸ್ತಾರ ಮಾಡಿತಲ್ಲದೆ ಅವರ್ಣೀಯದಿರುವ ಸಿದ್ಧವಾಗದ್ದರಿಂದ ವೇದ ಬ್ರಹ್ಮನ ಭೂತಾಟವೆಂದು ಹೇಳಿಹರು.

ಶಾಸ್ತ್ರವೆಂಬುದು ಸರಸ್ವತಿಯ ಗೊಡ್ಡಾಟ, ಚಿತ್‌ಶಕ್ತಿಯ ಬರಡು ಆಟ, ಪ್ರಕೃತಿ ಆಟ, ಗುಣಮಯಿ ಆಟ, ಅವಿದ್ಯೆದಾಟ, ವಿದ್ಯೆದಾಟ, ಕಲ್ಪಿತದ ಆಟ, ತೋರಿ ಇಲ್ಲವಾಗುವ ಆಟ, ಶಬ್ದ ಸಂಭ್ರಮದಾಟ, ನಿಶಬ್ದವೇದವು ತಿಳಿಸದು, ತನ್ನಿರುವಿನ ಘನವ ಸಿದ್ಧಿಸದಿದ್ದಲ್ಲಿ ಶಬ್ದದಾಟವೆಲ್ಲ ಬರುಡು ಆಟವೆಂದು ಹೇಳಿಹರು.

ಆಗಮವೆಂಬಿವು ಪಕ್ಷಿಗಳ ಮರುಳಾಟ, ಆಗಮ ಋಷಿಗಳ ಮರುಳು ಮಾಡಿದ ಆಟ, ಕರ್ಮಕ್ಕಾಗಿ ಮರುಳಾದರು, ಜ್ಞಾನಕ್ಕಾಗಿ ಮರುಳಾದರು, ಇತ್ತ ಕರ್ಮವು ಪ್ರಧಾನವಾಗಿ ಕಂಡಿತ್ತು, ಇತ್ತ ಜ್ಞಾನವು ಪ್ರಧಾನವಾಗಿ ಕಂಡಿತು, ಆಗಮ ಪ್ರೇಮಿಗಳಿಗೆಲ್ಲ ಇತ್ತ ಕರ್ಮವ ಬಿಡರು, ಇತ್ತ ಜ್ಞಾನವ ಬಿಡರು, ಜ್ಞಾನ ಕರ್ಮ ಎರಡು ಮುಖ್ಯವೆಂದು. ಪಕ್ಷಿಗೆ ಎರಡು ರೆಕ್ಕೆ ಇದ್ದರೆ ಗಗನಕ್ಕೆ ಹಾರುವುದು. ಒಂದು ಇದ್ದರೆ ಸಾಧ್ಯ. ಎರಡು ಬೇಕೆಂದು ಕರ್ಮಜ್ಞಾನಗಳ ಸಮುಚ್ಚಯ ಮಾಡುವುದರಲ್ಲಿಯೆ ಸರಿಹೋದರಲ್ಲದೆ ತಮ್ಮ ಅನುಪಮ ನಿಲವು ಕಾಣದಾದುದರಿಂದ ಆಗಮವೆಂಬಿವು ಋಷಿಗಳ ಮರುಳಾಟವೆಂದು ಹೇಳಿಹರು.

ಪುರಾಣವೆಂಬಿವು ಪೂರ್ವಿಕರ ಗೊಡ್ಡಾಟ, ಪುರಾಣವು ಹಿಂದಿನವರ ಚಾರಿತ್ರವ ಹೇಳುವುದಲ್ಲದೆ, ಅಜಾತ ಚಾರಿತ್ರವ ಹೇಳದು, ಪುರಾಣದಲ್ಲಿ ಶ್ರೇಷ್ಠವಾದ ಪುರಾಣ ದೇವಿ ಪುರಾಣ, ಆ ಪುರಾಣ ನೋಡಿದರೆ ಪೂರ್ವಿಕರ ಗೊಡ್ಡಾಟವೆಂಬುದು ಸಿದ್ಧವಾಗುವುದು. ಅಲ್ಲಿಯ ದೇವತಾದೈತ್ಯರ ವಿಷಯ ಪೂರ್ವಿಕರ ವಿಷಯ ಅಲ್ಲವೆ, ಇತ್ತ ಬ್ರಹ್ಮಾದಿಗಳ ವಿಷಯ, ಇದಲ್ಲದೆ ದೇವಿ ವಿಷಯ, ಅವರ ಯುದ್ಧ ಮೇಲೆ ಮರಣ, ದೇವಿಯನ್ನು ತೋರಿ ಇಲ್ಲವಾಗುವ ಮಾಯಿಕ ಶಕ್ತಿ, ಸಮರ್ಥ ಶಕ್ತಿ ಎಂದು ಕೊಂಡಾಡುವುದು ಸ್ವಲ್ಪ ಭಾಗ ಜ್ಞಾನ ವಿಷಯ ಹೇಳುವುದು. ಇದರಿಂದ ಪೂರ್ವಿಕರ ವಿಷಯವೆ ತಿಳಿದಂತಾಯಿತಲ್ಲದೆ, ಸರ್ವಾಂಗಲಿಂಗಮಯವಾದ ರಹಸ್ಯ, ಅಲ್ಲಿ ಇಲ್ಲವಾದ್ದರಿಂದ ಪುರಾಣ ಪೂರ್ವಿಕರ ಗೊಡ್ಡಾಟವೆಂದು ಹೇಳಿಹರು.

ಇಂತಿವನರಿದವರ ನೇತಿಗಳೆದು ನಿಜದಲ್ಲಿ ನಿಂದಿಪ್ಪಾತನೆ ಗುಹೇಶ್ವರದಲ್ಲಿ ಅಚ್ಚ ಲಿಂಗೈಕ್ಯನು, ವೇದಗಳೆ ಆಗಲಿ, ಶಾಸ್ತ್ರವೆ ಆಗಲಿ, ಆಗಮವೇ ಆಗಲಿ, ಪುರಾಣವೆ ಆಗಲಿ,

ಇವೆಲ್ಲವು ಹೆತ್ತರಿವು ಆದುದರಿಂದ ಹೆತ್ತರಿವು ತನ್ನಿಂದ ತಿಳಿಸಿಕೊಳ್ಳುವ ಮಾಯಿಕವನ್ನೆ ಅರಿತರಲ್ಲದೆ ನಿಜವಾದದ್ದು ಅರಿಯದ್ದರಿಂದ ಇಂತಿವನರಿದವರ ನೇತಿಗಳೆದು ಎಂದು ಹೇಳಿಹರು. ಇದು ತನ್ನವ ಮರೆತು, ಶಬ್ದಸಂಭ್ರಮರಾದವರ ಅರಿವು ಮರೆತು ತನ್ನ ಅರಿವುದು ಅಂದರೆ ಗುಹೇಶ್ವರ ಅರಿವುದು, ಸಕಲ ಗುಹೆಯೊಳಗಿರುವ ಈಶ್ವರ ತನ್ನ ದೇಹವೆಂಬ ಗುಹೆಯೊಳಗಿರುವ ಈಶ್ವರವೆಂಬ ಘನ ಚೈತನ್ಯ, ಜ್ಞಾನಸ್ವರೂಪವ ಅರಿಯ ಹೋಗಿ ತಾನೆ ನುಡಿಗೆಡೆಗೊಡದ ಘನವಾಗಿ ನಿಂದುದು, ನಿಜದಲ್ಲಿ ನಿಂದಿಪ್ಪಾತನು ಏಕೆಂದರೆ ತನ್ನಿರುವಿನ ಅರುವಾಗಿ ತಾನೆ, ತಾನಾಗಿಹನು ತನ್ನ ಸ್ವರೂಪದಲ್ಲಿ ಲೀಯವಾಗಿಹನು. ಆತನೆ ನಿಜದಲ್ಲಿ ನಿಂತಿರುವ ಅಚ್ಚ ಲಿಂಗೈಕ್ಯನು ಎಂದು ಹೇಳಿಹರು. ಇದು ತನ್ನ ತಾನರಿಯದ್ದರಿಂದ ವೇದ ಘನ ಕೆಲಬರಿಗೆ ಶಾಸ್ತ್ರವೆ ಘನ, ಕೆಲಬರಿಗೆ ಆಗಮಂಗಳೆ ಘನ ಇನ್ನು ಕೆಲಬರಿಗೆ ಪುರಾಣಂಗಳೆ ಘನವಾಗಿಹವು. ಗುಹೇಶ್ವರನೆಂಬ ಮಹಾಘನವ ನಿಜಾನುಭವ ಸಂಪಾದನೆಯ ಅರಿಯದ ಕಾರಣ ಹಲವು ಸಂಪಾದನೆ ಕಾಣ ಬರುತ್ತಿಹವು.

**105**

**ವೇದ ಘನವೆಂಬುದೊಂದು ಸಂಪಾದನೆ,**
**ಶಾಸ್ತ್ರ ಘನವೆಂಬುದೊಂದು ಸಂಪಾದನೆ,**
**ಆಗಮ ಘನವೆಂಬುದೊಂದು ಸಂಪಾದನೆ,**
**ಪುರಾಣ ಘನವೆಂಬುದೊಂದು ಸಂಪಾದನೆ**
**ಅಹುದೆಂಬುದೊಂದು ಸಂಪಾದನೆ,**
**ಅಲ್ಲವೆಂಬುದೊಂದು ಸಂಪಾದನೆ**
**ಗುಹೇಶ್ವರನೆಂಬ ಮಹಾಘನವ ನಿಜಾನುಭವ**
**ಸಂಪಾದನೆಯನರಿಯದ ಕಾರಣ ಹಲವು ಸಂಪಾದನೆಗಳಾದವು.**

**ತಾತ್ಪರ್ಯ** : ವೇದ ಘನವೆಂಬುದೊಂದು ಸಂಪಾದನೆ : ವೇದ ಘನವಾದುದು ಅದಾರಿಗೆ ? ಆರು ವೇದವನ್ನು ಅಭ್ಯಾಸ ಮಾಡಿಹರು, ಅವರಿಗೆ ವೇದ ಅಂದರೆ ಜ್ಞಾನ, ಅಲ್ಲಿ ಜ್ಞಾನ ಹೀಗಿದೆ, ಅಲ್ಲಿ ಕರ್ಮ ವಿಧಾನ, ಉಪಾಸನೆಯ ವಿಧಾನ, ಕೊನೆಗೆ ಜ್ಞಾನದ ವಿಧಾನ ಮತ್ತು ಇವುಗಳ ವಿವರಣೆ ಚೆನ್ನಾಗಿ ಹೇಳಿದೆ. ತನು, ಇಂದ್ರಿಯಂಗಳು, ಪ್ರಾಣಾದಿಗಳು, ಕರಣಂಗಳ ಅರ್ಪಣ ಮಾಡುವ ಪರಿ ಸರಿಯಾಗಿ ಮಂಡಿಸಿಹರು. ಇತ್ತ ಧನದ ಅರ್ಪಣೆ ಹೇಗೆ ಮಾಡುವುದು, ಆರು ಮಾಡುವುದು ಎಂಬುದು ಚೆನ್ನಾಗಿ ಮಂಡಿಸಿರುವುದರಿಂದ ಅದರ ಪಠನ ಪಾಠ ಮಾಡುವುದರಿಂದ ಕ್ರಿಯಾ ಜ್ಞಾನ, ಉಪಾಸನ ಜ್ಞಾನ, ಜ್ಞಾನ ಕಾಂಡದ ಜ್ಞಾನ ಇವುಗಳು ತನಗೆ ವೇದದಿಂದ ಸಂಪಾದನೆಯಾದ ಮೂಲಕ ವೇದ ಘನವಾಗಿ ಪರಿಣಮಿಸಿದೆ.

ವೇದವೆಂದರೆ ಜ್ಞಾನ, ಇದು ಜ್ಞಾನ ಸಂಗ್ರಹವುಳ್ಳ ದೊಡ್ಡ ಗ್ರಂಥ, ಪರಿಶುದ್ಧ ಹೃದಯರಾದ ಋಷಿಗಳಿಂದ ಹೊರಹೊಮ್ಮಿದ ಜ್ಞಾನ, ಇದಕ್ಕೆ ಈಶ್ವರನ ಹೃದಯದಿಂದ

ಹೊರಹೊಮ್ಮಿದ ಜ್ಞಾನವೆಂದು ಹೇಳುವುದು ಉಂಟು. ಋಷಿಗಳೆಂದರೆ ನಿರಪೇಕ್ಷಾಮೂರ್ತಿಗಳು, ನಿಷ್ಕಾಮಕರ್ಮಿಗಳು, ಶುದ್ಧ ಅಂತಃಕರಣವುಳ್ಳವರು, ಅಲ್ಲಿಂದ ಹೊರಹೊಮ್ಮಿಬರುವ ಜ್ಞಾನ ಸಕಲ ಜೀವಿಗಳ ಕಲ್ಯಾಣಕ್ಕೋಸ್ಕರ ಬಂದವುಗಳು. ವೇದ, ಜ್ಞಾನ ಸಂಗ್ರಹದ ಸಂಗಮವು ಅಲ್ಲಿ ಸಕಾಮ ಕರ್ಮಿಗಳ ಜ್ಞಾನವು ಉಂಟು, ನಿಷ್ಕಾಮ ಕರ್ಮಿಗಳ ಜ್ಞಾನವುಂಟು, ಯಜ್ಞಾದಿಗಳ ಜ್ಞಾನವು ಉಂಟು, ವಿವೇಕ, ವೈರಾಗ್ಯ, ಶಮೆ, ದಮೆ, ತಿತಿಕ್ಷೆ, ಉಪರತಿ, ಶ್ರದ್ಧೆ, ಸಮಾಧಾನ, ಶಾಂತಿ, ಮುಮುಕ್ಷುತ್ವ ಇವೆಲ್ಲವುಗಳ ಜ್ಞಾನ ಉಂಟು, ಮೇಲೆ ಚಿತ್‌ಸ್ಥಿರತೆ ಮಾಡುವ ಜ್ಞಾನ ಉಂಟು ಹಾಗೂ ಆವರಣ ನಷ್ಟಮಾಡುವ ಸಾಕ್ಷಿ, ದೃಕ್ ಜ್ಞಾನವುಂಟು, ಇವುಗಳ ಜ್ಞಾನ ಗಳಿಕೆ ತನಗೆ ಲಭ್ಯವಾದುದರಿಂದ ವೇದವು ಘನವಾಗಿ ಅದರದೊಂದು ಸಂಪಾದನೆಯಾಯಿತ್ತು.

ವೇದ ಘನವೆಂಬುವವರು ತನ್ನ ಘನವ ಕಾಣದವರು, ಹೆತ್ತರಿವೆ ಇವರಿಗೆ ಘನವಾಗಿದೆ. ಅದಕ್ಕಾಗಿ ಅದರ ಸಂಪಾದನೆಯ ಮಾಡಿಕೊಂಡಿಹರು.

ಶಾಸ್ತ್ರ ಘನವೆಂಬುದೊಂದು ಸಂಪಾದನೆ: ಶಾಸ್ತ್ರ ಘನವಾಗಬೇಕಾದರೆ ಪೂರ್ವದಿಂದ ಪಂಚಪ್ರಕಾರದ ಬೇಧಜ್ಞಾನವು ಪ್ರಬಲವಾಗಿತ್ತು, ಅಂದರೆ ಜೀವ ಜಡ ಭೇದ; ಈಶ್ವರ ಜಡ ಭೇದ, ಜಡಾ ಜಡ ಭೇದ, ಜೀವ ಜೀವಿಗಳ ಭೇದ, ಜೀವ ಈಶ್ವರ ಭೇದ, ಈ ಭೇದ ಜ್ಞಾನ ಬಹು ಪ್ರಬಲವಾಗಿದ್ದುದು. ಇದನ್ನು ನಷ್ಟ ಮಾಡುವ ಜ್ಞಾನಜೀವ ಬ್ರಹ್ಮರೇಕತ್ವ ಜ್ಞಾನ ತತ್ವಮಸಿ, ಅಯಮಾತ್ಮಬ್ರಹ್ಮ , ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ ಎಂಬ ಮಹಾವಾಕ್ಯಗಳನು ಶೃತಿ ಪ್ರಮಾಣದಿಂದ ಭೇದ ಖಂಡನ, ಅಭೇದ ಮಂಡನ, ನಾಮರೂಪ ಖಂಡನ, ಅಸ್ತಿ, ಭಾತಿ, ಪ್ರಿಯ ಮಂಡನ, ದೃಶ್ಯದ ಖಂಡನ, ದೃಕ್‌ದ ಮಂಡನ, ಜಡದ ಖಂಡನ ಅಜಡದ ಮಂಡನ, ಭ್ರಾಂತಿಯ ಖಂಡನ, ನಿರ್ಭ್ರಾಂತಿಯ ಮಂಡನ ಮಾಡುವುದರಿಂದ ಶಾಸ್ತ್ರ ಘನವಾಯಿತ್ತು ಘನವಾಗಿ ಇದೊಂದು ಸಂಪಾದನೆಯಾಯಿತ್ತು.

ಆಗಮ ಘನವೆಂಬುದೊಂದು ಸಂಪಾದನೆ: ಆಗಮದಿಂದ ಲಭ್ಯವಾಗುವ ಜ್ಞಾನ, ಕರ್ಮ ಜ್ಞಾನಗಳ ಸಮ ಮಾಡುವ ಜ್ಞಾನ, ಇದು ಜ್ಞಾನಕ್ರಿಯೆ, ಅಕ್ರಿಯೆ, ಅಕ್ರಿಯೆ ಎಂಬೆನೆ ಕ್ರಿಯೆದಿಂದುಕ್ತವಾಗಿದೆ, ಕ್ರಿಯೆದಿಂದುಕ್ತವಾಗಿಹೆದೆಂಬೆನೆ, ಜ್ಞಾನ ಅಂತರ್ಗತವಾಗಿದೆ. ಜ್ಞಾನವು ಅಕ್ರಿಯೆ ಹಿರಿಮೆಯ ಸಿದ್ಧಿಸುವುದು, ಕೆಲಬರು ಹೀಗೆ ತಿಳಿದಿಹರು. ಕರ್ಮವೆಂದರೆ ಅಂತಃಕರಣ ಶುದ್ಧಿಗೋಸ್ಕರ ಮಾಡುವುದು, ಜ್ಞಾನವೆಂದರೆ ಆವರಣ ನಿವೃತ್ತಿಗೋಸುಗ ಮಾಡುವ ಶ್ರವಣವಾಗಲಿ, ಮನನವಾಗಲಿ, ನಿಧಿಧ್ಯಾಸವಾಗಲಿ, ಇವು ಅವಶ್ಯವಾಗಿ ಮಾಡಬೇಕು. ಜ್ಞಾನವಾದ ನಂತರ ಅಂತಃಕರಣ ಶುದ್ಧಿಗೋಸ್ಕರ ಮಾಡುವ ಕರ್ಮ ಬಿಡಬಾರದು. ಅದಕ್ಕಾಗಿ ಜ್ಞಾನ ಎಷ್ಟು ಅವಶ್ಯಕ; ಕರ್ಮವು ಅಷ್ಟೇ ಅವಶ್ಯಕ. ಕರ್ಮದಿಂದ ಬಾಹ್ಯ ಶುದ್ಧಿ, ಜ್ಞಾನದಿಂದ ಅಂತರ ಶುದ್ಧಿ, ಒಳಹೊರಗೂ ಶುದ್ಧವಾಗಲು ಕರ್ಮಜ್ಞಾನ ಅವಶ್ಯಕವೆಂದು ತಿಳಿಸುವುದರಿಂದ ಅದು ಘನವಾಗಿ ಅದರ ಗಳಿಕೆಯಾಗಿರುವುದರಿಂದ ಅದೊಂದು ಸಂಪಾದನೆಯಾಗಿದೆ.

ಪುರಾಣವೆಂಬುದೊಂದು ಘನಸಂಪಾದನ : ಪುರಾಣದಿಂದ ಭಕ್ತರು ಪೂರ್ವಿಕರ ಲೀಲೆಯ ಕಂಡರು, ಶಿವಪುರಾಣವ ನೋಡಿ ಶಿವನು ಪೂಜ್ಯನಾಗಿಹನು.ವಿಷ್ಣು ಪುರಾಣವ ನೋಡಿ ವಿಷ್ಣು ಪೂಜ್ಯನಾಗಿಹನು. ಬ್ರಹ್ಮಪುರಾಣವ ನೋಡಿ ಬ್ರಹ್ಮ ಪೂಜ್ಯನಾಗಿಹನು.

ಗಣಪತಿ ಪುರಾಣ ನೋಡಿ ಗಣಪತಿ ಪೂಜ್ಯನಾಗಿಹನು. ಶಾಕ್ತೆಯ ಪುರಾಣ ನೋಡಿ ಶಕ್ತಿಯು ಪೂಜ್ಯಳಾಗಿಹಳು. ಪ್ರಮಥರ ಪುರಾಣವ ನೋಡಿ ಪ್ರಮಥರು ಪೂಜ್ಯರಾಗಿಹರು. ಶಿವಪುರಾಣದಲ್ಲಿ ಪೂಜ್ಯನಾಗಿಹ ಶಿವ ವಿಷ್ಣು ಪುರಾಣದಲ್ಲಿ ಶಿವ ಪೂಜಕನಾಗಿಹನು, ವಿಷ್ಣು ಪೂಜ್ಯನಾಗಿಹನು, ಶಿವ ಪುರಾಣದಲ್ಲಿ ವಿಷ್ಣು ಶಿವನ ಪೂಜಕನಾಗಿಹನು, ಶಿವನು ವಿಷ್ಣು ಪೂಜ್ಯರೆಂದರೆ ಗಣಪತಿ ಪುರಾಣದಲ್ಲಿ ಗಣಪತಿ ಪೂಜ್ಯನಾಗಿ ಶಿವ ವಿಷ್ಣು ಶಕ್ತಿ ಮೊದಲಾದವರು ಪೂಜಕರಾಗಿಹರು. ಪುರಾಣದ ವೈಶಿಷ್ಟ್ಯ ಹೀಗಿದೆ. ತಮ್ಮ ತಮ್ಮ ಪುರಾಣದಲ್ಲಿ ತಾವೆ ಪೂಜ್ಯರು, ಅಧಿಷ್ಠಾನ ಮೂರ್ತಿಗಳು. ಇನ್ನುಳಿದ ಪುರಾಣದಲ್ಲಿ ಪೂಜಕರಾಗಿಹರು.

ಪೂಜ್ಯ ಪೂಜಕರೆಂಬುದು ಲೀಲೆಯಲ್ಲದೆ ಹಿರಿದು ಕಿರಿದು ಮಾಡಲು ಇಂಬಿಲ್ಲ, ಪೂಜ್ಯರೆಂಬೆನೆ ? ಪೂಜಕರು, ಪೂಜಕರೆಂಬೆನೆ ಪೂಜ್ಯರು, ಕಾರಣವು ಪೂಜ್ಯವು ಕಾರ್ಯವು ಪೂಜಕವು ಕಾರ್ಯಕಾರಣವೆಂಬುದು ಒಂದು, ಒಂದು ಸಿದ್ಧ ಇದು ಅಭೇದ ಸಿದ್ಧ, ಈ ಅಭೇದತ್ವ ಪುರಾಣಗಳಿಂದ ತಿಳಿದು ಬಂದಿರುವುದರಿಂದ ಪುರಾಣ ಘನವಾಯಿತ್ತು, ಇದು ಕಾರಣ ಪುರಾಣ ಘನವೆಂಬುದೊಂದು ಸಂಪಾದನೆ ಎಂದು ಹೇಳಿಹರು.

ಅಹುದೆಂಬುದೊಂದು ಸಂಪಾದನೆ, ಅಲ್ಲವೆಂಬುದೊಂದು ಸಂಪಾದನೆ : ಭೇದ ಜ್ಞಾನವುಳ್ಳವರಿಗೆ ವೇದದಲ್ಲಿ ಪ್ರಥಮ ಭಾಗ, ದ್ವಿತೀಯ ಭಾಗ ನೋಡಿದ ಕರ್ಮಕಾಂಡಿಗೂ ಉಪಾಸನಾ ಕಾಂಡದವರಿಗೂ ಅಹುದಾಗಿದೆ. ಕೊನೆಯ ಭಾಗವಾದ ಜ್ಞಾನಕಾಂಡ ನೋಡಿದವರಿಗೆ ಭೇದ ಜ್ಞಾನವು ಅಲ್ಲವಾಗಿದೆ. ಅಭೇದ ಜ್ಞಾನವು ಅಹುದಾಗಿದೆ. ಸಗುಣತತ್ವ ಒಪ್ಪಿದವರಿಗೆ ಭೇದ, ಭಾವದಿಂದ ಕೂಡಿದ ಕರ್ಮ ಉಪಾಸನೆ, ಅರ್ಪಿತ, ಅರ್ಚನೆ, ಅಹುದಾಗಿದೆ. ನಿರ್ಗುಣ ತತ್ವಕ್ಕೆ ಒಪ್ಪಿದವರಿಗೆ ಸಗುಣ ತತ್ವ ಅಲ್ಲವಾಗಿದೆ. ನಿರ್ಗುಣ ತತ್ವ ಅಹುದಾಗಿದೆ. ಅಹುದೆಂಬ ಸಂಪಾದನೆಯಾಗಲಿ, ಅಲ್ಲವೆಂಬ ಸಂಪಾದನೆಯಾಗಲಿ, ಬುದ್ಧಿಗಮ್ಯವಾದ ಸಂಪಾದನೆ, ವಿವೇಕ ವೈರಾಗ್ಯದಿಂದುಕ್ತವಾದುದು, ನಿತ್ಯಾನಿತ್ಯ ವಿಚಾರದಿಂದುಕ್ತವಾದುದು, ಇದು ಸೀಮಿತ ಸಂಪಾದನೆ, ಇದುವೆ ಘನವಾಗಿದೆ. ಕೆಲಬರಿಗೆ ಅಲ್ಲವೆಂಬುವ ನೇತಾತ್ಮವೆ ಪ್ರಿಯವಾಗಿದೆ. ಅವರಿಗೆ ತೋರುವುದೆಲ್ಲ ನಿಷೇಧಿಸುವುದೆ ಪ್ರಿಯವಾಗಿದೆ. ಅವರಿಗೆ ಅಲ್ಲವೆಂಬುದೊಂದು ಸಂಪಾದನೆಯಾಗಿದೆ. ಕೆಲಬರಿಗೆ ತೋರುವುದೆಲ್ಲ ಆತ್ಮವೆ ! ಸಕಲವು ಆತ್ಮನೆಂಬ ಸರ್ವಾತ್ಮವು ಪ್ರಿಯವಾಗಿದೆ. ಅವರಿಗೆ ಸಕಲವು ಆತ್ಮನು ಅಹುದೆನ್ನುವುದೆ ಅವರಿಗೆ ಸಂಪಾದನೆಯಾಗಿದೆ. ಇದು ಕಾರಣ ಅಲ್ಲವೆಂಬುದೊಂದು ಸಂಪಾದನೆ, ಅಹುದೆಂಬುದೊಂದು ಸಂಪಾದನೆ ಎಂದು ಹೇಳಿಹರು.

ಗುಹೇಶ್ವರನೆಂಬ ಮಹಾಘನವ ನಿಜಾನುಭವ ಸಂಪಾದನೆಯನರಿಯದ ಕಾರಣ, ಹಲವು ಸಂಪಾದನೆಗಳಾದವು: ಗುಹೇಶ್ವರನೆಂಬುದು ಶರಣನ ದೇಹವೆಂಬ ಗುಹೆಗೆ ಒಡೆಯನಾಗಿಹ ಈಶ್ವರನೆಂದರೆ ಚೈತನ್ಯಘನ. ಇದು ಅಖಂಡಿತನಾದುದರಿಂದ ಮಹಾಘನವಾಗಿದೆ. ಇದನ್ನು ಅರಿಯ ಹೋಗಲು ನಿಜದ ಅನುಭವ, ತನ್ನ ಅನುಭವ ಇದು ಶೃತಿ ಸ್ಮೃತಿಗಳಿಗಗೋಚರವಾದ ಅನುಭಾವ. ನಿಶಬ್ದವೇದಿಗಳ ಅನುಭಾವ, ಇದು ತನ್ನ ಸಂಪಾದನೆ, ಪರತತ್ವದಲ್ಲಿ ಲೀಯವಾದವರ ಸಂಪಾದನೆ, ತನ್ನ ಸಂಪಾದನೆ ಲಭ್ಯವಾಗದ್ದರಿಂದ ಹಲವು ಸಂಪಾದನೆಗಳು ಘನವಾಗಿದ್ದವು. ತನ್ನ ನಿಜದ ಸಂಪಾದನೆ

ಲಭ್ಯವಾಗುವುಡೆ ಉಳಿದವುಗಳು ಗೌಣ ಸಂಪಾದನೆ ಹಲವು ಸಂಪಾದನೆಗಳಾದವು.

ತನ್ನ ತಾನರಿದ ಸಂಪಾದನೆ, ಅಖಂಡಿತ ಘನ ಪೂರ್ಣವೆ ತನ್ನಿರುವೆಂದರಿದ ಸಂಪಾದನೆ, ಅರಿಯದರುವೆ ತಾನಾಗಿಹ ಸಂಪಾದನೆ, ನಿಜ ಸಂಪಾದನೆ, ಈ ಘನ ಸಂಪಾದನೆಯ ಮಾಡದೆ ಕವಿ ಸಾಧಕರೆಲ್ಲ ಕಳವಳಿಸಿ ಕೆಟ್ಟರು. ವಿದ್ಯಾಸಾಧಕರು, ಪವನ ಸಾಧಕರು, ಜಲ ಸಾಧಕರು, ಅನ್ನ ಸಾಧಕರು, ತಮ್ಮ ಪರಮ ಗತಿಯ ತಿಳಿಯದೆ ಕಾಣದೆ ವ್ಯರ್ಥವಾದರು.

**106**

**ಕವಿ ಸಾಧಕರೆಲ್ಲ ಕಳವಳಿಸಿ ಕೆಟ್ಟರು,**
**ವಿದ್ಯಾಸಾಧಕರೆಲ್ಲ ಬುದ್ಧಿಹೀನರಾದರು,**
**ಪವನ ಸಾಧಕರೆಲ್ಲ ಹದ್ದು ಕಾಗೆಗಳಾದರು,**
**ಜಲ ಸಾಧಕರೆಲ್ಲ ಕಪ್ಪೆ, ಮೀನುಗಳಾದರು,**
**ಅನ್ನ ಸಾಧಕರೆಲ್ಲ ಭೂತಪ್ರಾಣಿಗಳಾದರು**
**ಬಸವಣ್ಣ ಸದ್ಗುರು ಸಾಧಕನಾಗಿ**
**ಸ್ವಯಂ ಲಿಂಗವಾದ ಕಾಣಾ ಗುಹೇಶ್ವರಾ.**

**ತಾತ್ಪರ್ಯ** : ಕವಿಸಾಧಕರೆಲ್ಲ ಕಳವಳಿಸಿ ಕೆಟ್ಟರು: ಕಳವಳಿಸಿಕೆಟ್ಟ ಕವಿಗಳು ಇವರಾರು ? ಕವಿಗಳು ಇವರು ಕಾವ್ಯ ರಚಿಸುವವರು. ಕಾವ್ಯ ರಚಿಸುವ ಹಂಬಲ ಈತನದು, ಈತನೊಬ್ಬ ನರಕವಿ, ನರಕವಿಯಾದುದರಿಂದ ತನ್ನ ಪಂಡಿತತ್ವದ ಪ್ರತಿಷ್ಠೆಯ ತೋರಿಸುವ ಹುಚ್ಚು, ಶಬ್ದ ಸಾಹಿತಿ, ತನ್ನ ಕಾವ್ಯ ರಚನೆಗೆ ಗಣ, ಪ್ರಾಸ, ಅಲಂಕಾರ ಛಂದಸ್ಸು ಉಪಯೋಗಿಸಿ ಕಾವ್ಯರಚನೆ ಮಾಡುವ ಒಂದು ಕಲೆ, ತನ್ನ ಕವಿತೆ ಎಲ್ಲವುಗಳಿಂದ ಸರಿಯಾಗಿ ಹೊಂದಾಣಿಕೆಯಿಂದ ಕೂಡಿ ಲೋಕದವರ ಮೆಚ್ಚುಗೆಯಾಗಬೇಕೆಂಬ ತವಕ, ಈತನಲ್ಲಿರುವುದಕ್ಕಾಗಿ ಅಥವಾ ಪರಿಶ್ರಮ ಸಾರ್ಥಕವಾಗುತ್ತದೆಯೋ ಹೇಗೆ ? ಎಂಬ ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆ ಇರುವುದರಿಂದ ಕಳವಳಿಸುತ್ತಿಹನು.

ವರಕವಿಗಳು ರಚಿಸಿದ ಕಾವ್ಯ, ತಮ್ಮ ಸ್ವಾನುಭವ ಸುಧೆಯಿಂದ ಹೊರಹೊಮ್ಮಿದ ಕಾವ್ಯ ಸಕಲರಿಗೆ ನಿಜದ ಎಚ್ಚರ ಮಾಡುವ ಕಾವ್ಯ ಜ್ಞಾನಾನುಭವ ಕಾವ್ಯ, ಸ್ವಾನುಭವ ಕಾವ್ಯ, ಹೃದಯಕ್ಕೆ ಹೃದಯವೆ ತೃಪ್ತಿ ಮಾಡುವ ಕಾವ್ಯ, ಇದು ವರಕವಿಗಳ ಕಾವ್ಯ, ಕಳವಳ ಕಳೆಯುವ ಕಾವ್ಯ, ಸ್ವಾನುಭವವಿಲ್ಲದ ಕಾವ್ಯ, ಕಳವುಳ್ಳ ಕಾವ್ಯ ಇದರಿಂದ ನರಕವಿಗಳು ಇವರು ಕವಿತೆಗಳ ಮಾಡಿಕೆಟ್ಟು ಹೋದರು. ಅದರಿಂದ ತಾನಾರೆಂದು ತನ್ನ ತಿಳಿಯಲಿಲ್ಲ, ಲೋಕಕ್ಕೂ ತಾನು ಬರೆದ ಸಾಹಿತ್ಯ ನಿಜವ ತಿಳಿಸುವ ಕವಿತೆಯಾಗಲಿಲ್ಲ, ಇದು ಕಾರಣ ತಾನು ಅವನತಿ, ಅಂಥ ಕವಿತಾ ಮಾಡಿ ಲೋಕವ ಅವನತಿಯಾದುದರಿಂದ ಕಳವಳಿಸಿಕೆಟ್ಟರು ಎಂದು ಹೇಳಿಹರು.

ವಿದ್ಯಾಸಾಧಕರೆಲ್ಲ ಬುದ್ಧಿಹೀನರಾದರು: ಬ್ರಹ್ಮವಿದ್ಯೆ ಬಿಟ್ಟು ಉಳಿದ ವಿದ್ಯೆಗಳೆಲ್ಲ ಲೋಕಪ್ರತಿಷ್ಠೆ ಬೆಳಿಸುವ ವಿದ್ಯೆ, ಇದರಿಂದ ಅಭಿಮಾನ ಬೆಳೆದು ಬುದ್ಧಿಯ ಬೆಳವಣಿಗೆ

ಕುಗ್ಗುವುದು, ಅರವತ್ತು ನಾಲ್ಕು ವಿದ್ಯೆಗಳಲ್ಲಿ ನಿಪುಣರಾದರೂ ಬ್ರಹ್ಮವಿದ್ಯೆ ಒಂದು ಬಾರದಿದ್ದರೆ, ಅದೆಲ್ಲವೂ ಅಜ್ಞಾನದಲ್ಲಿ ಕೂಡುವುದಲ್ಲದೆ, ಜ್ಞಾನದಲ್ಲಿ ಬಾರದು. ವಿದ್ಯೆ ಎಂದರೆ ಬ್ರಹ್ಮವಿದ್ಯೆ, ಬ್ರಹ್ಮಜ್ಞಾನ ಸಾಧಕರಾಗಬೇಕು. ವಿದ್ಯೆಯಿಂದ ತಾನಾರೆಂಬ ಅರಿವು ವೃದ್ಧಿಯಾಗಬೇಕು, ಬುದ್ಧಿ ವಿಕಸಿತವಾಗಬೇಕು, ಬುದ್ಧಿ ಕುಂಠಿತವಾಗಬಾರದು, ವಿದ್ಯಾಸಾಧಕರಾವದರಲ್ಲಿ ದೇಹೋಹಂ ಭಾವ ಬುದ್ಧಿ ನಷ್ಟವಾಗಿ ದಾಸೋಹಂ ಬುದ್ಧಿವೃದ್ಧಿಯಾದರೆ ಅದು ವಿದ್ಯೆ ಬಂದ ಸೂಚಕ, ಅದು ಹೋಗಿ ಅಹಂ ಮಮವು ಬೆಳೆದರೆ ಬುದ್ಧಿಹೀನವಾದಂತೆ, ಇದರಿಂದ ಹೃದಯ ಮರವುಳ್ಳದ್ದಾಗಿ ರಾಗ, ದ್ವೇಷ, ಲಾಭ, ಹಾನಿ, ಮಾನ, ಅಪಮಾನಗಳ, ಚಿಂತೆಯಿಂದುಕ್ತವಾಗಿ ಅಶಾಂತಿಯ ನಿವಾಸವಾಗುವುದು. ಇದು ಕಾರಣ ಬುದ್ಧಿಯು ವಿದ್ಯಾಸಾಧಕರಾಗಿಯೂ ದುರ್ಬುದ್ಧಿಯಾಗಿ ಕೆಟ್ಟಿತ್ತು. ವಿದ್ಯಾಸಾಧಕರಿಗೆ ನಿರಹಂಭಾವ, ಸಕಲದಲ್ಲಿ ಪೂಜ್ಯ ಬುದ್ಧಿ, ಗುರು ಹಿರಿಯರಲ್ಲಿ ಸೇವಾ ವೃತ್ತಿ, ಶ್ರದ್ಧೆ ಸಮಾಧಾನ ಆತ್ಮ ವಿಚಾರ ನಿಸ್ಪೃಹತೆ, ಸಕಲರನ್ನು ಸಮಾನ ದೃಷ್ಟಿಯಿಂದ ಕಾಣುವುದು. ಇವು ಮುಖ್ಯವಾದವು. ಈ ಪೂಜ್ಯಭಾವ ಇಲ್ಲದಿದ್ದರೆ ವಿದ್ಯಾಸಾಧಕ ಹೋಗಿ ಅವಿದ್ಯಾಸಾಧಕನಾಗುವನು. ಅಹಂಕಾರಿಗಳು ವಿದ್ಯಾಸಾಧಕರಾಗಲು ಅನರ್ಹರು ಏಕೆಂದರೆ ಬುದ್ಧಿಯು ಸುಬುದ್ಧಿಯಾಗುವುದು. ಮನ ಸುಮನವಾಗಲಿಲ್ಲ, ಸಮ್ಯಕದರ್ಶಿಯಾಗಲಿಲ್ಲವೆಂದಲ್ಲಿ ವಿದ್ಯಾಸಾಧಕರೆಲ್ಲ ಬುದ್ಧಿಹೀನರಾದರು ಎಂದು ಹೇಳಿಹರು.

ಪವನ ಸಾಧಕರೆಲ್ಲ ಹದ್ದು ಕಾಗೆಗಳಾದರು : ಪವನದ ಸಾಧಕರೆಂದರೆ ಪ್ರಾಣದ ಸಾಧಕರು, ಪ್ರಾಣಾಯಾಮ ಮಾಡುವ ಸಾಧಕರು, ಇವರು ಪೂರಕ ರೇಚಕ ಕುಂಭಕ ಸಾಧನೆಯ ಮೂಲಕ ಪಕ್ಷಿಗಳಂತೆ ಮೇಲೆಯೆ ವೃತ್ತಿಯು ಹಾರಾಡುತ್ತಿರುತ್ತದೆ ಮತ್ತು ಕೆಳಗೆಯೂ ಇಳಿಯುತ್ತದೆ. ಹಾಗೆ ಪೂರಕ ಮಾಡಿ ಮೇಲೆ ಹೋಗುತ್ತದೆ. ಕುಂಭಕ ಮಾಡಿ ಅಲ್ಲಿಯೆ ಸುಳಿದಾಡುತ್ತಿರುತ್ತದೆ. ಪ್ರಾಣಾಯಾಮದ ಸಾಧಕರು, ರೇಚಕ ಪೂರಕ ಕುಂಭಕ ಮಾಡಿ ಕೊನೆಗೆ ಕೇವಲ ಕುಂಭಕ ಅಭ್ಯಾಸ ಬಲಿಸಿ, ಬ್ರಹ್ಮರಂಧ್ರದಲ್ಲಾಗಲಿ, ಶಿಖಾಚಕ್ರದಲ್ಲಾಗಲಿ, ತಮಗೆ ಬೇಕಾದ ಸ್ಥಾನದಲ್ಲಿ ಆ ಪ್ರಾಣವಾಯುವನ್ನಿರಿಸಿ ಹದ್ದು ಹೇಗೆ ಬಹು ವರ್ಷ ಬಾಳುತ್ತದೆಯೊ ಹಾಗೆ ಇವರು ಕೂಡಾ ಸಹಸ್ರಾರು ವರ್ಷ ಇರುವ ವಾಸನೆ ಅತಿಯಾಗಿ ಶರೀರದ ತ್ಯಾಗದ ನಂತರ ಮುಂದೆ ಜನ್ಮವೆತ್ತಿ ಅವರು ಹದ್ದು ಕಾಗೆಗಳಾದರು.

ಜಲ ಸಾಧಕರೆಲ್ಲ ಕಪ್ಪೆ ಮೀನಗಳಾದರು : ಇವರು ಜಲ ಸಾಧಕರು, ನೀರು ಕುಡಿದು ನೀರಿನ ಮೇಲೆ ತಮ್ಮ ಪ್ರಾಣ ಉಳಿಸಿಕೊಂಡವರು. ಜಲವೆಂದರೆ ಬಹು ಇಷ್ಟ. ಜಲಸಾಧಕರಾಗಲು ಒಪ್ಪಿ, ಅನ್ನ ಸ್ವಲ್ಪ ತೆಗೆದುಕೊಂಡು ಅಧಿಕ ನೀರಿನ ಮೇಲೆ ಇರುವುದು. ಬರುಬರುತ್ತ ಅನ್ನ, ಹಾಲು ಸ್ವಲ್ಪ ತೆಗೆದುಕೊಳ್ಳುವುದು ಬಿಟ್ಟು ಜಲವೆ ಅವರ ಊಟವಾಗಿ, ಜಲದಿಂದ ತೃಪ್ತಿಯಾಗುವಷ್ಟು ಜಠರಾಗ್ನಿಗೆ ಸಾಧನವಾಗಿ, ಅದರಲ್ಲಿಯೆ ತನ್ನ ಹಸಿವು ತೃಷೆ ಇವೆರಡನ್ನು ಇಂಗಿಸಿಕೊಳ್ಳಹತ್ತಿದರು. ಇತ್ತ ಕೆಲಬರು ಜಲದ ಮೇಲೆ ಸಂಚಾರ ಮಾಡುವ ಅಭ್ಯಾಸ ಮಾಡಿದರು. ಇಂಥ ಕಠೋರ ಸಾಧನ ಮಾಡಿದರೂ ಪುನರ್ಜನ್ಮಕ್ಕೆ ಕಾರಣರಾದರಲ್ಲದೆ ಮುಕ್ತಾತ್ಮರಾಗಲಿಲ್ಲ, ಲೋಕದ ನಚ್ಚು ಮಚ್ಚು ಹೆಚ್ಚಾದಂತೆ ಜನ ಸಾಧನೆ ವಾಸನೆಯಾಗಿ ಅಲ್ಲಿಯೆ ಮರಣವಾದರೆ ಜಲದ ವಾಸನೆಯಿಂದ ಕಪ್ಪೆ ಮೀನುಗಳಾಗುವರು ಎಂದು ಹೇಳಿಹರು.

ಅನ್ನ ಸಾಧಕರೆಲ್ಲ ಭೂತ ಪ್ರಾಣಿಗಳಾದರು : ಜಗವೆಲ್ಲ ವಿಚಾರ ಮಾಡಲು ಅನ್ನ

ಸಾಧಕರೆ ಇರುವರು, ಅನ್ನದ ಸಂಗ್ರಹದ ಸಾಧಕರೆ ಬಹು ಸಂಖ್ಯೆಯಲ್ಲಿ ಇಹರು. ಇವರದು ದೇವನಲ್ಲಿ ಪ್ರಾರ್ಥನೆ, ಅನ್ನಂದೇಹಿ, ಧಾನ್ಯಂದೇಹಿ, ನಂತರ ಸತಿಂದೇಹಿ, ಸುತಂ ದೇಹಿ ಎಂದು ದೇವರಲ್ಲಿ ಬೇಡುವ ಭಿಕ್ಷುಕರ ಪಾತ್ರವೆ ಹೆಚ್ಚು ಇದೆ. ಮನೆಯಲ್ಲಿ ಆವಾವುದಕ್ಕೂ ಕೊರತೆ ಇಲ್ಲದಷ್ಟು ಸಂಗ್ರಹವಿದ್ದರೂ ಅಧಿಕಾಧಿಕ ಸಂಗ್ರಹ ಬುದ್ಧಿ ದೂರಾಗಲೊಲ್ಲದು. ಇವರು ಅನ್ನದ ಭಕ್ತರು, ಅನ್ನಕ್ಕಾಗಿಯೆ ಹುಟ್ಟಿ ಬೆಳೆದು ಕೊನೆಗೆ ವಯೋವೃದ್ಧರಾಗಿ ಅನ್ನವೆಂದು ಸತ್ತರು. ಇವರಿಗೆ ಜಠರಾಗ್ನಿ ತೃಪ್ತಿಪಡಿಸುವುದೆ ಹೆಚ್ಚಿನದಾಗಿದೆ. ಅದುವೆ ಘನಕಾರ್ಯವಾಗಿದೆ. ಅದಕ್ಕಾಗಿ ಇವರು ಅನ್ನಸಾಧಕರು, ಪ್ರಾಣಿಗಳು, ಪಕ್ಷಿಗಳು, ತಮ್ಮ ಹಸಿವು ಕಳೆದುಕೊಳ್ಳಲು ಹೇಗೆ ಅಲೆದಾಡುವವೊ ಹಾಗೆ ಈ ಎರಡು ಕಾಲಿನ ಪ್ರಾಣಿಗಳು ಅನ್ನ ಅನ್ನ ಎಂದು ಅನ್ನ ಸಂಗ್ರಹಕ್ಕಾಗಿ ಭೂತಪ್ರಾಣಿಗಳಾಗಿಹರು ಎಂದು ಖಂಡಿಸಿಹನು. ಮಾನವನಾದ ಮೇಲೆ ಜ್ಞಾನ ಸಾಧಕನಾಗುವುದು ಇದನ್ನು ಬಿಟ್ಟು ಉಳಿದ ಯಾವ ಸಾಧನೆ ಮಾಡಿದರೂ ಅವನತಿ ಬಿಟ್ಟದ್ದಲ್ಲ.

ಬಸವಣ್ಣ ಸದ್ಗುರು ಸಾಧಕನಾಗಿ ಸ್ವಯಂಲಿಂಗವಾದ ಕಾಣ ಗುಹೇಶ್ವರಾ: ಬಸವಣ್ಣನವರ ಸಾಧನೆ ಅದಾರಿಗೆ ? ಕೋಟಿ ಸಂಖ್ಯೆಗಳಲ್ಲಿ ಒಬ್ಬರಿಗೆ ಬಸವರಸರ ಸಾಧನ ಒಪ್ಪುವುದು. ಸದ್ಗುರು ಸಾಧಕನಾಗಿ ಸ್ವಯಂಲಿಂಗವಾದ ಸಾಧಕ. ಅಸಾಮಾನ್ಯ ಸಾಧಕ, ಅಸಾಧ್ಯವ ಸಾಧಿಸಿದ ಸಾಧಕ, ಬಸವಣ್ಣ ಸದ್ಗುರು ಕೃಪೆಯಿಂದ ಅನುಪಮಲಿಂಗವರಿತು, ಅನುಪಮನೆನ್ನಲು ಬಾರದೆ ಘನಕ್ಕೆ ಘನವಾಗಿಹ ಸ್ವಮಹಿಮ, ಸದ್ಗುರುವನ್ನು ಲಿಂಗ ಮಾಡಲಿಲ್ಲ, ಲಿಂಗ ಮಾಡುವ ಘನವಂತನೆಂದರೆ ಸದ್ಗುರು, ಲಿಂಗ ಹೆತ್ತರಿವು, ಸದ್ಗುರು ಸ್ವಯಂಜ್ಯೋತಿ ಸ್ವಯಂ ಅರಿವು, ಬಸವರಸರು, ಅಖಂಡ ಲಿಂಗವರಿತು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನದಾಗಿ ಸ್ವಯಂಜ್ಯೋತಿ ಲಿಂಗ, ಸ್ವಯಂ ಅರಿವು ತಾನಾದುದರಿಂದ ಬಸವಣ್ಣ ಸದ್ಗುರು ಸಾಧಕನಾಗಿ ಸ್ವಯಂ ಲಿಂಗವಾದ ಕಾಣಾ ಗುಹೇಶ್ವರ ಎಂದು ಹೇಳಿಹರು.

**107**

**ಮಿಂದು ದೇವರ ಪೂಜಿಸಿಹೆವೆಂಬ ಸಂದೇಹಿ**
**ಮಾನವಾ ನೀ ಕೇಳು ; ಮೀಯದೆ ಮೀನು,**
**ಮೀಯದೆ ಮಸೂಳಿ, ತಾಮಿಂದು ತನ್ನ ಮನ**
**ಮೀಯದನ್ನಕ್ಕರ ಈ ಬೆಡಗಿನ ಮಾತು ಮೆಚ್ಚುವನೆ**
**ನಮ್ಮ ಗುಹೇಶ್ವರ ಲಿಂಗವು.**

**ತಾತ್ಪರ್ಯ** : ಮಿಂದು ದೇವರ ಪೂಜಿಸಿಹೆನೆಂಬ ಸಂದೇಹಿ ಮಾನವಾ ನೀ ಕೇಳು, ಮೀಯದೆ ಮೀನು ? ಮೀಯದೆ ಮಸೂಳೆ : ಪ್ರಭು ವೀರಶೈವರಿಗಷ್ಟೆ ಬೋಧಿಸಿಹನು ಇನ್ನುಳಿದ ಸಮಾಜಕ್ಕೆ ಬೋಧಿಸಿರುವದಿಲ್ಲವೆನ್ನುವ ಹಾಗಿಲ್ಲ, ಈ ಸಕಲ ಸಮಾಜದ ಗುರು, ವಿಶ್ವಗುರು, ನಿಸ್ಸೀಮವಂತ ಸೀಮಿತ ಭಾವ ಕಳೆಯಲು ಬಂದ ನಿರ್ಭಾವಿ, ಈತನ ಕಂಡವರೆಲ್ಲ ಸಮ್ಯಕ ದರ್ಶಿಗಳು. ಸಂಕುಚಿತರನ್ನು ವ್ಯಾಪಕಮತಿಯರನ್ನಾಗಿ ಮಾಡಿದ ಸುಜ್ಞಾನಿ.

ಮಿಂದು ದೇವರು ಪೂಜಿಸಿಹೆನೆಂಬ ಸಂದೇಹಿ ಮಾನವಾ ನೀ ಕೇಳು ಎಂದು ಪ್ರಶ್ನಿಸಿದನು. ಓ ಮಾನವಾ ಮಿಂದು ದೇವರ ಪೂಜಿಸಿದೆನೆನ್ನುವ ನೀನು ಆರಾಗಿ ಮಿಂದಿ, ಆರಾಗಿ ಸ್ನಾನ ಮಾಡಿದುದು, ಇದರ ವಿಚಾರ ಮಾಡಿರುವಿಯಾ ? ದೇವರನ್ನು ಪೂಜಿಸಿಹೆನೆನ್ನುವಿ ದೇವರನ್ನು ಆರಾಗಿ ಕಂಡು ಪೂಜಿಸಿದೆ. ದೇವರು ಆರು ಎಂಬುದು ನಿನಗೆ ವಿದಿತವಿದೆಯಾ ? ನೀನಾರು ಎಂಬುದಾದರೂ ನಿನಗೆ ಗೊತ್ತಿದೆಯಾ ? ಗುರುತಿರದೆ ಪೂಜಿಸಿಹೆನೆನ್ನುವಿ, ನೀನು ಪೂಜಿಸಿಹೆನೆಂಬುದು ನಿನ್ನ ಹೃದಯಕ್ಕೆ ಸಮ್ಮತವಾಗಿದೆಯಾ? ಸಂತೋಷವಾಗಿದೆಯಾ? ಇದು ಶಾಶ್ವತವೇ? ನಿನ್ನ ಸಂದೇಹ ನಿನ್ನ ಮುಖವ ತೋರಿಸುವುದು ನಿನ್ನ ಹೃದಯಕ್ಕೆ ಒಪ್ಪಿಗೆ ಇಲ್ಲದುದು, ನಿನ್ನ ಮನವು ಹೀಗೇಕೆ ? ಇಷ್ಟೊಂದು ಸಂದೇಹಿಯಾದುದು.

ಭವವಿರಹಿತಂಗೆ ಭಕ್ತಿ ಮಾಡುವವರು ನೀವು ಕೇಳಿರಣ್ಣಾ, ಭವಬಾಧೆಯೊಳಗೆ ನೀವಿರ್ದು ಅಭವನ ಭಕ್ತಿ ಮಾಡುವ ಪರಿ ಇನ್ನೆಂತೊ ? ತಾನಭವನಲ್ಲದೆ ಸಹಜ ಭಕ್ತಿಯ ಮಾಡಬಾರದು. ದೇವನು ಆರೆಂಬುದು ಗೊತ್ತೆ ? ದೇವನು ಅಜಾತನು ಸಚ್ಚಿದಾನಂದ ಘನ ನಿರವಯ ನಿರುಪಮ ಘನ ಅವನಿಗೆ ನೀವು ಭಕ್ತಿಯ ಮಾಡುವ ಪರಿ ಎಂತು ? ನೀವು ದೇಹ ಭಾವದೊಳಗಿರ್ದು ನಿರ್ದೇಹಿಯ ಪೂಜೆ ಮಾಡುವುದು ಆಶ್ಚರ್ಯ, ಅಕಲ್ಪಿತನ ಕಲ್ಪಿತರಾಗಿ ಹೇಗೆ ಮಾಡುವುದು, ಅಮರನ ಪೂಜೆ, ಹುಟ್ಟು ಸಾವುಳ್ಳವರು ಹೇಗೆ ಮಾಡುವುದು ? ಅಮರನ ಪೂಜೆ ಅಮರರಾಗಿ ಮಾಡುವುದು ದೇವನ ಪೂಜೆ ದೇವನಾಗಿ ಮಾಡುವುದು, ಚೈತನ್ಯನ ಪೂಜೆ ಚೈತನ್ಯನಾಗಿ ಮಾಡುವುದು.

ಬಾಹ್ಯಸ್ನಾನ ಮಾಡಿ ದೇವನ ಪೂಜಿಸಿಹೆನೆಂದರೆ ಈ ಸ್ನಾನ ಸಕಲ ಪಕ್ಷಿಗಳು, ಜಲಚರ ಪ್ರಾಣಿಗಳಂತು ಮಾನವನಕ್ಕಿಂತ ಮುಂದೆ ಹೋಗಿವೆ. ಇವನ ಸ್ನಾನ ಕೃತಕ ಸ್ನಾನ ತಂದು ಹಾಕಿದ ನೀರಿನಿಂದ ಸ್ನಾನ ಮಾಡುವುದು. ಅವು ಸದಾ ನೀರೊಳಗೆ ಇರುತ್ತವೆ.

ಮೀನುಗಳು ಸದಾ ನೀರೊಳಗೆ ಅವೆ. ಮಸೂಳೆ ಸಹ ನೀರೊಳಗೆ ಇರುವಲ್ಲಿ ಅವುಗಳ ಸಹಜ ಸ್ನಾನ, ನಿರಂತರ ನಡದದೆ, ದೇವನನ್ನು ಅವು ಪೂಜಿಸಿರುವವೆ ? ದೇವನ ಪೂಜೆ ದೇವನಾಗಿ ಮಾಡುವುದು ಎಂದು ಮೊದಲೆ ಹೇಳಿದೆ. ತಾ ಮಿಂದು ತನ್ನ ಮನ ಮೀಯದನ್ನಕ್ಕರ ಈ ಬೆಡಗಿನ ಮಾತು ಮೆಚ್ಚುವನೆ ಗುಹೇಶ್ವರ ಲಿಂಗವು.

ತಾನು ಸ್ನಾನ ಮಾಡುವುದು ತನ್ನ ಮನ ಸ್ನಾನ ಮಾಡುವುದು ಅಂದರೆ ಗುಹೇಶ್ವರ ಲಿಂಗದ ಒಪ್ಪಿಗೆ ಸಮ್ಮತ, ಈ ಚತುರತನದ ಮಾತಿಗೆ ಗುಹೇಶ್ವರನು ಒಪ್ಪನು. ತಾನಾರೆಂದು ತನ್ನ ಅರುವಿನ ಸ್ನಾನ ಮಾಡುವುದು ಜ್ಞಾನೋದಕದಿಂದ ಶುದ್ಧಗೊಳಿಸುವುದು. ತಾನು ಶುದ್ಧಾತಿಶುದ್ಧನು. ನಿಷ್ಕಳಂಕನು, ನಿರವಯನು, ನಿರಾಲಂಬನೆಂಬುದು ತನ್ನಿಂದ ತನಗೆ ವಿದಿತವಾದಡೆ ಜ್ಞಾನೋದಕದಿಂದ ತನ್ನ ಸ್ನಾನವಾದಂತೆ, ಇದನ್ನು ಬಿಟ್ಟು ತನ್ನ ಮನದ ಸ್ನಾನ ಮಾಡುವುದು ಎಂದು ಬಹಿರ್‌ಪಡಿಸುವುದು ಬೆಡಗಿನ ಮಾತು, ಚತುರತನ ಮಾತು, ಇದು ಮಾತಿನ ಸ್ನಾನವಾಯಿತಲ್ಲದೆ, ನಿಜಾನುಭವದ ಸ್ನಾನವಾಗಲಿಲ್ಲ, ಈ ಸ್ನಾನ ನೀರಿಲ್ಲದ ಸ್ನಾನ, ಇದಕ್ಕೆ ಉದಯಾಸ್ತದ ನಿರ್ಣಯವೆಲ್ಲಿ ? ನಿಯಮವೆಲ್ಲಿ ? ಇಲ್ಲಿ ಬಾಹ್ಯ ಆಚಾರಂಗಳೆಲ್ಲ ಅನಾಚಾರವಾದ ನಿಲವು, ಸೀಮೆ ನಿಸ್ಸೀಮೆಯಾದ ನಿಲವು, ಇದು ಸಕಲ ಸಮಾಜದವರಿಗೂ ಆವಾವ ಪ್ರತಿಬಂಧಕವಿಲ್ಲದೆ ಸಹಜವಾಗುವ ಸ್ನಾನ.

ಬಹು ಜನರು ಗಂಗಾಸ್ನಾನ ಮಾಡುವುದುಂಟು, ಜ್ಞಾನಗಂಗೆಯಲ್ಲಿ ಸ್ನಾನ ಮಾಡಿದವರು ವಿರಳ. ಈ ಜ್ಞಾನ ಗಂಗೆಯಲ್ಲಿ ಮಾಡಹೋದವರೆಲ್ಲ ಜ್ಞಾನಸ್ವರೂಪರೆ ಜ್ಞಾನಾನಂದಮಯರು. ಇದು ಸಕಲ ತೀರ್ಥಗಳ ಸ್ನಾನಕ್ಕಿಂತ ಮಿಗೆ ಮಿಗೆಯಾಗಿಹ ಜ್ಞಾನತೀರ್ಥ. ತಾಮಿಂದು ತನ್ನ ಮನ ಮೀಯುವುದು, ತಾನು ಸ್ನಾನ ಮಾಡಬೇಕಾದರೆ ತಾನಾರೆಂದು ಅರಿಯಹೋಗುವುಡೆ ತಾನು ಅರುವೆಂದು ಮೊದಲು ಬುದ್ಧಿಯಲ್ಲಿ ಕರಿಗೊಳ್ಳಬೇಕು. ಕರಿಗೊಂಡನಂತರ ಅರುವ ಅರಿಯ ಹೋಗಿ ತನ್ನ ತಾ ಯತಾರ್ಥವರಿತುದೆ ತಾ ಮಿಂದು ಎಂಬುದು ಸಿದ್ಧವು. ತಾನು ಏನೊಂದಾಗದ ಘನನಾದುದೆ ತಾಮಿಂದುದು ಎಂದು ತಿಳಿಯುವುದು. ತಾನು ನುಡಿಗೆಡೆಗೊಡದ ಘನನಾದುದು, ತನ್ನಿಂದ ತನಗೆ ತಿಳಿದುದು ತಾ ಮಿಂದ ಸಂಕೇತ. ತನ್ನ ಮನ ಮೀಯದನ್ನಕ್ಕರ ತನ್ನ ಮನದ ಸ್ನಾನವೆಂದರೆ ಮನದ ಕಲ್ಮಷ ಕಳೆಯುವುದು. ಮನದ ಕಲ್ಮಷವೆಂದರೆ ಸಂಕಲ್ಪವಿಕಲ್ಪಕ್ಕೊಳಪಟ್ಟುದು, ಇದು ನಷ್ಟವಾದುದೆ ಮನ ಮೀಯುವ ಸಂಕೇತ.

ಆವಲ್ಲಿ ನೆನಹು ನೆಲೆಗೊಂಡಿದೆ ನಿರ್ಣಯ ಸದೃಢವಾಗಿದೆ ಮರವು ಇದೆ ಅರುವು ಇದೆ ಚಿಂತೆಯು ಇದೆ, ಕ್ಷಣಕಾಲದ ನಿಶ್ಚಿಂತತೆಯು ಇದೆ. ಇವುಗಳ ಮುಕ್ತಾಯವಾದುದೆ ಮನಮೀಯುವ ಸಂಕೇತ. ಇದು ಮುಕ್ತಾಯವಾಗಬೇಕಾದಲ್ಲಿ ಮನದ ಮನವನರಿಯ ಹೋಗಬೇಕು. ಒಂದು ಕಲ್ಪಿತ ಮನ, ಒಂದು ಅಕಲ್ಪಿತ ಕಲ್ಪಿತ ಮನದ ಮುಕ್ತಾಯವಾಗಬೇಕಾದರೆ ಅಕಲ್ಪಿತ ಘನವನರಿಯ ಹೋಗುವುಡೆ ಇದು ಸಹಜ ನಷ್ಟವಾಗುವುದು. ಕಲ್ಪಿತ ಮನವು, ಅಕಲ್ಪಿತ ದರ್ಶನದಿಂದ ಇಲ್ಲವಾಗುವುದು. ಎಲ್ಲಿಯವರೆಗೆ ಅಭವನ ದರ್ಶನವಾಗುವುದಿಲ್ಲ, ಅಲ್ಲಿಯವರೆಗೆ ಸಂಕಲ್ಪ, ವಿಕಲ್ಪ ರೂಪ ಕಲ್ಪಿತ ಮನವಿದ್ದುದು ಎಂದು ತಿಳಿಯುವುದು.

ಇದಕ್ಕೆ ಯತಾರ್ಥ ಜ್ಞಾನವೆ ಔಷಧ. ಅರಿದರಿದು ನೋಡುವ ವಿಚಾರ ಅವಶ್ಯಕವು. ಎಲೆ ಮನವೆ ? ನಿನ್ನ ಕಲ್ಪಿತವೆಂಬುದು ಮುನ್ನ ಮುನ್ನ ಇದ್ದುದೊ ? ಅಥವಾ ಹಿಂದಿನಿಂದ ಆದುದೊ ? ಎಂದು ಅರಿದರಿದು ನೋಡುವುದು. ತಾನು ಅರುವಿಂಗರುವು, ಸ್ವಯಂಜ್ಯೋತಿ ಲಿಂಗ, ವರ್ಣಾತೀತ ಮುನ್ನ ಮುನ್ನವೆ ಇದ್ದಂತಿದ್ದ ಘನವಿರುವಲ್ಲಿ ನನ್ನಲ್ಲಿ ಕಲ್ಪಿತಕ್ಕೆ ಇಂಬಾದರೂ ಇದೆಯಾ ಎಂದು ತನ್ನಿಂದ ತನಗೆ ವಿದಿತವಾದಾಗ ಆಗ ಪೂರ್ವ ಮನ ಸಂಕಲ್ಪ, ವಿಕಲ್ಪರೂಪಿ ಮನ ಸಹಜ ನಷ್ಟವಾಗುವುದು. ಆಗ ಮನ ನಿಷ್ಕಳಂಕವು ಶುದ್ಧಾತಿಶುದ್ಧವು. ಇದು ಮನದ ಸ್ನಾನ, ಆಗ ತಾನೆಂಬುದು ಪರತತ್ವ, ಮನವು ಲಿಂಗವೆಂಬುದು ತನ್ನಿಂದ ತನಗೆ ವಿದಿತವಾದುದು, ಇದು ನಿಜವಾದ ಸ್ನಾನ. ಈ ಜ್ಞಾನಗಂಗೆಯಲ್ಲಿ ಸ್ನಾನ ಮಾಡಿದವರಿಗೆ ಪುನಃ ಸ್ನಾನದ ಹಂಬಲ ಉಳಿಯದು. ಇಂಥಹ ಸ್ನಾನ ಜೀವನಿಗೆ ಒಮ್ಮೆಯಾದರೆ ಸಾಕು, ತಾನಾರೆಂಬ ತನ್ನಿರುವಿನ ಅರುವುಳ್ಳ ಜ್ಞಾನಗಂಗೆಯಲ್ಲಿ ಸ್ನಾನವಾಗುವುದು, ಈ ಸ್ನಾನದ ಹಿರಿಮೆಯೆಂದರೆ ಒಮ್ಮೆ ಸ್ನಾನವಾದರೆ ಸಾಕು, ಪುನಃ ಮಲಿನವಾಗದು. ತಾನು ಚಿದಂಗನು, ಚಿನ್ಮಯನು ಚಿತ್‌ಸ್ವರೂಪನಾಗಿಹ ತನ್ನಿರುವು ತನಗೆ ಪ್ರಜ್ವಲಿಸುವಲ್ಲಿ ಅಲ್ಲಿ ಬೆಡಗಿನ ಮಾತಿಲ್ಲ, ಗುಹೇಶ್ವರನ ಮೆಚ್ಚುಗೆಯ ಮಾತು ಇಲ್ಲಿ ತನ್ನಿಂದ ತನ್ನನ್ನು ಯತಾರ್ಥ ತಿಳಿವುದೆ ಸ್ನಾನವಾಗಿದೆ. ಮಾತಿನ ಮಲ್ಲರದು ಅಲ್ಲ, ಮಹಾಂತನೆಂಬುವನದು ಅಲ್ಲ, ಅರುವ ಅರಿಯಹೋಗಿ ಅದುವೆ ಆದವರ ನಿಲವು ಇದಕ್ಕೆ

ಗುಹೇಶ್ವರನ ಮೆಚ್ಚುಗೆ ಎಂದು ಹೇಳಿಹರು.

**108**

**ತನ್ನನರಿಯೆನೆಂಬುದು ಅಜ್ಞಾನ ನೋಡಾ,**
**ಅರಿಯದ ಅಜ್ಞಾನವ ನತಿಗಳೆದು ಜ್ಞಾನವ ಕಾಣೆನೆಂಬುದು**
**ವಿಪರೀತ ಭಾವ ನೋಡಾ, ಎಲ್ಲವು ತೋರುವ**
**ಘನವನೆಲ್ಲಿಯು ಕಾಣಬಾರದು, ಕಾಣಬಾರದ ನಿಜವ ತೋರಬಾರದು,**
**ತೋರಬಾರದ ಮಹವ ತಿಳಿಯಬಹುದೆ ?**
**ಗುಹೇಶ್ವರ ಲಿಂಗದಲ್ಲಿ ಬಯಕೆ ಉಳ್ಳನ್ನಕ್ಕರ ತವಕವೆಡೆಗೊಂಡಪ್ಪ**
**ಕಾರಣ ತಿಳುಹಲಿಲ್ಲವೆಂಬುವ ನಿನ್ನ ನೀ ತಿಳಿದು ನೋಡಾ ಸಿದ್ಧರಾಮಯ್ಯ.**

**ತಾತ್ಪರ್ಯ** : *ತನ್ನನರಿಯೆನೆಂಬುದು ಅಜ್ಞಾನ ನೋಡಾ ಅರಿಯದ ಜ್ಞಾನವ ನತಿಗಳೆದು ಜ್ಞಾನವ ಕಾಣೆನೆಂಬುದು ವಿಪರೀತ ಭಾವ ನೋಡಾ :* ತನ್ನನರಿಯೆನೆಂಬುದು ಬಹು ಸಾಧಕರಿಗೆ ಒಪ್ಪಿಗೆಯಾದುದು, ತಾನಿದ್ದು ತನ್ನನರಿಯೆನೆಂಬುದು ಈ ಅಜ್ಞಾನ ಎಷ್ಟು ವಿಚಿತ್ರವಾಗಿದೆ. ಇಲ್ಲದ ಅಜ್ಞಾನ ಉಂಟಾಗಿದೆ. ಇದ್ದ ವಸ್ತು ಇಲ್ಲದಂತಾಗಿದೆ. ಇದರ ಪರಿಹಾರ ತನ್ನನ್ನು ತಾನು ನೇರವಾಗಿ ತಿಳಿಯದ ವಿನಃ ಇದು ಹೋಗದು, ಇಲ್ಲದುದು ಇಲ್ಲವಾಗಿ ಇದ್ದವಸ್ತು ತನ್ನಿರುವಾಗಿ ಬೆಳಗುಳ್ಳ ಘನವಾಗಿದ್ದುದು ತನ್ನಿಂದ ತನಗೆ ವಿದಿತವಾಗುವವರೆಗೆ ಜಿಜ್ಞಾಸು ಹೃದಯಕ್ಕೆ ಈ ಮರವು ಅರಿವು ಬಹು ಕಾಡಿಸುತ್ತದೆ. ಇವೆರಡು ಮೀರಿನಿಂತಲ್ಲಿ ಕಂಡನೆಂಬುದು ಹೋಗುತ್ತದೆ, ಕಾಣೆನೆಂಬುದು ಹೋಗುತ್ತದೆ. ತನ್ನ ಅರಿಯೆನೆಂಬುದು ಅಜ್ಞಾನವು ತನ್ನ ಅರಿತೆನೆಂಬುದು ಅಜ್ಞಾನವು ಇವೆರಡಕ್ಕೂ ಮುಖ್ಯತೆ ಕೊಡದೆ ಅರು ಹೃದಯವಾಗಬೇಕು, ತಾನು ನಿರಂತರ ಮಂಗಲಮಯವಾಗಿಹ ಜ್ಯೋತಿ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನನಿರುವಲ್ಲಿ ಅರಿಯೆನೆಂಬುದು ಭ್ರಾಮಕವು ಅರಿತೆನೆನ್ನುವುದು ಭ್ರಾಮಕವು, ಎಲ್ಲಿಯವರೆಗೆ ಸೀಮಿತ ಹೃದಯವು ಆಗಿಹುದು, ಮರವರುವಿಂಗೆ ಒಪ್ಪಿದುದು, ಅದು ಬುದ್ಧಿಗತವಾದ ಜ್ಞಾನ ಇದು ಹೃದಯದ ಹೃದಯವಾಗದು. ಆವಲ್ಲಿ ಅರುಹೃದಯವಾಗಿದೆ, ಅಲ್ಲಿ ಬರುವ ಹೋಗುವ ಜ್ಞಾನವಿಲ್ಲ, ಅಕಲ್ಪಿತವಾಗಿಹ ಮಹದರುವೆ ಪ್ರಜ್ವಲಿಸುವುದು. ಆಗ ತನ್ನ ತಾನರಿಯೆನೆಂಬ ಅಜ್ಞಾನವು ನಷ್ಟವು, ಆ ಅಜ್ಞಾನವ ನತಿಗಳೆದು ಜ್ಞಾನವ ಕಾಣೆನೆಂಬ ವಿಪರೀತ ಭಾವವು ನಷ್ಟವು.

ಅಕಲ್ಪಿತದಿರುವೆ ಪ್ರಜ್ವಲಿಸುವಲ್ಲಿ ಕಲ್ಪಿತಕ್ಕಿಂಬು ಇರದು, ಅರಿಯೆನೆಂಬ ಅಜ್ಞಾನವು ಕಲ್ಪಿತವು, ಆ ಅಜ್ಞಾನವನತಿಗಳೆದು ಜ್ಞಾನವ ಕಾಣೆನೆಂಬುದು ಕಲ್ಪಿತವು, ಅಕಲ್ಪಿತದಿರುವುಳ್ಳ ಘನವೆತ್ತ, ಕಲ್ಪಿತದಿಂದುಕ್ತವಾದ ಅಜ್ಞಾನವೆತ್ತ ? ಅಜ್ಞಾನವ ನತಿಗಳೆದ ಜ್ಞಾನವೆತ್ತ, ಅಲ್ಲಿ ತನ್ನಿರುವು ಕಾಣೆನೆಂಬ ವಿಪರೀತವೆತ್ತ, ನಿಸ್ಸೀಮದಲ್ಲಿ ಸೀಮಿತವಿರಬಹುದೆ ? ಅಖಂಡಿತ ಘನದಲ್ಲಿ ಬಿಡಿ ಬಿಡಿ ಕಲ್ಪಿತ ಭಾವ, ಅಜ್ಞಾನ, ಜ್ಞಾನವಿರಬಹುದೆ ? ಅನುಪಮ ಉಪಮೆಗೊಳಪಡಬಹುದೆ ? ಅರುಹೃದಯದೋಳ್ ಮರವರುವಿಗಿಂಬುಂಟೆ ? ಅರಿಯದರುವು ಅಲ್ಲಿ ದೃಶ್ಯವಾವುದು ? ದೃಕ್ ಯಾವುದು ? ನಿರಾಲಂಬಕ್ಕೆ ಆವುದರ

ಆಲಂಬವು ?

ಎಲ್ಲವನು ತೋರುವ ಘನವನೆಲ್ಲಿಯು ಕಾಣಬಾರದು : ಈ ಘನವು ಮುನ್ನ ಮುನ್ನಲಾದ ಘನ ತನ್ನಿಂದ ತಾನಾದ ಘನ, ಉದಯದ ಉದಯ ಪೂರ್ಣಮದಃ ಪೂರ್ಣ ಮಿದಂ ಎಂದೆನ್ನುವ ಘನ, ಪೂರ್ಣಾತ್ಪೂರ್ಣ ಮುದುಚ್ಯತೆ, ಇಲ್ಲಿ ಸ್ವೀಕರಿಸಬೇಕಾದುದಿಲ್ಲ, ತ್ಯಜಿಸಬೇಕಾದುದಿಲ್ಲ, ನಷ್ಟಮಾಡಬೇಕಾದುದಿಲ್ಲ, ಅನಂತವು ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೆ. ಈ ಅನಂತವು ಸದಾ ಸರ್ವತ್ರ ಪೂರ್ಣವಾಗಿದೆ. ಈ ಜಗವೆಲ್ಲವೂ ತೋರುವ ಘನವು ಪರಬೊಮ್ಮವು ಎಲ್ಲಿಯು ಕಾಣಬಾರದು, ಇದು ಎಲ್ಲವನು ತೋರುವ ಘನವು, ಎಲ್ಲಿಯು ಕಾಣಬಾರದು. ಇದು ಘನವು ಸಕಲವು ಆದಂತಾಗಿ ಭಾಸಿಸುವುದು, ಭಾಸಿಸಿದರೂ ಅದನ್ನು ನಾಮರೂಪವುಳ್ಳದ್ದಾಗಿ ಕಾಣಬಾರದು. ದೃಶ್ಯ, ದೃಕ್ ಎಂಬ ವಿಭಾಗಕ್ಕೊಳಪಡಿಸಿ ಕಾಣಬಾರದು, ದೃಶ್ಯ ಅದೃಶ್ಯವೆಂದು ವಿಭಾಗ ಮಾಡಿ ಕಾಣಬಾರದು ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಖಂಡಾ ಖಂಡವೆಂಬ ಭಾವಕ್ಕೊಳಪಡಿಸಿ ಕಾಣಬಾರದು ಇದ್ದಂತಿದ್ದ ಘನ ಎಲ್ಲವನು ತೋರುವ ಘನವು, ಅದು ಇದ್ದಂತಿದ್ದುದು ಅದು ಕಾಣಿಸಿಕೊಳ್ಳುವದಾಗಿಲ್ಲ, ಅದಕ್ಕಾಗಿ ಕಾಣಬಾರದು.

ಘಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದವೆ ? ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಸಾವಯವ ನಿರವಯಕ್ಕೆ ಭೇದವಿಲ್ಲ, ಅಕ್ಕನ ಮಹದರುವಿಂಗೆ ಘಟ್ಟಿದುಪ್ಪ ತಿಳಿದುಪ್ಪಕ್ಕೆ ಭೇದವೆ ? ಆರ ಅಂಗವ ಶ್ರೀಗುರು ಅಜಾತ ಮಂತ್ರ ಮಾಡಿ ತೋರಿಹನು, ಅವರಿಗೆ ಸಾವಯವ ನಿರವಯ ಭೇದವಿಲ್ಲವಾಗಿದೆ. ಕಬ್ಬಿನ ರಸ, ಸಿಹಿ ಭೇದವೆ ? ವ್ಯಕ್ತ ಅವ್ಯಕ್ತ ಭೇದವೆ ರಸವು ವ್ಯಕ್ತ, ಸಿಹಿ ಅವ್ಯಕ್ತ. ರಸವು ಸಾವಯವ, ಸಿಹಿಯು ನಿರವಯವು ತೋರುವದೆಲ್ಲವು ರಸವು ಕಾಣಬಾರದ ಘನ ಸಿಹಿಯು. ತೋರುವದೆಲ್ಲವು ಅರುಹೃದಯ, ಕಾಣಬಾರದ ಘನ ಅರಿಯಿಲಿಲ್ಲದ ಅರುವು. ಇದನ್ನು ದೃಶ್ಯ, ದೃಕ್ ಎಂಬ ವಿವೇಕದ ಮಾಪಿನಿಂದ ಅಳೆದು ಕಾಣಬಾರದು.

ಕಾಣಬಾರದ ನಿಜವ ತೋರಬಾರದು, ತೋರಬಾರದ ಮಹವ ತಿಳಿಯಬಹುದೆ : ನಿಜವೆಂಬುದು ಕಾಣಬಾರದ ಘನ, ತೋರದಡಗದ ಘನ, ಅದು ತೋರದು, ಅದು ಆವಾವ ನಾಮರೂಪವಾಗಿ ತೋರುವುದಲ್ಲ, ಕಲ್ಪಿತವಾಗಿ ತೋರುವುದಲ್ಲ, ತೋರಬಾರದ ಮಹವ ತಿಳಿಯಬಹುದೆ ?

ಪ್ರಪಂಚ ಸತ್ಯ ಎನ್ನುವವರು ಕೋಟ್ಯಾನುಕೋಟಿ ಪ್ರಪಂಚ ಮಿಥ್ಯೆ ಎನ್ನುವವರು ಕೋಟ್ಯಾನುಕೋಟಿ ಪರಮಾರ್ಥ ಸತ್ಯ ಎನ್ನುವವರೂ ಕೋಟ್ಯಾನುಕೋಟಿ ಪರಮಾರ್ಥಮಿಥ್ಯೆ ಎನ್ನುವವರು ಕೋಟ್ಯಾನುಕೋಟಿ ಸಮದೃಷ್ಟಿಯಲ್ಲಿ ನಿಂತು ತಮ್ಮ ತಾವರಿತವರನೊಬ್ಬರನು ಕಾಣೆ ಕೂಡಲ ಸಂಗಮದೇವಾ.

ತೋರಬಾರದ ಮಹವು, ಪ್ರಪಂಚ ಸತ್ಯ, ಮಿಥ್ಯೆ ಎನ್ನುವವರಿಗೂ ಪರಮಾರ್ಥ ಸತ್ಯ ಮಿಥ್ಯೆ ಎನ್ನುವವರಿಗೂ ತೋರಬಾರದ ಮಹವು, ಸಮದೃಷ್ಟಿಯಲ್ಲಿ ನಿಂದು ತಾನಾರೆಂದರಿತವರ ಮಹವು ಅನುಪಮ ಮಹವು, ಅದನೆಂತು ತಿಳಿಯುವದು. ಅರಿಯದರುವು ಅದನೆಂತು ತಿಳಿವುದು, ಗುಹೇಶ್ವರ ಲಿಂಗದಲ್ಲಿ ಬಯಕೆವುಳ್ಳನ್ನಕ್ಕರ ತವಕ ಎಡೆಗೊಂಡಿಪ್ಪ ಕಾರಣ ತಿಳುಹಲಿಲ್ಲವೆಂಬುದು ನಿನ್ನ ನೀ ತಿಳಿದುನೋಡಾ ಸಿದ್ಧರಾಮಯ್ಯ.

ಗುಹೇಶ್ವರಲಿಂಗವೆಂಬುದು ತಾನೆ ತಾನಿದ್ದು ತನ್ನ ಕಾಣುವ ಬಯಕೆಯೆ ? ಈ ಬಯಕೆ ಅತಿಯಾದುದೆ ತವಕವಾಗಿದೆ. ಈ ತವಕವೆ ತನ್ನ ತಾ ತಿಳಿಯಗೊಡದಂತೆ ಮಾಡಿದೆ. ಪೂರ್ವಾಶ್ರಯ ಹೃದಯ, ಬಹುಭ್ರಮಿತ ಹೃದಯ, ತಪ್ಪು ತಿಳುವಳಿಕೆಯಿಂದುಕ್ತವಾದ ಹೃದಯ, ಈ ಭ್ರಮಾತ್ಮ ಹೃದಯ ನಷ್ಟವಾಗದ ವಿನಃ ತನ್ನನ್ನು ತಾನು ನೇರವಾಗಿ ತಿಳಿಯಲಾರ, ಪ್ರಭು ಅರು ಹೃದಯ ಮಾಡುವ ಜ್ಞಾನದೇವ, ಮಹಾನುಭವಿಗಳೆಲ್ಲರ ಜ್ಞಾನದೇವ, ಈ ಮಹಾಂತನಿಗೆ ಸಿದ್ಧರಾಮ ಶಿವಯೋಗಿಯ ಹೃದಯದೋಷ, ನೇರವಾಗಿ ತನ್ನನ್ನು ತಿಳಿಯದುದು ಕಂಡುಬಂದಿರುವುದರಿಂದ ನಿನ್ನ ನೀ ತಿಳಿಯಲು ಗುಹೇಶ್ವರ ಲಿಂಗದ ಬಯಕೆಯೆ ? ನಿನ್ನ ನಿಜವ ತಿಳಿಯಲು ಪ್ರತಿಬಂಧಕ ಮಾಡಿದೆ, ಈ ಬಯಕೆಯ ತಿರಸ್ಕರಿಸು ಆಗ ನಿನ್ನ ನೀನು ತಿಳಿದು ನೋಡು ಎಂದು ಸಿದ್ಧರಾಮರಿಗೆ ಹೇಳಿದುದು. ನಿನ್ನ ನೀ ತಿಳಿದು ನೋಡುವುದು ವಿಚಾರಕ್ಕೊಳಪಟ್ಟುದಲ್ಲ, ನಾನೀನೆಂಬುದಕ್ಕೂ ಒಳಪಟ್ಟುದಲ್ಲ, ವಾಙ್ಮನೋತೀತ ಘನವು ಗುಹೇಶ್ವರ ಲಿಂಗವು ತಿಳಿದಿಹೆನೆಂಬುವರ ವಿಚಾರ ಬಲೆಯಲ್ಲಿ ಕೆಡಹಿಹುದು.

**109**

**ವಿಚಾರವೆಂಬುದು ಸಂದೇಹಕ್ಕೊಳಗು,**
**ವಿಚಾರಿಸುವನ್ನಕ್ಕರ ನೀ ನಾನೆಂಬುದ ನೆತ್ತ ಬಲ್ಲೆ ಮರುಳೆ ?**
**ವಾಙ್ಮನೋತೀತವಾದ ಘನವು ವಿಚಾರಕ್ಕೆ ನಿಲುಕುವುದೆ ?**
**ಗುಹೇಶ್ವರನೆಂಬ ಲಿಂಗವ ತನ್ನ ತಿಳಿದು**
**ನೋಡಿಹೆನೆಂಬುವರ ವಿಚಾರಬಲೆಯಲ್ಲಿ ಕೆಡಹಿದನು.**

**ತಾತ್ಪರ್ಯ** : ವಿಚಾರವೆಂಬುದು ಸಂದೇಹಕ್ಕೊಳಗು : ಬಹು ಆಧ್ಯಾತ್ಮರುಗಳಿಗೆ ವಿಚಾರವೆ ಶ್ರೇಷ್ಟವಾಗಿದೆ. ವಿಚಾರವೆ ಶ್ರೇಷ್ಟವಾದವರು ನಿತ್ಯಾನಿತ್ಯವೆಂಬ ಪುರುಷಾರ್ಥ ಜ್ಞಾನಿಗಳು, ದೃಶ್ಯ ದೃಕ್ ಎಂಬ ವಿಭಾಗ ದೃಷ್ಟಿಯುಳ್ಳವರು ನಾಶವುಳ್ಳ ಅವಸ್ತುವ ಕಾಣುತ್ತಾರೆ. ಅವಿನಾಶಿ ಎಂಬ ದೃಕ್‌ನ್ನು ಕಾಣುತ್ತಾರೆ.

ಇತ್ತ ತನುತ್ರಯಾದಿಗಳ ಕಾಣುತ್ತಾರೆ. ಇತ್ತ ಸಾಕ್ಷಿಯ ಕಾಣುತ್ತಾರೆ, ಬೆಳಗಿಸಿಕೊಳ್ಳುವುದನ್ನು ಕಾಣುತ್ತಾರೆ, ಬೆಳಗುವುದನ್ನು ಕಾಣುತ್ತಾರೆ, ಇತ್ತ ಕತ್ತಲು ಕಾಣುತ್ತಾರೆ, ಬೆಳಕು ಕಾಣುತ್ತಾರೆ, ಇತ್ತ ನಾಮರೂಪವ ಕಾಣುತ್ತಾರೆ, ಇತ್ತ ಅಸ್ತಿ ಭಾತಿ ಪ್ರಿಯ ಎನ್ನುತ್ತಾರೆ, ಇದು ಕತ್ತಲೆಯಿಂದ ಬೆಳಕಿನತ್ತ ಹೋಗುವ ಹೆದ್ದಾರಿಯಾಗಿದೆ, ರಾಜಮಾರ್ಗವಾಗಿದೆ, ಇದು ರಾಜಮಾರ್ಗವಲ್ಲದೆ ರಾಜನಲ್ಲ,

ಜಿಜ್ಞಾಸುಗಳಿಗೆ ರಾಜಮಾರ್ಗವೆ ರಾಜಸ್ಥಾನ ರಾಜನಾಗಿಹನು, ಬೋಧರೂಪ ಭಾವವೆ ರಾಜನೆಂದು ತಿಳಿದಿಹರು ಅಚಿಂತ್ಯಾತ್ಮನ ತಿಳಿಯಲರಿಯರು. ಪೂರ್ವದಲ್ಲಿ ಜಡಭರಿತ ವಾಮದೇವನೆಂಬ ಈರ್ವರು ಪುರುಷಾರ್ಥ ಜ್ಞಾನಿಗಳಿದ್ದರು. ನಾಮರೂಪ ಪ್ರಪಂಚ ಮಿಥ್ಯೆ ಎಂದು ಆತ್ಮನಾದ ತಾನು ಸತ್ಯವೆಂದು, ಅನಿತ್ಯವಾದ ಪ್ರಪಂಚಕ್ಕೆ ಸತ್ಯವೆಂದು ತಿಳಿದು ಭ್ರಮಿಸುವ ಅಜ್ಞಾನಿಗಳ ಕಂಡ ಇವರು ವಿಷಯ ವ್ಯಾಮೋಹವುಳ್ಳವರು, ತಮ್ಮನ್ನು

ಮರೆತವರು ಎಂದು ಅವರನ್ನು ಸೇರದೆ, ಈರ್ವರು ಅರಣ್ಯದಲ್ಲಿ ಏಕಾಂತವಾಸ ಮಾಡಿಕೊಂಡಿರುತ್ತಿದ್ದರು. ಅವರಿಗೆ ಪುರುಷಾರ್ಥದ ಗರ್ವ ಬೆಳೆದು ಸಂಸಾರಿಗಳು ಭ್ರಮಿತರು, ನಾವು ಬ್ರಹ್ಮಜ್ಞಾನಿಗಳು, ತ್ಯಾಗಿಗಳು. ಹೀಗೆ ಅವರಿಗೆ ಭೇದಜ್ಞಾನವಾಗಿ ಸಕಲರನ್ನು ಕೀಳು ದೃಷ್ಟಿಯಿಂದ ಕಂಡು ತಮನ್ನು ಘನವೆಂದು ತಿಳಿದಿದ್ದರು. ಹೀಗಿರಲಾಗಿ ಅಕ್ಷರೋತ್ತಮ ಜ್ಞಾನಿಯಾಗಿಹ ವೇಶ್ಯಾ ರೂಪದಲ್ಲಿ ಒಬ್ಬ ಸ್ತ್ರೀ ಬಂದಳು. ಅವಳನ್ನು ಜಡಭರಿತ ವಾಮದೇವ: ಅವಳು ವೇಶ್ಯೆ ನಾವು ಬ್ರಹ್ಮಜ್ಞಾನಿಗಳು ಎಂದು ಆಕೆಗೆ ಕೇಳಿ ಬರುವಂತೆ ನುಡಿದರು.

ವೇಶ್ಯಾರೂಪದಲ್ಲಿರುವ ಅನುಪ ಜ್ಞಾನಿಯು : ಅವಳು ಸ್ತ್ರೀ, ವೇಶ್ಯೆ, ನಾವು ಬ್ರಹ್ಮಜ್ಞಾನಿಗಳು ಎಂಬ ಭೇದಜ್ಞಾನ ಯಾರದಾಗಿದೆಯೊ ಅವರು ವೇಶ್ಯೆಯರು ಎಂದು ಉತ್ತರಿಸಿದಳು. ಜಡಭರಿತ, ವಾಮದೇವ ಹಾಂ ಹಾಂ ತಮ್ಮ ಅಹಂಕಾರದಿಂದ ಎಚ್ಚತ್ತವರಾಗಿ ನೀನು ಎಲ್ಲಿಂದ ಬಂದೆ ಎಂದು ಕೇಳಿದರು.

ವೇಶ್ಯೆ : ನೀವು ಎಲ್ಲಿಂದ ಬಂದಿಹಿರಿ ನಾನು ಅಲ್ಲಿಂದ ಬಂದಿರುವೆನು ಎಂದು ಉತ್ತರಿಸಿದಳು.

ಜಡಭರಿತ ವಾಮದೇವ: ಹಾಗಾದರೆ ನಿಮ್ಮ ಗುರುಗಳು ಯಾರು ಎಂದು ಕೇಳಿದರು.

ವೇಶ್ಯೆ: ಎಲ್ಲರ ಗುರು ನಾನೆ ಎಂದು ಉತ್ತರಿಸಿದಳು.

ಜಡಭರಿತ ವಾಮದೇವ : ಈರ್ವರು ತಮ್ಮ ಭೇದಜ್ಞಾನಕ್ಕೆ ಪಶ್ಚಾತ್ತಾಪವಾಗಿ ಶರಣಾಗತರಾಗಿ ನಮಸ್ಕರಿಸಿದರು.

ವೇಶ್ಯೆ: ಓ ಮಹಾತ್ಮರೆ, ನಾನು ನೀವು ಅಖಿಲ ಪ್ರಪಂಚ, ಪರಮಾತ್ಮ ಗುರು ಸ್ವರೂಪ ಸಕಲವು ಸಚ್ಚಿದಾನಂದವೆ, ಸಚ್ಚಿದಾನಂದದ ಹೊರ್ತು ಅನ್ಯವಿಲ್ಲ, ಎಲ್ಲರು ಬಂದದ್ದು ಅಲ್ಲಿಂದ, ಇರುವುದು ಅಲ್ಲಿಯೆ, ಲೀನವಾಗುವುದು ಅಲ್ಲಿಯೆ ಎಂದು ಉತ್ತರಿಸಿದಳು. ಅದಕ್ಕೆ ಒಪ್ಪಿ ಪೂರ್ವಭಾವದವರಾದರು. ವಿಚಾರಿಸುವನ್ನಕ್ಕರ ನೀನಾನೆಂಬುದ ನೆತ್ತ ಬಲ್ಲೆ ಮರುಳೆ ವಾಙ್ಮನೋತೀತವಾದ ಘನ ವಿಚಾರಕ್ಕೆ ನಿಲುಕುವುದೆ ?

ಆಧ್ಯಾತ್ಮರುಗಳಲ್ಲಿ ನಿಸ್ಸೀಮರು ಸಿಕ್ಕುವುದು ವಿರಳ. ವಿಚಾರ ಮಂಥನಕ್ಕೆ ಒಪ್ಪಿದ ಗುರು ಸಾಂಪ್ರದಾಯ ಬಹಳ ಇದೆ. ನಿಶಬ್ದವೇದಿಗಳು ಸಿಕ್ಕುವುದು ವಿರಳ. ಪ್ರಭುದೇವ ಅನುಪಮನಾದುದರಿಂದ ವಿಚಾರಿಸುವನ್ನಕ್ಕರ ನೀನಾನೆಂಬುದು ನೆತ್ತ ಬಲ್ಲೆ ಮರುಳೆ ಎಂದು ವಿಚಾರ ಮಾಡಲು ತಾನು ಆವುದೆ ವೃತ್ತಿ ಇರಲಿ ಅದಕ್ಕೆ ಬೆಳಗುಳ್ಳ ಘನವೆ ತಾನಿರಲು ತನ್ನೊಳ ನಾನು ಬ್ರಹ್ಮನೆಂಬ ವಿಚಾರಕ್ಕೆ ಸಂದುಂಟೆ ? ನೀನು ತತ್‌ಸ್ವರೂಪನೆಂಬ ಬೋಧಕ್ಕಾದರೂ ಸಂದುಂಟೆ ? ಅಖಂಡಿತ ಘನದಲ್ಲಿ ಖಂಡಿತವುಂಟೆ ? ಅದಕ್ಕಾಗಿ ವಾಙ್ಮನೋತೀತವಾದ ಘನವು ವಿಚಾರಕ್ಕೆ ನಿಲುಕುವುದೆ ಎಂದು ಪ್ರಶ್ನಿಸಿಹನು.

ವಾಙ್ಮನೋತೀತವೆಂಬುದು ನಾನೀನೆಂಬುದಕ್ಕೂ ತೆರಹಿಲ್ಲದ ಘನವು, ಅದು ವಿಚಾರಕ್ಕೆ ನಿಲುಕುವದೆಂತು, ಶಬ್ದಮುಗ್ಧ ನಿಲುವು ಕಥನಕ್ಕೆ ಒಳಪಡುವದೆಂತು, ಅಚಿಂತ್ಯವು ಚಿಂತನಕ್ಕೆ ಒಳಪಡುವುದೆ ? ಎಲ್ಲಿ ವಿಚಾರವದೆ ಅಲ್ಲಿ ಚಿಂತನಕ್ಕವಕಾಶವದೆ, ಅದು ಆತ್ಮ ಚಿಂತನವೆ ಇರಲಿ, ಅಚಿಂತ್ಯ ಹೇಗಾಗುವುದು, ನುಡಿಯಿಂದ ಅಚಿಂತ್ಯವೆಂದರೆ ಅದು ಚಿಂತನಕ್ಕೆಡೆಗೊಡದಂತಾಯಿತೆ ? ಹೀಗೆ ತನ್ನೊಳಗೆ ತಾನೆ ವಿಚಾರ ಮಾಡಿದ್ದಾದರೆ, ತಾನು

ವಿಚಾರದಿಂದ ಲಭ್ಯವಾಗುವ ಅರಿವು ತಾನಾಗುವನೆ ? ಆಗಲರಿಯ.

*ಗುಹೇಶ್ವರನೆಂಬ ಲಿಂಗವು ತನ್ನ ತಿಳಿದುನೋಡಿಹೆನೆಂಬುವರ ವಿಚಾರ ಬಲೆಯಲ್ಲಿ ಕೆಡಹಿದನು :* ಗುಹೇಶ್ವರನೆಂಬ ಲಿಂಗವು ತನ್ನ ತಿಳಿದು ನೋಡಿಹೆನೆಂಬುವರು ಇವರಾರು ? ಈ ದೇಹವೆಂಬ ಗುಹೆಯಲ್ಲಿರುವ ಈಶ್ವರನು ಚೈತನ್ಯನು. ಇವನನ್ನು ತಿಳಿಯ ಹೋದವರು ಕಲ್ಪಿತರು, ಜೀವಾತ್ಮರು, ಇವರು ವಿದೇಯ ವಿಶೇಷಣದಿಂದಲು, ನಿಷೇಧ ವಿಶೇಷಣದಿಂದಲೂ ಅರಿಯ ಹೋದರು. ವಿಧೇಯ ವಿಶೇಷಣವೆಂದರೆ ಸ್ವರೂಪ ಲಕ್ಷಣದಿಂದ ಅರಿಯ ಹೋದರು. ಕೆಲಬರು ನಾಮರೂಪ ಕೆಡಿಸಿ ಅಕಲ್ಪಿತ, ಅಸಂಗ, ಅವಿಕಾರಿ, ಅಖಂಡವೆಂದು ನುಡಿನುಡಿದು ಚಿಂತಿಸಿ, ಭಾವಿಸಿ ಗುಹೇಶ್ವರ ಲಿಂಗವಾಗಲು ಹೋದರು.

ಗುಹೇಶ್ವರ ಲಿಂಗವೆಂಬುದು ಅಲಕ್ಷ್ಯ ವಸ್ತು. ಅದಕ್ಕೆ ಲಕ್ಷಣ, ಲಕ್ಷ್ಯವೆನ್ನಲು ಬಾರದೆ ಶಬ್ದಮುಗ್ಧನಾಗಿ ಮುನ್ನ ಮುನ್ನವೆ ಇದ್ದಂತಿದ್ದ ವಸ್ತುವ ಅದಾವ ಭಾಷೆಯಿಂದ ವಿಸ್ತರಿಸುವುದು ? ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಇಲ್ಲದ ಗುರು, ಇಲ್ಲದ ಲಿಂಗ, ಕಲ್ಪಿತಕ್ಕೆ ಅರುವಹುದೆ ? ತನ್ನಿಂದ ಅರಿವುದೆ ಅರಿವು ಗುಹೇಶ್ವರಾ.

ಗುಹೇಶ್ವರ ಲಿಂಗವು ಅದು ಗುರುವಿಡಿದ ಅರುವಿನಿಂದ ಅರಿಯಲು ಅಸಾಧ್ಯವು, ಲಿಂಗ ಲಿಂಗ ಎಂಬ ಅರಿವಿನಿಂದ ಅರಿಯಲು ಅಸಾಧ್ಯವು. ಏಕೆಂದರೆ ಇವು ಕಲ್ಪಿತವು. ಹೆತ್ತರಿವು ತಾನೆ ಸ್ವಯಮೇವ ಅರಿವು ಎಂಬುದು ತನ್ನಿಂದ ತನಗೆ ವಿದಿತವಾದರೆ ಅದು ನಿಜವಾದ ಜ್ಞಾನ, ಸ್ವಯಮೇವ ಅರುವು, ಇದು ಗುಹೇಶ್ವರ ಲಿಂಗವು, ನುಡಿಗೆಡೆಗೊಡದ ಘನದಿರುವ ನುಡಿದು ಹೇಳುವ ಅರುವಿನಿಂದ ಅರಿವುದು ಸಾಧ್ಯವೆ ? ಸಾಧ್ಯವಾಗದು. ಅದಕ್ಕಾಗಿ ಈ ಕಲ್ಪಿತ ಅರಿವಿನಿಂದ ಕಲ್ಪಿತವಲ್ಲದ ಅರಿವು, ಅರಿದಿಹೆನೆಂದಡೆ ಅದು ಅಸಾಧ್ಯವಾಗಿ ವಿಚಾರದ ಅರಿವೆ ಮುಖ್ಯವಾಗುವುದು ಎಂದು ಹೇಳಿದರು. ಪರಮಾರ್ಥದ ವಿಚಾರವಂತರಿಗೆ ನಿಲುಕದ ಶರಣತತ್ವ

**110**

**ಅಯ್ಯ, ಸಾತ್ವಿಕ ನುಡಿಯು ಹುಸಿಯೆ ?**
**ಅದು ದಿಟ, ಅದು ದಿಟ ಒಳಗೆಂಬುದೆ ದೇವಲೋಕ,**
**ಹೊರಗೆಂಬುದೆ ಮರ್ತ್ಯಲೋಕ ಈ ಎರಡು ಲೋಕಕ್ಕೆ**
**ಹೊರಗಾಗಿ ನಾವಿರಲು ಈ ಎರಡು ಲೋಕದೊಳಗೆಯು**
**ತಾವೆ ಇರಲಿ ಗುಹೇಶ್ವರಾ.**

**ತಾತ್ಪರ್ಯ** : ಪ್ರಭುದೇವರು ಶೂನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡಿರಲು ಬಸವರಾಜದೇವರು ಪರಮಾನಂದ ಮುಕ್ತವಾದ ಸದ್ಭಕ್ತಿಯಿಂದ ಪ್ರಭುದೇವರ ಪೂಜಿಸಿ ಆಡಿ, ಹಾಡಿ, ಓಲಾಡುತ್ತಿರಲು ಇತ್ತ ಊಟಕ್ಕೆ ಬಂದು ಕುಳ್ಳಿರ್ದ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮವೆಲ್ಲವು ಕ್ರೋಧದಿಂದ ಬಸವರಾಜದೇವರ ಮೇಲೂ ಪ್ರಭುದೇವರ ಮೇಲೆಯೂ ಡಂಗುರವನಿಕ್ಕಿ ಎದ್ದು ಹೋದರು.

ಅರಳಿಹಿಟ್ಟು ಊಟ ಮಾಡುವವರಿಗೆ ಮೀನದ ಊಟ ಉಣ್ಣುವವರು ಸೈರಿಸದಂತೆ, ತುರುಬುಳ್ಳವರಿಗೆ ಬೋಳೆಯರು ಸೈರಿಸದಂತೆ, ಅರಸನ ಕಂಡು ಮನೆಯ ಗಂಡನ ಮರೆತಂತೆ, ಮಾಡಿದೆ ನೀ ವ್ರತಗೇಡಿ ಬಸವನು. ಮಹೇಂದ್ರ ಜಾಲಿಕನೊಬ್ಬನನ್ನು ಪ್ರಭುವೆಂದು ಕುಳ್ಳಿರಿಸಿಕೊಂಡು ತನ್ನ ಪ್ರಾಣಲಿಂಗವೆಂದು ನಮ್ಮ ತಿರುಗಿ ನೋಡಲಿಲ್ಲ, ಆತನಲ್ಲಿ ಒಳ್ಳೆಯದನ್ನೇನು ಕಂಡನು. ನಮ್ಮಲ್ಲಿ ಕೆಟ್ಟದ್ದನ್ನೇನು ಕಂಡನು. ಕಂಚ ಬಿಟ್ಟು ಹಂಚ ಹಿಡಿದನೆ ? ಅನಾಚಾರಿಯವನೊಬ್ಬ ವ್ರತಗೇಡಿ ಬಸವ ಇವರಿಬ್ಬರು ದೇವಲೋಕ, ಮರ್ತ್ಯಲೋಕಕ್ಕೆ ಹೊರಗು. ಇವರೀರ್ವರ ಮುಖವ ನೋಡಲಾಗದು ಎನ್ನುತ್ತ ಹೋದರು.

ಆ ಸಮಯದಲ್ಲಿ ಪ್ರಭುದೇವ ಸಾತ್ವಿಕರ ನುಡಿ ಹುಸಿಯೆ ? ಅದು ದಿಟ, ಅದು ದಿಟ ಎಂದು ನೋಡಿದನು. ಸಾತ್ವಿಕರು ಯಾರು ಗೊತ್ತೆ ? ಇವರು ದೇಹೋಹಂ ಬುದ್ಧಿಯುಳ್ಳವರು. ಕ್ರಿಯಾಶೀಲರು, ಕರ್ಮನಿರತರು, ಪೂಜಾಲಿಂಗ ಪ್ರೇಮಿಗಳು, ಇಷ್ಟಲಿಂಗದ ನಿಷ್ಠಾವಂತರು, ಕಲ್ಲನ್ನೇ ದೇವರೆಂದು ನಂಬಿದ ಭಾವಿಕರು, ಆಸ್ತಿಕರು. ಇವರದೆಂಥ ಭಾವಿಕತನ, ಆಸ್ತಿಕತನ.

ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲುಕುಟಿಗಂಗೆ ಹುಟ್ಟಿದ ಮೂರುತಿ, ಮಂತ್ರಕ್ಕೆ ಲಿಂಗವಾದುದು ಈ ಮೂವ್ವರಿಗೆ ಹುಟ್ಟಿದ ಮಗುವೆ ಲಿಂಗವೆಂದು ಕೈವಿಡಿವ ಅಚ್ಚವ್ರತಗೇಡಿಗಳನೇನೆಂಬೆ ಗುಹೇಶ್ವರಾ ಎಂದು ಭಾವಿಕತನ, ಆಸ್ತಿಕತನವ ಜರಿದು, ಕಲ್ಲುದೇವರೆಂದು ಪೂಜಿಸುವರು ಆಗದು ಕಾಣಿರೊ ? ಅಗಡಿಗರಾದಿರಲ್ಲ ಮುಂದೆ ಹುಟ್ಟುವ ಕೂಸಿಂಗೆ ಇಂದು ಮೊಲೆ ಕೊಡುವಂತೆ, ಇವರು ಲೋಕದಲ್ಲಿ ನಡೆನುಡಿಯುಳ್ಳ ಕ್ರಿಯಾಶೀಲರು, ಕರ್ಮಠರು, ಲಿಂಗ, ಲಿಂಗ ಎಂದು ನುಡಿವವರು.

ಲಿಂಗಯ್ಯನಿಗಾಗಿ ಮಾಡುವ ನಡೆವುಳ್ಳವರು. ಲಿಂಗ ಲಿಂಗ ಭಾವಿಗಳು, ಲಿಂಗದೇವನೆ ಕೊಡುವವನು, ಇಡುವವನು ಹುಟ್ಟಿಸುವವನು, ರಕ್ಷಿಸುವವನು. ಸಾಲೋಕ್ಯ, ಸಾಯುಜ್ಯ, ಸಾಮೀಪ್ಯ, ಸಾರೂಪ್ಯವೆಂಬ ಫಲಪದಂಗಳ ಕೊಡುವವನು. ಇಷ್ಟಾರ್ಥಪದವನ್ನೀವ ದೇವನು. ಆತನಿಗೆ ತನು, ಮನ, ಧನವನರ್ಪಿಸುವದೆ ಸರ್ವಾರ್ಪಣ ಮಾಡುವ ಮುಖ್ಯವಾದ ನಡೆಯು. ಲಿಂಗಯ್ಯನ ಕೊಂಡಾಡುವ ಭಟ್ಟಂಗಿಗಳು ಇವರಿಗೆ ಲಿಂಗಜ್ಞಾನವಿಲ್ಲ, ಲಿಂಗದ ರಹಸ್ಯ ತಿಳಿದವರಲ್ಲ, ಲೋಕದ ವ್ಯವಹಾರಿಗಳು ವರ್ಣಾಶ್ರಮ ವ್ರತಗಳ ಒಪ್ಪಿಕೊಂಡವರು. ಅತ್ಯಾಶ್ರಮದ ಘನವ ಅವರೇನು ಬಲ್ಲರು. ಪ್ರಭುದೇವ ಅತೀತ ಆಶ್ರಮ, ಸಕಲ ಆಶ್ರಮಗಳ ಮೀರಿದ ಘನಾಶ್ರಮ, ಆ ಮಹಾಂತನನ್ನು ಈ ಲೋಕದ ಜಂಗುಳಿಗಳು ಆತನೆಂತು ಸೇರುವರು. ಕ್ರಿಯಾಚಾರವೆತ್ತ, ಜ್ಞಾನಾಚಾರವೆತ್ತ. ಅರಿಯದ ಅಜ್ಞಾನಿಗಳೆತ್ತ, ಅರಿತ ಸುಜ್ಞಾನಿಗಳೆತ್ತ. ಕತ್ತಲೆತ್ತ ಬೆಳಕೆತ್ತ ದುರಾಭಿಮಾನಿಗಳೆತ್ತ ಅಭಿಮಾನವ ಕಾಣದ ಘನವಂತ ನೆತ್ತ ಕತ್ತಲು ಬೆಳಕ ಸೇರದು. ಹಾಗೆ ಅಂಗ ಜಂಗುಳಿಗಳು ಅಶನಕ್ಕೆ ನೆರೆದವರು ಸ್ವಾನುಭವವುಳ್ಳ ಜಂಗಮನೆಂತು ಸೇರುವರು. ಅದಕ್ಕಾಗಿ ಅವರು ಶಪಿಸಿ ಹೋಗಿದ್ದುದು, ಪ್ರಭು ತನ್ನ ಸುಜ್ಞಾನ ದವರೆಗಲ್ಲಿಗೆ ಹಚ್ಚಿ, ಅದು ಯತಾರ್ಥವೆಂದು ಸಿದ್ಧ ಮಾಡಿದ ಜ್ಞಾನಸಿದ್ಧ.

ಓ ಬಸವರಸಾ, ಸಾತ್ವಿಕರ ನುಡಿ ದಿಟ ದಿಟವಪ್ಪಾ. ನಾವು ದೇವಲೋಕದಿಂದಲೂ ಹೊರಗು, ಮರ್ತ್ಯಲೋಕದಿಂದಲೂ ಹೊರಗು. ಆ ಲೋಕದಲ್ಲಿ ಅವರಿರಲಿ, ನಮಗೆ ಆ

ಲೋಕಂಗಳು ಬೇಡ. ಏಕೆಂದರೆ ಒಳಗೆಂಬುದೆ ದೇವಲೋಕ. ಈ ಲೋಕ ಅಜ್ಞಾನಿಗಳಿಗೆ ಬಹು ಶ್ರೇಷ್ಟವಾದುದು. ಹೊರಗೆಂಬುದೆ ಮರ್ತ್ಯಲೋಕ. ಅದು ಕೀಳು ಆಗಿರುವುದು. ಇವರು ದೇವಲೋಕವನರಿಯರು, ಇತ್ತ ಮರ್ತ್ಯಲೋಕವನರಿಯರು. ಇವರು ತಿಳಿದಿಹ ದೇವಲೋಕ ದೇವನು ಕೈಲಾಸದಲ್ಲಿ ಸಮಾಧಿಸ್ಥನಾಗಿ ಕೂತ ಲೋಕ. ಅಲ್ಲಿ ಪ್ರಮಥಗಣರು ಆತನ ಸೇವೆಯಲ್ಲಿ ನಿರತರಾಗಿಹ ಲೋಕ. ಅದು ಮೇಲಿರುವ ಲೋಕವೆಂದು ತಿಳಿದಿಹರು. ಇವರು ಜ್ಞಾನಶೂನ್ಯರು. ಮರವಿನ ಗಣಂಗಳು, ಮರವಿನ ದೇವರು, ಮರವಿನ ಧ್ಯಾನ, ಮರವಿನ ಸಮಾಧಿಸ್ಥಿತಿ, ಮರವು ಮರವಿನ ನಿಲಯ. ಇವರು ಲಿಂಗಾಂಗ ಸಮರಸ ಜ್ಞಾನವರಿತವರಲ್ಲ, ಷಟ್‌ಸ್ಥಲ ಜ್ಞಾನಿಗಳಲ್ಲ, ಲಿಂಗೈಕ್ಯ ಇವರೇನು ಬಲ್ಲರು. ಇವರು ಭೇದಜ್ಞಾನಿಗಳು, ಇವರ ಭಾವ ಭೇದಭಾವ. ಇದು ಕಾರಣ, ಕರಣಂಗಳ ತುಸುಕಾಲದ ಶಾಂತಿ, ಸುಖ, ನಿಶ್ಚಿಂತತೆ ಇವರಿಗೆ ದೇವಲೋಕವಾಗಿದೆ.

ಬಹಿರಿಂದ್ರಿಯ ಕಾರ್ಯಂಗಳೆ ಮರ್ತ್ಯಲೋಕವಾಗಿವೆ. ತಮ್ಮ ವರ್ಣಾಶ್ರಮ ಧರ್ಮದಂತೆ, ಇಂದ್ರಿಯಂಗಳು ಆಚರಿಸಿದ ಲೋಕದವರು ಕೊಂಡಾಡಿದರೆ ಸಾಕು ಅದುವೆ ಅವರಿಗೆ ಜೀವನ್ಮುಕ್ತಿ ಲೋಕ. ತಾವು ಹೋದಲ್ಲೆಲ್ಲ ಗೌರವ ಪ್ರತಿಷ್ಠೆ ಬೆಳದರೆ ಸಾಕು ಅದು ಹೆಚ್ಚಿನ ಲೋಕ. ಮರ್ತ್ಯಲೋಕವೆಂಬುದು ಬಸವಣ್ಣನವರಿಗೆ ಶಿವಾನುಭವ ಹೇಗೆ ಮಹಾಮನೆಯಾಗಿತ್ತೊ ಹಾಗೆ ಲೋಕದವರು ಸ್ತುತಿಸಿದರೆ ಸಾಕು, ಅದು ಮಹಾಮನೆಯಾಗುವುದು. ಇವರಿರುವ ಕಂಡು ಓ ಬಸವಣ್ಣಾ , ಈ ಲೋಕಂಗಳು ಇವರಿಗೆ ಇವೆರಡರಿಂದ ಹೊರಗಿರುವುದು. ನಾವಿರುವ ನಿವಾಸ ನಿಜನಿವಾಸ. ಬಸವೇಶ ನಮ್ಮದು ಅನುಪಮ ಲೋಕ, ಅನುಪಮ ಜ್ಞಾನ, ಅನುಪಮದಿರುವು, ಅವರ್ಣಿಯ ಸುಖದ ನೆಲೆಯ ನಿಜ ನಿವಾಸ ನಮ್ಮದಾಗಿರಲು ಈ ಪ್ರಕೃತಿ ಕಾರ್ಯಕ್ಕೆ ಒಪ್ಪುವುದೆ ?

ಕರಣಂಗಳಿಂದ ಕಲ್ಪಿತವಾದ ಲೋಕವೆತ್ತ, ಕಲ್ಪಿತವೆ ಕಾಣದ ಘನಲೋಕವೆತ್ತ. ಅಂಗಾಂಗಗಳಿಂದುಕ್ತವಾದ ಲೋಕವೆತ್ತ, ಲಿಂಗಮಯವಾಗಿಹ ಚಿನ್ಮಯವೆತ್ತ. ಲಿಂಗ, ಲಿಂಗ ಎಂದು ಹಲುಬುವದೆತ್ತ, ಚಿತ್ ಸ್ವರೂಪವೆ ತಾನಾಗಿಹ ಅಚಲಾನಂದವೆತ್ತ. ಅವರಿರುವ ಮರ್ತ್ಯ ಲೋಕವೆತ್ತ, ನಾವಿರುವ ಲಿಂಗಾಂಗ ಸಾಮರಸ್ಯದಿಂದಿರುವ ಅಖಂಡ ಲೋಕವೆತ್ತ. ಜಡವೆತ್ತ, ಚೈತನ್ಯವೆತ್ತ, ತೋರಿ ಇಲ್ಲವಾಗುವ ಸುಖವೆತ್ತ. ನಿರಂತರ ಸುಖವೆತ್ತ, ಅಜ್ಞಾನ ದೃಷ್ಟಿಗೆ ಕಾಣುವ ಮರ್ತ್ಯಲೋಕ ದೇವಲೋಕದಲ್ಲಿ ಅವರೆ ಇರಲಿ. ನಮಗೆ ಅವು ಬೇಡ. ಮುನ್ನೆಲ್ಲಿಂದ ಬಂದೆವು, ನಾವಲ್ಲಿಗೆ ಹೋಗಿ ನಿತ್ಯರಾಗಿ ನಿಜ ನಿವಾಸಗಳಾಗಿ ನಮ್ಮ ಲೋಕದಲ್ಲಿ ನಾವಿರುವುದು.

ಬಸವಣ್ಣಾ ಇವರು ಅಂಗಜಂಗುಳಿಗಳು, ಅಂಗಾಭಿಮಾನಿಗಳು, ಅಂಗಭಾವಿಗಳು, ಅಂಗವೆ ತಾವಾದರು. ಇವರು ಅಶನಕ್ಕೆ ನೆರೆದವರು, ಲಿಂಗ ಘನ ಇವರೇನು ಬಲ್ಲರು. ಶ್ರೀಗುರು ಲಿಂಗಕೊಟ್ಟುದೇಕೆ ? ಅದರ ರಹಸ್ಯ ಇವರೇನು ಬಲ್ಲರು. ಕಾಯದ ಪ್ರೇಮಿಗಳು ಸದಾ ಅದರದೆ ಕೊರಗು, ಚಿಂತೆ ಭಯ ಅದರದೆ. ಕೂತರೆ ದೇಹ, ನಿಂತರೆ ದೇಹ, ಹೋದರೆ ದೇಹ, ಬಂದರೆ ದೇಹ, ಉಂಡರೆ ದೇಹ, ಉಪವಾಸವಿದ್ದರೆ ದೇಹ, ಸದಾ ದೇಹದ್ದೆ ವ್ಯಸನ. ದೇಹದ್ದೆ ಕಕ್ಕುಲತೆ, ಅದರದೆ ಸತ್ಕಾರ, ಅದರದೆ ಪ್ರತಿಷ್ಠೆ. ಹೀಗಿರುವಲ್ಲಿ ಇವರು ದೇವರ ಸುದ್ದಿಯನರಿಯದವರು. ವಾಸನೆಯ ನಿಶೆಯುಳ್ಳವರು. ನಿಶೆಯಲ್ಲಿಯೆ

ಇವರ ಕಾಲಹರಣ ಮಾಡುವಲ್ಲಿ ಗುಹೇಶ್ವರ ಲಿಂಗವನೆತ್ತ ಬಲ್ಲರು ? ಇವರ ಅಜ್ಞಾನಕ್ಕೆ ಮಿತಿ ಇಲ್ಲ, ಇಷ್ಟಲಿಂಗಕ್ಕೆ ಪ್ರಾಣಲಿಂಗವೆನ್ನುವರು. ಇವರಿಗೆ ಇಷ್ಟವಾವುದೊ ? ಪ್ರಾಣವಾವುದೊ ಲಿಂಗವಾವುದೊ ಅರಿಯದವರು.

**111**

**ಇಷ್ಟಲಿಂಗ, ಪ್ರಾಣಲಿಂಗವೆಂಬ ಮಿಟ್ಟೆಯಭಂಡರು**
**ನೀವು ಕೇಳಿರೊ ? ಇಷ್ಟಲಿಂಗವನು ಕಾಯುವರು,**
**ಮುಟ್ಟಿ ಹೊಳುವಲ್ಲಿ ಬಿಟ್ಟು ಹೋದ ಪ್ರಾಣಕ್ಕೆ**
**ಇನ್ನಾವುದು ಲಿಂಗ ಹೇಳಾ ಗುಹೇಶ್ವರಾ.**

**ತಾತ್ಪರ್ಯ** : *ಇಷ್ಟಲಿಂಗ, ಪ್ರಾಣಲಿಂಗವೆಂಬ ಮಿಟ್ಟೆಯಭಂಡರು ನೀವು ಕೇಳಿರೆ* : ಪೂಜಾಲಿಂಗಕ್ಕೆ ಇಷ್ಟಲಿಂಗವೆಂದು ಪೂಜೆ ಮಾಡುವ ಸಾಂಪ್ರದಾಯ ಬಹು ಲಿಂಗಾರ್ಚಕರಿಗೆ ಬಂದಿದೆ. ಕೆಲಬರು ಇಷ್ಟಲಿಂಗವೆಂಬುದು ಅರಿಯರು. ಪ್ರಾಣಲಿಂಗವೆಂಬುದು ಅರಿಯರು. ಅರಿಯದೆ ಮಾತಾಡುವ ಲಿಂಗವಂತರು ಬಹಳ ಇದ್ದಾರೆ. ಕೆಲಬರು ಇಷ್ಟಲಿಂಗ ಗುರುಕೊಟ್ಟ ಲಿಂಗವೆಂದು ತಿಳಿದಿಹರು. ಗುರುವಾರು ಎಂಬುದನರಿಯರು.

ಗುರುಕೊಟ್ಟ ಕರುಣಿಸಿದ ಲಿಂಗವದು, ಇಷ್ಟಲಿಂಗವೆಂಬುದಕ್ಕೂ ಮೀರಿ ಅನುಪಮವಾಗಿದೆ. ಅದು ಇಷ್ಟ ಪ್ರಾಣ, ಭಾವವೆಂಬುದಕ್ಕೂ ಸಂದಿಲ್ಲದೆ ಅಖಂಡಿತ ಘನವಾಗಿದೆ. ಅಚಲಿತ ಲಿಂಗ ಶ್ರೀಗುರು ಕರುಣಿಸಿದ ಲಿಂಗ, ಅದು ಪೃಥ್ವಿಗೆ ಹುಟ್ಟಿದ ಶಿಲೆಯಾಗಬಹುದೆ ? ಅದನ್ನು ಕಲ್ಲುಕಟಗನು ಕಟಿದು ಮೂರುತಿ ಮಾಡಬಹುದೆ ? ಶೃತಿಗಗೋಚರವಾಗಿಹ ಮಾತು ಅದು ಕಿವಿಗೆ ಕೇಳಿ ಬರುವ ಮಂತ್ರವಾಗಬಹುದೆ ?

ಶ್ರೀಗುರು ಕರುಣಿಸಿದ ಲಿಂಗವೆತ್ತ ಇವರುಗಳು ಭಾವಿಸಿದ ಇಷ್ಟಲಿಂಗವೆತ್ತ ? ಶ್ರೀಗುರು ಆರು ಗೊತ್ತೆ ? ಅನುಪಮ ಲಿಂಗದಿರುವ ಕರುಣಿಸುವಾತ ಶ್ರೀಗುರು. ಪೂಜಾಲಿಂಗವ ಕೊರಳಲ್ಲಿ ಕಟ್ಟುವವರು ಶ್ರೀಗುರುಗಳೆ ? ಅಲ್ಲ ; ಇವರು ಮನೆತನದ ಗುರುಗಳು. ಮನವ ಲಿಂಗವ ಮಾಡುವ ಗುರುಗಳಲ್ಲ, ಇಂಥವರ ಕರುಣೆಯಲ್ಲಿ ಬೆಳೆದ ಭಕ್ತವೃಂದ ಇವರು ಮಣ್ಣಿನ ಪ್ರೇಮಿಗಳು. ಮಣ್ಣಿನಿಂದ ಹುಟ್ಟಿ, ಮಣ್ಣಾಗಿ ಇದ್ದು, ಮಣ್ಣಾಗಿ ಮಡಿದು ಹೋಗುವವರು. ಇಷ್ಟಲಿಂಗವನ್ನು ಪ್ರಾಣಲಿಂಗವೆನ್ನುವರು, ಪ್ರಾಣಲಿಂಗದ ಘನವೇನು ಬಲ್ಲರು. ಪ್ರಾಣವ ಬಲ್ಲರು, ಪ್ರಾಣದ ಪ್ರಾಣ ಇವರೇನು ಬಲ್ಲರು. ಇದು ಸದಾಸರ್ವತ್ರ ಇರುವ ಲಿಂಗ, ಎಲ್ಲೆಲ್ಲೂ ಭರಿತವಾಗಿಹ ಲಿಂಗ, ಅಣುವಿಂಗಣುವಾಗಿಹ ಲಿಂಗ, ತೃಣದ ತೃಣವಾಗಿಹ ಲಿಂಗ, ಕಾಷ್ಠದ ಕಾಷ್ಠವಾಗಿಹ ಲಿಂಗ. ಅರು ತನುವಿನ ತನು, ಮನದ ಮನ, ಅರುವಿಂಗರುವಾದುದು ಇವರೇನು ಬಲ್ಲರು. ಬಲ್ಲವರು ಅಗಣಿತರು. ಅಕ್ಷರೋತ್ತಮರು, ಪರಂಜ್ಯೋತಿಯಾಗಿಹ ಅನುಪಮರು, ಅದ್ವಿತೀಯರು, ನಿರಾಲಂಬ ಮೂರ್ತಿ, ನಿರೂಪನಿಗೆ ರೂಪ ಕಾಣುವದೆಂತು ? ಆಚಾರ ಕೆಟ್ಟವಂಗೆ ಅನಾಚಾರದ ಭಯವೆಲ್ಲಿ ? ನಿಸ್ಸೀಮಂಗೆ ಹಿತವಾವುದು ಅಹಿತವಾವುದು ? ತನ್ನವರಾರು ಅನ್ಯರಾರು ? ಪ್ರಿಯರಾರು ಅಪ್ರಿಯರಾರು ? ನಿಜವರಿದ ಮಹಾಂತನ

ಉಪಮಿಸಬಹುದೆ ?

ಅನುಪಮನ ಉಪಮೆಗೆ ತರಬಾರದು. ಪ್ರಣವ ಸ್ವರೂಪನೆನಬಹುದೆ ಪ್ರಣವ ಪ್ರಭೆ ಎನಬಹುದೆ ? ಶರಣ ಪ್ರಾಣಲಿಂಗಿ, ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿಯಾದುದರಿಂದ ಅನುಪಮ ಎಂದು ಹೇಳಿದೆ.

ಪ್ರಾಣಲಿಂಗವದು ಅನುಪಮ ಜ್ಯೋತಿ ಈ ಜ್ಯೋತಿಯೆ ತಾವಾದವರು ಶರಣರು ಶರಣೆಯರು. ಅಂತಪ್ಪ ಮಹಾನುಭಾವಿಗಳು ಇಷ್ಟಲಿಂಗ, ಪೂಜಾಲಿಂಗವೆ ಪ್ರಾಣಲಿಂಗವೆಂದು ಹೇಗೆ ನುಡಿವರು. ಅರಿಯದ ಶಿಶು, ತನ್ನ ತೊದಲ್ನುಡಿಯಿಂದ ಏನನ್ನಾದರೂ ಪ್ರೀತಿಗಾಗಿ ಅನ್ನುವುದು. ಅದ ನಿಜಕ್ಕೆ ತರಬಾರದು.

ಇನ್ನು ಕೆಲಬರು, ಪ್ರಾಣಾಯಾಮ ಕ್ರಿಯೆಕ್ಕೆ ಪ್ರಾಣಲಿಂಗ, ಪ್ರಾಣಲಿಂಗಿಗಳೆಂದು ಅನ್ನುವರು. ಅದು ಪ್ರಾಣದ ಕ್ರಿಯೆವಲ್ಲದೆ ಪ್ರಾಣಲಿಂಗವಾಗಬಾರದು. ಇಷ್ಟ ಲಿಂಗವನು(ಪೂಜಾಲಿಂಗವನು) ಕಾಯವನು ಮುಟ್ಟಿ ಹೂಳುವಲ್ಲಿ ಬಿಟ್ಟುಹೋದ ಪ್ರಾಣಕ್ಕೆ ಇನ್ನಾವುದು ಲಿಂಗ ಉಂಟು ಹೇಳಾ ಗುಹೇಶ್ವರಾ. ಮರಣವಾಗುವುಡೆ ಕಾಯದ ಕೂಡ ಪೂಜಾಲಿಂಗವು ಕೂಡ ಹೂಳಿಡುತ್ತಾರೆ. ಕಾಯದ ಕೂಡ ಈ ಲಿಂಗವು ಸಂಗಾತಿಯಾಗಿರುತ್ತದೆ ಎಂದು ಹಲವರ ಅಭಿಪ್ರಾಯ. ಕಾಯ ಬಿಟ್ಟು ಲಿಂಗವಿರಬಾರದು ಅಥವಾ ಲಿಂಗ ಬಿಟ್ಟು ಕಾಯವಿರಬಾರದು; ಇದು ಅವರವರ ಮನಸ್ಸಿನ ಸಮಾಧಾನ. ಏಕೆಂದರೆ ಕಾಯಬೇರಾಗಿಯೆ ಇದೆ ; ಲಿಂಗ ಬೇರಾಗಿಯೆ ಇದೆ. ಇದನ್ನು ಸಕಲರು ಪ್ರತ್ಯಕ್ಷ ನೋಡುತಿಹರು. ಲಿಂಗ ಕಾಯದಲ್ಲಿ ಸಮರಸವಾಗಿ ಒಂದಾದ ಮೇಲೆ ತಮ್ಮ ತಮ್ಮ ಸಂಜ್ಞೆ ಕಳೆದುಕೊಂಡಿರಬೇಕು. ಇದು ಕಾಯ, ಇದು ಲಿಂಗವೆಂದು ವಿಭಾಗ ಮಾಡಿ ನೋಡಲು ಬರಬಾರದು. ಹಾಗಿದ್ದಲ್ಲಿ ಕಾಯ ಲಿಂಗ ಒಂದಾದ ಸಂಜ್ಞೆಯು. ಕಾಯವು ಜಡ, ಪೂಜಾಲಿಂಗವು ಜಡ, ಜಡ ಜಡಗಳು ಹೇಗೆ ಸಮರಸವಾಗುವವು? ಹೆಣಕ್ಕೂ ತಾನು ಹೆಣವೆಂಬುದು ಗುರುತಿಲ್ಲ, ಲಿಂಗಕ್ಕೆ ಲಿಂಗವೆಂಬುದು ಗೊತ್ತಿಲ್ಲ, ಕುರುಡ ಕುರುಡರು ಮಡುವಿಗೆ ಬಿದ್ದಂತೆ, ಮುಗ್ಧಭಾವಿಕರು ಲಿಂಗದ ಘನವೇನು ಬಲ್ಲರು ? ಒಂದು ವೇಳ್ಯ ಕಾಯವನು ಪೂಜಾಲಿಂಗವನು ಮುಚ್ಚಿ ಹೂಳುತ್ತಾರೆ. ಆದರೆ ಇವೆರಡನ್ನು ಬಿಟ್ಟು ಹೋದ ಪ್ರಾಣಕ್ಕೆ ಅದಾವ ಲಿಂಗವ ಕಟ್ಟುವಿರಿ. ಕಾಯಕ್ಕೆ ಲಿಂಗಧರಿಸುವ ಜಾಣರಾದಿರಲ್ಲದೆ, ಪ್ರಾಣಕ್ಕೆ ಕಟ್ಟುವ ಘನವಂತರು ಆಗಲಿಲ್ಲ.

ಪ್ರಾಣಕ್ಕೆ ಕೆಲಬರು ಪ್ರಣವದ ದೀಕ್ಷೆ ಕೊಟ್ಟು, ಅದನ್ನು ಶುದ್ಧ ಮಾಡಿಹೆವು ಎನ್ನುವರು. ನೀವು ಶುದ್ಧ ಮಾಡಿದ ಪ್ರಾಣ ಪ್ರಳಯವಾಗಬಾರದು. ಇದರಿಂದ ಬಿಟ್ಟು ಹೋಗಬಾರದು. ಅದೇಕೆ ಪ್ರಾಣ ಈ ಶರೀರ ಬಿಟ್ಟು ಹೋಯಿತು. ಬಿಟ್ಟು ಹೋಗುವ ಪ್ರಾಣಕ್ಕೆ ನಿಮ್ಮ ದೀಕ್ಷೆ ಸಂಸ್ಕಾರದಿಂದ ಅದು ತನ್ನ ಪೂರ್ವ ಸ್ವಭಾವ ಬಿಟ್ಟಿತೆ ? ಬಿಡದ ಮಾತ್ರಕ್ಕೆ ನಿಮ್ಮ ದೀಕ್ಷೆಯು ವ್ಯರ್ಥವಾಯಿತಲ್ಲದೆ, ಸಫಲವಾಗಲಿಲ್ಲ. ಪಾಣಕ್ಕೆ ದೀಕ್ಷೆ ಅಂದರೆ ಕೆಲಬರು ಹೀಗೆ ತಿಳಿದಿಹರು. ಸೋಹಂ ಎಂಬ ಎರಡಕ್ಷರವುಳ್ಳ ಘನ ಮಂತ್ರವ ಕಿವಿಯಲ್ಲಿ ಬೋಧಿಸಿದ ಮಾತ್ರಕ್ಕೆ ಪ್ರಾಣವು ಸೋಹಂ ಸ್ವರೂಪವಾಯಿತೆ ? ಅದು ಮೊದಲು ಇದ್ದಂತೆಯೆ ಇದೆ. ಅಂದಲ್ಲಿ ಪ್ರಣವ ನುಚ್ಚರಿಸಿದ ಮಾತ್ರಕ್ಕೆ ಅದು ಮುನ್ನ ಮುನ್ನವೆ ಇದ್ದಂತಿದ್ದ ಘನ ವಸ್ತುವಾಗಿ ಪ್ರಜ್ವಲಿಸಲಿಲ್ಲ. ಅಂದಲ್ಲಿ ಪ್ರಣವದರ್ಥವ ತಿಳಿಯುವುದು.

112

**ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರು**
**ಪ್ರಣವ ಮಂತ್ರದರ್ಥವ ತಿಳಿದು ನೋಡಿರೆ ?**
**ಪ್ರಣವ ನಾಹಂ ಎಂದುದೆ ? ಪ್ರಣವ ಕೋಹಂ ಎಂದುದೆ ?**
**ಪ್ರಣವ ಸೋಹಂ ಎಂದುದೆ ? ಪ್ರಣವ ಚಿದಹಂ ಎಂದುದೆ ?**
**ಪ್ರಣವ ಭರ್ಗೋದೇವಸ್ಯ ಧೀಮಹಿ ಎಂದುದು**
**ಆ ಸವಿತುಃ ಪದಮಂಗಃಸ್ಯಾತ ಭರ್ಗಸ್ತು ಲಿಂಗಮೇವಚ ಧೀಮಹಿ**
**ಪದಮಿತ್ಯೇಷಾಂ ಗಾಯತ್ರ್ಯಾಂ ಲಿಂಗ ಸಂಬಂಧಃ ಎಂದುದಾಗಿ**
**ಪ್ರಣವದರ್ಥವು ತಾನೆ ಮಯವು ಗುಹೇಶ್ವರಾ.**

**ತಾತ್ಪರ್ಯ** : ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರು ಪ್ರಣವ ಮಂತ್ರದರ್ಥವ ತಿಳಿದುನೋಡಿರೆ : ಪ್ರಭುದೇವ, ಪ್ರಣವನುಚ್ಚರಿಸುವವರಿಗೆ ಪ್ರಮಾಣಿಕರೆಂದು ಸಂಭೋಧಿಸಿಹನು. ಪ್ರಾಮಾಣಿಕರೆಂದರೆ ಆರು ? ಪ್ರಣವನುಚ್ಚರಿಸುವವರು ಪ್ರಣವ ಸ್ಮರಣೆ ಮಾಡುವವರು, ಪ್ರಣವದ ಧ್ಯಾನಾಸಕ್ತರು. ಇವರುಗಳೆಲ್ಲರು ಪ್ರಮಾಣಿಕರು. ಈ ಪ್ರಮಾಣಿಕರು ಬಹು ಸಾಧಕರಿರುವರು. ಪ್ರಣವದ ಬಗ್ಗೆ ಉಪನಿಷದ್‌ಕಾರರು ಬಹು ಪ್ರಧಾನ ಮಾಡಿಹರು. ಇದಲ್ಲದೆ ಮಾಂಡುಕ್ಯೋಪನಿಷತ್ತಿನಲ್ಲಿ ಪ್ರಣವದ ವಿಷಯವೆ ತುಂಬಿದೆ. ಅದಕ್ಕಾಗಿ ಪ್ರಣವಾನುಸಂದಾನ ಮಾಡಿದವರು ಬಹು ಮಹಾತ್ಮರಿರುವರು. ಮನುಮುನಿಗಳು ತಪಸ್ವಿತ್ಯಾಗಿಗಳು ಯೋಗಿಗಳು ಈ ಅನುಸಂದಾನ ಮಾಡಿ ಜಗತ್ಪೂಜ್ಯರಾಗಿಹರು. ಅವರುಗಳಲ್ಲಿ ರಮಣಮಹರ್ಷಿಗಳು, ರಾಮತೀರ್ಥರು, ದಯಾನಂದ ಸರಸ್ವತಿಗಳು, ಶಿವಾನಂದ ಹೃಷಿಕೇಶ, ಇತ್ತ ಸಿದ್ಧಾರೂಢ ಗರಗದ ಮಡಿವಾಳೇಶ್ವರರು ಮತ್ತು ಸದ್ಗುರು ನಾಗಭೂಷಣ ಶಿವಯೋಗಿಗಳು ಸಕಲರಿಗೂ ಇದರ ಬಗ್ಗೆ ಸರಿಯಾದ ತಿಳುವಳಿಕೆ ಕೊಟ್ಟು ಮಹದುಪಕಾರ ಮಾಡಿಹರು.

ಪ್ರಭುದೇವ, ಪ್ರಮಾಣಿಕರೆಲ್ಲರನು ಅಪ್ರಮಾಣವಂತರನ್ನಾಗಿ ಮಾಡಿದ ಮಹಾಮಹಿಮ. ಶಬ್ದವೇದಿಗಳನ್ನು ನಿಶಬ್ದವೇದಿಗಳ ಮಾಡುವ ದಯಾಮಯಿ. ತನ್ನ ಸ್ವಾನುಭವದ ಕರುಣಾರಸದ ಕಡಕೋಡಿಯನ್ನು ಸಕಲರ ಮೇಲೆ ಹರಿಸಿಹನು. ಚಿಂತಿಸುವವರಿಗೆಲ್ಲ ಅಚಿಂತ್ಯಪದವ ಕರುಣಿಸಿದ ಕರುಣಾಮಯಿ. ಈ ಘನವಂತ ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರಿಗೂ ಪ್ರಣವ ಮಂತ್ರದರ್ಥವ ತಿಳಿದು ನೋಡಿರೆ ಎಂದು ಸಂಬೋಧಿಸಿದುದು ನೋಡಿದರೆ ಉಳಿದ ಮಹಾತ್ಮರ ದಯಾಮಯ ಹೃದಯಕ್ಕೂ ಈತನಿಗೂ ಮಹದಂತರವಿದೆ.

ಉಪನಿಷದಗಳು ಪ್ರಣವ ಮಂತ್ರ ಸ್ಮರಣೆ ಮಾಡಲು ಕೃಪೆ ಮಾಡಿದವು. ಧ್ಯಾನ ಮಾಡಲು ಕೃಪೆ ಮಾಡಿದವು, ಅದರಲ್ಲಿ ತದ್ಗತವಾಗಲು ಕೃಪೆ ಮಾಡಿದವು. ಓಂ ಇತಿ ಸ್ಮರಣೇನೈವ ಬ್ರಹ್ಮಜ್ಞಾನಂ ಪ್ರವರ್ತತೆ । ತೇನೈವ ಮೋಕ್ಷಸಂ ಸಿದ್ಧ್ಯಂತೆ ನೈವಾಮೃತಮಶ್ನುತೆ ॥ಪ॥ ಓಂ ದಿವ್ಯಧ್ಯಾನಯೋಗೇನ ಮನೋರಾಜ್ಯಂ ವಿಜಯತೆ । ಧ್ಯಾನೇನಬಲು ವೈರಾಜ್ಯಂ

ಪೂರ್ಣ ಮೇಕಾಂತವಾಸನಾ ॥ 1 ॥ ನಾಸಾಗ್ರ ಸ್ಥಾಪಯೇತ ದೃಷ್ಟಿಂ ದಿಯಚ್ಚೆದಿಂದ್ರಿಯಾಣೇಚ ॥ ಸರ್ವತೋಮನ ಆಹೃತ್ಯ ಬ್ರಹ್ಮೋಕಾರಂಚ ಚಿಂತಯೇತ್ ॥ ಓಂ ಇತ್ಯೆಕಾಕ್ಷರ ಮಿದಂ ಬ್ರಹ್ಮ ಆದ್ಯಂ ಪೂಜ್ಯ ಸ್ವಯಂ ಪ್ರಭಮ್ । ಸಾಕಾರಂಚ ನಿರಾಕಾರಂ ದ್ವಯಾಯೈ ಕಾತ್ಮನೆ ನಮಃ । ಓಂಕಾರ ಪರಬ್ರಹ್ಮ, ಓಂಕಾರ ಪರಮೇ ಗುರುಃ । ಓಂಕಾರ ಪರಮಾತ್ಮ ಚ, ಓಂಕಾರಾತ್ಮೈವನಪರಃ । ಓಂಕಾರಸ್ಯ ಪಂಚಕಂ ನಿತ್ಯ ಯಃ ಪಠೇತ್ ಶ್ರದ್ಧಯಾನ್ವಿತ । ಶಕ್ತಿಂ ಭಕ್ತಿಂ ತಥ ಮುಕ್ತಿ ಸಪ್ರಾಮ್ನೋತಿ ನ ಸಂಶಯಃ ॥

ಓಂಕಾರ ರೂಪಿಯಾದ ಪರಬ್ರಹ್ಮ ಸ್ಮರಣ ಮಾತ್ರದಿಂದ ಹೃದಯದಲ್ಲಿ ಬ್ರಹ್ಮಜ್ಞಾನವುಂಟಾಗುತ್ತದೆ. ಓಂಕಾರ ಸ್ವರೂಪನಾದ ಪರಮಾತ್ಮನ ಅವ್ಯಕ್ತಧ್ಯಾನದಿಂದ ಮನಸ್ಸು ಸ್ವಾಧೀನವಾದುದಲ್ಲದೆ ಏಕಾಂತ ಪ್ರಿಯರಾದ ಭಕ್ತರಿಗೆ ಸಹಜ ಸಮಾಧಿ ಸುಖವುಂಟಾಗುತ್ತದೆ. ॥ 2 ॥ ಸರ್ವ ಇಂದ್ರಿಯಂಗಳು ಮತ್ತು ಮನಸ್ಸು ಏಕಾಗ್ರವಾಗಿ ನಾಸಾಗ್ರ ದೃಷ್ಟಿಯನ್ನಿಟ್ಟು, ಓಂಕಾರ ಬ್ರಹ್ಮನ ಚಿಂತನ ಮಾಡು ॥ 3 ॥ ಓಂಕಾರ ಎಂಬ ಅಕ್ಷರವು ಸ್ವಯಂ ಪ್ರಕಾಶ ಪರಬ್ರಹ್ಮವೆ ಆಗಿದೆ ಮತ್ತು ಸಾಕಾರ ನಿರಾಕಾರ ಎರಡು ಒಂದೆಯಾದ ಬ್ರಹ್ಮನನ್ನು ನಾನು ನಮಿಸುತ್ತೇನೆ ॥ 4 ॥ ಓಂಕಾರ ಪರಬ್ರಹ್ಮ ಓಂಕಾರವೆ ಮಹಾನ್‌ಗುರು, ಓಂಕಾರವೆ ಆತ್ಮನು, ಓಂಕಾರದ ವಿನಃ ಬೇರೆ ವಸ್ತುವಿಲ್ಲ ॥ 5 ॥ ಈ ಓಂಕಾರ ಪಂಚಕವು ಶ್ರದ್ಧೆಯಿಂದ ಯಾವತ್ತೂ ನಿತ್ಯಪಠಿಸುವನೊ ॥ ಅವನಿಗೆ ಶಕ್ತಿ ಭಕ್ತಿ ಮತ್ತು ಮುಕ್ತಿಯಾಗುವುದರಲ್ಲಿ ಸಂದೇಹವಿಲ್ಲ.

ಪ್ರಣವದ ಸಾಧಕರೆಲ್ಲ ರಾಜರು. ಇದು ಸಹಜ ಮಾಡುವ ಸಾಧನೆಯಾದುದರಿಂದ ಇದು ಎಲ್ಲ ಸಾಧಕತನದಲ್ಲಿ ಶ್ರೇಷ್ಠವಾದುದರಿಂದ ರಾಜ ಎಂಬ ಹೆಸರು ಬಂದಿದೆ. ಯಾರು ಪ್ರಣವದಲ್ಲಿ ತದ್ಗತವಾಗಿರುವರೋ ಅವರು ರಾಜಯೋಗಿಗಳು. ತದ್ಗತವಾಗುವ ಬಗೆ ಹೀಗೆ ಇದೆ: ಸಾಧಕನು ಮೊದಲು ಪ್ರಾತಃಕಾಲ 4 ಗಂಟೆಗೆ ಜಾಗ್ರತನಾಗಿ ಸಿದ್ಧಾಸನ ಹಾಕಿ ಕುಳಿತುಕೊಂಡು ಶ್ರೀಗುರುವಿಗೆ ನಮಸ್ಕಾರ ಮಾಡಿ 5 ನಿಮಿಷ ಧ್ಯಾನದ ಬಳಿಕ ಓಂ, ಓಂ, ಓಂ ಈ ಪ್ರಕಾರ ಮಾನಸಿಕ ಜಪ ನಡಿಸಬೇಕು. ಅಂದರೆ ಓಂ ಎಂಬ ಜಪದೊಡನೆ ಅನಂತತಾ ನಿತ್ಯತಾ ಅಮರತ್ವ ಪೂರ್ಣಾನಂದ ಮತ್ತು ಪರಮಶಾಂತಿ ಭಾವನೆಯಿಂದ ಆಚರಿಸಿದರೆ ನಿಜವಾದ ಪೂಜೆಯೆನಿಸುವುದು. ಶುದ್ಧ ಮನಸ್ಸಿನಿಂದ ತಾದಾಕಾರ ವೃತ್ತಿಯು ನೆಲೆಗೊಂಡುದೆ ಇದುವೆ ಪರಮ ಪೂಜೆಯಾಗುವುದು. ಈ ಪ್ರಣವರೂಪಿ ಪರಮಾತ್ಮನಲ್ಲಿ ಧಾರಣ ಮಾಡುವುದು, ಧಾರಣ ಮಾಡುವುದೆಂದರೇನು ? ಚಿತ್ತದ ಏಕಾಗ್ರತೆಗೆ ಧಾರಣವೆನ್ನುವರು. ಮನಸ್ಸಿಗೆ 12 ಸೆಕೆಂಡ್ ಪ್ರಣವ ಚಿಂತನದಲ್ಲಿ ನಿಲ್ಲಿಸಿದರೆ ಒಂದು ಧಾರಣವೆನ್ನುವರು, ಈ ಪ್ರಕಾರವಾಗಿ 12 ಧಾರಣ ಮಾಡಿದರೆ 1 ಧ್ಯಾನವಾಗುವುದು. ಬಳಿಕ 12 ಧ್ಯಾನವಾದರೆ ಒಂದು ಸಮಾಧಿಯಾಗುವುದು. ತಾತ್ಪರ್ಯವೇನೆಂದರೆ ಧಾರಣ ಧ್ಯಾನ ಮತ್ತು ಸಮಾಧಿ ಇತ್ಯಾದಿ ಸಾಧನೆಗಳು ಸ್ವರೂಪತಃ ಒಂದೆ ಇರುತ್ತವೆ. ಹೀಗೆ ಬಾಲಕ, ತರುಣ, ವೃದ್ಧ ಈ ಮೂರು ಅವಸ್ಥೆಗಳು ಒಬ್ಬನಲ್ಲಿಯೆ ಕಾಣುವಂತೆ ಬರುತ್ತವೆ.

ಪ್ರಭುದೇವ, ಪ್ರಣವದರ್ಥವ ತಿಳಿದು ನೋಡಿರೆ ಎಂದು ಸಂಬೋಧಿಸಿದುದು ನೋಡಿದರೆ ಪ್ರಣವದರ್ಥವ ಹೇಳುವರುಂಟು ; ತಿಳಿದು ನೋಡಿದವರು ಮಹಾತ್ಮರಲ್ಲದೆ ಅನ್ಯರಲ್ಲ, ಪ್ರಣವದರ್ಥ ಮಂತ್ರದರ್ಥವೆಂದರೆ ಸಚ್ಚಿದಾನಂದ ಸ್ವರೂಪ, ಜ್ಞಾನಸ್ವರೂಪ,

ಅಖಂಡಿತಾ, ನಿತ್ಯತಾ, ಅಮರತ್ವ ಎಂದು ಅರ್ಥವಾಗುತ್ತದೆ. ಹೀಗೆ ಇದರ ಭಾವನೆ ಮಾಡಿದವರುಂಟು ತಿಳಿದವರು ವಿರಳ, ತಿಳಿದುನೋಡಿದವರು ವಿರಳ. ತಿಳಿದು ನೋಡಿದಾಗ ತಾನೆ ನಿರಂತರ ತಾನೆ ಪ್ರಭುದೇವ ದಯಾಮಯ. ಪ್ರಣವ ನಾಹಂ ಎಂದುದೆ ? ಪ್ರಣವ ಕೋಹಂ ಎಂದುದೆ ? ಪ್ರಣವ ಸೋಹಂ ಎಂದುದೆ ? ಪ್ರಣವ ಚಿದಹಂ ಎಂದುದೆ ? ಎನ್ನದಾಗಿ ಪ್ರಣವ ಭರ್ಗೋದೇವಸ್ಯ ಧೀಮಹಿ ಎಂದುದು. ತನ್ನ ಹೃದ್ಗತವಾಗಿಹ ಜ್ಞಾನಾಮೃತದ ಕಡಗೋಡಿಯನ್ನೆ ಸಾಧಕವೃಂದದ ಮೇಲೆ ಹರಿಸಿಹನು. ಪ್ರಣವದರ್ಥವ ತಿಳಿವವನು ತಾನೆ, ತನಗಿಂತನ್ಯ ಆರು ಇಲ್ಲ, ಪ್ರಣವ ಮಂತ್ರವು ತಾನಲ್ಲ, ಅರ್ಥವು ತಾನಲ್ಲ, ಅರ್ಥವ ತಿಳಿವವನು ತಾನು ಎಂದಲ್ಲಿ ಶಬ್ದಮುಗ್ಧ ತಾನೆ, ನಿರಂತರ ತಾನಿಹನು. ಇದು ತನ್ನಿರುವಿನ ಘನ, ಇದು ತನ್ನಿಂದ ತನಗೆ ವಿದಿತವಾದುದು, ಜಗತ್ತಿನಲ್ಲಿ ಯಾವುದೆ ಭಾಷೆಯಾಗಲಿ, ಸಾಧನೆಗಳು ಇರುವುದಿಲ್ಲ, ತನ್ನ ದಿವ್ಯದೃಷ್ಟಿಯಿಂದ ಮತ್ತು ತನ್ನ ಆಂತರಿಕ ಸುಜ್ಞಾನದಿಂದ ತಾನೆ ನಿಂತು ನೋಡಿದಾಗ ಅನುಭವಕ್ಕೆ ಬರುತ್ತದೆ. ಅದು ಹೇಗಂದರೆ ಮೂಕ ಸಕ್ಕರೆ ತಿಂದದ್ದು ಅನುಭವ ರೂಪವಾಗಿದೆ ಹೊರ್ತು ನುಡಿದು ಹೇಳಲಿಲ್ಲ.

ಪ್ರಣವ ಭರ್ಗೋದೇವಸ್ಯ ಧೀಮಹಿ ಎಂದುದಲ್ಲದೆ ಸವಿತುಃ ಪದಮಂಗಃಸ್ಯಾತ ಭರ್ಗಸ್ತು ಲಿಂಗಮೇವಚ ಧೀಮಹಿ ಪದಮಿತ್ಯೇಷಾಂ ಗಾಯತ್ರ್ಯಾಂ ಲಿಂಗ ಸಂಬಂಧಃ ಎಂದುದಾಗಿ ಪ್ರಣವದರ್ಥವು ತಾನೆ. ಮಯವು ಗುಹೇಶ್ವರಾ ಎಂದು ಹೇಳಿಹನು. ಪ್ರಣವದರ್ಥವು ತಿಳಿದ ಮಹಾಂತ ಪ್ರಣವ ನಾಹಂ ಎಂದುದೆ ? ಪ್ರಣವದರ್ಥವೆಂದರೆ ತಾನೆ ಏಕೆಂದರೆ ಪ್ರಣವ ಪ್ರಣವದರ್ಥವ ತಿಳಿವವನು ತಾನೆ, ಶಬ್ಧಮುಗ್ಧ. ಅದು ಎಂದು ಕಥನ ಮಾಡುವುದು ನಿರ್ವಾಣವು ಎಂದಾದರೂ ಕಥನ ಮಾಡಬಹುದೆ ? ಅದು ನಾಹಂ ಎನಲಿಲ್ಲ, ಕೋಹಂ ಎನಲಿಲ್ಲ, ಸೋಹಂ ಎನಲಿಲ್ಲ, ಬಹು ಸಾಧಕರು ಪ್ರಣವ ಎಂದರೆ ಸೋಹಂ ಎಂದು ಒಪ್ಪಿದವರು ಉಂಟು. ಇದಲ್ಲದೆ ಒಪ್ಪಿ ಸೋಹಂ, ಸೋಹಂ ಎಂದು ಸಾಧನ ಮಾಡುತ್ತಿಹರು. ಇಂಥವರು ಪ್ರಣವದರ್ಥವ ತಿಳಿವುದೆಂತು ? ಇನ್ನು ಕೆಲವರು ಪ್ರಣವಕ್ಕೆ ಚಿದಹಂ ಎಂದು ಅನ್ನುವವರು ಉಂಟು. ಪ್ರಭು ನಿಶಬ್ದವೇದಿ, ಶಬ್ದವೇದಕ್ಕೆ ಹೇಗೆ ಒಪ್ಪುವನು, ಕಲ್ಪಿತಕ್ಕೆ ನಿಲುಕದ್ದಾವುದೊ ಅದು ಪ್ರಣವ ಮಂತ್ರದರ್ಥ ತಿಳಿದವ ತಾನೆ, ಇದು ಕಾರಣ ಪ್ರಣವಮಂತ್ರದರ್ಥವ ತಿಳಿದು ನೋಡಿರೆಂದು ಎಚ್ಚರಿಸಿಹನು. ಆರು ತಿಳಿದು ನೋಡಿಹರು, ಶಬ್ದಮುಗ್ಧಘನವಾಗಿಹರು, ಪ್ರಣವ ಮಂತ್ರದರ್ಥವು ತಾನೆ ಮಯವು ಎಂದು ಹೇಳಿದುದು. ಈ ಮಂತ್ರದರ್ಥವ ತಿಳಿದವರು ತನ್ನ ತಿಳಿದವರು. ಅವರು ಲಿಂಗಕ್ಕೆ ಲಿಂಗವಾಗಿಹರು, ಅವರಿಗೆ ಕುರುಹಿನ ಘನವು ಉಳಿದಿರುವುದಿಲ್ಲ, ಅವರಿಗೆ ಹೆತ್ತರಿವು ಆಗಿರುವುದು. ಸಮತೆ ಸಯವಾಗಿಹ ದಿವ್ಯ ದೃಷ್ಟಿಯುಳ್ಳವರಾದುದರಿಂದ ತನಗಿಂತ ಅನ್ಯ ಆವುದು ಕಾಣದ್ದರಿಂದ ಅವರಲ್ಲಿ ಪೂಜ್ಯ ಪೂಜಕವೆಂಬ ಭೇದ ದೃಷ್ಟಿಗಿಂಬಿಲ್ಲ. ಅದು ಒಂದಾದ ದೃಷ್ಟಿ ನಾನೀನೆಂಬುದಕ್ಕೂ ತೆರಹಿಲ್ಲದ ದೃಷ್ಟಿಯಾಗಿಹುದು.

**113**

**ತೆರೆಯು ಮರೆಯು ಕುರುಹೆಂಬುದೇನೋ ?**
**ಒಳಗೆ ಲಿಂಗದನುವಿಡಿದ ಬಳಿಕ ಪೂಜಿಸುವ ಭಕ್ತನಾರೊ ?**

**ಪೂಜಿಸಿಕೊಂಬ ದೇವನಾರೊ ? ಮುಂದು ಹಿಂದು,**
**ಹಿಂದು ಮುಂದಾಯಿತ್ತು ಗುಹೇಶ್ವರ ನಾನು, ನೀನು;**
**ನೀನು ನಾನಾದ ಬಳಿಕ ಮತ್ತೇನುಂಟು ಹೇಳಾ.**

**ತಾತ್ಪರ್ಯ** : *ತೆರೆಯ ಮರೆಯ ಕುರುಹೆಂಬುದೇನೊ ? ಒಳಗೆ ಲಿಂಗದನುವಿಡಿದ ಬಳಿಕ ಪೂಜಿಸುವ ಭಕ್ತನಾರೊ ? ಪೂಜಿಸಿಕೊಂಬ ದೇವನಾರೊ:* ವೀರಶೈವನಲ್ಲಿ ಬಹಳಷ್ಟು ಲಿಂಗವಂತರು ಒಳಗೆ, ತನ್ನೊಳಗೆ ಲಿಂಗದನುವಿಡಿದವರು ಸಿಕ್ಕುವುದು ವಿರಳ, ಆರು ಲಿಂಗದನುವ ಹಿಡಿದಿಹರು ಅವರು ಅನುಪಮರಾಗಿಹರು, ನುಡಿಗೆಡೆಗೊಡದ ಘನವಾಗಿಹರು. ಲಿಂಗದರುವ ಹಿಡಿಯದ್ದರಿಂದ ಕೆಲಬರು ರೂಪಾಗಿ ಕಂಡಿಹರು, ಕೆಲಬರು ನಿರೂಪವಾಗಿ ಕಂಡಿಹರು. ಈರ್ವರು ಕುರುಹಾಗಿಯೆ ಕಂಡಿಹರು. ತನ್ನೊಳಗೆ ಲಿಂಗದನುವಿಡಿದು ನೋಡ ಹೋಗಲಿಲ್ಲ ಅದಕ್ಕಾಗಿ ವ್ಯಕ್ತವಾಗಿ ಅವ್ಯಕ್ತವಾಗಿ ಕಾಣ ಹತ್ತಿದರು. ಕುರುಹಾಗಿ ಕಂಡು ಪೂಜಿಸುವ ಭಕ್ತರೆ ಹೆಚ್ಚು, ನಿರೂಪವಾಗಿ ಕಂಡು ಪೂಜಿಸುವರು ಅತಿ ಕಡಿಮೆ, ಕೆಲಬರು ಲಿಂಗಯ್ಯನಲ್ಲಿ ಶಿವನ ಪಂಚಮುಖವ ಪ್ರತಿಬಿಂಬಿಸಿ ಪೂಜಿಸುವ ಭಕ್ತರು ಉಂಟು. ಸದ್ಯೋಜಾತ, ವಾಮದೇವ, ಅಘೋರ ತತ್ಪುರುಷ, ಈಶಾನ್ಯವೆಂಬ ಪಂಚ ಮುಖಗಳ ಲಿಂಗದಲ್ಲಿ ಜೋಡಿಸಿ ಅಂದರೆ ಆ ಮುಖಗಳನ್ನು ಆಹ್ವಾನ ಮಾಡಿಕೊಂಡು ಪೂಜಿಸುವ ಭಕ್ತರು ಇಹರು. ಕೆಲಬರು ಆತ್ಮನೆಂದು ಪರಮಾತ್ಮನೆಂದು ಘನನೆಂದು ಚೈತನ್ಯ ಸಚ್ಚಿದಾನಂದ ನಿತ್ಯ, ಪೂರ್ಣ ಅಖಂಡವೆಂದು ಸಂಬೋಧಿಸಿ ಪೂಜಾ ಮಾಡುವವರು ಉಂಟು. ಲಿಂಗಾರ್ಚಕರಲ್ಲಿ ಭಾವ ಪ್ರಧಾನವಾಗಿ ವಿಚಾರ ಗೌಣವಾಗಿದೆ. ಲಿಂಗವೆಂಬುದರಲ್ಲಿ ಅಷ್ಟೆ ಶ್ರದ್ಧೆ, ಭಕ್ತಿ, ಭಾವ ಇದೆ. ಆದರೆ ಭಾವಕ್ಕಗಮ್ಯವಾಗಿಹ ಘನ ಕಾಣಬೇಕೆಂಬ ಗುರಿ ಇಟ್ಟುಕೊಂಡವರು ಅತಿ ವಿರಳವಾಗಿಹರು. ಏಕೆಂದರೆ ಶೈವ ಆಚಾರ ಪ್ರಬಲವಾಗಿ ಭೇದಜ್ಞಾನ ನಷ್ಟವಾಗದಂತಾಗಿದೆ, ಸಕಲರಲ್ಲಿ ಪೂಜ್ಯ ಪೂಜಕ ಭಾವ ಬೇರೂರಿದೆ. ಇದು ಕಾರಣ ಲಿಂಗದನುವಿಡಿಯಲು ಬಾರದಂತಾಗಿದೆ.

ಲಿಂಗಾರ್ಚಕರಲ್ಲಿ ಮುಖ್ಯವಾಗಿ ಲಿಂಗಾಂಗ ಸಮರಸ ಜ್ಞಾನ ಚೆನ್ನಾಗಿ ಅಳವಡಿಸಿಕೊಂಡಿರಬೇಕು. ಇದರಿಂದ ಅನುಪಮ ಜ್ಞಾನ, ಅಖಂಡಿತ ಜ್ಞಾನ ಲಭ್ಯವಾಗುವುದು. ಆಗ ಲಿಂಗ ಕುರುಹಿನಿಂದುಕ್ತವಾದುದಲ್ಲ, ಸೀಮಿತದಿಂದುಕ್ತವಾದುದಲ್ಲವೆಂದು ಯತಾರ್ಥ ತಿಳಿವನು.

ತೆರೆಯ ಮರೆಯ ಕುರುಹೆಂಬುದು ಲಿಂಗ ತಿಳಿದವರಲ್ಲ ಅವರು ಭಾವಿಕರು. ಇವರು ಒಬ್ಬರನ್ನೊಬ್ಬರು ಕಲ್ಪಿಸಿಕೊಂಡಿಹ ಭಾವ, ಅರಿದರಿದು ತನ್ನಿಂದ ನೋಡಿದವರಲ್ಲ ಅವರು ಪೂಜಾಲಿಂಗವ ರೂಪವೆಂದು ಭಾವಿಸಲಿ, ವಿರೂಪವೆಂದು ಭಾವಿಸಲಿ, ಸಚ್ಚಿದಾನಂದ, ಚೈತನ್ಯವೆಂದು ಭಾವಿಸಲಿ, ಆತ್ಮನೆಂದು ಕಾಣಲಿ, ಲಿಂಗದನುವಿಡಿಯಲಿಲ್ಲ, ಅದಕ್ಕಾಗಿ ಭಾವ ಪ್ರಧಾನವಾದಾಗ ಭಾವಕ್ಕಗಮ್ಯವಾದ ಘನದಿರುವು ಲಿಂಗದನುವು, ಈ ಲಿಂಗದನುವು ಮಾತಿಲ್ಲದವನ ಕೂಡ ಮಾತಾಡ ಹೋದುದು, ಆಗ ತನ್ನ ಮಾತೆಲ್ಲ ನಿಷ್ಪ್ರಯೋಜಕ, ಭಾವ ನಿಷ್ಪ್ರಯೋಜಕವೆಂಬುದು ತಿಳಿದುದರಿಂದ ಲಿಂಗಸ್ವರೂಪ ಭಾವಕ್ಕಗಮ್ಯವು, ಆಗ ಪೂಜಾಲಿಂಗ ಘನವಾಗಿ ತೋರದು, ಏಕೆಂದರೆ ಲಿಂಗವು ತನ್ನಿಂದ

ಬೆಳಗಿಸಿಕೊಳ್ಳುವುದಾಗಿದೆ. ತಾನು ಬೆಳಗುಳ್ಳ ಘನವಾಗಿಹನು. ಅದು ಘನವಾದರೆ ತಾನು ಘನಕ್ಕೆ ಘನನಾಗಿಹನು. ಅದು ಚೈತನ್ಯವಾದರೆ ತಾನು ನಿಜ ಚೈತನ್ಯನಾಗುವನು. ಹೀಗೆ ತನ್ನೊಳಗೆ ಲಿಂಗದನುವಿಡಿದ ಬಳಿಕ ಆಗ ಪೂಜಿಸುವ ಭಕ್ತನಾರೊ ? ಪೂಜಿಸಿಗೊಂಬ ದೇವನಾರೊ ? ಎಂಬ ಅರಿವು ಪ್ರಜ್ವಲಿಸುವುದು.

ಅಖಂಡಿತ ಘನವು ಅಲ್ಲಿ ಎರಡಾದುದುಂಟೆ ? ಅನುಪಮವಾಗಿಹ ಘನದಿರುವಿನಲ್ಲಿ ಪೂಜಿಸಿಕೊಂಬ ದೇವನಾರು ? ಪೂಜಿಸುವ ಭಕ್ತನಾರು ? ಅಕಲ್ಪಿತ ಘನದಲ್ಲಿ ಕಲ್ಪಿತವ ಕಾಣಬಾರದು. ಆರು ಅಖಂಡಿತವಾಗಿಹ ಘನಲಿಂಗದಲ್ಲಿ ಎರಡಾಗಿ ಕಂಡಿಹರು ಅವರು ಲಿಂಗದನುವು ಹಿಡಿಯದವರು, ಅರಿತವಂಗೆ ಖಂಡಿತ ದೃಷ್ಟಿ ಇಲ್ಲ, ಒಂದಾದ ದೃಷ್ಟಿ. ಅಲ್ಲಿ ಪೂಜಿಸಿಕೊಂಬ ದೇವನಿಲ್ಲ, ಪೂಜಿಸುವ ಭಕ್ತನಿಲ್ಲ.

ಮುಂದು ಹಿಂದು, ಹಿಂದು ಮುಂದಾಯಿತ್ತು : ಮುಂದು ಆವುದು, ಅದು ಹಿಂದು ಆವುದು ? ಹಿಂದು ಅದು ಮುಂದು. ಮುಂದು ಅದು ಪೂಜಿಸಿಕೊಂಬ ದೇವ, ಹಿಂದು ಅದು ಪೂಜಿಸುವ ಭಕ್ತ. ಪೂಜಿಸಿಕೊಂಬ ದೇವ ಘನನಾಗಿದ್ದ. ಪೂಜಿಸುವ ಭಕ್ತ ಕಿರಿದಾಗಿದ್ದ. ಈಗ ಹಿಂದು ಮುಂದಾಯಿತ್ತು, ಹಿಂದು ಎಂದಲ್ಲಿ ಹೆತ್ತರಿವು ; ಮುಂದು ಎಂದಲ್ಲಿ ಸ್ವಯಮೇವ ಅರಿವು ಆಗಿಹನು. ಲಿಂಗ ಬೆಳಗು ಆದರೆ, ಭಕ್ತನು ಬೆಳಗಿನ ಬೆಳಗು ಆಗಿಹನು. ಲಿಂಗವು ಮೌನವಾದರೆ ತಾನು ಭಕ್ತನು ಮೌನದ ಮೌನೇಶನಾಗಿಹನು.

ಪೂರ್ವದಲ್ಲಿ ಲಿಂಗವು ಸ್ವಯಂ ಪ್ರಕಾಶವಾಗಿತ್ತು, ತಾನು ಪರಪ್ರಕಾಶನಾಗಿದ್ದನು. ಎರವಲ ಜ್ಯೋತಿಯಾಗಿದ್ದನು. ಈಗ ಲಿಂಗವೆಂಬುದು ಎರವಲ ಜ್ಯೋತಿಯಾಗಿದೆ. ತಾನು ಸ್ವಯಂಜ್ಯೋತಿ ಲಿಂಗವಾಗಿಹನು. ಇದು ಕಾರಣ ಮುಂದು ಹಿಂದು, ಹಿಂದು ಮುಂದಾಯಿತ್ತು. ಲಿಂಗವೆ ಬೆಳಗಿಸಿಕೊಳ್ಳುವದಾಗಿದೆ. ತಾನೆ ಬೆಳಗುಳ್ಳ ಘನವಾಗಿಹನು. ಲಿಂಗವು ಅರುವು ಆದರೆ, ತಾನು ಅರುವಿಂಗರುವು ಆಗಿಹನು. ಲಿಂಗವು ದ್ರಷ್ಟವಾದರೆ ತಾನು ದ್ರಷ್ಟಕ್ಕೆ ದ್ರಷ್ಟನಾಗಿಹನು.

ಗುಹೇಶ್ವರಾ ನಾನು ನೀನು, ನೀನು ನಾನಾದ ಬಳಿಕ ಮತ್ತೇನುಂಟು ಹೇಳಾ:

ಗುಹೇಶ್ವರನನ್ನು ಯತಾರ್ಥವಾಗಿ ಅರಿದಿಹ ದೃಷ್ಟಿ ಪ್ರಭುವಿನದು ದಿವ್ಯದೃಷ್ಟಿ. ತನ್ನ ದೇಹದೊಳಗೆ ಒಡೆಯನಾಗಿಹ ಘನಲಿಂಗವರಿಯ ಹೋಗಿ ತಾನು ಅದುವೆ ಆಗಿಹ ಮಹಾಂತ. ಗುಹೇಶ್ವರನನ್ನು ಪ್ರಭು, ಎರಡಾಗಿ ಕಾಣಲಿಲ್ಲ ಒಂದಾಗಿ ಕಾಣಲಿಲ್ಲ, ತಾನಾಗಿ ಕಂಡನು. ಗುಹೇಶ್ವರನನ್ನು ದೃಶ್ಯವಾಗಿ ತಿಳಿಯಲಿಲ್ಲ, ದೃಕ್ಕಾಗಿ ತಿಳಿಯಲಿಲ್ಲ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವಾಗಿಕಂಡು ತಾನು ಘನವಾಗಿ ಅರಿದರಿದ ದೃಷ್ಟಿ. ಅಲ್ಲಮಪ್ರಭು ನಿಶಬ್ದವೇದಿ. ಗುಹೇಶ್ವರ ನಿಶಬ್ದ ಘನವಾಗಿಹ ನಿಲವು. ಎರಡು ಒಂದಾದ ನಿಲುವು, ಅರಿವು ಇರುವು ಒಂದೆ ಒಂದಾದುದು ಉಪಮೆಗೆ ತರಬಾರದು ನೋಡಾ.

ಪ್ರಭುವೆಂದರೆ ಗುಹೇಶ್ವರ, ಗುಹೇಶ್ವರನೆಂದರೆ ಪ್ರಭು. ಈರ್ವರ ನಿಲುವು ಒಂದಾಗಿಹ ಘನವಾದುದರಿಂದ ನಾನು ಎಂದಲ್ಲಿ ನೀನು, ನೀನು ಎಂದಲ್ಲಿ ನಾನು, ಈ ನಾನು ನೀನು, ಈ ನೀನು ನಾನು ತೆರಹಿಲ್ಲದ ಘನವು. ಈ ತೆರಹಿಲ್ಲದ ಘನವೆ ನಾನು

ನೀನು, ನೀನು ನಾನಾದ ಬಳಿಕ ಮತ್ತೇನುಂಟು ಹೇಳಾ. ಅನುಪಮವಾಗಿಹ ಘನದಿರುವಲ್ಲಿ ಉಪಮೆಯು ನಿಸ್ಸಾರವು ಎಂದು ಹೇಳಿದೆ.

ಬಹುವೀರಶೈವರಲ್ಲಿ ಲಿಂಗವು ಕೊಡುವ ಕೊಳ್ಳುವ ವಿಧಿ ವಿಧಾನದಿಂದುಕ್ತವಾದುದು ಎಂದು ತಿಳಿದಿಹರು. ಲಿಂಗ ಸಕೀಲ ಸಂಯೋಗವರ್ಮಸ್ಥಲವ ಇವರೆತ್ತಬಲ್ಲರು. ಲಿಂಗವು ಕೊಡಲುಂಟೆ ಕೊಳಲುಂಟೆ ಏ ಏ ಹೇಳಾ ? ಹಿಡಿವುಡೆ ಸಿಕ್ಕದು, ಕೊಡುವುಡೆ ಹೋಹದು, ವ್ಯವಹಾರದ ಆಟಕ್ಕೆ ಆಸ್ಪದವು ಇಲ್ಲಿಬಾರದು. ಆವುದು ಕುರುಹಿನಿಂದುಕ್ತವಾಗಿದೆ ಅಲ್ಲಿ ವ್ಯವಹಾರ ಅಂದರೆ ಲಿಂಗ ಕೊಡಲುಂಟು, ಕೊಳಲು ಉಂಟು. ಲಿಂಗವು ತನ್ನಿರುವು ಅರಿವು ಆಗಿರುವಲ್ಲಿ ಲಿಂಗವ ಹೊಸದಾಗಿ ಕೊಡುವುದು ಆರಾರಿಗೂ ಇಲ್ಲ ನೋಡಾ.

**114**

**ಇಂದೆನ್ನ ಗುರು ಅನಿಮಿಷಂಗೆ, ಲಿಂಗವ ಕೊಟ್ಟೆನೆಂಬ ಸೂತಕ ಬೇಡ,**
**ಅದು ಅನಿಮಿಷನು ನಿನ್ನ ಕೈಯಲ್ಲಿದ್ದುದ ತಕ್ಕೊಂಡನೆಂಬ ಸಂಕಲ್ಪ ಬೇಡ,**
**ಹಿಂದು ಮುಂದೆಂಬ ಸಂದಳಿದು ನಿಜದಲ್ಲಿ ಭರಿತನಾದ ಬಳಿಕ ಕೊಡಲುಂಟೆ ?**
**ಕೊಳಲುಂಟೆ ಹೇಳಾ ? ಹಿಡಿವಡೆ ಸಿಕ್ಕದು, ಕೊಡುವುಡೆ ಹೋಗದು,**
**ಎಡೆಯಾಟದ ವ್ಯವಹಾರಕ್ಕೆ ಬಾರದು ನೋಡಾ. ರೂಪಿನ ಸಂಚವ ಕೆಡಿಸಿ**
**ನಿರೂಪ ಸಂಗವಾಯಿತ್ತು. ನಿನಗೆ ಗುಹೇಶ್ವರನೆಂಬ ಲಿಂಗವ ನಿನಗಿನ್ನು**
**ಹೊಸದಾಗಿ ಕೊಡಲುಂಟೆ ? ಹೇಳಾ ಸಂಗನ ಬಸವಣ್ಣ.**

**ತಾತ್ಪರ್ಯ** : *ಇಂದೆನ್ನ ಗುರು ಅನಿಮಿಷಂಗೆ ಲಿಂಗವಕೊಟ್ಟೆನೆಂಬ ಸೂತಕ ಬೇಡ* : ಅದು ಅನಿಮಿಷನು ನನ್ನ ಕೈಯಲ್ಲಿದ್ದುದ ತಕ್ಕೊಂಡನೆಂಬ ಸಂಕಲ್ಪ ಬೇಡ, ಪೂರ್ವದ ವೀರಶೈವರ ಲಿಂಗ ಸಂಸ್ಕಾರಕ್ಕೂ ಈಗಿನ ಸಂಸ್ಕಾರಕ್ಕೂ ಎಷ್ಟು ಮಹದಂತರ. ಬಹು ಲಿಂಗಾರ್ಚಕರು ಹೀಗೆ ತಿಳಿದಿಹರು. ಲಿಂಗವ ಗುರು ಕೊಟ್ಟಿಹನು, ಶಿಷ್ಯರು ತಕ್ಕೊಂಡಿಹರೆಂಬ ಈ ಎಡೆಯಾಟದ ವ್ಯವಹಾರ ಅಷ್ಟು ದೃಢತರವಾಗಿದೆ. ಇದರಿಂದ ಮೂಲವಾಗಿಹ ಪರತತ್ವದ ತಿರುಳಿನ ಸಂಸ್ಕಾರವೆ ಕುಗ್ಗಿ ಕುಸಿದು, ಒಲವಿಲ್ಲವಾಗಿ ಕರ್ಮಠರ ಸಂಸ್ಕಾರವಾಗಿದೆ. ಇದೊಂದು ಸಮಯಾಚಾರದ ಪ್ರಭಾವವು.

ಲಿಂಗದಿರುವಿನ ಅರುವು ತಿಳಿಸಿಕೊಡುವುದೆಂದರೆ ಅಸಾಮಾನ್ಯ ವ್ಯವಹಾರ. ಹೃದಯದ ವ್ಯವಹಾರ, ಅರು ಹೃದಯದ ವ್ಯವಹಾರ, ಹೃದಯದ ಹೃದಯವಾಗಿಹ ವ್ಯವಹಾರ, ಮಹಾಲಿಂಗದರುವು ಅದು ಅರುವ ಅರಿದ ತಿರಳು, ಅದನಾರು ಕೊಟ್ಟರು, ಅದನಾರು ತಕ್ಕೊಂಡರು, ಅದು ಕೊಡಕೊಳ್ಳುವ ವ್ಯವಹಾರಕ್ಕೊಳಪಡಬಹುದೆ ? ಈ ಗುರುವರ್ಗದವರು ಲಿಂಗವ ತಿಳಿದಿಹರೆ ? ಲಿಂಗ ಸಕೀಲ ಸಂಯೋಗ ವರ್ಮಸ್ಥಲವರಿತಿರುವರಾ ? ಅಥವಾ ಶ್ರೀಗುರುವಿನಿಂದ ಲಿಂಗರಹಸ್ಯವ ತಿಳಿದಿಹರೆ ? ಅಥವಾ ಇವರುಗಳಿಗೆ ಶ್ರೀಗುರುದರ್ಶನವಾದರೂ ಆಗಿದೆಯೋ ಹೇಗೆ ತಿಳಿಯದಾಗಿದೆ. ನಿಜವಾದ ಲಿಂಗಜ್ಞಾನದಿಂದ ಇವರು ದೂರವಾಗಿಹರಲ್ಲ ? ಏಕೆಂದರೆ ಲಿಂಗಸ್ಥೂಲವೆಂಬರು

ಕೆಲಬರು, ಲಿಂಗಸ್ಥೂಲವಲ್ಲ, ಲಿಂಗ ಸೂಕ್ಷ್ಮವೆಂಬರು ಕೆಲಬರು, ಲಿಂಗ ಸೂಕ್ಷ್ಮವಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪು ಪರಾನಂದ ಪರಬ್ರಹ್ಮವೆ ಲಿಂಗವೆಂದರಿದ ಅರಿವು ಅಖಂಡರೂಪು ನಿಜಗುರು, ಸ್ವತಂತ್ರ ಸಿದ್ಧಲಿಂಗೇಶ್ವರ ನಿಲವು ತಾನೆ ಬೇರಲ್ಲ.

ಲಿಂಗ ಸ್ಥೂಲವೆಂಬುವರಿಗೆ ಪರಿಚಯವಿಲ್ಲ, ಲಿಂಗ ಸೂಕ್ಷ್ಮವೆಂಬವರಿಗೂ ಪರಿಚಯವಿಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪು, ಪರಾನಂದ ಪರಬ್ರಹ್ಮವೆ ಲಿಂಗವೆಂದರಿದ ಅರಿವು ಅಖಂಡ ರೂಪುಳ್ಳ ಇರುವಿನ ರಹಸ್ಯವ ತಿಳಿಸಿಕೊಡುವ ಶ್ರೀಗುರು, ತಿಳಿಯುವ ಶಿಷ್ಯ ಅನುಪಮರು. ಇಂತಪ್ಪ ಮಹಾನುಭವದ ಸಮ್ಮೇಳನವ, ಹೃದಯದ ಹೃದಯವಾಗುವ ಸಂಬಂಧ ಅರಿಯದರುವುಳ್ಳ ಸಂಬಂಧ, ಇದು ಕಾರಣ ಗುರು ಸಿಕ್ಕಬಹುದು, ಶ್ರೀಗುರು ಸಿಕ್ಕುವುದು ವಿರಳ. ಹಾಗೆ ಭಕ್ತರು ಸಿಕ್ಕಬಹುದು ಅಪೂರ್ವಿಕ ಭಕ್ತರು ಸಿಕ್ಕುವುದು ವಿರಳ.

ಅಪೂರ್ವಿಕ ಗುರು, ಅಪೂರ್ವಿಕ ಶಿಷ್ಯ, ಅಪೂರ್ವಿಕ ಭಕ್ತ, ಅಪೂರ್ವಿಕ ಜಂಗಮ ಇವರದು ಅಪೂರ್ವಲಿಂಗ ಸಂಬಂಧ. ಮಹದರುವಿನ ಸಂಬಂಧವಾದುದರಿಂದ ಇಂತಪ್ಪ ನಿಸ್ಸೀಮರು ಸಿಕ್ಕುವುದು ವಿರಳ. ಪೂರ್ವಿಕ ಪೂಜಕರು, ಈ ಪೂರ್ವಿಕ ಗುರುಗಳು ಶಿಷ್ಯರು ಸಿಕ್ಕುವರು. ಭಕ್ತ ಜಂಗಮರು ಸಿಕ್ಕುವರು. ಇವರದು ಗುರು ಲಿಂಗ ಕೊಟ್ಟಿದ್ದಾನೆ; ಶಿಷ್ಯ ತಕ್ಕೊಂಡಿದ್ದಾನೆ. ಈ ಸಾಂಪ್ರದಾಯವೆ ಹೆಚ್ಚಾಗಿದೆ. ಈ ಸಾಂಪ್ರದಾಯದ ಮೌಢ್ಯತನವು ಪ್ರಭುವಿಂಗೆ ಅದೆಂತು ಒಪ್ಪಿಗೆಯಾಗುವುದು. ಇಂದೆನ್ನ ಗುರು ಅನಿಮಿಷಂಗೆ, ಲಿಂಗವ ಕೊಟ್ಟೆನೆಂಬ ಈ ದೋಷ ಬುದ್ಧಿ ಬೇಡ. ಅಂದು ಅನಿಮಿಷನು, ನಿನ್ನ ಕೈಯಲ್ಲಿದ್ದುದ ತಕ್ಕೊಂಡನೆಂಬ ವಿಚಾರ ಬೇಡ, ಭಾವ ಬೇಡ, ಲಿಂಗವು ಜ್ಞಾನರೂಪು. ಪರಾನಂದ. ಅದಕ್ಕೆ ಹಿಂದಾವುದು ಮುಂದಾವುದು, ಬಯಲಿಂಗೆ ಹಿಂದಾವುದು ಮುಂದಾವುದು. ಕೊಟ್ಟವರಾರು ತಕ್ಕೊಂಡವರಾರು ? ಅಂದು, ಇಂದು ಎಂದೆಂದೂ ಇದ್ದಂತಿದ್ದ ಘನ. ಅದು ಕುರುಹುಳ್ಳದ್ದಾಗುವುದೆ ಪೂಜಾಲಿಂಗವಾಗುವುದೆ ? ಜ್ಞಾನರೂಪು ಪರಾನಂದಪರಬ್ರಹ್ಮವೆಂದರಿದ ಅರುವು ಅದು ಅಖಂಡಲಿಂಗವಿರುವಲ್ಲಿ ಶ್ರೀಗುರು ತೆರೆಯ ಕುರುಹಾಗಿ ಹೇಗೆ ಕ್ಕೊಟನು. ಮರೆಯ ಕುರುಹಾಗಿ ಹೇಗೆ ಕೊಟ್ಟನು, ಇದು ತನ್ನಯ ನಿಜವರಿದ ಅರುವು, ಇರುವು ; ನಿರಂತರವಾಗಿದ್ದ ಘನದಿರುವು. ಇದು ಪೂರ್ವದಲ್ಲಿ ಇರಲಿಲ್ಲವೆ ? ಈಗ ಗುರುವರ್ಗವು ಹೃದಯದಲ್ಲಿ ತಂದು ಹಾಕಿದರೆ ? ಅದು ಇದ್ದಂತಿದ್ದ ಘನ. ತಾನೆ, ತನ್ನ ನಿಜದಿರುವು ಮರೆತುದರಿಂದ ಅದನ್ನು ಸುಜ್ಞಾನದಿಂದ ತಿಳಿಯಲು ಶ್ರೀಗುರು ಕರುಣಿಸಬೇಕಲ್ಲದೆ ಅದನ್ನು ಕುರುಹ ಮಾಡಿ ಪೂಜಾಲಿಂಗವ ಮಾಡಿ ಕರುಣಿಸಿಹನೆಂದರೆ ಹೃದಯ ಒಪ್ಪಬಹುದೆ ? ಹೃದಯದಲ್ಲಿದ್ದ ದೋಷ ಪೂಜಾಲಿಂಗವ ಪೂಜಿಸಿದರೆ ಅದು ಹೋಹುದೆ ? ಅದಕ್ಕಾಗಿ ಪ್ರಭುದೇವ ಜ್ಞಾನರೂಪು, ಪರಾನಂದ ರೂಪಿ ಲಿಂಗ ಪರಬ್ರಹ್ಮವೆ ಲಿಂಗವೆಂದರಿದ ಅರುವು ಅದು ಅಖಂಡ ರೂಪವಿರುವಲ್ಲಿ ಅದು ಹಿಡಿದಡೆ ಸಿಕ್ಕದು, ಕೊಡುವುಡೆ ಹೋಹುದು, ಕೊಡಕೊಳ್ಳುವ ವ್ಯವಹಾರ ಭ್ರಾಂತಿ ವ್ಯವಹಾರ. ಮರುವಿನ ವ್ಯವಹಾರ, ಅಲ್ಲಿ ಈ ಭ್ರಾಂತರ ಕೂಟಕ್ಕೆ ಆಸ್ಪದವಿಲ್ಲ, ಲಿಂಗ ಕೊಡುವೆನೆಂಬುವನೊಬ್ಬ ಭ್ರಾಂತ, ಗುರು ತಂದೆ ಕೊಟ್ಟನೆಂಬುವನೊಬ್ಬ ಭ್ರಾಂತ, ಈ ಭ್ರಾಂತರ ವ್ಯವಹಾರ ಸುಜ್ಞಾನಿಗಳಲ್ಲಿ ಆಸ್ಪದವುಂಟೆ ?

ರೂಪವ ಸಂಚಯ ಕೆಡಿಸಿ ನಿರೂಪ ಸಯವಾಯಿತ್ತು : ಲಿಂಗ ಜ್ಞಾನ ರೂಪ, ಇದು ಸುಜ್ಞಾನ ; ಅರುವ ಅರಿಯುವ ಜ್ಞಾನ . ಇದು ಜ್ಞಾನ ಸ್ವರೂಪವರಿತ ಪರಾನಂದ ಪರತತ್ವ, ಅಲ್ಲಿ ರೂಪಕೆಡಿಸುವ ರಹಸ್ಯವೆ ಮುಖ್ಯವಾಗಿದೆ. ನಿರೂಪ ತನ್ನಯ ಅರಿವು ಆಗಿದೆ. ರೂಪವು ಆವುದೆ ಇರಲಿ, ಸ್ಥೂಲವಿರಲಿ, ಅದು ಭಾವವಿರಲಿ ಅಭಾವವಿರಲಿ, ಸ್ಮೃತಿಗೊಳಪಟ್ಟುದು, ವಿಸ್ಮೃತಿಗೊಳಪಟ್ಟುದು. ಇದು ರೂಪವನ್ನು ಸಂಬಂಧಿಸಿದ ನೆನಹು ಆಗಿದೆ, ನಿರ್ಣಯವಾಗಿದೆ, ಚಿಂತನ ಮಾಡುವ ಚಿತ್ತವಾಗಿದೆ. ಭಾವಿಸುವ ಭಾವನೆಯಾಗಿದೆ, ಕಲ್ಪಿಸುವ ಕಲ್ಪಿತವಾಗಿದೆ, ಇವನ್ನೆಲ್ಲ ಕೆಡಿಸಿ, ತನ್ನಯ ಜ್ಞಾನರೂಪ, ಪರಾನಂದ ಘನದಿರುವು ಪ್ರಜ್ವಲಿಸುವುದೆ ಮುಖ್ಯಗುರಿಯಾದುದರಿಂದ ನಿಜಗುರು, ಸ್ವತಂತ್ರ ಸಿದ್ಧಲಿಂಗೇಶ್ವರ ನಿಲವು ತಾನೆ ಬೇರಲ್ಲ ಎಂದು ಬಿತ್ತರಿಸಿದುದು ನೋಡುವುಡೆ ಗುರು ಘನನ ಕೃಪೆ ನಿಜತತ್ವವ ಯತಾರ್ಥವಾಗಿ ವಿದಿತ ಮಾಡಿಕೊಡುವುಡೆ ತಾನೆ ಸ್ವತಂತ್ರ. ತಾನೆ ಸ್ವತಃಸಿದ್ಧ, ತಾನೆ ಲಿಂಗ, ತಾನೆ ಘನವೆಂಬುದು ಬಸವಣ್ಣ ನೀನೆ ಇರುವಲ್ಲಿ ಗುಹೇಶ್ವರನೆಂಬ ಲಿಂಗವ ನಿನಗಿನ್ನು ಹೊಸದಾಗಿ ಕೊಡಲುಬರುವುದೆ ? ಸಂಗನಬಸವಣ್ಣ.

ಸಂಗನಬಸವಣ್ಣ ಗುಹೇಶ್ವರನೆಂಬ ಲಿಂಗವ ನಿನಗಿನ್ನು ಹೊಸದಾಗಿ ಕೊಡಲುಂಟೆ ? ಎಂದು ಪ್ರಭುದೇವ ಬಿತ್ತರಿಸಿದುದು ನೋಡುವುಡೆ ಪ್ರಭು ಬಸವಣ್ಣನ ಘನವ ತಿಳಿದಿರುವುದರಿಂದ ಎನ್ನ ಪೂರ್ವಾಪರವ ನಿಮ್ಮಿಂದ ಅರಿಯಲೆಂದು ಬಂದು ನಿಮ್ಮ ಮರೆ ಹೊಕ್ಕೆನಾಗಿ ಸಂಗನಬಸವಣ್ಣನ ಮಹಿಮೆ ನಾನೆತ್ತ ಬಲ್ಲೆನು, ಗುಹೇಶ್ವರ ಸಾಕ್ಷಿಯಾಗಿ, ಸಂಗನ ಬಸವಣ್ಣ ನಿನ್ನ ಅಂತರಂಗದೊಳಗೆ ಬೆಳಗುತ್ತೈದಾನೆ ಎನಗೊಮ್ಮ ಬಸವಣ್ಣನ ಘನವ ತಿಳುಹಿಕೊಡಾ ಚೆನ್ನಬಸವಣ್ಣ ಎಂದು ಕೇಳಿಕೊಂಡಿಹನು.

**115**

**ಅದ್ವೈತವೆಂಬ ಶಿಶುವೆನ್ನ ಕರಸ್ಥಲವ ಸೋಂಕಲೊಡನೆ**
**ಎನ್ನ ತನ್ನಂತೆ ಮಾಡಿತ್ತಾಗಿ,**
**ಎನ್ನ ನಾನೆಂಬ ವಿಚಾರವು ಅರಿತು ಹೋಯಿತ್ತು ಕೇಳಾ.**
**ಮತ್ತೆ ಅನ್ಯವಿಚಾರವನೆಂತೂ ಅರಿಯೆನು.**
**ಎನ್ನ ಪೂರ್ವಾಪರವ ನಿಮ್ಮಿಂದಲರಿಯಲೆಂದು ಬಂದು**
**ನಿಮ್ಮ ಮೊರೆಹೊಕ್ಕೆನಾಗಿ,**
**ಸಂಗನ ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು?**
**ಗುಹೇಶ್ವರನ ಸಾಕ್ಷಿಯಾಗಿ**
**ಸಂಗನಬಸವಣ್ಣ ನಿಮ್ಮ ಅಂತರಂಗದೊಳಗೆ ಬೆಳಗುತ್ತೈದಾನೆ.**
**ಎನಗೊಮ್ಮೆ ಬಸವಣ್ಣನ**
**ಘನವ ತಿಳುಹಿ ಕೊಡಾ ಚೆನ್ನ ಬಸವಣ್ಣಾ.** ॥ 756 ॥

**ತಾತ್ಪರ್ಯ** : ವೀರಶೈವರಲ್ಲಿ ಅರುವನರಿಯ ಹೇಳಿ ಶ್ರೀಗುರು ಕರಕಮಲದಲ್ಲಿಟ್ಟ ಲಿಂಗ ಘನವ ಮಹಾತ್ಮರು ಅರಿದರಿದು ನಾನಾವಿಧದಲ್ಲಿ ಸೂಚಿಸಿಹರು. ಅವರೆಲ್ಲರೂ

ಗುರುಕರುಣಿಸಿದ ಲಿಂಗವ ತಮ್ಮ ದಿವ್ಯದೃಷ್ಟಿಯಿಂದ ನೋಡಿದವರು ಒಬ್ಬ ಮಹಾಂತ ಒಂದು ರೀತಿಯಲ್ಲಿ ಸಂಜ್ಞೆ ಬಿತ್ತರಿಸಿದರೆ ಕೆಲರು ಮತ್ತೊಂದು ವಿಧದಲ್ಲಿ ಸಂಜ್ಞೆ ಸೂಚಿಸಿಹರು.

ಬಸವರಾಜದೇವರು ಶ್ರೀಗುರು ಕರುಣಿಸಿದ ಲಿಂಗವ ವೇದ ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ನಾದ ಬಿಂದು ಕಳೆಗಳಿಗ ಭೇದ್ಯವಾದ ಅಚಲಿತ ಲಿಂಗವ ತಂದು ಕೊಟ್ಟನಯ್ಯ, ಸದ್ಗುರು ಎನ್ನ ಕರಸ್ಥಲಕ್ಕೆ ವಾಙ್ಮನಕ್ಕಗೋಚರವಾದ ಅಖಂಡಿತ ಲಿಂಗವ ತಂದುಕೊಟ್ಟನಯ್ಯ, ಸದ್ಗುರು ಎನ್ನ ಕರಸ್ಥಲಕ್ಕೆ. ಇನ್ನು ನಾನು ಬದುಕಿದೆನು. ನಾ ಬಯಸಿದ ಬಯಕೆ ಕೈಸಾರಿತಿಂದು ಕೂಡಲಸಂಗಮದೇವಾ ಎಂದು ಬಿತ್ತರಿಸಿಹನು.

ಇನ್ನು ಕೆಲರು ಲಿಂಗಸ್ಥೂಲವೆಂಬರು, ಸ್ಥೂಲವಲ್ಲ ಸೂಕ್ಷ್ಮವೆಂಬರು ಸೂಕ್ಷ್ಮವಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪ ಪರಾನಂದ ಪರಬ್ರಹ್ಮವೆಂದರಿದ ಅರಿವು ಅಖಂಡರೂಪು, ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರನ ನಿಲವು ತಾನೆ ಬೇರಿಲ್ಲ. ಹೀಗೆ ಶ್ರೀಗುರು ಕೊಟ್ಟ ಸಂಜ್ಞೆ ನೋಡಿದರೆ ಒಂದೆ ಆಗಿದೆ. ರೂಪು ಒಂದೆ ಆಗಿದೆ. ಇರುವು ಒಂದೆ ಆಗಿದೆ. ತಿರುಳು ಒಂದೆಯಾದರೂ ನೋಡಲು ಶಬ್ದದಿಂದ ಬೇರೆಯಾಗಿ ಕಾಣುತ್ತದೆ. ಬಸವಣ್ಣ ಲಿಂಗಕ್ಕೆ ಅಖಂಡ, ಅನುಪಮ, ಅಚಲಿತ ಎಂದು ಸಂಜ್ಞೆಯ ಸೂಚಿಸಿದ. ಕೆಲರು, ಲಿಂಗ ಸ್ಥೂಲವಲ್ಲ, ಸೂಕ್ಷ್ಮವಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪ ಪರಾನಂದ ಪರಬ್ರಹ್ಮವೆಂದರಿದ ಅರಿವು ಅಖಂಡರೂಪು ತಾನೆ, ಸ್ವತಂತ್ರ ತಾನೆ ಸ್ವತಃಸಿದ್ಧ ತಾನೆ, ಅಕ್ಷರಕ್ಷರ ತಾನೆ ಎಂದು ಹೇಳಿಕೊಂಡಿಹರು.

ಇಲ್ಲಿ ಪ್ರಭುದೇವ ಅದ್ವೈತವೆಂಬ ಶಿಶು ಎಂದು ಸಂಬೋಧಿಸಿಹನು. ಇದಲ್ಲದೆ ನಿರಾಳವೆಂಬ ಕೂಸು ಎಂದು ಲಿಂಗಕ್ಕೆ ಸಂಬೋಧಿಸಿಹನು. ಇದಲ್ಲದೆ ಎನ್ನ ತನ್ನಂತೆ ಮಾಡಿತ್ತಾಗಿ ಅನ್ಯ ವಿಚಾರವನೊಲ್ಲೆನಯ್ಯ ಎಂದು ಹೇಳಿಕೊಂಡುದು ನೋಡುವುಡೆ ಇಲ್ಲಿ ಕಲ್ಪಿತವೆ ಕೊನೆಗೊಂಡಿದೆ. ಅದ್ವೈತವೆಂಬ ಶಿಶು ತನ್ನ ಕರಸ್ಥಲವ ಸೋಂಕಲೊಡನೆ ಎನ್ನ ತನ್ನಂತೆ ಮಾಡಿತ್ತಾಗಿ ಎಂದು ಸೂಚಿಸಿದುದು ನೋಡುವುಡೆ ; ಈ ಪ್ರಭುವಿನ ದೃಷ್ಟಿ ಅದಾರಿಗೆ ! ಶ್ರೀಗುರು ಕರುಣಿಸಿದ ಲಿಂಗ, ಅದ್ವೈತ ಶಿಶು ಆಯಿತೆ ! ಮೌನ ಮುದ್ರಿತವಾಗಿಹ ಶಿಶುವಾಯಿತೆ ! ಅದ್ವೈತವೆಂಬ ಸಂಜ್ಞೆ ಅಷ್ಟೆ ಗಹನಾರ್ಥವು ಶಿಶು ಎಂಬುದು ಅಷ್ಟೇ ರಹಸ್ಯಾರ್ಥದಿಂದುಕ್ತವಾದುದು. ಇದು ಸೋಂಕಲೊಡನೆ ಅಲ್ಲಮನನ್ನು ತನ್ನಂತೆ ಮಾಡಿತ್ತೆ ! ಇದೆಂಥ ಗುರುಕರುಣಾ ಸಂಜ್ಞೆ, ಅದನ್ನು ಅರಿದರಿದು ಅದುವೆ ಆಗಿಹ ಪ್ರಭು ಹೃದಯ ಇದೆಂಥ ಘನಕ್ಕೆ ಘನ. ಮತ್ತೆ ಅನ್ಯವಿಚಾರವನೆಂತು ಅರಿಯನು ಎಂದು ತಾನೆ ಹೇಳಿದುದು. ಅದ್ವೈತ ಶಿಶುವೆ ತಾನಾದ ಮಹಾಮಹಿಮ ಶಿಶು ನಿಲುವು ಶಿಶುವಾಗಿ ತಿಳಿಯಬೇಕಲ್ಲದೆ ಬೇರಾಗಿ ತಿಳಿಯಲು ಅಸಾಧ್ಯವು.

ಅದ್ವೈತವೆಂಬುದು ಎರಡನ್ನು ಕಾಣದ ಅರುವಿನ ಇರುವು. ಅಲ್ಲಿ ದೃಶ್ಯವು ಕಾಣದು ದೃಕ್ ಕಾಣದು, ಕಾಣದುದು ಕಂಡಾಗ ಅರಿಯಲಿಲ್ಲದರುವೆ ತಾನಾಗಿಹ ಇರವು, ಅದು ಅದ್ವೈತವೆಂದು ಹೇಳಲಿಲ್ಲ, ಅರಿಯಲಿಲ್ಲದರುವೆಂದು ಹೇಳಲಿಲ್ಲ, ಅದರಿರುವ ಹೀಗೆ ಎಂದು ಸಂಜ್ಞೆಯಿಂದ ತಿಳಿಯುವುದು.

ಅದ್ವೈತವೆಂಬುದು ಆವಲ್ಲಿ ಎರಡು ಕಾಣದ ನಿಲುವುಳ್ಳದ್ದಾಗಿದೆ ಅದು ಅದ್ವೈತವಾಗಿದೆ. ಆ ಅದ್ವೈತವೆಂಬುದು ಕಾಣದ ನಿಲುವು, ಶಿಶು ನಿಲುವು ; ಇದು ಅದ್ವೈತ ಶಿಶು ಎಂದು ಹೇಗೆ ಸಂಜ್ಞೆ ಸೂಚಿಸುತ್ತದೆ ಹಾಗೆ ಅರಿಯಲಿಲ್ಲದರುವಿನ ಇರುವೆ ಅದ್ವೈತವೆಂಬ ಶಿಶುವಾಗಿದೆ.

ಪ್ರಭುದೇವ ಅದ್ವೈತಶಿಶು, ಕರಸ್ಥಲವ ಸೋಂಕಿ ಎನ್ನ ತನ್ನಂತೆ ಮಾಡಿತ್ತಾಗಿ ಎಂದು ಹೇಳುವಲ್ಲಿ ತಾನು ಅರಿಯಲಿಲ್ಲದರುವಿನ ಇರುವು ಆಗಿಹನು ಎಂದು ಹೇಳಿಕೊಂಡಿರುವುದರಿಂದ ಮತ್ತೆ ಅನ್ಯವಿಚಾರವನೆಂತು ಅರಿಯೆನು ಎಂದು ಹೇಳಿಹನು. ಸುಖರೂಪ ಸುಷುಪ್ತಿಯಲ್ಲಿದ್ದವಂಗೆ ಆವಾವ ವಿಚಾರಗಳು ಅವನಲ್ಲಿ ಸುಳಿವವೆ ? ಅರಿಯಲಿಲ್ಲದರುವಿನ ಮಹಾನ್ ಸುಖದ ಸುಖವು ತನ್ನಿರುವೆಂದರಿದಲ್ಲಿ ಮತ್ತೆ ಅನ್ಯವಿಚಾರಗಳ ಹಂಬಲವೆಲ್ಲಿಯದು, ಎನ್ನ ಪೂರ್ವಾಪರವ ನಿಮ್ಮಿಂದ ಅರಿಯಲೆಂದು ಬಂದು ನಿಮ್ಮ ಮರೆ ಹೊಕ್ಕೆನಾಗಿ ಸಂಗನ ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು. ಗುಹೇಶ್ವರ ಸಾಕ್ಷಿಯಾಗಿ ಸಂಗನ ಬಸವಣ್ಣ ನಿನ್ನ ಅಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಬಸವಣ್ಣನ ಘನವ ತಿಳುಹಿಕೊಡಾ ಚೆನ್ನಬಸವಣ್ಣ. ಓ ಚನ್ನಬಸವೇಶ, ಎನ್ನ ಪೂರ್ವಾಪರವ ನೀವು ಅರಿತವರು ; ನನ್ನ ಪೂರ್ವದಿರುವ ನಾ ಅರಿತವನಲ್ಲ, ನೀವು ಅರಿತವರು. ನಿಮ್ಮಿಂದ ಅರಿಯಲು ಬಂದು ನಿಮ್ಮ ಮರೆ ಹೊಕ್ಕಿಹೆನಾಗಿ ಸಂಗನ ಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು. ಗುಹೇಶ್ವರ ಸಾಕ್ಷಿಯಾಗಿ ಸಂಗನ ಬಸವಣ್ಣ ನಿನ್ನ ಅಂತರಂಗದೊಳಗೆ ಬೆಳಗುತ್ತೈದಾನೆ, ಎನಗೊಮ್ಮೆ ಬಸವಣ್ಣನ ಘನವ ತಿಳುಹಿಕೊಡಾ ಎಂದು ಕೇಳಿಕೊಂಡುದು ನೋಡುವುಡೆ ಪ್ರಭುದೇವ, ಚೆನ್ನಬಸವಣ್ಣನ ಅಂತರಂಗದಲ್ಲಿ ಬಸವಣ್ಣ ಬೆಳಗುತ್ತಿದ್ದುದ ಕಂಡ ಜ್ಯೋತಿ. ಬಸವಣ್ಣ ಪೂರ್ವಾಪರವ ಅರಳಿಸುವ ಪೂರ್ವಾಚಾರಿ, ಜ್ಞಾನಾಚಾರಿ, ಪ್ರಥಮಾಚಾರಿ ಎಂಬುದು ತಿಳಿದೆ. ಚಿಕ್ಕದಣ್ಣಾಯಕರಾಗಿಹ ಷಟ್‌ಸ್ಥಲ ಚಕ್ರವರ್ತಿಗೆ ಕೇಳಿಕೊಳ್ಳುತ್ತಿದ್ದಾನೆ. ಈ ಪೂರ್ವಾಪರ ಘನವ ಚೆನ್ನಬಸವಣ್ಣ ತಿಳಿದಾತ. ಇದು ತನ್ನಿಂದ ತನ್ನನರಿದಿಹ ನಿಶಬ್ದವೇದಿ.

ಹಿಂದೊಮ್ಮೆ ಚನ್ನಬಸವಣ್ಣ ತನಗೆ ಅನುಗ್ರಹಿಸಿರೆಂದು ಪ್ರಾರ್ಥಿಸಿಕೊಂಡ ಸಮಯದಲ್ಲಿ ಬಸವರಾಜ ದೇವರು, ಚೆನ್ನಬಸವಣ್ಣನ ಪೂರ್ವಾಪರ ಬೆಳಗಿಸಿದ ಅನುಪಮ ತೇಜ, ಈ ಮಹಾಂತ ಅನಿಯಮಡ ಬೆಡಗ ಸಾಧಿಸಿ ತೋರಿಸಿದ, ಗುರುವಾನುಗ್ರಹ ಅದಾರಿಗೆ, ಗುರುವಿನ ಗುರುವ ತೋರಿಸಿದುದು ಅದಾರಿಗೆ ಗುರುವರ್ಗದಲ್ಲಿ ಉಪದೇಶ ಸಾಂಪ್ರದಾಯಕ್ಕೆ ಒಪ್ಪಿಕೊಂಡವರು ಬಹಳಷ್ಟು ಸಿಕ್ಕುತ್ತಾರೆ. ಇವರೆಲ್ಲರು ಭಾಷೆ ಪ್ರಸಾದವನಿಕ್ಕಿದವರು. ಬಸವರಾಜದೇವರು ಪ್ರಥಮಾಚಾರಿ ಎಂದೆನಿಸಿಕೊಂಡರೂ ಭಾಷೆ ಪ್ರಸಾದವನಿಕ್ಕಲಿಲ್ಲ, ಏಕೆಂದರೆ ಪ್ರಥಮಾಚಾರಿಯಾದ್ದರಿಂದ ಭಾಷೆ ಪ್ರಸಾದನಿಕ್ಕಲಿಲ್ಲವಾದ್ದರಿಂದ ಪ್ರಥಮಾಚಾರಿ ಎನಿಸಿಕೊಂಡಿಹನು.

ಓಹೋ ಈ ದಯಾಮಯ ಭಾಷೆ ಪ್ರಸಾದವನಿಕ್ಕಲಿಲ್ಲ, ಅವರ ಪೂರ್ವಾಪರ ಬೆಳಗಿಸಿದುದು ನೋಡಿದಡೆ ಮಹದಾಶ್ಚರ್ಯವು. ಇದೆಂಥ ಪೂರ್ವದಶ್ಚರಿಯು, ಶಬ್ದಮುಗ್ಧ ಪೂರ್ವಾಪರವು, ಅರುವಿನ ಪರಿಮಳವನ್ನೆ ಹೃದಯದಲ್ಲಿ ಬೆಳಗಿಸಿದ ಮಹಾಮಹಿಮ. ಈ ಮಹಾಂತನ ಪೂರ್ವಾಪರವು ಚೆನ್ನಬಸವಣ್ಣನ ಅಂತರಂಗದಲ್ಲಿ ಬೆಳಗುತ್ತಿದ್ದ ಘನವು

ನೋಡಿರೆ ! ಬಸವಣ್ಣನವರು ಚೆನ್ನಬಸವಣ್ಣನವರಿಗೆ ಪೂರ್ವಾಪರವ ಬೆಳಗಿಸುತ್ತಿದ್ದ ಅನುವ ನೋಡಿರೆ ! ಹೋ ಹೋ.

ನಾನೊಬ್ಬರಿಗೆಯೂ ಉಪದೇಶ ಮಾಡಲಮ್ಮೆನು, ಮುನ್ನಲಾದವರು ತಮ್ಮಿಂದ ತಾವಾದವರು. ಅವರೆಲ್ಲರೂ ನಿಜಲಿಂಗೈಕ್ಯರು. ನಾನೇನುವ ಮಾಡುತ್ತಿಲ್ಲ. ತತ್ವಹಿಡಿದವರಿಗೆ ತೊತ್ತಾಗಿ ನಡೆವನು. ಅಮರಗಣಂಗಳ ಸಾಕ್ಷಿಯಾಗಿ ಕೂಡಲ ಸಂಗಮದೇವ ಮುಂದೆ ಭಾಷೆ ಪ್ರಸಾದನಿಕ್ಕಲೆಮ್ಮನಯ್ಯ ಚೆನ್ನಬಸವಣ್ಣ, ಎಂಬ ಮಹಾನುಭವ ಅಂತರಂಗದಲ್ಲಿ ಬೆಳಗುವುದು ಕಂಡೆ ಅದರ ವರ್ಮವ ತಿಳುಹಿಕೊಡಾ ಎಂದು ಪ್ರಭು ಕೇಳಿದುದು.

ಭಾಷೆ ಪ್ರಸಾದವ ನಿಕ್ಕುವ ಗುರುವರ್ಗವು ಸಿಕ್ಕುತ್ತದೆ. ಭಾಷೆ ಪ್ರಸಾದಕ್ಕೆ ಮಹತ್ವಕೊಡದೆ ಮುನ್ನಲಾದ ಘನದಿರುವಿನ ಅನುವ ಬೆಳಗಿಸಿದ ಮಹಾಘನನೆಂದರೆ ಬಸವರಾಜದೇವರು, ಶಬ್ದವೇದಕ್ಕೆ ಮಹತ್ವ ಮಾಡಲಿಲ್ಲ. ಇವರುಗಳ ಪೂರ್ವಾಪರವ ಒಂದನುವ ಮಾಡಿ ಬೆಳಗಿಸದೆ ಬಿಡಲಿಲ್ಲ, ಮುನ್ನವೆ ಆದವರು ಮುನ್ನಲಾದವರು ಎಂಬುದು ಇದೆಂಥ ಶ್ರೀಗುರು ಕಾರುಣ್ಯ! ಇದು ಸತ್ತ ಗುರುವಿನ ಕಾರುಣ್ಯ! ಮಹದರುವಿನ ಅರುವು, ತಮ್ಮಿಂದ ತಾವಾದವರು ಎಂಬುದು ಇದೆಂಥ ನಿರ್ವಂಚಕದನುವು, ನಿಮ್ಮ ಸ್ವರೂಪ. ನಾನೇನು ಮಾಡುತ್ತಿಲ್ಲ. ನೀವು ಮುನ್ನವೆ ನಿಜಲಿಂಗೈಕ್ಯರು ಎಂದುದಲ್ಲದೆ ಮುನ್ನವೆ ಆ ಪರತತ್ವದ ಪರಿಚಯಸ್ಥರು, ಅದುವೆ ಆದವರು ಎಂದು ತಿಳಿಸಿದ ಬೆಳಗಿನ ಬೆಳಗು ಬೆಳಗುತ್ತೈದಾನೆ ನೋಡಾ. ಈ ಮಹಪ್ರಸಾದದನುವ ತನ್ನ ಅಂತರಂಗದಲ್ಲಿ ಬೆಳಗಿಸಿಕೊಂಡ ಸುಜ್ಞಾನಿ ಚೆನ್ನಬಸವಣ್ಣ, ಬಸವಣ್ಣ ಈರ್ವರದು ಸತ್ತಗುರುವಿನ ಕಾರುಣ್ಯವ ಸತ್ತಕೊಂಬ ಶಿಷ್ಯನ ನಿಲುವಾದ್ದರಿಂದ ಬಸವಣ್ಣ ತನ್ನ ಪೂರ್ವಾಪರವ ತಿಳಿದ ಮಹಾಂತ. ಚೆನ್ನಬಸವಣ್ಣನು ತನ್ನ ಪೂರ್ವಾಪರ ತಿಳಿದ ಮಹಾಂತನಾದುದರಿಂದ ಶರಣ ಶರಣೆಯರಿಗೆ ಪೂರ್ವದ ಶಿರಿಯನ್ನೆ ಬೆಳಗಿಸಿ, ಬೆಳಗುಳ್ಳ ಘನವಾಗಿ ಕಂಡ, ಸ್ವಯಂಜ್ಯೋತಿಗಳು.

**116**

**ಮನ ಮುಟ್ಟದ ಮಜ್ಜನ ತನು ತಾಗದ ದೇಹಾರ,**
**ಭಾವ ತಾಗದ ಪೂಜೆ, ಎವೆ ತಾಗದ ನೋಟ**
**ವಾಯು ತಾಗದ (ಲಿಂಗದ) ಠಾವ ತೋರಾ ಗುಹೇಶ್ವರಾ. ॥ 419 ॥**

**ತಾತ್ಪರ್ಯ** : ಮನ ಮುಟ್ಟದ ಮಜ್ಜನ : ಇದಾವ ಮಜ್ಜನ ? ಮನ ಮುಟ್ಟದ ಸ್ನಾನ ? ಈ ಸ್ನಾನ ಅದಾರು ಮಾಡಿಹರು ? ಕಲ್ಪಿತ ಕೆಡಿಸಿದವರು. ಈ ಮಜ್ಜನ ಮಾಡಿದವರು. ಕಲ್ಪಿತ ಕೆಡಿಸಿದವರು ಇವರಾರು ? ತಾನಾರೆಂದರಿಯ ಹೋಗಿ ತನ್ನಿಂದ ತನ್ನ ಮುಟ್ಟಿದವರು, ಲಿಂಗೈಕ್ಯರು. ಲಿಂಗವೆಂಬುವದೆ ಅವರಿಗೆ ದೋಷವಾಗಿದೆ. ಎಂಜಲ ಮಾತ ನುಡಿವ ರಂಜಕರೆಲ್ಲರು ಮಿಗೆ ಮಿಗೆ ಮೀಸಲ ತಾವೆತ್ತ ಬಲ್ಲರೊ ? ಮೀಸಲು ಎಂಜಲಹುದೆ ? ಎಂಜಲು ಮೀಸಲಹುದೆ ? ಮಾತಿನ ಬಣವೆಯ ಪಶುಮೇದ ಪ್ರಾಣಿಯಂತೆ ಎಂಜಲ ಮಾತ ನುಡಿಯುತ್ತಿಹರು. ಲಿಂಗ ಸಕೀಲ ಸಂಯೋಗ

ವರ್ಮಸ್ಥಲವ ನವರೆತ್ತಬಲ್ಲರು. ಕೂಡಲಚೆನ್ನಸಂಗಯ್ಯನಲ್ಲಿ, ಶಬ್ದಸೂತಕಿಗಳೆಲ್ಲ ರೌರವನರಕಿಗಳು ಎಂದುದು ಷಟ್‌ಸ್ಥಲ ಚಕ್ರವರ್ತಿಯ ಮಹಾಪ್ರಸಾದ. ಮಿಗೆ ಮಿಗೆ ಮೀಸಲವಾಗಿಹ ತತ್ವ ಬಲ್ಲವರು ಅವರು ಲಿಂಗವರಿತವರು ಅದುವೆ ಆದವರು.

ಎಲ್ಲಿ ಶಬ್ದವದೆ ಅಲ್ಲಿ ಕಲ್ಪಿತವದೆ, ಎಲ್ಲಿ ಕಲ್ಪಿತವದೆ ಅಲ್ಲಿ ಮನವದೆ. ಮನ ಮುಟ್ಟದ ಮಜ್ಜನವೆಂದರೆ ಇಲ್ಲದ ಮನ ಇಲ್ಲವಾದುದು, ಮನ ಮುಟ್ಟದ ಮಜ್ಜನ. ಈ ಮನ ಲಿಂಗವಾದುದೆ ಮನ ಮುಟ್ಟದ ಮಜ್ಜನವಾಗುವುದು. ಮನ ಮುಟ್ಟದ ಮಜ್ಜನವಾಗಬೇಕಾದರೆ ತಾನು ವಾಙ್ಮನಕ್ಕಗೋಚರನು. ಶೃತಿಗಗೋಚರನು ಎಂಬುದು ತನ್ನಿಂದ ತನ್ನ ನೋಡುವುದು. ತನ್ನನ್ನು ಎಂದೂ ಈ ಮನ ಮುಟ್ಟಿಲ್ಲ, ಇದು ಅವಿಚಾರಮನವಿರಲಿ, ವಿಚಾರವುಳ್ಳ ಮನವಿರಲಿ, ಭ್ರಮದಿಂದುಕ್ತವಾದುದಿರಲಿ, ಬ್ರಹ್ಮಕಾರದಿಂದುಕ್ತವಾದುದಿರಲಿ, ಆವಲ್ಲಿ ವೃತ್ತಿಗತವಾಗಿಹ ಅರುವಿಂಗೆ ಮಹತ್ವ ಕೊಟ್ಟಿಹನು. ಅದು ಮನ ಮುಟ್ಟಿದ ಸ್ನಾನವಲ್ಲದೆ ಮನ ಮುಟ್ಟದ ಮಜ್ಜನವಾಗದು. ಮನ ಮುಟ್ಟದ ಮಜ್ಜನ ಶರಣ ಶರಣೆಯರು ಮಾಡಿಹರು. ಲಿಂಗ ಸಕೀಲವರಿತು ಲಿಂಗವೆ ಆಗಿಹ ಮಹಾಂತರು ಮನ ಮುಟ್ಟದ ಮಜ್ಜನ ಮಾಡಿಹರು.

ಲಿಂಗವೆನ್ನೆ, ಲಿಂಗೈಕ್ಯವೆನ್ನೆ ಸಂಗವೆನ್ನೆ ಸಮರಸವೆನ್ನೆ, ಆಯಿತೆನ್ನೆ ಆಗದೆನ್ನೆ ಚೆನ್ನಮಲ್ಲಿಕಾರ್ಜುನನಲ್ಲಿ ಏನೂ ಎನ್ನದೆ ಶಬ್ದಮುಗ್ಧವಾಗಿದ್ದೆನು. ಇದು ನಿಶಬ್ದವೇದಿಗಳ ನಿಲವು. ತಾನಾರೆಂದರಿತು ತನ್ನಿರುವಿನೊಳ ತನ್ಮಯವಾದ ನಿಲವು, ನಿಜ ನಿಲವು, ಶಬ್ದಮುಗ್ಧ ನಿಲುವು, ಎತ್ತನೋಡಿದಡತ್ತತ್ತ ತನ್ನ ಕಂಡ ನಿಲವು. ಸರ್ವ ಪ್ರಪಂಚ ನಿವೃತ್ತವಾಗಿಹ ನಿಲವು, ಕೇವಲ ನಿಶ್ಚಿಂತವಾಗಿಹ ನಿಲವು. ತಾನೆಂಬ ತೋರಿಕೆ ಹುಟ್ಟದ ನಿಲವು, ತನ್ನದು ನೆಲೆಯಿಲ್ಲದ ನಿಲವು, ಇದು ಮನ ಮುಟ್ಟದ ಮಜ್ಜನ ತಾಗಿದೆ.

ತನು ತಾಗದ ದೇಹಾರ: ಈ ದೇಹಾರ ಅದಾರ ದೇಹಾರ. ಇದು ದೇಹ ಬುದ್ಧಿಯುಳ್ಳವರ ಆಹಾರವಲ್ಲ, ದೇಹಿ ಎಂಬುವ ದೇಹಾರವೂ ಅಲ್ಲ, ದೇಹಿಗೆ ದೇಹಿಯಾಗಿಹ ಮಹಾಂತರ ದೇಹಾರ. ಅದನಾರು ಬಲ್ಲರು. ಹರಿಬ್ರಹ್ಮಾದಿಗಳರಿಯರು, ಮನು ಮುನಿಗಳರಿಯರು, ಸಿದ್ಧಸಾಧಕರರಿಯರು, ಅರುವಿಂಗರುವಾಗಿರ್ಪದನು ನಿನ್ನ ಅರುವಿಂಗೆ ಅರಿಯಬಹುದೆ ? ಗುಹೇಶ್ವರ ಲಿಂಗವನರಿವುಡೆ ನೀ ನರಿಯದಂತಿರಬೇಕು, ಇದು ಅರಿಯಲಿಲ್ಲದ ಅರುವಾಗಿಪ್ಪವರ ಅಮೃತಾಹಾರ, ಅಲ್ಲಿ ಪರಮಾಮೃತ, ಜ್ಞಾನಾಮೃತ, ವಾಙ್ಮನೋತೀತವಾದ ಘನವ ಅದನೆಂತು ಉಸರುವುದು. ಈ ಆಹಾರ ಅರು ಹೃದಯದವರ ಆಹಾರ ಮಹಾಲಿಂಗವ ಮುಟ್ಟಿ, ಬಚ್ಚ ಬರೆ ಅರುವಾದವರ ಆಹಾರ. ಇದು ಗುರುಲಿಪಿ, ಲಿಂಗ ಲಿಪಿ, ಜಂಗಮ ಲಿಪಿ, ಪ್ರಸಾದ ಲಿಪಿ, ಈ ಚತುರ್ವಿಧ ಏಕ ಮಾಡಿದ ಅನುಭವ ಲಿಪಿ ನೋಡಿದಲ್ಲಿ ಮಹಾಲಿಂಗ ಲಿಪಿ ಮುಟ್ಟಿ ಕಂಡು ಅದನ್ನು ಮುಟ್ಟಿದ ಬರೆ ಅರುವದು ದೇಹಾರವಾಗಿದೆ. ಅದು ಜ್ಞಾನಾಮೃತ ಅದನೆಂತು ವರ್ಣಿಸುವುದು. ಅವರ್ಣೀಯವಾಗಿಹ ದೇಹಾರ. ಅನುಪಮ ದೇಹಾರ. ಇದು ತನು ತಾಗದ ದೇಹಾರ. ಇದು ದೇಹವ ಕಾಣದ ದೇಹಾರ. ಮಿಗೆ ಮಿಗೆ ಮೀಸಲವಾಗಿಹ ಪರಮಾಮೃತ, ಇದು ಶ್ರೋತೃವಿನ ಶ್ರೋತೃ. ಹೃದಯದ ಹೃದಯವಾಗಿಹ ಅಖಂಡ ಜ್ಞಾನಾಮೃತ ದೇಹಾರ ಅಚ್ಚಸುಖದ ಆಹಾರ ತನ್ನ ಆಹಾರ.

ಭಾವ ತಾಗದ ಪೂಜೆ : ಭಾವಕ್ಕಗಮ್ಯವಾಗಿಹ ಘನದಲ್ಲಿ ಒಂದಾದುದು ಅಗಣಿತ. ಇದನೆಂತು ಗಣಿಸುವುದು. ಲಿಂಗ ಲಿಂಗ ಎಂಬುವಂಗೆ ಲಿಂಗವಿಲ್ಲ, ಜಂಗಮ, ಜಂಗಮ ಎಂಬುವಂಗೆ ಜಂಗಮವಿಲ್ಲ, ಪ್ರಸಾದ, ಪ್ರಸಾದ ಎನ್ನುವಂಗೆ ಪ್ರಸಾದವಿಲ್ಲ, ಲಿಂಗ ಎನ್ನದವಂಗೆ ಲಿಂಗವುಂಟು, ಜಂಗಮ, ಜಂಗಮ ಎನ್ನದವಂಗೆ ಜಂಗಮವುಂಟು. ಪ್ರಸಾದ ಪ್ರಸಾದ ಎನ್ನದವಂಗೆ ಪ್ರಸಾದವುಂಟು. ಈ ತ್ರಿವಿಧ ಸ್ಥಲವನರಿಯ ಬಲ್ಲಡೆ ತಾನೆ ಉಂಟು.

ಭಾವ ತಾಗದ ಪೂಜೆ; ಇದು ತನ್ನ ಕಂಡ ಪೂಜೆ. ತಾನೆ ಭಾವಕ್ಕಗಮ್ಯನಾಗಿಹ ಪೂಜೆ. ಲಿಂಗಸ್ಥಲವನರಿಯ ಹೋಗಿ ತಾನೆ ಲಿಂಗವಾಗಿಹ ಪೂಜೆ. ಜಂಗಮಸ್ಥಲವನರಿಯ ಹೋಗಿ ತಾನೆ ಜಂಗಮನಾಗಿಹ ಪೂಜೆ, ಪ್ರಸಾದಿಸ್ಥಲವನರಿಯ ಹೋಗಿ ತಾನೆ ಪ್ರಸಾದವಾಗಿಹ ಪೂಜೆ, ಸತ್‌ಸ್ವರೂಪವನರಿಯ ಹೋಗಿ ಅದುವೆ ಆಗಿಹ ಪೂಜೆ. ಇದು ಭಾವ ತಾಗದ ಪೂಜೆ.

ಚಿತ್‌ಸ್ವರೂಪವನರಿಯ ಹೋಗಿ ಅದುವೆ ಆಗಿಹ ಪೂಜೆ. ಆನಂದ ಸ್ವರೂಪವನರಿಯ ಹೋಗಿ ಅದುವೇ ಆಗಿಹ ಪೂಜೆ, ನಿತ್ಯವನರಿಯ ಹೋಗಿ ಅದುವೇ ಆಗಿಹ ಪೂಜೆ, ಇದು ಭಾವ ತಾಗದ ಪೂಜೆ, ತನ್ನ ಮುಟ್ಟದ ಪೂಜೆ, ಭಾವಕ್ಕಗಮ್ಯನಾಗಿಹ ಪೂಜೆ, ಭ್ರಮೆ ಅಳಿದು, ನಿಜದಲ್ಲಿನಿಂದುದೆ ಪೂಜೆ.

ಎವೆ ತಾಗದ ನೋಟ : ಇದು ನೋಡದ ನೋಟ. ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ, ಎಲ್ಲೆಲ್ಲೂ ತನ್ನನ್ನೆ ಕಂಡುದು. ಇದು ಎವೆತಾಗದ ನೋಟ, ಇದು ಕಣ್ಣಿನ ಕಣ್ಣಾದ ನೋಟ. ಬಹಿರ್ ನೋಟಕ್ಕೆ ಕಣ್ಣಿನ ಎವೆ ತಾಗುವುದು. ಕಣ್ಣಿನ ಕಣ್ಣಾದುದು ತಾನು, ಜ್ಞಾನಸ್ವರೂಪ ತಾನು, ಚಿದಂಗ ತಾನು, ತನ್ನನ್ನು ಈ ಚರ್ಮಚಕ್ಷು ಅದೆಂತು ಮುಟ್ಟುವುದು. ಇದು ತನ್ನ ನೋಡ ಹೋದ ಕಣ್ಣು, ನುಡಿಗೆಡೆಗೊಡದ ಘನವಾಗಿಹ ಕಣ್ಣು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನದಿರುವಿನ ಅರುವಾಗಿಹ ಕಣ್ಣು, ಇದು ನಿಜದ ಕಣ್ಣು ಈ ಕಣ್ಣಿನ ನೋಟ, ನೋಡದ ನೋಟ, ನಿಜದ ನೋಟವಾದ್ದರಿಂದ ಎವೆ ತಾಗದ ನೋಟ ಎಂದು ಹೇಳಿಹರು.

ವಾಯು ತಾಗದ ಲಿಂಗದ ಠಾವು ತೋರಾ ಗುಹೇಶ್ವರಾ: ಆಕಾಶಕ್ಕೆ ವಾಯುತಟ್ಟುವದೆ ? ಮುಟ್ಟುವದೆ ? ಅದು ಆವಾವುದನ್ನು ತಟ್ಟಿಸಿಕೊಳ್ಳದ ಮುಟ್ಟಿಸಿಕೊಳ್ಳದ ಶುದ್ಧ ತತ್ವ, ಅದೆಂತು ವಾಯು ತಾಗುವುದು, ಆವುದು ನಿಷ್ಕಳಂಕವಾಗಿದೆ ಅದು ಲಿಂಗ ಠಾವು ಆಗಿದೆ.

ವಾಯು ದ್ವಿವಿಧ ಮುಖವುಳ್ಳದ್ದಿದೆ. ಸ್ಪಂದ ಮುಖವುಳ್ಳದ್ದು ಆಗಿದೆ. ನಿಸ್ಪಂದ ಮುಖವುಳ್ಳದ್ದು ಆಗಿದೆ. ಸ್ಪಂದ ಮುಖ ಕಣ್ಣಿಗೆ ಗೋಚರವಾಗುವುದು. ನಿಷ್ಪಂದವು ಬಹುಸೂಕ್ಷ್ಮವಾದುದರಿಂದ ಕಣ್ಣಿಗೆ ಗೋಚರವಾಗದು. ಮನಸ್ಸಿನ ಅಲೆಯಾದರೂ ಉಪಾಧಿ ಮನ ಬಹು ಚಂಚಲವುಳ್ಳದು. ಉಪಾಧಿರಹಿತ ಮನ ಶಾಂತ ಮನ, ಇವೆರಡು ಚಿತ್‌ದ ನಿಜಚಿತ್‌ಕ್ಕೆ ಮುಟ್ಟವು. ಅದು ಲಿಂಗಕ್ಕೆ ಲಿಂಗವಾಗಿಹ ಘನವು. ಈ ಪ್ರಾಣಾದಿಗಳು ಅದೆಂತು ಮುಟ್ಟುವವು. ಇತ್ತ ಭ್ರಾಂತಿ ಮನವಾಗಲಿ, ಭ್ರಾಂತಿರಹಿತ ಮನವಾಗಲಿ, ಅನುಪಮವಾದ ಘನದಿರುವ ಇವಾವು ಮುಟ್ಟವು. ಇದುವೆ ವಾಯು ತಾಗದ ಲಿಂಗ ಠಾವು ಗುಹೇಶ್ವರ ಎಂದು ಹೇಳಿಹರು.

117

**ಮರವುಳ್ಳನ್ನಕ್ಕರ ಎಲೆ ಉಲಿವುದು ಮಾಬುದೆ ?**
**ಶರೀರವುಳ್ಳನ್ನಕ್ಕರ ವಿಕಾರ ಮಾಬುದೆ ?**
**ಅಯ್ಯಾ ಸುಳುಹುಳ್ಳನ್ನಕ್ಕ ಸೂತಕ ಹಿಂಗೂದೆ**
**ಗುಹೇಶ್ವರಾ?** ॥ 487 ॥

**ತಾತ್ಪರ್ಯ** : ಮರವುಳ್ಳನ್ನಕ್ಕರ ಎಲೆ ಉಲಿಯುವುದು ಮಾಬುದೆ ? : ಮರವಿದ್ದಲ್ಲಿ ಎಲೆ ಅಲುಗಾಡುವುದು ಬಿಡುವುದೆ ? ಬಿಡದು. ಮರದಲ್ಲಿ ಎಲೆ ತನ್ನಷ್ಟಕ್ಕೆ ತಾನು ಅಲುಗಾಡದು, ವಾಯು ಸ್ಪರ್ಶದಿಂದ ಅದು ಅಲುಗಾಡುವುದು, ಇದು ಸಕಲರಿಗೆ ವಿದಿತವಿದ್ದ ವಿಷಯ.

ಮರದಲ್ಲಿಯ ಒಂದು ದೃಷ್ಟಾಂತವ ತೆಗೆದುಕೊಳ್ಳುವಾ. ಮರದಲ್ಲಿ ಒಂದು ಬೇವಿನ ಮರ, ಅದು ಎಲ್ಲರಿಗೂ ಬೇವಿನ ಮರವಾಗಿ ಕಾಣಿಸುವುದು. ಅಲ್ಲಿ ನೋಡಲು ಬೊಡ್ಡೆ ಬುಡ, ಟೊಂಗೆ, ಕೊಂಗೆ, ಎಲೆ, ಹೂವು, ಕಾಯಿ, ಹಣ್ಣು, ಬೀಜವಾಗಿ ಬೇರೆ ಬೇರಾಗಿ ತೋರುವುದು. ಆಗ ಮರವೆಂಬ ನಾಮವು ಅರಿವುಡೆ ನಾನಾ ವಿಧವಾಗಿ ಕಾಣಿಸುವುದು. ಇದು ಸತ್ಯವೊ ? ಅಸತ್ಯವೊ ? ಎಂದು ಅದರ ಮೂಲದ ಅರುವಾಗಿ ತೋರಿಕೆಯಿಂದುಕ್ತವಾದ ಸಕಲ ನಾಮರೂಪವು ಪುಸಿಯಾಗಿ ಕಹಿಯೆ ಭಾಸಿಸುವುದು. ಮೂಲವರಿತಲ್ಲಿ ಕಹಿಯು. ಮರೆತುದರಿಂದ ನಾನಾ ವಿಧವಾಗಿ ತೋರುವುದು. ಮೂಲವಾಗಿಹ ಕಹಿ, ಅದು ಎಂದಾದರೂ ಅಲುಗಾಡುವುದೆ ? ಅದು ಇದ್ದಂತೆ ಇದೆ. ಎಲೆ ಅಲುಗಾಡಿದರೂ ಕಹಿ ಇದ್ದಂತೆ ಇದೆ. ಅದರಲ್ಲಿ ಬದಲಾವಣೆಯಿಲ್ಲ. ಮರವಾಗಿಹ ಕಹಿ ದೃಷ್ಟಿ ಪ್ರಬುದ್ಧವಾಗುವುಡೆ ಆಗ ಮರದ ದೃಷ್ಟಿಯು ಸಹಜ ಪುಸಿಯಾಗುವುದು. ಹಾಗೆ ಪಿಂಡಾಂಡ, ಬ್ರಹ್ಮಾಂಡರೂಪಿ ಇದು ಇರುವವರೆಗೆ ಹುಟ್ಟಿದಂತೆ ಇದ್ದಂತೆ ಬದುಕಿದಂತೆ ಸತ್ತಂತಾಗಿ ತೋರುವುದು. ಇತ್ತಿಂದತ್ತ, ಅತ್ತಿಂದಿತ್ತ ಹೋದಂತಾಗಿ ಬಂದಂತಾಗಿ ತೋರುವುದು. ಅದರ ಮೂಲನರಿವುಡೆ ನುಡಿಗೆಡೆಗೊಡದ ಘನವಾಗಿ ಪ್ರಜ್ವಲಿಸುವುದು. ಮರವೆಂದರೆ ಅಶ್ವಥವೃಕ್ಷ, ಮರ ಇರುವವರೆಗೂ ಎಲೆಗಳು ಅಲುಗಾಡುವುವು ಹಾಗೆ ದೇಹ ಇರುವವರೆಗೂ ಬಂದಂತಾಗುತ್ತದೆ, ಹೋದಂತಾಗಾತ್ತದೆ.

ಶರೀರವುಳ್ಳನ್ನಕ್ಕರ ವಿಕಾರ ಮಾಬುದೆ : ಶರೀರವಿದೆ ಎಂದಲ್ಲಿ ಷಡ್ವಿಕಾರ ತೋರದೆ ಬಿಡದು. ಶರೀರವದು ಬ್ರಹ್ಮಚರ್ಯದಿಂದುಕ್ತವಾಗಿರಲಿ, ಕಂದ ಮೂಲವ ಸೇವಿಸಿ ಹಠಯೋಗದಿಂದ ಕೇವಲ ಕುಂಭಕ ಯೋಗವ ಸಾಧಿಸಿ, ಸಹಸ್ರಾರು ವರ್ಷ ಬಾಳಿದ ಶರೀರವೆ ಇರಲಿ, ಕೊನೆಗೆ ಅವತಾರ ಶರೀರವೆ ಇರಲಿ, ಆವ ಶರೀರವೆ ಇರಲಿ, ಅದರ ವಿಕಾರ ಕಾಣದೆ ಬಿಡುವುದೆ ? ಕೆಲಬರು ಬ್ರಹ್ಮಜ್ಞಾನಿಗಳಾದ ಮೇಲೆ ಶರೀರ ವಿಕಾರ ತೋರಬಾರದು ಎಂದು ತಿಳಿದಿಹರು. ಇವರು ಶರೀರವ ಕಾಣುತ್ತಾರೆ ಹೊರತಾಗಿ ಸ್ವರೂಪದ ಘನವರಿಯರು, ಕೆಲಬರು ಇದರಲ್ಲಿ ತೋರುವ ನಾಮರೂಪುಳ್ಳ ಶರೀರ ನಾಶವುಳ್ಳದು ತಾನು ಸಚ್ಚಿದಾನಂದನು, ಅವಿನಾಶಿ ಹೀಗೆ ತಿಳಿದರೆ, ತನ್ನ ಸ್ವರೂಪ

ಯತಾರ್ಥ ತಿಳಿದವರೆಂದು ತಿಳಿದಿಹರು. ಇವರಿಗೆ ಸಾಪೇಕ್ಷ ಜ್ಞಾನವಾಗಿರುವ ಕಾರಣ ತನ್ನ ಮೂಲವ ತಿಳಿಯಲಿಲ್ಲ, ಶರೀರವುಳ್ಳನ್ನಕ್ಕ ವಿಕಾರ ಕೆಡದು, ಶರೀರ ಇರುವವರೆಗೂ ಇದರ ವಿಕಾರ ಹಾಗೆಯೇ ತೋರುತ್ತಿದೆ.

ತನುವಿನ ತನು, ಮೂಲ ತನು. ಇದರ ಜ್ಞಾನ ನಮಗೆ ಅಳವಡಬೇಕು. ಆಗ ಶರೀರದ ವಿಕಾರ ತೋರಿದರೂ ಅದರಿಂದ ನಮಗೆ ಹಾನಿಯಾಗದು. ಏಕೆಂದರೆ ಸಮತೆ ಸಯವಾದ ಶರಣಂಗೆ ಅರವು ಮರವುಗಳುಂಟೆ? ಸಮಪ್ರಕಾಶಮಾನವಾದ ತತ್ವ ತಿಳಿದಿರುವುದರಿಂದ ಶರೀರದ ವಿಚಾರ ತೋರಲಿ, ತೋರದಿರಲಿ, ತಾನು ಅದಕ್ಕೆ ಬೇರಾಗಿರುವ ನಿರುಪಮ.ಇದು ಒಮ್ಮೆ ಇದ್ದು, ಒಮ್ಮೆ ಇಲ್ಲದಂತಾಗುವುದು.

ತಾನು ನಿರಂತರ, ಉದಯ ಅಸ್ತವೆನ್ನದೆ ಬೆಳಗುಳ್ಳ ಸ್ವಯಂಪ್ರಕಾಶ, ತನ್ನ ಸ್ವಪ್ರಕಾಶ ತನ್ನಿಂದ ತಾನು ನೋಡ ಹೋಗಲಿಲ್ಲ, ಹೋಗದ್ದರಿಂದ ಯತಾರ್ಥ ಜ್ಞಾನವಾಗಲಿಲ್ಲ, ಯತಾರ್ಥ ಜ್ಞಾನವಾದವರಿಗೆ ಶರೀರವುಳ್ಳನ್ನಕ್ಕರ ವಿಕಾರ ಕೆಡದು ಎಂದು ಹೇಳಿಹರು. ಆರು ತನ್ನಿಂದ ತನ್ನ ಯತಾರ್ಥ ತಿಳಿದವರಿಗೆ ಶರೀರ ಬದುಕಿ ಉಳಿದುದಾಗಿ ತೋರಿದರೆ ಸಂತೋಷವಿಲ್ಲ, ಶರೀರ ನಶ್ವರವಾಗಿ ಕಾಣದಂತಾದರೆ ಹಾನಿಯಿಲ್ಲ, ಇದು ಅನ್ಯರ ಶರೀರದಂತೆ ತೋರುವುದು. ಆ ಶರೀರದಿಂದಾಗುವ ಕಾರ್ಯವಾಗಲಿ, ಅದು ಅನ್ಯರ ಶರೀರದಂತೆ ತೋರುವುದು. ಅದರ ಲಾಭ ಹಾನಿಗಳಾಗಲಿ, ಮಾನಪಮಾನಗಳಾಗಲಿ, ಸುಖದುಃಖಗಳಾಗಲಿ, ಅವು ಅನ್ಯರ ಶರೀರವು ಹೇಗೋ ಹಾಗೆ ತನ್ನ ಶರೀರವಾಗಿದೆ. ಈ ಶರೀರದ ಸೊಕ್ಕುವಿಕೆಯಾಗಲಿ, ಸೊರಗುವಿಕೆಯಾಗಲಿ ಇವು ಶರೀರವಿರುವವರೆಗೂ ಈ ವಿಕಾರ ಕೆಡದು. ಹಾಗೆ ತೋರುತ್ತಿರುತ್ತದೆ. ಸಮ್ಯ ಜ್ಞಾನಿಯು, ತನ್ನ ಶರೀರವೆ ಅವನಿಗೆ ಅನ್ಯವಾಗಿದೆ. ಅದರ ಆರೋಪವನ್ನು ತನ್ನ ಮೇಲೆ ಎಂದು ಹಾಕಿಕೊಳ್ಳನು. ಕಣ್ಣಿಲ್ಲದವರು ವಿಪರೀತವಾಗಿ ಕಾಣುವರು. ಕಣ್ಣಿದ್ದವನು ಹೇಗೆ ವಿಪರೀತವ ಕಾಣುವನು ಹಾಗೆ ಮರವುಳ್ಳವರು ತಾನಾಗದ ಶರೀರ, ಶರೀರದ ವಿಕಾರವ ತನ್ನ ಮೇಲೆ ಆರೋಪ ಮಾಡಿಕೊಳ್ಳುವನು. ಅರುವುಳ್ಳವನು ತಾನಾಗದ ಶರೀರ, ಶರೀರದ ಧರ್ಮಂಗಳು ತಾನು ಹೇಗಾಗುವನು, ನಿರಂತರ ಅವರಿಗೆ ಶರೀರ ಅನ್ಯರದಂತೆ ಭಾಸಿಸುವುದು. ತನ್ನನ್ನು ತನ್ನಿಂದ ಆರು ತಿಳಿದಿಹರು ಅವರಿಗೆ ತಾನು ನಿರಂತರವಾಗಿಹ ಮಂಗಳಮಯನೆಂಬುದು ಯತಾರ್ಥ ದರ್ಶನವಾಗಿದೆ. ಅದಕ್ಕಾಗಿ ಶರೀರದ ವಿಕಾರ ಪ್ರತ್ಯಕ್ಷವಾಗಿ ಕಂಡರೂ ತಾನು ನಿರ್ಭಯನು, ನಿರಾವಯನು, ನಿಶ್ಚಿಂತನಾಗಿಹನು. ಇಲ್ಲಿ ಕಾಯ ತೋರದಿರುವುದೆ ಘನವು ಎಂದು ತಿಳಿಯಕೂಡದು. ತನ್ನನರಿತ ಯತಾರ್ಥ ಜ್ಞಾನದ ಗಂಭೀರತ್ವವು ಮುಖ್ಯವಾಗಿದೆ. ಇಂತಪ್ಪ ಗಂಭೀರ ಜ್ಞಾನ ಆವ ಕಾಯದಲ್ಲಿ ಬೆಳಗುಳ್ಳದ್ದಾಗಿ ಬೆಳಗುವುದು. ಆಗ ಕಾಯವೆ ಘನವಾಗಿ ಕಾಣಿಸುವುದು.

ಕಾಯದಿಂದ ಗುರು ದರ್ಶನ, ಲಿಂಗದರ್ಶನ, ಜಂಗಮದರ್ಶನ, ಪ್ರಸಾದ ದರ್ಶನ. ಕಾಯದಿಂದ ನಿಮ್ಮವ ಕಂಡೆನ್ನಮರದೆ ಕೂಡಲ ಚೆನ್ನಸಂಗಮದೇವಾ. ಈ ಕಾಯವಿದ್ದಾಗ, ಗುರುದರ್ಶನ ಮಾಡಿಕೊಳ್ಳಲು ಬರುತ್ತದೆ. ಹೊರಗೆ ಕಾಣಿಸಿಕೊಳ್ಳುವ ಗುರು, ಲಿಂಗ, ಜಂಗಮ, ದರ್ಶನ ಮಾಡಿಕೊಳ್ಳಲು ಬರುವುದು. ಇದಲ್ಲದೆ ಗುರುವಿಂಗೆ ಗುರುವಾಗಿರುವ, ಲಿಂಗಕ್ಕೆ ಲಿಂಗವಾಗಿರುವ ಜಂಗಮಕ್ಕೆ ಜಂಗಮವಾಗಿರುವ, ಪ್ರಸಾದಕ್ಕೆ

ಪ್ರಸಾದವಾಗಿರುವ ತನ್ನ ಪರಮ ಸತ್ಯವ ತಿಳಿಯಲು ಬರುವುದು. ಈ ಕಾಯವ, ಕಾಯದ ಕಾಯವ ಕಾಣಲು ಉಪಯೋಗ ಮಾಡಿದಲ್ಲಿ ಇದರಿಂದ ಅಪಾಯವಿಲ್ಲ. ಆಗ ತನ್ನೊಳಗಿಹ ಗುರು, ಲಿಂಗ, ಜಂಗಮ ದರ್ಶನವಾಗಲು ಉಪಮಿಸುವುದು ಅಸಾಧ್ಯವು. ಇಂತಪ್ಪ ಪರಾತ್ಪರ ಜ್ಞಾನಕ್ಕೆ ಉಪಯೋಗಿಸಿದಲ್ಲಿ ಶರೀರವುಳ್ಳನ್ನಕ್ಕರ ವಿಕಾರ ಕೆಡದು ಎಂಬ ತೋರಿಕೆ ಅವರಿಗೆ ಅಷ್ಟು ಘನವಾಗಿ ತೋರದು.

ಸುಳುಹುಳ್ಳನ್ನಕ್ಕರ ಸೂತಕ ಬಿಡದು ಗುಹೇಶ್ವರಾ : ಎಲ್ಲಕ್ಕಿಂತಲೂ ವಾಸನೆ ಬಹು ಕೆಟ್ಟದ್ದು, ಇದು ತ್ರಿವಿಧರೂಪವಾಗಿಹುದು. ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆ, ಈ ಮೂರು ವಾಸನೆಗಳು ಹೃದಯದಲ್ಲಿ ಬೀಜಭೂತವಾಗಿವೆ. ದೇಹದ ನಂಜು, ಲೋಕದ ನಂಜು, ಶಾಸ್ತ್ರದ ನಂಜು ಈ ಮೂರು ಉಂಟಾಗಿ ಭವ ಭವಾಂತರದಲ್ಲಿ ಜನ್ಮಂಗಳು ತಪ್ಪವು. ಅದಕ್ಕಾಗಿ ವಾಸನಾಕ್ಷಯವೂ ಬಹು ಮಹತ್ವವು. ಈ ವಾಸನೆ ನಷ್ಟವಾಗದಿರುವುಡೆ ದೇಹವು ಶುಭವಾಗಿರಲಿ, ಅಶುಭವಾಗಿರಲಿ ಇವುಗಳ ಅಹಂ ಮಮದ ಸುಳುಹು ನಷ್ಟವಾಗವುದು ಅಸಾಧ್ಯವು ಮತ್ತು ಇಂದ್ರಿಯಂಗಳ ಶುಭಾಶುಭಂಗಳಾಗಲಿ ಅಹಂ ಮಮದ ಸುಳುಹು ನಷ್ಟವಾಗದು, ಇದಲ್ಲದೆ ಮನವು ಬಹಿರ್ಮುಖವುಳ್ಳ ಮನವಾಗಿರಲಿ, ಪೂಜಾ ಧ್ಯಾನಾದಿಗಳಿಂದುಕ್ತವಾಗಿರಲಿ ಇವುಗಳ ಅಹಂ ಮಮದ ಸುಳಿದಾಟ ನಷ್ಟವಾಗದು. ನಷ್ಟವಾಗದ್ದರಿಂದ ಜನನ ಸೂತಕವುಂಟು. ಪ್ರೇತಕ ಸೂತಕವುಂಟು, ರಜಸ್ಸಸೂತಕ ಉಂಟು, ಎಂಜಲ ಸೂತಕ ಉಂಟು, ಉಚ್ಚಿಷ್ಟ ಸೂತಕ ಉಂಟು, ಈ ಸೂತಕ ನಷ್ಟವಾಗಬೇಕಾದರೆ ಶ್ರೀಗುರು ಕಾರುಣ್ಯದಲ್ಲಿ ಉತ್ಪತ್ತಿಯಾದ ಅಜಾತರಾಗಬೇಕು. ಈ ಅಜಾತ ತತ್ವ ಸಿದ್ಧವಾಗುವುದರಿಂದ ಮರವು ನಷ್ಟ, ಮಾಯೆನಷ್ಟ, ಪ್ರಪಂಚದ ತೋರಿಕೆಯು ನಷ್ಟ, ಇದಲ್ಲದೆ ಕರ್ಮಪಾಶವು ನಷ್ಟವು, ಆಗ ತನಗೆ ತನು ಉಂಟೆಂಬ ಭಾವವು ಪುಶಿಯಾಗುವುದು. ಮನ ಉಂಟೆಂಬುದು ಪುಶಿಯಾಗಿ ಆಗ ಪಂಚಸೂತಕವು ತನಗಿಲ್ಲವೆಂಬುದು ತನಗೆ ವಿದಿತವಾಗಿ ತನ್ನ ತೆರಹಿಲ್ಲದ ಘನದಿರುವೆ ಪ್ರಜ್ವಲಿಸುವುಡೆ ಶರೀರ ಸುಳಿದಾಡಿದರೂ ತನಗೆ ಅದರ ಸಂಬಂಧವಿಲ್ಲವಾಗುವುದು. ಶರೀರ ಸುಳಿದಾಟ ಅಪಾಯವಿಲ್ಲ, ಶರೀರದ ಶುಭಾಶುಭ ಕಾರ್ಯದ ಅಹಂ ಮಮದ ಸಂಬಂಧ ಜೀವನಿಗೆ ಅಪಾಯವಿದೆ. ಅಲ್ಲಿಯೆ ಪಂಚಸೂತಕಗಳುಂಟು ಎಂದು ಹೇಳಿಹರು.

ಆರಲ್ಲಿ ಅಹಂ ಮಮವು ಬಲಗೊಂಡಿದೆ. ಮರವು ಇದೆ, ಮಾಯೆ ಇದೆ, ವಿಷಯದಾಸಕ್ತಿ ಇದೆ. ವಿಷಯಾಸಕ್ತಿಗೆ ವಿರತಿಯಾಗುವುದು ಹೇಗೆ ಸಾಧ್ಯ. ನಿರ್ವಿಷಯರಾಗದೆ ಜಗತ್ಪೂಜ್ಯರೆನಿಸಿಕೊಂಡು ನಡೆ ನುಡಿವುಳ್ಳವರಾಗಿಯೂ ಭವದಿಂದ ವಿಮುಕ್ತರಾಗರು. ಜಗದ ಪೂಜ್ಯತ್ವವೆ ಇವರನ್ನು ಹುಟ್ಟುಸಾವುಗಳಿಗೆ ಕಾರಣ ಮಾಡಿದೆ. ಇದಲ್ಲದೆ ಇವರು ಶಬ್ದವೇದಿಗಳಾಗಿ ನುಡಿವರು ನಡೆಯುವರು. ನಿಶಬ್ದವೇದಿಗಳಾಗದಿರುವುದ ಕಂಡು ಗುಹೇಶ್ವರ ನಗುತ್ತಿಪ್ಪನು.

**118**

**ಜಗದ್ವಂದ್ಯರೆಂದು ನುಡಿದು ನಡೆವರು ನೋಡಾ,**
**ಭವಬಂಧನದ ಕುಣಿಕೆಯ ಕಳೆಯಲರಿಯರು ನೋಡಾ,**

**ಭವ ತಮ್ಮ ತುಳಿ ತುಳಿದು ಕೊಂಡಿತ್ತು ನೋಡಾ!**
**ಶಬ್ದ ವೇದಿಗಳೆಂದು ನುಡಿದು ನಡೆವರು ನೋಡಾ,**
**ನಿಃಶಬ್ದ ವೇದಿಸದಿರ್ದಡೆ, ಗುಹೇಶ್ವರ ನೋಡಿ ನಗುತ್ತಿಪ್ಪನೋಡಾ!** ॥ 483 ॥

**ತಾತ್ಪರ್ಯ** : ಜಗದ್ವಂದ್ಯರೆಂದು ನುಡಿದು ನಡೆವರು ನೋಡಾ : ಜಗದ್ವಂದ್ಯರು ಇವರಾರು ? ಕಾಣಿಸುವ ಪಿಂಡಾಂಡ, ಬ್ರಹ್ಮಾಂಡ ರೂಪಿ ಜಗತ್ತು ಇವರುಗಳಿಗೆ ಸತ್ಯವಾಗಿದೆ. ಈ ವಿಶ್ವಕ್ಕೆ ಪೂಜ್ಯರಾಗಲು ನಡೆವುಳ್ಳವರು. ಇವರು ಜಗತ್ಪೂಜ್ಯರು. ಇವರಿಗೆ ವಿಶ್ವದ ಪೂಜ್ಯರೆನಿಸಿಕೊಳ್ಳುವ ಹುಚ್ಚು ಅಧಿಕವಾಗಿ ಬ್ರಹ್ಮಚರ್ಯ ಮೊದಲಾದ ನಿಯಮವ ಆಚರಿಸುತ್ತಿಹರು.

ಇವರು ಭವಬಂಧನದ ಕುಣಿಕೆಯ ಕಳೆಯಲರಿಯರು. ಭವಬಂಧನದ ಕುಣಿಕೆ ಆವುದು ಗೊತ್ತೆ ? ತಾನು ಅರುವಿಂಗರುವಾಗಿದ್ದುದ ಮರೆತು ಈ ದೇಹದ ನೈತಿಕ ಕ್ರಿಯಾಚಾರ ಅಭಿಮಾನ ಮೋಹವೆ ಭವಬಂಧನದ ಕುಣಿಕೆಯಾಗಿದೆ. ಇದರಿಂದ ದೇಹದ ಸತ್ಯತ್ವಬುದ್ಧಿ ಅಧಿಕವಾಗಿ, ಇಂದ್ರಿಯಂಗಳ ಕ್ರಿಯಾಚಾರ ತಾನಾಗಿ ಮಾಡುವುದೆ, ಭವಬಂಧನ ಕುಣಿಕೆಯಾಗಿದೆ. ಇದರಿಂದ ಲೋಕದ ನಚ್ಚು ಮೆಚ್ಚುಗೆ ಭೂತ ಬಡಿದು ಜಿತೇಂದ್ರಿಯತ್ವವೆ ಮಹಾಘನವಾಗಿ ದೇಹವಾಸನೆ, ಲೋಕವಾಸನೆ, ಅಲ್ಲಿ ಅಧಿಕ ಬೆಳೆದು, ಈ ನಡೆಯ ನುಡಿಯ ಹುಚ್ಚು ಹಿಡಿದು, ಗುಣಮಯಿ ಪ್ರಕೃತಿ ಚಕ್ರಕ್ಕೆ ಸಿಕ್ಕಿಕೊಂಡು ಪರಮಾತ್ಮನ ಮಾಯಿಕ ಲೋಕವೆ ಇವರಿಗೆ ದಿಟವಾದುದರಿಂದ ಜಗತ್ಪೂಜ್ಯರಾಗಿರುವರು. ಇದು ಭವಬಂಧನವು ಅಹುದು, ಇತ್ತ ಕುಣಿಕೆಯು ಅಹುದು, ಇದನ್ನು ಕಳೆದುಕೊಳ್ಳುವ ಭಾವವೆ ಇವರಿಗೆ ಇಲ್ಲವಾದ್ದರಿಂದ ಕುಣಿಕೆಯ ಕಳೆಯಲರಿಯರೆಂದು ಹೇಳಿದೆ.

ಜಗದ್ವಂದ್ಯರೆಂದು ಜಗತ್ತಿಗೆ ಪೂಜ್ಯರೆನಿಸುವ ಜಗದ್ಗುರುತ್ವದ ಅಭಿಮಾನಿಗಳು, ಅವರಿಗೆ ಜಗದ್ಗುರುಗಳು ಎಂದು ಭಕ್ತರು ಕೊಂಡಾಡಿದರೆ ಅವರಿಗೆ ಸಮಾಧಾನ. ವಿರತಿಗಳು ಇತ್ತ ತಪಸ್ವಿಗಳು, ಲಿಂಗಾರ್ಚಕರು, ಇತ್ತ ಶೈವೋಪಾಸಕರು, ವಿಷ್ಣೋಪಾಸಕರು, ವೇದಾಧ್ಯಯನ ಮಾಡಿ ಕ್ರಿಯೆ ಉಪಾಸನೆ ಜ್ಞಾನಕ್ಕೆ ಮೆಚ್ಚಿ ಅವುಗಳನ್ನು ತಾವು ಆಚರಿಸತ್ತ, ಭಕ್ತರಿಗೆಲ್ಲ ಪ್ರತಿಷ್ಠಿತವಂತರಾಗಿ ಭೇದ ಜ್ಞಾನಿಗಳಾಗಿರುವ. ಇವರು ಭಕ್ತರಿಗಾಗಿ ಕಲಿಸುವ ಪಾಠ, ಸಂಚಪ್ರಕಾರ ಭೇದ ಜ್ಞಾನ, ಜೀವನು ಬ್ರಹ್ಮರ್ಪಣ ಮಾಡುವುದು ಮುಖ್ಯವು. ಲಿಂಗಾರ್ಪಿತ ಮಾಡುವುದು ಮುಖ್ಯವು. ಈ ಅರ್ಪಣದ ವಿಧಾನವು ಕಲಿಸುವರು. ಬಾಹ್ಯ ಪೂಜಾ ವಿಧಾನ ಕಲಿಸುವುದು, ಏನು ಅಭ್ಯಾಸ ಮಾಡಿಸಿದರೂ ಮೂಲ ತತ್ವ ತಿಳಿಯದವರು, ತಾವೆ ತಿಳಿಯದಿರುವಲ್ಲಿ ಭಕ್ತರಿಗೇನು ತಿಳಿಸುವುದು ಮತ್ತು ತಿಳಿಸಿದವರಂತೆ ನಟಿಸುವುದು. ಇದಲ್ಲದೆ ಇವರು ದೇವನ ವಿಷಯದ ಬಗ್ಗೆ ಮಾತನಾಡುವುದೆಂದರೆ ತ್ರಿನೇತ್ರವುಳ್ಳವನು. ಅಂಧಕಾಸುರನನ್ನು ಮೆಟ್ಟಿ ನಾಟ್ಯವಾಡಿದವನು. ರುಂಡ ಮಾಲೆಯ ಧರಿಸಿದವನು, ಮಂಡಲದೊಳಗೆ ಸುಳಿವ ಈಶ್ವರನು, ಮಹೇಶ್ವರನು ಎಂದು ಹೇಳುವರು. ಇದಕ್ಕೂ ಮೀರಿ (ಲಿಂಗ) ಇಷ್ಟಲಿಂಗವು ಎಲ್ಲಕ್ಕಿಂತಲೂ ಶ್ರೇಷ್ಠವು. ಈ ಲಿಂಗಯ್ಯನನ್ನು ತ್ರಿಕಾಲ ಪೂಜಾ ಮಾಡುವ ಭಕ್ತರಿಗೆ ಈ ದೇವನು ಬೇಡಿದಿಷ್ಟಾರ್ಥವನೀವನು ಎಂದು ಕ್ರಿಯಾಚಾರವ ವರ್ಣಿಸುವರು.

ಇದಲ್ಲದೆ ಇವರು ಶಬ್ದವೇದಿಗಳಾದುದರಿಂದ ವೇದ, ಶಾಸ್ತ್ರ, ಆಗಮ, ಪುರಾಣ ಘನವಾಗಿಹವು. ತಾವಾರೆಂಬ ತಮ್ಮ ಘನವ ಕಾಣದ್ದರಿಂದ ಬ್ರಹ್ಮನ ಭೂತಾಟವಾದ ವೇದವೆ ಘನವಾಗಿಹವು. ಸರಸ್ವತಿಯ ಗೊಡ್ಡಾಟವಾದ ಶಾಸ್ತ್ರವೇ ಘನವಾಗಿಹುದು, ಋಷಿಯ ಮರುಳಾಟವಾಗಿಹ ಆಗಮವೆ ಘನವಾಗಿಹವು. ಪೂರ್ವಿಕರ ಗೊಡ್ಡಾಟವಾಗಿಹ ಪುರಾಣಂಗಳೆ ಘನವಾಗಿಹವು. ಇವುಗಳ ತಿರಸ್ಕೃತ ಮಾಡಿ ತಮ್ಮನರಿಯುವ ಭಾಗ್ಯದಿಂದ ವಂಚಕರಾದುದಕ್ಕಾಗಿ ನಡೆ ನುಡಿಗಳೆ ಘನವಾಯಿತಲ್ಲದೆ ನುಡಿವವ ನಾನಾರು ? ನಡೆಯುವವ ನಾನಾರು ? ನುಡಿವುದು ಬ್ರಹ್ಮವೆ ? ಲಿಂಗವೆ ? ನಡೆವುದು ಬ್ರಹ್ಮವೆ, ಲಿಂಗವೆ ಎಂಬ ನಿಜದರುವಿನ ಮುಖದವರಾಗದೆ, ಜಗದ್ವಂದ್ಯರಾಗಲು ವೇದವನೋದಿ ಅದೊಂದು ಘನಸಂಪಾದನೆಯಾಯಿತ್ತು ಶಾಸ್ತ್ರವನೋದಿ ಅದೊಂದು ಘನಸಂಪಾದನೆಯಾಯಿತ್ತು, ಆಗಮವನೋದಿ ಅದೊಂದು ಘನಸಂಪಾದನೆಯಾಯಿತ್ತು, ಪುರಾಣವನೋದಿ ಅದೊಂದು ಘನಸಂಪಾದನೆಯಾಯಿತ್ತು. ಅಲ್ಲ ಅಹುದೆಂಬುದಕ್ಕೆ ಸಿಲುಕಿ ನಡೆನುಡಿಯುಳ್ಳವರಾಗಿ ಗುಹೇಶ್ವರನೆಂಬ ಮಹಾಘನದ ನಿಜಾನುಭವದ ಸಂಪಾದನೆ ಯನರಿಯದ ಕಾರಣ ಹಲವು ಸಂಪಾದನೆಗೆ ಮೆಚ್ಚಿ ಶಬ್ದವೇದಿಗಳಾದರು.

ಶಬ್ದವೇದಿಗಳ ಕಾರ್ಯ ಕಲ್ಪಿತನಕಾರ್ಯ, ಮರವಿನ ಕಾರ್ಯ, ಉಪಾಧಿಯಲ್ಲಿ ಪ್ರತಿಫಲಿತವಾದ ಚೇತನ ಕಾರ್ಯಕ್ಕೆ ಒಪ್ಪಿಕೊಂಡರಲ್ಲದೆ ಪರಬ್ರಹ್ಮವನರಿಯ ಹೋಗಲಿಲ್ಲ, ಅದಕ್ಕಾಗಿ ಗುಣಮಯಿಯಾಗಿಹ ಸತ್ವಗುಣದ ಕಾರ್ಯವೆ ಇವರಿಗೆ ಘನವಾಗಿ ರಜೊ ತಮೋಗುಣಗಳಿಗೆ ಮಹತ್ವ ಕೊಡದೆ ಕ್ರಿಯಾಶೀಲರಾಗಿ ಜಗದ್ವಂದ್ಯರಾಗಿ ನಡೆದರು, ನುಡಿದರು. ಯಮಾಂಗವಾಗಿಹ ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಆಸ್ತೇಯ, ಅಪರಿಗ್ರಹಕ್ಕೆ ಒಪ್ಪಿಕೊಂಡರು.

ನಿಯಮಗಳಾಗಿಹ ಆಸನ, ಪ್ರಾಣಾಯಾಮ, ಪ್ರತ್ಯಾಹಾರ ಧಾರಣಧ್ಯಾನ ಸಮಾಧಿ ಇವುಗಳಲ್ಲಿ ಆಸನ, ಪ್ರಾಣಾಯಾಮಕ್ಕೆ ಅಷ್ಟೆ ಮಹತ್ವ ಮಾಡಿ, ಇವುಗಳ ಆಚರಿಸಿ ಜಗದ್ವಂದ್ಯರೆಂದು ಅನ್ನಿಸಿಕೊಂಡರು. ಇಲ್ಲಿ ಆಸನವೇ ಬೀಜವಾಗಿದೆ, ಪ್ರಾಣಾಯಾಮವೇ ಬೇರು, ನಿಯಮಿತ ಸಾಧನೆಯೆ ವರ್ಷಾವಾಗಿದೆ, ಸುಂದರ ಸ್ವಾಧ್ಯಾಯ ಹೂವು ಆಗಿದೆ. ಏಕಾಗ್ರತವೆ ಫಲವಾಗಿದೆ. ಜಗದ್ವಂದ್ಯರಾಗುವವರು, ಉತ್ತರ ಸಾಧನವಾದ ಧಾರಣ, ಧ್ಯಾನ, ಸಮಾಧಿಯ ಕಡೆ ಹೋಗಲಿಲ್ಲ, ಇವರಿಗೆ ಜ್ಞಾನ ಸಾಧನೆ ಗೌಣವಾಗಿ ಕ್ರಿಯಾಚಾರವೆ ಘನವಾಗಿದೆ. ಇದು ಕಾರಣ ತಮ್ಮ ಆವರಣ ನಿವೃತ್ತಿ ಮಾಡಿಕೊಳ್ಳುವ ಸಾಧನೆಯಾಗಿಹ ಜ್ಞಾನದ ಕಡೆ ಲಕ್ಷ್ಯ ಕೊಡದಿಹರು. ಅದನ್ನು ತಿಳಿಸಿಕೊಡುವ ಗುರುವಿನ ಕಡೆಗೂ ಇವರು ಲಕ್ಷ್ಯಕೊಡದವರು. ಲೋಕದವರು ಜಗದ್ವಂದ್ಯರೆಂದು ಕೊಂಡಾಡಿದರೆ ಸಾಕು, ತಮ್ಮ ಘನತ್ವಕ್ಕೆ ಕುಂದುಬಾರದಂತಿದ್ದರೆ ಅವರಿಗೆ ಅದುವೆ ಸ್ವರೂಪ ಸಾಕ್ಷಾತ್ಕಾರವೆನಿಸಿದೆ.

ಸತ್ವಗುಣವಾಗಿಹ ಅಹಿಂಸೆ, ಸತ್ಯ ಬ್ರಹ್ಮಚರ್ಯ, ಅಪರಿಗ್ರಹ, ಆಸ್ತೇಯ. ಅಹಿಂಸೆ ಎಂದರೆ ದಯವಿಲ್ಲದ ಧರ್ಮವದಾವುದಯ್ಯ, ದಯವೆ ಬೇಕು ಸಕಲಪ್ರಾಣಿಗಳಲ್ಲಿ ಎಂಬುವಂತೆ ಕಾಯ, ವಾಣಿ, ಮನಸ್ಸಿನಿಂದ ಆವುದೆ ಪ್ರಾಣಿಗೆ ಕೊಲೆ ಮಾಡದೆ ದುಃಖ ಸಹ ಕೊಡದೆ ಅಂದರೆ ಕರುಣವಿರಲಿ ಜೀವರೊಳ್ ನೀತಿವಿದನಾಗಿರು ಎಂಬುವಂತೆ

ವರ್ತಿಸುವುದೆ ಅಹಿಂಸೆಯಾಗಿದೆ. ಅಹಿಂಸಾ ಪ್ರತಿಷ್ಠಾಯ ತತ್ಸನ್ನಿಧೌ, ವೈರತ್ಯಾಗ, ಅಹಿಂಸಾಗುಣ ಪೂರ್ಣವಾಗಿ ಯಾವಾತನು ಸಾಧಿಸಿರುವನೋ ಅವನ ಬಳಿಯಲ್ಲಿ ಯಾವತ್ತು ಪ್ರಾಣಿಗಳು ವೈರತ್ಯಾಗ ಮಾಡಿ ವರ್ತಿಸುವವು.

ಸತ್ಯ ಇದು ಪರಮಾರ್ಥವಿಂತಿದು, ಧರ್ಮವಿದು, ಸೇವ್ಯವಿದು, ಪರಹಿತವಿದು, ಸಮುಚಿತಂ ಇದು. ನೀತಿ ಮತವೆ ಸಕಲಾತ್ಮರೊಳು ನುಡಿವುದು ಸತ್ಯವೆನಿಸುವುದು. ಸತ್ಯದಿಂದಲೆ ಜಯವಾಗುತ್ತದೆ ಮತ್ತು ಸತ್ಯವು ಸ್ವರ್ಗದ ಸೋಪಾನವಾಗಿದೆ.

ಅಸ್ತೇಯ ಅನ್ಯರ ವಸ್ತು ಅಪಹರಿಸದೆ ಇರುವುದು ಅಸ್ತೇಯವೆನಿಸುವುದು. ಮನಸ್ಸಿನಿಂದಾದರೂ ಕೂಡ ಎರಡನೆಯವರ ಪದಾರ್ಥದ ಇಚ್ಛೆ ಮಾಡದಿಹುದೆ ಅಸ್ತೇಯವಾಗಿದೆ.

ಬ್ರಹ್ಮಚರ್ಯ ಭುವನದೊಳುಳ್ಳ ಸ್ತ್ರೀ ನಿವಹದೊಳೆಂತು ಸಂಗವನೊಲ್ಲದಿರುತಿರಲದು ತಾನೆ । ಯುವತಿ ನೀನರಿ ಬ್ರಹ್ಮಚರ್ಯವೆನಿಪುದು ಸಾಧ್ಯವೇ ನೋಡು. ಸಾಮಾನ್ಯ ಜನರದು, ಋತುಮತಿಯಾದ ಕಾಲವನು ಮೀರದೆ ನಿಜ ಸತಿಯೊಳು ರತಿಸುಖವ ಪಡೆವುದು ನುತ ಬ್ರಹ್ಮಚರ್ಯವೆನಿಸುವುದು.

ವೀರ್ಯಧಾರಣ, ಬ್ರಹ್ಮಚರ್ಯವತ್। ಮರಣಂ ಬಿಂದು ಪಾತೇನಜೀವಂ, ಬಿಂದು ಧಾರಣಾತ್, ತಸ್ಮಾದತಿ ಪ್ರಯತ್ನೇನ, ಕುರುತೆ ಬಿಂದು ಧಾರಣಂ । ಬಿಂದು ಧಾರಣದಿಂದಲೆ ಜೀವನವು ಮತ್ತು ಬಿಂದು ಪತನದಿಂದ ಮೃತ್ಯು ಉಂಟಾಗುತ್ತದೆ. ಭಕ್ತರಾಜ ಹನುಮಾನ್ ಮತ್ತು ಪಿತಾಮಹ ಭೀಷ್ಮನು ಬ್ರಹ್ಮಚರ್ಯ ವ್ರತದಿಂದ ಜಗತ್ತಿನಲ್ಲಿ ವೀರರೆಂದಿನಿಸಿಹರು. ಇದರಿಂದ ಸದಾ ಮಾನವನು ಆರೋಗ್ಯವಂತನಾಗುವುದಲ್ಲದೆ ಮರಣದಿಂದ ರಕ್ಷಿಸಲ್ಪಡುವನು. ಇದುವೆ ಸರ್ವಸಾಧನೆಗಳ ಪ್ರಥಮ ಪಾಠವಿದೆ.

ಅಪರಿಗ್ರಹ: ಸಂಗ್ರಹಗಳ ಪೂರ್ಣ ತ್ಯಾಗ ಮಾಡುವುದೆ ಅಪರಿಗ್ರಹವೆನಿಸುತ್ತದೆ ಮತ್ತು ಇದಲ್ಲದೆ ಬ್ರಹ್ಮಚರ್ಯದ ಬಗ್ಗೆ ಸಾಕ್ರೇಟಿಸ್ ತನ್ನ ಶಿಷ್ಯನಿಗೆ ಹೇಳುತ್ತಾನೆ.

ಶಿಷ್ಯ : ಮಾನವನು ಜನ್ಮದಲ್ಲಿ ಸ್ತ್ರೀಸಂಗ ಮಾಡುವುದು ಎಷ್ಟು ಸಲ.

ಗುರು : ಜೀವನದಲ್ಲಿ ಕೇವಲ ಒಂದು ಸಲ.

ಶಿಷ್ಯ : ಒಂದು ಪಕ್ಷ ತೃಪ್ತಿ ಆಗದೆ ಇದ್ದಲ್ಲಿ,

ಗುರು : ಒಂದು ವರ್ಷಕ್ಕೆ ಒಂದು ಸಲ.

ಶಿಷ್ಯ : ಇದರಿಂದ ಮನಸ್ಸು ತಡೆಯದೆ ಹೋದರೆ.

ಗುರು : ತಿಂಗಳಲ್ಲಿ ಒಂದು ವೇಳ್ಯ.

ಶಿಷ್ಯ : ಪುನಃ ಮನವು ಕೇಳದಿದ್ದರೆ.

ಗುರು : ತಿಂಗಳಲ್ಲಿ ಎರಡು ಸಲ ಆಗಬಹುದು.

ಶಿಷ್ಯ : ಇನ್ನು ಆದರೂ ತೃಪ್ತಿ ಆಗದೆ ಇದ್ದಲ್ಲಿ,

ಗುರು : ಹಾಗಾದರೆ ಮೊದಲು ಸಮಾಧಿ ತಯ್ಯಾರಿಸಿಕೊಂಡು ಆಚರಿಸಬಹುದು.

ಹೀಗೆ ಜಗತ್ತಿಗೆ ತೋರಿಸುವ ಸತ್ವಗುಣ ಕಾರ್ಯವನ್ನು ಡಾಂಭಿಕತ್ವದಿಂದ ಜನರಿಗೆ ತೋರಿಸಲು ನುಡಿದು ನಡೆವರು. ಇವರು ಶಬ್ದವೇದಿಗಳು, ತಮ್ಮ ಭವವನ್ನೆ ಕಳೆದುಕೊಳ್ಳದವರು. ತಾವೆ ಲೋಕದ ನಚ್ಚುಮೆಚ್ಚುವರಾಗಿರುವುದರಿಂದ ಭವ ತಮ್ಮ ತುಳಿ

ತುಳಿದುಕೊಂಡಿತ್ತು ನೋಡಾ ಎಂದು ಹೇಳಿಹರು. ಏಕೆಂದರೆ ಇವರಲ್ಲಿ ದೇಹವಾಸನೆ, ಲೋಕವಾಸನೆ, ಶಾಸ್ತ್ರ ವಾಸನೆಗಳೆ ಭವವಾಗಿವೆ. ಇವರು ಶಬ್ದವೇದಿಗಳಾದುದರಿಂದ ಗುಹೇಶ್ವರನ ಅರಿಯದವರು.

ನಿಶಬ್ದವೇದಿಸದಿದ್ದರೆ ಗುಹೇಶ್ವರ ನೋಡಿ ನಗತಿಪ್ಪನಯ್ಯ : ಗುಹೇಶ್ವರನ ಅರಿತವರೆ ನಿಶಬ್ದವೇದಿಗಳು, ಅಕಲ್ಪಿತ ಘನದಿರುವೆ ತನ್ನಿರುವೆಂದರಿದ ಮಹಾಂತರು ನಿಶಬ್ದವೇದಿಗಳು ಎಂಜಲ ಮಾತ ಒಪ್ಪದವರು, ಮಿಗೆ ಮಿಗೆ ಮೀಸಲವಾಗಿಹ ತನ್ನಿರುವ ತಿಳಿದವರು. ಈ ಪರತತ್ವದರುವು ಆರಲ್ಲಿ ಇಲ್ಲ ಅವರನ್ನು ನೋಡಿ ಗುಹೇಶ್ವರ ನಗುತಿಪ್ಪನಯ್ಯ ಎಂದು ಹೇಳಿಹರು.

**119**

**ಲೋಕದವರನೊಂದು ಭೂತ ಹಿಡಿದಡೆ,**
**ಆ ಭೂತದಿಚ್ಛೆಯಲ್ಲಿ ನುಡಿವುತ್ತಿಪ್ಪರು.**
**ಲಾಂಛನ ಧಾರಿ ವೇಷವ ಧರಿಸಿ,ಆಸೆಯಿಂದ ಘಾಸಿಯಾಗಲೇಕಯ್ಯ?**
**ಆನೆಯ ಚೋಹವ ಬಿಟ್ಟು ನಾಯಾಗಿ ಬೊಗಳುವ**
**ಮಾನವರನೇನೆಂಬೆ ಗುಹೇಶ್ವರಾ?** ॥ 484 ॥

**ತಾತ್ಪರ್ಯ** : *ಲೋಕದವರನೊಂದು ಭೂತ ಹಿಡಿದಡೆ ಆ ಭೂತ ದಿಚ್ಛೆಯಲ್ಲಿ* ನುಡಿವುತಿಪ್ಪರು : ಲೋಕದವರನ್ನು ಪರಮಾತ್ಮನ ಮಾಯಿಕವೆಂಬ ಭೂತ ಹಿಡಿದಿದೆ. ಈ ಭೂತವೆ ವ್ಯಷ್ಠಿ ರೂಪಾಗಿ ಸಮಷ್ಠಿ ನಾನಾರೂಪವಾಗಿ ನಿಂತಿದೆ. ಇದಲ್ಲದೆ ನಾನಾ ಲೋಕಂಗಳಾಗಿ ಧನಕನಕವಾಗಿ ಇಹಪರವಾಗಿ ಅಧಿಕಾರ ಫಲಪದಂಗಳಾಗಿ ತೋರುತ್ತಿಹುದು ಇವುಗಳ ಪ್ರಾಪ್ತಿಗೋಸ್ಕರ ಮಾಯಿಕ ರೂಪಿ ಭೂತದಿಚ್ಛೆಯಲ್ಲಿ ನುಡಿವುತಿಪ್ಪರು.

ಇದ್ದುದೊಂದು ಮಲಮಯ ಶರೀರ ; ಆ ಶರೀರಕ್ಕೆ ಗಂಡು ಎನ್ನುವದೊಂದು ಭೂತ, ಹೆಣ್ಣೆನ್ನುವದೊಂದು ಭೂತ. ಅದರಲ್ಲಿ ಶ್ರೇಷ್ಠ ಕೀಳು ಎನ್ನುವ ಭೂತ. ಅದರಲ್ಲಿ ವರ್ಣಾಶ್ರಮಗಳ ಭೂತ. ಬ್ರಹ್ಮವೆನ್ನುವವನಿಗೆ ನಾನು ಬ್ರಾಹ್ಮಣನೆನ್ನುವ ಭೂತ. ಹೀಗೆ ನಾಲ್ಕು ವರ್ಣಾಶ್ರಮದ ಭೂತ ಪ್ರತಿಯೊಬ್ಬ ಮಾನವನಿಗೆ ಈ ಭೂತ ಬಡಿದಿದೆ. ಸನ್ಯಾಸಿಗೆ ಸನ್ಯಾಸಿ ನಾನೆನ್ನುವ ಭೂತ, ತ್ಯಾಗಿಗೆ ತ್ಯಾಗಿ ನಾನೆನ್ನುವ ಭೂತ, ಯೋಗಿಗೆ ಯೋಗದ ಭೂತ, ಶಾಸ್ತಿಗಳಿಗೆ ನಾನು ಶಾಸ್ತ್ರಿಯೆಂಬ ಭೂತ, ಗುರುಗಳಿಗೆ ಗುರುಗಳು ನಾವು ಎನ್ನುವ ಭೂತ, ಶಿಷ್ಯರಿಗೆ ಶಿಷ್ಯರಾಗಿಹಭೂತ, ಹೀಗೆ ನಾನಾ ಭೂತ ಬಡಿದು ಭೂತದಿಚ್ಛೆಯಲ್ಲಿ ನುಡಿವುತಿಪ್ಪರು. ವಿಶ್ವವೆಲ್ಲವೂ ಭೂತದಿಚ್ಛೆಯಲ್ಲಿ ನುಡಿಯುತ್ತಿಪ್ಪರು. ಇವರು ಮಾಯೆಯ ಮೂಲ ತಿಳಿಯದ್ದರಿಂದ ಸಕಲರನ್ನು ತನ್ನ ಇಚ್ಛೆ ನುಡಿಸುತ್ತಿಹುದು, ನಡೆಸುತ್ತಿಹುದು, ಸಂಸಾರಿಗಳಿಗಷ್ಟೆ ಈ ಭೂತವು ತನ್ನ ಅಧೀನದಲ್ಲಿಟ್ಟುಕೊಂಡಿಹುದು. ಎಂತಲ್ಲ ಸನ್ಯಾಸಿಗಳಿಗೂ , ತ್ಯಾಗಿ ಯೋಗಿಗಳಿಗೂ ಮಾಯೆ ತನ್ನಾಧೀನದಲ್ಲಿಟ್ಟುಕೊಂಡಿರುವುದರಿಂದ ಆ ಭೂತದಿಚ್ಛೆಯಲ್ಲಿ ನುಡಿವುತಿಪ್ಪರು ಎಂದು ಹೇಳಿಹರು.

ಅನ್ನಪಾನ ಐಶ್ವರ್ಯಪಾನ ಯೌವ್ವನಪಾನ ಅಂಗಭಂಗಿ, ಕಾಮ ಭಂಗಿ, ಮನಭಂಗಿ ತ್ರಿಸುಧೆಯ ಸೇವಿಸುವವರು ನಿಮ್ಮನಿಜವನೆತ್ತ ಬಲ್ಲರು ? ಸನ್ಯಾಸಿಯಾಗಲಿ ಬ್ರಾಹ್ಮಣನಾಗಲಿ, ವಿರತಿಗಳಾಗಲಿ, ಕ್ರಿಯಾಮೂರ್ತಿಗಳಾಗಲಿ, ತಾವು ಸೇವಿಸುವ ಅನ್ನವು ಪ್ರಸಾದವಂತೆ ಶುದ್ಧೋದಕದಿಂದ ಮಾಡಿದ ಮೀಸಲ ಅಡಿಗೆಯಂತೆ ಈ ಪ್ರಸಾದವ ಆರಾರು ಅಂದರೆ ಭವಿಗಳು ಮುಟ್ಟಬಾರದು, ತಟ್ಟಿಸಬಾರದು ಎಂಬ ನೇಮ ನಿತ್ಯಗಳಿಂದ ಮಾಡಿದುದರಿಂದ ಪ್ರಸಾದದಭಿಮಾನಿಯಾಗಿ ಪ್ರಸಾದವ ಸೇವಿಸುವರು ಇದು ಪ್ರಸಾದದ ನಿಶೆ.

ಮತ್ತೊಂದು ತನ್ನ ಮಠದ ಆಸ್ತಿಯ ಅಭಿಮಾನಿಯಾಗಿ ಐಶ್ವರ್ಯವ ಭೋಗಿಸುವನು. ಇದಲ್ಲದೆ ತನ್ನ ಮಠದ ಆಸ್ತಿಗಿಂತ ಸಣ್ಣ ಮಠದವರು ಸನ್ಯಾಸಿಗಳನ್ನು ಗೌಣವಾಗಿ ಕಾಣುವನು. ತನ್ನದು ಅಧಿಕ ಸಂಪತ್ತಿನಿಂದುಕ್ತವಾದುದು, ತನ್ನ ಪ್ರಭಾವ ಸಕಲದಲ್ಲಿರುವುದರಿಂದ ಈತನೊಬ್ಬ ನಿಶೆವಂತ. ಈತನಿಗೆ ಮಠದ ಭೂತ ಬಡಿದಿದೆ. ಇದಲ್ಲದೆ ತನ್ನ ಬಲದಿಂದ ಇನ್ನು ಮಠದ ಆಸ್ತಿ ಬೆಳಸಬೇಕೆಂಬ ಇಚ್ಛೆ ಇರುವುದಲ್ಲದೆ ಅದನ್ನು ವೃದ್ಧಿ ಮಾಡುತ್ತಿಹನು. ತನ್ನಿಂದ ಇಷ್ಟೆಲ್ಲ ಆಸ್ತಿ ವೃದ್ಧಿಯಾಯಿತೆಂದು ಒಳಗೊಳಗೆ ಈ ಭೂತವು ಅಧಿಕವಾಗಿರುತ್ತದೆ. ಹಾಗೆಯೇ ಬ್ರಹ್ಮಚರ್ಯದ ಭೂತ. ಪ್ರತಿಯೊಬ್ಬನಿಗೂ ಒಂದೊಂದು ಮಾಯಿಕ ಭೂತ ಬಡೆದಿದೆ.

ಗೃಹಸ್ಥನಿಗೆ ತನ್ನ ಗೃಹಸ್ಥನಾಗಿಹ ಭೂತ ಸಕಲ ಪರಿಹಾರ ಭೂತ. ಆರು ತಾನು ಕಲ್ಪಿತ ಪುರುಷನೆಂಬುದಕ್ಕೆ ತನ್ನ ಮನ ಒಪ್ಪಿದೆ ; ಅವನಿಗೆ ಒಂದಿಲ್ಲೊಂದು ಭೂತ ಬಡಿದಿರುವುದರಿಂದ ಅಂಗವು ಅಪವಿತ್ರವು, ಮನವು ಅಪವಿತ್ರ. ಅಪವಿತ್ರ ಮನದ ಇಚ್ಛೆಯು ಅಪವಿತ್ರವು. ಹೀಗೆ ಸದಾ ಅಪವಿತ್ರ ತಮವು ಈ ಭೂತದ್ದಾಗಿರುವುದು.

*ಲಾಂಛನಧಾರಿ, ವೇಷವ ಧರಿಸಿ ಆಶೆಯಿಂದ ಘಾಸಿಯಾಗಲೇಕಯ್ಯ :* ಇವರು ಹೊರಗೆ ಲಾಂಛನವ ಹಾಕಿದರಲ್ಲದೆ ತಮ್ಮ ಅಂತರಂಗದೊಳಗೆ ಹಾಕಲಿಲ್ಲ, ಒಳಗೆ ಲಾಂಛನ ಹಾಕಿದ ಹಿರಿಮೆಯ ನೋಡಿರೆ ? ತ್ವಕ್ಕಿನ ತ್ವಕ್ಕಾಗಿರುವುದು, ಘ್ರಾಣದ ಘ್ರಾಣನಾಗಿರುವುದು, ನೇತ್ರದ ನೇತ್ರವಾಗಿರುವುದು, ಕರ್ಣದ ಕರ್ಣವಾಗಿರುವುದು, ಜಿಹ್ವೆಯ ಜಿಹ್ವೆಯಾಗಿರುವುದೆ ಅತೀಂದ್ರಿಯನಾಗಿ ಈ ಲಾಂಛನ ಹಾಕಿದುದು ನಿಜವಾದ ಸನ್ಯಾಸಿಯು ; ಕೇವಲ ಸ್ತ್ರೀಯಳೊಂದು ಬಿಟ್ಟ ಮಾತ್ರಕ್ಕೆ ಸನ್ಯಾಸಿಯಾಗನು.

ಹೆಣ್ಣು ಬಿಟ್ಟರೇನು, ಹೊನ್ನಿನಾಶೆವುಳ್ಳನ್ನಕ್ಕರ ಅಲ್ಲಿಗೆ ಹಿರಿಯತನ ಸಾಲದು, ಹೊನ್ನು ಬಿಟ್ಟಡೇನು, ಮಣ್ಣಿನಾಶೆ ಉಳ್ಳನ್ನಕ್ಕರ ಅಲ್ಲಿಗೆ ಹಿರಿತನ ಸಾಲದು, ಅವುಗಳೊಳಗೊಂದ ಹಿಡಿದಡೆಯೂ ಆ ತ್ರಿವಿಧವ ಹಿಡಿದವ. ಆ ಮಾಯೆ ಒಂದ ಬಿಟ್ಟೊಂದಿರವಾಗಿ ಅವನತಿಗಳೆದಲ್ಲದೆ ಭವಂನಾಸ್ತಿಯಾಗದು, ಇದು ಕಾರಣ ಕೂಡಲ ಚೆನ್ನಸಂಗಮದೇವಾ, ಈ ತ್ರಿವಿಧಮಲವ ಕಳೆದು ಸುಳಿವ ನಿಜಸುಳಿವಿಂಗೆ ನಮೋ ನಮೋ ಎಂಬೆನಯ್ಯ.

ಲಾಂಛನಧಾರಿ ವೇಷವ ಧರಿಸಿ, ಸ್ತ್ರೀ ಆಶೆ ಇಲ್ಲದಿದ್ದರೆ ಅಲ್ಲಿಗೆ ಇವರ ಹಿರಿಯತನ ಸಾಲದು. ಹೊನ್ನಿನಾಶೆ, ಮಣ್ಣಿನಾಶೆಯು ಸನ್ಯಾಸಿಗಳನ್ನು ಒಳಗೊಳಗೆ ಬಹು ಘಾಸಿ ಮಾಡುತ್ತಿಹುದು. ಇದನ್ನು ಕಂಡು ಪ್ರಭುದೇವರು ಆಶೆಯ ಚೋಹವ ಬಿಟ್ಟು ನಾಯಾಗಿ ಬೊಗಳುವ ಮಾನವನೇನೆಂಬೆ ಗುಹೇಶ್ವರಾ. ಕಾವಿ ಲಾಂಛನ ಹಾಕಿದ ಮೇಲೆ ಲಾಂಛನ

ಲಕ್ಷಣ, ಬ್ರಹ್ಮ ಲಕ್ಷಣ, ಶಿವ ಲಕ್ಷಣ, ಲಾಂಛನವು ಬೆಂಕಿ, ಜ್ಞಾನವು ಬೆಂಕಿ. ಜ್ಞಾನದಲ್ಲಿ ಬ್ರಹ್ಮಜ್ಞಾನವೆ ಶ್ರೇಷ್ಠವು. ಬ್ರಹ್ಮಜ್ಞಾನಿಯಾದ ಲಕ್ಷಣವೆ ಕಾವಿಲಾಂಛನ ಹಾಕಿದ ಲಕ್ಷಣ.

ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣ, ತ್ವಕ್ಕಿನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣ, ನೇತದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣ, ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣ, ಘ್ರಾಣದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣ, ಕೂಡಲ ಚೆನ್ನಸಂಗಮದೇವರಲ್ಲಿ ಎನಗಾರು ಇಲ್ಲವೆಂದು ಬ್ರಹ್ಮಚಾರಿಯಾದನಯ್ಯ ಪ್ರಭುದೇವರು.

ಲಾಂಛನ ವೇಷಧಾರಿಗಳಾದರೆ ಆಶೆಯು ನಮ್ಮನ್ನು ಘಾಸಿ ಮಾಡುವುದು. ಈ ಕಾಮನಾರೂಪಿ ಆಶೆಯ ನಾಶ ಮಾಡಲು ನಾವು ಅತಿಕಾಮಿಗಳಾಗುವುದು, ಮನದ ಮೂಲವನರಿಯ ಹೋಗುವುದರಿಂದ ಅನುಪಮ ಲಿಂಗ, ಸ್ವಯಂಜ್ಯೋತಿ ಲಿಂಗವಾಗುವನು. ಆ ಶ್ರೋತೃಲಿಂಗ ಸುಖದಲ್ಲಿ ರಮಿಸುವುದು. ತ್ವಕ್ಕು ಚೈತನ್ಯ ಸುಖದಲ್ಲಿ ರಮಿಸುವುದು, ನೇತ್ರವು ಸ್ವಪ್ರಕಾಶಮಯವಾಗಿಹ ಪ್ರಕಾಶದಲ್ಲಿ ರಮಿಸುವುದು. ಜಿಹ್ವೆಯ ಚಿದ್ರಸ ಸುಖ ಸವಿಯುವುದು. ಘ್ರಾಣವು ತನ್ನ ಮೂಲವಾಗಿಹ ಸದ್‌ಜ್ಞಾನಭರಿತವಾದ ಸುಗಂಧವ ಸವಿಯುವುದು. ಹೀಗೆ ಇಂದ್ರಿಯಂಗಳು ತನ್ನ ಮೂಲವಾಗಿಹ ಅತೀಂದ್ರಿ ಸುಖವ ಸವಿಯುವುದರಿಂದ ಮನಸ್ಸು ಸ್ವಭಾವಿಕವಾಗಿ, ಇಂದ್ರಿಯ ಜನ್ಯ ವಿಷಯೋಪಭೋಗಸುಖ ಮರೆತು ಅಖಂಡವಾಗಿಹ ಲಿಂಗಸುಖದಲ್ಲಿ ಲೀಯವಾಗುವುವು. ಆಗ ಇಂದ್ರಿಯಂಗಳು, ಅತೀಂದ್ರಿಯಗಳಾಗುವಲ್ಲಿ ವಿಷಯವೆ ನಿರ್ವಿಷಯವಾಗಿ ತೋರುವಲ್ಲಿ ಹೇಳಲಿಲ್ಲ, ಕೇಳಲಿಲ್ಲ, ಇಂತಪ್ಪ ಯತಾರ್ಥ ಜ್ಞಾನದ ಸುಖವ ಪ್ರಜ್ವಲಿಸುವಲ್ಲಿ, ಆಗ ನಮ್ಮನ್ನು ಆಶೆಯು ಘಾಸಿ ಮಾಡದು, ಇಲ್ಲದಿದ್ದರೆ ಈ ಆಶೆಯು ಮೊದಲು ತನ್ನನ್ನು ಘಾಸಿ ಮಾಡುವುದು. ಹಿಂದಿನಿಂದ ತನ್ನಾಶೆಯ ದಾಹವ ಹಿಂಗಿಸಿಕೊಳ್ಳಲು ಮೋಸವ ಮಾಡಲು ಹಿಂಜರಿಯದು, ಪ್ರಾಪಂಚಿಕರು ತಮ್ಮ ಆಶೆ ನೆರವೇರಿಸಲು ಆವ ಕಾರ್ಯ ಮಾಡಲು ಹಿಂಜರಿಯುವುದಿಲ್ಲ, ಹಾಗೆ, ಸನ್ಯಾಸಿಯು ಕೂಡ. ತನ್ನಾಶೆಯ ಪೂರೈಸಲು ಆವುದಾದರೊಂದು ನಿಮಿತ್ಯ ಮಾಡಿಕೊಂಡು ಹಣದ ಭಿಕ್ಷೆ ಮಾಡಲು ಹೇಸದೆ ಗ್ರಾಮ, ಗ್ರಾಮಗಳ ತಿರುಗುವನು, ಅಲ್ಲಿ ಕೊಟ್ಟವರಿಗೆ ಪುಣ್ಯವಂತರೆಂದು ಆಶೀರ್ವದಿಸುವನು, ಕೊಡದವರನ್ನು ಕಣ್ಣೆತ್ತು ನೋಡನು, ಅವರ ಯೋಗ ಕ್ಷೇಮ ಕೇಳನು, ತಿರುಕನು ತುತ್ತು ಪ್ರಸಾದಕ್ಕಾಗಿ ಹೇಗೆ ಮನೆ ಮನೆ ತಿರುಗುವನು ಹಾಗೆ ಲಾಂಛನವ ಧರಿಸಿಕೊಂಡು ಹಣಕ್ಕಾಗಿ ಎಲ್ಲೆಲ್ಲೂ ಸಂಚರಿಸುವನು, ಧರ್ಮಪ್ರಚಾರವೆಂದು ಭಾಷಣ ಮಾಡುವನು, ತನ್ನ ಒಳಗಿನ ಆಶೆಗಾಗಿ ಸತ್ಕಾರ್ಯದ ನೆಪದಲ್ಲಿ ಹಣ ಭಕ್ತರಿಂದ ದೋಚುವನು. ಹೀಗಾಗಿ ದೇವರು ಕೊಟ್ಟ ಅರುಹೃದಯವ ಹಾಳು ಮಾಡುತ್ತಿಹನು. ಇವರು ಭಾವ ಭ್ರಮಿತರು. ವಚನ ರಚನೆ ಮಾಡಿದರೆ, ಗುಹೇಶ್ವರನಿಪ್ಪ ಗುಪ್ತವೆಂತಂದರಿವರೆನಬೇಕೊ ?

**120**

**ಭಾವದಲ್ಲಿ ಭ್ರಮಿತರಾದವರ**
**ಸೀಮೆಯೇನು? ನಿಸ್ಸೀಮೆಯೇನು?**
**ವಚನದ ರಚನೆಯ ರಂಜನೆಯ ಲೀಲೆಯನಾಡುವರು.**

ಗುಹೇಶ್ವರನಿಪ್ಪ ಗುಪ್ತ ವೆಂತೆಂದರಿಯರು. ॥ 497 ॥

**ತಾತ್ಪರ್ಯ** : ಭಾವದಲ್ಲಿ ಭ್ರಮವುಳ್ಳವರ ಸೀಮೆಯೇನು ನಿಸ್ಸೀಮವೇನು ? : ಒಳಗೆ ಭಾವದಲ್ಲಿ ಭ್ರಮಿತರಾಗಿ ಹೊರಗೆ ನೋಡಲು ನಾವು ಗುರುಭಕ್ತ, ಲಿಂಗಭಕ್ತ, ಜಂಗಮ ಭಕ್ತರೆಂದು ಹೇಳಿಕೊಂಡರೆ ಭಕ್ತರಾಗುವರೆ ? ಭಕ್ತರಾದೆವೆಂದು ಯುಕ್ತಿಗೆಟ್ಟು ನುಡಿವರು. ಭಕ್ತಿ ಸ್ಥಲವೆಲ್ಲರಿಗೆಲ್ಲಿಯದೊ ? ಗುರುವಿನಲ್ಲಿ ತನು ವಂಚನೆ, ಲಿಂಗದಲ್ಲಿ ಮನ ವಂಚನೆ, ಧನದಲ್ಲಿ ಜಂಗಮ ವಂಚನೆವುಳ್ಳನ್ನಕ್ಕರ ಭಕ್ತನೆ ? ಗುರುವಿನಲ್ಲಿ ಚಾರಿತ್ರವ, ಲಿಂಗದಲ್ಲಿ ಲಕ್ಷಣವ ಜಂಗಮದಲ್ಲಿ ಜಾತಿ ಅರಸುವನ್ನಕ್ಕರ ಭಕ್ತನೆ ? ಅಲ್ಲ ಅವನು ದೋಷಾರ್ಥಿ.

ಶ್ಲೋಕ : '' ಭಕ್ತಸ್ಯ ಪ್ರತಿಪಕ್ಷೇಣಾಂ ಸದಾಚಾರೇಣ, ವರ್ಜಿತಃ ಗುರು, ಲಿಂಗ , ಜಂಗಮ ದ್ವೇಷೀತೆ ನರಾಣಾಂದುರಾತ್ಮನಾಂ, ಇದು ಕಾರಣ ಕೂಡಲ ಚೆನ್ನಸಂಗಮದೇವಾ ಭಕ್ತಿಸ್ಥಲವೆಲ್ಲರಿಗೆಲ್ಲಿಯದೊ. ''

ಭಾವದಲ್ಲಿ ಭ್ರಮಿತರಾದ ಭಕ್ತರು ಇವರು ಸೀಮಿತರಾಗುವುದು ತಡವಿಲ್ಲ, ನಿಸ್ಸೀಮರಾಗುವುದು ತಡವಿಲ್ಲ, ಭಾವಕ್ಕಗಮ್ಯರಾಗಿಹ ಘನದ ಮಾತಾಡುವುದು ತಡವಿಲ್ಲ, ಭಾವಿಕರಾಗುವುದು ತಡವಿಲ್ಲ, ಗುರು, ಲಿಂಗ, ಜಂಗಮ ಮೂರೊಂದಾದ ಘನ, ಭಾವಕ್ಕಗಮ್ಯವಾಗಿಹ ಘನ, ಇಲ್ಲಿ ಭಾವ ಭ್ರಮಿತರಾದಷ್ಟು ನಮಗೆ ಹಾನಿಯೆ. ನಿಷ್ಕಳಂಕ ಭಾವಿಕರೆಷ್ಟು ಭಕ್ತರೆಷ್ಟು ? ಗುರುವು ತತ್ವವು, ಲಿಂಗವು ತತ್ವವು, ಜಂಗಮವು ತತ್ವವು, ಇದು ವ್ಯಕ್ತಿಗತವು ಅಲ್ಲ, ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು, ಇದರಿರುವ ಅರುಹಿ ಗುರುವೆನಿಸಿತ್ತಯ್ಯ ಲಿಂಗವು, ನೆಲಿಸಿ ಲಿಂಗವೆನಿಸಿತ್ತಯ್ಯ ಲಿಂಗವು, ಈ ಮೂರರಲ್ಲಿ ತಿಲಾಂಶವೂ ಭೇದವಿಲ್ಲವಯ್ಯ ಭವಬಾಧೆತಪ್ಪದು ಕಪಿಲಸಿದ್ದ ಮಲ್ಲಿಕಾರ್ಜುನ. ಇಂತಪ್ಪ ಮಹದರುವು, ಗುರುವರ್ಗದವರಿಗಾಗಲಿ, ಭಕ್ತ ವರ್ಗದವರಿಗಾಗಲಿ, ಜಂಗಮವರ್ಗದವರಿಗಾದರೂ ಆಗಿದೆಯಾ ? ತತ್ವಕ್ಕಾಗಿ ತತ್ವದಿರುವ ತಿಳಿಯುವುದಕ್ಕಾಗಲಿ, ತಿಳಿಸುವುದಕ್ಕಾಗಲಿ, ತತ್ವಸಾಕ್ಷಾತ್ಕಾರಕ್ಕಾಗಿ, ಅದೆಷ್ಟು ಗುರು ಸಾಂಪ್ರದಾಯವು ಜಂಗಮ ಸಾಂಪ್ರದಾಯವು ಈ ಮಹತ್ಕಾರ್ಯವ ಹಮ್ಮಿಕೊಂಡಿದೆ. ಶಿಷ್ಯವರ್ಗವಾಗಲಿ, ಭಕ್ತವರ್ಗವಾಗಲಿ, ತಮ್ಮ ತನುವರ್ಪಿಸಿ ಗುರುವಾಗಿ ಬೆಳಗಿಹವೆ ? ಮನವನರ್ಪಿಸಿ ಲಿಂಗವಾಗಿ ಬೆಳಗಿಹರೆ ? ಧನವರ್ಪಿಸಿ ಜಂಗಮವಾಗಿ ಬೆಳಗಿಹರೆ ? ಇಲ್ಲವೆಂದಲ್ಲಿ ಭಾವದಲ್ಲಿ ಭ್ರಮಿತರಾದವರ ಸೀಮೆಯೇನು, ನಿಸ್ಸೀಮವೇನು ಎಂದು ಪ್ರಶ್ನಿಸಿಹರು.

ಗುರುವಿಂಗೆ ತನುವನರ್ಪಿಸಿ ; ಅಂದರೆ ಗುರು ಘನನ ಸುಜ್ಞಾನಕ್ಕೆ ತನುವನರ್ಪಿಸಿದಾಗ ಅಲ್ಲಿ ಗುರು ಬೇರೆ, ತಾನು ಬೇರೆಂಬ ಸೀಮಿತ ದೃಷ್ಟಿ ಉಳಿಯ ಬಹುದೆ ? ಆಗ ಗುರುಘನನು ತನ್ನನ್ನು ಚಾರಿತ್ರ ಪುರುಷನನ್ನಾಗಿ ಕಾಣಲು ತನ್ನೊಳ ಇಂಬು ಇರಬಹುದೆ ? ಗುರು ಕಾರುಣ್ಯದ ಲಿಂಗವರಿಯ ಹೋಗಿ, ಮನವು ತನ್ನ ಪೂರ್ವಾಶ್ರಮವುಳ್ಳದ್ದಾಗಿರಬಹುದೆ ? ಬೆಳಕಿನ ಮುಂದೆ ಕತ್ತಲೆ ಉಳಿಯಬಹುದೆ ? ಅಕಲ್ಪಿತ ಘನ ಬೆಳಗುವಲ್ಲಿ, ಅಲ್ಲಿ ಸಂಕಲ್ಪ ವಿಕಲ್ಪರೂಪಮನ, ಸುಳಿಯಬಹುದೆ ? ಭಾವಕ್ಕಗಮ್ಯವಾಗಿಹ ಜಂಗಮ ಘನ, ಇದು ಲಿಂಗ ಒಂದಾಗಿರ್ದ ಜಂಗಮ, ನಿರ್ಗಮನಿ

ಜಂಗಮ, ನಿರಾಳ ಜಂಗಮ, ನಿಜೈಕ್ಯ ಜಂಗಮರೂಪಿ ಪರತತ್ವಕ್ಕೆ ತನ್ನ ಭಾವರೂಪಿ ಧನವನರ್ಪಿಸಿದಾಗ ಅಲ್ಲಿ ತಾನು ತನ್ನ ಸುತ, ಸತಿ, ಧನಕನಕ ಮೊದಲಾದವು ಭಾವರೂಪವಾಗಿ ಕಾಣಬಹುದೆ ?

ಭೇದ ಜ್ಞಾನಿಗಳು ಭಾವರೂಪ ಭ್ರಮಿತರು, ಕುರುಹೆ ಇವರಿಗೆ ಘನವಾಗಿದೆ. ಇವರಲ್ಲಿ ಪೂಜ್ಯ ಪೂಜಕ ಭಾವನೆ, ಸ್ವಾಮಿ ಸೇವಕ, ಸೇವ್ಯ ಸೇವಕ ಈ ಭಾವರೂಪ ಭ್ರಮೆ ಬೇರೂರಿದೆ. ಇವರು ಮಾಯಿಕ ತತ್ವಕ್ಕೆ ಮೋಸ ಹೋದವರು. ನಿರ್ಮಾಯದ ಘನವ ಅರಿಯ ಹೋಗಲಿಲ್ಲ, ಇದು ಕಾರಣ ಗುರು ಲಿಂಗ ಜಂಗಮವೆಂಬಿವು ಅವರ್ಣೀಯ ಘನವು, ಸ್ವಯಂಜ್ಯೋತಿ ಲಿಂಗವೆಂದು ಭಾವಿಸದವರು, ತಿಳಿಯದವರು. ಹೊರಗೆ ಗುರು ಲಿಂಗ ಜಂಗಮ ಸಾಕ್ಷಾತ ಪರವಸ್ತು, ಚೈತನ್ಯ ಘನ ಸಚ್ಚಿದಾನವೆಂದು ಭಾವಿಸುವರು ನುಡಿವರು ಭಾವಿಸಿದರೆ, ನಿಸ್ಸೀಮರಾಗಿಹರೆ ? ತ್ರಿವಿಧ ರೂಪಿ ಗುರು, ಲಿಂಗ, ಜಂಗಮ, ಅಖಿಲ ಜಗವು, ತಾನು ಒಂದಾಗಿ ಕಾಣುವರೆ ? ಕೊನೆಗೆ ಅಖಂಡ ಭಾವವಾದರೂ ಇದೆಯಾ ? ಅಂದಲ್ಲಿ ಒಂದು ಕ್ಷಣದಲ್ಲಿ ಸೀಮಿತರು ಮತ್ತೊಂದು ಕ್ಷಣದಲ್ಲಿ ನಿಸ್ಸೀಮರು ಇವರು ನಿಜಭಾವ ಸಂಪನ್ನರಲ್ಲ, ಇವರದು ಭ್ರಮಿತಭಾವ, ಭ್ರಮಿತರಾದುದರಿಲ್ಲ . ಇವರ ಸೀಮಿತ ಭಾವವು ನಿಜವಲ್ಲ ನಿಸ್ಸೀಮವು ನಿಜವಲ್ಲ ಮಾತಿನ ಮಹಾಂತರು.

ಪರತತ್ವನಿಜ ಸಂಯುಕ್ತರು, ತತ್ವ ಅರಿತವರು, ಪರತತ್ವವೆ ತನ್ನಿರುವಾಗಿಹ ಘನಸಂಪನ್ನರು ಆಗಿರುವುದರಿಂದ ಅವರ ಭಾವರೂಪಭ್ರಮನಿರಸನವಾಗಿ ನಿಸ್ಸೀಮತ್ವ ಅಲ್ಲಿ ನೆಲೆಗೊಂಡಿರುವುದರಿಂದ ಭರಿತಭಾವ, ಅಖಂಡಭಾವ, ಅಖಂಡ ಜ್ಞಾನ ಅಲ್ಲಿ ನಿಜದಿರುವೆ ಪ್ರಜ್ವಲಿಸುವುದು. ತನುವ ಗುರುವಿಂಗಿಕ್ಕಿ ಗುರುವಾದನಯ್ಯ ಬಸವಣ್ಣ, ಮನವಲಿಂಗಕ್ಕಿಕ್ಕಿ ಲಿಂಗವಾದನಯ್ಯ ಬಸವಣ್ಣ, ಧನವ ಜಂಗಮಕಿಕ್ಕಿ ಜಂಗಮವಾದನಯ್ಯ ಬಸವಣ್ಣ, ಇಂತಿ ತ್ರಿವಿಧವ ತ್ರಿವಿಧಕಿಕ್ಕಿ ಶರಣ ಬಸವಣ್ಣ ಎಲ್ಲರಿಗೂ ಗುರುವಾದನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ. ಬಸವರಾಜ ದೇವರು ಪರತತ್ವ ನಿಜಸಂಯುಕ್ತರಾಗಲು ತನುವನಿಕ್ಕಿದ, ಮನವನಿಕ್ಕಿದ ಧನವನಿಕ್ಕಿದ ಇಕ್ಕಿದುದರಿಂದ ತಾನೆ ಗುರು, ತಾನೆ ಲಿಂಗ, ತಾನೆ ಜಂಗಮ ತಾನೆ ಸಕಲರ ಅರುವಿಂಗರುವಾಗಿ ಸಕಲ ಶರಣ ಸಮೂಹಕ್ಕೆ ಭಕ್ತಿ ಸ್ಥಲದ ಹೆದ್ದಾರಿ ಹಾಕಿದ. ಆ ಭಕ್ತಿ ಸ್ಥಲದಿರುವ ಪ್ರಭು ಕಂಡು ಬಸವರಸನ ಕೊಂಡಾಡಿದ.

ಭಕ್ತಂಗೆ ಉತ್ಪತ್ತಿಯಿಲ್ಲಾಗಿ ಸ್ಥಿತಿ ಇಲ್ಲ, ಸ್ಥಿತಿ ಇಲ್ಲಾಗಿ ಲಯವಿಲ್ಲ, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪನಯ್ಯ ಗುಹೇಶ್ವರಾ, ನಿಮ್ಮ ಶರಣ. ಪರತತ್ವ ನಿಜಸಂಯುಕ್ತವಾಗಿ ಗುರು ಶಿಷ್ಯರೊಂದಾದ ಭಕ್ತಿ ಎತ್ತ, ಅನುಪಮರಾಗಿ ಭಕ್ತ ಜಂಗಮರೊಂದಾದುದೆತ್ತ ?

ಇತ್ತ ಭಾವ ಭ್ರಮಿತರ ಭಾವ ಎತ್ತ ? ಇವರದು ಕೂಡುವ ಅಗಲುವ ಭಕ್ತಿ. ಈ ಭಕ್ತಿ ಎತ್ತ ಕೂಡದಗಲದ ಬಸವಾದಿ ಪ್ರಮಥರ ಭಕ್ತಿ ಎತ್ತ ? ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ಭಕ್ತಿ, ಉತ್ಪತ್ತಿ ಸ್ಥಿತಿ ಲಯ ಕಾಣದ ಭಕ್ತಿ, ತನ್ನನಿಜದಿರುವಿನಲ್ಲಿ ಮನಲೀಯವಾದ ಭಕ್ತಿ ಇದು ಕಾರಣ ಮನ ಘನವಾದ ಭಕ್ತಿ ಮನ ಲಿಂಗವಾದ ಭಕ್ತಿ.

ವಚನದ ರಚನೆಯ ಲೀಲೆಯನಾಡುವರು ಗುಹೇಶ್ವರನಿಪ್ಪ

ಗುಪ್ತವೆಂತೆಂದರಿಯರು: ಗುಹೇಶ್ವರನಿಪ್ಪ ಗುಪ್ತದಿರುವ ತಿಳಿಯದ್ದರಿಂದ ಇವರದು ವಚನದ ರಚನೆಯ ರಂಜನೆಯ ಲೀಲೆಯನಾಡುವರು. ಮಾತಿನ ಮಲ್ಲರು, ಮಾತಿನ ಜಾಣರು, ಮಾತಿನ ತತ್ತ್ವವೇತ್ತರು, ಇವರದು ಮಾತುಗಾರಿಕೆ ಮಾತಿನ ಸಂಭಾಷಣೆ ಮಾತಿನ ಜೋಡಣೆ, ಶಬ್ದಗಳ ವಿನಯ, ಶಬ್ದಂಗಳ ನಿರಹಂಭಾವ ಶಬ್ದಂಗಳ ಸಮತೆ ಸಯವಾದ ದೃಷ್ಟಿ ಇಡೀ ಜನ ಸಮೂಹವ ಬೆರಗುಗೊಳಿಸುವ ಲೀಲೆಯ ಮಾತು. ಇವರು ನಿಶಬ್ದವೇಧಿಸದವರು, ಚತುರ ತನದಿಂದ ಶಬ್ದಮುಗ್ಧ ಅನ್ನುವರು. ಅದು ಹೊಗಳಿಕೆಗೆ ಸಿಕ್ಕುವುದೆ ? ಅದು ಅಕಥನೀಯವೆಂದು ಬೆರಗುಗೊಳಿಸುವರು. ಇವರದು ತಮ್ಮಿರುವಿನಿಂದ ತಾವೆ ವಂಚಕರಾದವರು. ಇವರಿಗೆ ಸ್ವಸುಖವ ಇಲ್ಲವಾಗಿ ಭಾವಭ್ರಮಿತರಾದರು. ಇವರ ಹೃದಯದಲ್ಲಿ ಭಾವಕ್ಕಗಮ್ಯವಾಗಿಹ ಘನದಿರುವು ಹೇಗೆ ಪ್ರಜ್ವಲಿಸುವುದು, ಪ್ರಜ್ವಲಿಸದ್ದರಿಂದ ಅರುಹೃದಯವಾಗದ ಕಾರಣ ಗುಹೇಶ್ವರನಿಪ್ಪ ಗುಪ್ತವೆಂತರಿಯರು ಎಂದು ಹೇಳಿಹರು.

121

**ಅಘಟಿತ ಘಟಿತನೆ ವಿಪರೀತ ಚರಿತ್ರನೆ,**
**ಸಾವರ ಕೈಯಲ್ಲಿ ಪೂಜೆಗೊಂಬರೆ ಲಿಂಗಯ್ಯಾ ?**
**ಸಾವರ ನೋವರ ಕೈಯಲ್ಲಿ ಪೂಜೆಗೊಂಬುದು**
**ಲಜ್ಜೆ ಕಾಣಾ- ಗುಹೇಶ್ವರಾ.** ॥ 498 ॥

**ತಾತ್ಪರ್ಯ** : ಅಘಟಿತ ಘಟಿತನೆ ? ವಿಪರೀತ ಚರಿತ್ರನೆ ? ಎಂದು ಲಿಂಗಯ್ಯನಿಗೆ ಸಂಬೋಧಿಸಿದ ವೀರಶೈವರು ಅದೆಷ್ಟು ಸಿಕ್ಕಬಹುದು. ಇದಲ್ಲದೆ ಲಿಂಗ ಘನವ ಕಂಡು ದೇವನಿಗೆ ಬುದ್ಧಿ ಹೇಳಿದವರುಂಟೆ ? ಲಿಂಗಯ್ಯನಿಗೆ ಕಾಡಿ ಬೇಡಿದವರು ಸಿಕ್ಕುತ್ತಾರೆ. ದೇವನಿಂದ ಫಲಪದ ಪಡೆದವರು ಸಿಕ್ಕಬಹುದು ಬೇಡದವರು, ಫಲಪದಂಗಳ ಪಡೆಯದವರು ಸಿಕ್ಕುವುದು ಅತಿ ವಿರಳ. ಇದಲ್ಲದೆ ಪ್ರಭುದೇವ ಸಂಬೋಧಿಸಿದಂತೆ ಲಿಂಗ ದೇವನಿಗೆ ಆರಾದರೂ ಸಂಬೋಧಿಸಿರುವರೆ ? ಅಘಟಿತ ಘಟಿತನೆ ? ವಿಪರೀತ ಚರಿತ್ರನೆ ? ಎಂದು ಕೊಂಡಾಡಿದುದು ನೋಡುವುಡೆ ಪೂರ್ವಿಕರು, ಲಿಂಗದೇವನಿಗೆ ಮರೆ ಹೊಕ್ಕ ಮಾರ್ಕಂಡೇಯ, ರಾವಣ ಮೊದಲಾದವರು ಪ್ರಭು ತಿಳಿದಂತೆ ಲಿಂಗ ಘನವ ತಿಳಿದಿಹರೆ ! ತಿಳಿದು ಕೊಂಡಿದ್ದರೆ ದೇವನನ್ನು ಕೊಡಕೊಳ್ಳುವ ವ್ಯವಹಾರಕ್ಕೆ ಉಪಯೋಗ ಮಾಡುತ್ತಿದ್ದಿಲ್ಲ. ಶರಣ ಶರಣೆಯರು ತಿಳಿದಂತೆ ಲಿಂಗ ಘನವ ಈ ಭಾವ ಭ್ರಮಿತರು ತಿಳಿದಿಹರೆ ? ಲಿಂಗಯ್ಯನಿಗೆ ಬುದ್ಧಿ ಹೇಳಿದ ಮಹಾಂತರೆತ್ತ, ಬಾಲಕರಂತೆ ಕಾಡಿ ಬೇಡುವ ಭಾವ ಭ್ರಮಿತರೆತ್ತ ! ಭ್ರಮಾತ್ಮರೆತ್ತ ! ಇತ್ತ ತಾನಾರು ತನ್ನ ತಿಳಿಯದವರು ಇತ್ತ ಲಿಂಗದೇವನ ತಿಳಿಯದವರು.

ಅಘಟಿತ ಘಟಿತನೆ ? ವಿಪರೀತ ಚರಿತ್ರನೆ ? ಎಂದು ಸಂಬೋಧಿಸಿದುದು ಬಹು ಅಗಮ್ಯ ಸಂಬೋಧನೆ ! ಲಿಂಗಯ್ಯನ ಸಂಬೋಧನೆ ಎಂಬೆನೆ ? ಲಿಂಗಯ್ಯ ತನಗಿಂತನ್ಯವಲ್ಲ, ತಾನೆ. ತನ್ನದು ತನಗೆ ಸಂಬೋಧನೆ. ಅರಿದು ನೋಡಿದಡೆ ಸಕಲರ

ಸಂಬೋಧನೆಯಾಗಿರುವುದು. ಅಘಟಿತ ಘಟಿತನೆ ವಿಪರೀತ ಚರಿತ್ರನೆ ! ಇದು ತನ್ನ ತಿಳಿಯದ್ದರಿಂದ ಪ್ರಭುದೇವ, ಲಿಂಗಯ್ಯನಿಗೆ ಸಂಬೋಧಿಸಿದುದು ಎನ್ನುವಂತೆ ಕಾಣುತ್ತದೆ. ತಿಳಿದವರಿಗೆ ತನಗೆ ತಾನೆ ಎಚ್ಚರಿಸಿಹನು. ಅಘಟಿತ ಘಟಿತನು ತಾನು ವಿಪರೀತ ಚರಿತ್ರನು ತಾನು ಲಿಂಗ, ಲಿಂಗವೆ ಅನುಪಮ. ಸಾಧ್ಯವಾಗದವನು ಎಂಬೆನೆ ? ಸಾಧ್ಯವಾದನು. ಅಪ್ರಾಪ್ಯವೆಂಬೆನೆ ? ಪ್ರಾಪ್ತರೂಪ ಪ್ರಾಪ್ತನು. ಆರಿಗೆ ಸಾಧ್ಯವಾಗದವನು ? ಲಿಂಗ ಬೇರೆ, ತಾನು ಬೇರೆಂಬ ಭೇದಜ್ಞಾನಿಗಳಿಗೆ ಸಾಧ್ಯವಾಗದವನು. ಶ್ರೀಗುರು ಕರುಣಿಸಿದ ಲಿಂಗದನುವಿನಿಂದ ಆರು ಅರಿದರಿದು ನೋಡಿಹರು. ಅವರಿಗೆ ಸಾಧ್ಯವಾದವನು. ಅದುವೆ ತಾನಾದವನು.

ಕಲ್ಪಿತರಿಗೆ ಸಾಧ್ಯವಾಗದವನು, ಆರು ಕಲ್ಪಿತ ಸೇರರು, ಅಕಲ್ಪಿತ ಘನದಿರುವೆ ತನ್ನಿರುವು ಎಂದು ಅರಿತವರು. ಲಿಂಗ ಸಕೀಲ ಸಂಯೋಗ ವರ್ಮಸ್ಥಲ ಅರಿತವರಿಗೆ ಸರಳನು, ಸುಲಭನು. ತಾನೆ ಗುರುಕಾರುಣ್ಯದ ಲಿಂಗದನುವ ಬಿಟ್ಟು ಕಲ್ಪಿತನಾಗಿ ಅರಿಯ ಹೋದರೆ ಅಸಾಧ್ಯವು. ನೆನಹಿಂಗೂ ಅಸಾಧ್ಯವು, ಭಾವನೆಗೂ ಅಸಾಧ್ಯವು. ಶ್ರೀಗುರು ತೋರಿದ ಅನುವಿನಂತೆ ತಿಳಿಯ ಹೋದವರು ಶ್ರೀಗುರು ಅನುಪಮನಾದುದರಿಂದ ಗುರುವಾಗಿ ಅನುಗ್ರಹಿಸಲಿಲ್ಲ, ಶಿಷ್ಯನಾಗಿ ಕಾಣಲಿಲ್ಲ, ಏನೊಂದಾಗದ ಘನವಾಗಿ ಅನುಗ್ರಹಿಸಿದನುವ ತಾವು ಏನೊಂದಾಗದೆ ಶ್ರೀಗುರುವಿನ ಕಾರುಣ್ಯವ ಅರಿದರಿದು ನೋಡಿದ ಶರಣ ಶರಣೆಯರ ಸಮೂಹ ಅದುವೆ ಆದುದು.

ಲಿಂಗದೇವನು ವಿಪರೀತ ಚರಿತ್ರನು. ರೂಪುಳ್ಳವನೆಂಬೆನೆ ನಿರೂಪನು. ತನುವುಳ್ಳವನೆಂಬೆನೆ, ಅನುವಾಗಿ ಪ್ರಜ್ವಲಿಸುತಿಹನು. ಆಚಾರದಿಂದುಕ್ತನೆಂಬೆನೆ ನಿಷ್ಕಳಂಕನು. ನಾಮಿಯೆಂಬೆನೆ, ನಿರ್ನಾಮನು. ಪ್ರಮಾಣಿಯನೆಂಬೆನೇ ಅವರ್ಣಿಯನು. ಬುದ್ಧಿಗಮ್ಯನೇ ಅಗಮ್ಯನು, ಅಹುದೆಂಬೆನೆ ಅದಕ್ಕೂ ನಿಲುಕದವನು, ನಾನೆಂಬೆನೆ ಅದಕ್ಕೂ ಅವಕಾಶ ಕೊಡದವನು. ನೀನೆಂಬೆನೆ, ಅದಕ್ಕೂ ಅವಕಾಶ ಕೊಡದವನು. ನಾನೀನೆಂಬುದಕ್ಕೂ ತೆರಹಿಲ್ಲದ ಘನನಾದುದರಿಂದ ವಿಪರೀತ ಚರಿತ್ರನು. ಶೃತಿಗೊಳಪಟ್ಟವನೆಂಬೆನೆ, ಶೃತಿಗಗೋಚರನು. ಲಿಂಗವೆಂಬೆನೆ, ಶಬ್ದಮುಗ್ಧನು. ಲಿಂಗೈಕ್ಯನೆಂಬೆನೆ, ಶಬ್ದಮುಗ್ಧನು. ಕೃತ್ಯಕ್ಕೆ ಬಾರದ ಲಿಂಗ ನುಡಿಗೆಡೆಗೊಡದ ಲಿಂಗ, ಮೌನದ ಮೌನವಾಗಿಹ ಲಿಂಗ, ಅವರ್ಣೀಯ ಲಿಂಗವೆಂಬುದು ನಾಚಿ ಶಬ್ದಮುಗ್ಧವಾದುದರಿಂದ ವಿಪರೀತ ಚರಿತ್ರನು ಎಂದು ಹೇಳಿದೆ.

ಲಿಂಗವು ತೋರುವದೆಂದಲ್ಲಿ ತೋರಬಾರದ ಘನನಾಗಿಹನು. ಲಿಂಗವೆಂಬೆನೆ ? ಹೇಳಬಾರದ ಘನನಾಗಿಹನು. ದೇಹಿ ಎಂಬೆನೆ ? ದೇಹಿಗೆ ದೇಹಿಯಾದ ಘನವದಾರು ಬಲ್ಲರು, ಜ್ಞಾನ ಸ್ವರೂಪನೆಂಬೆನೆ ? ಮುನ್ನ ಮುನ್ನವೆ ಘನಕ್ಕೆ ಘನನಾಗಿದ್ದು ಶಬ್ದಮುಗ್ಧವಾಗಿಹ ಘನದಿರುವ ಅದಾರು ಬಲ್ಲರು. ಎಲ್ಲೆಲ್ಲೂ ನೀನಿದ್ದ ಗುಪ್ತ ರಹಸ್ಯವ ತಿಳಿದವನಾದ ಪ್ರಭುದೇವ, ಸಾವರ ಕೈಯಲ್ಲಿ ಪೂಜೆಗೊಂಬರೆ ಲಿಂಗಯ್ಯ ಎಂದು ಲಿಂಗಕ್ಕೆ ವಿಚಾರಿಸಿಹನು. ವಿಚಾರಿಸಿದುದು ನೋಡುವುಡೆ ಸಕಲರು ಲಿಂಗಯ್ಯನ ಪೂಜೆ ಮಾಡಲು ಅಧಿಕಾರವಿಲ್ಲ, ಯೋಗ್ಯರಲ್ಲ ಏಕೆಂದರೆ ಅಮರನ ಪೂಜೆ ಮರಣವುಳ್ಳವರಿಗೆ ಹೇಗೆ ಸಾಧ್ಯ ? ನಿರವಯನ ಪೂಜೆ ಅವಯುವವುಳ್ಳವಂಗೆ ಹೇಗೆ ಸಾಧ್ಯ, ಸಾಯದವನ ಪೂಜೆ

ಸಾಯುವವರು ಹೇಗೆ ಮಾಡಬಲ್ಲರು. ಓ ಲಿಂಗಯ್ಯ ಸಾಯದವನಾದ ನೀನು, ಸಾವರ ಕೈಯಲ್ಲಿ ಪೂಜೆಗೊಂಬುದು ಸರಿಯೆ ? ಅಜಾತನಾಗಿ ಹುಟ್ಟು ಸಾವುಳ್ಳವರ ಕೈಯಲ್ಲಿ ಪೂಜೆಗೊಂಬುದು ನಿನಗೆ ಸರಿಯೆ ? ನಿನ್ನ ಪೂಜೆ ನೀನೆ ಮಾಡಿಕೊಳ್ಳುವುದು.

ಪೂಜೆ: ಲಿಂಗಯ್ಯ ಆರಾರ ಪೂಜೆ ಕಂಡವನಲ್ಲ, ಆರಾರು ಈ ಘನವಂತನ ದೃಷ್ಟಿಯಲ್ಲಿ ಇಲ್ಲ, ಇಲ್ಲದವರು ಇದ್ದವನ ಪೂಜೆ ಹೇಗೆ ಮಾಡುವರು. ಇಲ್ಲದವರಿಂದ ನೀನು ಪೂಜೆ ಮಾಡಿಸಿಕೊಳ್ಳುವುದು ಆಶ್ಚರ್ಯವಲ್ಲವೆ ? ಕತ್ತಲೆ ಬೆಳಕಿನ ಪೂಜೆ ಮಾಡಿತೆ ? ಓ ಲಿಂಗಯ್ಯ ನೀನು ಬೆಳಕು ಸ್ವಯಂಜ್ಯೋತಿಯಾಗಿದ್ದು, ಕತ್ತಲೆಯಿಂದ ಪೂಜೆ ಮಾಡಿಸಿಕೊಳ್ಳುವುದು ನಾಚಿಕೆಯಲ್ಲವೆ ? ನಿನ್ನ ಪೂಜೆ ಜ್ಞಾನಾರ್ಜನೆ, ಕ್ರಿಯಾರ್ಜನೆ ಮಾಡಿಸಿಕೊಳ್ಳುವುದು ಸರಿಯೆ ?

ಓ ಲಿಂಗಯ್ಯ ಜ್ಞಾನಾರ್ಜನೆಯಲ್ಲಿ ಪ್ರಕಾಶಿಸುವ ನೀನು, ಕ್ರಿಯಾರ್ಜನೆಯವರ ದೃಷ್ಟಿಗೆ ತೋರಬಹುದೆ ? ಕ್ರಿಯಾಚಾರ, ಕ್ರಿಯಾರ್ಜನೆಯುಳ್ಳುವರೆಲ್ಲ ನಿನ್ನ ತಿಳಿಯದವರು. ಸಾವುಳ್ಳವರು ನೋವುಳ್ಳವರು ಅವರ ಕೈಯಲ್ಲಿ ಪೂಜೆಗೊಂಬುದು ನಿನಗೆ ನಾಚಿಕೆ ಅಲ್ಲವೆ ಎಂದು ಲಿಂಗದೇವನನ್ನು ಪ್ರಶ್ನಿಸಿದುದು ನೋಡಿದಡೆ ಪ್ರಭು ಲಿಂಗಕ್ಕೆ ಲಿಂಗವಾಗಿ ಕಂಡ ಮಹಾಂತ.ಇಲ್ಲಿಯ ಜ್ಞಾನ ಹೆತ್ತರುವಿನ ಜ್ಞಾನವಲ್ಲ, ಎಂಜಲ ಮಾತಿನ ಜ್ಞಾನವಲ್ಲ, ಲಿಂಗ ಮುನ್ನವಾದರೆ ತಾನು ಮುನ್ನ ಮುನ್ನವೆ ಇದ್ದವನು. ತನ್ನಿಂದ ತಾನಾದವನು ಅದಕ್ಕಾಗಿ ಲಿಂಗಕ್ಕೆ ಬುದ್ಧಿ ಹೇಳಿದುದು ಸಹಜವಾಗಿದೆ. ಶರಣರು ನಿಶಬ್ದವೇದಿಗಳು, ಸ್ವತಂತ್ರರು, ಪರತತ್ವದ ನಿಜ ಸಂಯುಕ್ತರು, ಆನು, ನೀನೆಂಬ ಹಂಗ ಹರಿದವರು. ತತ್ವ ಅತತ್ವವೆಂಬ ವಿವೇಕದ ಹಂಗಿಲ್ಲದವರು. ಸಕಲದರ ಹಂಗಹರಿದವರು. ಹಂಗಹರಿಯದವರಿಗೆ ಅಸಾಧ್ಯವು.

**122**

**ಅಪರಮಿತ ಕತ್ತಲೆಯೊಳಗೆ ಪರಮಿತದ ಬೆಳಗನಿಕ್ಕಿದಡೆ**
**ಬೆಳಗೂ ಅದೆ, ಕತ್ತಲೆಯೂ ಅದೆ!**
**ಇದೇನು ಚೋದ್ಯವೊ?ಒಂದಕ್ಕೊಂದಂಜದು!**
**ಆನೆಯೂ ಸಿಂಹವೂ ಒಂದಾಗಿ ಉಂಬುದ ಕಂಡು**
**ಬೆರಗಾದೆನು ಕಾಣಾ- ಗುಹೇಶ್ವರಾ.** ।। 499 ।।

**ತಾತ್ಪರ್ಯ** : *ಅಪರಮಿತ ಕತ್ತಲೆಯೊಳಗೆ ಪರಮಿತದ ಬೆಳಗನಿಕ್ಕಿದಡೆ ಬೆಳಕು ಇದೆ, ಕತ್ತಲೆ ಇದೆ. ಇದೇನು ಚೋದ್ಯವೊ* : ಅಪರಮಿತ ಕತ್ತಲೆ ? ಇದಾವ ಕತ್ತಲೆ ಅಮವಾಸಿ ಕತ್ತಲೆಗೆ ಅಪರಮಿತ ಕತ್ತಲೆ ಎನಬೇಕೆ ? ಇದು ಸೀಮಿತ ಕತ್ತಲೆ, ಬೆಳಕು ಇದ್ದಲ್ಲಿ ಇದು ಇರದು, ಸೂರ್ಯೋದಯವಾಗುವುಡೆ ಈ ಕತ್ತಲು ಕಾಣದು, ಕಾಣದು ಎಂಬೆನೆ ? ಮತ್ತೇ ಕಾಣುವುದು. ಇದು ಬರ ಹೋಗುವ ಕತ್ತಲೆ, ಅಪರಮಿತ ಕತ್ತಲೆಯಾಗದು.

ಅಪರಮಿತ ಕತ್ತಲೆ ? ಅದಾವ ಕತ್ತಲೆ ? ಆರನ್ನಾದರೂ ಪ್ರಶ್ನಿಸಬಹುದು ? ಸಣ್ಣ

ಬಾಲಕನನ್ನಾದರೂ ನಾವು ಪ್ರಶ್ನಿಸಬಹುದು, ಓ ಮಗು, ನೀನು ಇದ್ದೀಯೋ, ಇಲ್ಲವೋ ? ಎಂದು ಕೇಳಿದರೆ, ನಾನು ಇದ್ದೇನೆನ್ನುವುದು. ದಡ್ಡರಿರಲಿ, ಲೌಕಿಕ ಚತುರರಿರಲಿ, ಎಲ್ಲರೂ ನಾನು ಇದ್ದೇನೆ ಎಂದು ಹೇಳುವರು. ಇದ್ದವ ನೀನಾರು ಎಂಬ ಪ್ರಶ್ನೆಗೆ ಸರಿಯಾಗಿ ಉತ್ತರ ಸಿಗುವುದೆಂದರೆ ಬ್ರಹ್ಮಜ್ಞಾನಿಗಳಿಂದ.

ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲ ನೋಡಾ, ಅರಿದ ಬಳಿಕ ಬ್ರಹ್ಮವೆಂಬುದು ವಂದ್ಯಾಪುತ್ರ ನೋಡಾ, ಅರಿದ ಬಳಿಕ ಬ್ರಹ್ಮವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧ ನೋಡಾ. ಬ್ರಹ್ಮವನರಿತ, ಬ್ರಹ್ಮಜ್ಞಾನಿ, ಶಬ್ದಮುಗ್ಧನಾದುದೆ ಅದರ ಉತ್ತರವು.

ಇಂತಪ್ಪ ಯತಾರ್ಥ ಜ್ಞಾನವಾಗದವರು. ಅಪರಮಿತ ಕತ್ತಲೆಯೊಳಗೆ ಪರಮಿತದ ಬೆಳಗವನಿಕ್ಕಿದುದರಿಂದ ಬೆಳಕು ಇದೆ. ಕತ್ತಲೆಯು ಇದೆ. ಸಾಯಂಕಾಲದಲ್ಲಿ ಮನೆಯಲ್ಲಿ ಬೆಳಕು ಇಲ್ಲದಿರುವಾಗ ಹುಡುಗನಿಗೆ, ಒಂದು ತುಂಬಿಗೆ ತೆಗೆದುಕೊಂಡು ಬಾ ಎಂದು ಕಳಿಸಿದರೆ ಅವನು ಮನೆಯಲ್ಲಿ ತಂಬಿಗೆ ಕಾಣಿಸಲೊಲ್ಲದು ಎಂದು ಉತ್ತರಿಸುವನು. ಇದಲ್ಲದೆ ನನಗೇನೇನು ಕಾಣಿಸಲೊಲ್ಲದು ಎಂದು ಹೇಳುವನು. ತಾನು ಕತ್ತಲೆಯ ಕಂಡು ನನಗೇನು ಕಾಣಿಸಲೊಲ್ಲದು ಎಂದು ಹೇಳಿದುದು ನೋಡಿದಡೆ ಇತ್ತ ಕತ್ತಲೆ ಕಾಣುತ್ತಾನೆ. ಇತ್ತ ಬೆಳಕು ಕಾಣುತ್ತಾನೆ. ಅವನಿಗೆ ಇದರ ಪರಿಜ್ಞಾನವಿಲ್ಲವಾಗಿದೆ. ಇದು ಕಣ್ಣಿದ್ದು, ಅದೆ ಕಣ್ಣಿಂದ ಕಂಡು, ನನಗೆ ಕಣ್ಣಿಲ್ಲವಲ್ಲವೆಂಬಂತೆ ? ಕತ್ತಲೆಯ ಕಂಡುದು ಕಣ್ಣು ಇತ್ತ ಬೆಳಕ ಕಂಡುದು ಕಣ್ಣು, ಇವೆರಡು ಸಮನಾಗಿಹ ಕಣ್ಣು, ಈ ಕಣ್ಣಿನ ಘನವ ಅದಾರು ಬಲ್ಲರು. ಈ ಕಣ್ಣಿನ ಘನವ ತಿಳಿಯಲು ಸದ್ಗುರು ದೇವನೆ ಪ್ರಧಾನನು.

ಸದ್ಗುರು ಸತ್ಸಂಗ ಕಾಣದವರಿಗೆ ಕಣ್ಣಿನ ಪರಿಚಯವಾಗದು. ಕಣ್ಣು ಕಾಣುವ ತನಕ ಈ ಕತ್ತಲೆ ಬೆಳಕು ಒಂದಕ್ಕೊಂದು ಅಂಜವು. ಮಾನವರುಗಳ ವಾಸ ಅಪರಮಿತ ಕತ್ತಲೆಯೊಳಗಿದ್ದೆ ನಾನು ಇದ್ದೇನೆಂಬ ಜ್ಞಾನವು ಇದೆ. ತಾನಿದ್ದು ತನ್ನ ಪರಿಚಯವಿಲ್ಲದಿಹುದೆ ಅಪರಮಿತ ಅಜ್ಞಾನಂಧಕಾರವಾಗಿದೆ. ಈ ಅಜ್ಞಾನಂಧಕಾರ ಕಳೆದುಕೊಳ್ಳಲು ಗುರುದರ್ಶನ ಮಾಡಿಕೊಳ್ಳುತ್ತಾರೆ. ಗುರುಮಹಾಂತನಿಂದ ದೀಕ್ಷೆಯು ಪಡೆಯುತ್ತಾರೆ. ಅಲ್ಲಿ ಸಿಗುವ ಜ್ಞಾನ ಪರಮಿತದ ಜ್ಞಾನ ಸೀಮಿತಜ್ಞಾನ, ಪುಸ್ತಕದ ಮತಿ ಬೆಳೆದಿರುವದಲ್ಲದೆ, ಮಸ್ತಕದ ಘನವ ಬೆಳಗಲೊಲ್ಲದು, ಶಬ್ದವೇದಿಗಳಾಗುವರಲ್ಲದೆ, ನಿಃಶಬ್ದವೇದಿಗಳಾಗಲು ವರ್ಣನೆಗೊಳಪಟ್ಟ ಜ್ಞಾನ, ಅರಿತರಿಯೆನೆಂಬ ಮರುವಿಗೆ ಒಳಪಟ್ಟ ಜ್ಞಾನ, ಶೃತಿಗಳಿಗೊಳಪಟ್ಟ ಜ್ಞಾನವ ತಿಳಿಸಿಕೊಟ್ಟರಲ್ಲದೆ, ಮುನ್ನ ಮುನ್ನವೆ ಇದ್ದ ಘನದನುವ ತಿಳಿಸಲೊಲ್ಲರು.

ಸದ್ಯದ ಸಮಯದಲ್ಲಿ ಗುರು ಸಾಂಪ್ರದಾಯವುಳ್ಳ ಮಹಾಂತರ ಮಠಗಳಿವೆ. ಆಶ್ರಮಗಳಿವೆ. ಬಹಳಷ್ಟು ಶಬ್ದ ವೇದಿಗಳೇ ಇಹರಲ್ಲದೆ ತನ್ನ ಮೂಲವಾದುದು ಮುನ್ನ ಮುನ್ನಲಾದ ಘನ, ತನ್ನಿಂದ ತಾನಾದ ಘನದ ರಹಸ್ಯವ ಅತ್ಯಂತ ಕಳಕಳಿಯಿಂದ ಕರುಣಿಸುವ ಕರುಣಾಕರ ಸಿಕ್ಕುವುದು ವಿರಳವಾಗಿದೆ. ಶಬ್ದವೇದಿಗಳೆ ಅತಿಯಾದುದರಿಂದ ಗುರು ಗುರುಗಳಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಜಂಗಮ ಜಂಗಮರಲ್ಲಿ ಸಮವಿಲ್ಲ, ಲೋಕ ವ್ಯವಹಾರದಲ್ಲಿ ಹೇಗೆ ವಿಷಮತ್ವವೆ ತುಂಬಿದೆ. ಹಾಗೆ ಪರಮಾರ್ಥದಲ್ಲಿ ವಿಷಮತ್ವವೆ ತುಂಬಿದೆ. ಸಮಪ್ರಕಾಶಮಾನವಾಗಿಹ ಪರತತ್ವ

ತಿಳಿಯದಂತಾಗಿ ಹೃದಯದೋಳ್ ಪರಮ ಶಾಂತಿಯಿಲ್ಲ, ಪರಮಾನಂದವಿಲ್ಲ, ಹೀಗಾಗಿ ತನ್ನ ನಿಜದಿರುವು ತನಗೆ ದೂರವಾಗಿದೆ ಇದನ್ನು ಆಗ ಕಂಡು ಪರಿಮಿತಿಯ ಬೆಳಗನಿಕ್ಕಿದಡೆ ಬೆಳಕು ಇದೆ, ಕತ್ತಲೆಯು ಇದೆ, ಇದೇನು ಚೋದ್ಯವೋ ? ಒಂದಕ್ಕೊಂದು ಅಂಜವು ಎಂದಿಹರು.

ಪರಿಮಿತ ಬೆಳಕು, ಅಪರಿಮಿತ ಕತ್ತಲೆ ಇವುಗಳ ನಿರ್ಣಯ ಅದಾರು ಮಾಡುವುದು. ತನ್ನಯ ಮರವು ಅಪರಿಮಿತ ಕತ್ತಲು ಆ ಮರವಿನಲ್ಲಿ ತೋರುವ ಚರಾಚರ ಜಗತ್ತು, ಅಪರಿಮಿತ ಕತ್ತಲೆಯಾಗಿದೆ. ಪರಮಾರ್ಥದಿಂದ ಲಭ್ಯವಾಗುವ ಶಬ್ದ ಜ್ಞಾನವೆಲ್ಲ ಪರಿಮಿತದ ಬೆಳಕು ಆಗಿದೆ. ಈ ಶಬ್ದ ಜ್ಞಾನದಿಂದ ಆಗ ಸ್ವಲ್ಪ ಕಾಲ ಪ್ರಪಂಚದ ತೋರಿಕೆ ಇಲ್ಲವಾಗುತ್ತದೆ. ಇಲ್ಲವಾಗುವುದೆಂಬೆನೆ ? ಪುನಃ ತೋರುತ್ತದೆ. ಆಗ ಪರಮಾರ್ಥದಿಂದ ದೊರೆತ ಜ್ಞಾನ ಇಲ್ಲವಾಗುತ್ತದೆ. ತನ್ನೊಳಗೆ ವಿಚಾರ ಮಾಡಲು ಇತ್ತ ಮರವುಳ್ಳ ಅವಿಚಾರರೂಪ ಕತ್ತಲೆಯಾಗಿಹ ನಾಮರೂಪಿ ಪ್ರಪಂಚವು ತೋರುತ್ತಿದೆ. ಇತ್ತ ಅರುವುಳ್ಳ ಅಸ್ತಿ ಭಾತಿ ಪ್ರಿಯವಾದ ಆತ್ಮ ಲಕ್ಷಣವುಳ್ಳ ಸಚ್ಚಿದಾನಂದ ನಾನು, ನಿತ್ಯನಿದ್ದೇನೆ, ಪೂರ್ಣನಿದ್ದೇನೆ, ನಿರ್ವಿಕಾರನಿದ್ದೇನೆ, ನಿಸ್ಸಂಗನಿದ್ದೇನೆನ್ನುವ ಚಿದಹಂರೂಪಿ ಬೆಳಕು ಇದೆ.

ಇದೇನು ಚೋದ್ಯವೋ : ಇದು ಆಶ್ಚರ್ಯ. ಬೆಳಕು ಇದ್ದಲ್ಲಿ ಕತ್ತಲೆ ಇದೆ ಇದು ಆಶ್ಚರ್ಯ. ಏಕೆಂದರೆ ಬೆಳಕು ಇದ್ದಲ್ಲಿ ಕತ್ತಲೆ ಇಲ್ಲ, ಕತ್ತಲೆ ಇದ್ದಲ್ಲಿ ಬೆಳಕು ಇಲ್ಲ, ಇದು ನ್ಯಾಯವು ಬೆಳಕು ಇದ್ದಲ್ಲಿ ಕತ್ತಲೆ ಇದೆ ಎಂದಲ್ಲಿ ಆಶ್ಚರ್ಯ ! ಇತ್ತ ತನ್ನ ಅಂತರಂಗದಲ್ಲಿ ಚಿದಹಂ ರೂಪಿ ವೃತ್ಯಾತ್ಮಕ ಜ್ಞಾನವು ಇದೆ. ಇತ್ತ ಮರವಿನ ಕಾರ್ಯವಾಗಿಹ ಅನಾತ್ಮ ಭಾವವು ಇದೆ. ಅಂದಲ್ಲಿ ಆಶ್ಚರ್ಯವಲ್ಲವೆ ? ಒಂದಕ್ಕೊಂದು ಅಂಜವು. ಚಿದಹಂರೂಪಿ ವೃತ್ತಾತ್ಮಕ ಜ್ಞಾನನೋಡಿ, ಅನಾತ್ಮದ ಕಾರ್ಯವಾಗಿಹ ವಾಕ್ಕಿನ ಶುಭಾಶುಭಕರ್ಮಂಗಳು, ಇಂದ್ರಿಯಂಗಳ ಶುಭಾಶುಭ ಕರ್ಮಂಗಳು, ಮನದ ಶುಭಾಶುಭ ನೆನಹು ಇದು ಅಂಜಲೊಲ್ಲದು. ಅಂದರೆ ಅನಾತ್ಮಭಾವವುಳ್ಳ ಕತ್ತಲೆಯು ಇದೆ. ಆತ್ಮಭಾವವುಳ್ಳ ಬೆಳಕು ಇದೆ. ಇವು ತನ್ನಂತರಂಗದೊಳಗೆ ಒಂದಾಗಿದ್ದುದು ಕಂಡು:

ಆನೆಯು, ಸಿಂಹವು ಒಂದಾಗಿ ಉಂಬುವದನು ಕಂಡು ಬೆರಗಾದೆ ಕಾಣಾ ಗುಹೇಶ್ವರಾ: ಎಂಬ ಪ್ರಭುದೇವರ ಪ್ರಸಾದವಾಣಿ ನೋಡಿದಡೆ ಜಿಜ್ಞಾಸುಗಳಲ್ಲಿ ಪರಿಶೋಧಿಸುವ ಜಿಜ್ಞಾಸು ಸಿಕ್ಕುವುದು ವಿರಳ.

ಸಿಂಹ ಇದ್ದಲ್ಲಿ ಆನೆ ಇರದು, ಆನೆಗೆ ಸಿಂಹದ ಸ್ವಪ್ನ ಬೀಳುವುಡೆ ಅದು ತನ್ನ ಪ್ರಾಣ ಬಿಡುವದು. ಪ್ರಾಣಬಿಡುವ ಆನೆಯೆ ಸಿಂಹದ ಕೂಡ ಕೂಡಿಯೆ ಒಂದಾಗಿ ಉಂಬುವದೆಂದರೆ ಆಶ್ಚರ್ಯವಲ್ಲವೆ ? ವೃತ್ಯಾತ್ಮಕವುಳ್ಳ ಚಿದಹಂ, ಸೋಹಂ, ಜ್ಞಾನವು ಆನೆಯಾಗಿದೆ. ವೃತ್ತಿ ರಹಿತವಾಗಿಹ ನಿಶಬ್ದ ಬ್ರಹ್ಮವು ಸಿಂಹವಾಗಿದೆ. ಎಲ್ಲಿ ವೃತ್ಯಾತ್ಮಕವಾದ ಜ್ಞಾನವು ಇದೆ. ಅಲ್ಲಿ ವೃತ್ತಿರಹಿತವಾಗಿಹ ಅಹಮಿಲ್ಲದ ಚಿದ್ಘನವು ಇದೆ. ಎಲ್ಲಿ ವೃತ್ತಿಗೆ ಪ್ರಧಾನವಿದೆ, ಅಲ್ಲಿ ಆನೆಯು ಇದೆ ಅಲ್ಲಿ ವೃತ್ತಿರಹಿತವಾಗಿಹ ಮಿಗೆ ಮಿಗೆ ಮೀಸಲವುಳ್ಳ ತನ್ನಿರುವಾಗಿಹ ಘನವು ಸಿಂಹವೂ ಇದೆ. ಆವಲ್ಲಿ ಸೋಹಂ ನಾನು, ಸಚ್ಚಿದಾನಂದ ನಾನು, ನಿತ್ಯ ನಾನು, ಪೂರ್ಣ ನಾನು, ಅಖಂಡ ನಾನು, ಅಸಂಗ ನಾನು, ಅಮರ ನಾನು ಎನ್ನುವ ವೃತ್ಯಾತ್ಮಕ ಜ್ಞಾನವಿದು ಆನೆಯಾಗಿದೆ. ತನ್ನ ಮೂಲವಾಗಿಹ ತನ್ನಿರುವು ತನ್ನಿಂದ

ತಾನಾದ ಅರಿಯದರುವು ಸಿಂಹವಾಗಿದೆ. ಇವೆರಡು ಒಂದಾಗಿ ಉಂಬುದನು ಕಂಡು ಬೆರಗಾದೆ ಕಾಣಾ ಗುಹೇಶ್ವರಾ. ಇತ್ತ ಶಬ್ದಮುಗ್ಧವಾಗಿಹ ತನ್ನಿರುವು ಸಿಂಹ, ಇತ್ತ ಶಬ್ದದಿಂದುಕ್ತವಾದ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನಾಕಾಶ ವೃತ್ತಿ ಆನೆ. ಇವೆರಡು ಕೂಡಿಯೆ ಆ ಸುಖ ಸವಿಯುವುದು ವಿದಿತವಾಗುತ್ತದೆ. ಅದಕ್ಕಾಗಿ ಇವುಗಳ ಇರವು ಕಂಡು ಆಶ್ಚರ್ಯವಾಗಿದೆ ಎಂದು ಹೇಳಿಹರು.

**123**

**ಪೃಥ್ವಿ ಅಪ್ಪು ತೇಜ ವಾಯು ಆಕಾಶದಲ್ಲಿ**
**ಬೆಳೆಯುತ್ತಿದ್ದಡೇನು ನೋಡಾ.**
**ಘನ ಘನವನರಿದೆನೆಂಬ ಮರುಳ ಮಾನವರ ನೋಡಾ.**
**ನಿರ್ಣಯವಿಲ್ಲದ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವ**
**ತಿಳಿಯರು ನೋಡಾ!** ॥ 501 ॥

**ತಾತ್ಪರ್ಯ** : ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶದಲ್ಲಿ ಬೆಳೆಯುತ್ತಿದ್ದಡೇನು ನೋಡಾ : ಓ ! ಮಾನವ ಅಪರ ವಿದ್ಯೆಗಳಲ್ಲಿ ಮಹಾಬಲ್ಲಿದನಾಗಿ ಪೃಥ್ವಿಯಲ್ಲಿ ಸಕಲರು ಬೆಳೆಯುತ್ತಿಹರು. ಅದರಲ್ಲಿ ಅಪ್ಪು ತೇಜದಲ್ಲಿ, ವಾಯು ಆಕಾಶದಲ್ಲಿ ಬೆಳೆಯುತ್ತಿದ್ದಡೇನು ? ಮಹಾ ಘನವಾದೆಯಾ ? ಜಲಚರಪ್ರಾಣಿಗಳೆಲ್ಲ ನೀರಲ್ಲಿ ಬೆಳೆಯುವುದಿಲ್ಲವೆ ? ತೇಜದಲ್ಲಿ ತಪಸ್ವಿಗಳು ತಮ್ಮ ತಪದಲ್ಲಿ ಬೆಳೆಯುದಿಲ್ಲವೊ ? ಹಠಯೋಗಿಯು ಪ್ರಾಣಾಯಾಮ ಮಾಡುವಲ್ಲಿ ಕೇವಲ ಕುಂಭಕ ಯೋಗದಿಂದ ತನ್ನ ಆಯುಷ್ಯ ಬೆಳೆಸುವುದಿಲ್ಲವೆ ? ಆಕಾಶದಲ್ಲಿ ಪಕ್ಷಿಗಳು ಸಂಚರಿಸುವುದಿಲ್ಲವೆ ? ನೀನು ಜಂತ್ರವಿದ್ಯೆಯ ಕಲಿತು ಪಂಚತತ್ವದಲ್ಲಿ ಬೆಳೆಯುತ್ತಿದ್ದಡೇನು ? ಇದಲ್ಲದೆ ಪರಮಾರ್ಥ ದೃಷ್ಟಿಯಿಂದ ನೋಡಿದಡೆ ಸಕಲರ ದೇಹಗಳು ಪಂಚಭೂತಗಳಲ್ಲಿ ಬೆಳೆಯುವುದು ಕಂಡು ಬರುತ್ತದೆ.

ಪೃಥ್ವಿಯಲ್ಲಿ ಬೆಳೆಯುತ್ತಿದ್ದಡೇನು, ಪೃಥ್ವಿಯೆಂಬುದು ನಾಹಂ ಎಂಬ ವೈರಾಗ್ಯವು ಬೆಳೆಯುತ್ತಿದ್ದುದೆ ಪೃಥ್ವಿಯಲ್ಲಿ ಬೆಳೆಯತ್ತಿದ್ದಂತೆ ಈ ವೈರಾಗ್ಯ ದೃಢವಾದಲ್ಲಿ ದೇಹಾದಿಗಳು ನಾನಲ್ಲ, ಪಂಚಕೋಶಾದಿಗಳು ನಾನಲ್ಲ, ದಶೇಂದ್ರಿಯಗಳು ನಾನಲ್ಲ, ದಶಪ್ರಾಣಗಳು ನಾನಲ್ಲ, ಕರಣಾದಿಗಳು ನಾನಲ್ಲ, ಈ ಇಪ್ಪತ್ತೈದು ತತ್ವದಿಂದೊಡಗೂಡಿದ ದೇಹ ನಾನಲ್ಲ, ಹಾಗಾದರೆ ನಾನು ಯಾರು ? ಎಂದು ಪರಿಶೋಧಿಸುವನು. ಆಗ ಕೋಹಂ ನಾನಾರು ಎಂದು ಪರಿಶೋಧಿಸಲಾಗಿ ತನ್ನಿಂದ ತನಗೆ ಸರಿಯಾದ ಅರ್ಥದೊರೆಯದುದಕ್ಕೆ ಸದ್ಗುರುನಾಥನಲ್ಲಿ ಶರಣಾಗತನಾಗಿ ಅಲ್ಲಿ ಆ ಮಹಾಂತನಿಂದ ಸೋಹಂ ಎಂಬ ಜೀವ ಪರಮಾತ್ಮರ ಏಕತ್ವ ಬೋಧದಲ್ಲಿ ಬೆಳೆಯುತ್ತಿದ್ದಡೇನು, ನಿರ್ಣಯವಿಲ್ಲದ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವ ತಿಳಿಯದು ನೋಡಾ.

ಅಪ್ಪು ಎಂಬುದು ಸುಮನವು, ಲಿಂಗಾಂಗ ಸಮರಸ ಮನವು, ಅಂಗವು ಸಚ್ಚಿದಾನಂದ, ಲಿಂಗವು ಸಚ್ಚಿದಾನಂದ. ಪೂಜಕನು ಸಚ್ಚಿದಾನಂದ, ಪೂಜ್ಯವು ಸಚ್ಚಿದಾನಂದ, ಗುರುವು ಸಚ್ಚಿದಾನಂದ, ಶಿಷ್ಯನು ಸಚ್ಚಿದಾನಂದ, ಅಜ್ಞಾನಿಯು

ಸಚ್ಚಿದಾನಂದ, ಜ್ಞಾನಿಯು ಸಚ್ಚಿದಾನಂದ, ಧರೆಯು ಸಚ್ಚಿದಾನಂದ, ಅಪ್ಪುವಿನಲ್ಲಿ ಸಚ್ಚಿದಾನಂದ, ಎಲ್ಲೆಲ್ಲೂ ಸಚ್ಚಿದಾನಂದವೆಂಬ ನೆನಹುಳ್ಳದ್ದಾಗಿ ಮನವು ಶಾಂತವಾಗಿ ಜ್ಞಾನಾನಂದವುಳ್ಳದ್ದಾಗಿ ಮನವು ಘನದ ನೆನಹಿನಲ್ಲಿ ಬೆಳೆಯುತ್ತಿದ್ದಡೇನು, ನಿರ್ಣಯವಿಲ್ಲದ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವು ತಿಳಿಯದು ನೋಡಾ.

ಅಗ್ನಿಯೆಂಬುದು ತಪೊ ಅಗ್ನಿ, ಇದು ಬೆಳೆದುದರೇನಾಯಿತು, ಮನ ಇಂದ್ರಿಯಂಗಳು, ತನು ಪ್ರಾಣಾದಿಗಳಲ್ಲಿ ತಪದಲ್ಲಿ ಅನುಷ್ಠಾನದಲ್ಲಿ ಬೆಳೆದು ತನ್ನ ಶರೀರದ ಆಯುಷ್ಯವ ತಪದಲ್ಲಿ ಕಳೆದುದು ಇದು ಅಷ್ಟು ಶ್ರೇಷ್ಠವಲ್ಲ, ಭಿನ್ನಜ್ಞಾನವ ಕೆಡಿಸಿ ಅಭಿನ್ನ ಜ್ಞಾನದಲ್ಲಿ ನಿಲ್ಲುವುದು. ವಿಷಯ ದೃಷ್ಟಿ ಕೆಡಸಿ ಸಮದೃಷ್ಟಿ ವೃದ್ಧಿಯಾಗುವದು ಅನೇಕಾತ್ಮವ ತೊರೆದು ಏಕಾತ್ಮ ಜ್ಞಾನವ ಬೆಳೆಯುವದು. ನಾನು ನೀನೆಂಬುದು ತೊರೆದು ತೆರಹಿಲ್ಲದ ಘನದ ಜ್ಞಾನವಾಗುವುದು. ಅಹುದು ಅಲ್ಲವೆಂಬುದು ತೊರೆದು ಸುಬುದ್ಧಿಯಾಗುವುದು. ನಿತ್ಯಾ ನಿತ್ಯವ ತೊರೆದು ಅಖಂಡ ಬುದ್ಧಿಯಾಗುವುದು. ಬಂಧ ಮೋಕ್ಷವ ತೊರೆದು ನಿಸ್ಸೀಮ ಜ್ಞಾನಿಯಾಗುವುದು ಸತ್ಯಾಸತ್ಯವ ತೊರೆದು ಪರಮ ಸತ್ಯವಾಗುವುದು. ಅರಿತೆ ಅರಿಯೆನೆಂಬುದು ನಷ್ಟವಾಗಿ, ಅರಿಯದರುವು ಎಲ್ಲೆಲ್ಲು ಅದುವೆ ಕಾಣುವುದು. ಇದು ಸುಬುದ್ಧಿಯಾಗುವುದು. ಈ ಸುಬುದ್ಧಿಯಲ್ಲಿ ಬೆಳೆಯುತ್ತಿದ್ದಡೇನು, ನಿರ್ಣಯವಿಲ್ಲ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವ ತಿಳಿಯದು ನೋಡಾ.

ಪ್ರಾಣವ ಬೆಳೆಯುತ್ತಿದ್ದರೇನು, ಹಠಯೋಗಿಯಾಗಿ ಪ್ರಾಣಾಯಾಮ ಅಭ್ಯಾಸ ಬಲದಿಂದ ಕೇವಲ ಕುಂಬಕಯೋಗ ಬಲಿಸಿ ಸಹಸ್ರಾರು ವರ್ಷ ಪ್ರಾಣವಾಯು ಶರೀರದಲ್ಲಿ ಬೆಳೆಯುತ್ತಿದ್ದಡೇನು, ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗಿಯಾಗ ಬಹುದೆ ? ಪ್ರಾಣ ಪ್ರಕೃತಿಯ ಕೆಡಿಸಿ, ಪ್ರಣವ ಪ್ರಕೃತಿಯಾಗಬಹುದು. ಪ್ರಣವ ಪ್ರಕೃತಿ ಇದು ಸಮಪ್ರಕೃತಿ, ಸಮದೃಷ್ಟಿ, ಸಮಭಾವ, ಭರಿತ ಭಾವ, ತುಂಬಿದುದು ತುಳಕದು, ನಂಬಿದುದು ಸಂದೇಹಿಸದು, ಒಲಿದುದು ಓಸರಿಸದೆ ಬೆಳೆಯುತ್ತಿದ್ದಡೇನು, ನಿರ್ಣಯವಿಲ್ಲದ ನಿರ್ವಿಕಾರದಲ್ಲಿ ಬೆಳೆದಂತಾಯಿತೆ ? ವಾಯು ಬೆಳೆಯುತ್ತಿದ್ದಡೇನು, ನೂರು ವರ್ಷ ಬೆಳೆಯುವ ವಾಯು ಕುಂಭಕಯೋಗವ ಸಾಧಿಸಿ ಬ್ರಹ್ಮರಂಧ್ರದಲ್ಲಿ ವಾಯು ಬೆಳೆಯುತ್ತಿದ್ದಡೇನು ಇದು ಪ್ರಣವಧ್ಯಾನದಲ್ಲಿ ಬೆಳೆಯುತ್ತಿದ್ದಡೇನು, ಇದಲ್ಲದೆ ಪ್ರಣವ ಮಂತ್ರದಲ್ಲಿ ಬೆಳೆದರೇನಾಯಿತು. ಪ್ರಣವ ಮಂತ್ರದಲ್ಲಿ ಬೆಳೆದರೂ ಬೆಳೆಯಬಹುದು. ಪ್ರಣವ ಮಂತ್ರದರ್ಥದಲ್ಲಿ ಬೆಳದನೇ? ಬೆಳೆದರೇನಾಯಿತು ಮಂತ್ರದರ್ಥವ ಅರಿತನೆ ? ಅರಿಯದ್ದರಿಂದ ನಿರ್ಣಯವಿಲ್ಲದ ನಿರ್ವಿಕಾರದಲ್ಲಿ ಬೆಳೆದಂತಾಗಲಿಲ್ಲ.

ಗಗನದಲ್ಲಿ ಬೆಳೆಯುವುದು ಗಗನವೆಂಬುದು ಆತ್ಮ, ಆತ್ಮ ತತ್ವದಲ್ಲಿ ಬೆಳೆಯುವುದು ಆತ್ಮವದು ತತ್ವ ಪರತತ್ವ ಒಂದಾಗುವುದು ಘಟಾಕಾಶ, ಮಠಾಕಾಶ ಒಂದಾಗುವುದು, ಚಂದ್ರ ಸೂರ್ಯರೊಂದಾಗುವುದು, ಧರೆ ಆಕಾಶ ಒಂದೆಯಾಗುವುದು. ದೃಕ್ ದೃಶ್ಯ ಒಂದಾಗುವುದು. ಪ್ರಕಾಶಕ ಪ್ರಕಾಶಿತ ಒಂದಾಗುವುದು. ತನುವಿನ ತನುವಾಗುವುದು, ಪ್ರಾಣದ ಪ್ರಾಣವಾಗುವುದು. ಮನದ ಮನವಾಗುವುದು, ಹೃದಯದ ಹೃದಯವಾಗುವುದು, ಅರು ಹೃದಯವಾಗುವುದು, ಬಯಲು ಬಯಲೆ, ಬಯಲು

ಭಾವ, ಬಯಲು ಜೀವ, ಬಯಲು ಶಿವ, ಇವೆರಡೊಂದಾದುದು ಅನುಪಮವು, ನಿರಾಲಂಬ ನಿಸ್ಸಂಗ ನಿರುಪಾಧಿ ಜ್ಞಾನವಾಗಿ ಜ್ಞಾನಯಾನದಲ್ಲಿ ಹಾರಾಡುವುದು. ಮನವು ಅಧೋ ಮುಖದಿಂದ ದೂರಾಗಿ ಪರಮಾರ್ಥ ದೃಷ್ಟಿಯುಳ್ಳದ್ದಾಗಿ ಆತ್ಮ ತತ್ವದಲ್ಲಿ ನಿಲ್ಲುವುದು. ಇದು ಜ್ಞಾನಿಗಳು ವಾಸಿಸುವ ಪ್ರದೇಶ. ಹೀಗೆ ತತ್ವ ಪ್ರಧಾನವಾಗಿ ಜ್ಞಾನಕ್ಕೆ ಮಹತ್ವ ಕೊಟ್ಟು ಜ್ಞಾನ ಹಂಬಲವುಳ್ಳವರಾಗಿ ಪರಮಾರ್ಥ ಜ್ಞಾನ ಬೆಳೆಯುತ್ತಿದ್ದೇನು ನಿರ್ಣಯವಿಲ್ಲದ ನಿರ್ವಿಕಾರತ್ವವು ಬೆಳೆದಂತಾಯಿತೆ ?

ಘನ ಘನವವನರಿದೆನೆಂಬ ಮರಳು ಮಾನವರ ನೋಡಾ : ಮರುಳ ಮಾನವರು ಇವರಾರು ? ಸತ್ವಗುಣಕ್ಕೆ ಮೆಚ್ಚಿದವರು, ಸತ್ವಗುಣದಲ್ಲಿ ಸಹಜ ಜ್ಞಾನವು ಪ್ರಧಾನವಾಗಿದೆ. ಮನವು ಪ್ರವೃತ್ತಿಯ ಸೇರದು. ನಿವೃತ್ತಿಗೆ ಪ್ರಿಯವಾದುದು, ನಾಮರೂಪವ ಸೇರದು, ಅಸ್ತಿ, ಭಾತಿ ಪ್ರಿಯವಾದುದು. ಅನಾತ್ಮ ದೃಷ್ಟಿ ಸೇರದು, ಆತ್ಮದೃಷ್ಟಿಗೆ ಒಪ್ಪಿ, ಎಲ್ಲೆಲ್ಲೂ ಆತ್ಮ, ಆತ್ಮ ಎಂಬ ಜ್ಞಾನವ ಒಪ್ಪಿಕೊಂಡು, ಅದರದೆ ನೆನಹು, ಅದರದೆ ನಿರ್ಣಯ, ಅದರದೆ ಚಿಂತನ, ಅದರದೆ ತಧ್ಯಾನವಾಗಿ, ಘನ ಘನವವನರಿದೆನೆನ್ನುವರು ಇವರು ಸೀಮಿತರಾಗಿಹರಲ್ಲದೆ ನಿಸ್ಸೀಮರಾಗರು,ಇವರು ಶಬ್ದವೇದಿಗಳಲ್ಲದೆ ನಿಃಶಬ್ದವೇದಿಗಳಾಗಲಿಲ್ಲ, ಆಗದ್ದರಿಂದ ಅರಿಯದರುವುಳ್ಳ ಇರುವಾಗಿಹ ಮಹಾಘನವ ತಿಳಿಯದು, ಏಕೆಂದರೆ ಇವರು ಮತಿವಂತರಾದರಲ್ಲದೆ ಮತಿ ಭಸ್ಮವಾಗಲಿಲ್ಲ, ಮತಿ ಭಸ್ಮವಾಗದ್ದರಿಂದ ಕಲ್ಪಿತ ಪುರುಷನೆ ಆಗಿಹರಲ್ಲದೆ, ಅಕಲ್ಪಿತ ಘನದಿರುವು ತಿಳಿಯದ್ದರಿಂದ ನಿರ್ಣಯವಿಲ್ಲದ ನಿರ್ವಿಕಾರತ್ವವಾದರೂ ಅಲ್ಲಿ ಬೆಳೆಯುವುದದೆಂತು ?

ನಿರ್ಣಯವಿಲ್ಲಗ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವು ತಿಳಿಯದು ನೋಡಾ: ಆವುದು ಕಲ್ಪಿತಕ್ಕೆ ಒಳಪಟ್ಟಿದೆ ಅದರ ನಿರ್ಣಯ ಮಾಡಲು ಬರುತ್ತದೆ. ಆವುದು ಅವಿಚಾರ ವಿಚಾರಕ್ಕೊಳಪಟ್ಟದೆ ಅಹುದು ಅಲ್ಲವೆಂಬುದಕ್ಕೊಳಪಟ್ಟಿದೆ ಅದರ ನಿರ್ಣಯ ಮಾಡಲು ಬರುತ್ತದೆ. ಆವುದು ನಿತ್ಯಾನಿತ್ಯವೆಂಬ ಲಕ್ಷಣವುಳ್ಳದ್ದಾಗಿದೆ. ಅದರ ನಿರ್ಣಯ ಮಾಡಲು ಬರುತ್ತದೆ. ಆವುದು ಮತಿಗತಿಗೆ ಒಳಪಟ್ಟಿದೆ. ಅದರ ನಿರ್ಣಯ ಮಾಡಲು ಬರುತ್ತದೆ. ಆವುದು ಶೃತಿಗಗೋಚರವಾಗಿದೆ. ವಾಙ್ಮನಕ್ಕೆ ಅಗೋಚರವಾಗಿದೆ ಅದರ ನಿರ್ಣಯ ಯಾವುದರಿಂದ ಮಾಡುವುದು? ನಿರ್ಣಯವಿಲ್ಲದ ನಿರ್ವಿಕಾರ ಗುಹೇಶ್ವರನೆಂಬ ಮಹಾಘನವು ತಿಳಿಯದು.

ದೇಹವೆಂಬ ಗುಹೆಗೆ ಒಡೆಯನಾಗಿಹ ಈಶನೆ ಗುಹೇಶ್ವರನು, ಇದುವೆ ಘನವು ಅಹುದು, ಮಹಾಘನವು ಅಹುದು. ಅದು ಕಲ್ಪಿತವಲ್ಲ, ಜೀವನೆಂಬುದು ಅಲ್ಲ, ಪರಮನೆಂಬುದು ಅಲ್ಲ, ಇವೆರಡು ಒಂದೆಂಬುದು ಅಲ್ಲ, ನುಡಿಗೆಡೆಗೊಡದ ಘನವೆ ನಿರ್ಣಯವಿಲ್ಲದ ನಿರ್ವಿಕಾರವು, ಆರು ತನ್ನಿಂದ ತನ್ನ ಅರಿದರಿದು ನೋಡಿಹರು. ಅವರ ಇರವು ಅದು ಮಹಾ ಘನವು. ಅದನ್ನು ಕಲ್ಪಿತ ಪುರುಷನಾಗಿ ತಿಳಿಯ ಹೋದವರಿಗೆ ತಿಳಿಯದು, ಕಲ್ಪಿತನಾದಲ್ಲಿ ಅಕಲ್ಪಿತವೆಂಬ ಮಹಾಘನವು ತಿಳಿಯದು ನೋಡಾ.

**124**

**ಎಲ್ಲ ಎಲ್ಲವನರಿಯಬಹುದು; ಸಾವನರಿಯಬಾರದು,**

**ಸರ್ವವಿದ್ಯೆ ಸಕಲವ್ಯಾಪ್ತಿಯನರಿಯಬಹುದು; ಸಾವನರಿಯಬಾರದು.**
**ಹರಿ ಬ್ರಹ್ಮ ಕಾಲ ಕಾಮ ದಕ್ಷಾದಿ ದೇವ ದಾನವ ಮಾನವರಿಗೆಲ್ಲರಿಗೆಯೂ ಸಾವು !**
**ಮಹಾಪುರುಷರಿಗೆಯೂ ಸಾವು !**
**ಶಿವ ಶಿವಾ, ಈ ಸಾವನರಿಯದೀ ಲೋಕ !**
**ಪ್ರಪಂಚವ ಮರೆದು ಲಿಂಗದಲ್ಲಿ ನೆನಹು ನೆಲೆಗೊಂಡಡೆ**
**ಆ ಮಹಿಮಂಗೆ ಸಾವಿಲ್ಲ.**
**ಈ ಸಾವನರಿಯದ ಅರೆಮರುಳಗಳ ಅರಿವು**
**ಮಹಾದಾನಿ ಕಾಣಾ ಗುಹೇಶ್ವರಾ.** ॥ 502 ॥

**ತಾತ್ಪರ್ಯ** : ಎಲ್ಲ, ಎಲ್ಲವನರಿಯಬಹುದು, ಸಾವನರಿಯಬಾರದು : ಸಕಲವ ತಿಳಿಯಬಹುದು, ಚರಾಚರ ಜಗವ ತಿಳಿಯಬಹುದು. ವೇದ, ಶಾಸ್ತ್ರ ಆಗಮ, ಪುರಾಣಗಳ ತಿಳಿಯಬಹುದು, ತಾನಾರೆಂದು ತನ್ನ ತಿಳಿಯಬಹುದೆ ? ತನ್ನ ಘನವ ತಿಳಿಯಹೋಗಿ ಅದುವೆ ಆಗಿಹನು. ಅವರು ಮಾತ್ರ ಸಾವನರಿಯದವರು.

ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು, ಸಾವೆಂಬುದು ಸಯವಲ್ಲ, ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯುಂಟೆ ಕೂಡಲಸಂಗಮದೇವಾ. ವೇದ, ಶಾಸ್ತ್ರ ಆಗಮ, ಪುರಾಣಗಳ ಆರಾದರೂ ಕಲಿಯಬಹುದು, ಅರಿಯಬಹುದು. ಅದಕ್ಕೆ ವರ್ಣಾಶ್ರಮಗಳ ನಿರ್ಬಂಧವಿಲ್ಲ. ಕೆಲವು ಸಂಕೋಚ ಮತಿವಂತರು ವರ್ಣಾಶ್ರಮಂಗಳ ಕಟ್ಟುನಿಟ್ಟುಗಳ ಕಲ್ಪಿಸಹೋಗಿಹರು. ಅವರು ತಮ್ಮ ತಾವರಿಯದವರು.

ತಾನಾರೆಂದು ತನ್ನ ತಾ ತಿಳಿಯಲು ಸಕಲರಿಗೂ ಸ್ವತಃ ಸಿದ್ಧ ಅಧಿಕಾರವಿದೆ. ಶ್ರೇಷ್ಠ ಕುಲದವರೆ ತಿಳಿಯಬೇಕೆಂಬುದು, ಉಳಿದವರು ತಿಳಿಯಬಾರದು ಎಂದು ಕಲ್ಪಿಸುವುದು ಸರಿಯಾದುದಲ್ಲ. ಸಾವನರಿಯದವರೆ ಉಚ್ಚ ಕುಲದವರು. ಅವರು ಎಮ್ಮವರು. ಅವರು ನಿಮಿತ್ಯಕ್ಕಾಗಿ ಎಲ್ಲ ಎಲ್ಲವ ಅರಿತರೂ ಸಕಲಕ್ಕೂ ಮೂಲನಾಗಿಹ ತನ್ನ ಅರಿತುದರಿಂದ ಸಾವನರಿಯದವರು.

ಸಾವೆಂಬುದು ಮರಣ ! ಅಮರತ್ವ ಅರಿಯದ್ದರಿಂದ ಇಲ್ಲದ ಮರಣ ಕಾಣುತ್ತಿದೆ. ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆ ಯುಂಟೆ ಕೂಡಲಸಂಗಮದೇವಾ. ತಾನಾರೆಂದರಿತ ಶರಣ, ಉದಯ ಲಿಂಗದಲ್ಲಿ ಲಿಂಗವಾಗಿಯೆ ಇದ್ದುದು ಲಿಂಗದಲ್ಲಿ ಲೀಯವಾಗುವುದು. ಬೇರೆ ಇನ್ನೊಂದು ಕಡೆ ಇಂಬೆಲ್ಲಿಯದು, ಸಂದೆಲ್ಲಿಯದು. ಘಟಾಕಾಶದುದಯ, ಆಕಾಶದಲ್ಲಿ ಉದಯ, ಆಕಾಶದಲ್ಲಿ ಇರುವುದು, ಅದಕ್ಕೆ ಬೇರೊಂದು ಸ್ಥಾನವುಂಟೆ ? ಚಿತ್ ಸ್ವರೂಪನರಿತ ಶರಣ, ಚಿದಾಕಾಶದಲ್ಲಿ ಉದಯ, ಚಿದಾಕಾಶದಲ್ಲಿ ಇರುವುದು ಲೀಯವಾದುದು ಅಲ್ಲಿಯೆ, ಅದಕ್ಕಿಂತ ಅನ್ಯವಾದುದು ಇರುವುದೆ ?

ಎಲ್ಲ ಎಲ್ಲವ ಅರಿತರೇನು, ದೇಹಿಗೆ ದೇಹಿಯಾದುದು ಅರಿಯದಿದ್ದಡೆ: ಎಲ್ಲವನ್ನು ಅರಿತರೇನಾಯಿತು, ನಿರ್ಭಯನೆ ? ಅಮರನೆ ? ಅಜಾತನೆ ? ಇಲ್ಲದ

ಸಾವನ್ನು ಕಲ್ಪಿಸುವನೆಂದಲ್ಲಿ ಅವನು ಎಲ್ಲ ಎಲ್ಲವನು ತಿಳಿದರೂ ನಿರರ್ಥಕ. ತಿಳಿದ ಬಳಿಕ ಸಾವನರಿಯಬಾರದು. ಇದು ತನ್ನ ತಿಳಿದ ಚಿನ್ಹ. ಲಿಂಗದಲ್ಲಿ ಉದಯವಾದ ಲಿಂಗೈಕ್ಯರು ಮುನ್ನ ಮುನ್ನವೆ ಲಿಂಗವಾದವರು. ತಮ್ಮಿಂದ ತಾವಾದವರು. ಹೆತ್ತರಿವುಗಳಾದ ಗುರು, ಲಿಂಗ, ಜಂಗಮ ಇವರುಗಳಿಂದ ಆದವರಲ್ಲ ಮುನ್ನ ಮುನ್ನವೆ ಆದವರು. ಅವರು ಸಾವನರಿಯದವರು. ಸಾವೆಂಬುದು ಸಯವಲ್ಲ, ಸಾವು ಎಂಬುದು ಇದು ವಿಪರೀತ ಅರ್ಥವು. ಶರಣ ಶರಣೆಯರು ಅವರು ಸಾವೆಂಬುದು ಸಯವಲ್ಲವೆಂದು ಹೇಳಿದಾಗ ಸಾವ ತನ್ನದಲ್ಲ, ತಾನಲ್ಲ, ಆರು ತನ್ನ ತಿಳಿದಿರುವುದಿಲ್ಲ, ಅವರ ವಿಸ್ಮೃತಿಯೆ ಅವರಿಗೆ ಸಾವೆಂಬ ಕಲ್ಪಿತವಾಗಿ ಭಯಾನಕವಾಗಿ ಮರಣ, ಮರಣ ಎಂಬ ಮೂರಕ್ಷರವೆ ವಿಶ್ವವನ್ನೆ ನಡುಗಿಸುತ್ತಿದೆ. ಶರಣರ ಕಂಡರೆ ತಾನು ಇಲ್ಲದಂತಾಗುವುದು. ಅರೆ ಮರಳರಿಗೆ ಇಲ್ಲದ ಸಾವು ಇದ್ದಂತಾಗಿದೆ. ಇದ್ದ ಲಿಂಗ ಘನವು ಇಲ್ಲದಂತಾಗಿದೆ. ಆರು ವಿಪರೀತ ಜ್ಞಾನಿಗಳಾಗಿಹರು ಸಾವನರಿತವರು. ಇವರು ಸಕಲ ವಿದ್ಯೆಗಳ ಕಲಿತು, ಅದನ್ನು ವಿಕಾಸ ಮಾಡಲಿ, ವೇದ ವ್ಯಾಸನೆ ಇರಲಿ, ವಾಶಿಷ್ಠ ಮಹರ್ಷಿಗಳೆ ಇರಲಿ, ಸಾವನರಿಯಬಾರದು, ಸಾವನರಿಯದ್ದರಿಂದ ಅದು ಘನತತ್ವವು. ಆರ ದೃಷ್ಟಿಯಲ್ಲಿ ಇಲ್ಲದ ಸಾವು ಕಾಣುತ್ತಿರುವರೆಂದಲ್ಲಿ ಇವರ ವಿದ್ಯೆ, ಸಾವಿನ ವಿದ್ಯೆಯಾಗಿದೆಯಲ್ಲದೆ, ನಿರ್ಭಯದ ವಿದ್ಯೆಯಾಗಲಿಲ್ಲ, ಅಮರತ್ವ ಸಿದ್ಧಿಸಲಿಲ್ಲ, ನಿಶ್ಚಿತರಾಗಿ ಅಚ್ಚಸುಖದ ಸುಖಿಯಾಗಲಿಲ್ಲವೆಂದಲ್ಲಿ ಎಲ್ಲ ಎಲ್ಲವನರಿತರೇನು ? ಎಲ್ಲ ವಿದ್ಯೆಗಳ ಕಲಿತರೇನು, ನಿಷ್ಪ್ರಯೋಜಕವು.

ಹರಿ ಬ್ರಹ್ಮ, ಕಾಲ, ಕಾಮ, ದಕ್ಷಾದಿ, ದೇವದಾನವ ಮಾನವರಿಗೆಲ್ಲ ಸಾವು. ಹರಿಗೆ ತನ್ನ ಹತ್ತು ಅವತಾರಗಳೆ ಶ್ರೇಷ್ಠವಾಗಿ ಬ್ರಹ್ಮನಿಗೆ ಸೃಷ್ಟಿರಚನೆ ಶ್ರೇಷ್ಠವಾಗಿ, ಯಮ, ಮನ್ಮಥ, ದಕ್ಷಬ್ರಹ್ಮ ದೇವತಾ ದೈತ್ಯರುಗಳು ಮಾನವರು ಇವರಿಗೆ ತಮ್ಮ ಕ್ರಿಯಂಗಳೆ ಶ್ರೇಷ್ಠವಾಗಿ ಸಾವುಳ್ಳವರಾದರು. ಇವರು ಮುನ್ನವಾದ ತಮ್ಮ ಘನದಿರುವು ಅರಿಯಲಿಲ್ಲ, ಕಲ್ಪಿತಕ್ಕೆ ಮಹತ್ವ ಕೊಟ್ಟರಲ್ಲದೆ, ತಮ್ಮ ನಿಜಪದದಿಂದ ವಂಚಕರಾಗಿ ಇಲ್ಲದ ಹತ್ತು ಅವತಾರ ಕಂಡ. ಇಲ್ಲದ ಸೃಷ್ಟಿಯ ಕಂಡ, ಸೃಷ್ಟಿಕರ್ತನಾದ ತನ್ನ ಕಂಡ, ಇಲ್ಲದ ಯಮ, ಇಲ್ಲದ ಮನ್ಮಥ, ಇಲ್ಲದ ದಕ್ಷಾದಿ ಬ್ರಹ್ಮಾದಿಗಳು ದೇವತೆಗಳು, ದೈತ್ಯರು ಮಾನವರು ಇಲ್ಲದು ಕಂಡು ಇದ್ದ ಸ್ವರೂಪದ ಘನವ ತಿಳಿಯದ್ದರಿಂದ ಇವರ ವಿಸ್ಮೃತಿಯೆ ಇವರನ್ನು ಸಾವುಳ್ಳವರ ಮಾಡಿತ್ತು.

ಶಿವ ಶಿವಾ, ಈ ಸಾವನರಿದು, ಲೋಕ ಪ್ರಪಂಚವ ಮರೆದು, ಲಿಂಗದಲ್ಲಿ ನೆನಹು, ನೆಲೆಗೊಂಡಡೆ ಆ ಮಹಾಮಹಿಮಂಗೆ ಸಾವಿಲ್ಲ : ಶಿವ ಶಿವಾ ಏನಿದು ನಿನ್ನ ಮಾಯಿಕದ ಲೀಲಾಜಾಲ, ಹರಿಬ್ರಹ್ಮಾದಿಗಳು ಪ್ರಕೃತಿಯಲ್ಲಿ ಪ್ರತಿಫಲಿತವಾದ ಚೇತನ, ಚೇತನದ ಲೀಲಾಕಾರ್ಯ ಮೆಚ್ಚಿದರೆ ? ತಮ್ಮ ಮುನ್ನ ಮುನ್ನವೆ ಇದ್ದಂತಿದ್ದ ಘನವ ಅರಿಯದಾದರೆ? ನಿಜವ ಮರೆತರೆ ? ಸಟೆಗೆ ಅಪ್ಪಿದರೆ ? ತೋರಿ ಇಲ್ಲವಾಗುವ ಮಾಯಿಕ ಕಾರ್ಯಕ್ಕೆ ಮೆಚ್ಚಿದರೆ ? ಶಿವ ಶಿವಾ ನಿನ್ನ ಮಾಯಿಕದ ಹಗರಣ ಬಹು ವಿಚಿತ್ರವಾದುದು. ಏಕೆಂದರೆ ಮಾಯಿಕವು ನಿತ್ಯಾನಿತ್ಯವನರಿಯದಂತೆ ಮಾಡಿತಲ್ಲ, ಸಾವನರಿಯುವುದು ದುಸ್ತರವಾಗಿದೆ. ಲೋಕ ಪ್ರಪಂಚವ ಮರೆವುದು ಸಹಜವಾಗಿದೆ.

ಸಾವನರಿದುದು : ನಿರಂತರವಾಗಿಹ ಮಂಗಲಮಯವಾಗಿಹ ತತ್ವ ಅರಿದಡೆ ಸಾವನರಿದುದು, ಅಂದರೆ ಇಲ್ಲದುದು ಇಲ್ಲ, ಅಮರತತ್ವದಲ್ಲಿ ಮರಣವೆಂಬುದು

ಇಲ್ಲವಾದುದು ಸಾವನರಿದುದು, ಲೋಕ ಪ್ರಪಂಚವ ಮರೆದು, ಇದು ಮರೆಯಬೇಕಾದರೆ ತತ್ವ ದೃಷ್ಟಿಯು ಅವಶ್ಯಕವು. ಸಮಪ್ರಕಾಶಮಾನವಾದ ತತ್ವದಿರುವು ತನ್ನಿಂದ ತನಗದು ವೇದ್ಯವಾದಾಗ ಪ್ರಪಂಚ ಸತ್ಯ ಮಿಥ್ಯೆ ಎನ್ನುವುದು. ಲೋಕವು ಪರಮಾರ್ಥ ಸತ್ಯ ಮಿಥ್ಯೆ ಎನ್ನುವುದು. ಲೋಕವು ಲೋಕಪ್ರಪಂಚವು ದ್ವಿವಿಧ ಮುಖವುಳ್ಳದ್ದಾಗಿಹುದು. ಒಂದು ಕುರುಹಾಗಿ ಕಾಣಿಸುವುದು, ಒಂದು ಶಬ್ದವಾಹಿನಿಯಾಗಿ ಕಾಣಿಸುವುದು. ಇವೆರಡು ಮರೆಯಬೇಕಾದರೆ ಮುನ್ನ ಮುನ್ನವೆ ಇದ್ದಂತಿದ್ದ ಘನಲಿಂಗವು. ಇದು ತನ್ನಿಂದ ತಾನಾದುದು, ಲಿಂಗ ಘನವು ಸಕಲರ ಇರವು ಅರಿವುಳ್ಳ ನೆನಹು ನೆಲೆಗೊಂಡಡೆ ಸಾವಿಲ್ಲ.

ಲಿಂಗದಲ್ಲಿ ನೆನಹು ನೆಲೆಗೊಳ್ಳುವ ಬಗೆ ಆವುದು ? ಇದಕ್ಕುಪಾಯವು ? ಲಿಂಗ ಸಕೀಲ ಸಂಯೋಗ ವರ್ಮಸ್ಥಲನರಿತವರು, ತಮ್ಮ ಹೃದಯ ಬಿಚ್ಚಿ ಕರುಣಾಮಯರಾಗಿ ತಿಳಿಸುವುದೆ ಇದಕ್ಕೆ ಉಪಾಯವು. ಕೂಡಲಸಂಗನ ಶರಣರು, ಮನದೆರೆದು ಮಾತನಾಡಿದಡೆ ಲಿಂಗವ ಕಾಣಬಹುದು. ಎಂಬ ಮಹಾನುಭಾವರ ಸಂದೇಶದಂತೆ ಅವರ ಕರುಣಾರಸದ ಕಡೆಗೋಡಿವಡಿದಾಗ ಲಿಂಗವ ತಿಳಿಯುವನು. ಇದು ಮಾತಿನ ಮಾತಿನ ಮಹಾಂತರ ಮಹಾನುಭವದ ಕಾರ್ಯವಲ್ಲ, ನಿಶಬ್ದ ವೇದಿಸಿದವರ ಇರವು ಅರಿವು ಎಂಜಲ ಮಾತಿಗೆ ದೊರೆಯುವ ಲಿಂಗದಿರವು ಅಲ್ಲ , ಲಿಂಗವಾಗಿ ಲಿಂಗವ ಕಾಣುವುದು ತಾನು ಲಿಂಗವಾಗಿ ಲಿಂಗವ ತಿಳಿಯುವುದು. ಮೂಕ, ಮೂಕರ ರಹಸ್ಯ, ಶಬ್ದಮುಗ್ಧವಾಗಿಹ ರಹಸ್ಯ. ಇದು ನಿಃಶಬ್ದ ಬ್ರಹ್ಮಸಂವಾದ ನಿಃಶಬ್ದ ಬ್ರಹ್ಮವಾಗಿ ನಿಃಶಬ್ದ ಬ್ರಹ್ಮವ ಸಿದ್ಧಿಸುವುದು. ಶಬ್ದಮುಗ್ಧದಿರುವು ತನ್ನಿರುವು ಈ ಇರುವುಳ್ಳ ಅರಿವು ಕರಿಗೊಂಡುದೆ ಲಿಂಗವರಿತಂತೆ ಎಂಜಲ ಮಾತು ಸೇರದವನಾಗಿ ತನ್ನಿರುವುಳ್ಳ ಅರುವು ಪ್ರಜ್ವಲಿಸಿದುದೆ ಲಿಂಗದಲ್ಲಿ ನೆನಹು ನೆಲೆಗೊಂಡ ಸಂಕೇತ. ಅರಿಯಲಿಲ್ಲದ ಅರುವು, ಈ ಅರುವಿನ ನೆನಹು ನೆನೆಯಲಿಲ್ಲದ ನೆನಹು. ತಾನೆ ತಾನಾದ ನೆನಹು. ಈ ಅರಿಯದರುವು ನೆಲೆಗೊಂಡವರು ಮಹಾಮಹಿಮರು. ಆ ಮಹಾಮಹಿಮಂಗೆ ಸಾವಿಲ್ಲ, ಇಂತಪ್ಪ

ಮಹದರುವ ಅರಿಯದವರು ಶಬ್ದವೇದಿಗಳು. ಸಾವ ಅರಿಯದ ಅರೆಮರುಳರ ಅರುವು. ಮಹಾದಾನಿ ಕಾಣ ಗುಹೇಶ್ವರಾ:

ಅರೆ ಮರುಳರ ಅರಿವು ಇದಾವ ಅರಿವು ? ಅಮರತ್ವದ ಹೊಲಬನರಿಯದ ಅರಿವು. ಸಾವಿನಿಂದುಕ್ತವಾದ ಅರಿವು. ಕಲ್ಪಿತ ಪುರುಷನ ಅರಿವು ಹೆತ್ತರಿವು ಎರವಲವಾಗಿ ತಂದ ಅರಿವು. ವೇದದಲ್ಲಿದ್ದ ಸ್ವಲ್ಪ ಅರಿವು. ಶಾಸ್ತ್ರದಲ್ಲಿದ್ದ ಅರಿವು. ಪುರಾಣದಲ್ಲಿದ್ದ ಅರಿವು. ಅಲ್ಲಲ್ಲಿ ಸಂಗ್ರಹಿಸಿದ ಅರಿವು, ಇದು ಅರೆ ಮರುಳ ಅರಿವು. ಇದಲ್ಲದೆ ತನಗೆ ಅನುಕೂಲವಾದಲ್ಲಿ ಮಹಾತ್ಮರ ಅನುಭವ ಕೇಳಿ ಮಾತುಗಾರನಾದ ಈ ಅರೆ ಮರುಳ ಮಹಾಂತರ ಒಲಿಸಲಿಲ್ಲ. ಉಪಚಾರ ಮಾಡಿದ ತನ್ನ ಉಪಚಾರಕ್ಕೆ ಎಷ್ಟು ಲಭ್ಯವಾಗಬೇಕು. ಅಷ್ಟು ಲಭ್ಯವಾಯಿತು. ತನ್ನಂತರಂಗದಲ್ಲಿ ನ್ಯಸ್ತವಾಗಿಹ, ಮುನ್ನ ಮುನ್ನವೆ ಇದ್ದಂತಿಹ ಘನವ ಪ್ರಜ್ವಲಿಸಲಿಲ್ಲ, ಲೌಕಿಕರಲ್ಲಿ ಇವನೊಬ್ಬ ಮಹಾದಾನಿ ಎನಿಸಿಕೊಂಡ. ಅವರು ಅರೆ ಹುಚ್ಚರು. ಇವನ ಅರೆ ಮರುಳತನದರಿವು ಅವರಿಗೆ ಅಗಾಧವಾಗಿ ಅವರಿಂದ ನಮ್ಮ ಗುರು ಮಹಾದಾನಿ ಎನಿಸಿಕೊಂಡ ಎಂದು ಪ್ರಭು ಉತ್ತರಿಸಿದುದು. ಇದಲ್ಲದೆ ಸನಕ,

ಸನಂದಾದಿ ಮುನಿ ಜನಂಗಳೆಲ್ಲರೂ ಭಸ್ಮಾಂಗಿಗಳೆಲ್ಲರೂ ಇದ್ದಂತಿದ್ದ ಘನವರಿತವರಲ್ಲ ಎಂದು ಹೇಳಿಹರು.

**125**

**ಸನಕ ಸನಂದಾದಿ ಮುನಿಜನಂಗಳೆಲ್ಲರೂ,ಭಸ್ಮಾಂಗಿಗಳೆಲ್ಲರೂ-**
**ಇವರು ಸತ್ಯರೆಂಬುದು ಹುಸಿ, ನಿತ್ಯರೆಂಬುದು ಹುಸಿ,**
**ಸತ್ತರೆಂಬುದು ದಿಟ ಗುಹೇಶ್ವರಾ!** ॥ 505 ॥

**ತಾತ್ಪರ್ಯ** : *ಸನಕ, ಸನಂದಾದಿ ಮುನಿ ಜನಂಗಳೆಲ್ಲರೂ ಭಸ್ಮಾಂಗಿಗಳೆಲ್ಲರೂ ಇವರು ಸತ್ಯರೆಂಬುದು ಹುಸಿ, ನಿತ್ಯರೆಂಬುದು ಹುಸಿ* : ಎಂದು ಪ್ರಭುದೇವರು ಬಿತ್ತರಿಸಿದುದು ಬಹು ಭಾವಿಕರು ಒಪ್ಪುವುದು ಕಠಿಣ. ಇತ್ತ ಪ್ರಭು ದೇವರು, ಬಿತ್ತರಿಸಿದ ಮಹಾಪ್ರಸಾದ ಅಲ್ಲಗಳೆಯುವುದು ಕಠಿಣ. ಶರಣರ ಮಹದರುವು ಅರಿತವರು ವಿರಳ. ಇತ್ತ ಸನಕ, ಸನಂದಾದಿ ಮುನಿಗಳು ಘನವಂತರು. ಶಾಪಾನುಗ್ರಹ ಸಮರ್ಥರು. ಸದಾ ಕೈಲಾಸದಲ್ಲಿ ಹಾಗೂ ಶಿವನ ಸಭೆಯಲ್ಲಿ ಬ್ರಹ್ಮಸಭೆಯಲ್ಲಿರುವವರು ಎಂದು ಪುರಾಣಗಳಿಂದ ಇತ್ತ ಯೋಗವಾಶಿಷ್ಠದಿಂದ ತಿಳಿದು ಬರುತ್ತದೆ. ಇವರುಗಳು ಸತ್ಯವಂತರಲ್ಲ, ನಿತ್ಯವಂತರಲ್ಲ ಎಂಬುದು ನುಂಗಲಾರದ ತುತ್ತು. ಈ ವಿಷಯ ಮಾನವನ ಬುದ್ಧಿಗೆ ನಿಲುಕದ ವಿಷಯ. ತಪಸ್ವಿ , ತ್ಯಾಗಿ, ಹಠ ಯೋಗಿಗಳಿಗೂ ನಿಲುಕದ ವಿಷಯ. ಇವರದು ಸೀಮಿತ ಬುದ್ಧಿ, ಇದು ಮಹಾತ್ಮರ ಮಹಾನುಭವ ಗ್ರಂಥವಾಗಿರುವ ಯೋಗವಾಶಿಷ್ಠದಲ್ಲಿ ಪ್ರಥಮ ಪ್ರಕರಣದಲ್ಲಿ ನೋಡಬಹುದು.

ವಾಲ್ಮೀಕ ಮುನಿ : ರಾಜನ್, ಶಾಪದ ವಶದಿಂದ ಸಚ್ಚಿದಾನಂದಮಯನಾಗಿಹ ವಿಷ್ಣುದೇವನು ಅದ್ವೈತ ಜ್ಞಾನ ಸಂಪನ್ನನಾದನು. ಇದನ್ನು ಕೇಳಿ ರಾಜನು ಪ್ರಶ್ನಿಸಿದನು. ಹೆ ! ಮುನಿರೂಪ ಭಗವಂತನೆ ! ಚಿದಾನಂದ ರೂಪಿ ಹರಿಗೆ ಶಾಪವಾಯಿತು,ಆರು ಶಾಪಕೊಟ್ಟರು ಆ ವಿಷಯ ಹೇಳಿರಿ.

ವಾಲ್ಮೀಕಿ ಋಷಿ : ರಾಜನೆ, ಒಂದು ಸಮಯ ಸನತ್ಕುಮಾರ ಮುನಿಗಳು ಬ್ರಹ್ಮಸಭೆಯಲ್ಲಿ ಕೂತಿದ್ದರು. ಇವರು ನಿಷ್ಕಾಮಿಗಳು. ಅದೆ ಸಮಯದಲ್ಲಿ ತ್ರಿಲೋಕಪತಿಯಾದ ವಿಷ್ಣು ಭಗವಂತನು ವೈಕುಂಠದಿಂದ ಬ್ರಹ್ಮಲೋಕಕ್ಕೆ ಬಂದನು. ಆಗ ಬ್ರಹ್ಮ ಮೊದಲು ಮಾಡಿ, ಬ್ರಹ್ಮಸಭೆಗೆ ಸಭೆಯೆ ಎದ್ದು ನಿಲ್ಲುವದಲ್ಲದೆ, ಶ್ರೀ ವಿಷ್ಣು ಭಗವಂತನ ಪೂಜೆಯ ಮಾಡಿದರು. ಸಕಲರು ವಿಷ್ಣುದೇವನ ಪೂಜೆಯ ಮಾಡಿದರೂ ಸನತ್ಕುಮಾರ ವಿಷ್ಣುದೇವನ ಪೂಜೆ ಮಾಡದ್ದನ್ನು ನೋಡಿ, ವಿಷ್ಣು ಭಗವಂತನು ಸನತ್ಕುಮಾರ ನಿಮಗೆ ನಿಷ್ಕಾಮದ ಗರ್ವ ಬಂದಿದೆ. ಇದು ಕಾರಣ ನೀನು ಕಾಮದಿಂದ ಆತುರವುಳ್ಳವನಾಗಿ ಸ್ವಾಮಿ ಕಾರ್ತಿಕನೆಂಬ ಹೆಸರು ನಿನ್ನದಾಗಲಿ ಎಂದರು.

ಸನತ್ಕುಮಾರ : ವಿಷ್ಣುದೇವ ನಿನಗೆ ಸರ್ವಜ್ಞತ್ವದಭಿಮಾನ ಹಾಗೂ ಗರ್ವ ಬಂದಿದೆ. ಇದು ಕಾರಣ, ಸ್ವಲ್ಪ ಕಾಲದವರೆಗೆ ನಿನ್ನ ಸರ್ವತ್ವದಿಂದ ನಿವೃತ್ತನಾಗಿ ಅಜ್ಞಾನವು ಪ್ರಾಪ್ತವಾಗಲಿ ಎಂದರು.

ವಾಲ್ಮೀಕಿ ಮುನಿ : ಇದೊಂದು ಶಾಪವಾದುದಲ್ಲದೆ ಮತ್ತೊಂದು ಶಾಪವು ಇದೆ. ಅದನ್ನೊಂದು ಕೇಳು. ಒಂದು ಕಾಲದೊಳಗೆ ಭೃಗು ಋಷಿಯು ಋಷಿ ಪತ್ನಿ ದಂಪತಿಗಳಲ್ಲಿ ಕಲಹವಾಗಿ ಮುನಿಸುಗೊಂಡು ಪತಿಯನ್ನೆ ಬಿಟ್ಟು ಹೋಗುತ್ತಿದ್ದಳು. ಈ ಕಾರಣದಿಂದ ಋಷಿಯು ಕೋಪಿಷ್ಠನಾಗಿದ್ದನು. ಅದನ್ನು ಕಂಡು ವಿಷ್ಣು ಭಗವಂತನು ನಗ ಹತ್ತಿದನು.

ಬೃಗು ಋಷಿಯು : ಹೇ ವಿಷ್ಣು ನನ್ನ ನೋಡಿ ನಗುವಿಯಾ ? ನನ್ನಂತೆ ನೀನು ಸ್ತ್ರೀಯಳನ್ನು ಕಳೆದುಕೊಂಡು ಅವಳನ್ನು ಕೂಡಲು ಆತುರನಾಗುವಿ ಮತ್ತೊಂದು ದಿವಸ. ದೇವ ಶರ್ಮನೆಂಬ ಬ್ರಾಹ್ಮಣನಿಂದ ನರಸಿಂಹ ಭಗವಂತನಿಗೆ ಶಾಪವಾಯಿತು. ಅದನ್ನು ಕೇಳು. ಒಂದು ದಿವಸ ನರಸಿಂಹ ರೂಪದಲ್ಲಿರುವ ಭಗವಂತನು ಗಂಗಾನದಿಯ ದಂಡೆಯ ಮೇಲೆ ಹೋದನು. ಅಲ್ಲಿಗೆ ದೇವಶರ್ಮನೆಂಬ ಬ್ರಾಹ್ಮಣನ ಹೆಂಡತಿ ಬಂದಿದ್ದಳು. ಅವಳನ್ನು ನೋಡಿ ನರಸಿಂಹದೇವನು ಅವಳಿಗೆ ಭಯಾನಕ ರೂಪ ತೋರಿಸಿ ನಕ್ಕನು. ಸ್ವಲ್ಪ ಸಮಯ ಅವನನ್ನು ನೋಡಿ ಋಷಿಯ ಪತ್ನಿಯು ಭಯಭೀತಳಾಗಿ ಪ್ರಾಣವನ್ನೇ ಬಿಟ್ಟಳು. ಆಗ ದೇವ ಶರ್ಮನು ನೀನು ನನ್ನ ಸ್ತ್ರೀಯಳನ್ನು ನನ್ನಿಂದ ವಿಯೋಗ ಮಾಡಿರುವಿ, ಅಗಲಿಸಿರುವಿ ಇದರಿಂದ ನೀನು ನಿನ್ನ ಸ್ತ್ರೀಯಿಂದ ಅಗಲುವಿ ಎಂದು ಶಾಪ ಕೊಟ್ಟನು.

ಸನತ್ಕುಮಾರನೆ ಇರಲಿ, ಸನಂದಾದಿಗಳೆ ಇರಲಿ, ಮನು ಮುನಿಗಳಿರಲಿ ಇವರು ನಿಷ್ಕಾಮದ ಅಭಿಮಾನಿಗಳು. ಅದರದೆ ಗರ್ವವಾಗಿ ಇದು ಇಂದ್ರಿಯಂಗಳ ಕರಣಂಗಳ ಕಾರ್ಯ. ಮಲಿನ ಅತಃಕರಣದಲ್ಲಿ ಪ್ರತಿಫಲಿತವಾದ ಚೇತನ. ಇದು ಜೀವ ಕಲ್ಪಿತ ಪುರುಷ ತಾನಾಗಿ ಶಾಪಕೊಟ್ಟನೆ ? ಹೀಗಾದಲ್ಲಿ ಇವರಿಗೆ ಮುನ್ನ ಮುನ್ನಲಾದ ಘನ ತನ್ನಿಂದ ತಾನಾದವರು ಆಗಲಿಲ್ಲ, ಇವರು ಲಿಂಗದಲ್ಲಿ ಉದಯಿಸಿ, ಲಿಂಗವೆ ತಾನಾಗಿಹ ನಿಜ ಲಿಂಗೈಕ್ಯರಾಗಲಿಲ್ಲ, ಆಗದ್ದರಿಂದ  ಮೂಲವ ಕಾಣದೆ, ಕಲ್ಪಿತ ಪುರುಷನೆ ಕಂಡರಲ್ಲದೆ, ತನ್ನ ಮೂಲದಿರುವ ಕಂಡಿಹನೆ ? ಕಂಡಲ್ಲಿ ತಾನು ಸರ್ವಜ್ಞತ್ವ ಸರ್ವ ಕರ್ತೃತ್ವ, ಸರ್ವಾಂತರ್ಯಾಮಿ ಎಂಬುದು ತನ್ನೊಳಿಲ್ಲ, ಇವರು ನಿಷ್ಕಾಮಕರ್ಮಿಗಳು ಎಂಬುದಿಲ್ಲ, ಬೃಗು ಋಷಿ, ಋಷಿ ಪತ್ನಿ ಇವರುಗಳೆಲ್ಲಿ ಕಲಹವೆಲ್ಲಿ ? ಕಲಹದಿಂದಾಗಿ ಈರ್ವರ ಮನೋವ್ಯಥೆಯಾದುದೆಲ್ಲಿ ದೇವಶರ್ಮನೆಲ್ಲಿ ? ಅವನ ಹೆಂಡತಿ ಎಲ್ಲಿ, ನರಸಿಂಹ ರೂಪದಲ್ಲಿ  ಅಂಜಿಸಿದುದೆಲ್ಲಿ ? ಅಂಜಿ ಇವಳ ಪ್ರಾಣ ಬಿಟ್ಟುದುದೆಲ್ಲಿ ? ಅವರು ವಿಷ್ಣು ಭಗವಂತನಿಗೆ ಶಾಪ ಕೊಟ್ಟುದುದೆಲ್ಲಿ ? ಇತ್ತ ವಿಷ್ಣು ಭಗವಂತನೆಲ್ಲಿ? ಅವನ ಮಾಯಿಕ ಕಾರ್ಯವೆಲ್ಲಿ ? ಇದು ಮಾಯಿಕತತ್ವಕ್ಕೆ ಒಪ್ಪಿಕೊಂಡ ಪರಿಣಾಮ.

ಇದ್ದುದು ಇಲ್ಲದಂತಾಗಿದೆ. ಇಲ್ಲದುದು ಇದ್ದಂತಾಗಿದೆ. ಇದ್ದಂತಿದ್ದ ಪರತತ್ವವರಿತಾಗ ಅಲ್ಲಿ ಸನತ್ಕುಮಾರನಿಲ್ಲ, ಆತನ ನಿಷ್ಕಾಮವಿಲ್ಲ, ವಿಷ್ಣು ಭಗವಂತನಿಲ್ಲ, ಆತನ ಅವತಾರಗಳಿಲ್ಲ, ಈ ದೇವನು ಅವರಿಗೆ ಶಾಪ ಕೊಟ್ಟುದಿಲ್ಲ, ಆ ನಿಷ್ಕಾಮಿಗಳು ಶಾಪ ಕೊಟ್ಟುದುದಿಲ್ಲ, ಇಲ್ಲಾದುದಿಲ್ಲಾದುದೆಂದಿಪ್ಪುದು ಇಲ್ಲಾದುದಿಲ್ಲಾದುದೆಂತಿಪ್ಪುದು ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು.

ಇಲ್ಲಾದುದು ಅದು ಎಂದು ಇದ್ದುದಾಗಿಹುದು. ಇಲ್ಲೆಂಬುದೆ ಇಲ್ಲವಾಗಿರುವಲ್ಲಿ,

ಅದು ಎಲ್ಲಿರುವುದು. ತಾನಾರೆಂದು ತನ್ನಿರುವು ತನಗೆ ವಿದಿತವಾಗದ್ದರಿಂದ ಅವರಿಗೆ ಇವರು ಶಾಪ ಕೊಟ್ಟುದು. ಇವರಿಗೆ ಅವರು ಶಾಪ ಕೊಟ್ಟರು. ಇದು ಮರವಿನ ಕಾರ್ಯ ಅದು ಇಲ್ಲವಾಗಲಿಲ್ಲ. ಇಲ್ಲದ್ದು ಉಂಟಾದುದರಿಂದ ತನ್ನಿರುವಿನ ಘನತ್ವ ಇಲ್ಲಿ ಇಲ್ಲ. ಇದು ಕಾರಣ ಪ್ರಭುದೇವ ಸನಂದ ಸನತ್ಕುಮಾರ ಇವರು ಸತ್ಯರೆಂಬುದು ಹುಸಿ, ನಿತ್ಯರೆಂಬುದು ಹುಸಿ, ಅನಿತ್ಯರೆಂಬುದು ದಿಟ ನೋಡಾ ಗುಹೇಶ್ವರ.

ಮನುಗಳಾಗಲಿ, ಮುನಿಗಳಾಗಲಿ, ಉಪಾಧಿ ಕಾರ್ಯದಲ್ಲಿ ತಾದಾತ್ಮ್ಯವ ಹೊಂದಿದರಲ್ಲದೆ ತನ್ನ ಮೂಲವಾಗಿಹ ತನ್ನಂತರಂಗದೊಳನ್ಯಸ್ತವಾಗಿಹ ಸ್ವರೂಪವನರಿಯದ್ದರಿಂದ ಅನಿತ್ಯರೆಂಬುದು ದಿಟವಾಯಿತ್ತು. ಬ್ರಾಹ್ಮಣನಾದಲ್ಲಿ ಪರತತ್ವದ ಪರಿಣಾಮಿಯಾಗಲಿಲ್ಲ, ಇವರಿಗೆ ತೋರಿ ಇಲ್ಲವಾಗುವ ಇಂದ್ರಿಯಂಗಳ ಕಾರ್ಯ ಕರಣಂಗಳ ಕಾರ್ಯ; ಇದು ದಿಟವಾದ್ದರಿಂದ ಸತ್ಯವರಿಯಲಿಲ್ಲ. ಇತ್ತ ವಿಷ್ಣು ಭಗವಂತನಿಗೆ ತನ್ನ ಸರ್ವಜ್ಞತ್ವ ಪುರುಷಾರ್ಥವಾಗಿದೆ. ಹೀಗಾಗಿ ತಮ್ಮದು ತಮಗೆ ಘನವಾಗಿ ವಿಷಮ ಬುದ್ಧಿ, ವಿಷಮ ಜ್ಞಾನವೆ ಇವರಿಗೆ ಶ್ರೇಷ್ಠವಾಯಿತಲ್ಲದೆ ನಿಜದ ಕಡೆ ಇವರು ನೋಡಲಿಲ್ಲ. ನೋಡದ್ದರಿಂದ ವಿಷ್ಣು ದೇವನಾದರೂ ಎಲ್ಲೆಲ್ಲೂ ತನ್ನ ಕಾಣಲಿಲ್ಲ, ಕಾಣದ್ದರಿಂದ ತೋರಿ ಇಲ್ಲವಾಗುವ ಮಾಯಿಕ ಕಾರ್ಯವೆ ಘನವಾಯಿತಲ್ಲದೆ ಅಖಂಡಿತ ಜ್ಞಾನಮಯರಾಗಿ ತನ್ನ ಸುಖವ ಸವಿಯಲಿಲ್ಲ, ಇದು ಕಾರಣ ಆರೆ ಇರಲಿ, ತಮ್ಮ ಉಪಾಧಿಗೆ ಮಹತ್ವ ಮಾಡಿದುದರಿಂದ ಸತ್ಯನೆಂಬುದು ಹುಸಿ ಎಂದು ಬಿತ್ತರಿಸಿದರು.

ತಾನಾರೆಂದರಿಯದವರು ದೇವಲೋಕದಲ್ಲಿದ್ದರೂ ವ್ರತಗೇಡಿಗಳು. ಮರ್ತ್ಯಲೋಕದಲ್ಲಿದ್ದರೂ ಭಕ್ತದ್ರೋಹಿಗಳು. ಗಣಪದವಿಯಿಂದುಕ್ತರಾದವರು ಕುಂಬಕರ್ಣರು. ಶೀಲವಂತರೆಲ್ಲ ಕೂಲಿಕಾರರು. ಇವರು ಲಿಂಗೈಕ್ಯ ಘನವನರಿಯದವರು.

### 126

**ದೇವಲೋಕದವರೆಲ್ಲ ವ್ರತಗೇಡಿಗಳೆಂಬೆ.**
**ಮರ್ತ್ಯಲೋಕದವರೆಲ್ಲರ ಭಕ್ತದ್ರೋಹಿಗಳೆಂಬೆ.**
**ದೇವಸಂಭ್ರಮ ಗಣಪದವಿಯ ಕಂಡವರೆಲ್ಲರ**
**ಕುಂಬಕರ್ಣನಂತೆ ಅತಿನಿದ್ರಿಗಳೆಂಬೆ.**
**ಅನಂತಶೀಲರ ಕಂಡಡೆ ಕೈಕೂಲಿಕಾರರೆಂಬೆ-**
**ಗುಹೇಶ್ವರಾ ಲಿಂಗೈಕ್ಯವನರಿಯರಾಗಿ.** ॥ 513 ॥

**ತಾತ್ಪರ್ಯ** : *ದೇವಲೋಕದವರೆಲ್ಲರು ವ್ರತಗೇಡಿಗಳೆಂಬೆ* : ದೇವಲೋಕ, ಇದಾವ ಲೋಕ ? ದೇವನ ನಿವಾಸವೆ ದೇವಲೋಕ. ದೇವನ ನಿವಾಸ ಸರಿಯಾಗಿ ತಿಳಿದುಕೊಂಡಿರುವವರು ವಿರಳ. ತಿಳಿಯದೆ ನಾನಾ ವಿಧದಲ್ಲಿ ದೇವನನ್ನು ತಿಳಿದವರಂತೆ ಹೇಳುತ್ತಿರುವವರು ಬಹಳಷ್ಟು ಗುರು ಹಿರಿಯರು. ತಿಳಿಯದ ಗುರುಹಿರಿಯರ ಮಾತನ್ನೆ ಲೋಕ ಬಹು ನಂಬುತ್ತಿದೆ. ಅದಕ್ಕಾಗಿ ದೇವನು ಕಾರಣನೆಂದು ಕಾರ್ಯನೆಂದು, ರೂಪನೆಂದು, ನಿರೂಪನೆಂದು, ಸಾಕಾರನೆಂದು, ನಿರಾಕಾರನೆಂದು, ಸಗುಣನೆಂದು,

ನಿರ್ಗುಣನೆಂದು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವನೆಂದು ಹೀಗೆ ಕಲ್ಪಿಸಿ ಬಹು ಸ್ತೋತ್ರ, ಜಪ, ತಪವ ಮಾಡುತ್ತಿಹರು. ಇವರು ಪೂಜ್ಯ ಪೂಜಕ, ಸ್ವಾಮಿ ಸೇವಕ ಎಂಬ ಭಾವುಕರಾಗಿ ಭಾವಿಸುವುದೆ ದೇವಲೋಕದ ವ್ರತವಾಗಿದೆ. ಈ ಭಾವಿಕರು ತಮಗೆ ಇಷ್ಟ ಬಂದ ದೇವನ ನಾಮದಲ್ಲಿ, ರೂಪದಲ್ಲಿ ದೃಷ್ಟಿಯು ಮತ್ತು ಮನವು ಧಾರಣ ಮಾಡಿ ತದಾಕಾರವಾಗುವುದಕ್ಕೆ ಗುರು, ಈಶ್ವರ ಕೃಪೆ ಎಂದು ತಿಳಿದಿರುವರು.

ಹೀಗೆ ಮನವು ಇಷ್ಟದೇವನಲ್ಲಿ ದೃಷ್ಟಿ ತದಾಕಾರ ಬಲಗೊಂಡು ಲೋಕವ ಮರಿಯುವುದರಿಂದ ದೇವನ ದರ್ಶನವಾಗುವ ಸೂಚಕವೆಂಬ ಭಾವ ಅವರದು. ಇದರಲ್ಲಿ ಕಿಂಚಿತ್ ದೋಷವಿದ್ದರೆ ಈ ಲೋಕದಲ್ಲಿ ದೇವನ ದರ್ಶನವಾಗಿದ್ದರೂ ತನ್ನ ಸ್ಥೂಲದೇಹ ಮರಣವಾಗುವುಡೆ ಸೂಕ್ಷ್ಮ ಶರೀರವು ಧ್ಯಾನದ ಬಲದಿಂದ ತನ್ನ ಇಷ್ಟ ಲೋಕಕ್ಕೆ ಹೋಗುವನು. ಆಗ ಆ ದೇವನು, ಇವನ ಭಾವನೆಯ ಮೇಲಿಂದ ತನ್ನ ಲೋಕದಲ್ಲಿರಲು ಕರುಣಿಸುವನು.

ದೇವನ ಲೋಕದಲ್ಲಿರುವುದೆ ಸಾಲೋಕ್ಯವು, ದೇವನ ಸಮೀಪನಾಗಿರುವುದೆ ಸಾಮೀಪ್ಯವು. ದೇವನು ಇರುವಷ್ಟು ಇವನು ಇರುವುದೆ ಸಾಯುಜ್ಯವು, ದೇವನ ಇರುವಾಗಿರುವುದೆ ಸಾರೂಪ್ಯವು ಎಂದು ಭಾವಿಸಿದುದು ಅವರ ಭಾವ.

ಉಪಾಸಕರಲ್ಲಿ ಕಾರ್ಯಬ್ರಹ್ಮ ಕಾರಣ ಬ್ರಹ್ಮ ಉಪಾಸಕರು, ಹೀಗೆ ಉಪಾಸಕರು ದ್ವಿವಿಧ ರೂಪದಲ್ಲಿ ಉಪಾಸನೆ ಮಾಡುವವರು. ಕಾರ್ಯ ಬ್ರಹ್ಮನೆಂದರೆ ಶಿವ, ಶಂಕರ, ಗಣಪತಿ, ಬ್ರಹ್ಮ, ವಿಷ್ಣು, ರುದ್ರ, ಶಕ್ತಿ, ಆಂಜಿನೇಯ, ರವಿ, ಚಂದ್ರ ಮೊದಲಾದವರು. ಕಾರಣ ಬ್ರಹ್ಮವೆಂದರೆ ತತ್ವದ ವಾಚಾರ್ಥ, ಪರಮಾತ್ಮ, ಸರ್ವಜ್ಞತ್ವ, ಸರ್ವಶಕ್ತಿತ್ವ , ಸಮರ್ಥ, ಸ್ವತಂತ್ರ, ಸರ್ವಾಂತರ್ಯಾಮಿ, ಪರೋಕ್ಷ ಬಂಧಮೋಕ್ಷರಹಿತ ಆನಂದ ಸ್ವರೂಪ, ಓಂಕಾರ ಸ್ವರೂಪ, ಸಚ್ಚಿದಾನಂದವೆಂದು ಭಾವಿಸುವವರೆ ಕಾರಣ ಬ್ರಹ್ಮ ಉಪಾಸಕರು. ಇವರು ಮರಣ ಹೊಂದಿದಲ್ಲಿ ಸೂಕ್ಷ್ಮ ಶರೀರವು ತಮ್ಮ ಇಷ್ಟಾರ್ಥದ ಮೇರೆಗೆ ಫಲಪದಂಗಳ ಪಡೆಯುವರು. ಒಂದು ವೇಳ್ಯ ಸೂಕ್ಷ್ಮ ಶರೀರದೊಂದಿಗೆ ಭೋಗದ ವಾಸನೆಯುಳ್ಳದ್ದಾಗಿದ್ದಲ್ಲಿ ಆ ಉಪಾಸನೆಯ ಫಲವು, ಅಂತರಿಕ್ಷದಲ್ಲಿಯೆ ಒಂದು ಮಾಯಿಕ ಲೋಕ ನಿರ್ಮಾಣವಾಗಿ ಅವನು ಅಲ್ಲಿಯೆ ತನಗಿಚ್ಛಿತವಿದ್ದಷ್ಟು ಕಾಲವಿದ್ದು, ತನ್ನ ವಾಸನೆ ಮೇರೆಗೆ ಉಪಭೋಗಿಸಿ ಭೋಗದಲ್ಲಿ ಜಿಗುಪ್ಸೆ ಉಂಟಾದ ಕೂಡಲೆ ಅಲ್ಲಿಯೆ ಉಪಾಸನೆಯ ಬ್ರಹ್ಮನಿಂದ ಬ್ರಹ್ಮೋಪದೇಶವಾಗಿ ಅಲ್ಲಿಯೆ ಬ್ರಹ್ಮಜ್ಞಾನವಾಗಿ ತನ್ನ ಪುರುಷಾರ್ಥ ಸಾಧಿಸುವನು ಎಂಬ ಭಾವಿಕರ ಲೋಕವೆ ದೇವಲೋಕ. ಈ ಲೋಕದವರೆಲ್ಲರ ವ್ರತಗೇಡಿಗಳೆಂಬೆ ಎಂದು ಪ್ರಭುದೇವರು ಹೇಳಿದುದು ಬಹು ಗಹನಾರ್ಥವಾಗಿದೆ.

ದೇವಲೋಕದವರು ದೇವನ ತಿಳಿಯದವರು, ದೇವನ ಮಾಯಿಕಕ್ಕೆ ಮೆಚ್ಚಿದುದಲ್ಲದೆ ದೇವನಿಗಾಗಿ ಮೆಚ್ಚಲಿಲ್ಲ, ದೇವನ ದರ್ಶನವಾಗಲಿಲ್ಲ, ಸಟೆಯ ಮಾಯಿಕ ದೇವ, ಸಟೆಯ ಮಾಯಿಕ ಲೋಕವೆ ಇವರಿಗೆ ನಿಜಪದವಾಗಿ ತಮ್ಮ ಪರಮ ಪುರುಷಾರ್ಥದಿಂದ ವಂಚಕರಾದುದಕ್ಕಾಗಿ ದೇವಲೋಕದವರ ವ್ರತಗೇಡಿಗಳೆಂಬೆ ಎಂದು ಹೇಳಿಹನು. ಇವರಿಗೆ ಶ್ರೀಗುರುವಿನ ದರ್ಶನವಾಗದ್ದರಿಂದ ದೇವನನ್ನು ಪರೋಕ್ಷವೆಂದು

ಭಾವಿಸಿದರು. ತನ್ನೊಳಗೆ ತತ್ವದೃಷ್ಟಿಯಿಂದ ನೋಡ ಹೋಗಲಿಲ್ಲ. ಆದಕ್ಕಾಗಿ ದೇವನನ್ನು ತನಗಿಂತ ಅನ್ಯನಾಗಿ ಕಂಡ ದೇವ ತಾನಿದ್ದು, ತನ್ನನರಿದಡೆ ದೇವಲೋಕ ತನ್ನ ಲೋಕ, ತಾನೆ ದೇವನಿದ್ದು, ತನಗಿಂತ ಅನ್ಯವಾಗಿ ಕಂಡವರೆಲ್ಲ ದೇವಲೋಕದ ವ್ರತಗೇಡಿಗಳು ಎಂದು ಹೇಳಿಹರು.

ಮರ್ತ್ಯಲೋಕದವರೆಲ್ಲರು ಭಕ್ತದ್ರೋಹಿಗಳೆಂಬೆ. ''ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೊ, ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುಡೆ ಮರ್ತ್ಯಲೋಕವೆಂದು ಬಿತ್ತರಿಸಿದ ಮಹಾಪ್ರಸಾದದಿಂದ ನೋಡುವುಡೆ ಸ್ವಾನುಭವದ ಜ್ಯೋತಿ, ಜ್ಞಾನಜ್ಯೋತಿಗೆ ದೇವಲೋಕ ಮರ್ತ್ಯಲೋಕ ಎರಡಾಗಿ ಕಾಣಲಿಲ್ಲ. ಮಠದಲ್ಲಿಹ ಆಕಾಶ ಮನೆಯಲ್ಲಿಹ ಆಕಾಶ ಎರಡೆ ? ದೇವಲೋಕದಲ್ಲಿಹ ದೇವ, ಜ್ಞಾನಸ್ವರೂಪ ಮರ್ತ್ಯಲೋಕದಲ್ಲಿಹ ದೇವ ಜ್ಞಾನಸ್ವರೂಪ, ಜ್ಞಾನದೇವ ಬೇರೆಯೆ ! ಚಿತ್ ಸ್ವರೂಪವ ನರಿಯದವಂಗೆ ದೇವಲೋಕ ಊರ್ಧ್ವವಾಗಿದೆ. ಮರ್ತ್ಯಲೋಕ ಮಧ್ಯಮ ಲೋಕವಾಗಿದೆ. ಪಾತಾಳವು ಅಧೋಲೋಕವಾಗಿರುವುದು. ಇದು ಅರಿಯದ ದೃಷ್ಟಿ, ಅಜ್ಞಾನ ದೃಷ್ಟಿ, ಸುಜ್ಞಾನಿಯಾಗಿಹ ಪ್ರಭುದೇವರಿಗೆ ಮರವಿನ ದೃಷ್ಟಿ ಹೇಗೆ ಒಪ್ಪಿಗೆಯಾಗುವುದು.

*ಮರ್ತ್ಯಲೋಕದವರು ಭಕ್ತದ್ರೋಹಿಗಳೆಂಬೆ* : ಮಾನವರಿದ್ದ ಲೋಕ ಮರ್ತ್ಯಲೋಕವೆಂದು ತಿಳಿದವರೆ ಬಹುಜನ ಇದೆ. ಶರಣರ ದೃಷ್ಟಿಗೆ ಒಪ್ಪಿದ ಲೋಕವಲ್ಲ. ಅವರು ಇಲ್ಲದ ಲೋಕ ಇಲ್ಲ ಮಾಡಿ ಇದ್ದ ಲಿಂಗತತ್ವ ಕಂಡು ಲಿಂಗಮಯವೆಂದರಿದ ಮಹಾಂತರು. ಇವರ ಚರ್ಮಚಕ್ಷುವಿಂಗೆ ನಿರ್ಮಿತವಾದ ಲೋಕಂಗಳ ಒಪ್ಪಬಹುದೆ ?

ಬಸವಣ್ಣನವರು ಇದೆ ಮರ್ತ್ಯಲೋಕದಲ್ಲಿದ್ದು ಭಕ್ತಿಯ ಸಾಧಿಸಿ ತೋರಿಸಿದುದು ಅಸಾಧ್ಯವ ಸಾಧಿಸಿ ತೋರಿದ ಭಕ್ತಿ. ಅಸಾಮಾನ್ಯ ಭಕ್ತಿಯು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪ ಭಕ್ತಿ. ಇಲ್ಲಿ ದೇವಂಗೆ ದೇವನಾಗಿ ಬೆಳಗಿದ ಭಕ್ತಿ. ದೇಹಿಗೆ ದೇಹಿಯಾಗಿಹ ಬೆಳಗುಳ್ಳ ಭಕ್ತಿ. ಇದು ಘನಕ್ಕೆ ಘನವಾಗಿಹ ಭಕ್ತಿ. ಈ ಪರಾಭಕ್ತಿಯನ್ನು ಮರ್ತ್ಯಲೋಕದಲ್ಲಿ ತನ್ನ ನಿಜವನ್ನೈಯಿದ್ದ ಭಕ್ತಿ. ಈ ಭಕ್ತಿ ಮರ್ತ್ಯಲೋಕದಲ್ಲಿ ಮಾಡದ್ದರಿಂದ ಇವರು ಭಕ್ತದ್ರೋಹಿಗಳೆಂದು ಹೇಳಿಹರು.

ದೇವಸಂಭ್ರಮ ಗಣಪದವಿಯ ಕಂಡವರೆಲ್ಲರು ಕುಂಭ ಕರ್ಣನಂತೆ ಅತಿ ನಿದ್ರಿಗಳೆಂಬೆ, ದೇವಸಂಭ್ರಮದವರು. ದೇವಗಣ, ರುದ್ರಗಣ, ಪ್ರಮಥಗಣ ಮೊದಲಾದವರು ದೇವನ ಧ್ಯಾನಸ್ಥ ಸಂಭ್ರಮದವರು. ಇವರು ಗಣಪದವಿಯ ಕಂಡವರು. ಹೃದಯಲ್ಲಿಯೆ ಸಮಾಧಿಸ್ಥರಾಗಿ ಅಲ್ಲಿಯೆ ಬಹುಕಾಲ ಇದ್ದವರು.

ಕುಂಭ ಕರ್ಣನಂತೆ ಅತಿನಿದ್ರಿಗಳೆಂಬೆ. ಅನಂತ ಶೀಲರ ಕಂಡಡೆ ಕೂಲಿಕಾರರೆಂಬೆ: ಬಹುಶೀಲ ಮಾಡುವವರೆಲ್ಲರು ಕೂಲಿಕಾರರು. ಕೂಲಿ ಮಾಡಿದಾಗ ಯಜಮಾನನು ಹಣಕೊಡುವನು. ಕೂಲಿ ಮಾಡದಿದ್ದರೆ ಉಪವಾಸ. ಇವರು ಮನೆಯ ಮಕ್ಕಳಲ್ಲಿ ದೇವನಿಗೆ ಅನ್ಯರಾದವರು. ಅವನ ಕೆಲಸಕ್ಕೆ ಹೋಗುವವರು. ಇವರು ಕೂಲಿಕಾರರು.

ಶೀಲ ಶೀಲವೆಂದೇನೊ ? ತನು, ಮನ, ಧನವೆಂಬ ತ್ರಿಪುರವಿರಲು ಆ ತ್ರಿಪುರ ಸಂಹಾರ ಮಾಡಿ ಭಸ್ಮಾಂಗಿಯಾದಲ್ಲದೆ ಶೀಲವಿಲ್ಲ ಕಾಣಾ ಗುಹೇಶ್ವರಾ.

ಅನಂತ ಶೀಲ ಮಾಡುವವರು ಶೀಲದ ತಿರಳು ತಿಳಿಯದೆ ಮಾಡುವುದರಿಂದ

ಕೂಲಿಕಾರರು. ತನು, ಇಂದ್ರಿ, ಪ್ರಾಣ ಮನ ಮೊದಲಾದವುಗಳಿಂದ ಮಾಡಿದುದು ಶೀಲವೆ ? ಧನದಿಂದ ಮಾಡಿದುದು ಶೀಲವೆ ? ಇವುಗಳ ಸಂಹಾರವಾದುದೆ ಶೀಲ. ಅಜ್ಞಾನ ತನು ಹೋಗಿ ಗುರುವಿನ ತನು ಆಗಬೇಕು. ಸಂಕಲ್ಪ ವಿಕಲ್ಪ ಕೆಟ್ಟು ಅಕಲ್ಪಿತ ಘನವಾಗಬೇಕು. ಕೆಡುವ ಧನ ಹೋಗಿ ಕೆಡದ ಧನವಾಗಬೇಕು. ಅಕ್ಷಯ ನಿಧಿ ನಿಧಾನವಾಗಬೇಕು. ಇದು ನಿಜವಾದ ಶೀಲವಾಗುವುದು. ಇಂತಪ್ಪ ಶೀಲ ಮಾಡುವುದು ಬಿಟ್ಟು ನೀರು ಶೀಲ, ಅನ್ನ ಶೀಲ, ಬಟ್ಟೆ ಶೀಲ, ಕೈಯಿ ಶೀಲ, ಮುಟ್ಟುವುದು ಶೀಲ, ತಟ್ಟುವುದು ಶೀಲ, ಭವಿಗೆ ಕೊಡಲಾಗದು. ಇಡಲಾಗದು. ಕೊಂಬಲಾಗದು, ಇದು ಶೀಲ ಎಂದು ವಾರಗಳ ಶೀಲ, ಮಾಸಗಳ ಶೀಲ, ಈ ಶೀಲ ಮಾಡುವವರು ಕೂಲಿಕಾರರು ಎಂದು ಹೇಳಿಹರು.

ಗುಹೇಶ್ವರಾ ಲಿಂಗೈಕ್ಯರರಿಯರಾಗಿ: ಲಿಂಗೈಕ್ಯರು ಲಿಂಗವರಿತು ಲಿಂಗವಾಗಿಹ ಮಹಾಂತರು. ಭಾವಕ್ಕಿಂಬಿಲ್ಲ, ಶಬ್ದಮೀಸಲು ನೋಡಾ, ನುಡಿಗೆಡೆಯಿಲ್ಲ ಎಡೆಗೆ ಕಡೆಯಿಲ್ಲ ಗುಹೇಶ್ವರ ಲಿಂಗ ವೇಧಿಸಲೊಡನೆ. ಇವರು ಲಿಂಗೈಕ್ಯರು. ಭಾವಕ್ಕಗಮ್ಯವಾಗಿಹ ಘನವ ಕಂಡು ಅದುವೆ ಆಗಿಹರು. ಘನಕ್ಕೆ ಘನನಾಗಿ ದೇವ ಭಾವಿಸುವನೆಂತು ? ಆರಾಗಿ ಭಾವಿಸುವುದು. ನಿರ್ನಾಮಿಯಾದವಂಗೆ ದೇವನೆಂಬುದು ಪುಸಿ, ಭ್ರಮವಾಗಿದೆ. ಏಕೆಂದರೆ ತಾನು ದೇವನೆಂಬುದಕ್ಕೂ ಮೀರಿದ ಘನವೆಂಬುದು ತನ್ನಿಂದ ತನಗೆ ವೇದ್ಯವಾಗಿರುವಲ್ಲಿ ಭಾವವೆಂಬುದು ಭ್ರಮವಾಗಿದೆ. ಭಾವಕ್ಕಗಮ್ಯವಾಗಿಹ ಘನವೆ ತನ್ನಿರುವಿನ ಅರುವಾದುದರಿಂದ ಶಬ್ದವೆ ಮೀಸಲು ನುಡಿಯಲು ಆಸ್ಪದವಿಲ್ಲ. ತನ್ನಿರುವು ಅಪಾರ, ತಾನೆ ಅಪಾರನಾಗಿಹ ತನ್ನ ಘನವು ತನ್ನಿಂದ ತನಗೆ ವೇದ್ಯವಾದುದೆ ಗುಹೇಶ್ವರಲಿಂಗ ವೇದಿಸಿದ ಚಿನ್ಹ.

ಗುಹೇಶ್ವರ ಲಿಂಗ, ತನ್ನ ದೇಹವೆಂಬ ಗುಹೆಗೆ ಈಶ್ವರನಾಗಿರುವ ಚೈತನ್ಯನು ಮಹಾಲಿಂಗವು. ಈ ಘನಲಿಂಗ ತಿಳಿಯ ಹೋಗಿ ಅದುವೆ ಆಗಿಹ ಮಹಾಂತರು ಲಿಂಗೈಕ್ಯರು. ಇವರು ಲಿಂಗ, ಲಿಂಗ ಎನ್ನದವರು, ನೆನೆಯದವರು, ಭಾವಿಸದವರು, ಅರಿಯದವರು ಲಿಂಗ ಹೇಗೆ ನಿರಾಳವಾಗಿದೆ ಹಾಗೆ ಲಿಂಗವ ತಿಳಿಯಹೋಗಿ ಅದುವೆ ಆಗಿಹರು. ಅವರು ಲಿಂಗೈಕ್ಯರು. ಇವರ ಘನವ ದೇವಲೋಕದವರು ಅರಿಯರು. ಮರ್ತ್ಯಲೋಕದ ಮಾನವರಲ್ಲಿ ಅರಿತವರು ಕೋಟಿಗೊಬ್ಬನು; ದೇವ ಸಂಭ್ರಮದ ಗಣಪದವಿಯಅರಿವವರು ಅರಿಯರು. ತತ್ತ್ವವೇತ್ತರು ಅರಿತವರು. ಇನ್ನುಳಿದವರು ಅರಿಯರಾಗಿ.

**127**

**ಜಂಗಮ ಘನವೆಂಬೆನೆ ? ಬೇಡಿ ಕಿರಿದಾಯಿತ್ತು.**
**ಲಿಂಗ ಘನವೆಂಬೆನೆ ? ಕಲ್ಲುಕುಟಿಗನ ಕೈಯಲ್ಲಿ**
**ಮೂಡಿಸಿಕೊಂಡು ಕಿರಿದಾಯಿತ್ತು.**
**ಭಕ್ತ ಘನವೆಂಬೆನೆ ? ತನು-ಮನ- ಧನದಲ್ಲಿ ವಂಚಕನಾಗಿ ಕಿರಿದಾದ.**

-ಇಂತೀ ತ್ರಿವಿಧದಲ್ಲಿ ಪರಿಣಾಮವಿಲ್ಲ ಪರಮಾರ್ಥವಿಲ್ಲ.
ಘನವ ಬಲ್ಲವರಾರೊ ಗುಹೇಶ್ವರಾ? ॥ 480 ॥

**ತಾತ್ಪರ್ಯ** : ವೀರಶೈವರಲ್ಲಿ ಭಕ್ತ, ಜಂಗಮ, ಲಿಂಗ ಈ ತ್ರಿವಿಧದ ಘನವ ಬಲ್ಲವರು ಎಷ್ಟು ಮಹಾಂತರು ಸಿಕ್ಕಬಹುದು. ಬಟ್ಟ ಬಯಲೆಲ್ಲ ಘಟ್ಟಿಗೊಂಡಡೆ ಸ್ವರ್ಗ, ಮರ್ತ್ಯ ಪಾತಾಳಕ್ಕೆ ಠಾವ ಇನ್ನೆಲ್ಲಿಯದು. ಮೇಘದೊಳಗಣ ಜಲಗಳೆಲ್ಲ ಮುತ್ತುರತ್ನಗಳಾದಡೆ ಸಮುದ್ರಕ್ಕೆ ಉದಕವಿನ್ನೆಲ್ಲಿಯದು. ಹುಟ್ಟಿದವರೆಲ್ಲ ನೆಟ್ಟನೆ ಶಿವ ಜ್ಞಾನಿಗಳಾದರೆ ಭವ ಬಟ್ಟ ಬಯಲಾಯಿತಣ್ಣಾ. ಸಹಸ್ರಕ್ಕೊಬ್ಬ ಸತ್ಪುರುಷ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ, ಕೂಡಲಚೆನ್ನಸಂಗಯ್ಯನಲ್ಲಿ, ಎಂದು ಚೆನ್ನಬಸವಣ್ಣನವರ ಪ್ರಸಾದ ವಾಣಿಯಂತೆ ಲಕ್ಷಕ್ಕೊಬ್ಬರಾದರೂ ಈ ತ್ರಿವಿಧದ ಘನವರಿತವರು ಸಿಕ್ಕುವುದು ವಿರಳ. ಬಹು ಲಿಂಗವಂತರಿಗೆ ತತ್ವದೃಷ್ಟಿ ಇಲ್ಲ, ತತ್ವಜ್ಞಾನವಿಲ್ಲದವರು ಬಹು ಭಕ್ತರಿರುವರು.

ಲಿಂಗವಂತರಲ್ಲಿ ಜಂಗಮ, ಲಿಂಗ, ಭಕ್ತ ಈ ತ್ರಿವಿಧದ ಪರಿಜ್ಞಾನವಿದ್ದವರು ಸಿಕ್ಕುವುದು ವಿರಳ. ಪೂರ್ವಿಕ ಜಂಗಮರಾಗಿಹರಲ್ಲದೆ ಅಪೂರ್ವಿಕ ಜಂಗಮತ್ವ ಆರಿಗೆ ಬೇಡವಾಗಿದೆ. ಏಕೆಂದರೆ ಜಂಗಮತ್ವವದು ಬೇಡಿ ಉಂಬುವುದು ಜಂಗಮನ ಕಾಯಕವಾಗಿದೆ. ಸ್ವಪುತವಾಗಿದೆ. ಇದಲ್ಲದೆ ನಮಗೆ ದೇವರು ಹುಟ್ಟಿಸಿದುದು, ಬೇಡುವುದಕ್ಕೆ ಇದು ಸ್ವತಃ ಸಿದ್ಧ ನಮ್ಮ ಅಧಿಕಾರವೆಂದು ಹೇಳುವ ಜಂಗಮಯ್ಯಗಳು ಇದ್ದಾರೆ. ಅರಿಯದವರ ಭಾವ ಇದು.ಅರಿತವರ ಭಾವ, ಕೆಲ ಪ್ರವಚನಕಾರರು, ಜಂಗಮದಲ್ಲಿ ಎರಡು ವಿಧ, ಬೇಡದ ಜಂಗಮನೊಬ್ಬ, ಬೇಡುವ ಜಂಗಮನೊಬ್ಬ, ಹೀಗೆ ಎರಡು ರೂಪದಲ್ಲಿಹರು ಎಂದು ಹೇಳುವ ಮಹಾಂತರು ಈಗಿದ್ದಾರೆ. ಅವರು ನಿಜದಿರುವಿನಯ ಘನಸುಖದ ಆತುರವಂತರಲ್ಲ, ಹಸಿವು ಅರಿತಲ್ಲದೆ ಪ್ರಸಾದಿಯಲ್ಲ, ನಿಜಸುಖದ ಹಸಿವೆ ಅವರಿಗಿಲ್ಲವೆಂದ ಮೇಲೆ ನಿಜ ಪ್ರಸಾದದ ವಿಚಾರ ಅವರಿಗೇಕೆ ಬೇಕು? ಲೋಕ ಒಪ್ಪಿದರೆ ಸಾಕು, ಅದು ಮೆಚ್ಚಿ ಪ್ರತಿಷ್ಠಿತ ವೃದ್ಧಿಯಾಗುತ್ತಿದ್ದರೆ ಸಾಕು, ತನಗೆ ಅಧಿಕಾಧಿಕ ಹಣ ಸಂಗ್ರಹವಾಗುವ ಗುರಿಯೆ ಗುರಿ. ಇದರಿಂದ ತನ್ನ ಬಾಳು ಭವದ ಲೆಂಕಿಗನಾಗುವನೆಂಬ ಭಯ ಅವರಿಗಿಲ್ಲ, ತನ್ನದು ಅಧೋಮುಖ, ಇಂಥವರ ನಂಬಿದ ಹೃದಯವು ಅಧೋ ಮುಖವಾಗಿ; ಅರು ಹೃದಯವೆನ್ನುವುದು ಇವರು ಕನಸಿನಲ್ಲಿ ಸಹ ಕಾಣದಂತಾಗಿದೆ. ಈಗಿನ ಸಮಾಜದಲ್ಲಿ ಇಂಥವರೇ ಮಹಾತ್ಮರು. ಭಗವದ್ಗೀತೆಯಾಗಲಿ ಉಪನಿಷದ್‌ಗಳಾಗಲಿ, ಬ್ರಹ್ಮಸೂತ್ರವಾಗಲಿ, ಮೇಲಾಗಿ ವಚನ ಸಾಹಿತ್ಯಗಳಾಗಲಿ, ಅವಧೂತ ಗೀತೆಗಳಾಗಲಿ, ಸರಳರೂಪದಲ್ಲಿ ತಿಳಿಸುವ ಜ್ಞಾನಗಮ್ಯರು ಇವರೆ ಎನ್ನುವಷ್ಟು ಲೋಕದವರು ಭಕ್ತರಾದವರು. ಇವರಿಗೆ ಒಪ್ಪಿಗೆಯಾದಲ್ಲಿ ಅದಕ್ಕೆ ಉಪಾಯವಿಲ್ಲ,

ಬಸವಾದಿ ಪ್ರಮಥರಂತೆ ಅನೇಕ ಮಹಾತ್ಮರಂತೆ ಜ್ಞಾನರೂಪ ಬೆಳಗುವ ಮಹಾನುಭವಿಗಳ ನಿಲುವು ಎತ್ತ, ಇವರಿರುವ ಅಧೋ ಮುಖವೆತ್ತ, ವಿಷಮದೃಷ್ಟಿ ಇವರಿಗೆ ತನ್ನಿರುವು ಆಗಿರುವಲ್ಲಿ ಸಮಪ್ರಕಾಶಮಾನವಾದ ತತ್ವ ತಿಳಿಯುವುದು ಆವಾಗ ? ಶರಣ ಶರಣೆಯರ ಕಂಡ ನಿಸ್ಸೀಮವೆತ್ತ ಇವರ ಸಂಕುಚಿತವೆತ್ತ ? ಅರುವು ಎತ್ತ ಮರವು ಎತ್ತ,?

ಜಂಗಮ ಘನವೆಂಬೆನೆ ಬೇಡಿ ಕಿರಿದಾಯಿತ್ತು. ಜಂಗಮದ ಘನತ್ವಪ್ರಭುವಿಂಗೆ ಗೊತ್ತು, ಚೆನ್ನಬಸವಣ್ಣನಿಗೆ ಗೊತ್ತು. ಬಸವರಸರಿಗೆ ಗೊತ್ತು, ಈ ಮೂರೊಂದಾದುದು ಗೊತ್ತು. ಮೂರೊಂದಾದುದು ಆವುದು ? ಜಂಗಮ, ಲಿಂಗ, ಭಕ್ತ !

ಜಂಗಮನೆಂಬುದು ಒಂದು ಜಾತಿಯೆ ? ಅದೊಂದು ವ್ಯಕ್ತಿಯೆ ? ಉಪಾಧಿ ವಂತನೆ, ಮಾಯಿಕನೆ ? ನಿರ್ಮಾಯನು, ನಿರುಪಾಧಿಯು, ನಿರಾಲಂಬ ನಿಸ್ಸಂಗನು, ನಿರವಧಿಯು, ನಿರ್ಲಿಖಿತ ಜಂಗಮ, ನಿಜೈಕ್ಯ ಜಂಗಮ. ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ಧ ಲಿಂಗ ಘನವ ಉಪಮಿಸಬಾರದು. ಜಂಗಮವದು ತತ್ವ ತತ್ವಬಲ್ಲವರು ಜಂಗಮರು, ತತ್ವದಲ್ಲಿ ಒಂದಾದವರು, ತತ್ವಕ್ಕೆ ತತ್ವವಾದವರು.

ಮಿಗೆ ಮಿಗೆ ಮೀಸಲವಾಗಿಹ ತತ್ವ, ಇಂತಪ್ಪ ತತ್ವ ಬಲ್ಲ ಘನವಂತರ ಇರವು ಅರಿವು ಜಂಗಮನ ನಿಲವು. ಈ ಮಹಾ ಮಹಿಮ ಆವುದಕ್ಕೋಸ್ಕರ ಬೇಡಬೇಕು. ತೃಪ್ತರೂಪ ತೃಪ್ತಿ ಅದಾವ ಕಾರಣಕ್ಕಾಗಿ ಬೇಡುವುದು ? ಚಿದ್ರಸ ಅದಾವ ರಸನೇಂದ್ರಿಯ ಸುಖಕ್ಕಾಗಿ ಬೇಡುವುದು. ತನುವಿಂಗೆ ತನುವಾಗಿಹ ಘನವು ಅದಾವ ಬಟ್ಟೆಗಾಗಿ ಬೇಡುವುದು. ತನ್ನಂತರಂಗದಲ್ಲಿ ನಸ್ತವಾಗಿಹ ಮುನ್ನ ಮುನ್ನಲಾದ, ತನ್ನಿಂದ ತಾನಾದ ಇರುವಿನ ಅರುವು ತಾನಾಗಿರುವುದು ವಿದಿತವಾದುದು. ಹೃದಯದ ಹೃದಯವಾದುದು, ಇದು ಅಗಮ್ಯನಿಧಿ, ಅಕ್ಷಯ ನಿಧಿ, ಈ ಪರಾತತ್ವ ನಿಧಿಯು ತಾನಾಗಿರುವಲ್ಲಿ ಹಣ, ಹಣವ ಬೇಡಿರುವುದೆ ? ನಿಧಿಯು, ನಿಧಿ ಬೇಡಿರುವುದೆ ? ಬೇಡುವುದೆ ಜಂಗಮ ! ಅಕ್ಷಯ ನಿಧಿ, ಜ್ಞಾನ ನಿಧಿ, ಸುಖ ನಿಧಿ, ನಿಶ್ಚಿಂತ ನಿಧಿ, ಪರಮಾನಂದ ನಿಧಿ, ಅದು ಬೇಡುವುದೆ ! ಅದಕ್ಕಾಗಿ ಜಂಗಮ ಘನನೆಂಬೆನೆ ? ಬೇಡಿ ಕಿರಿದಾಯಿತ್ತು. ಎಂದು ಹೇಳಿಹರು.

ಲಿಂಗ ಘನವೆಂಬೆನೆ ? ಕಲ್ಲು ಕುಟಿಗನ ಕೈಯಲ್ಲಿ ಮಾಡಿಸಿಕೊಂಡು ಕಿರಿದಾಯಿತ್ತು: ಪೃಥ್ವಿಗೆ ಹುಟ್ಟಿದ ಶಿಲೆ, ಇದು ಮುನ್ನ ಮುನ್ನಲಾದ ಘನವಾಯಿತ್ತೆ ! ಕಲ್ಲು ಕುಟಿಗನ ಕೈಯಿಂದ ಕೆತ್ತಿದುದು, ರೂಪು ಮಾಡಿದುದು, ಇದು ಗುರು ಕಾರುಣ್ಯವಾಯಿತ್ತೆ ? ಗುರುಕಾರುಣ್ಯದಿಂದಾದ ಘನದಿರುವಿನ ಅರುವಾದುದೆತ್ತ ? ಕಲ್ಲು ಕುಟಿಗನ ಕೈಯಲ್ಲಿ ರೂಪಾಗಿ ಕಂತೆಯ ಧರಿಸಿ ಲಿಂಗವಾದುದೆತ್ತ? ಅಸಾಧ್ಯವಾದುದು ಸಾಧಿಸಿ ಒಂದನುವ ಮಾಡಿ ಅನುಪಮ ಲಿಂಗವ ಕರುಣಿಸಿದುದೆತ್ತ?

ಲಿಂಗವ ಆರಾದರೂ ಮಾಡಲು ಬರುವುದೆ ? ಜ್ಞಾನರೂಪ ಲಿಂಗ. ಸ್ಥೂಲವಾಗದ ಸೂಕ್ಷ್ಮವಾಗದ ಲಿಂಗ, ಜ್ಞಾನ ಸ್ವರೂಪ ಪರಬ್ರಹ್ಮವೆಂದರಿದ ಅರುವು. ಪರಾನಂದ ಲಿಂಗವೆಂಬುದೆತ್ತ, ಕಲ್ಲು ಲಿಂಗ ಮಾಡಿದುದೆತ್ತ ? ಜಡವೆತ್ತ ಚೈತನ್ಯವೆತ್ತ, ಅಮವಾಸಿಯ ಕಗ್ಗತ್ತಲು ಎತ್ತ ಸೂರ್ಯನೆತ್ತ, ಕುರುಹಿಂಗೆ ಕಂತೆಯ ಒರಸಿ ಲಿಂಗವ ಮಾಡಿ ಪೂಜಿಸಿದ ಪೂಜಾಲಿಂಗವೆತ್ತ, ಅರುವ ಅರಿಯಹೋಗಿ ತೆರಹಿಲ್ಲದ ಘನದಿರುವಾಗಿ ಪ್ರಜ್ವಲಿಸುವ ಘನಲಿಂಗವೆತ್ತ, ಇದನ್ನು ಕಂಡು ಪ್ರಭುದೇವ, ಲಿಂಗಘನವೆಂಬೆನೆ ಕಲ್ಲು ಕುಟಿಗನ ಕೈಯಿಂದ ಮಾಡಿಸಿಕೊಂಡು ಕಿರಿದಾಯಿತ್ತು ಎಂದು ಹೇಳಿಹರು.

ಭಕ್ತ ಘನವೆಂಬೆನೆ ? ತನು, ಮನ, ಧನದಲ್ಲಿ ವಂಚಕನಾಗಿ ಕಿರಿದಾದ. ತನು, ಮನ, ಧನದಲ್ಲಿ ವಂಚಕರಾಗದೆ ತಮ್ಮ ಘನದಿರುವಿನ ವಂಚಕರಾದರೆ ? ಪೂಜಾಲಿಂಗಕ್ಕೆ

ಒಪ್ಪಿದ ಲಿಂಗವಂತರು ಬೇರೆ ? ಲಿಂಗೈಕ್ಯ ನಿಲುವುಳ್ಳ ಮಹಾಂತರು ತಿಳಿದ ಲಿಂಗವು ಬೇರೆ. ಪೂಜಾಲಿಂಗವಂತರುಗಳಿಗೆ ತಮ್ಮ ತನುವ ಗುರುವಿನ ಮಹದರುವಿಗಿಕ್ಕುವುದು ಬೇಕಾಗಿಲ್ಲ. ಮನವ, ಜ್ಞಾನಸ್ವರೂಪ ಲಿಂಗಕ್ಕಿಕ್ಕುವುದು ಬೇಕಾಗಿಲ್ಲ. ಧನವು ನಿಜ ಚೈತನ್ಯ ಜಂಗಮಕ್ಕಿಕ್ಕುವುದು ಬೇಕಾಗಿಲ್ಲ. ಇವರಿಗೆ ತನು, ಮನ, ಧನವೆಂಬಿವು ದೊಡ್ಡ ಗಳಿಕೆಯಾಗಿವೆ. ಇದಲ್ಲದೆ ಗುರು, ಲಿಂಗ, ಜಂಗಮಕ್ಕೆ ಹೇಗೆ ಅರ್ಪಿಸುವುದು ಎಂಬ ಸಂದೇಹವಾಗಿದೆ. ಏಕೆಂದರೆ ಇವುಗಳ ಅರ್ಪಿಸುವ ವಿಧಾನವು ತಿಳಿಯರು.

ಬಸವಾದಿ ಪ್ರಮಥರು ಅರ್ಪಿಸುವ ವಿಧಾನವರಿತವರು. ಇದು ಕಾರಣ ಅಯ್ಯ ನಿಮ್ಮ ಮಹಾನುಭವರ ಸಂಗದಿಂದೆನ್ನ ತನು ಶುದ್ಧವಾಯಿತ್ತು. ಮನ ಶುದ್ಧವಾಯಿತ್ತು, ಧನ ಶುದ್ಧವಾಯಿತ್ತು. ಸರ್ವಾಂಗ ಶುದ್ಧವಾಯಿತ್ತು. ವಾರಿಕಲ್ಲ ಪುತ್ಥಳಿಯನಪ್ಪಿ ಕೊಂಡಂತಾಯಿತ್ತು ಕೂಡಲ ಸಂಗಮದೇವಾ ನಿಮ್ಮ ಶರಣ. ಪ್ರಭುದೇವರ ಕೃಪೆಯಿಂದ ಎನಗೊದಗಿದ ಘನವದೇನು ಉಪಮಿಸುವುದು ಎಂದು ಬಸವರಾಜ ದೇವರು ಬಿತ್ತರಿಸಿರುವಲ್ಲಿ ಮಹಾನುಭಾವಕ್ಕೆ ತನುವನಿಕ್ಕಿದ ಮನವನಿಕ್ಕಿದ. ಧನವನ್ನಿಕ್ಕಿದ ತನು ಶುದ್ಧವಾಯಿತ್ತು ಅಂದರೆ ತನುವಿನ ತನುವಾಯಿತ್ತು. ಮನ ಶುದ್ಧವಾಯಿತ್ತು ಅಂದರೆ ಮನದ ಮನವಾಯಿತ್ತು ಧನ ಶುದ್ಧವಾಯಿತ್ತು ಅಂದರೆ ಭಾವಕ್ಕಗಮ್ಯವಾಗಿಹ ಘನವಾಯಿತ್ತು.

ಭಕ್ತನಾದಲ್ಲಿ ತನು, ಮನ, ಧನ, ಮಹಾನುಭಾವರೂಪಿ ಶರಣಸಂಗಕಿಕ್ಕುವುದು. ಶರಣರ ಸಂಗ ಮಾಡಿದ ತನು, ಸುಖದ ತನು, ಮಹಾನುಭವ ಸಂಗ ಮಾಡಿದ ಮನ. ಅದು ಸುಮನ, ಸುಖದ ಮನ. ಮಹಾನುಭವದ ಸಂಗದಲ್ಲಿದ್ದ ಧನ, ಅದು ಅಗಮ್ಯನಿಧಿ , ಅಕ್ಷಯ ನಿಧಿ, ನಿಜಾನುಭವವುಳ್ಳ ಮಹದರವು, ಇಂತಪ್ಪ ಶರಣನ ಧನ, ತೃಪ್ತರೂಪ ತೃಪ್ತಿ ಅದು. ಇಂತಪ್ಪ ಮಹಾನುಭವಕ್ಕೆ ತನು, ಮನ, ಧನ ವಂಚಕನಾಗಿ ಭಕ್ತ ಕಿರಿದಾದನೆಂದು ಹೇಳಿಹರು.

ಗರತಿ, ಗಂಡನ ತಿರಸ್ಕರಿಸಿದಲ್ಲಿ ತನ್ನ ಘನವ ತಾನು ಹಾಳು ಮಾಡಿಕೊಂಡಂತೆ; ಅವಳಿಗೆ ಪೂಜ್ಯತೆಯು ಸಿಗದು. ಹಾಗೆ ಭಕ್ತನಾದವನು, ಗುರು ಲಿಂಗ ಜಂಗಮಕ್ಕೆ ಸತಿ ಸಮಾನಳು, ಇವು ಪತಿ ರೂಪವು. ಈ ತ್ರಿವಿಧದಲ್ಲಿ ಸಮರಸವಾದಲ್ಲಿ ಭಕ್ತನಿಗೆ ಶ್ರೇಯಸ್ಕರವು, ಪೂಜ್ಯತೆಯು. ಇದರಿಂದ ವಂಚಕನಾಗಿ ಭಕ್ತ ಕಿರಿದಾಗುತ್ತಾನೆ ?

ಇಂತೀ ತ್ರಿವಿಧದಲ್ಲಿ ಪರಿಣಾಮವಿಲ್ಲ, ಪರಮಾರ್ಥವಿಲ್ಲ, ಘನವ ಬಲ್ಲವರಾರು ಗುಹೇಶ್ವರಾ: ತ್ರಿವಿಧಗಳು ಆವು ? ಅವುಗಳಿಗೆ ಪರಿಣಾಮವಿಲ್ಲ, ಪರಮಾರ್ಥವಿಲ್ಲ, ತ್ರಿವಿಧಂಗಳೆಂಬಿವು ಬೇಡಿ ಕಿರಿದಾದ ಜಂಗಮ, ಕಲ್ಲು ಕುಟಿಗನ ಕೈಯಿಂದ ಮಾಡಿಸಿಕೊಂಡ ಲಿಂಗ; ತನು ಮನ ಧನದಿಂದ ವಂಚಕನಾದ ಭಕ್ತ. ಈ ಮೂರಕ್ಕೂ ಬೆಲೆಯಿಲ್ಲ, ಗೌರವವಿಲ್ಲ, ಪೂಜ್ಯತೆಯು ಇಲ್ಲ, ಇವರಿಗಾದರೂ ಸಂತೋಷವಿಲ್ಲ, ಶಾಂತಿಯಿಲ್ಲ, ನಿಶ್ಚಿಂತತೆಯು ಇಲ್ಲ, ಏಕೆಂದರೆ ಪರಿಣಾಮವಿಲ್ಲ, ಪರಮಾರ್ಥವಿಲ್ಲವಾದ್ದರಿಂದ ಘನವ ಅವರೇನು ಬಲ್ಲರು ಗುಹೇಶ್ವರಾ ಎಂದು ಹೇಳಿಹರು.

ಆವಲ್ಲಿ ಪರಿಣಾಮವಿಲ್ಲ, ಪರಮಾರ್ಥವಿಲ್ಲವೆಂದಲ್ಲಿ ಅಲ್ಲಿ ಅನುಪಮವಾಗಿಹ ಲಿಂಗ ಜ್ಞಾನವಿಲ್ಲ. ಅರುವಿಂಗರುವಾಗಿಹ ಗುರುವಿನ ಜ್ಞಾನವಿಲ್ಲ. ಭಾವಕ್ಕಗಮ್ಯವಾಗಿಹ ಘನದಿರುವು ಇಲ್ಲ, ಅರುವು ಇಲ್ಲ, ಅಂದರೆ ಜಂಗಮ ಲಿಂಗ ಒಂದಾಗಿರ್ದ ಘನ

ಜಂಗಮನಾಗಲಿಲ್ಲ, ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗವಾಗಲಿಲ್ಲ. ಅಜಾತ ಭಕ್ತನಾಗಲಿಲ್ಲ, ಇವರು ಲೋಕದೃಷ್ಟಿಯಲ್ಲಿ ಪೂಜ್ಯರು. ತಮ್ಮ ಅಂತರಂಗದೊಳಗೆ ತಾವೆ ನಷ್ಟವಾದವರು.

**128**

**ಕಾಯವೆ ಸತ್ತು ಮಾಯವೆ ಉಳಿಯಿತ್ತು.**
**ಎರಡರ ಸುಖದುಃಖವನರಿಯರು ನೋಡಾ.**
**ಅದೇನೆಂದರಿಯರು ಅದೆಂತೆಂದರಿಯರು ನೋಡಾ.**
**ಹಿರಿಯರೆಲ್ಲಾ ವೃಥಾಯ ಹೋದರು ನೋಡಾ.**
**ಕಣ್ಣ ಮುಂದಣ ಕಪ್ಪ ಕಳೆಯಲರಿಯರು ನೋಡಾ.**
**ಗುಹೇಶ್ವರನೆಂಬ ಶಬ್ದಕ್ಕೆ ನಾಚರು ನೋಡಾ.** ॥ 515 ॥

**ತಾತ್ಪರ್ಯ** : ಕಾಯವೆ ಸತ್ತು, ಮಾಯವೆ ಉಳಿಯಿತ್ತು, ಎರಡರ ಸುಖದುಃಖವನರಿಯರು ನೋಡಾ : ಈಶ್ವರನಿಂದ ರಚಿತವಾದ ಕಾಯ. ವಿಶ್ವವೆ ಕಾಯ ರೂಪವದೆ. ಇದು ಪ್ರಳಯವಾಗುತ್ತದೆ. ಕಾಯ ನಿತ್ಯ ಪ್ರಳಯವಾಗುತ್ತದೆ. ಪಂಚಭೂತಾತ್ಮಕ ಋಣ ತೀರಿದ ಕೂಡಲೆ ಪುನಃ ಅದರಲ್ಲಿಯೆ ಲೀಯವಾಗುತ್ತಿದೆ. ಇದು ನಿಮಿತ್ತ ಪ್ರಳಯವೆನಿಸುವುದು. ಮಹಾಪ್ರಳಯ ಇದು ಬ್ರಹ್ಮನಿರುವಷ್ಟು ಕಾಲ ತೋರುತ್ತದೆ. ಬ್ರಹ್ಮ ಪ್ರಳಯವಾದಾಗ ಸಕಲ ಚರಾಚರ ಜಗವು ಪ್ರಳಯವಾಗುವುದು. ಆದರೆ ಮಾಯೆ ಮಾತ್ರ ಪ್ರಳಯವಾಗದೆ ಹಾಗೆ ಉಳಿದಿರುತ್ತದೆ. ಈಶ್ವರನಿಂದ ರಚಿತವಾದ ಕಾಯ, ಅಪಾಯ ಕಾರಿಯಲ್ಲ, ಇದರ ಉಪಯೋಗ ಮಾಡುವವನ ಕೈಯಲ್ಲಿದೆ. ಇದು ಅಮರತ್ವ ಸಾಧಿಸುವ ಕಾಯ. ಈ ಕಾಯದಿಂದ ಮಾಯೆಯ ನಷ್ಟ ಮಾಡುವ ದಿವ್ಯ ದೃಷ್ಟಿಗಾಗಿ ಉಪಯೋಗ ಮಾಡಿದರೆ ಬಹು ಒಳ್ಳೆಯದು. ಇಲ್ಲದಿದ್ದರೆ ಇದು ನಷ್ಟವಾಗದು. ಮಾಯೆ ಉಳಿಯುವುಡೆ ಮಾನವನನ್ನು ಸುಖ ದುಃಖದ ದ್ವಂದ್ವದ ದವಡೆಯಲ್ಲಿ ಕೆಡಹುದು.

ಮಾಯೆ ಎಂಬುದನ್ನು ಸರಿಯಾಗಿ ತಿಳಿದವರು ಕಡಿಮೆ ಜನ. ಸತಿಗೆ ಪತಿಯಾಗಿ ಕಾಡಿತ್ತು ಮಾಯೆ. ಪತಿಗೆ ಸತಿಯಾಗಿ ಕಾಡಿತ್ತು ಮಾಯೆ. ಸತಿ ಪತಿಗಳಿಗೆ ಸುತರಾಗಿ ಕಾಡಿತ್ತು ಮಾಯೆ. ಯತಿಗೆ ಪರಾಕ್ ಹಾಕಿ ಕಾಡಿತ್ತು ಮಾಯೆ, ಯೋಗಿಗೆ ಯೋಗಾಂಗಿಯಾಗಿ ಕಾಡಿತ್ತು ಮಾಯೆ, ಗುರುವಿಂಗೆ ಶಿಷ್ಯರಾಗಿ ಕಾಡಿತ್ತು ಮಾಯೆ, ಶಿಷ್ಯಂಗೆ ಗುರುವಾಗಿ ಕಾಡಿತ್ತು ಮಾಯೆ, ಗುರುವಿಂಗೆ ಬೋಧವು ಕಾಡಿತ್ತು ಮಾಯೆ, ಶಿಷ್ಯ ಅಭೋದವು ಕಾಡಿತ್ತು ಮಾಯೆ, ಸಾಧಕನಿಗೆ ಬೋದಾ ಬೋಧವಾಗಿ ಕಾಡಿತ್ತು ಮಾಯೆ, ಸತ್ಕರ್ಮಿಗೆ ಪುಣ್ಯವಾಗಿ ಕಾಡಿತ್ತು ಮಾಯೆ, ದುಷ್ಕರ್ಮಿಗೆ ಪಾಪವಾಗಿ ಕಾಡಿತ್ತು ಮಾಯೆ, ಸುಜ್ಞಾನ ದೃಷ್ಟಿಗೆ ಮಾ ಎಂದರೆ ಯಾವುದು, ಯಾ ಎಂದರೆ ಇಲ್ಲವೊ ಅದು ಮಾಯೆ ಎಂದು ಹೇಳಿಸಿಕೊಳ್ಳುವುದು. ಇಲ್ಲದುದು ಆವಾಗ ಇದ್ದುದಾಗಿ ತಿಳಿಯುವೆವು ಆಗ ಅದು ನಮಗೆ ವಿಪರೀತ ತಿಳುವಳಿಕೆ ಉಂಟು ಮಾಡಿ ನಮಗೆ ಕಾಡುತ್ತದೆ. ಇದುವೆ ಇಷ್ಟಾ ನಿಷ್ಟವಾಗಿ ಸುಖ ದುಃಖವ ಕೊಡುತ್ತದೆ.

ತಾನಿದಿರೆಂಬುದು ಮಾಯೆ ತೋರಿತ್ತಾಗಿ ತಾನಲ್ಲ, ಈ ತೋರುವುದು ಉಳುಮೆ ಜ್ಞಾನಾನಂದ ತಾನೆಂಬುದನಾರು ಅರಿಯರಲ್ಲ. ನೋಡಲೇನೂ ಇಲ್ಲವಾಗಿ ನಿಜ ಸಿದ್ಧ ನೀನೆ ಚಿಮ್ಮಲಿಗೆಯ ಚೆನ್ನರಾಮಾ. ಆವಲ್ಲಿ ತಾನೆಂಬ ಅಹಂಕಾರವಿದೆ ಅಲ್ಲಿಯೆ ಇದಿರೆಂಬ ಮಾಯೆ ಇದೆ. ಆವಲ್ಲಿ ಇದಿರೆಂಬ ಮಾಯೆ ಇದೆ ಅಲ್ಲಿಯೆ ತಾನೆಂಬ ಅಹಂಕಾರವಿದೆ. ಎಲ್ಲಿಯವರೆಗೆ ಇವೆರಡು ಸತ್ಯವಾಗಿ ತೋರುತ್ತವೆ. ಅಲ್ಲಿ ಅಲ್ಪ ಸುಖವೂ ಇದೆ. ಮಹಾನ್ ದುಃಖವೂ ಇದೆ. ಈ ನಾನೆಂಬ ತೋರಿಕೆ ಬಹು ಸೂಕ್ಷ್ಮವಾಗಿದೆ ಇದಂ ರೂಪವು ಬಹು ಸೂಕ್ಷ್ಮವಾಗಿದೆ. ಪ್ರವೃತ್ತಿ ನಿವೃತ್ತಿ ಇವೆರಡು ಅದರ ಮುಖಗಳು, ನಾಹಂ, ಕೋಹಂ, ಸೋಹಂ, ಚಿದಹಂ ಈ ನಾಲ್ಕರಲ್ಲಿ ನಾನೆಂಬುದು ಬಹು ಸೂಕ್ಷ್ಮವಾಗಿದೆ. ಇದಕ್ಕೆ ಪ್ರತಿಯಾಗಿ ಇದರಲ್ಲಿ ಇದಂ ರೂಪವು ಹುದುಗಿದೆ.

ಕುರುಹು ಮಾಯೆ, ಶಬ್ದವು ಮಾಯೆ, ಮಾಯೆ ಎಂಬುದು ಮಾಯೆ, ಏಕೆಂದರೆ ಮಾಯೆ ಇದ್ದಲ್ಲಿ, ಇವೆರಡು ಇವೆ. ಕುರುಹು ಇದೆ. ಶಬ್ದ ಇದೆ. ಎಲ್ಲಿ ಗುರುವೆಂಬ ಶಬ್ದವಿದೆ. ಅಲ್ಲಿ ಕುರುಹು ಇದೆ. ಕುರುಹು ಇದ್ದಲ್ಲಿ ಶಬ್ದವು ಇದೆ ಎಂದಲ್ಲಿ ಮಾಯೆ ಸಿದ್ಧಿಸುವುದು. ಇದು ನಿರಸನವಾಗಬೇಕಾದರೆ ತಿರುವು ಮುರುವು ಆಗಬೇಕು. ತೋರುವುದು, ತೋರದಡಗದ ಘನವಾಗಬೇಕು. ಈ ಘನದಿರುವಿನ ದೃಷ್ಟಿ, ದಿವ್ಯ ದೃಷ್ಟಿ, ತೋರಬಾರದ ಘನ ಹೇಳಲೆಂದೇನೊ ? ಹೇಳಬಾರದ ಘನ ತೋರಲೆಂದೇನೊ ? ಎಂಬ ನುಡಿಗೆಡೆಗೊಡದ ಘನದಿರುವು ಪ್ರಜ್ವಲಿಸಿದಾಗ ತಾನಿದಿರೆಂಬುದು ಸಹಜ ನಷ್ಟವಾಗುವುದು. ಇದನ್ನು ಕಂಡೆ ಪ್ರಭುದೇವ, ಪ್ರಭುದೇವ ಅದೇನೆಂದರಿಯರು, ಅದೆಂತೆಂದರಿಯರು ನೋಡಾ ಎಂದು ಮಾಯೆ ಅದೇನು ಎಂದು ತಿಳಿಯದಾಗಿದೆ. ಅದು ಹೇಗೆಂದರಿಯರು, ಇದರ ವಿಷಯದಲ್ಲಿ ತಿಳಿಯದೆ ಹಿರಿಯರೆಲ್ಲ ವ್ಯರ್ಥ ಸತ್ತು ಹೋದರು.

ಹಿರಿಯರೆಂದರೆ ಯಾರು ? ಹಿರಿದು ಕಿರಿದು ಎಂಬ ಶಬ್ದವಡಗಿದವರು ಹಿರಿಯರು, ಇಂತಪ್ಪ ಹಿರಿಯರಾಗದೆ ಹಿರಿಯರೆನಿಸಿಕೊಂಡವರು ಇವರು ವೃಥಾ ಕೆಟ್ಟು ಹೋದರು ನೋಡಾ, ನಾನು ಪರಬ್ರಹ್ಮನೆಂಬ ಅರುಹಿಯರು. ಇವರು ತಮ್ಮ ಮೂಲವ ತಿಳಿಯದವರು, ಚಿದಹಂಭಾವಿಗಳು.ಇವರು ಭಾವಕ್ಕಗಮ್ಯವಾದ ಘನವ ನೋಡದವರು. ಇದು ಕಾರಣ ವೃಥಾ ಕೆಟ್ಟು ಹೋದರು ಎಂದು ಹೇಳಿಹರು.

ಕಣ್ಣ ಮುಂದಣ ಕಪ್ಪ ಕಳೆಯಲರಿಯರು ನೋಡಾ : ಹಿರಿಯರಾದವರಿಗೆ ಕಣ್ಣಿನ ಜ್ಞಾನ ಪ್ರಥಮ ಆಗಬೇಕು. ಆಗ ಅದರ ಮುಂದಣ ಕಪ್ಪ ಕಳೆಯಲು ಸಹಜ ಸಾಧ್ಯವಾಗುವುದು. ಬಹು ಹಿರಿಯರಿಗೆ ಕಣ್ಣು ತಿಳಿದಿಲ್ಲ, ಅದರ ಮುಂದಣ ಕಪ್ಪು ತಿಳಿದಿಲ್ಲವೆಂದಲ್ಲಿ ಅವರಿಗೆ ಕಣ್ಣ ಮುಂದಣ ಕಪ್ಪು ಕಳೆಯಲು ಹೇಗೆ ಸಾಧ್ಯ. ಕಣ್ಣು ! ಕಾಣಿಸಿಕೊಳ್ಳುವುದು ಕಣ್ಣು ಆಗುವುದಿಲ್ಲ, ಕಾಣಿಸಿಕೊಳ್ಳುವುದಕ್ಕೆ ಆವುದು ಬೇರಾಗಿರುವುದು ಅದು ಕಣ್ಣು ಎಂದು ಹೇಳಿಸಿಕೊಳ್ಳುವುದು. ಕಣ್ಣು ಅದು ಕಣ್ಣಿನಲ್ಲಿಲ್ಲ, ಕಣ್ಣೆಂದರೆ ತಾನು, ತನಗೆ ಶಾಸ್ತ್ರವು ದೃಕ್ ಎಂದು ದೇಹಿ ಎಂದು, ಅರುವು ಪರಬ್ರಹ್ಮ ಆತ್ಮ ಸಚ್ಚಿದಾನಂದ ಲಿಂಗವೆಂದೆನ್ನುವನು. ಇದರ ಮುಂದಣ ಕಪ್ಪು ಅಂದರೆ ತನ್ನಿಂದ ತಿಳಿಸಿಕೊಳ್ಳುವದೆಲ್ಲವು ಕಪ್ಪಾಗಿದೆ. ಅದು ಅಹಂ ಇದಂ ಆಗಿ ತೋರುವುದು ; ತಾನು ಇದಿರು ಎಂಬುದು ಕಣ್ಣಿನ ಮುಂದಣ ಕಪ್ಪು ಇದನ್ನು ಹಿರಿಯರಾದವರು ಕಳೆಯಲರಿಯರು ಎಂದು ಹೇಳಿಹರು.

ಕಣ್ಣ ಮುಂದಣ ಕಪ್ಪ ಕಳೆದು ತಿಳಿದ ಸಮರ್ಥರೆಂದರೆ ಕಣ್ಣು ಯತಾರ್ಥ ತಿಳಿದವರು. ಏಕೆಂದರೆ ಕಣ್ಣು ಸದಾ ನಿಷ್ಕಳಂಕವಾಗಿದೆ. ಅದಕ್ಕಾವು ಅಂಟಿರುವುದಿಲ್ಲ, ಅಂಟಿಸಿಕೊಳ್ಳದೆ ನಿಸ್ಸಂಗವಾಗಿಹ ಕಣ್ಣಿಗೆ ಅದರ ಮುಂದಣ ಕಪ್ಪ ಅಂಟಿಸಿ ನೋಡುವುದೆ ಭ್ರಮೆಯಾಗಿದೆ. ಕಣ್ಣಿಗೆ ಪರಿ ಬಂದಿವೆ ಅನ್ನುತ್ತಾರೆ. ಕಣ್ಣು ಪ್ರಕಾಶಮಯ; ಅದು ಇದ್ದಂತೆ ಇದೆ. ಅದರ ಮುಂದಣ ಪರಿ ಆಪರೇಷನ್ ಮಾಡಿ ತೆಗೆವರಲ್ಲದೆ, ಕಣ್ಣನ್ನು ಏನೂ ಮಾಡುವುದಿಲ್ಲ, ಹಾಗೆ ಕಣ್ಣೆಂಬ ತಾನು, ತನ್ನಿಂದ ತಿಳಿಸಿಕೊಳ್ಳುವ ನಾಹಂ, ಕೋಹಂ, ಸೋಹಂ, ಚಿದಹಂ, ದಾಸೋಹಂ ಇವಾವು ಆಗಿಲ್ಲ, ತನ್ನಿರುವಿನ ಅರುವು ಆದುದು. ಅದು ಯತಾರ್ಥತಿಳುವಳಿಕೆಯು, ಅದು ಕಣ್ಣಿನ ಮುಂದಣ ಕಪ್ಪ ಕಳೆದವರು. ಈ ಯತಾರ್ಥಜ್ಞಾನವಾಗದವರು ಕಣ್ಣಮುಂದಣ ಕಪ್ಪ ಕಳೆಯಲರಿಯರು ಎಂದು ಹೇಳಿಹರು.

ಗುಹೇಶ್ವರನೆಂಬ ಶಬ್ದಕ್ಕೆ ನಾಚರು ನೋಡಾ :ಹಿರಿಯರಾದವರು ಗುಹೇಶ್ವರನೆನ್ನಲು ಆರಿಗೆ ನಾಚಿಕೆ ಉಂಟಾಗಿದೆ ಅವರು ಹಿರಿಯರು. ಗುಹೇಶ್ವರನ ಅರಿತವರು. ಗುಹೇಶ್ವರನೆ ತಾವಾದವರು. ಕಣ್ಣೆಂಬುದು ಅದು ಕಣ್ಣೆಂದು ನುಡಿದು ಹೇಳಿಲ್ಲ, ಹಾಗೆ ಗುಹೇಶ್ವರನೆಂಬುದು ಗುಹೇಶ್ವರನೆಂದು ನುಡಿದುದಿಲ್ಲ, ಅದು ವಾಙ್ಮನಕ್ಕಗೋಚರ, ಶೃತಿಗಗೋಚರ, ನುಡಿಗೆಡೆಗೊಡದ ಘನವ ನುಡಿಗೆ ಒಳಪಡಿಸುವರೆಂದಲ್ಲಿ ಗುಹೇಶ್ವರನ ಅರಿತಿವರೆ ? ಅರಿಯದವರು; ಅವರು ಹಿರಿಯರು ಹೇಗಾಗುವರು. ಹಿರಿತನದ ಘನತ್ವವರಿಯದೆ ಹಿರಿಯರಂತೆ ನಟಿಸುವವರು ಅದಕ್ಕಾಗಿ ಗುಹೇಶ್ವರನ ಶಬ್ದಕ್ಕೆ ನಾಚರು ನೋಡಾ ಎಂದು ಹೇಳಿಹರು. ಇವರು ಅಮರತ್ವದ ಹೊಲಬನರಿಯದವರು.

**129**

**ಅಮರದ ಹೊಲಬನರಿಯದೆ ಜಗ ಬರುಡಾಯಿತ್ತು.**
**ಅಂಗದ ಹೊಲಬನರಿಯದೆ ಯೋಗ ಭಂಗವಾಯಿತು.**
**ಸಂಗದ ಹೊಲಬನರಿಯದೆ ಶರಣರು ಭಂಗಿತರಾದರು.**
**ಲಿಂಗದ ಹೊಲಬನರಿಯದೆ ಭಕ್ತ ಶೀಲವಂತನಾದ.**
**ಆದಿ ಮಧ್ಯಾವಸಾನದಲ್ಲಿ ಗುಹೇಶ್ವರನೆಂಬ ಲಿಂಗವು,**
**ಅರಿವಿನ ಮರೆಯಲ್ಲಿಹುದನಾರೂ ಅರಿಯರಲ್ಲಾ !** ॥ 516 ॥

**ತಾತ್ಪರ್ಯ** : ಅಮರದ ಹೊಲಬನರಿಯದೆ ಜಗವೆಲ್ಲ ಬರುಡಾಯಿತ್ತು : ಅಮರದ ಮಾರ್ಗವರಿತವರು, ಅಮರರಾದವರು, ಅವರಿಗೆ ಸಾವಿಲ್ಲ, ಸಾವನರಿಯದವರು, ಸಾವು ತಾವಾಗದವರು. ಲಿಂಗದಲ್ಲಿ ಉದಯವಾದ ಲಿಂಗೈಕ್ಯರು ಅಮರದ ಮಾರ್ಗ ತಿಳಿದವರು. ವಿಜ್ಞಾನ ಯುಗದಲ್ಲಿ ಅಮರ ಮಾರ್ಗ ಆರಿಗೂ ಬೇಕಾಗಿರುವುದಿಲ್ಲ, ಬೇಕಾಗಿಲ್ಲವೆಂಬೆನೆ ? ಸಕಲರು ಅಮರತ್ವಕ್ಕೆ ಒಪ್ಪುವರು. ಸಾವು ಆರಿಗೂ ಬೇಕಾಗಿಲ್ಲ, ಅಮರದ ಹೊಲಬು ತಿಳಿಯಲು ಸಿದ್ಧರಿಲ್ಲ, ಸಿದ್ಧರಿಲ್ಲವೆಂಬೆನೆ ? ಸಿದ್ಧರಾದ ಹೆಸರುಳ್ಳ ಆಶ್ರಮಂಗಳು ಮಠಗಳು ಇವೆ. ಇದ್ದರೂ ಅಮರತ್ವದ ಹೊಲಬ

ತಿಳಿಸಿ ಅಮರರನ್ನು ಮಾಡಿದವರು ಸ್ವಲ್ಪ ಮಹಾಂತರು. ಅಮರವೆಂಬುದು ತಾನಾರೆಂದರಿಯಲು ತಾನೆ ನುಡಿಗೆಡೆಗೊಡದ ಘನ, ನಿಃಶಬ್ದವೇದಿ. ಅರುವ ಅರಿಯ ಹೋದವರು, ದೇಹಿಗೆ ದೇಹಿಯಾಗಿಹ ಘನವ ಬಲ್ಲವರು ಅಮರದ ವರ್ಮವನರಿತ ಮಹಾಂತರು ಶರಣ ಶರಣೆಯರು. ಪ್ರಥಮ ವೇದಿಗಳೆಲ್ಲರು ಗತಿಯಲ್ಲಿ ಸಿಲುಕಿದವರು. ಅತೀತ ಅನಾಗತರೆಂಬುವರೆಲ್ಲರು ಮತಿಯಲ್ಲಿ ಸಿಲುಕಿದವರು, ಶೃತಿವಂತರೆಲ್ಲರೂ ಆಗಮದಲ್ಲಿ ಸಿಲುಕಿದವರು. ಇಂಥಹನೊ ಲಿಂಗೈಕ್ಯನು, ನುಡಿದುದು ನುಡಿಯ; ನಡೆದುದು ನಡೆಯ; ಬಂದಲ್ಲಿ ಬಾರನು, ನಿಂದಲ್ಲಿ ನಿಲ್ಲನು, ನಿಸ್ಸೀಮ ಕೂಡಲ ಚೆನ್ನಸಂಗಾ ಲಿಂಗೈಕ್ಯನು.

ಪ್ರಥಮ ಭಾಗವಾಗಿಹ ಕರ್ಮಕಾಂಡಗಳು ಗತಿಯಲ್ಲಿ ಸಿಲುಕಿದವರು. ಅಮರದ ಹೊಲಬನರಿತವರೆ ? ಕರ್ಮ ಮಾಡುವುದಕ್ಕೆ ಒಪ್ಪದವರು. ಕರ್ಮವು ಶುಭಾಶುಭದಿಂದುಕ್ತವು. ಅದು ಕರ್ಮದಂತೆ ಫಲವು ಪದವು. ಆದುದರಿಂದ ಗತಿಯಲ್ಲಿ ಸಿಲುಕಿದವರು ಎಂದು ಹೇಳಿಹರು.

ಅತೀತವೆಂಬುದು ವೇದಾತೀತ, ಭಾವತೀತ, ಗುಣಾತೀತ ಅವಸ್ಥಾತೀತ. ಅತೀತ , ಅತೀತವೆಂಬುವ ಭವಿಷ್ಯದವರು ಇವರು ಮತಿಯಲ್ಲಿ ಸಿಲುಕಿದವರು. ಅಂದಾಗ ಇವರಾದರೂ ಅಮರತ್ವದ ಹೊಲಬನರಿಯದವರು. ಶೃತಿವಂತರೆಲ್ಲರೂ ಆಗಮದಲ್ಲಿ ಸಿಲುಕಿ ದವರು. ಇವರಾದರೂ ಅಮರತ್ವ ಹೊಲಬವರಿತವರೆ ? ಅಲ್ಲ, ಆಗಮವೆಂಬುದು ಜ್ಞಾನ ಕ್ರಿಯದ ತೊಡಕಿನಲ್ಲಿದ್ದುದು. ಅದು ಹೇಗೆ ಅಮರವಾಗುವುದು? ಅಮರದ ಹೊಲಬನರಿ ತವರು, ನುಡಿದ ನುಡಿಯಾಗರು, ನಡೆದ ನಡೆಯಾಗರು, ಬಂದಲ್ಲಿ ಬಾರನು, ನಿರವಧಿಯು, ನಿರಂತರವಾಗಿಹ ಮಂಗಲಮಯ ತತ್ವದಿರುವೆ ತನ್ನದಾಗಿಹ ಸ್ವಮಹಿಮನು. ಏಕೆಂದರೆ ತನ್ನಿಂದ ತನ್ನ ಅರಿದ ಅರುವಿಂಗರುವು, ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲ ನೋಡಾ. ಅರಿದ ಬಳಿಕ ಬ್ರಹ್ಮವೆಂಬುದು ವಂಧ್ಯಾಪುತ್ರ ನೋಡಾ, ಅರಿದ ಬಳಿಕ ಬ್ರಹ್ಮವೆಂ ಬುದು ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧ ನೋಡಾ. ಸಿದ್ಧರಾಮ ಶಿವಯೋಗಿ ಅಮರದ ಹೊಲಬನರಿದಾತ. ತನ್ನನರಿದಾತ. ತನ್ನ ಅರಿದುದರಿಂದ ಬ್ರಹ್ಮವೆಂಬುದು ಮೃಗಜಲ ವಾಯಿತ್ತು. ಬ್ರಹ್ಮವೆಂಬುದು ವಂಧ್ಯಾಪುತ್ರವಾಯಿತ್ತು.ಅಂದರೆ ಬ್ರಹ್ಮವೆಂಬುದು ದಿಟವಾ ಯಿತೆ ? ಮೃಗಜಲ ವಂಧ್ಯಾಪುತ್ರ ದಿಟನೆ ? ಆವುದು ದಿಟವಾಗಿಲ್ಲ, ಅದು ಅಮರದ ಹೊಲಬನರಿತ ಲಕ್ಷಣವಲ್ಲ, ಇದು ಕಾರಣ ಅಮರದ ಹೊಲಬನರಿಯದೆ ಜಗವೆಲ್ಲ ಬರುಡಾಯಿತ್ತು ಎಂದು ಹೇಳಿಹರು.

ಅಮರವೆಂದರೆ ನುಡಿಗೆಡೆಗೊಡದ ಘನವು ಈ ಮಹಾಘನದ ರಹಸ್ಯವನರಿಯದೆ ಜಗವೆಲ್ಲ ಬರುಡಾಯಿತ್ತು. ನುಡಿಯಿಂದುಕ್ತವಾದುದೆಲ್ಲವು ಅದು ಮೃಗಜಲ, ವಂಧ್ಯಾಪುತ್ರ. ಅದು ಮಹಾ ವಿಚಾರವಿರಲಿ, ವೇದ ವೇದಾಂತವಿರಲಿ, ಶೃತಿಪ್ರಮಾಣಂಗಳೆ ಇರಲಿ, ಮಹಾ ವಾಕ್ಯಂಗಳೆ ಇರಲಿ, ಅದು ಅಮರವಾಗದು. ನಿರವಯ ಸ್ಥಲದಲ್ಲಿ ನಿಂದ ಅಭೇದ್ಯನ ಅರುವಿನ ವಚನವುಳ್ಳವಂಗೆ ಅಂಗದ ಹಂಗೇಕೆ ? ಅರುವುಳ್ಳವಂಗೆ ಗುರುವಿನ ಹಂಗೇಕೆ ? ಅರುವುಳ್ಳವಂಗೆ ಲಿಂಗದ ಹಂಗೇಕೆ ? ಅರುವುಳ್ಳವಂಗೆ ಜಂಗಮದ ಹಂಗೇಕೆ ? ಅರುವುಳ್ಳವಂಗೆ ಪಾದೋದಕ ಪ್ರಸಾದದ ಹಂಗೇಕೆ ? ಅರುವುಳ್ಳವಂಗೆ ಅಮುಗೇಶ್ವರ

ಲಿಂಗವನರಿದೆನೆಂಬ ಸಂದೇಹವೇಕೆ ?

ಅಮರದ ಹೊಲಬನರಿತವರೆಂದರೆ ನಿರವಯ ಸ್ಥಲದಲ್ಲಿ ನಿಂದ ಅಭೇದ್ಯ ಅರುವಿನ ವಚನವುಳ್ಳವರು. ತನ್ನ ನುಡಿಯ ತಾನಾಗದವನು, ತನ್ನ ನಡೆಯ ತಾನಾಗದವನು ಗುರುವಿನ ಹಂಗಿಗನಲ್ಲ, ಲಿಂಗದ ಹಂಗಿಗನಲ್ಲ, ಜಂಗಮದ ಹಂಗಿಗನಲ್ಲ, ಪಾದೋದಕ ಪ್ರಸಾದದ ಹಂಗಿಗನಲ್ಲ, ಅಮುಗೇಶ್ವರ ಲಿಂಗವ ಅರಿದೆನೆಂಬುದು ಇಲ್ಲದವನು. ಇಂತಪ್ಪ ಮಹಾಂತ ಬಚ್ಚಬರಿಯ ನಿರಾಳನೆ ಅಮರದ ಹೊಲಬನರಿತವರು. ಉಳಿದವರು ಶಬ್ದಸೂತಕಿಗಳು, ಅಮರರಾಗಲಾರರು.

ಅಂಗದ ಹೊಲಬನರಿಯದೆ ಯೋಗಿಗಳೆಲ್ಲ ಭಂಗಿತರಾದರು:

ಅಂಗದ ಹೊಲಬನರಿಯದ ಯೋಗಿಗಳು, ತ್ಯಾಗಿಗಳು ಅಹುದು. ಯೋಗಿಗಳು ಅಹುದು,ನಿಜವಾದ ತ್ಯಾಗಿಗಳಲ್ಲ ನಿಜವಾದ ಯೋಗಿಗಳಲ್ಲ, ಇದು ಕಾರಣ ಭಂಗಿತರಾದರು ಎಂದು ಹೇಳಿಹರು. ನಿಜವಾದ ತ್ಯಾಗಿಗಳೆಂದರೆ ನಿರವಯ ಸ್ಥಲದಲ್ಲಿ ನಿಂದ ಅಭೇದ್ಯ ಅರುವುಳ್ಳವರು. ಈ ಮಹಾಂತನ ದಿವ್ಯ ದೃಷ್ಟಿಗೆ ಕಲ್ಪಿತ ಅಂಗವೆ ನಷ್ಟವಾಗಿ ನಿರುಪಮ ಅಂಗವುಳ್ಳವನು, ನಿಸ್ಸೀಮ ಅಂಗವುಳ್ಳವನು, ಅಂಗದ ಅಂಗವಾಗಿಹ ಘನಾಂಗಿಯೂ ಇಂತಪ್ಪ ಮಹಾಂತನು ಹಿಡಿದುದಿಲ್ಲ, ಬಿಟ್ಟುದಿಲ್ಲ, ಕೂಡಿದುದಿಲ್ಲ, ಅಗಲಿದುದಿಲ್ಲ, ಅರಿತೆ, ಅರಿಯೆನೆಂಬ ಗಜಿಬಿಜಿ ಮುನ್ನವೆ ಇಲ್ಲ, ಈ ಪರತತ್ವದ ಪರಿಣಾಮಿಯಾಗಿಹ ಮಹದರುವುಳ್ಳವಂಗೆ ಅದೇತರ ತ್ಯಾಗಾಂಗ, ಅದೇತರ ಭೋಗಾಂಗ, ಅದೇತರ ಯೋಗಾಂಗ, ಈ ತ್ರಿವಿಧ ಕೆಟ್ಟ ಅಜಾತಂಗೆ ಅದೇತರ ಅಂಗ, ಅದೇತರ ಲಿಂಗ, ಸಕಲದರ ಹಂಗು ಹರಿದವನೆ ಅಂಗದ ಹೊಲಬನರಿತವರು. ಉಳಿದವರಿಗೆ ತ್ಯಾಗವೆ ಘನ, ಯೋಗವೆ ಘನ, ತಾನು ಮಾಡುವ ಕ್ರಿಯಾಕರ್ಮಂಗಳೆ ಘನವಾದವರಿಗೆ ಅಂಗದ ಹೊಲಬನರಿಯದ್ದರಿಂದ ಯೋಗಿಗಳೆಲ್ಲ ಭಂಗಿತರಾದರು ಎಂದು ಹೇಳಿಹರು.

ಸಂಗದ ಹೊಲಬನರಿಯದೆ ಶರಣರು ಭಂಗಿತರಾದರು: ಸಂಗದ ಹೊಲಬನ ರಿತವರೆಂದರೆ ಶರಣರು, ಶರಣೆಯರು. ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ ಎನ್ನ ಮಾತಿನ ಪ್ರಸಂಗ ನುಡಿಯಲೊಲ್ಲ ಬಸವಯ್ಯನು. ಮಾತಿನ ಹಂಗ ಹರಿದು, ಆ ಪ್ರಸಂಗದ ಸಂಗವ ಕೆಡಿಸಿ ಪರವಶವಾಗಿ ನಿಲ್ಲಲು ಬಸವಯ್ಯನು ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನು. ಸಂಗಯ್ಯನ ಮಾರ್ಗವರಿತವರೆಂದೆ ಬಸವಯ್ಯ, ನೀಲಾಂಬಿಕೆ ತಾಯಿ. ಸಂಗಯ್ಯ ? ಆರಾರ ಸಂಗ ಮಾಡಿದ ಸಂಗಯ್ಯ ಈ ಸಂಗ, ಘನವಾಗಿಹ ಸಂಗ, ಕೂಡದಗಲದ ಸಂಗ, ಆವಾವುದಕ್ಕೂ ಅವಕಾಶಕೊಡದ ಸಂಗ, ನಾಹಂ ಕೋಹಂ ಸೋಹಂ ಚಿದಹಂ ದಾಸೋಹಂ ಇವಾವುದಕ್ಕೂ ಅವಕಾಶಕೊಡದ ಘನವಾದುದರಿಂದ ಮಾತಿಲ್ಲದವನ ಕೂಡೆ ಮಾತನಾಡ ಹೋದಡೆ ಎನ್ನ ಮಾತಿನ ಪ್ರಸಂಗವ ನುಡಿಯಲೊಲ್ಲ ಬಸವಯ್ಯನು. ಮಾತಿನ ಹಂಗಹರಿದು, ಆ ಪ್ರಸಂಗದ ಸಂಗವ ಕೆಡಿಸಿ ಸಂಗನೆಂದರೆ ಮಾತಿಲ್ಲದವನು, ಸಂಗನು ಒಳಹೊರಗೆನ್ನದೆ ಭರಿತವಾಗಿಹ ಸಂಗ, ಶಬ್ದಮುಗ್ಧ ಸಂಗ, ಅವರ್ಣನೀಯ ಸಂಗ, ಆವುದರೋಳ ಕೂಡದ ಸಂಗ, ತನ್ನಿಂದ ಅಗಲದ ಸಂಗ, ಅರಿಯ ಹೋದಡೆ ಅವರ್ಣನೀಯವು. ಇಲ್ಲಿ ಕಲ್ಪಿತನ ಮರವು ಅರುವು ಕೆಟ್ಟುದು. ಅರಿಯದರುವು ಪ್ರಜ್ವಲಿಸಿದುದು, ಮಾತಿನ ಹಂಗಹರಿದ ಸಂಕೇತ. ಈ ಪ್ರಸಂಗದ ಸಂಗವ ಕೆಡಿಸಿ

ಪರವಶವಾಗಿ ನಿಂತ ಸಂಕೇತ. ಆಗ ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಬಸವಯ್ಯನು. ಸಂಗಯ್ಯನಲ್ಲಿ ಹೆಸರಿಲ್ಲದ ವೃಕ್ಷವನರಿದ ಸಂಕೇತವಿದು.

ಅಂಡಜವಳಿದ ಬಸವ, ಪಿಂಡಜವಳಿದ ಬಸವ, ಆಕಾರವಳಿದ ಬಸವ, ನಿರಾಕಾರವಳಿದ ಬಸವ, ಸಂಗವಳಿದ ಬಸವ, ನಿಸ್ಸಂಗವಳಿದ ಬಸವ, ಸಂಗಯ್ಯನಲ್ಲಿ ಸ್ವಯಲಿಂಗಿಯಾದ ಬಸವ.

ಸಂಗದ ಹೊಲ ಬನರಿತ ಮಹಾಂತರೆಂದರೆ ಬಸವ ಮತ್ತು ನೀಲಾ, ಏಕೆಂದರೆ ಸಂಗಯ್ಯನಲ್ಲಿ ಸ್ವಯಲಿಂಗಿ ಯಾದವರು, ಸಂಗನೆ ತಾವಾದುದಲ್ಲದೆ ಅಂಡಜ, ಪಿಂಡಜ ಕಾಣದವರು, ಆಕಾರ ನಿರಾಕಾರ ಕಾಣದವರು. ಸಂಗ ನಿಸ್ಸಂಗ ಕಾಣದವರು, ಕಾಣದುದ ಕಂಡು ಸ್ವಯಲಿಂಗಿ ಯಾದವರು, ಇಂತಪ್ಪ ಸಂಗದ ಹೊಲಬನರಿಯದೆ ಶರಣರು ಭಂಗಿತರಾದರು ಎಂದು ಹೇಳಿಹರು.

ಲಿಂಗದ ಹೊಲಬನರಿಯದೆ ಭಕ್ತಶೀಲವಂತನಾದ : ಲಿಂಗದ ಹೊಲಬನರಿಯದು ದರಿಂದ ಭಕ್ತ ಶೀಲವಂತನಾದ. ಲಿಂಗ ಒಳಗಿದ್ದಾನೆಂಬೆನೆ ಹೊರಗೆಲ್ಲ ತಾನೆ ನೋಡಾ, ಹೊರಗಿದ್ದಾನೆಂಬೆನೆ ಒಳಹೊರಗೆ ಸರ್ವಾಂಗದಲ್ಲಿ ಸನ್ನಿಹಿತನಾಗಿರ್ದ. ಅಗಲಲಿಲ್ಲದ ಘನವನಗಲಿದೆನೆಂಬ ಮಾತು ಶಿವಶರಣರ ಮನಕ್ಕೆ ಬಹುದೆ ? ತೆರಹಿಲ್ಲದ ಘನವು ಕಲಿದೇವಯ್ಯನು ಕರಸ್ಥಲದೊಳಗೈದಾನೆ ಕಾಣಾ. ಲಿಂಗಯ್ಯನ ತಿಳಿಯದ ಶೀಲವಂತರು, ಇವರು ಹೊರಗಿದ್ದುದ ತಿಳಿಯಲಿಲ್ಲ, ಒಳಗಿದ್ದುದ ತಿಳಿಯಲಿಲ್ಲ, ಒಳಹೊರಗೆನ್ನದೆ ಸರ್ವಾಂಗದಲ್ಲಿದ್ದುದು ತಿಳಿಯಲಿಲ್ಲ, ತಿಳಿಯದ್ದರಿಂದ ಲಿಂಗವೆಂಬುದು ಅಗಲಲಿಲ್ಲದ ಘನ, ಇವರಿಗೆ ತಿಳಿಯಲಿಲ್ಲ, ಈ ಮಹಾಘನವ ತಿಳಿಯದ ಪ್ರಮಾದವೆ ಇವರು ಶೀಲ ವಂತರಾದುದು, ಅಗಲಲಿಲ್ಲದ ಘನ, ಇದು ಆರನ್ನೂ ಅಗಲಲಿಲ್ಲದ ಘನವು. ದೇವಗಣ, ರುದ್ರಗಣ, ಪ್ರಮಥಗಣ, ಇವರಿಂದಲೂ ಅಗಲಲಿಲ್ಲದ ಘನ, ನರರನ್ನು ಸುರಾಸುರರನ್ನು ಅಗಲಲಿಲ್ಲದ ಘನ, ಮನು, ಮುನಿಗಳನ್ನು ತಪಸ್ವಿ, ತ್ಯಾಗಿ, ಯೋಗಿ, ಭೋಗಿಗಳನ್ನು ಅಗಲಲಿಲ್ಲದ ಘನ, ಚರಾಚರ ಜಗತ್ತನ್ನು ಅಗಲಲಿಲ್ಲದ ಘನ, ಈ ಘನವು ಒಳಗಿದ್ದುದೆಂಬೆನೆ ? ಹೊರಗೆಲ್ಲ ತಾನೆ ಹೊರಗಿದ್ದುದೆಂದಲ್ಲಿ ಒಳಹೊರಗೆನ್ನದೆ ಸರ್ವಾಂಗದಲ್ಲಿದ್ದುದು ಘನ. ಈ ಮಹಾ ಘನವ ಆರಾದರೂ ಅಗಲಿರಬಹುದೆ ? ಇವರಿಗಾದರೂ ಅಗಲಿರಲು ಅವಕಾಶವುಂಟೆ, ಇದ್ದುದೆಲ್ಲವೂ ತೆರಹಿಲ್ಲದ ಘನವಾಗಿರಲು, ಇವರ ಶೀಲಕ್ಕೆ ಸಂದೆಲ್ಲಿ ? ನಿಷ್ಕಳಂಕಕ್ಕೆ ಅದಾವ ಶೀಲ, ಶುದ್ಧವನರಿಯದ ಕಾರಣ ಭಕ್ತ ಶೀಲವಂತನಾದನೆಂದು ಹೇಳಿಹರು.

ಆದಿ ಮಧ್ಯಾವಸಾನದಲ್ಲಿ ಗುಹೇಶ್ವರ ಲಿಂಗವು: ಅರುವಿನ ಮರೆಯಲ್ಲಿದ್ದುದನಾರು ಅರಿಯರಲ್ಲಾ, ಆದಿ ಮಧ್ಯಾವಸಾನದಲ್ಲಿದ್ದುದು ಆವುದು ? ಆವುದಕ್ಕೆ ಆರಂಭವೂ ಇಲ್ಲ, ಮಧ್ಯಸ್ಥಿಕೆಯು ಇಲ್ಲ, ಅವಸಾನವೂ ಇಲ್ಲ, ಅದು ಗುಹೇಶ್ವರ ಲಿಂಗ, ಅದು ಅನಂತವು. ಅದು ನಿರವಧಿಯು, ನಿರಾಳವು ಇದು ಚರಾಚರ ಜಗದಲ್ಲಿ ಮರೆಯಲ್ಲಿದ್ದುದು. ವೇದ ವೇದಾಂತದ ಮರೆಯಲ್ಲಿದ್ದುದು. ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ ಮರೆಯಲ್ಲಿದ್ದುದು. ನಾಹಂ,ಕೋಹಂ, ಸೋಹಂ, ಚಿದಹಂ, ದಾಸೋಹಂದ ಮರೆಯಲ್ಲಿ ದ್ದುದನಾರು ಅರಿಯರಲ್ಲಾ, ಗುಹೇಶ್ವರ ಲಿಂಗ. ಗುರುವಿನ ಅರುವು ಲಿಂಗದ ಅರುವು

ಜಂಗಮದ ಅರಿವು ಪ್ರಸಾದದ ಅರುವು ಸಕಲ ಕಲ್ಪಿತ ಅರುವಿನ ಮರೆಯಲ್ಲಿದ್ದುದನಾರು ಅರಿಯರಣ್ಣ.

**130**

**ಅರಿಯದಂತಿರಲೊಲ್ಲದೆ, ಅರಿದು ಕುರುಹಾದೆಯಲ್ಲಾ!**
**ಹಿರಿಯರೆಲ್ಲರು ನೆರೆದು ನಿಮ್ಮ ಕಟ್ಟಿದರೆ ಅಯ್ಯಾ,**
**ಉಪಚಾರಕ್ಕೋಸುಗರ!**
**ಸಾವಿಂಗೆ ಸಂಗಡವಾದೆಯಲ್ಲಾ-ಗುಹೇಶ್ವರಾ!** ॥ 517 ॥

**ತಾತ್ಪರ್ಯ** : ಪ್ರಭುದೇವ, ಲಿಂಗಯ್ಯನಿಗೆ ಸಂಬೋಧಿಸುತ್ತಿಹನು, ಓ ದೇವನೆ, ನಿನ್ನ ಘನವೆತ್ತ ನಿನ್ನ ಕಂಡವರಿಗೆ ಕುರುಹು ಆದೆಯಾ ? ಅಥವಾ ನಿನ್ನ ಕಾಣದವರಿಗೆ ಕುರುಹು ಆದೆಯಾ ? ಏನಿದು, ನಿನ್ನಯ ಲೀಲೆ, ಇದೆಂಥ ಹಿರಿಯರ ಸಮಾಜ ? ಹಿರಿಯರ ಕೂಟ ? ಹಿರಿಯರ ಜ್ಞಾನ ? ಓ ಲಿಂಗಯ್ಯ, ನಿನ್ನನ್ನು ಕುರುಹಾಗಿ ಕಾಣಿಸುವ ಅದಾವ ಸಾಹಿತ್ಯ, ಅದಾವ ವೇದ ? ಅದಾವ ಜ್ಞಾನ ? ತೆರಹಿಲ್ಲದ ಘನ ಕುರುಹುಳ್ಳುದು ಆಗಬಹುದೆ? ಇವರೆಂಥ ಲಿಂಗಾಂಗ ಸಮರಸಜ್ಞಾನಿಗಳು ಈ ಹಿರಿಯರು ಲಿಂಗ, ಅಂಗ, ಒಂದಾಗಿ ಕಂಡರೆ ? ಒಂದಾಗಿ ಕಂಡವರಿಗೆ ಅರ್ಪಿತವಿಲ್ಲ, ಅರ್ಚನೆಯಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲ.

ಒಂದಾಗಿಹ ಮಹದರುವು ಎತ್ತ ? ಪೂಜಕರ ಪೂಜೆ ಎತ್ತ ? ಪೂರ್ವಿಕರಿಗೆ ಅರ್ಪಿತವಿದೆ, ಅರ್ಚನೆ ಇದೆ, ಅವಧಾನವು ಇದೆ. ಶಬ್ದಕ್ಕೆ ಅವಕಾಶವಿದೆ ಅಂದಲ್ಲಿ ಇವರು ಅಂಗ ಲಿಂಗ ಒಂದಾದ ದೃಷ್ಟಿಯುಳ್ಳವರೆ ? ಮಹದರುವು ಹೋಗಿ ಕುರುಹಾಯಿತೆ ? ಅರಿಯದರುವು ಸಾಮಾನ್ಯವೆ ? ಅರಿಯದ್ದರಿಂದ ಅದು ಕುರುಹಾಯಿತೆ ? ಬಯಲು ಘಟ್ಟಿಗೊಂಡಿತೆ ? ಬಯಲು ಕುರುಹಾಯಿತೆ ? ಅದು ಪೂಜಿಸಿಕೊಂಬ ಮೂರ್ತಿಯಾಯಿತೆ ? ಇದೆಂಥ ಹಿರಿಯರ ಸಮೂಹ ಇವರು ಅರುವ ಅರಿಯ ಹೇಳಿದ ಶ್ರೀಗುರು ಕಾರುಣ್ಯ(ಲಿಂಗ)ವರಿತ ಹಿರಿಯರೆ ? ಇಂತಪ್ಪ ಹಿರಿಯರು ನೆರೆದು ನಿಮ್ಮನ್ನು ಕಟ್ಟಿದರೆ ? ಅರಿಯದಂತಿರಲೊಲ್ಲದೆ ಅರಿದು, ಓ ಲಿಂಗಯ್ಯ, ನೀನು ಹೀಗಿದ್ದು, ನಿನ್ನ ಅರಿಯದ ಕಾರಣ ಕುರುಹಾಗಿ ಕಂಡಿಹರು. ಅರಿದಲ್ಲಿ ಈ ಹಿರಿಯರ ಸಮೂಹ ಹಿರಿಯರ ಕೂಟ ಹೀಗೆ ಮಾಡುತ್ತಿದ್ದಿಲ್ಲ.

ಅರಿಯದೆ ಕುರುಹಿಡಿದನಲ್ಲದೆ ಅರಿದ ಬಳಿಕ ಇನ್ನೆಂತೊ ? ಬಿಟ್ಟಡೆ ಸಮಯ ವಿರೋಧ, ಬಿಡದಿದ್ದಡೆ ಜ್ಞಾನವಿರೋಧ. ಗುಹೇಶ್ವರ ಲಿಂಗ ಉಭಯದಳದ ಮೇಲೈದಾನೆಂಬುದು ಮರೆತರೆ ?

ಜ್ಞಾನಕ್ಕೂ ಅಜ್ಞಾನಕ್ಕೂ ನಿಲುಕದ ಲಿಂಗಯ್ಯ ಈ ಭಾವ ಭ್ರಮಿತರ ಕೈಯಲ್ಲಿ ಸಿಕ್ಕನೆ ? ರೂಪಾರಾಪನೆಂಬುದಕ್ಕೂ ನಿಲುಕದ ಲಿಂಗಯ್ಯ, ಕುರುಹುಳ್ಳವನಾದನೆ ? ಭಾವಕ್ಕಗಮ್ಯವಾಗಿಹ ಘನ, ನಾನೀನೆಂಬ ಭಾವಕ್ಕೊಳಪಟ್ಟನೆ ? ಅಕ್ಷರಾಕ್ಷರ ಮೀರಿದ ಘನ ಪೂಜಾಲಿಂಗವಾಯಿತೆ ? ಕೊನೆಗೆ ಉಪಚಾರದ ದೇವನಾದೆಯಾ ? ಇದಲ್ಲದೆ ಸಾವಿಂಗೆ

ಸಂಗಡವಾದೆಯಾ ? ಹುಚ್ಚರ ಕೈಯಲ್ಲಿ ಸಿಕ್ಕ ಬಳಿಕ ಅವರು ಮಾಡಿದಂತೆ ಮಾಡಿಸಿಕೊಳ್ಳುವುದು. ಇವರು ಸತ್ತು ಹೋದ ಸಂಗಡ ಕಳುಹಿಸಿದರೆ; ಅದರ ಹಿಂದೆ ಹೋದೆಯಾ ಅದರ ಸಂದಲ್ಲಿದ್ದೆಯಾ. ಇತ್ತ ಘನವಂತರ ಕರಕಮಲದಲ್ಲಿ ಘನಗಂಭೀರ ಮಹಾ ಘನವಾಗಿ ಅನುಪಮ ಘನವಾಗಿ ಅಖಂಡಿತ ಘನನಾಗಿ, ಶೃತಿಗಗೋಚರನೆಂದು ಹೊಗಳಿಸಿಕೊಂಡಿ. ಅಜ್ಞರ ಕೈಯಲ್ಲಿ ಸಿಕ್ಕು, ನಿಷ್ಕಳಂಕನಾದ ನಿನಗೆ ಮಜ್ಜನ ಮಾಡಿದರೆ ಮಾಡಿಸಿಕೊಂಡಿ. ಅವರ್ಣೀಯನಾಗಿದ್ದರೂ ವರ್ಣನೆ ಮಾಡಿದರೆ ಮಾಡಿಸಿಕೊಂಡಿ. ಶಬ್ದಮುಗ್ಧನಾಗಿದ್ದರೂ ಜಪಸ್ತೋತ್ರ ಮಾಡಿಸಿಕೊಂಡಿ. ಕೊನೆಗೆ ಶವ ಶರೀರ ಸಂಗಡವಿದ್ದುದು. ಓ ಲಿಂಗಯ್ಯ ಇದಾರ ಪ್ರತಿಫಲ. ಅಜ್ಞರ ಕೈಯಲ್ಲಿ ಸಿಕ್ಕು, ನಿನ್ನ ಬಾಳು ಹೀಗಾಯಿತೆ ? ಘನಲಿಂಗವಾಗಿ ಅವರ ಕರಕಮಲದಲ್ಲಿ ಬೆಳಗಿದರೂ ನಿನ್ನ ಬೆಳಗುಳ್ಳ ಘನವ ತಿಳಿಯದುದು ಇದಾರ ಪ್ರತಿಫಲವೆನಬೇಕು. ಓ ಲಿಂಗಯ್ಯ ನಿನ್ನ ಪೂಜಿಸಿದವರಿಗೆ, ಭವದ ಭೀತಿಯೆ ? ಇದು ನಿನ್ನ ಪೂಜಿಸಿದ ಪ್ರತಿಫಲವೆನಬೇಕು. ಇದಕ್ಕಾಗಿಯೆ ಹಿರಿಯರು ನೆರೆದು ನಿಮ್ಮನ್ನೇಕೆ ಕಟ್ಟಿದರು. ಕಟ್ಟಿದುದರಿಂದ ಪೂಜಾಲಿಂಗವಾಗಿ ಪೂಜಿಸಿಕೊಂಡು, ನಿನ್ನನ್ನು ಅರಿಯದಂತೆ ಮಾಡಿದೆಯಾ ? ಈ ಹಿರಿಯರ ಪೂಜೆ, ನಿನಗಷ್ಟು ಘನತರವಾಯಿತೆ ? ಇವರು ನಿನ್ನ ಕಂಡು ಹಿರಿಯರಾದವರಲ್ಲ, ನಿನ್ನ ಘನವ ಕೇಳಿ ಹಿರಿಯರಾದವರಲ್ಲ, ನಿನಗರ್ಪಿಸಿ ಅಂದರೆ ತನು, ಮನವರ್ಪಿಸಿ ಹಿರಿಯರಾದವರಲ್ಲ, ಅರ್ಚಿಸಿ ಹಿರಿಯರಾದವರಲ್ಲ, ಈ ಹಿರಿತನದಿಂದ ನಿನಗೇನಾಯಿತ್ತು, ಇವರಿಗೇನಾಯಿತ್ತು. ನೀನು ಅವರನ್ನು ನೋಡಲಿಲ್ಲ, ಅವರು ನಿನ್ನ ನೋಡಲಿಲ್ಲ, ನಿಮ್ಮಿಬ್ಬರ ಕೂಟ ಒಬ್ಬನಿಗೆ ಕಣ್ಣಿದ್ದು ಕಾಣದವನು ಒಬ್ಬನಿಗೆ ಕಣ್ಣು ಇಲ್ಲ ನಿನ್ನಂ ನೋಡಿ ಅವನು ಹಿಗ್ಗಲಿಲ್ಲ, ಇವನಂ ನೋಡಿ ನೀನು ಹಿಗ್ಗಲಿಲ್ಲ, ಸುಮ್ಮನೆ ಭಕ್ತ, ಸುಮ್ಮನೆ ಶರಣ, ಸುಮ್ಮನೆ ಲಿಂಗ, ಸುಮ್ಮನೆ ಸತಿ, ಸುಮ್ಮನೆ ಪತಿ, ಒಲ್ಲದ ಗಂಡ, ಒಲಿಸಿಕೊಳ್ಳದ ಸತಿ, ಇವರೀರ್ವರ ಸಮಾಗಮವೆಂದು ? ಗರ್ಭಧರಿಸುವದೆಂದು ? ಮಗು ಕಾಣುವದೆಂದು ? ಬಂಜಿ ಸಹವಾಸ ಮಾಡಿದಲ್ಲಿ ಸಂತಾನವೆ ? ಓ ಲಿಂಗಯ್ಯ, ನೀನು ಪುರುಷೋತ್ತಮನಾಗಿಯು, ನಿನ್ನ ಸತಿಯಳಿಗೆ ಸಂತಾನನಿಲ್ಲದುದು ಅದಾರ ದೋಷ. ಇದು ಕಾರಣ, ಪೂರ್ವಿಕರ ಕೈಯಲ್ಲಿ ಸಿಕ್ಕು, ಶವದ ಸಂಗದಲ್ಲಿರುವುದು ನಿನ್ನ ಗತಿಯಾಯಿತೆ ? ಭಾವ ಭ್ರಮಿತರಿಗೆ ಕುರುಹ ಕೆಡಿಸಿ ನಿಜದಿರುವುಳ್ಳ ಅರುವಾಗುವುದು ಅದೆಂತು ಸಾಧ್ಯ. ಸುಜ್ಞಾನಿಗೆ ಕುರುಹ ಕಾಣದು, ಅಜ್ಞಾನಿಗೆ ಲಿಂಗವ ಕಾಣದು, ಭಾವಭ್ರಮಿತರಿಗೆ ನಿರ್ಭಾವವು ತಲೆದೋರದು ನಿಜವು ನೆಲೆಗೊಳ್ಳದು.

**131**

**ಅಜ್ಞಾನಿಯಾದವಂಗೆ ಅರಿವು ತಾನೆಲ್ಲಿಯದೊ?**
**ಸುಜ್ಞಾನಿಯಾದವಂಗೆ ಮರುಹು ತಾನೆಲ್ಲಿಯದೊ?**
**ನಾನರಿದೆನೆಂಬಾತ ಇದಿರ ಕೇಳಲುಂಟೆ ?**
**ಭ್ರಾಂತಿನ ಭ್ರಮೆಯೊಳಗೆ ಬಳಲುತ್ತಿರಲು**
**ಮಾತಿನ ಮಾತಿನೊಳಗೆ ಅರಿವೆಂಬುದುಂಟೆ ?**
**ಸೂತಕ ಹಿಂಗದೆ ಸಂದೇಹವಳಿಯದೆ,**

ಮುಂದಣ ಸೂಕ್ಷ್ಮವ ಕಾಬ ಪರಿಯೆಂತೊ ?
ಜ್ಯೋತಿಯ ಬಸಿರೊಳಗೆ ಜನಿಸಿದ
ಕಾಂತಿಯುತ ಬೆಳಗು ಗುಹೇಶ್ವರಾ ನಿಮ್ಮ ಶರಣ! ॥ 518 ॥

**ತಾತ್ಪರ್ಯ** : ಅಜ್ಞಾನಿಯಾದವಂಗೆ ಅರಿವು ತಾನೆಲ್ಲಿಯದು ? : ಅಜ್ಞಾನಿ ಆರು, ಅರುವು ತಾನಿದ್ದು, ತನ್ನ ಅರಿಯದೆ ಜಡದೇಹ ತಾನೆನ್ನುವವನೆ ಅಜ್ಞಾನಿ. ಅರುವ ಅರಿಯದವನೆ ಅಜ್ಞಾನಿ ತನ್ನಿಂದ ತಿಳಿಸಿಕೊಳ್ಳುವ ಅನಾತ್ಮ ತಾನೆನ್ನುವವನೆ ಅಜ್ಞಾನಿ. ಸಮತೆ ಸಯವಾಗದವನೆ ಅಜ್ಞಾನಿ. ಅರುವು ಮರವುಳ್ಳವನಾದುದೆ ಅಜ್ಞಾನಿ. ಅನುಪಮನಾಗಿಹ ತನ್ನಂ ಮರೆತು ನಾಹಂ, ಕೋಹಂ, ಸೋಹಂ, ಚಿದಹಂ ಭಾವಿಯಾದವನೆ ಅಜ್ಞಾನಿ. ತಾನಿದ್ದು ತನ್ನಿಂದ ತನ್ನ ಅರಿಯದಿಹುದೆ ಅಜ್ಞಾನ. ದೇಹಿಗೆ ದೇಹಿ ತಾನಿದ್ದು, ಒಮ್ಮೆ ದೇಹವೆಂದು ಒಮ್ಮೆ ದೇಹಿ ಎಂದು ಒಮ್ಮೆ ಗುಣಮಣಿಯಾಗಿ ಒಮ್ಮೆ ಗುಣಾತೀತನೆಂದು, ಒಮ್ಮೆಸಂಗಿಯಾಗಿ ಒಮ್ಮೆ ನಿಸ್ಸಂಗಿಯೆಂದು ಹೀಗೆ ಪರಪ್ರಕಾಶಕ್ಕೆ ಒಪ್ಪಿಕೊಂಡವನು. ತನ್ನ ಸ್ವಯ ಮೇವ, ಸ್ವಪ್ರ ಕಾಶವ ಕಾಣಬಹುದೆ ? ಹೆತ್ತರಿವೆ ಆರಿಗೆ ನಿಜದಿರುವು ಆಗಿದೆ. ಅವರಿಗೆ ಅರುವಿಂಗರುವು ತಾನಾದುದು ಅಲ್ಲಿ ಇಂತಪ್ಪ ಪರಾತ್ಪರದರುವು ತನ್ನನ್ನು ಅರಿಯದಿಹ ಅಜ್ಞಾನಿಗೆ ಸಾಧ್ಯವೆ ? ಕಾಲಕ್ಕೆ ಕಾಲತ್ರಯಕ್ಕೊಳಪಟ್ಟಿಹೆನೆಂಬ ಅಜ್ಞಾನಿಗೆ ಕಾಲಾತೀತವಾಗಿಹ ತನ್ನಿರುವಿನ ಅರುವು ತಾನೆಲ್ಲಿಯದು ? ಜೀವತ್ರಯಕ್ಕೊಳಪಟ್ಟಿಹನೆಂದು, ವಿಶ್ವದಭಿಮಾನಿಯಾಗಿ ಸ್ವಪ್ನದಭಿಮಾನಿ ಯಾಗಿ ಪ್ರಾಜ್ಞದಭಿಮಾನಿಯಾಗಿಹ ಅಜ್ಞಾನಿಗೆ ಜೀವದ ಜೀವವಾಗಿಹ ನಿರವಧಿಯ ತನ್ನಿರುವಿನ ಅರುವು ತಾನೆಲ್ಲಿಯದು ? ಭಾವಭ್ರಮಿತನಾಗಿ ಭಾವಕ್ಕೊಳಪಟ್ಟ ಜೀವಿಯೆಂದು, ಅಂತರಾತ್ಮನೆಂದು, ಪರಮಾತ್ಮನೆಂದು, ಭಾವಿಸುವ ಅಜ್ಞಾನಿಗೆ ಭಾವಕ್ಕಗಮ್ಯನಾಗಿಹ ಘನದಿರುವಿನ ಅರುವು ತಾನೆಲ್ಲಿಯದು.

ಸುಜ್ಞಾನಿಯಾದವಂಗೆ ಮರಹು ತಾನೆಲ್ಲಿಯದು : ಸುಜ್ಞಾನಿ ಆರು ? ತನ್ನಿಂದ ತನ್ನನರಿದು ಅರಿಯದಂತಿದ್ದ ಅನುಪಮ. ಅರಿಯಲಿಲ್ಲದ ಅರುವೆ ತನ್ನಿರುವು ಆದ ಸ್ವಮಹಿಮ. ಗುರುವಿನ ಗುರು ಅರಿತ ಮಹದರವು ಈ ಮಹದರುವು ಲಿಂಗಕ್ಕೆ ಲಿಂಗವಾಗಿಹುದು. ಜಂಗಮದ ಜಂಗಮವಾಗಿಹುದು. ಸ್ವಯಂಜ್ಯೋತಿ ಗುರು, ಸ್ವಯಂಜ್ಯೋತಿ ಲಿಂಗ, ಸ್ವಯಂಜ್ಯೋತಿ ಜಂಗಮ, ಈ ಮೂರೊಂದಾದ ಮಹಾನುಭವಿ. ಈ ಮಹಾಂತ ನಾನೀನೆನ್ನದಿಹ ತೆರಹಿಲ್ಲದ ಘನ. ಇಂತಪ್ಪ ತೆರಹಿಲ್ಲದ ಘನದಿರುವಿನ ಅರುವೆ ತಾನಾಗಿಹ ಬಚ್ಚಬರಿಯ ಅರಿವು. ಇದು ಅರುವೆನ್ನದರುವುವಾದುದ ಉಪಮಿಸಲುಂಟೆ ? ಅರು ಹೃದಯವಾಗಿಹ ಮಹಾಂತನಲ್ಲಿ ಸೀಮಿತವಕಾಣಬಹುದೆ ? ಗುರು ಶಿಷ್ಯರ ಕಾಣದ ನಿಲುವು, ಭಕ್ತ ಜಂಗಮರ ಕಾಣದ ನಿಲುವು.

ಶಿಷ್ಯ ಮರವು ಕಂಡುದಿಲ್ಲ, ಗುರುವ ಅರುವ ಬೋಧಿಸಿದುದಿಲ್ಲ, ಭಕ್ತ ಪೂರ್ವಿಕನಾದುದಿಲ್ಲ, ಜಂಗಮ, ಅರ್ಪಿತ, ಅರ್ಚನೆ ಅವಧಾನ ಕಂಡುದಿಲ್ಲ, ಎರಡೊಂದಾದ ಅನುಪಮದಿರುವು ಅಲ್ಲಿ ಉಪಮಿಸಲುಂಟೆ ? ಶಿಷ್ಯನು ಮುನ್ನ ಮುನ್ನಲಾದ ಘನ, ತನ್ನಿಂದ ತಾನಾದುದು, ಇಲ್ಲಿ ಗುರುವಾಗಿ ಉಪದೇಶ ಮಾಡುದುದು ಎಲ್ಲಿ ? ಶಿಷ್ಯರಾಗಿ ಪೂಜಿಸಿದುದು ಎಲ್ಲಿ ? ಭಕ್ತನು, ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಹ

ಸ್ವಯಂಜ್ಯೋತಿ. ಇಲ್ಲಿ ಜಂಗಮನಾಗಿ ಭಕ್ತನಿಂದ ಪೂಜಿಸಿಕೊಂಡುದು ಎಲ್ಲಿ ? ಎರಡೊಂದಾದುದು ವರ್ಣಿಸಲುಂಟೆ ? ಶಿಷ್ಯ ಗುರು, ಅರುವಿಂಗರುವಾದುದು ವರ್ಣಿಸಲುಂಟೆ ? ಈತ ಗುರು, ಈತ ಶಿಷ್ಯನೆಂದು ಇದಿರ ಕೇಳಲುಂಟೆ ? ಭಕ್ತ ಜಂಗಮ, ಭಾವಕ್ಕಗಮ್ಯವಾಗಿಹ ಘನ, ಅಲ್ಲಿ ಈತ ಭಕ್ತ, ಈತ ಜಂಗಮನೆಂದು ಭಾವಿಸಲುಂಟೆ ? ಭಾವಿಕ ಭಕ್ತ ಭಾವಕ್ಕಗಮ್ಯ ಜಂಗಮನೆಂದು ಇದಿರ ಕೇಳಲುಂಟೆ ? ಪರತತ್ವದ ನಿಜಸಂಯುಕ್ತನಾಗಿಹ ಶಬ್ದಮುಗ್ಧ ಸುಚೈತನ್ಯಕ್ಕೆ ನಿಜ ಚೈತನ್ಯನಾಗಿಹ ಸ್ವಯಾನುಭವಿ. ಇಂತಪ್ಪ ಸ್ವಯಾನುಭವಿಗೆ, ಮರಹು ತಾನೆಲ್ಲಿಯದು. ಈ ಮಹಾಂತ ಮೂರೊಂದಾದುದು ಚತುರ್ವಿಧ ಒಂದೊಂದಾದು. ಗುರು, ಲಿಂಗ, ಜಂಗಮ ಒಂದಾದುದು, ಗುರು ಶಿಷ್ಯ ಒಂದಾದುದು, ಭಕ್ತ ಜಂಗಮ ಒಂದಾದುದು, ನಿರವಧಿ ನಿಲುವುಳ್ಳ ಸುಜ್ಞಾನಿ ಶಿಷ್ಯನಂತುವನರಿದಾತ, ಗುರುವಿನಂತುವನರಿದಾತ, ಭಕ್ತನಂತುವನರಿದಾತ, ಜಂಗಮನಂತುವನರಿದಾತ, ಅರುವಿಂಗರುವಾಗಿಹ ಸುಜ್ಞಾನಿಗೆ ಮರಹು ತಾನೆಲ್ಲಿಯದು, ತನ್ನಿಂದ ತನ್ನನರಿದ ಮಹಿಮನೆ ಸುಜ್ಞಾನಿ. ಇಂತಪ್ಪ ಸುಜ್ಞಾನಿಯು ಸದ್‌ಜ್ಞಾನಭರಿತನು. ನುಡಿಗೆಡೆಗೊಡದ ಘನನು, ನಿಶಬ್ದವೇದಿಯು, ಆವಾವುದಕ್ಕೂ ಸಂದುಕೊಡದ ಪರಿಪೂರ್ಣನು, ದೇಹಿಗೆ ದೇಹಿಯಾದ ವರ್ಮವನರಿದಾತನಾದುದರಿಂದ ಅರುವಿಂಗರುವಾಗಿಹ ಸುಜ್ಞಾನಿಗೆ ಮರಹು ತಾನೆಲ್ಲಿಯದು.

ನಾನರಿದೆನೆಂಬಾತ ಇದಿರಕೇಳಲುಂಟೆ : ತನ್ನನರಿದೆನೆಂಬುವವನು ಇದಿರಕೇಳಲುಂಟೆ, ತನ್ನನರಿದುದು, ನಾನೀನೆಂಬುದಕ್ಕೆಡೆಗೊಡದ ಘನವೆ ತನ್ನಿರುವು ಆಗಿರುವುದು. ಅಲ್ಲಿ ನಾನೀನೆಂಬುದು ಇದಿರಕೇಳಲುಂಟೆ ? ನಾಹಂ ಎಂಬುದು ಇದಿರ ಕೇಳಲುಂಟೆ ? ಕೋಹಂ ಮರವು ಈ ಇದಿರ ಕೇಳಲುಂಟೆ ? ಸೋಹಂ ಎಂಬ ಎರಡೊಂದು ಮಾಡುವ ಮಂತ್ರ. ಈ ಇದಿರಕೇಳಲುಂಟೆ ? ಚಿದಹಂ ಎಂಬ ಅರುವಿನ ಅಹಂಕಾರ ಈ ಇದಿರ ಕೇಳಲುಂಟೆ ? ಎಲ್ಲವೂ ನೀನೆಂಬ ದಾಸೋಹಂ ಭಾವವು. ಈ ಇದಿರವ ಕೇಳಲುಂಟೆ ? ಆನು ನೀನೆಂಬುದಿಲ್ಲ, ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದಿಲ್ಲಾದುದೆಲ್ಲಿಪ್ಪುದು, ಇಲ್ಲಾದುದಿಲ್ಲಾದುದೆಂದಿಪ್ಪದು, ಅನುವರಿತು ತನುವಮರದಡೆ ಭಾವರಹಿತ ಗುಹೇಶ್ವರ ಬಯಲು.

ತನ್ನನರಿದ ಮಹಾಂತ ಶಬ್ದಮುಗ್ಧ. ನಾನರಿದೆನೆಂಬುದು ಚಿದಹಮ್ಮದ ಮದ, ಇದನ್ನು ಅರಿತವರು, ಈ ಚಿದಹಮ್ಮದ ಮದವಾಗಲಿ, ಸೋಹಂಭಾವವಾಗಲಿ, ದಾಸೋಹಂ ಭಾವವಾಗಲಿ, ಇದಿರ ಕೇಳಲುಂಟೆ ? ಅರುವಿಂಗರುವಾದುದು ನಾನರಿದೆನೆನ್ನಬಹುದೆ ? ಅಲ್ಲಿ ನಾನರಿದೆನೆಂಬುದು ಇಲ್ಲ ನಾ ಮರಹುಳ್ಳವನೆಂಬುದಿಲ್ಲ, ಇವರು ಅರಿತವರೆಂಬುದಿಲ್ಲ, ಅರಿಯದವರೆಂಬುದಿಲ್ಲ, ಅಜ್ಞಾನಿ ಎಂಬುದಿಲ್ಲ, ಜ್ಞಾನಿ ಎಂಬುದಿಲ್ಲ, ಬಂಧನಕ್ಕೊಳಪಟ್ಟವರೆಂಬುದಿಲ್ಲ, ಮುಕ್ತರಾದವರು ಎಂಬುದಿಲ್ಲ, ಈ ಇಲ್ಲವೆಂಬುದು ಇಲ್ಲವಾಗಿ ನಾನು ಘನವಾದುದು, ತಾನು ಘನವಾದುದು. ಈ ಮಹಾಂತರ ದೃಷ್ಟಿಯಲ್ಲಿ ಜಗವು ಜಗವಾಗಿಲ್ಲ, ಸ್ವಮಹಿಮವು, ಹಿರಿದು ಕಿರಿದೆಂಬುದು ಕಾಣದಂತಾಗಿ ತೆರಹಿಲ್ಲದ ಘನವೆ ತನ್ನಿರುವು ಆಗಿರುವಲ್ಲಿ ಇದಿರ ಕೇಳಲುಂಟೆ ? ಅಹಂ ಇದ್ದಲ್ಲಿ ಇದಂ ಎಂಬುವದಿದೆ, ಅರಿದೆನೆಂಬಲ್ಲಿ ಅರಿಯದುದು ಇದೆ. ಅರಿಯದುದು ಇದ್ದಲ್ಲಿ ಅರಿದೆನೆಂಬುದು ಇದೆ. ಇದು ತೆರಹಿಲ್ಲದ ಘನ ಹೇಗಾಗುವುದು. ಆವುದು ತೆರಹಿಲ್ಲದ ಘನವಾಗಿಹುದು ಅದು ಮೌನದ ಮೌನ.

ಅದು ಮಾತಾಡಿದುದೆಂದು ? ಅಲ್ಲಿ ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವನಷ್ಟ, ಜ್ಞಾನನಷ್ಟ ಪಂಚ ನಷ್ಟದೊಳಗೆ ನಾ ನಷ್ಟ, ನಾನಷ್ಟವಾಗಿ ನೀನೆಂಬುದು ನಷ್ಟ ಕಲಿದೇವರ 'ದೇವನೆಂಬುದು ನಿಶಬ್ದಂ ಬ್ರಹ್ಮಂ ಮುಚ್ಯತೆ ಎನ್ನುತ್ತಿದ್ದಿತ್ತು. ಎಂದು ಬಿತ್ತಿಸಿದುದು ನೋಡುವುಡೆ ಇದು ತನ್ನನರಿದ ಚಿನ್ನ ನಿಃಶಬ್ದ ಬ್ರಹ್ಮವೆ ತನ್ನಿರುವಾಗಿರುವಲ್ಲಿ ನಾನರಿದೆನೆನ್ನಬಹುದೆ ? ನುಡಿಗೆಡೆಗೊಡದ ಘನವು ನುಡಿಗಿಂಬುಕೊಟ್ಟುದೆಂದು ? ನುಡಿಯಲು ಅವಕಾಶವಿಲ್ಲವೆಂದಲ್ಲಿ ನಾನರಿದೆನೆಂಬುದೆಲ್ಲಿ ? ಇದಿರಕೇಳುವುದೆಲ್ಲಿ ? ಇದು ಕಾರಣ, ನಾನರಿದೆನೆಂಬುದೊಂದು ಭ್ರಾಂತಿ, ತಾ ತಿಳಿದವನಾಗಿ ಅನ್ಯರನ್ನು ತಿಳಿಯದವರು ಮಾಡಿಯೆ ಇದಿರ ಕೇಳುವುದು ಇದು ಭ್ರಾಂತಿನ ಭ್ರಾಂತಿ.

ಈ ಭ್ರಾಂತಿನ ಭ್ರಮೆಯೊಳಗೆ ಬಳಲುತ್ತಿರಲು ಮಾತಿನ ಮಾಲೆಯೊಳಗೆ ಅರುವು ಎಂಬುದುಂಟೆ ? : ಅರಿಯೆನೆನ್ನುವದೊಂದು ಭ್ರಾಂತಿ ಅರಿತೆನೆನ್ನುವುದೊಂದು ಭ್ರಾಂತಿ, ಸಂಸಾರಾಸಕ್ತನಿಗೆ ವಿಷಯಾದಿಗಳ ಸಂಗ್ರಹದ ಭ್ರಾಂತಿ, ತ್ಯಾಗಿಗೆ ನಾನು ತ್ಯಾಗಿ ಎಂಬ ಭ್ರಾಂತಿ, ಯೋಗಿಗೆ ಯೋಗದ ಭ್ರಾಂತಿ, ಅರಿತೆನೆಂಬುವಂಗೆ ಚಿದಹಂದ ಭ್ರಾಂತಿ, ನಿರ್ಧರಿಸಿಹೆನೆಂಬುವಂಗೆ ಅನುಭಾವದ ಭ್ರಾಂತಿ, ಇದುವೆ ಭ್ರಾಂತಿಯ ಭ್ರಮೆ ಬಹು ಆಶ್ಚರ್ಯವು. ಇದು ಮಾತಿನ ಮಾಲೆಯು. ಇತ್ತ ಸಂಸಾರಸತ್ಯ ಮಿಥ್ಯೆ ಎನ್ನುವುದು ಮಾತಿನ ಮಾಲೆ, ನಾಮರೂಪ ಸತ್ಯಾಮಿಥ್ಯೆ ಎನ್ನುವುದು ಮಾತಿನ ಮಾಲೆ, ಪರಮಾರ್ಥ ಸತ್ಯ ಮಿಥ್ಯೆ ಎನ್ನುವುದು ಮಾತಿನ ಮಾಲೆ, ಸಕಲವು ಆತ್ಮಮಯ ಎಂಬುದು ಮಾತಿನ ಮಾಲೆ. ಅಲ್ಲಿ ಬೇದವೂ ಇಲ್ಲ ಅಭೇದವೂ ಇಲ್ಲವೆನ್ನುವುದು ಮಾತಿನ ಮಾಲೆ. ಅವರ್ಣೀಯವಾಗಿಹ ತನ್ನಿರುವು ವರ್ಣನೆಗೆ ಇಂಬಾಯಿತೆ ? ಮಹಾಂತರು ತನ್ನ ತಿಳಿಯಲು ಕರುಣಿಸಿದ ಸಂಜ್ಞೆ, ಅದನ್ನು ಅರಿದರಿದು ನೋಡುವುದು ; ನೋಡದದ್ದರಿಂದ ಅವರದು ಮಾತಿನ ಮಾಲೆಯಾಗಿದೆ. ಅದು ತನ್ನ ಯತಾರ್ಥ ತಿಳಿದ ಅರುವು ಹೇಗಾ ಗುವುದು. ತನ್ನಿರುವು ಮಾತಿನ ಮಾಲೆಗೆ ಒಳಪಡದ ಘನ, ತನ್ನನ್ನು ವೇದ ವೇಧಿಸಲಿಲ್ಲ, ಶಾಸ್ತ್ರ ಸಾಧಿ ಸಲಿಲ್ಲ, ಪುರಾಣ ಪೂರೈಸಲಿಲ್ಲ, ಇದು ನುಡಿಗೆಡೆಗೊಡದ ಘನವಾದುದರಿಂದ ಅರಿದರಿದು ತನ್ನಿಂದ ತನ್ನ ನೋಡುವುಡೆ ಮಾತಿನ ಮಾಲೆಯೊಳಗೆ ಅರುವು ಎಂಬುದುಂಟೆ ? ಎಂದು ಹೇಳಿಹರು.

ಸೂತಕ ಹಿಂಗದೆ ಸಂದೇಹವಳಿಯದೆ ಮುಂದಣ ಸೂಕ್ಷ್ಮಕಾಂಬ ಪರಿ ಎಂತೊ?: ಸೂತಕಹಿಂಗಿದವರೆಂದರೆ ಅಜಾತರು, ಅಯೋನಿಜರು, ಜ್ಯೋತಿಯ ಬಸಿರಿನೊಳಗೆ ಜನಿಸಿದ ಕಾಂತಿಯುತ ಪ್ರಭೆಯ ಬೆಳಗು, ಶರಣರು ಶರಣೆಯರು ಸೂತಕವಳಿದವರು, ಸಂದೇಹ ಇಲ್ಲದವರು, ಆರು ಅಜಾತರು ಅವರಿಗೆ ಜಾತಿ ಸೂತಕವಿಲ್ಲ, ಜನನ ಸೂತಕವಿಲ್ಲ, ಪ್ರೇತ ಸೂತಕವಿಲ್ಲ, ರಜಸೂತಕವಿಲ್ಲ, ಎಂಜಲ ಸೂತಕವಿಲ್ಲ, ನಿರವಯ ಸ್ಥಲದಲ್ಲಿ ನಿಂದ ಅಭೇದ್ಯನು, ಅರುವಿನ ಗುರುವಾದವನಿಗೆ ಅದಾವ ಸಂದೇಹ, ಜ್ಞಾನವೆ ನುಡಿಗೆಡೆಗೊಡದ ಘನದಿರುವಿನ ಪ್ರಸಾದ ಕಾಯವಾಗಿದೆ. ಜ್ಞೇಯವೆ ನಿರಂತರವಾಗಿಹ ಚಿನ್ಮಯವಾಗಿದೆ. ಜ್ಞಾನ ಜ್ಞೇಯ ಒಂದಾಗಿರುವುದರಿಂದ ಗುಹೇಶ್ವರ ನಿಮ್ಮ ಶರಣನೆನಿಸಿಕೊಂಡಿಹನು. ಇಂತಪ್ಪ ಭಾವಕ್ಕಗಮ್ಯನಾಗಿಹ ಶರಣನ ಅಂತರಂಗದಲ್ಲಿ ಪರತತ್ವ, ಬಹಿರಂಗದಲ್ಲಿ ಪರತತ್ವ ಎಂದು ನೋಡುವುಡೆ ಶರಣನ ಕಣ್ಣು ಮೊದಲಲ್ಲಿ ಅನುಪಮ ಲಿಂಗವಾಗಿರುವಲ್ಲಿ ಅಲ್ಲಿ ಸಂದೇಹಕ್ಕೆ

ಅವಕಾಶವೆಲ್ಲಿಯದು.

ಆವಲ್ಲಿ ಸೂತಕ ಹಿಂಗಿರುವುದು, ಸಂದೇಹವು ನಷ್ಟವಾಗಿರುವುದು, ಅಲ್ಲಿ ಮುಂದಣ ಸೂಕ್ಷ್ಮವಾಗಿ ಕಾಣುವ ತಾನು ಅದು ತನ್ನಿಂದ ತನಗೆ ವಿದಿತವಾದುದು. ಅಲ್ಲಿ ತನ್ನಿರುವು ಪ್ರಜ್ವಲಿಸುವುದು ಅದು ಜ್ಯೋತಿಯ ಬಸಿರೊಳಗೆ ಜನಿಸಿದ ಕಾಂತಿಯುತ ಪ್ರಭೆಯ ಬೆಳಗು ಗುಹೇಶ್ವರಾ ನಿಮ್ಮ ಶರಣ.

ಶರಣ ಜ್ಯೋತಿಯ ಬಸಿರೊಳಗೆ ಜನಿಸಿದ ಜ್ಯೋತಿ, ದಿವ್ಯ ಜ್ಯೋತಿ. ಮುನ್ನ ಮುನ್ನಲಾದ ಜ್ಯೋತಿಯ ಬಸಿರೊಳಗೆ ಜನಿಸಿದ ಕಾಂತಿಯುತ ಪ್ರಭೆಯ ಬೆಳಗು. ಇದು ಉದಯಾಸ್ತವಿಲ್ಲದ ಜ್ಯೋತಿ, ನಿರಂತರವಾಗಿಹ ಮಂಗಲಮಯ ಜ್ಯೋತಿಯಾದುದರಿಂದ ಕಾಂತಿಯುತ ಪ್ರಭೆಯ ಬೆಳಗು ಗುಹೇಶ್ವರಾ ನಿಮ್ಮ ಶರಣ ಎಂದು ಹೇಳಿಹರು.

**132**

**ಅರಿಯದ ಕಾರಣ ಕುರುಹುವಿಡಿದೆನಲ್ಲದೆ**
**ಅರಿದ ಬಳಿಕ ಇನ್ನೇನೊ?**
**ಬಿಟ್ಟಡೆ ಸಮಯ ವಿರೋಧ. ಬಿಡದಿದ್ದಡೆ ಜ್ಞಾನ ವಿರೋಧ.**
**ಗುಹೇಶ್ವರಲಿಂಗವು ಉಭಯ ದಳದ ಮೇಲೈದಾನೆ ಕಾಣಾ**
**ಸಿದ್ಧರಾಮಯ್ಯಾ.॥ 827॥**

**ತಾತ್ಪರ್ಯ** : ಅರಿಯದ ಕಾರಣ ಕುರುಹುವಿಡಿದೆನಲ್ಲದೆ ಅರಿದ ಬಳಿಕ ಇನ್ನೆಂತೊ ? : ಬಹು ವೀರಶೈವರಿಗೆ ಕುರುಹು ವಿಡಿದಿರುವುದು ಅದಾವ ಕಾರಣ ಎಂಬ ಪ್ರಶ್ನೆಗೆ ಪ್ರಭುವಿನಂತೆ ಉತ್ತರ ಕೊಡುವ ಅರು ಹೃದಯದ ಲಿಂಗವಂತರು ನಮಗೆಷ್ಟು ಸಿಕ್ಕುವರು, ಹೇಳಲು ಅಸಾಧ್ಯವು. ಬಹು ಲಿಂಗಾರ್ಚಕರು, ಭಾವಿಕರು, ಭಾವ ಸಂಪನ್ನರು, ನಮ್ಮದೊಂದು ಧರ್ಮಸಂಪ್ರದಾಯ, ಲಿಂಗವಿಲ್ಲದೆ ಭವಿಯಾಗಿರಬಾರದು, ಲಿಂಗ ಕಟ್ಟಿಕೊಳ್ಳುವುದು, ನಮ್ಮ ಕುಲಾಚಾರವೆಂಬುವ ಮಟ್ಟಕ್ಕೆ ಇಳಿದಿದೆ. ಅಂಗದ ಮೇಲೆ ಲಿಂಗ ಧರಿಸಿದವರೆಲ್ಲ ವೀರಶೈವರು. ಅಂಗದ ಮೇಲೆ ಲಿಂಗವಿಲ್ಲದವರು ಭವಿಗಳು. ಲಿಂಗವಂತರು ನಾವು ಭಕ್ತರು ಎನ್ನುವ ಭಾವ ಬಹು ಭಾವುಕರಿಗೆ ಇದೆ. ಇವರಿಗೆ ಭವಿ ಆರು ಭಕ್ತರಾರು ಎಂಬ ಪರಿಜ್ಞಾನವಿಲ್ಲದೆ ಜ್ಞಾನವುಳ್ಳವರಂತೆ ನಟಿಸುವರು. ಪೂರ್ವಿಕ ಪೂಜಕ, ಅಪೂರ್ವಿಕ ಭಕ್ತ ಪೂಜಕರಾಗಿಹ ಲಿಂಗವಂತರು ಅಪೂರ್ವಿಕ ಭಕ್ತರು ಹೇಗಾಗುವರು ? ಎಂಬ ಅರು ಹೃದಯರಾಗಿಹ ಲಿಂಗವಂತರೆನಿಸಿಕೊಂಡಿಹ ಪುಣ್ಯ ಪುರುಷರು ಸಿಗುವುದು ವಿರಳವಾಗಿದೆ.

ಅರಿಯದ ಕಾರಣ ಕುರುಹುವಿಡಿದೆನಲ್ಲದೆ ಅರಿದ ಬಳಿಕ ಇನ್ನೆಂತೊ ? ಎಂಬ ಪ್ರಸಾದವಾಣಿಯ ನೋಡುವುಡೆ ಕುರುಹಿಡಿದವರೆಲ್ಲರು ಅರಿಯದವರೆಂಬುದು ಸಿದ್ಧವಾಗುವುದು. ಏನನ್ನು ರಿಯದವರು ? ತನ್ನನ್ನು ಅರಿಯದವರೆಂದು ಸಿದ್ಧವಾಗುವುದು.

ಕುರುಹು ಮರವುಳ್ಳವಂಗೆ ಕಟ್ಟಿಹರಲ್ಲದೆ ತನ್ನ ಅರಿತವಂಗೆ ಕುರುಹಿನ ಅವಶ್ಯಕತೆ ಇಲ್ಲ. ಹಿರಿಯರೆಲ್ಲರು ನೆರೆದು ಕಟ್ಟಿದ ಕುರುಹ ಇದೆಂಥ ಕುರುಹು ? ಅರುವ ಅರಿಯ ಹೇಳಿದ ಕುರುಹ ಎನಬೇಕೆ ? ಪೂಜಾಲಿಂಗದ ಕುರುಹ ಎನಬೇಕು ? ಇದರ ನಿರ್ಣಯ

ಮಾಡಿ ಕಟ್ಟಿದರೆ ? ಹಾಗೆಯೆ ಕಟ್ಟಿದರೊ ? ಇದರ ನಿರ್ಣಯ ಸಹಿತ ಆಗಿರದು. ಏಕೆಂದರೆ ಈ ಪೂಜಾಲಿಂಗವ ಕೆಲವರು ತೊಟ್ಟಿಲದೊಳಗಿರುವ ಕೂಸಿಂಗೆ ಲಿಂಗ ಕಟ್ಟುವ ಸಂಪ್ರದಾಯವಿದೆ. ಸಂಪ್ರದಾಯ ಪ್ರಕಾರ ಕಟ್ಟಲಿ ಕಟ್ಟಿದುದು ಆ ಕೂಸಿಂಗೆ ಗುರುತಿಲ್ಲ ಮುಂದೆ ದೊಡ್ಡವರಾದ ಮೇಲೆ ಒಬ್ಬರಿಗೊಬ್ಬರು ಪೂಜೆ ಮಾಡುವುದು ನೋಡಿ ಪೂಜೆ ಮಾಡುವುದು ರೂಢಿಯಾಗಿದೆ. ಇದಲ್ಲದೆ ಲಿಂಗ ಪೂಜೆಯಿಂದ ಭಕ್ತರಿಗೆ ಫಲವುಂಟು ಪದವುಂಟು ಎಂಬ ಭಾವ ಭಕ್ತರದಾಗಿದೆ.

ಅರಿಯದ ಕಾರಣ ಕೊಟ್ಟ ಕುರುಹು(ಲಿಂಗ) ಪೂಜಿಸಿಕೊಳ್ಳುವ ದೇವನಾಗಿಹನು. ಬಸವಾದಿ ಪ್ರಮಥರಿಗೆ ಈ ಕುರುಹೆ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವಾಗಿಹುದು. ಲಿಂಗವದು ಸ್ಥೂಲವಲ್ಲ, ಸೂಕ್ಷ್ಮವಲ್ಲ, ಸ್ಥೂಲ ಸೂಕ್ಷ್ಮದ ಮೇಲಣ ಜ್ಞಾನರೂಪು, ಪರಾನಂದ ಪರಬ್ರಹ್ಮವೆಂದರಿದ ಅರುವು. ಇದು ಅಖಂಡ, ಅಚಲವೆಂದು ಕರುಣಿಸಿದ ಸಂಕೇತವು. ಇದು ಅರುವ ಅರಿಯ ಹೋದವರಿಗೆ ತಾನೆ ಅನುಪಮನೆಂಬ ಮಹದರುವಿನ ಸಂಕೇತವಾಗಿದೆ. ಇದು ಕತ್ತಲೆ ಕಳೆಯುವ ಸೂರ್ಯನಾಗಿಹುದು. ಮರವು ಮರವಿನ ಕಾರ್ಯವಾಗಿಹ ನಾಮರೂಪಂಗಳ ಭ್ರಾಂತಿಯ ಕಳೆಯುವ ಚಿತ್ ಸೂರ್ಯನಾಗಿಹನು. ಪ್ರವೃತ್ತಿರೂಪಿ ಪ್ರಪಂಚದ ತೋರಿಕೆಯ ಕತ್ತಲೆ ಕಳೆಯಲು ಸ್ವಯಂ ಜ್ಯೋತಿ, ಚಿಜ್ಯೋತಿಯಾಗಿಹುದು. ಕುರುಹು ಕೆಟ್ಟು ಅರುವಿಂಗರುವಾಗಿಹ ಘನದಿರುವು ಪ್ರಜ್ವಲಿಸುವಲ್ಲಿ ಪುನಃ ಕುರುಹು ಹೇಗೆ ಕಾಣುವನು.

ತಿಳಿಯದ ಮುನ್ನ ಸೂರ್ಯನಿಗೆ ಗ್ರಹಣ ಹಿಡಿದಿದೆ ಎನ್ನುವರು, ಸೂರ್ಯನನ್ನು ಮುಚ್ಚಿ ಹಾಕುವ ಶಕ್ತಿ ಗ್ರಹಣಕ್ಕಿದೆಯಾ ? ಸೂರ್ಯನ ಘನವ ತಿಳಿದವರು, ಸೂರ್ಯನೆಂದರೆ ಬೆಳಗುಳ್ಳ ಜ್ಯೋತಿ, ಪೂರ್ವದಲ್ಲಿ ಜಗತ್ತಿಗೆ ಬೆಳಗುವ ಜ್ಯೋತಿ, ಈಗ ಅದು ಗ್ರಹಣಕ್ಕೆ ಬೆಳಗುತ್ತಿದೆ. ಸೂರ್ಯಂಗೆ ಗ್ರಹಣವೆಂಬ ಗ್ರಹ ಮರೆ ಮಾಡಿಲ್ಲ, ಸೂರ್ಯಪ್ರಕಾಶ ಜಗತ್ತಿನ ಜನರಿಗೆ ಕಾಣಗೊಡದಂತೆ ಮಾಡಿದೆ. ಈ ಗ್ರಹಣರೂಪಿ ಗ್ರಹ ಹೇಗೆ, ಹಾಗೆ ಶರಣಂಗೆ ಕುರುಹಾಗಿ ತೋರದು, ಅದು ತೋರಬಾರದ ಘನವಾದುದರಿಂದ ಹೇಳಲು ಬಾರದಾಗಿದೆ. ಹೇಳಬಾರದ ಘನವಾದುದರಿಂದ ತೋರಬಾರದ ಘನವಾಗಿದೆ. ಅದು ಅರುವಿಂಗರುವಾಗಿಹ ಮಹದರುವು ಸಚ್ಚಿದಾನಂದ ನಿಜ ಚೈತನ್ಯವಾಗಿ ಪ್ರಕಾಶಿಸುತ್ತಿಹುದು.

ಲೋಕದ ಲಿಂಗವಂತರಿಗೆ ಪೂಜಾಲಿಂಗವೆಂಬ ಗ್ರಹಣ ರೂಪಿ ಗ್ರಹ ಹಿಡಿದು ಕುರುಹಾಗಿ ಕಾಣುತ್ತಿದೆ. ಕುರುಹಾಗಿ ಕಂಡರೂ ಸ್ವಯಂಪ್ರಕಾಶವಾಗಿಹ ಲಿಂಗಘನವು ಕೆಟ್ಟಿರುವುದಿಲ್ಲ, ಪೂಜಾಲಿಂಗವಂತರಿಗೆ ಕುರುಹೆಂಬ ಗ್ರಹಣ ಬಡಿದು, ಜ್ಞಾನರೂಪು ಲಿಂಗ ಪರಾನಂದರೂಪಿ ಲಿಂಗವ ಕಾಣಗೊಡದಂತೆ ಮಾಡಿದೆ. ಇದು ಕಾರಣ ಲಿಂಗವಂತರಿಗೆ ಲಿಂಗ ಘನವ ತಿಳಿಯದಾಗಿದೆ. ಜ್ಞಾನ ರೂಪು ಲಿಂಗ ಎಂದು ಜ್ಞಾನೋದಯವಾಗುವುಡೆ ಆಗ ಈ ಪೂಜಾಲಿಂಗ ಹಾಕಿಕೊಳ್ಳಬೇಕೊ ಬಿಡಬೇಕೊ ? ಇದಾರು ನಿರ್ಣಯ ಮಾಡುವುದು.

ಬಿಟ್ಟಡೆ ಸಮಯ ವಿರೋಧ ಬಿಡದಿದ್ದಡೆ ಜ್ಞಾನ ವಿರೋಧ : ಕುರುಹು ಕೆಟ್ಟು ಅದು ಜ್ಞಾನರೂಪು ಲಿಂಗವಾದಲ್ಲಿ ಅದನ್ನು ಕಟ್ಟಿಕೊಳ್ಳುವುದು ಹೇಗೆ ಎಂದು ಪೂಜಾಲಿಂಗವ

ಪೂಜಿಸುವುದು ಬಿಟ್ಟಡೆ ಬಹು ಲಿಂಗಾರ್ಚಕರಾಗಿಹ ಲಿಂಗವಂತರಿಗೆ ವಿರೋಧವಾಗುತ್ತದೆ. ಇವರಿಗೆ ವಿರೋಧವಾಗುವುದು ಎಂದು ಪೂಜಾ ಮಾಡುವುದು ಬಿಡದಿದ್ದಡೆ ತಾ ತಿಳಿದ ಜ್ಞಾನಕ್ಕೆ ವಿರೋಧವಾಗುವುದು. ತನ್ನ ಅರುವಿಂಗೆ ವಿರೋಧವಾಗಿದೆ. ಏಕೆಂದರೆ ಅರಿಯದ ಕಾರಣ ಕುರುಹು ವಿಡಿದುದಕ್ಕಾಗಿ ಅದು ಪೂಜಾಲಿಂಗವಾಗಿತ್ತು. ಅದು ಪೂಜಿಸಿಕೊಳ್ಳುವ ದೇವನಾಗಿದ್ದನು. ನಾನು ಪೂಜಿಸುವ ಭಕ್ತನಾಗಿದ್ದುದು. ಈಗ ಕುರುಹು ಅರಿಯ ಹೋಗಿ ಅದು ಸ್ಥೂಲವಾಗಲಿಲ್ಲ, ಸೂಕ್ಷ್ಮವಾಗಲಿಲ್ಲ, ಜ್ಞಾನರೂಪ ಲಿಂಗವಾಗಿರುವುದರಿಂದ ಮುನ್ನಿನಂತೆ ಪೂಜಾಲಿಂಗವಾಗಲಿಲ್ಲ. ಅದಕ್ಕಾಗಿ ಅರಿದ ಬಳಿಕ ಇನ್ನೆಂತೊ ? ಎಂದು ಪ್ರಶ್ನಿಸಿಹನು.

ಇತ್ತ ಸಮಯಾಚಾರದವರು ತಮ್ಮಂತೆ ಲಿಂಗಾರ್ಚನೆ ಮಾಡುತ್ತಿದ್ದರೆ ಅವರಿಗೆ ಇಷ್ಟ, ಲಿಂಗಾರ್ಚನೆ ಬಿಟ್ಟಡೆ ಅವರಿಗೆ ವಿರೋಧ. ಬಿಡದಿದ್ದಡೆ ತನ್ನ ಜ್ಞಾನಕ್ಕೆ ಒಪ್ಪಿಗೆಯಾದುದು, ಹೀಗೆಯೇ ವೀರಶೈವರಲ್ಲಿ ಭಾವಿಕರ ಭಾವಕ್ಕೂ ಕುರುಹ ಅರಿಯ ಹೋದ ಅರುವಿಂಗೂ ತದ್ವಿರುದ್ಧವಾದಲ್ಲಿ ಯತಾರ್ಥ ತಿಳಿಯದ ಅನುಭವಿಗಳು ಅರೆ ಹುಚ್ಚರೆನಿಸಿಕೊಳ್ಳುವರು. ಅರೆ ಮರುಳರಾಗುವರು. ಏಕೆಂದರೆ ಇವರು, ಜ್ಞಾನರೂಪ ಲಿಂಗವ ಅರಿಯ ಹೋಗಲಿಲ್ಲ, ಕುರುಹು ಕೆಟ್ಟಂತೆ ಜ್ಞಾನರೂಪಲಿಂಗವೆಂಬುದು ಕೆಡಲಿಲ್ಲ ಅದಕ್ಕಾಗಿ ಭಾವಿಕರಿಗೂ ಜ್ಞಾನಿಗಳ ಅರುವಿಗೂ ವಿರೋಧವಾಯಿತ್ತು. ಪೂರ್ವದಲ್ಲಿ ಒಬ್ಬ ಸಮಯಾಚಾರದ ಕ್ರಿಯಾಶೀಲವಂತನು, ಒಬ್ಬ ಮಹಾತ್ಮರಿಂದ ತಾನಾರು ? ಎಂದು ತಿಳಿಯಲು ಹೋದ ಆ ಸದ್ಗುರು ಸನ್ನಿಧಿಯಲ್ಲಿ ಆರು ತಿಂಗಳು ಆಧ್ಯಾತ್ಮ ಜ್ಞಾನದಲ್ಲಿ ನುರಿತ ಅರಿತ ನಂತರ ಆತನಲ್ಲಿ ಜ್ಞಾನೋದಯವಾಗಿ ಪೂಜಾಲಿಂಗವು ತಾ ತಿಳಿದ ಜ್ಞಾನಕ್ಕಿಂತ ಅಷ್ಟು ಘನವಾಗಲಿಲ್ಲ, ಆ ಕ್ರಿಯಾ ಮೂರ್ತಿಯು ತಾನು ಅರುವುಳ್ಳವನಾಗಿ ನೋಡ ಹತ್ತಿದಾಗ ತನ್ನ ಮುನ್ನಿನ ಸಮಾಯಾಚಾರ ಸರಿ ಹೋಗಲಿಲ್ಲ ಆಗ ಆ ಮಹಾಂತನು ಪೂಜಾಲಿಂಗವ ಬಿಟ್ಟನು. ಪೂಜಾ ಮಾಡುವುದು ಬಿಟ್ಟನು, ಇದನ್ನು ಲಿಂಗಾರ್ಚಕರಾಗಿಹ ಲಿಂಗವಂತ ಭಕ್ತರು ನೋಡಿ ಆ ಕ್ರಿಯಾಮೂರ್ತಿಗೆ ಹೀಗೆ ಹೇಳಿದರು.

ಓ ಪೂಜ್ಯರೆ ? ಮೊದಲು ಲಿಂಗಯ್ಯನ ಪೂಜೆ ಮಾಡುವ ಪಾಠ ಹಾಕಿ ಕೊಟ್ಟವರೆ ನೀವು, ಪೂಜಾಲಿಂಗವ ಕೊಟ್ಟವರು ನೀವು, ನೀವೆ ಪೂಜಾಲಿಂಗವ ಬಿಟ್ಟಲ್ಲಿ, ಈ ಸಮಯಾಚಾರಕ್ಕೆ ದೊಡ್ಡ ಆಘಾತವಾಗುತ್ತಿದೆ. ನಿಮಗೆ ಪೂಜೆ ಮಾಡುವುದು ಬೇಡವಾದರೂ ಲಿಂಗಾರ್ಚಕರ ಸಲುವಾಗಿಯಾದರೂ ಮುನ್ನಿನ ಕ್ರಿಯೆ ನೀವು ಬಿಡಬೇಡಿರಿ. ಒಂದು ವೇಳ್ಯ ನಮ್ಮ ಮಾತು ನಿಮಗೆ ಸರಿ ಎನಿಸದ ಪಕ್ಷದಲ್ಲಿ ಇಲ್ಲಿ ಒಬ್ಬ ಮಹಾಜ್ಞಾನಿಗಳು ಇರುವರು ಅವರ ದರ್ಶನ ಮಾಡಿರಿ, ಅವರು ಮಾರ್ಗದರ್ಶನ ಮಾಡಿದಂತೆ ನಡೆಯಬಹುದೆಂದು ಹೇಳಿಕೊಳ್ಳಲು ಆಗ ಆ ಕ್ರಿಯಾಮೂರ್ತಿಯು ಆ ಮಹಾಂತರ ದರ್ಶನ ಪಡೆದುಕೊಳ್ಳಲು ಹೋದರು. ಅವರು ಈ ಯತಿಯು ಬರುವ ಸೂಚನೆಯ ಕಂಡು ತಾವೆ ಮೊದಲು ಒಬ್ಬನಿಂದ ಒಂದು ವಸ್ತ್ರ ತೆಗೆದುಕೊಂಡು ಒಂದು ಗಂಟು ಹಾಕಿ ಕೊರಳಲ್ಲಿ ಲಿಂಗ ವಸ್ತ್ರವ ಧರಿಸುವ ಸೂಚನೆಯಿತ್ತರಂತೆ. ಅದನ್ನು ಕಂಡು ಈ ಕ್ರಿಯಾ ಮೂರ್ತಿ ಮತ್ತು ಪೂಜಾಲಿಂಗವ ಕೊರಳಲ್ಲಿ ಧರಿಸಿ ಮುನ್ನಿನಂತೆ ಪೂಜಿಸ ಹತ್ತಿದನು. ಈ ಸಂಜ್ಞೆಯು ತೋರಿಸಿದುದು ಪ್ರಭುವಿನಂತೆ ಮಹದರುವಿನ ಇರವು ತಿಳಿಸಿದಂತಾಗಲಿಲ್ಲ, ಹೀಗಾಗಿ ನಿರವಧಿಯಾಗಿಹ ಲಿಂಗ ತತ್ವದ ಪರಿಜ್ಞಾನದಿಂದ ವಂಚಕರಾಗಿ ಸೀಮಿತರಾಗಿಹರು. ಅಂಗದ ಮೇಲೆ ಲಿಂಗ ಧರಿಸಿದವರು ಅಂಗದ ಮೇಲೆ ಲಿಂಗವಿಲ್ಲದವರ ಕಂಡು ಹಿಯಾಳಿಸುವುದು.

ಲಿಂಗವಿಲ್ಲದವರು, ಈ ಲಿಂಗಾರ್ಚಕರ ಲಿಂಗ ಪೂಜೆ ಮಾಡುವುದು ನೋಡಿ ಅವರು ಹಿಯಾಳಿಸುವ ಸೀಮಿತ ಜ್ಞಾನಿಗಳಾದರು. ಇದನ್ನು ಕಂಡೆ ಪ್ರಭುದೇವರು, ಬಿಟ್ಟಡೆ ಸಮಯ ವಿರೋಧ ಬಿಡದಿದ್ದಡೆ ಜ್ಞಾನ ವಿರೋಧ ಗುಹೇಶ್ವರ ಲಿಂಗವು ಉಭಯದಳದ ಮೇಲೈದಾನೆ, ಕಾಣಾ ಸಿದ್ಧರಾಮಣ್ಣ ಎಂದು ಸೂಚಿಸಿಹರು.

ಓ ಸಿದ್ಧರಾಮಣ್ಣಾ ಗುಹೇಶ್ವರ ಲಿಂಗದ ಯತಾರ್ಥ ಜ್ಞಾನವು ಅಂಗದ ಮೇಲೆ ಲಿಂಗ ಧರಿಸಿರುವೆನೆಂಬುವನ ಜ್ಞಾನಕ್ಕೂ ಮೀರಿದೆ. ನಾನೆ ಪರವಸ್ತು ಸಚ್ಚಿದಾನಂದ ನಾನೆ, ನಿತ್ಯನಾನೆ, ಪರಿಪೂರ್ಣ ನಾನೆ, ದೃಕ್ ನಾನೆ, ಲಿಂಗ ನಾನೆ ಎಂಬ ಚಿದಹಮ್ಮಿಗೂ ಮೀರಿದೆ. ಮೀರಿದ ಘನವರಿಯಲು ಅದು ತನಗಿಂತ ಬೇರಾಗಿಲ್ಲವಾದುದರಿಂದ ಪ್ರಭುದೇವ, ಗುಹೇಶ್ವರ ಲಿಂಗವು ಉಭಯ ದಳದ ಮೇಲೈದಾನೆ ಎಂದು ಹೇಳಿಹರು. ಗುಹೇಶ್ವರ ಲಿಂಗವು, ಲಿಂಗಾರ್ಚಕರ ಅರ್ಚನೆಗೂ ನಿಲುಕದು, ಜ್ಞಾನರೂಪು ಲಿಂಗ, ಸಚ್ಚಿದಾನಂದ ಲಿಂಗ, ಪೂರ್ಣಲಿಂಗ, ಅಖಂಡ ಲಿಂಗ ಎಂಬ ಅರುವಿನ ಭಾವಿಕರಿಗೂ ನಿಲುಕದ ಲಿಂಗ. ಒಬ್ಬರದು ಅರ್ಚನೆಯ ದಳವುಳ್ಳವರಾದರೆ ಮತ್ತೊಬ್ಬರು ಜ್ಞಾನದ ಭಾವಿಕತನವು ಅದೊಂದು ದಳವೆ ? ಲಿಂಗ ಘನವು ಇವರೀರ್ವರ ದಳದ ಮೇಲೈದಾನೆ ಎಂದುದು ನೋಡುವುಡೆ ಅಲ್ಲಿ ಪೂಜೆಗೂ ಸಂದಿಲ್ಲ, ಭಾವಕ್ಕೂ ಸಂದಿಲ್ಲ, ಶಬ್ದಕ್ಕೂ ಸಂದಿಲ್ಲ, ನುಡಿಗೆಡೆಗೊಡದ ಘನವು ತನ್ನಯ ಇರವು, ಇದು ನಿರಂತರ ಬೆಳಗುಳ್ಳ ಘನವಾದುದರಿಂದ ಅವರ್ಣೀಯವಾದುದು. ಇಂತಪ್ಪ ಲಿಂಗದ ಘನವರಿಯದ್ದರಿಂದ ಲಿಂಗದ ಪೂಜಕರಾದರು. ಇವರೆಲ್ಲ ಲಿಂಗ, ಲಿಂಗ ಎಂಬುವ ಭಾವ ಭ್ರಮಿತರು. ಇತ್ತ ಶಬ್ದಮುಗ್ಧವಾಗಿಹ ಘನ ಲಿಂಗವರಿಯದ್ದರಿಂದ ವೇದ, ಶಾಸ್ತ್ರ ಪುರಾಣ ಆಗಮಂಗಳೆ ಘನವಾಗಿ ಹೊರ ವೇಷದ ಪ್ರೇಮಿಗಳಾಗಿ, ನಿತ್ಯ ನಿಯಮುಗಳ ಮಾಡುವ ಕ್ರಿಯಾಶೀಲರಾಗಿ ಲೋಕದವರಿಗೆ ಬಹಿರಾಚಾರದ ದಂಗುಬಡಿಸಿ ಲಕ್ಷ್ಮಿಯ ದ್ವಾರಪಾಲಕರಾದರು.

**133**

**ಹೊರವೇಷದ ವಿಭೂತಿ ರುದ್ರಾಕ್ಷಿಯನು ಧರಿಸಿಕೊಂಡು**
**ವೇದ ಶಾಸ್ತ್ರ ಪುರಾಣ ಆಗಮದ ಬಹುಪಾಠಿಗಳು;**
**ಅನ್ನ ಹೊನ್ನು ವಸ್ತ್ರವ ಕೊಡುವವನ ಬಾಗಿಲ ಕಾಯುವ**
**ಮಣ್ಣು ಪುತ್ಥಳಿಯಂತಿಹ ನಿತ್ಯನಿಯಮದ ಹಿರಿಯರುಗಳು.**
**ಅದೆಂತೆಂದಡೆ:**
**''ವೇದವೃದ್ಧಾ ವಯೋವೃದ್ಧಾಃ ಶಾಸ್ತ್ರ ವೃದ್ಧಾ ಬಹುಶ್ರುತಾಃ ।**
**ಇತ್ಯೇತೇ ಧನವೃದ್ಧಸ್ಯ ದ್ವಾರೇ ತಿಷ್ಠಂತಿ ಕಿಂಕರಾಃ ॥ -ಎಂದುದಾಗಿ**
**ಎಲ್ಲ ಹಿರಿಯರು ಲಕ್ಷ್ಮಿಯ ದ್ವಾರಪಾಲಕರು- ಗುಹೇಶ್ವರಾ.** ॥ 1645 ॥

**ತಾತ್ಪರ್ಯ** : *ಹೊರ ವೇಷದ ವಿಭೂತಿ ರುದ್ರಾಕ್ಷಿಯನು ಧರಿಸಿಕೊಂಡು ವೇದ, ಶಾಸ್ತ್ರ, ಪುರಾಣಗಳ ಬಹುಪಾಠಿಗಳು, ಅನ್ನ, ವಸ್ತ್ರ, ಹೊನ್ನು* **ಕೊಡುವವನ** *ಬಾಗಿಲ* **ಕಾಯುವವನ** *ಮಣ್ಣಿನಗೊಂಬಿಯಂತಿಹ ಕ್ರಿಯಾಶೀಲದ ಹಿರಿಯರೆ ? : ಏನಿದು ನಿಮ್ಮ*

ಹೊರ ವೇಷ, ಶಿವನ ವೇಷ, ಇತ್ತ ಕಾವಿ ಲಾಂಛನವೇನು, ಹಣೆಯ ಮೇಲೆ ವಿಭೂತಿ ಧಾರಣವೇನು, ಕೊರಳೋಳ್ ರುದ್ರಾಕ್ಷಿ ಧರಿಸಿ, ವೇದ ಶಾಸ್ತ್ರ ಪುರಾಣಗಳ ಬಹು ಪಾಠ ಮಾಡಿದರೂ ನಿಮ್ಮ ಹೃದಯದೊಳ್ ಪರತತ್ವವು ಪ್ರಜ್ವಲಿಸಲಿಲ್ಲವೆ ? ಹೊರಗಿನ ಬಣ್ಣ ಹೊರಗಾಯಿತೆ ? ವೇದ ಕಲಿತರೂ ಜ್ಞಾನ, ಘನವಾಗಲಿಲ್ಲವೆ ? ಶಾಸ್ತ್ರ ಕಲಿತರೂ ಜೀವ ಪರಮರ ಏಕತ್ವ ಜ್ಞಾನವಾಗಿ ಅಖಂಡದೃಷ್ಟಿ, ಅಖಂಡ ಭಾವ, ಅಖಂಡ ಜ್ಞಾನದ ಹೃದಯವಾಗಲಿಲ್ಲವೆ ? ಕರಣಂಗಳು ಕೆಟ್ಟು ಲಿಂಗ ಕಿರಣಂಗಳಾಗಲಿಲ್ಲವೆ ? ಇಂದ್ರಿಯಂಗಳು ವಿಷಯ ನೋಟದಿಂದ ನಿವೃತ್ತವಾಗಿ ಅತೀಂದ್ರಿಯಂಗಳಾಗಲಿಲ್ಲವೆ ? ಮನವು ತನ್ನ ನಿಜವ ತಿಳಿಯಲಿಲ್ಲವೆ ? ಮನವು ಘನ ಮನವಾಗಲಿಲ್ಲವೆ ? ಘನ ಮನವಾಗಲು ಮನಸ್ಸಿಗೆ ತಾನು ಬೋಧ ಮಾಡುವ ಗುರುತನ ತನ್ನಲ್ಲಿ ಇಲ್ಲವೆ ?

ಹೊರವೇಷ, ಶಿವನ ವೇಷ, ಜಂಗಮ ವೇಷ ಧರಿಸಿ, ಶಿವನಾಗಿ ತೋರಿದರೂ ಶಿವತತ್ವ ಅದು ಅಭೇದ್ಯ ತತ್ವ, ಒಳಗೆ ಬೆಳಗಲಿಲ್ಲವೆ ? ಕಾವಿ ಹಾಕಿದಲ್ಲಿ ಕರ್ಮದಿಂದ ವಿಲಕ್ಷಣನಾಗಿರುವುದು. 'ಕಾ' ಕಾರಂ, ಕರ್ಮ ಸೂಚಕಂ, 'ವಿ' ಕಾರಂ ವಿಲಕ್ಷಣ ಸೂಚಕಂ ಎಂದುದಾಗಿ ಕಾವಿ ಹಾಕಿದ ಸಂಜ್ಞೆ ಅಂದರೆ ಸಂಚಿತ ಆಗಾಮಿ ಪ್ರಾರಾಬ್ದ ಈ ತ್ರಿವಿಧ ಕರ್ಮಕ್ಕೂ ತಾನು ಬೇರಾದವನು, ಅಸಂಗನು, ಅವಿಕಾರಿಯು ಎಂದು ಸೂಚಿಸುವುದು ತಿಳಿದು ನೋಡುವುಡೆ ಆತ್ಮನ ಲಿಂಗದ ತಿಳುವಳಿಕೆಯಾದುದೆ ಅಸಂಗದ ಚಿನ್ಹ

ಅಂಗವಿಲ್ಲಾಗಿ ಅನ್ಯ ಸಂಗವಿಲ್ಲವಯ್ಯ, ಅನ್ಯ ಸಂಗವಿಲ್ಲಾಗಿ ಮತ್ತೊಂದು ವಿವರಿಸಲಿಲ್ಲಯ್ಯ, ವಿವರಿಸಲಿಲ್ಲಾಗಿ ನಿಸ್ಸಂಗವಾಯಿತ್ತು ಗುಹೇಶ್ವರಾ. ನಿಮ್ಮ ನಾಮ ಎಂತುಂಟು, ಕಾವಿ ಹಾಕಿದಲ್ಲಿ ತತ್ವದೃಷ್ಟಿಯುಳ್ಳವನಾಗುವುದು. ಆರು ಅತೀಂದ್ರಿಯ ಜ್ಞಾನ ಸಂಪನ್ನರು ಅವರು ನಿಜವಾದ ವೇಷ ಹಾಕಿದವರು. ಅವರ ದಿವ್ಯದೃಷ್ಟಿ ಉಪಾಧಿ ನಷ್ಟವಾಗಿ ನಿರುಪಾಧಿ ನಿಸ್ಸಂಗ, ನಿರಾಲಂಬತ್ವ ಸಿದ್ಧಿಸಿರುವುದು ಇದು ಜ್ಞಾನ, ಜ್ಞಾನವೆಂದರೆ ಬೆಂಕಿ, ಕಟ್ಟಿಗೆಗಳ ದಹಿಸಿ, ತಾನು ಹೇಗೆ ದಹಿದಹಿಸಿ ಪ್ರಜ್ವಲಿಸುವುದೊ ಹಾಗೆ ಜ್ಞಾನವೆಂಬ ಬೆಂಕಿ ತಾನಿದಿರೆಂಬ ತೋರಿಕೆಯ ನಷ್ಟ ಮಾಡಿ ತೋರದಡಗದ ಘನದಿರುವಿನ ಅರುವಾದುದೆ ಜ್ಞಾನದ ಸೂಚಕ ಇದು ಕಾವಿಯ ಹಾಕಿದ ಸೂಚಕ.

ತ್ರಿಪುಂಡ ಭಸ್ಮಧಾರಣ ಮಾಡುವುಡೆ ಮಲತ್ರಯಂಗಳ ಭಸ್ಮ ಮಾಡಿ ಚಿದ್ ಭಸ್ಮ ಧರಿಸಿರಬೇಕು, ಅಂಗ ಭಾವ ಹೋಗಿ ಲಿಂಗಭಾವಿಯಾಗಿರಬೇಕು, ಜಿತೇಂದ್ರಿಯತ್ವ ಕೆಟ್ಟು, ವಿಜಿತೇಂದ್ರಿಯನಾಗಿರುವುದು, ಇಂದ್ರಿಯಂಗಳ ಶುಭಾಶುಭವ ಕೆಟ್ಟು ಸಮದರ್ಶಿಯಾಗಬೇಕು, ಇದು ಅತೀಂದ್ರಿಯನಾದ ಸಂಕೇತ, ಇದು ಕರ್ಮದಿಂದ ವಿಲಕ್ಷಣನಾದ ಸಂಕೇತ. ತಾನು ಗಗನ ಸದೃಷನಾದ ಜ್ಞಾನಾಮೃತನೆಂಬುದು ದೃಢವಾಗಬೇಕು, ಈ ಜ್ಞಾನಾಮೃತನಾದುದೆ ರುದ್ರಾಕ್ಷಿ ಹಾಕಿದ ಸೂಚಕ, ರುದ್ರನ ಜ್ಞಾನವೆ ರುದ್ರಾಕ್ಷಿಯಾಗಿದೆ. ಲಯ ರೂಪಿ, ರುದ್ರ, ನಿವೃತ್ತ ರೂಪವಾಗಿಹ ಜ್ಞಾನ, ನಾಮರೂಪಂಗಳ ಬಾಧಾಪಡಿಸಿ ಅಸ್ತಿ, ಭಾತಿ, ಪ್ರಿಯವಾದ ಜ್ಞಾನವೆ ರುದ್ರನ ಜ್ಞಾನ, ಚೈತನ್ಯ ಜ್ಞಾನವೆ ರುದ್ರನ ಜ್ಞಾನ ಇದುವೆ ರುದ್ರಾಕ್ಷಿಯಾಗಿದೆ. ಇದು ಶ್ರೋತೃವಿನ ಶ್ರೋತೃವಾದುದರಿಂದ ಕಿವಿಯಲ್ಲಿ ರುದ್ರಾಕ್ಷಿ ಧರಿಸುವರು.

ಉಂಟೆಂಬುದು ಬಸವಣ್ಣ ಕೊಂಡ, ಇಲ್ಲೆಂಬುದು ಅಲ್ಲಯ್ಯ ಖೊಂಡ, ಇನ್ನಾರನಹುದೆಂಬೆನು, ಇನ್ನಾರನಲ್ಲೆಂಬೆನು ಇವರೀರ್ವರು ಛಲವಾದಿಗಳಾದುದ ಕಂಡ ಲಿಂಗ

ಸಂಪನ್ನರನಾರನು ಕಾಣೆ ಕೂಡಲ ಚೆನ್ನಸಂಗಮದೇವಾ, ಇಲ್ಲೆಂಬ ಜ್ಞಾನ ರುದ್ರನ ಜ್ಞಾನ, ಪ್ರವೃತ್ತಿಯು ಇಲ್ಲ, ನಿವೃತ್ತಿಯು ಇಲ್ಲ, ಇಲ್ಲೆಂಬುದು ಇಲ್ಲವೆನ್ನುವ ಜ್ಞಾನ ಪ್ರಭುವಿನದು.

ಉಂಟೆಂಬುದು ಬಸವಣ್ಣ ಕೊಂಡ, ಅಲ್ಲಿಯು ಉಂಟು, ಇಲ್ಲಿಯು ಉಂಟು, ನಾಮರೂಪದಲ್ಲುಂಟು, ಅಸ್ತಿ, ಭಾತಿ, ಪ್ರಿಯದಲ್ಲುಂಟು, ಗುರು ಉಂಟು, ಲಿಂಗ ಉಂಟು, ಜಂಗಮ ಉಂಟು, ಪಾದೋದಕ ಪ್ರಸಾದ ಉಂಟು, ಎಲ್ಲೆಲ್ಲೂ ಉಂಟು ಎಂಬುದು ಬಸವರಸರದು ಇಷ್ಟು ಶಾಸ್ತ್ರದಿಂದ ಅಭ್ಯಾಸ ಮಾಡಿದರೂ ತನ್ನ ಮನಸ್ಸಿಗೆ ತಾನು ಬೋಧ ಮಾಡುವ ಹಿರಿತನ ಬರಲಿಲ್ಲವೆ ?

'' ಉಲ್ಲೇಖ ಮಾತ್ರ ಮಪಿ, ಚೇ ನಚ ನಾಮರೂಪಃ ॥ ನಿರ್ಭಿನ್ನ ಭಿನ್ನ ಮಪಿ ತೆ ನಹಿ ವಸ್ತು ಕಿಂಚಿತ್ । ನಿರ್ಲಜ್ಜ ಮಾನಸ ಕರೋಕ್ಷಿ ಕಥಂ ವಿಷಾದಃ । '' ಜ್ಞಾನಾಮೃತಂ ಸಮರಸಂ ಗಗನೋಪಮೋ ಹಮ್ ॥ 3 ॥ ಸುಮ್ಮನೆ ಹೇಳುವುದಕ್ಕಾದರೂ ನಿನಗೆ ನಾಮರೂಪಂಗಳಿಲ್ಲ, ನಿನಗಿಂತ ಬೇರೆಯಾದ ವಸ್ತುಗಳಿಲ್ಲ, ಅಥವಾ ನಿನ್ನೊಂದಿಗೆ ಸೇರಿದ ವಸ್ತುಗಳೂ ಇಲ್ಲ ಎಲೆ ನಾಚಿಕೆ ಇಲ್ಲದ ಮನಸ್ಸೇ ನೀನು ಏಕೆ ವಿಷಾದಿಸುವೆ, ಗಗನದಂತೆ ಸಮರಸವಾಗಿರುವ ಜ್ಞಾನಾಮೃತವೆ ನಾನು.

ಎಲೈ ಸ್ನೇಹಿತನೆ ನೀನೇಕೆ ರೋಧಿಸುವೆ ನಿನಗೆ ಜರಾಮೃತ್ಯುಗಳಿಲ್ಲ, ಏಕೆ ರೋಧಿಸುವೆ ನಿನಗೆ ಜನ್ಮ ದುಃಖಗಳಿಲ್ಲ, ಏಕೆ ರೋಧಿಸುವೆ ನನಗೆ ಮತ್ತಾವ ವಿಕಾರವೂ ಇಲ್ಲ, ಗಗನದಂತೆ ಸಮರಸವಾಗಿರುವ ಜ್ಞಾನಾಮೃತವೆ ನಾನು.

ಎಲೈ ಸ್ನೇಹಿತನೆ, ನೀನು ಏಕೆ ರೋಧಿಸುವೆ, ನಿನ್ನದು ಎನ್ನುವ ರೂಪವಿಲ್ಲ, ಏಕೆ ರೋಧಿಸುವೆ ನಿನ್ನದಲ್ಲದೆ ನಿನಗೆ ಬೇರೆ ರೂಪವೆ ಇಲ್ಲ, ಏಕೆ ರೋಧಿಸುವೆ ನನಗೆ ವಯಸ್ಸಾಗುವುದೆ ಇಲ್ಲ, ನನಗೆ ಇಂದ್ರಿಯಂಗಳಿಲ್ಲ, ಗಗನದಂತೆ ಸಮರಸವಾಗಿರುವ ಜ್ಞಾನಾಮೃತವೆ ನಾನು.

ಎಲೈ ಸ್ನೇಹಿತನೆ ನೀನೇಕೆ ರೋಧಿಸುವೆ, ನಿನಗೆ ಪ್ರಲೋಭನವೆ ಇಲ್ಲ, ನೀನೇಕೆ ರೋಧಿಸುವೆ, ನಿನಗೆ ಮೋಹವಿಲ್ಲ, ವಿಮೋಹವಿಲ್ಲ, ಗಗನದಂತೆ ಸಮರಸವಾಗಿರುವ ಜ್ಞಾನಾಮೃತವೆ ನಾನು.

'' ಐಶ್ವರ್ಯಮಿಚ್ಛಸಿ, ಕಥಂನಚತೇಧನಾನಿ । ಐಶ್ವರ್ಯಮಿಚ್ಛಸಿ ಕಥಂ ನ ಚತೇಹಿ ಪತ್ನಿ । ಐಶ್ವರ್ಯ ಮಿಚ್ಛಸಿ ಕಥಂ ನಚತೇ ಮಮೇತಿ ಜ್ಞಾನಾಮೃತಂ ಸಮರಸಂ ಗಗನೋಪಮೋಹಮ ॥ ನಿನಗೆ ಧನವೆ ಇಲ್ಲದಿರುವಾಗ ಐಶ್ವರ್ಯವನ್ನು ಹೇಗೆ ಇಚ್ಛಿಸುವಿ ನಿನಗೆ ಪತ್ನಿಯೆ ಇಲ್ಲದಿರುವಾಗ ಐಶ್ವರ್ಯವನ್ನು ಹೇಗೆ ಇಚ್ಛಿಸುವಿ, ನಾನು ನನ್ನದು ಎಂಬುದೆ ಇಲ್ಲದಿರುವಾಗ ಐಶ್ವರ್ಯವನ್ನು ಹೇಗೆ ಇಚ್ಛಿಸುವಿ ಗಗನದಂತೆ ಸಮರಸವಾಗಿರುವ ಜ್ಞಾನಾಮೃತವೆ ನಾನು.

ಹೊರವೇಷವ ಧರಿಸಿ ವೇದ ಶಾಸ್ತ್ರ ಪುರಾಣ ಆಗಮಂಗಳ ಕಲಿತು ಅನ್ನ, ವಸ್ತ್ರ ಹೊನ್ನು ಕೊಡುವವನ ಬಾಗಿಲು ಕಾಯುವವರಾದರೆ ? ವೇದ ಶಾಸ್ತ್ರಗಳು ಇವರಿಗೆ ಜ್ಞಾನಾಮೃತವ ಬೆಳಗಲಿಲ್ಲವೆ ? ಆವ ವೇದ ಓದಿದರೇನು ? ಶಾಸ್ತ್ರಾಭ್ಯಾಸ ಮಾಡಿದರೇನು ? ದೇಹ ಬುದ್ಧಿ ದೇಹಭಾವ ದೇಹಾಭಿಮಾನ ನಷ್ಟವಾಗದಿದ್ದಲ್ಲಿ ವೇದದ ಓದು ನಿಷ್ಪ್ರಯೋಜಕ, ಶಾಸ್ತ್ರಾಭ್ಯಾಸ, ನಿಷ್ಪ್ರಯೋಜಕ ಆರು, ಅಹಂಕಾರಿಗಳು, ಅವರು ಕರೆ

ನಾಗರಹಾವಿನಿಂದ ಕಚ್ಚಿಸಿಕೊಂಡವರು. ಆರು ವಿಷಯದ ಮೋಹಿಗಳು, ಅವರು ವಿಷದ ಹಾವಿನ ವಿಷವು ನೆತ್ತಿಗೇರಿ ಪ್ರಜ್ಞೆ ತಪ್ಪಿದವರು. ಅಲ್ಲಿ ಅಖಂಡವಾಗಿಹ ಜ್ಞಾನಾಮೃತದ ಪ್ರಜ್ಞೆ ಬರದು. ಈ ಪ್ರಜ್ಞೆ ಬಾರದ ಪರಿಣಾಮವೆ, ವೇದ ಕಲಿತರೂ ಶಾಸ್ತ್ರಾಭ್ಯಾಸ ಮಾಡಿದರು. ಅನ್ನ ವಸ್ತ್ರ ಹೊನ್ನು ಕೊಡುವವನ ಬಾಗಿಲು ಕಾಯುವ ದ್ವಾರಪಾಲಕರಾದರೂ ಕುಭೇರನು, ಭಿಕ್ಷುಕರ ಮನೆಗೆ ಅನ್ನ ವಸ್ತ್ರ ಹಣ ಬೇಡಲು ಬಂದಂತಾಗಿದೆ. ದೇವೇಂದ್ರನು ಸ್ವರ್ಗದ ಸುಖವ ಬಿಟ್ಟು, ಭೂಲೋಕದಲ್ಲಿ ಪಂಚಾಮೃತವ ಬೇಡಲು ಬಂದಂತಾಗಿದೆ. ಶ್ರೀಗುರುವೆ ಭಕ್ತರ ಮನೆಗೆ ಅನ್ನ, ವಸ್ತ್ರ ಹಣವ ಬೇಡಿದಡೆ ಇನ್ನಾರಿಗೆ ಹೇಳುವುದು ? ತತ್ವ ವೇತ್ತನೆ ? ತೊತ್ತಿನವರ ಮನೆಗೆ ಬಂದು, ಅನ್ನ ವಸ್ತ್ರವ ಬೇಡಿದರೆ ಇದಾರಿಗೆ ಹೇಳುವುದು. ಸಿರಿವಂತನು ತಿರುಕನಾದನೆ ? ತಿರುಕನು ಶ್ರೀಮಂತನಾಗಿ ಕಂಡನೆ ? ಇದೆಂಥ ಜ್ಞಾನದೃಷ್ಟಿ, ವೇದದ ಓದಿದ ದೃಷ್ಟಿ, ಶಾಸ್ತ್ರಾಭ್ಯಾಸ ದೃಷ್ಟಿ ಈ ಪವಿತ್ರ ದೃಷ್ಟಿ, ಲೋಕದವರ ಮನೆ ಮನೆಗೆ ತಿರಿದುಣ್ಣಲು ಹಚ್ಚಿತೆ ? ಶ್ರೀಕೃಷ್ಣನೆ ಸುದಾಮನ ಮನೆಗೆ ಅನ್ನ, ವಸ್ತ್ರ, ಹಣವ ಬೇಡಲು ಬಂದನೆ ? ಶಂಕರನು, ಶಶಿಧರನು, ಶ್ರೀಕೃಷ್ಣನು ಅದ್ವೈತಾನಂದದಲ್ಲಿದ್ದ ಅಮರರು, ಇವರು ಭೂಲೋಕವೆಂಬುದು ತಿರುಕರ ಲೋಕ, ಈ ಲೋಕದಲ್ಲಿಳಿದು ತಿರುಕರನ್ನು ಅನ್ನ ಬೇಡಿದರೆ ? ವಸ್ತ್ರ ಬೇಡಿದರೆ, ಹಣ ಬೇಡಿದರೆ ? ಇದಾರು ಹೇಳುವುದು, ಹಾಗೆ ವೇದನನೋದಿದ ಬ್ರಹ್ಮವೇತ್ತ, ಶಾಸ್ತ್ರಾಭ್ಯಾಸ ಮಾಡಿದ ಜೀವ ಬ್ರಹ್ಮರೇಕತ್ವ ಜ್ಞಾನಿ, ಅಖಂಡಜ್ಞಾನಿ ಅಖಂಡಾನಂದಮಯನು, ತೃಪ್ತರೂಪ ತೃಪ್ತನು, ಇವರದು ಸಕಲ ಪ್ರಪಂಚ ನಿವೃತ್ತಿಯಾಗಿಹ ದಿವ್ಯದೃಷ್ಟಿ ಇವರು ನಿಶ್ಚಿಂತ ನಿಲಯ ಇವರಲ್ಲಿ ಆನೆಂಬುದಿಲ್ಲ ಇದಿರೆಂಬುದಿಲ್ಲ ಸುಖ ದುಃಖದ ಸುಳಿವು ಇಲ್ಲ, ಒಡಲು ಇಲ್ಲ, ವಾಸನೆ ಇಲ್ಲ, ರಾಗವಿಲ್ಲ, ವಿರಾಗವಿಲ್ಲ, ನಿರಂತರ ಪರಮ ಸುಖಿಗಳು, ಇವರುಗಳಿಗೆ ಅನ್ನ ಮೋಹವೆ ? ವಸ್ತ್ರ ಮೋಹವೆ ? ಧನ ಕನಕ ಮೋಹವೆ ? ಇವರಲ್ಲಿ ಸಂಗ್ರಹ ಬುದ್ಧಿಯೆ ? ಬುದ್ಧಿಯೆ ಭಸ್ಮ ಮಾಡಿದ ಚಿದಗ್ನಿಗಳು ಚಿದಾನಂದರು, ಜ್ಞಾನಾಮೃತರು, ಜ್ಞಾನಾಮೃತರೆಂಬುದು ಅಖಂಡಿತ ಘನ ಪರಿಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತರು. ಇಂತಪ್ಪ ಮಹಾಂತರ ಹೃದಯ ವಿಷಯಾಸಕ್ತಿವುಳ್ಳದ್ದಾಗಿ ಅನ್ನ, ವಸ್ತ್ರ ಹೊನ್ನು ಕೊಡುವವನ ಬಾಗಿಲು ಕಾಯುವ ಲಕ್ಷ್ಮಿಯ ದ್ವಾರಪಾಲಕರಾಗಿಹುದು, ಇದು ಕಾರಣ ಹೊರವೇಷದಿಂದ ಆರಿಗೂ ಲಾಭವಿಲ್ಲ, ವೇಷ ಹಾಕಿದವರಿಗೂ ಲಾಭವಿಲ್ಲ, ಇದಲ್ಲದೆ ಪೂಜಾಲಿಂಗಕ್ಕೆ ಪ್ರಾಣಲಿಂಗವೆನ್ನುವರು ಇವರು ಪ್ರಾಣಲಿಂಗದ ಸುದ್ದಿಯನರಿಯರು.

**134**

**ಪೃಥ್ವಿಯ ಪಾಷಾಣ ಪೃಥ್ವಿಯ ಮೇಲೆ ಬಿದ್ದು ಹೋದಡೆ**
**ಪ್ರಾಣಲಿಂಗ ಹೋಯಿತ್ತು ಪ್ರಾಣಲಿಂಗ ಹೋಯಿತ್ತು ಎಂಬಿರಿ.**
**ಪ್ರಾಣಲಿಂಗ ಹೋದಡೆ ನೀವು ನುಡಿಯುವ ಪರಿಯೆಂತು ?**
**ಅಂತರಂಗದಿ ಪ್ರಾಣಲಿಂಗಸಂಬಂಧದ ಸುದ್ಧಿಯನರಿಯರಾಗಿ,**
**ಗುಹೇಶ್ವರಾ, ನೀ ಮಾಡಿದ ಬೆಡಗು ಬಿನ್ನಾಣಕ್ಕೆ ನಾನು ಬೆರಗಾದೆನು!** ॥ 1362 ॥

**ತಾತ್ಪರ್ಯ** : ಪೃಥ್ವಿಯ ಪಾಷಾಣ ಪೃಥ್ವಿಯ ಮೇಲೆ ಬಿದ್ದು ಹೋದಡೆ ಪ್ರಾಣ ಲಿಂಗ ಹೋಯಿತ್ತು, ಪ್ರಾಣಲಿಂಗ ಹೋಯಿತ್ತೆಂಬಿರಿ, ಪ್ರಾಣಲಿಂಗ ಹೋದಡೆ ನೀವು ನುಡಿಯುವ ಪರಿ ಎಂತು ? : ಲಿಂಗಾರ್ಚಕನ ದೃಷ್ಟಿಗೆ ಪೂಜಾಲಿಂಗವೆ ಪ್ರಾಣಲಿಂಗವಾಗಿದೆ. ಪೂಜಾಲಿಂಗವಾವುದು, ಪ್ರಾಣಲಿಂಗವಾವುದೆಂಬುದನರಿಯರು. ಅರಿಯದೆ ನುಡಿಯುತ್ತಿಹರು. ಭಾವ ಭ್ರಮಿತರ ಭಾವಕ್ಕೂ ಮಹಾನುಭವಿಗಳ ಭಾವಕ್ಕೂ ಎತ್ತಣದಿಂದೆತ್ತ, ಜಡವ ಅಜಡ ಮಾಡುವರು. ಅಜಡವ ಜಡ ಮಾಡುವರು. ಜಡ ಮತೀಯರು ಭ್ರಾಂತರು. ಪೃಥ್ವಿಯ ಪಾಷಾಣಕ್ಕೆ ದೇವನೆನ್ನುವರು. ಅದಕ್ಕೆ ಪ್ರಾಣಲಿಂಗವೆನ್ನುವರು. ಇದ್ದುದ ಇದ್ದಂತೆ ನೋಡರು, ನೋಡಲಿ ನೋಡಿದವರಿಗೆ ಅನ್ನಲು ಅರು ಹೃದಯವಿಲ್ಲವಾಗಿದೆ.

ಪ್ರಭುದೇವ ಇದ್ದುದ ಇದ್ದಂತೆ ಕಂಡು, ಇದ್ದಕ್ಕಿದ್ದ ಹಾಗೆ ನುಡಿಯುವ ಸಮರ್ಥ. ಪೂಜಾಲಿಂಗವದು, ಪೃಥ್ವಿಯ ಪಾಷಾಣ ಅನ್ನುವಷ್ಟು ದಿಟ್ಟತನ ಅದಾರಿಗೆ ಕಲ್ಲು ಕಲ್ಲ ಮೇಲೆ ಬಿದ್ದರೆ ಪೂರ್ವ ಕಳೆ ಅಲ್ಲಿ ಉಳಿಯಬಲ್ಲದೆ ? ಅದು ತನ್ನ ಲಕ್ಷಣದಿಂದ ಬದಲಾಗುತ್ತದೆ. ಹೀಗೆ ಬದಲಾಗುವುದು ಕಂಡು ಕಂಡು ಪ್ರಾಣಲಿಂಗ ಹೋಯಿತ್ತೆನ್ನುವರು, ಇವರೆಷ್ಟು ಕಾಲ ಲಿಂಗಾರ್ಚನೆ ಮಾಡಿದರೂ ಈ ಲಿಂಗವಂತರಿಗೆ ಲಿಂಗಜ್ಞಾನವಿಲ್ಲವಾಗಿದೆ. ಆವುದು ತನ್ನ ಬದಲಾಯಿಸುವುದು, ಅದು ಅಳಿವುದು ಉಳಿವುದು ಅದು ತೋರುವುದು ಮತ್ತು ತೋರದಂತಾಗುವುದು. ಇಂತಪ್ಪ ತೋರಿಕೆಯುಳ್ಳುದು ಅದು ದೇವನಾಗದು, ಎನ್ನುವಷ್ಟು ಜಡಮತೀಯರಾಗಿಹರು. ಈ ದೋಷ ಬುದ್ಧಿ ನಷ್ಟ ಮಾಡಲು ಪರಾತ್ಪರನಾದ ಜಂಗಮರೂಪಿ ಪ್ರಭುವೆ ಇವರನ್ನು ಪ್ರಶ್ನಿಸುತ್ತಿಹನು.

ಓ ನನ್ನ ಲಿಂಗಯ್ಯನ ಅನನ್ಯ ಆಸ್ತಿಕ್ಯವಂತರೆ ? ನೀನು ಲಿಂಗಯ್ಯನೆನ್ನುವುದು ಪೃಥ್ವಿಯ ಪಾಷಾಣಕ್ಕೆ ಅಲ್ಲವೆ ? ಆ ಪಾಷಾಣ ಪೃಥ್ವಿಯ ಮೇಲೆ ಬಿದ್ದರೆ ಅದು ಸ್ವಭಾವಿಕವಾಗಿ ಕೆಡುವುದು. ಅದು ಕೆಟ್ಟರೆ ಪ್ರಾಣಲಿಂಗ ಹೋಯಿತ್ತೆನ್ನುವುದು ಇದೆಂಥ ನಿಮ್ಮ ದೃಷ್ಟಿ ಅನುಭಾವ ! ಪ್ರಾಣಲಿಂಗ ಹೋದರೆ ನೀವು ನುಡಿಯುವ ಪರಿ ಎಂತು ?

ಅಂತರಂಗದಲ್ಲಿ ಪ್ರಾಣಲಿಂಗ ಸಂಬಂಧ, ಸಂಬಂಧದ ಸುದ್ದಿಯನರಿಯರಾಗಿ : ಪ್ರಾಣಲಿಂಗ ಆವುದು ಗೊತ್ತೆ ? ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನಲ್ಲಿ ಅಲ್ಲದೆ ಮತ್ತೆಲ್ಲಿಯೂ ಇಲ್ಲ, ಬಯಲ ಹಿರಿಯರು ಬಯಲನೆ ಅರಸುವುದು. ಅಲ್ಲಿ ಉಂಟೆ ಹೇಳಾ ಗುಹೇಶ್ವರಾ. ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲವು ಅದು ಪ್ರಾಣಲಿಂಗ, ಈ ಪ್ರಾಣಲಿಂಗ ಸಂಬಂಧ ಸಂಬಂಧದ ಸುದ್ದಿಯನರಿಯರು. ಈ ಪ್ರಾಣಲಿಂಗ ಸಂಬಂಧ ತನ್ನಲ್ಲಿಯೆ ನೋಡಿಕೊಳ್ಳುವುದು ಅಂದರೆ ತನ್ನಲ್ಲಿಯೆ ಅರಿಯುವುದು.

ಖಂಡ ಆವುದು ಅಖಂಡವಾವುದು ? ಇವೆರಡರೊಳಗೆ ಕೂಡದ ಅಖಂಡಿತನ ನಿಲುವು ಆವುದು ? ಖಂಡವೆಂದರೆ ತುಣುಕಾದುದು, ಬಿಡಿ, ಬಿಡಿಯಾದುದು, ಬೇರೆ, ಬೇರೆ ಆದುದು, ವಿಭಾಗವಾದುದು. ಅಖಂಡವದು ವ್ಯಾಪಕ ಆಕಾಶ, ತುಂಬಿದುದು, ಭರಿತವಾದುದು. ಕುರುಹಾಗದುದು. ಖಂಡವದು ಭೂಮಿ, ಅಗ್ನಿ, ನೀರು, ವಾಯು, ಇದು ವಿಭಾಗವು. ಅಖಂಡ ಆಕಾಶವು. ಖಂಡ ದೃಶ್ಯರೂಪವು, ಅಖಂಡ ಅದೃಶ್ಯವು. ಕುರುಹಿನಿಂದುಕ್ತವಾದುದು ಖಂಡ, ರೂಪವು ಖಂಡವು. ನಾಮರೂಪದಿಂದುಕ್ತವಾದುದು ಖಂಡವು. ನಿರೂಪವು ಅಖಂಡವು, ಅದೃಶ್ಯವು, ಅನಾಮಯವು, ಅವಿನಾಶಿಯು. ಅಕ್ಷರವು

ಅಸಂಗವು ಆದುದು ಅಖಂಡವು.

ಕ್ಷರವು ಖಂಡವು ಅಕ್ಷರವು ಅಖಂಡವು ಪುರ ಖಂಡ, ಪುರುಷ ಅಖಂಡ, ಅನಾತ್ಮ ಖಂಡ, ಆತ್ಮ ಅಖಂಡ, ನಾಶವುಳ್ಳುದು ಖಂಡವು, ಅವಿನಾಶಿ ಅಖಂಡವು. ಜಡವು ಖಂಡವು, ಚೇತನವು ಅಖಂಡವು, ಅನಿತ್ಯವು ಖಂಡವು, ನಿತ್ಯವು ಅಖಂಡವು, ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತನ ನಿಲವು ತನ್ನಲ್ಲಿ ಅಲ್ಲದೆ ಮತ್ತೆಲ್ಲಿಯೂ ಇಲ್ಲ.

ಖಂಡಾಖಂಡಕ್ಕೆ ನಿಲುಕದೆ ಅಂಟದೆ ಇವೆರಡು ಸೇರದ ಬೇರಾದ ಅಖಂಡಿತನ ನಿಲವು ತನ್ನಲ್ಲಿಯೆ ಅಲ್ಲದೆ ಮತ್ತೆಲ್ಲಿಯೂ ಇಲ್ಲವೆಂದು ತಿಳಿಸಿದಾಗ ತನ್ನಲ್ಲಿಯೆ ತಿಳಿವುದು. ಅಖಂಡಿತನ ನಿಲುವು ಅವಿಚಾರ ವಿಚಾರಕ್ಕೆ ಮೀರಿದುದು. ತನ್ನೊಳಗೆ ಇದ್ದುದ ತನ್ನಿಂದ ತಾನರಿವುದು ದೃಶ್ಯ ದೃಕ್‌ವೆಂಬೆರಡು ಅಖಂಡಿತನ ನಿಲುವು ಆಗದು. ದೃಶ್ಯ ದೃಕ್‌ವೆಂಬಿವು ಆವುದರಿಂದ ಸಿದ್ಧವಾಗುವವು ಅದು ಸ್ವತಃ ಸಿದ್ಧವಾಗಿದೆ. ಅದುವೇ ಪ್ರಾಣಲಿಂಗವು. ದೃಶ್ಯವ ದೃಕ್ ಬೆಳಗುವುದು. ದೃಶ್ಯ ದೃಕ್‌ವೆಂಬುದಕ್ಕೂ ಆವುದು ಸಮವುಳ್ಳದ್ದಾಗಿಹುದು ಅದು ಸ್ವತಃ ಸಿದ್ಧ ಬೆಳಗುಳ್ಳ ಬೆಳಗು. ಅದು ಅಖಂಡಿತನ ನಿಲುವು ಆಗಿದೆ. ಏಕೆಂದರೆ ಆವುದು ನುಡಿಗೆಡೆಗೊಡದ ಘನವಾಗಿಹುದು ಅದು ದೃಶ್ಯ ದೃಕ್ ದೃಶ್ಯ ಅದೃಶ್ಯ, ನಿತ್ಯ ಅನಿತ್ಯ, ಪೂರ್ಣ ಅಪೂರ್ಣ, ಸತ್ ಅಸತ್, ಚಿತ್ ಅಚಿತ್ ಎಂಬುದಕ್ಕೂ ಅವಕಾಶ ಕೊಡದ ಘನವಾಗಿಹುದು. ಅದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಆಗಿದೆ. ಇದುವೆ ಪ್ರಾಣಲಿಂಗದ ಸುದ್ದಿ, ಈ ಸುದ್ದಿಯನರಿವುಡೆ ಪ್ರಾಣಲಿಂಗ ತಾನೆ. ಅಕ್ಷರೇಶ್ವರ ತಾನೆ, ಅಗಣಿತ ತಾನೆ. ಇದು ತನ್ನಯ ಇರುವಿನ ಅರುವು ! ಇದು ತನ್ನಿಂದ ತಾನು ತಿಳಿವುಡೆ ಹೇಳಬಾರದ ಘನ, ತೋರಲೆಂದೇನೊ ? ತೋರಬಾರದ ಘನ ಹೇಳಲೆಂದೇನೊ ? ಎಂಬದು ತನ್ನಿಂದ ತನಗೆ ವಿದಿತವಾದಾಗ ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ ಎಂಬುದು ತನ್ನಲ್ಲಿ ಸ್ವತಃ ಸಿದ್ಧಿಸುವುದು.

ಬಯಲ ಹಿರಿಯರು ಬಯಲ ಅರಸುವರು, ಅಲ್ಲಿ ಉಂಟೆ ಹೇಳಾ ಗುಹೇಶ್ವರಾ: ಬಯಲು ಹಿರಿಯರು, ಇವರು ಇಷ್ಟಲಿಂಗದ ಘನವರಿಯದೆ ಪಾಷಾಣಕ್ಕೆ ಲಿಂಗವೆಂದು ಭಾವಿಸಿದವರು. ಇವರು ಬಯಲ ಹಿರಿಯರು. ಇವರು ಲಿಂಗ ಜ್ಞಾನವಿಲ್ಲದವರು. ಅರುವ ಅರಿಯ ಹೇಳಿ ಕುರುಹ ಕೊಟ್ಟ ಶ್ರೀಗುರು ಕಾರುಣ್ಯರೂಪಿ ಲಿಂಗ ಘನವ ಮರೆತು ಪೂಜಾಲಿಂಗ ಮಾಡಿ ಪೂಜಿಸುವವರು; ಇವರು ಬಯಲ ಹಿರಿಯರು. ಇವರು ಪೂಜಾಲಿಂಗವ ಪೂಜಿಸಿ ಪೂಜಿಸಿ ಲಿಂಗ ಘನವ ಹುಡುಕುವರು. ಅರುವಿನ ಅರುವ ಇವರೇನು ಬಲ್ಲರು. ಇದು ಕಾರಣ ಅಂತರಂಗ ಪ್ರಾಣಲಿಂಗ ಸಂಬಂಧದ ಸುದ್ದಿಯನರಿಯರಾಗಿ ಗುಹೇಶ್ವರಾ ನೀ ಮಾಡಿದ ಬೆಡಗು ಭಿನ್ನಾಣಕ್ಕೆ ನಾನು ಬೆರಗಾದೆನು.

ಓಹೊ ! ಗುಹೆಯೊಳಗಿರುವ ಒಡೆಯನೆ ? ಒಡೆಯರ ಒಡೆಯನೆ ! ನೀ ಮಾಡಿದ ಲೀಲೆ ಪ್ರಾಣಲಿಂಗವೆಂಬ ಲೀಲೆ, ಇದರ ರಹಸ್ಯ ನುಡಿಗೆಡೆಗೊಡದ ಘನದ ರಹಸ್ಯ, ಕಲ್ಪಿತವಾಗದುದ ಅದನೆಂತು ವರ್ಣಿಸುವುದು. ನೋಡಿದ ಕಣ್ಣು ಹೇಳದು, ಹೇಳದ ಮುಖದಿಂದ ಹೊರಹೊಮ್ಮಿದ ನಿನ್ನ ಸುಖದೇಕರಸವು ನೀ ಮಾಡಿದ ಬೆಡಗು ಭಿನ್ನಾಣಕ್ಕೆ ನಾನು ಚಕಿತನಾಗಿರುವೆ.

**135**

**ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನಾರು ಬಲ್ಲರು ಹೇಳಾ?**
**ಅಂತರಂಗವೆಂಬ ಶಬ್ದಕ್ಕೆ ಬಹಿರಂಗ ಮುಂದುಗೊಂಡಿಪ್ಪುದು.**
**ಬಹಿರಂಗವೆಂಬ ಶಬ್ದಕ್ಕೆ ಅಂತರಂಗ ಮುಂದುಗೊಂಡಿಪ್ಪುದು.**
**ಮನವನೆಡೆಗೊಂಡ ಲಿಂಗದ ಅರಿವು,**
**ವಿಚಾರ ವ್ಯಾಕುಲಕ್ಕೊಳಗಾಗಬಾರದೆಂದು**
**ಮನ ಭಾವ ಜ್ಞಾನ ನೋಟಕ್ಕೆ ತಂದು, ಕರಸ್ಥಲದಲ್ಲಿ ನಿಕ್ಷೇಪಿಸಿ**
**ಅಂತರಂಗ ಬಹಿರಂಗವೆಂದರಿಯದೆ, ಅನಿಮಿಷನಾಗಿಪ್ಪನು ಶರಣನು.**
**ಪ್ರಾಣಲಿಂಗದ ಪ್ರಸನ್ನ ಮುಖವ ನೋಡಿ ಪರಿಣಾಮಿಸಲೋಸುಗ**
**ತೇಜವೆಂಬ ದರ್ಪಣವ ಹಿಡಿದಿಪ್ಪ ನೋಡಯ್ಯಾ.**
**ಗುಹೇಶ್ವರಲಿಂಗದಲ್ಲಿ ನಿಜವನೆಯ್ದಿಹೆನೆಂದಡೆ,**
**ಕುರುಹುವಿಡಿದು ಕುರುಹುಗೆಡಬೇಕು ನೋಡಾ ಸಿದ್ಧರಾಮಯ್ಯಾ.** ॥ 948 ॥

**ತಾತ್ಪರ್ಯ** : *ಇಷ್ಟಲಿಂಗ, ಪ್ರಾಣಲಿಂಗವೆಂಬ ಬೇದವನಾರು ಬಲ್ಲರು ಹೇಳಾ* : ಇದರ ರಹಸ್ಯ ಬಲ್ಲವರು ಬಸವಾದಿ ಪ್ರಮಥರು. ಲಿಂಗಾರ್ಚಕರು ತಿಳಿದುದು ಬೇರೆ, ಹೊರಗೆ ತೋರುವ ಲಿಂಗ ಬಹಿರಂಗವಾಗಿದೆ. ಪ್ರಾಣ ಹೊರಗೆ ತೋರದ್ದು ದೇಹದೊಳಗೆ ಇರುವುದರಿಂದ ಪ್ರಾಣದ ನಿರೋಧವೆ ಪ್ರಾಣಲಿಂಗವಾಗಿದೆ. ಇದು ಅಂತರಂಗವಾಗಿದೆ. ಪೂಜಾ ಲಿಂಗವಿದು ಹೊರಗೆ ತೋರುವ ಇಷ್ಟಲಿಂಗ ಇದು ಬಹಿರಂಗವಾಗಿದೆ. ಪ್ರಾಣಾಯಾಮ ಅಭ್ಯಾಸದಿಂದ ಕೇವಲ ಕುಂಬಕ ಯೋಗದಿಂದ ಬ್ರಹ್ಮ ರಂದ್ರದಲ್ಲಿ ವಿಶುದ್ಧ ಚಕ್ರದಲ್ಲಿ ಪ್ರಾಣವಾಯು ತಡೆದು ನಿಲ್ಲಿಸುವುದು ಅಂತರಂಗವಾಗಿದೆ. ಸ್ಥೂಲದೃಷ್ಟಿಯಿಂದ ನೋಡಿದ ಲಿಂಗವಂತರೆ ಹೆಚ್ಚು, ಯತಾರ್ಥ ತಿಳಿದವರು ಬಹು ಕಡಿಮೆ ಇದ್ದಾರೆ.

ಇಷ್ಟಲಿಂಗ ಬಹಿರಂಗ, ಪ್ರಾಣಲಿಂಗ ಅಂತರಂಗವಾದಲ್ಲಿ, ಅಂತರಂಗವೆಂಬ ಪ್ರಾಣಲಿಂಗಕ್ಕೆ ಬಹಿರಂಗವಾಗಿಹ ಇಷ್ಟಲಿಂಗವು ಕಾರಣವಾಯಿತ್ತು. ಇಷ್ಟಲಿಂಗವಾಗಿಹ ಬಹಿರಂಗ ಕಾರ್ಯವಾದಲ್ಲಿ ಅಂತರಂಗರೂಪಿ ಪ್ರಾಣಲಿಂಗ ಕಾರಣವಾಯಿತ್ತು. ಇವು ಒಂದನ್ನೊಂದು ಅವಲಂಬಿಸಿಕೊಂಡಂತಾಯಿತ್ತು. ಇದಲ್ಲದೆ ಒಂದಾಗಿಹ ಲಿಂಗ ಎರಡಾದಂತಾಯಿತ್ತು. ಒಂದೆರೆಡೆನ್ನಲು ಬಾರದ ನುಡಿಗೆಡೆಗೊಡದ ಘನವು, ನಿರವಧಿಯಾಗಿಹ ಲಿಂಗ, ಅಂತರಂಗ, ಬಹಿರಂಗವಾಯಿತ್ತೆ ? ಅನುಪಮವಾಗಿಹ ಲಿಂಗದಿರುವು, ಈ ಕಲ್ಪಿತರ ಅರುವಿಗೆ ಅರಿಯುವುದು ಹೇಗೆ ಸಾಧ್ಯ. ಈ ಅಂತರಂಗ ಬಹಿರಂಗ ಹೋಗಬೇಕು. ಇವು ಒಂದನ್ನೊಂದು ಆಶ್ರಯಿಸಿಕೊಂಡಿಹವು. ಅಖಂಡಿತ ಲಿಂಗವದು ತೆರಹಿಲ್ಲದ ಘನವದು, ಇವರ ಬಹಿರಂಗ ದೃಷ್ಟಿಗೂ ಅವಕಾಶ ಕೊಟ್ಟುದಲ್ಲ, ಇವರ ಅಂತರಂಗವಾಗಿಹ ವಿವೇಕ ದೃಷ್ಟಿ ವಿಚಾರದೃಷ್ಟಿಗೂ ಅವಕಾಶಕೊಟ್ಟುದಲ್ಲ, ಮುನ್ನ ಮುನ್ನಲಾದುದು ತನ್ನಿಂದ ತಾನಾದುದು ಇದರ ಹಿರಿಮೆಯು ಅಪಾರವಾದುದು, ಇದು ಮನದ ಹಂಗಿಲ್ಲದ ಲಿಂಗದ ಅರಿವು, ಆವುದು ಮನಸ್ಸಿಗೆ ಅವಕಾಶಕೊಟ್ಟ ಲಿಂಗದ ಅರಿವು ಆಗಿದೆ, ಅದು ವಿಚಾರ ವ್ಯಾಕುಲಕ್ಕೊಳಗಾದುದು. ಅಲ್ಲಿ ನೆನಹು ಪ್ರಧಾನವಾಗಿದೆ. ಲಿಂಗವು ನೆನಹಿಂಗೆ ಒಳಪಟ್ಟಿದೆ.

ಸಚ್ಚಿದಾನಂದ ನಿತ್ಯಪೂರ್ಣ ಅಖಂಡ ಅಸಂಗವೆಂಬ ನೆನಹಿಂಗೆ ಒಳಪಟ್ಟು, ಸೀಮಿತವಾಗಿದೆ. ಹೀಗಾಗಬಾರದೆಂದು ಲಿಂಗದ ರಹಸ್ಯ ತಿಳಿದಿಹ ಶರಣ ಶಬ್ದ ಸೂತಕಿಯಲ್ಲ, ಸುಮನ ಸದ್‌ಭಾವ, ಸದ್‌ಜ್ಞಾನಭರಿತ ಸುಜ್ಞಾನ ತನ್ನ ಅಂತರಂಗವಾಗಿ ಕರಣಂಗಳೆ ಕೆಟ್ಟು, ಲಿಂಗ ಕರಣಂಗಳಾಗಿಹ ಮನ, ಭಾವ, ಜ್ಞಾನ, ನೋಟ, ಲಿಂಗ ನೋಟ. ಇದು ಅನುಪಮ ನೋಟ, ಅಚಲಿತ ನೋಟ, ಅಖಂಡಿತನ ನಿಲುವುಳ್ಳ ನೋಟ, ಈ ಮಹದರುವುಳ್ಳ ನೋಟದ  ಮನ, ಭರಿತಭಾವ, ಜ್ಞಾನದ ಜ್ಞಾನವಾಗಿಹ ಸುಜ್ಞಾನವ ಅಳವಡಿಸಿ, ಅಂತರಂಗ ಬಹಿರಂಗವೆಂಬುದನರಿಯದೆ ಅನಿಮಿಷನಾಗಿಪ್ಪ ನಾ ಶರಣನು.

ಅನಿಮಿಷನಾಗಿಪ್ಪ ಶರಣನ ಹಿರಿಮೆ ಮನವೆ ಲಿಂಗವಾದ ಬಳಿಕ ನೆನೆವುದಿನ್ನಾರನಯ್ಯ, ಭಾವವೆ ಐಕ್ಯವಾದ ಬಳಿಕ ಬಯಸುವದಿನ್ನಾರನಯ್ಯ ಭ್ರಮೆಯಳಿದು ನಿಜವು ಸಾಧ್ಯವಾದ ಬಳಿಕ ಅರಿವುದಿನ್ನಾರನಯ್ಯ ಗುಹೇಶ್ವರ. ಮನವದು ಲಿಂಗ, ಭಾವವದು ನಿರ್ಭಾವ, ಜ್ಞಾನವದು, ನಿಜವರಿತು ನಿಜವೆನ್ನದಿಹ ಜ್ಞಾನ. ಇದನೆಂತುಪಮಿಸುವುದು ? ಎಲ್ಲರಂಥ ಶರಣ ಈತನಲ್ಲ, ಅರಿತ ಶರಣರು ಸಿಕ್ಕಬಹುದು, ಪೂಜಾಲಿಂಗಿಗಳಾಗಿಹ ಶರಣರು ಸಿಕ್ಕುವರು, ಅರಿಯದರುವುಳ್ಳ ಶರಣ ಸಿಕ್ಕುವುದು ವಿರಳ. ಈ ಮಹಾಂತನ ಮನ, ವರ್ಣಾತೀತ ಮನ, ಕೇವಲ ಜ್ಯೋತಿಯಾಗಿಹ ಘನಕ್ಕೆ ಘನವು ; ಇದಕ್ಕೇನನ್ನಬೇಕು? ಲಿಂಗವರಿಯ ಹೋಗಿ ಘನಕ್ಕೆ ಘನವಾದುದು. ಭಾವವೆ ಐಕ್ಯವಾದುದಕ್ಕೇನನ್ನಬೇಕು ? ಜ್ಞಾನ ನಿರುಪಮ ನಿಲುವುಳ್ಳದ್ದಾದುದಕ್ಕೇನನ್ನಬೇಕು, ಇದು ಕಾರಣ ಲಿಂಗ ಮೌನವಾದರೆ ತಾನು ಮೌನದ ಮೌನವಾಗಿಹ ಅನಿಮಿಷನಾಗಿಹ ಶರಣ. ಈ ಮಹಾಂತನ ಹೃದಯ ಹೃದಯದ ಹೃದಯವಾಗಿಹ ಬಚ್ಚ ಬರಿಯ ಅರಿವು. ಅದನೆಂತು ಉಪಮಿಸುವುದು. ನೆನೆವ ಮನವ ಉಪಮಿಸಬಹುದು, ನೆನೆಯದ ಮನ ಮನವೆ ಲಿಂಗವಾಗಿಹ ಮನ, ಅದನೆಂತು ಉಪಮಿಸುವುದು. ಬಯಸುವ ಭಾವ, ವರ್ಣಿಸಬಹುದು. ಬಯಕೆಯೆ ನಷ್ಟವಾಗಿಹುದು, ಅಲ್ಲಿ ಭಾವಕ್ಕಿಂಬುಂಟೆ ? ಭರಿತ ಭಾವ ಅದಕ್ಕಾವ ಭಾವವೆನಬೇಕು ? ಕಲ್ಪಿತವನ್ನೆ ಕೆಡಿಸಿದ ಜ್ಞಾನಕ್ಕೆ ಅದಾವ ಜ್ಞಾನವೆನಬೇಕು, ಪ್ರಾಣಲಿಂಗಿಯಾಗಿಹ ಘನ ಮಹಿಮ. ಎಡೆಯಿಲ್ಲದ ಪರಿಪೂರ್ಣ, ಅಗಣಿತ, ಅಕ್ಷರೇಶ್ವರನ ಉಪಮೆಗೆ ತರಬಾರದು ನೋಡಾ.

ಪ್ರಾಣಲಿಂಗದ ಪ್ರಸನ್ನ ಮುಖವ ನೋಡಿ, ಪರಿಣಾಮಿಸಲೋಸುಗರ ತೇಜವೆಂಬ ದರ್ಪಣವ ಹಿಡಿದಿಪ್ಪ ನೋಡಯ್ಯ, ಗುಹೇಶ್ವರ ಲಿಂಗದಲ್ಲಿ ನಿಜವ ನೆಯ್ದಿಹನೆಂದಡೆ ಕುರುಹುವಿಡಿದು ಕುರುಹ ಕೆಡಬೇಕು ನೋಡಾ ಸಿದ್ಧರಾಮಯ್ಯ. ಪ್ರಾಣಲಿಂಗವದು ಪ್ರಸನ್ನ ಮುಖ ಈ ಪರಾನಂದ ಪರಮಾಮೃತರೂಪಿ ಮುಖ, ಈ ಮುಖ ನೋಡುವುಡೆ ಪರಮಶಾಂತಿ, ನಿಶ್ಚಿಂತತೆ ತೃಪ್ತರೂಪ ತೃಪ್ತಿ, ಇದು ಅಪರಿಮಿತ ಆನಂದವಾಗಲು, ಲಿಂಗರೂಪಿ ತೇಜವೆಂಬ ದರ್ಪಣವ ಹಿಡಿದಿಪ್ಪ ನೋಡಯ್ಯ.

ಬಸವಾದಿ ಪ್ರಮಥರು ಹಿಡಿದಿರುವ ಕರವು ಬೇರೆ, ಲಿಂಗವೆಂಬ ತೇಜವು ಬೇರೆ ಇವರು ಹಿಡಿದುದು ಬೇರೆ, ಪೂಜಾಲಿಂಗವ ಹಿಡಿದಿಹ ಕರವು ಬೇರೆ ಲಿಂಗವು ಬೇರೆ, ಅವರ ದೃಷ್ಟಿಗೂ ಇವರ ದೃಷ್ಟಿಗೂ ಬಹು ಅಂತರ. ಹಿಡಿವ ಕೈ ಮೇಲೆ ಕತ್ತಲೆ, ನೋಡುವ ಕಂಗಳ ಮೇಲೆ ಕತ್ತಲೆ ನೆನೆವ ಮನದ ಮೇಲೆ ಕತ್ತಲೆ, ಕತ್ತಲೆಯೆಂಬುದು ಇತ್ತಲೆಯಯ್ಯ; ಗುಹೇಶ್ವರನೆಂಬುದು ಅತ್ತಲೆಯಯ್ಯ.

ಬಸವಾದಿ ಪ್ರಮಥರ ಕೈ ಎತ್ತ ಇವರ ಕೈ ಎತ್ತ ? ಇವರದು ಭ್ರಾಂತಿ ಕೈ, ಅವರದು ಬ್ರಹ್ಮವಾಗಿಹ ಕೈ. ಇವರದು ಹಿಡಿಯುವ ಕೈ, ಅವರದು ಹಿಡಿಯದಿಹ ಕೈ. ಇದು ಸುಜ್ಞಾನವಾಗಿಹ ಕೈ, ಇವರದು ಅಜ್ಞಾನ ಕೈ, ರಕ್ತಮಾಂಸ ಎಲುಬುಗಳಿಂದುಕ್ತವಾದ ಕೈ, ಇವರದು ಚರ್ಮಚಕ್ಷು, ಅವರದು ದಿವ್ಯ ಚಕ್ಷು, ಇವರದು ನೋಡುವ ನೋಟ, ಎರಡಾಗಿ ಕಾಣುವ ನೋಟ. ಅವರದು ಒಂದಾಗಿ ಕಾಣುವ ನೋಟ. ಅಂಗ ಲಿಂಗವಾಗಿ ನೋಡುವ ನೋಟವೆತ್ತ ? ಲಿಂಗಕ್ಕೆ ಲಿಂಗವಾಗಿ ನೋಡುವ ನೋಟವೆತ್ತ ? ನೆನೆಯುವ ಮನವಾದುದು ಎತ್ತ ? ಘನಮನವಾದುದೆತ್ತ ? ಮನ ಬೇರೆ, ಲಿಂಗ ಬೇರಾದುದೆತ್ತ ? ಮನವೆ ಲಿಂಗವಾದುದೆತ್ತ ? ಇವರು ಹಿಡಿದುದು ಕುರುಹು, ಪೂಜಾಲಿಂಗ ಅವರದು ಅನುಪಮ ತೇಜ, ಅಖಂಡ ತೇಜ, ಅಚಲಿತ ತೇಜ, ಇದು ಜ್ಞಾನ ತೇಜ, ಅರುವಿಂಗರುವಾಗಿಹ ಜ್ಞಾನ ತೇಜ, ಕುರುಹೆಂಬುದೆತ್ತ ತೇಜವೆಂಬುದೆತ್ತ ? ಜಡವೆಂಬುದೆತ್ತ ಚೈತನ್ಯವೆಂಬುದೆತ್ತ ನಾನೀನೆಂಬುವುದೆತ್ತ ನಾನೀನೆಂಬುದಕ್ಕೆಡೆಗೊಡದುದೆತ್ತ. ನಾನೀನಾದುದೆತ್ತ ನಾನೀಕರಗಿದುದೆತ್ತ ? ಇದು ಕಾರಣ ಇವರು ಇತ್ತಲೆಯಯ್ಯ, ಅವರು ಗುಹೇಶ್ವರದತ್ತಲೆಯಯ್ಯ ಎಂದು ಹೇಳಿಹರು.

ಪ್ರಮಥರು ಹಿಡಿದುದು ಪ್ರಸನ್ನ ಮುಖರೂಪಿ ಲಿಂಗವ ಕಂಡು ಪರಮಶಾಂತರಾದರು. ಅವರದು ಚೈತನ್ಯರೂಪಿ ಲಿಂಗವ ಹಿಡಿಯಲು ಸುಜ್ಞಾನಿಗಳಾದರು. ಸುಜ್ಞಾನಿಗಳಾದಲ್ಲಿ, ಲಿಂಗಘನವಾದರೆ ತಾವು ಲಿಂಗ ತಿಳಿಯಹೋಗಿ ಘನಕ್ಕೆ ಘನವಾದ ಅಗಣಿತರು, ಅಕ್ಷರೇಶ್ವರರು, ನಿರುಪಮರಾದುದರಿಂದ ಪರಮ ಸುಖದಲ್ಲಿರುವ ಲೋಸುಗ ತೇಜವೆಂಬ ದರ್ಪಣವ ಹಿಡಿದಿಪ್ಪ ನೋಡಯ್ಯ ಎಂದು ಹೇಳಿಹರು.

ಗುಹೇಶ್ವರ ಲಿಂಗದಲ್ಲಿ ನಿಜವನೆಯ್ದಿಹೆನೆಂದಡೆ ಕುರುಹುವಿಡಿದು ಕುರುಹ ಕೆಡಬೇಕು ನೋಡಯ್ಯ ಸಿದ್ಧರಾಮಯ್ಯ. ಬಹು ಲಿಂಗವಂತರಿಗೆ ಕುರುಹುಳ್ಳಲಿಂಗವಿಹುದು. ಇದು ನಾವು ಏಕೆ ಧರಿಸಿದುದು ಎಂಬ ಪರಿಜ್ಞಾನವಿಲ್ಲ, ನಿಜವ ಸಂಪಾದಿಸಲು ಗುರು ಕಾರುಣ್ಯವ ಧರಿಸಿದುದು, ಗುರುಕರುಣವೆ ಲಿಂಗವೆಂದು ಹೇಳಿಹರು. ಲಿಂಗವ ಕರುಣಿಸಲು ಗುರುವಿನ ಗುರು ಶ್ರೀಗುರು ಈ ಮಹಾಂತ ಸತ್ ಗುರು, ಈತನ ಕಾರುಣ್ಯ ಪಡೆಯಲು ಸತ್ ಶಿಷ್ಯ ಇವರೀರ್ವರಲ್ಲಿ, ಇವರೀರ್ವರ ಮಧ್ಯದಲ್ಲಿದ್ದ ವಸ್ತು, ಅದು ಪ್ರಜ್ವಲಿಸುವುದು, ಅದುವೆ ಗುಹೇಶ್ವರ ಲಿಂಗವು, ಅಂತಪ್ಪ ಗುಹೇಶ್ವರ ಲಿಂಗದಲ್ಲಿ ನಿಜವ ಸಂಪಾದಿಸಲು, ಕುರುಹವಿಡಿದು ಕುರುಹ ಕೆಡಬೇಕು, ಅರುವಿಡಿದು ಅರುವ ಕೆಡಬೇಕು. ಜ್ಞಾನವಿಡಿದು ಜ್ಞಾನ ಕೆಡಬೇಕು, ಹೆತ್ತರಿವು ಕೆಡಬೇಕು. ಹೆತ್ತರಿವು ಹಿಡಿದು, ಅದು ನಾಷವಾಗಬೇಕು. ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಗುರುವೆಂಬುದು ಕಲ್ಪಿತ, ಲಿಂಗವೆಂಬುದು ಕಲ್ಪಿತ, ಕಲ್ಪಿತಕ್ಕೆ ಅರುವಹುದೆ, ತನ್ನಿಂದರಿದ ಅರುವು ಅರುವು ಗುಹೇಶ್ವರಾ. ಎಂದು ಬಿತ್ತರಿಸಿದುದು ನೋಡುವುಡೆ ಕುರುವಿಡಿದು ಕುರುಹ ಕೆಡಬೇಕು ಎಂದಲ್ಲಿ, ನಿಜ ಸಂಪಾದಿಸಿದುದು ಕುರುಹವಿಡಿದು ಕುರುಹ ಕೆಟ್ಟ ಸೂಚನೆಯಾದುದು. ಗುರುವಿಡಿದ ಅರುವಿನಿಂದಾಗಲಿ, ಲಿಂಗವಿಡಿದ ಅರುವಿನಿಂದಾಗಲಿ ನಿಜವ ಸಂಪಾದಿಸಿದುದು ಹಂಗಿನ ಸಂಯೋಗವಾಗುವುದು. ತನ್ನಿಂದ ತನ್ನಲ್ಲಿ ಲೀಯವಾದುದು ಹಂಗಿಲ್ಲದ ಸಂಯೋಗವಾಗುವುದು. ಇದು ನಿಜವನೆಯ್ದಿದುದರಿಂದ ಹಂಗಿಲ್ಲದ ಸಂಯೋಗವಾದುದರಿಂದ

ಕುರುಹುವಿಡಿದು ಕುರುಹು ಕೆಡಬೇಕು ಎಂದು ಹೇಳಿಹರು.

**136**

**ಭಕ್ತಿಯೆಂಬುದು ಯುಕ್ತಿಯೊಳಗು, ಪೂಜೆಯೆಂಬುದು ನಿರ್ಮಾಲ್ಯದೊಳಗು.**
**ಪ್ರಸಾದವೆಂಬುದು ಓಗರದೊಳಗು, ಆಚಾರವೆಂಬುದು ಅನಾಚಾರದೊಳಗು.**
**ಧರ್ಮವೆಂಬುದು ಅಧರ್ಮದೊಳಗು, ಸುಖವೆಂಬುದು ದುಃಖದೊಳಗು.**
**ವ್ರತವೆಂಬುದು ವೈರಾಗ್ಯದೊಳಗು, ನೇಮವೆಂಬುದು ಉದ್ದೇಶದೊಳಗು.**
**ಅಹಿಂಸೆಯೆಂಬುದು ಹಿಂಸೆಯೊಳಗು!- ಇವಾವಂಗವೂ ಇಲ್ಲದೆ**
**ಗುಹೇಶ್ವರಾ ನಿಮ್ಮ ಶರಣ ಸುಖಿಯಾಗಿರ್ದನು.** ॥ 522 ॥

**ತಾತ್ಪರ್ಯ** : ಲಿಂಗಾಂಗ ಸಮರಸ ಜ್ಞಾನಿ ಭಕ್ತರು. ಅಂಗ ಬೇರೆ ಲಿಂಗ ಬೇರೆಂಬ ಪೂಜ್ಯ ಪೂಜಕ ಭಾವಿಕ ಭಕ್ತರು, ಇವರು ಭೇದ ಜ್ಞಾನಿಗಳು. ಇವರಿಗೂ ಅವರಿಗೂ ಬಹು ಅಂತರವಿದೆ. ಬೇಧಜ್ಞಾನವುಳ್ಳ ಭಕ್ತರ ದೃಷ್ಟಿಗೆ ದೇವನು ಅಂಗವುಳ್ಳವನು. ಭಕ್ತರು ಅಂಗವುಳ್ಳವರು ಇವರು ಕಲ್ಪಿತರು. ದೇವನು ಕಲ್ಪಿತನು. ಕಲ್ಪಿತರ ಆಚಾರ ಭಕ್ತಿಗೂ ಶರಣರ ಆಚಾರ ಭಕ್ತಿಗೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸವು. ಕಲ್ಪಿತರ ಭಕ್ತಿ, ಯುಕ್ತಿಯೊಳಗು ಯುಕ್ತಿಗೊಳಗಾದ ಭಕ್ತಿ ಇದು ಭಾವ ಭ್ರಮಿತರ ಭಕ್ತಿ, ಸ್ವಾಮಿ ಸೇವಕನಾಗಿಹ ಭಕ್ತಿ.

ಯುಕ್ತಿಗೊಳಗಾದ ಭಕ್ತಿ ಹೀಗಿದೆ ತ್ವಂ ಪದಕ್ಕೆ ಸಾಕ್ಷಿಯಾದಾತ್ಮನೆ ತತ್ವದ ಲಕ್ಷ್ಯನು. ತತ್ವಪದಕ್ಕೆ ಲಕ್ಷ್ಯವಾದ ಪರಮಾತ್ಮನೆ ತ್ವಂ ಪದ ಲಕ್ಷ್ಯನು. ಈ ದೇಹದಲ್ಲಿ ಬೆಳಗುವ ಆತ್ಮನೆ ಬ್ರಹ್ಮಾಂಡಕ್ಕೆ ಬೆಳಗುವವನಾಗಿದ್ದಾನೆ. ಬೆಳಗುವ ತತ್ವಮಾತ್ರ ಒಂದು ಎಂದು ಭೇದ ಬಾಧಾಪಡಿಸಿ, ಅಭೇದ ಸಾಧಿಸುವುದೆ ಈ ಭಕ್ತಿ ಯುಕ್ತಿಯೊಳಗು ಇಲ್ಲಿ ತಿಳಿಸಿಕೊಳ್ಳುವ ಅನಾತ್ಮವ ಬೇರ್ಪಡಿಸಿ ದೃಕ್ ರೂಪವಾದ ಅಸ್ತಿ, ಭಾತಿ, ಪ್ರಿಯವ ಅಪ್ಪಿಕೊಳ್ಳುವುದು. ಇದೇ ರೀತಿಯಾಗಿ ಬ್ರಹ್ಮಾಂಡವೆಂಬ ಮಾಯಿಕವು ತಿಳಿಸಿಕೊಳ್ಳುವುದಾಗಿದೆ. ಅದಕ್ಕೆ ಬೇರಾಗಿರುವ ಲಕ್ಷ್ಯರೂಪ ಪರಬ್ರಹ್ಮವೆ ನಿಜವಾದುದು ಎಂದು ಒಪ್ಪಿಕೊಳ್ಳುವುದು.

ಪೂಜೆಯೆಂಬುದು ನಿರ್ಮಾಲ್ಯದೊಳಗು : ಈ ಪೂಜೆ ಅಂಗಾಂಗಗಳ ನಿರ್ಮಲ ಮಾಡುವ ಪೂಜೆ, ದೇವನನ್ನು ಕಾರ್ಯಬ್ರಹ್ಮನೆಂದು ತಿಳಿದು ಮಾಡುವ ಪೂಜೆ ಮೂರ್ತಿಪೂಜೆ, ಸಾಕಾರ ಮೂರ್ತಿಯ ಅಭ್ಯಂಗಸ್ನಾನ ಮಾಡಿಸಿ ನಿರ್ಮಲಗೊಳಿಸುವುದಲ್ಲದೆ, ನಿರ್ಮಲಗೊಳಿಸಲು ಶುದ್ಧಿಗಾಗಿ ಉಪಯೋಗಿಸುವ ಆರು ದ್ರವ್ಯಗಳು ಗೋಮಯ, ಗೋಕ್ಷೀರ, ಗೋಘೃತ, ಗೋಮೂತ್ರ ಗೋದಧಿ ಗೋರೋಜನ ಇವುಗಳಿಂದ ಶುದ್ಧಗೊಳಿಸುವುದು.

ಪ್ರಸಾದವೆಂಬುದು ಓಗರದೊಳಗು : ಶುದ್ಧಪ್ರಸಾದ, ಸಿದ್ಧಪ್ರಸಾದ, ಗುರುಪ್ರಸಾದ, ಲಿಂಗಪ್ರಸಾದ, ಜಂಗಮ ಪ್ರಸಾದ, ಆಕಳ ಹಾಲು, ಆಕಳ ತುಪ್ಪ, ಆಕಳ ಮೊಸರು ಸಕ್ಕರೆ ಜೇನುತುಪ್ಪ ಫಲಾಹಾರ ಸಾತ್ವಿಕ ಆಹಾರ. ಇವುಗಳನ್ನು ಮನಶುದ್ಧಿ ಇಂದ್ರಿಯಂಗಳ ಶುದ್ಧಿಗಾಗಿ ಸೇವಿಸುವುದು. ಗುರುವಿಂಗೆ ತನುವರ್ಪಿಸಿ ಗುರುವಿನ ಜ್ಞಾನದಲ್ಲಿರುವುದು. ಆ ಜ್ಞಾನದಲ್ಲಿ ತಲ್ಲೀನನಾಗುವದು, ಇದು ಗುರುಪ್ರಸಾದ. ಮನಕ್ಕೆ ಲಿಂಗದರುವ ಕೊಟ್ಟು ಅರುವಿನ ಮನ

ಮಾಡುವುದು ಸಿದ್ಧಪ್ರಸಾದವು. ಧನ ಜಂಗಮಕ್ಕರ್ಪಿಸಿ ಜಂಗಮನ ಅರುವಿನಲ್ಲಿರುವುದು ಪ್ರಸಿದ್ಧ ಪ್ರಸಾದವು. ಜ್ಞಾನ ಪ್ರಸಾದವ ಬಿಟ್ಟು, ಗುರು ಊಟ ಮಾಡುವುದು ಬಿಟ್ಟದು ಶೇಷಪ್ರಸಾದವೆಂದು ಅನ್ನವ ಸ್ವೀಕರಿಸುವುದು. ಲಿಂಗಕ್ಕೆ ನೈವೇದ್ಯ ಮಾಡಿದುದು ಲಿಂಗ ಪ್ರಸಾದವೆಂದು ಜಂಗಮನು ಊಟಮಾಡಿ ಉಳಿದುದು ಜಂಗಮ ಪ್ರಸಾದವೆಂದು, ಅನ್ನವೆ ಇವರಿಗೆ ಪ್ರಸಾದವಾಯಿತಲ್ಲದೆ ಜ್ಞಾನ ಪ್ರಸಾದವಾಗಲಿಲ್ಲ,

ಆಚಾರವೆಂಬುದು ಅನಾಚಾರದೊಳಗು : ಆಚಾರವಂತನು ಎಂದಲ್ಲಿ ಪೂರ್ವದಲ್ಲಿ ಅನಾಚಾರಿಯಾಗಿದ್ದವನು ಎಂಬುದು ಸಿದ್ಧವಾಗುವುದು. ಆಚಾರವದು ಸತ್ಯ ಸದಾಚಾರ, ಸನ್ಮಾರ್ಗ ಸದ್ವರ್ತನೆವಿಡಿದು ನಡೆವುದು. ಈ ಆಚಾರ ಮಾಡುವಲ್ಲಿ ಪೂರ್ವದಲ್ಲಿ ಅನಾಚಾರದ ವರ್ತನೆಯಾಗಿಹ ಅಸತ್ಯ, ಅನಾಚಾರ ದುರ್ಮಾರ್ಗ ದುಷ್ಕವರ್ತನೆಯಲ್ಲಿದ್ದು, ಈಗ ಅವುಗಳಿಂದ ಬಿಡುಗಡೆಯಾಗಿ ಸದ್ವರ್ತನೆಯಲ್ಲಿ ಇದ್ದವನು ಎಂಬುದು ಸಿದ್ಧವಾಗುವುದು. ಮೊದಲು ಭೋಗಿಯಾಗಿದ್ದು, ಈಗ ತ್ಯಾಗಾಂಗಿಯಾಗಿಹನು ಎಂಬುದು ಸಿದ್ಧವಾಗುವುದು.

ಧರ್ಮವೆಂಬುದು ಅಧರ್ಮದೊಳಗು : ಇಲ್ಲಿ ಹಿಡಿವುದು, ಬಿಡುವುದು ಇದೆ. ಪೂರ್ವದಲ್ಲಿ ಅಧರ್ಮಿಯಾದವನು ಅದನ್ನು ತ್ಯಜಿಸಿ ಈಗ ಧರ್ಮಾತ್ಮನಾದುದು ಮೊದಲು ಅಂಗಭಾವಿಯಾದವನು. ಅದನ್ನು ತ್ಯಜಿಸಿ ಲಿಂಗಭಾವಿಯಾದುದು, ಮರವಿನಲ್ಲಿ ಜಡದೇಹತಾನೆನ್ನುವವನು ಈಗ ಈ ದೇಹ ನಾನಲ್ಲ, ದೇಹಾದಿ ಧರ್ಮಂಗಳು ನಾನಲ್ಲ, ಇದಕ್ಕೆ ಬೇಕಾಗಿರುವ ಸೋಹಂ ನಾನಿದ್ದೇನೆ. ಈಗ ಸೋಹಂ ಎಂಬುದು ಅಂತರಂಗ ಮದವೆನಿಸಿ ಅದು ಅಧರ್ಮವಾಗಿ ದಾಸೋಹಂ ಭಾವಿಯಾಗಿ ಧರ್ಮಾತ್ಮನೆನಿಸುವನು. ಇವು ಒಂದನ್ನೊಂದು ಅಪೇಕ್ಷ ಮಾಡಿಬಂದವುಗಳು ಅದಕ್ಕಾಗಿ ಧರ್ಮವೆಂಬುದು ಅಧರ್ಮದೊಳಗು ಎಂದು ಹೇಳಿಹರು.

ಸುಖವೆಂಬುದು ದುಃಖದೊಳಗು : ದುಃಖಿಯಾಗಿಯೆ ಸುಖವ ಬಯಸುತ್ತಿಹನು. ದುಃಖವೆಂಬುದು ಮರವಿನಿಂದುಕ್ತವಾದುದು, ಮರವಿನಲ್ಲಿ ತೋರುವ ದುಃಖವ ಕಳೆದುಕೊಳ್ಳುವ ಸಾಧನ ದ್ವಾರಾ ಸಿಗುವ ಸಾತ್ವಿಕ ವೃತ್ತಿಯಲ್ಲಿ ತೋರುವ ಸುಖವು ಬರ ಹೋಗುವ ಸುಖವು, ಈ ಸುಖವು ನಿಜ ಸುಖವಲ್ಲ, ಮನವು ಅಧೋ ಮುಖವುಳ್ಳದ್ದಾಗಿ ಇಂದ್ರಿಯ ಜನ್ಯ ವಿಷಯೋಪಬೋಗದಲ್ಲಿ ರಮಿಸಲು ಕ್ಷಣ ಸುಖ ತೋರಿ ಹಿಂದಿನಿಂದ ಮಹಾದುಃಖಿಯಾಗುವನು. ಅದೆ ಮನವು ವಿವೇಕ ವೈರಾಗ್ಯದಿಂದುಕ್ತವಾಗಿ ಸಾತ್ವಿಕ ವೃತ್ತಿಯುಳ್ಳದ್ದಾಗಲಿ, ಆ ದುಃಖವು ದೂರಾಗಿ ಪುನಃ ಸುಖವು ತೋರುವುದು. ಇದು ಕಾರಣ ಸುಖವೆಂಬುದು ದುಃಖದೊಳಗು ಎಂದು ಹೇಳಿಹರು.

ವ್ರತವೆಂಬುದು ವೈರಾಗ್ಯದೊಳಗು : ಯಮ ನಿಯಮಂಗಳ ಪಾಲಿಸುವುದು ವ್ರತವು. ಯಮವದು ಸತ್ಯ, ಅಹಿಂಸೆ, ಬ್ರಹ್ಮಚರ್ಯ ಆಸ್ತೇಯ ಅಪರಿಗ್ರಹ ಇವುಗಳ ಆಚರಿಸುವುದು ಯಮವೆನಿಸುವುದು. ಶುಚಿ ಸಂತೋಷ ತಪಸ್ಸು ಸ್ವಾಧ್ಯಾಯ ಈಶ್ವರಿ ಪ್ರಣಿಧಾನ, ಇವು ನಿಯಮಂಗಳೆನಿಸುವವು. ಇವುಗಳ ಪಾಲಿಸಲು ವೈರಾಗ್ಯವು ಮುಖ್ಯವಾದವು. ಅಷ್ಟಾಂಗಗಳ ಸಾಧಿಸುವುದು. ವ್ರತವಾಗಿರುವುದು, ಆಸನ ಪ್ರಾಣಾಯಾಮ, ಪ್ರತ್ಯಾಹಾರ ಧಾರಣ ಧ್ಯಾನ ಸಮಾಧಿ ಈ ಎಂಟು ಅಂಗಗಳು ಸಾಧಿಸಲು ಸಾಧನೆ ಮುಖ್ಯವು. ಸಾಧನೆ ಮಾಡಲು ವೈರಾಗ್ಯವು ಮುಖ್ಯವು, ಕಲ್ಪಿತ ಪುರುಷ ತಾನು ಎಂಬುದು ಆರಲ್ಲಿ ದೃಢವಾಗಿದೆ. ಅವನು

ವ್ರತವುಳ್ಳವನಾಗುವುದು ಸಹಜವು. ಇತ್ತ ವರ್ಣಾಶ್ರಮಿಯಾಗುವುಗದು ವ್ರತವು. ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಸನ್ಯಾಸಿ ಎಂಬ ಆಶ್ರಯಂಗಳ ಆಚರಿಸುವುದು ವ್ರತವು ಇವುಗಳು ಆಚರಿಸಲು ವೈರಾಗ್ಯವು ಮುಖ್ಯವು. ಇದಲ್ಲದೆ ತಾನು ಬ್ರಾಹ್ಮಣ, ಕ್ಷತ್ರಿ, ವೈಶ್ಯ, ಶೂದ್ರನೆಂದು ಭಾವಿಸಿ ವರ್ಣಂಗಳ ಒಪ್ಪಿಕೊಂಡು ಪಾಲಿಸುವುದು ವ್ರತವು. ಇವುಗಳ ನಿಯಮಂಗಳ ಪಾಲಿಸಲು ವೈರಾಗ್ಯವು ಮುಖ್ಯವಾದುದು. ಇದಲ್ಲದೆ ಇವುಗಳಲ್ಲಿ ತ್ಯಾಗಾಂಗ, ಭೋಗಾಂಗ , ಯೋಗಾಂಗವು ಮುಖ್ಯವು. ಇವುಗಳ ಪಾಲಿಸಲು ವೈರಾಗ್ಯ ಪ್ರಧಾನವಾದುದು, ಅದಕ್ಕಾಗಿ ವ್ರತವೆಂಬುದು ವೈರಾಗ್ಯದೊಳಗು ಎಂದು ಹೇಳಿಹರು.

ನೇಮವೆಂಬುದು ಉದ್ಯೋಗದೊಳಗು : ಪತ್ರೆನೇಮದವರು, ಲಿಂಗಾರ್ಚನೆಯ ನೇಮದವರು, ಜಂಗಮ ತೃಪ್ತಿಯ ನೇಮದವರು, ಅರ್ಪಣ ನೇಮದವರು, ಮಡಿ ನೇಮದವರು, ವಾರದ ನೇಮದವರು, ಅಮವಾಸಿ ನೇಮದವರು, ಈ ನೇಮಂಗಳ ಪಾಲಿಸಲು ಉದ್ಯೋಗವು. ಉದ್ಯೋಗ ಅರ್ಥಾತ ಕಾಯಕ ಮಾಡದ ವಿನಃ ನೇಮಂಗಳು ಸಿದ್ಧಿಸವು. ಪೂರ್ವದಲ್ಲಿ ಶರಣರು ಕಾಯಕಕ್ಕೆ ಬಹು ಪ್ರಧಾನತೆ ಕೊಟ್ಟಿಹರು. ಸಕಲ ಶರಣರು ನಿರುದ್ಯೋಗಿಗಳಲ್ಲ ಉದ್ಯೋಗವಂತರು. ಕರ್ತವ್ಯ ನಿಷ್ಠರು, ಆಲಸಿಗಳು ಆಗಲಿಲ್ಲ, ಆಚಾರ ಮುಖ್ಯವಾದುದರಿಂದ ಉದ್ಯೋಗರತರು. ಶರಣರ ಉದ್ಯೋಗಕ್ಕೂ ಲೌಕಿಕರ ಉದ್ಯೋಗಕ್ಕೂ ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸ. ಶರಣರ ಉದ್ಯೋಗ ಬೆಳಕು, ಇವರ ಉದ್ಯೋಗ ಕತ್ತಲು, ಅನರ್ಪಿತ ಉದ್ಯೋಗ ಕತ್ತಲು, ಅರ್ಪಿತ ಉದ್ಯೋಗ ಬೆಳಕು, ಇವರದು ಅಜ್ಞಾನದಿಂದುಕ್ತವಾದುದು ಅವರದು ಸುಜ್ಞಾನದಿಂದುಕ್ತವಾದುದು.

ಅಹಿಂಸೆ ಎಂಬುದು ಹಿಂಸೆಯ ಒಳಗು : ಅಹಿಂಸೆ ಸಿದ್ಧಿಸಬೇಕಾದರೆ, ಹಿಂಸೆ ಆಗಿಯೆ ಸಿದ್ಧಿಸುವುದು. ಅನ್ಯದವರಿಗೆ ಹಿಂಸೆ ಮಾಡಬಾರದೆಂದಲ್ಲಿ ತನಗೆ ಸಾಕಷ್ಟು ತೊಂದರೆಯಾಗಿಯೆ ಹಿಂಸೆಯಾಗಿಯೆ ಅಹಿಂಸೆ ಸಿದ್ಧಿಸುವುದು. ಅನ್ಯರು ತನ್ನನ್ನು ಹಿಂಸಿಸಿದರೂ ತಾನು ಕಾಯದಿಂದ ವಾಣಿಯಿಂದ ಮನಸ್ಸಿನಿಂದ ಹಿಂಸೆ ಮಾಡದೆ ಅವರಿಗೆ ದಯೆ ತೋರುವುದೆ ಅಹಿಂಸೆಯಾಗುವುದು. ಈ ಅಹಿಂಸೆ ಸಿದ್ಧಿಸಲು ಮಹಾತ್ಮಾಗಾಂಧಿ ಯೇಸುಕ್ರಿಸ್ತರಿಗೆ ಸಿಕ್ಕಷ್ಟು ಹಿಂಸೆ ಕೊಟ್ಟರು. ಕೊಟ್ಟರೂ ಅವರಿಗೆ ದಯೆ ತೋರಿದರು. ಅದಕ್ಕಾಗಿ ಅವರಲ್ಲಿ ಅಹಿಂಸೆ ಸಿದ್ಧಿಸಿತ್ತು.

ಮನು ಮುನಿಗಳು ತಮ್ಮ ತಪವ ಸಿದ್ಧಿಸಲು ತಮ್ಮ ಶರೀರಕ್ಕೆ ತಾವೆ ಹಿಂಸೆ ಕೊಟ್ಟು ತಪವ ಸಾಧಿಸಿಹರು. ಅವರ ಬಹಿರ ಇಂದ್ರಿಯಂಗಳು ಅಂತರ ಇಂದ್ರಿಯಂಗಳು, ನಿಗ್ರಹದಲ್ಲಿ ಶಮೆಯಲ್ಲಿ, ಜಪದಲ್ಲಿ, ಅನುಷ್ಠಾನದಲ್ಲಿಯೇ ಇಡೀ ಅವರ ಬಾಳಿನ ಉದ್ದಕ್ಕೂ ದಿನ ನಿತ್ಯದ ಕರ್ತವ್ಯವಾಗಿಯೆ ಸಾತ್ವಿಕ ವೃತ್ತಿಯವರಾಗಿ ಜಗತ್ಪೂಜ್ಯರೆನಿಸಿಕೊಂಡಿಹರು, ಇವರಿಗೆ ಅಹಿಂಸಾ ಪಾಲನೆ ಅವರ ಮುಖ್ಯ ಗುರಿಯಾಗಿತ್ತು. ಅಹಿಂಸೆ ಎಂಬುದು ಹಿಂಸೆಯ ಒಳಗು ಎಂದು ಹೇಳಿಹರು.

ಇವಾವಂಗವೂ ಇಲ್ಲದೆ ಗುಹೇಶ್ವರಾ ನಿಮ್ಮ ಶರಣ ಸುಖಿಯಾಗಿದ್ದನು : ಶರಣಂಗೆ ಆವಾವ ಅಂಗವಿಲ್ಲದ ಲಿಂಗ ಘನ, ಕಲ್ಪಿತವ ಕಾಣದ ಘನಮಹಿಮಂಗೆ ಅಂಗವೆಂಬುದಿಲ್ಲ, ಲಿಂಗವೆಂಬುದಿಲ್ಲ, ಲಿಂಗಾಂಗವೆಂಬುದಿಲ್ಲ, ಲಿಂಗಾಂಗ ಸಮರಸವೆಂಬುದಿಲ್ಲ, ಸಮತೆಯ ಸಯವಾಗಿಹ ಶರಣಂಗೆ ಅರುವು ಮರವುಗಳುಂಟೆ ? ಉಪಮೆ ನಿಃಸ್ಥಲವಾದ ಶರಣಂಗೆ

ಶಬ್ದಸಂದಣಿಯುಂಟೆ ಅಖಂಡಿತ ಲಿಂಗಕ್ಕೆ ಅಪ್ರಮಾಣ ಶರಣಂಗೆ ಸೀಮೆ, ಸಂಬಂಧವೆಂಬ ಸಂಕಲ್ಪವುಂಟೆ ? ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣಂಗೆ ಭವವಿಲ್ಲ, ಬಂಧನವಿಲ್ಲ, ಸಮತೆಯ ತನ್ನಿರುವು ಆದವಂಗೆ ಆವುದು ತ್ಯಾಗಾಂಗ, ಆವುದು ಭೋಗಾಂಗ, ಆವುದು ಯೋಗಾಂಗ ! ಮರವರವು ಕಾಣದ ಪರಂಜ್ಯೋತಿ ಶರಣ ಸ್ವಯಂಜ್ಯೋತಿ ಶರಣ ಅಖಂಡ ಜ್ಯೋತಿಗೆ ಅದಾವ ಅಂಗ ? ನಿಃಶಬ್ದವೇದಿಗೆ ಅದಾವ ಉಪಮೆ ಕೊಡುವುದು. ಅಲ್ಲಿ ನುಡಿಗೆಡೆಯಿಲ್ಲವಾದಲ್ಲಿ ಶಬ್ದವೇತರದು, ಸ್ವಂತ ಸ್ವಮಹಿಮೆಯಲ್ಲಿ ನೆಲಿಸಿದವಂಗೆ ಇವಾವಂಗವೂ ಇಲ್ಲದ ಗುಹೇಶ್ವರಾ ನಿಮ್ಮ ಶರಣ ಸುಖಿಯಾಗಿದ್ದನು ಎಂದು ಹೇಳಿಹರು.

137

**ಭಕ್ತನೆಂಬುವ ಸೂತಕಿ, ಲಿಂಗೈಕ್ಯನೆಂಬುವ ವ್ರತಗೇಡಿ.**
**ಶರಣಸತಿ ಲಿಂಗಪತಿ ಎಂಬ ಶಬ್ದ ಸರ್ವಗುಣಸಾಹಿತ್ಯ ಎಂಬಾತ**
**ಕರ್ಮೇಂದ್ರಿಯ ಭೋಗಕ್ಕೆ ಬಾರದ ಭೋಗಿ.**
**ಗುಹೇಶ್ವರ ನಿಮ್ಮ ಶರಣ,**
**ಆವ ಭೀತನೂ ಅಲ್ಲ ಆವ ಕರ್ಮಿಯೂ ಅಲ್ಲ.** ॥ 523 ॥

**ತಾತ್ಪರ್ಯ** : ಶರಣರ ಘನವ ಶರಣರು ಬಲ್ಲರು, ಲೌಕಿಕರು ತಿಳಿಯರು. ಶರಣ ಅನುಪಮನಾದುದರಿಂದ ಆವ ಭೀತನೂ ಅಲ್ಲ, ಕರ್ಮಿಯೂ ಅಲ್ಲ, ಸ್ವಮಹಿಮನು. ಭಕ್ತ, ಲಿಂಗೈಕ್ಯ, ಶರಣ ಎಂಬುವವರೆಲ್ಲರು ನುಡಿಗೆಡೆಗೊಡದ ಘನವ ತಿಳಿಯದವರು, ಆರು ತಿಳಿದಿಹರು ಅವರು ನಿಶಬ್ದವೇದಿಗಳು. ನುಡಿಗೊಳಪಟ್ಟವರೆಲ್ಲ ಶಬ್ದವೇದಿಗಳು, ಭ್ರಾಂತರು. ಭಕ್ತನೆಂಬುದು ನುಡಿಗೊಳಪಟ್ಟುದರಿಂದ ಸೂತಕಿ. ಲಿಂಗೈಕ್ಯನೆಂಬುದು ನುಡಿಗೊಳಗಾಗಿದೆ, ಶರಣನೆಂಬುದು ನುಡಿಗೊಳಗಾಗಿದೆ.

ಭಕ್ತನೆಂಬುವ ಸೂತಕಿ, ಸೂತಕ ಭಕ್ತ, ಸೂತಕ ವಿರಹಿತ ಭಕ್ತ, ಕೂಡುವ ಅಗಲುವ ಧಾವತಿಯಿಂದುಕ್ತವಾದವರು. ಸೂತಕಿಗಳು ಇಷ್ಟಲಿಂಗವ ಕಟ್ಟಿಕೊಂಡು, ಪೂಜಿಸಿ, ಸ್ತುತಿಸಿ, ಧ್ಯಾನಿಸಿ, ಭಕ್ತರೆನಿಸಿಕೊಂಡಿಹರು. ಲಿಂಗ, ಲಿಂಗ ಎಂಬುವ ಭಾವ ಬಲಗೊಂಡುದರಿಂದ ಇವನು ಭಕ್ತನೆಂಬುವವನಾಗಿಹನು. ಇದು ವಿಚಿತ್ರವು, ಭಕ್ತನಾದವ ತನ್ನ ಘನವ ತಿಳಿಯನು. ಲಿಂಗ ಘನವ ತಿಳಿಯನು, ಶರಣನ ಘನವ ತಿಳಿಯನು, ತಿಳಿಯದೆ ಭಾವಿಸುವ ಭಾವ, ಭ್ರಮಕ್ಕೆ ಈಡು ಮಾಡಿದೆ. ಭಾವವದು ಜನ್ಮಕ್ಕೆ ಈಡು ನಿರ್ಭಾವವದು ಜನ್ಮಕ್ಕೆ ಕಾಡಗಿಚ್ಚು, ತಿಳಿಯದೆ ಭಾವಿಸುವ ಲಿಂಗೈಕ್ಯ ಭಾವವಾಗಲಿ, ಶರಣನ ಭಾವವಾಗಲಿ ಅದು ಜನ್ಮಕ್ಕೆ ಕಾಡುಗಿಚ್ಚು ಆಗದು. ಭಾವವೆಂಬುದು ಭ್ರಮವು. ಅದು ದೋಷಯುಕ್ತವು ಆಗಿರುವಲ್ಲಿ ಭಕ್ತ ಸೂತಕಿ ಎಂದು ಹೇಳಿಹರು. ಈತನು ತಾನಾರೆಂದರಿಯದ್ದರಿಂದ ಮುನ್ನೆಲ್ಲಿಂದ ಬಂದೆನೆಂಬುದು ಅರಿಯಲ್ಲಿಲ್ಲವಾದ್ದರಿಂದ ತನ್ನ ಮೂಲವ ಮುಟ್ಟಲಿಲ್ಲ ತಿಳಿಯದೆ ಭಾವ ಭ್ರಾಂತನಾದುದಕ್ಕಾಗಿ ಸೂತಕಿಯಾಗಿಹನು.

ಲಿಂಗೈಕ್ಯನೆಂಬುವ ವ್ರತಗೇಡಿ, ಲಿಂಗೈಕ್ಯನೆನ್ನುವವನು ಲಿಂಗವರಿಯದವನು. ತನ್ನ ತಾನರಿಯದವನು, ಅರುವ ಅರಿಯದವನು. ಅರಿತವ ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ

ಸಮರಸವೆನ್ನೆ ಆಯಿತೆನ್ನೆ ಆಗದೆನ್ನೆ ಚೆನ್ನಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧನಾಗಿದ್ದೆ ಎಂದು ಅಕ್ಕ ಬಿತ್ತರಿಸಿದುದು ನೋಡುವುಡೆ ಲಿಂಗೈಕ್ಯನೆನ್ನುವವನು ಲಿಂಗೈಕ್ಯದ ಘನವರಿಯದವನು.

ಲಿಂಗೈಕ್ಯ ಆರು ಗೊತ್ತೆ ? ಎಂಜಲ ಮಾತ ನುಡಿವ ರಂಜಕರೆಲ್ಲರು ಮಿಗೆ ಮಿಗೆ ಮೀಸಲ ತಾವೆತ್ತ ಬಲ್ಲರು, ಎಂಜಲು ಮೀಸಲಹುದೆ ! ಮೀಸಲು ಎಂಜಲಹುದೆ ? ಮಾತಿನ ಬಣವೆಯ ಪಶುಮೇಧ ಪ್ರಾಣಿಯಂತೆ ಎಂಜಲ ಮಾತ ನುಡಿಯುತ್ತಿಹರು. ಲಿಂಗ ಸಕೀಲ ಸಂಯೋಗವ ವರ್ಮವ ಅವರೆತ್ತ ಬಲ್ಲರು. ಕೂಡಲ ಚೆನ್ನಸಂಗಯ್ಯನಲ್ಲಿ ಶಬ್ದಸೂತಕಿಗಳೆಲ್ಲ ರೌರವ ನರಕಿಗಳು. ನುಡಿವವರು ಇವರು ಎಂಜಲ ಮಾತಿನವರು, ಮಿಗೆ ಮಿಗೆ ಮೀಸಲವ ಅರಿಯದವರು ಮಿಗೆ ಮಿಗೆ ಮೀಸಲವರಿತವರೆ ಲಿಂಗ ಸಕೀಲ ಸಂಯೋಗ ವರ್ಮಸ್ಥಲವರಿತವರು, ನುಡಿಗೊಳಗಾಗದವರು, ನಿಶಬ್ದಬ್ರಹ್ಮದಿರುವು, ತನ್ನಯ ಇರುವು ಆದವರು, ಅವರು ಲಿಂಗೈಕ್ಯರು. ಶಬ್ದಮುಗ್ಧರು, ಆರು ಶಬ್ದಮುಗ್ಧರಾಗಿಲ್ಲ, ಅವರು ಲಿಂಗೈಕ್ಯನೆನ್ನುವನು, ಭಕ್ತನೆನ್ನುವನು, ಶರಣನೆನ್ನುವನು, ಇವರು ಸ್ವಸುಖದ ಸುಖಿಗಳಲ್ಲ, ಅಚಿಂತ್ಯಪದ ಲಭ್ಯವಾಗದ್ದರಿಂದ ಚಿಂತನಕ್ಕೊಳಗಾದವರು ನೆನಹಿಂಗೆ ಒಳಗಾದವರು. ಇಲ್ಲದ ಕಲ್ಪಿತ ತಾನಾದವರು ಅಕಲ್ಪಿತದ ಘನದಿರುವು ಆರಿಗೆ ಪ್ರಜ್ವಲಿಸಿಹುದು, ಅವರು ಲಿಂಗೈಕ್ಯರು, ಲಿಂಗವೆನಲಿಲ್ಲ, ಲಿಂಗೈಕ್ಯವೆನಲಿಲ್ಲ ಸಂಗಿ ಎನಲಿಲ್ಲ, ನಿಸ್ಸಂಗಿ ಎನಲಿಲ್ಲ, ಏನೊಂದಾಗದ ಘನಮಹಿಮಂಗೆ ಆದುದಿಲ್ಲ, ಹೋದುದಿಲ್ಲ ಆವಾವುದು ಆದವನಲ್ಲ, ನಿರ್ಣಯಕ್ಕೂ ನಿಲುಕದ ಅರಿಯದರುವಿನಲ್ಲಿ ನೆಲಿಸಿದವಂಗೆ, ಏನೆನ್ನುವುದು ? ನುಡಿಗೊಳಪಟ್ಟುದು ಲಿಂಗೈಕ್ಯವಾಗದ್ದರಿಂದ ಲಿಂಗೈಕ್ಯನೆಂಬುವ ವ್ರತಗೇಡಿ ಎಂದು ಹೇಳಿಹರು.

ಶರಣಸತಿ ಲಿಂಗಪತಿ ಎಂಬ ಶಬ್ದ ಗಣ ಸಾಹಿತ್ಯ ಎಂಬಾತ ಕರ್ಮೇಂದ್ರಿಯ ಭೋಗಕ್ಕೆ ಬಾರದ ಭೋಗಿ, ಶರಣಸತಿ ಲಿಂಗಪತಿ ಎಂಬ ಶಬ್ದಗಣ ಗಣ ಸಾಹಿತ್ಯ ಅತೀಂದ್ರಿ ಸಾಹಿತ್ಯ. ಲಿಂಗ ಬೋಗೋಪಬೋಗಿಯಾಗಿಹ ಸಾಹಿತ್ಯ, ಸರ್ವಾಂಗ ಶುದ್ಧವಾಗಿಹವು. ನಡೆನುಡಿ ಚೈತನ್ಯವುಳ್ಳನ್ನಬರ ಒಡಲ ಗುಣಗಳಾರಿಗೆಯೂ ಬಿಡವು ನೋಡಾ, ನೋಡುವ ನಯನ, ಕೇಳುವ ಶ್ರೋತೃ ವಾಸಿಸುವ ಘ್ರಾಣಕ್ಕೆ ಗಂಧಾದಿಗಳು ತಾಗಿದವೆನಬೇಡ, ನೋಡುತ್ತ, ಕೇಳುತ್ತ ಲಿಂಗಾರ್ಪಿತ ಮಾಡುವ ಲಿಂಗ ಭೋಗೋಪಭೋಗಿಗೆ ಸರ್ವಾಂಗ ಶುದ್ದವೆಂಬುದು ಇದೆ ಕಂಡಯ್ಯ ಕಾಲತ್ರಯಂಗಳ ಜೀವತ್ರಯಂಗಳ ಭಾವತ್ರಯಂಗಳನೊಂದು ಮಾಡಿ ಸುಖ-ದುಃಖ ಸಗುಣ ನಿರ್ಗುಣವೆಂಬ ಉಭಯ ಲಿಂಗದಲ್ಲಿ ಏಕ ಮಾಡಿ ಅಹುದು ಅಲ್ಲ, ಬೇಕು, ಬೇಡ ಎಂಬುಭಯ ಸಂದು ಸಂಶಯ ಕಳೆದಿಪ್ಪುದು ಕೂಡಲ ಸಂಗಯ್ಯನಲ್ಲಿ. ಆದಿ ಪುರಾತನರು ಮಾಡಿದ ಪಥವು. ಈ ಪಥ ಪುರಾತನರು ಆಚರಿಸಿದ ಗಣ ಸಾಹಿತ್ಯ, ಶರಣನಾದವನು ತನ್ನ ಸರ್ವಾಂಗಗಳನ್ನು ಲಿಂಗಕ್ಕೆ ಅರ್ಪಿಸುವ ವಿಧಾನ. ಇದರಿಂದ ಸರ್ವಾಂಗ ಶುದ್ಧವಾಗಿ ಕಾಲತ್ರಯಂಗಳು, ಜೀವತ್ರಯಂಗಳು, ಭಾವತ್ರಯಂಗಳು ಒಂದು ಮಾಡಿ, ಲಿಂಗದಲ್ಲಿ ಏಕ ಮಾಡುವ ಅಖಂಡ ದೃಷ್ಟಿಯುಳ್ಳವನಾಗುವನು. ಬಹು ವೀರಶೈವರಿಗೆ ಈ ಅಖಂಡ ದೃಷ್ಟಿ ಇಲ್ಲವಾಗಿದೆ. ಅರ್ಪಿತ, ಅರ್ಚನೆಯ ಜ್ಞಾನವು ಇಲ್ಲವಾಗಿದೆ.

ಅರ್ಪಿಸುವ ವಿಧಾನ, ಶರಣನ ಸ್ಥೂಲಾಂಗ, ಸೂಕ್ಷ್ಮಾಂಗ ಕಾರಣಾಂಗಗಳ ಲಿಂಗಕ್ಕೆ ಅರ್ಪಿಸುವುದರಿಂದ ಇವುಗಳು ಇಲ್ಲವಾಗಿ ಕೊನೆಗೆ ಈ ಇಲ್ಲವೆಂಬುದು ಇಲ್ಲವಾಗಿ ಜ್ಞಾನರೂಪ ಲಿಂಗದರ್ಶನವಾಗಬೇಕು. ಅರುವಿಂಗರುವಾದುದು, ವಿದಿತವಾಗಬೇಕು, ಆಗ ಅನುಪಮ,

ಲಿಂಗ ದರ್ಶನವು. ಆಗ ಶರಣಂಗೆ ಕಾಲತ್ರಯಗಳನ್ನು ಅಧಿಷ್ಠಾನದಲ್ಲಿ ಒಂದು ಮಾಡಲು ಬರುವುದು. ವಿಶ್ವ ತೈಜಸ ಪ್ರಾಜ್ಞರೆಂಬ ಜೀವತ್ರಯರನ್ನು ಒಂದು ಮಾಡುವನು. ಇದಲ್ಲದೆ ಜೀವಾತ್ಮ, ಅಂತರಾತ್ಮ, ಪರಮಾತ್ಮರೆಂಬ ಭಾವತ್ರಯಂಗಳ ಭಾವಕ್ಕಗಮ್ಯವಾಗಿಹ ಘನದಲ್ಲಿ ಒಂದು ಮಾಡವನು, ಸಕಲವ ಒಂದು ಮಾಡುವ ಘನವಂತನು. ಏಕೆಂದರೆ ಆತ ಅಧಿ ಷ್ಠಾನದಲ್ಲಿ ತೋರುವ ಕಲ್ಪಿತ ಅಧಿಷ್ಠಾನವಲ್ಲದೆ ಅನ್ಯವಲ್ಲವೆಂಬ ಏಕಾತ್ಮ ಜ್ಞಾನಿಯಾಗಿಹನು. ಅಕಲ್ಪಿತದಲ್ಲಿ ತೋರುವ ಕಲ್ಪಿತ ಅಕಲ್ಪಿತವಲ್ಲದೆ ಅನ್ಯವಲ್ಲವೆಂಬ ದಿವ್ಯದೃಷ್ಟಿಯುಳ್ಳುವನಾಗಿಹನು. ಆಗ ಸುಖ-ದುಃಖ ಸಗುಣ, ನಿರ್ಗುಣಬುಭಬಯ ಲಿಂಗದಲ್ಲಿ ಏಕ ಮಾಡುವ ಸದ್‌ಜ್ಞಾನಿಯು. ಆಕಾಶಕ್ಕೆ ಹಗಲು ರಾತ್ರಿಗಳುಂಟೆ ? ಚಿದಾಕಾಶನಾಗಿಹ ಶರಣಂಗೆ, ಕರಣಂಗಳುಂಟೆ ? ಕರಣಂಗಳೆ ಲಿಂಗಕಿರಣವಾಗಿಹವಂಗೆ ಸುಖ-ದುಃಖವುಂಟೆ, ಪ್ರಕೃತಿ ಪುರುಷನೆಂಬ ಕಲ್ಪಿತ ಉಂಟೆ ? ಅಕ್ಷರೋತ್ತಮಂಗೆ ಕ್ಷರವಾವುದು ? ಅಕ್ಷರವಾವುದು ? ನಿಸ್ಸೀಮಂಗೆ ಸಗುಣವಾವುದು ನಿರ್ಗುಣವಾವುದು ತೋರುವುದಾವುದು ತೋರದ್ದಾವುದು? ನಾಶವಾವುದು, ಅವಿನಾಶಿ ಆವುದು? ತೆರಹಿಲ್ಲದ ಘನಕ್ಕೆ ಸಗುಣವೆಂಬುದಿಲ್ಲ, ನಿರ್ಗುಣವೆಂಬುದಿಲ್ಲ, ತಿಳಿದುಪ್ಪ ಘಟ್ಟಿದುಪ್ಪಕ್ಕೆ ಭೇದವುಂಟೆ ? ಪೂರ್ಣಮದಃ ಪೂರ್ಣಮಿದಂ ಎಂಬ ಪರಮಜ್ಞಾನಿಗೆ, ಸುಖವಾವುದು ದುಃಖವಾವುದು ? ಅಹುದಾವುದು, ಅಲ್ಲಾವುದು ? ಪರತತ್ವದಲ್ಲಿ ಲೀಯವಾದವಂಗೆ ತತ್ವವಾವುದು ಅತತ್ವವಾವುದು ? ನಿರವಧಿ ನಿಲುವಿನಲ್ಲಿ ನೆಲಿಸಿದವಂಗೆ ಬೇಕೆಂಬುದಿಲ್ಲ, ಬೇಡೆಂಬುದಿಲ್ಲ, ಅಲ್ಲೆಂಬುದಿಲ್ಲ, ಅಹುದೆಂಬುದಿಲ್ಲ, ಸಹಜತ್ವದಿಂದಿರುವ ಮಹಾಂತ ಅತೀಂದ್ರಿ ಇಂದ್ರಿಯಂಗಳ ಶುಭಾಶುಭಕ್ಕೆ ನಿಲುಕದವನು, ಇದು ಕಾರಣ ಕರ್ಮೇಂದ್ರಿಯಂಗಳ ಭೋಗಕ್ಕೆ ಬಾರದ ಭೋಗಿ ಎಂದು ಹೇಳಿಹರು. ಗುಹೇಶ್ವರ ನಿಮ್ಮ ಶರಣ ಆವ ಭೀತನು ಅಲ್ಲ ಕರ್ಮಿಯು ಅಲ್ಲ, ಗುಹೇಶ್ವರ ನಿಮ್ಮ ಶರಣ ನಿರವಯಸ್ಥಲದಲ್ಲಿ ನಿಂದ ಅಭೇದ್ಯನಿಗೆ ಅದಾವ ಭೀತಿ ? ಅದಾವ ಕರ್ಮ ? ಅವಯವವುಳ್ಳವಂಗೆ ಆಧ್ಯಾತ್ಮಿಕ ತಾಪದ ಭೀತಿಯು ಇದೆ. ಆದಿ ಭೌತಿಕ ತಾಪದ ಭೀತಿಯು ಇದೆ. ಆದಿ ದೈವಿಕ ತಾಪವು ಇದೆ. ಚಿದಾಕಾಶವೆ ತಾನಾಗಿಹ ಶರಣಂಗೆ ಆವ ಭೀತಿಯು ಇಲ್ಲ, ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯವಾದ ಶರಣ ಆವಾವ ಭೀತನು ಅಲ್ಲ, ಕರ್ಮಿಯು ಅಲ್ಲ.

**138**

**ಭವಿಯೆಂಬುದು ಹುಸಿ, ಭಕ್ತಿಯೆಂಬುದು ಉಪದೇಶ.**
**ಶೀಲವೆಂಬುದು ಸಂಕಲ್ಪ , ಸಮತೆಯೆಂಬುದು ಸೂತಕ.-**
**ಇಂತೀ ಚತುರ್ವಿಧದೊಳಗಿಲ್ಲ ,**
**ಗುಹೇಶ್ವರಾ ನಿಮ್ಮ ಶರಣ ನಿಸ್ಸೀಮ!**॥ 524 ॥

**ತಾತ್ಪರ್ಯ** : ಪೂಜಾಲಿಂಗವ ಪೂಜಿಸುವ ಲಿಂಗವಂತರು ತಿಳಿದಿರುವ ಭವಿ ಭಕ್ತರೆಂಬುದು ಬೇರೆ, ಸುಜ್ಞಾನಿಗಳಿಗೆ ಕಾಣುವ ಭವಿ ಭಕ್ತ ಬೇರೆ. ಶೀಲ ಸಮತೆ ಎಂಬಿವು ಬೇರೆ, ಶರಣರ ಶೀಲ ಸಮತೆ ಬೇರೆ.

ಭವಿ ಎಂಬುದು ಹುಸಿ, ಭಕ್ತಿ ಎಂಬುದು ಉಪದೇಶ : ಅದು ಪ್ರಭುವಿನ ದಿವ್ಯ ದೃಷ್ಟಿ. ಲಿಂಗಾರ್ಚಕರ ಸಂಕುಚಿತ ದೃಷ್ಟಿಯಲ್ಲಿ ಭವಿ ಕೀಳು, ಭಕ್ತ ಶ್ರೇಷ್ಠರೆಂಬುದು ಅಜ್ಞ ದೃಷ್ಟಿ ಲಿಂಗವರಿಯದ ದೃಷ್ಟಿ, ಅಜ್ಞ ದೃಷ್ಟಿ ಎತ್ತ, ಮಹಾಂತರ ದೃಷ್ಟಿ ಎತ್ತ, ಸೀಮಿತರೆತ್ತ, ನಿಸ್ಸೀಮರೆತ್ತ, ಕಳಂಕವೆತ್ತ, ನಿಷ್ಕಳಂಕವೆತ್ತ ? ಕಳಂಕ ತೊಳೆದಲ್ಲಿ ಶುದ್ಧವಾಗಬಹುದೆ ? ನಿಷ್ಕಳಂಕ ಅದು ಕಳಂಕವಾಗಬಹುದೆ ? ಕಳಂಕ ದೃಷ್ಟಿ ವಿಪರೀತ ತಿಳಿವುದು. ನಿಷ್ಕಳಂಕ ದೃಷಿ ಇದ್ದುದು ಇದ್ದಂತೆ ತಿಳಿವುದು ತಿಳಿದಲ್ಲಿ ವಿಪರೀತವ ಕಾಣನು.

ಪ್ರಭುವಿನ ದೃಷ್ಟಿಗೆ ಭವಿ ಎಂಬುದು ಹುಸಿ, ಭಕ್ತಿಯೆಂಬುದು ಉಪದೇಶವಾಗಿದೆ. ಭವಿ ಎಂದರೆ ಹುಸಿ ಸುಳ್ಳು, ಮಿಥ್ಯಾ ನುಡಿ ಭ್ರಮಾತ್ಮಕ ನುಡಿ, ಹಗ್ಗದಲ್ಲಿ ಹಾವು ಎಂಬುದು ಹುಸಿ, ಬಂಜೆಮಗನೆಂಬುದು ಹುಸಿ ನುಡಿ, ಹಾವೆಂಬುದು ಮಿಥ್ಯಾತೋರಿಕೆ ಭವಿ ಎಂದರೆ ಹುಸಿ ಸುಳ್ಳು, ಮಿಥ್ಯಾ ನುಡಿ ಬ್ರಮಾತ್ಮಕವು, ನುಡಿಗೆಡೆಗೊಡದ ಘನದಲ್ಲಿ ಭವಿ ಎಂಬುದು ಹುಸಿ, ಅಮರತ್ವದಲ್ಲಿ ಹುಟ್ಟು ಸಾವುಳ್ಳುದು ಪುಶಿ, ಅಮರ ನೀನೆಂಬುದು ಉಪದೇಶ, ಸಚ್ಚಿದಾನಂದ, ಲಿಂಗಮಯ, ಬ್ರಹ್ಮಮಯ, ಚಿನ್ಮಯವೆಂಬುದು ಉಪದೇಶ. ತೋರುವ ಅಖಿಲ ಜಗವಿದು ಲಿಂಗ, ನೀನು ಲಿಂಗ, ನಾನು ಲಿಂಗ, ಹೀಗೆ ಭಾವಿಸುವದಾಗಲಿ, ನೆನಹು ಆಗಲಿ, ಧ್ಯಾನಿಸುವುದಾಗಲಿ, ಇದು ಉಪದೇಶ. ಈ ಉಪದೇಶ ತಾನಾದುದೆ ಭಕ್ತ ಇದು ಭಕ್ತರ ಅರಿವು ಇರವು ಆಗಿದೆ. ಅದಕ್ಕಾಗಿ ಭಕ್ತನೆಂಬುದು ಉಪದೇಶವೆಂದು ಹೇಳಿಹರು.

ಅಂಗದ ಮೇಲೆ ಲಿಂಗವಿಲ್ಲದವರು ಭವಿಗಳು ಎಂಬುದು ಹುಸಿ, ತೋರುವ ಅಂಗವು ಪುಸಿ, ತೋರುವ ಪೂಜಾಲಿಂಗವು ಪುಸಿ, ಪುಸಿ ಅಂಗ, ಪುಸಿ ಲಿಂಗ. ಈ ಅಂಗದ ಮೇಲೆ ಲಿಂಗವಿಲ್ಲವೆಂಬುದು ಪುಸಿ, ಪುಸಿ ಇವರಿಗೆ ಸತ್ಯವಾಗಿದೆ. ಲಿಂಗಾರ್ಚಕರ ದೃಷ್ಟಿಗೆ ಅಂಗವು ಸತ್ಯವಾಗಿದೆ. ಅಂಗದ ಮೇಲೆ ಲಿಂಗ ಹಾಕಿದುದು ಸತ್ಯವಾಗಿದೆ. ಇವನು ಅಂಗವ ತಿಳಿಯನು, ಲಿಂಗವ ತಿಳಿಯನು, ತಿಳಿಯದೆ ಕಲ್ಪಿಸಿದುದು ಹುಸಿಯಾಗಿದೆ ಇದು ಕಾರಣ, ಭವಿ ಎಂಬುದು ಹುಸಿ ಎಂದು ಹೇಳಿಹರು.

ಶೀಲವೆಂಬುದು ಸಂಕಲ್ಪ, ಇದು ಮನದ ಕಾರ್ಯವಾಗಿದೆ. ಸಂಕಲ್ಪರೂಪಿ ಶೀಲ, ಈ ಶೀಲದ ಘನವನಾರು ಬಲ್ಲರು, ಉಪದೇಶದಿಂದ ಉದಯವಾದ ಶೀಲ ನಿಸ್ಸಂಗ ಶೀಲ, ಇದು ಶತಪತ್ರದಂತಿರುವ ಶೀಲ, ಶತಪತ್ರವು ನೀರೊಳಗಿದ್ದರೂ ನೀರಿಗೆ ಅಂಟದಂತೆ ಹೇಗಿದೆಯೋ ಹಾಗೆ ಈ ಸಂಕಲ್ಪರೂಪಿ ಶೀಲವು. ಜೀವನು ಸಂಸಾರರೂಪಿ ನೀರೊಳಗಿದ್ದರೂ ತಾನು ಅಂಟದಂತಿಹುದೆ ಶೀಲವು. ಇದು ಅರುವಿನ ಶೀಲ, ನಿಸ್ಸಂಗ ಶೀಲ, ದೃಕ್ ರೂಪಾತ್ಮನ ಶೀಲ, ಮನನಯುಕ್ತ ಶೀಲ, ಮನವು ದೇಹ ಬುದ್ಧಿಯುಳ್ಳದ್ದಾಗುವುಡೆ ಇದು ಕೆಡುವುದು; ಅರುವಿನಿಂದುಕ್ತನಾದಲ್ಲಿ ಶೀಲವು ವೃದ್ಧಿಯಾಗುವುದು. ಉಪದೇಶದಿಂದ ಕೂಡಿದಾಗ ಭಕ್ತ ಶೀಲವಂತನಾಗುವನು. ಭಕ್ತ ತನ್ನ ಪೂರ್ವಾಶ್ರಯವುಳ್ಳವನಾದಲ್ಲಿ ಈ ಶೀಲ ಕೆಡುವುದು ಪುನಃ ಅರುವಿನ ಭಾವವುಳ್ಳವನಾಗಿ ಸಾಕ್ಷಿ ನಾನು, ಸಚ್ಚಿದ್ರೂಪ ನಾನು, ಸ್ವಯಂಪ್ರಕಾಶ ನಾನು ಅಸಂಗ ನಾನು, ಪ್ರತ್ಯಗಾತ್ಮ ನಾನು, ಪರಬ್ರಹ್ಮ ನಾನೆಂಬ ಭಾವದಲ್ಲಿರಲು ಶೀಲವು ಪ್ರಜ್ವಲಿಸುವುದು. ಇದು ಆತ್ಮಾನಾತ್ಮ ವಿವೇಕದಿಂದುಂಟಾದ ಸಂಕಲ್ಪ ವಿಚಾರಯುಕ್ತ ಮನದ ಸಂಕಲ್ಪ ನೆನಹು, ಇದು ಪೂರ್ವಿಕ ಭಾವರೂಪಿ ಭ್ರಮ ನಷ್ಟ

ಮಾಡಿ ನಿಭ್ರಾಂತರ ಮಾಡುವ ಸಂಕಲ್ಪ.

ಈ ಶೀಲರೂಪಿ ಶುಭ ಸಂಕಲ್ಪದಿಂದ ಹುಟ್ಟು ಸಾವುಗಳ ಸೂತಕ ಕೆಟ್ಟು ಆತ್ಮ ತಾನೆಂಬ ಶೀಲತ್ವವು ಸಿದ್ಧಿಸುವುದು. ಇದು ವರ್ಣಾಶ್ರಮಗಳಿಗೆ ಅಂಜದ ಶೀಲ, ಈ ಶೀಲವನ್ನು ನಾಲ್ಕು ವರ್ಣಾಶ್ರಮದವರು ಆಚರಿಸಿದಲ್ಲಿ ಭೇದ ದೃಷ್ಟಿಯೆ ನಷ್ಟವಾಗಿ ಅಭೇದವೆ ಸಿದ್ಧಿಸುವುದು. ಇದರಿಂದ ಸಕಲರ ಹೃದಯದಲ್ಲಿ ಶುದ್ಧಾತ್ಮ ತತ್ವ ಒಂದೇ ಬೆಳಗುವುದು ಎಂಬುದು ತಮ್ಮಿಂದ ತಮಗೆ ವಿದಿತವಾಗುವುದು.

ಪೂರ್ವದಲ್ಲಿ ಈ ಅರುವಿನ ಶೀಲ, ಜ್ಞಾನಗಂಗೆಯಲ್ಲಿ ಸ್ನಾನ ಮಾಡುವ ಶೀಲ, ಈ ಚತುರ್ ವರ್ಣಾಶ್ರಮದವರು ಆಚರಿಸಿ ಲೋಕ ಪೂಜಿತರಾಗಿಹರು. ಇದು ಮನದ ಕಲ್ಮಷವ ತೊಳೆದು ಪವಿತ್ರ ಮಾಡುವ ಶೀಲವಾಗಿದೆ. ಮನದಿಂದ ಮನವ ತೊಳೆಯುವುದು ಅವಿಚಾರಯುಕ್ತ ಮನವ ನಿರೋಧಿಸಿ, ವಿಚಾರ ಮನದ ಪ್ರವೃತ್ತಿ ಮಾಡುವುದೆ ಮನದಿಂದ ಮನ ತೊಳೆಯುವದಾಗಿದೆ. ಅನಾತ್ಮಾಕಾರ ಮನವ ತಿರಸ್ಕರಿಸಿ, ಆತ್ಮಾಕಾರ ಮನ ವೃದ್ಧಿಗೊಳಿಸುವುದೆ ಮನದಿಂದ ಮನವ ತೊಳೆಯುವುದು. ಭ್ರಾಂತಿ ಮನ ಕೆಡಿಸಿ, ನಿಭ್ರಾಂತರಾಗಿರುವುದೆ ಮನದ ಶೀಲವಾಗಿದೆ. ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರು ಈ ಶೀಲ ಆಚರಿಸಿ ಜಗತ್ಪೂಜ್ಯರಾಗಿಹರು.

ಸಮತೆಯೆಂಬುದು ಸೂತಕ: ಇದು ಪ್ರಭುವಿನ ಮಹಾಜ್ಞಾನ, ಬಹು ಆಶ್ಚರ್ಯಕರವಾಗಿಹ ಮಹದರಿವು ಇದಾಗಿದೆ. ಸಮತೆಯನ್ನು ಸಕಲ ಶಾಸ್ತ್ರಂಗಳು ಬಹು ಒಪ್ಪಿಕೊಳ್ಳುವುದು. ಈ ಘನವಂತ ಸಮತೆಯನ್ನು ಸೂತಕ ರೂಪದಲ್ಲಿ ನೋಡುವಲ್ಲಿ ಬೆಳಕಿಗೆ ಕತ್ತಲೆ ಎಂದಂತಾಗಿದೆ. ಸಮತೆ ಎಂಬುದು ಅವಿಮುಕ್ತ ಕ್ಷೇತ್ರವೆಂದು ಹೇಳುವಲ್ಲಿ ಅದು ಕಳಂಕವು ಎಂದು ಹೇಳುವುದು ಬಹು ವಿರೋಧವಾಗಿದೆ. ಲೋಕವಿರೋಧಿ ಭಕ್ತ, ಭಕ್ತ ವಿರೋಧಿ ಶರಣ, ಶರಣ ವಿರೋಧಿ ಐಕ್ಯ, ತ್ರಿವಿಧ ವಿರೋಧಿ ಮಹಾಲಿಂಗೈಕ್ಯ ಕೂಡಲಚೆನ್ನಸಂಗಾ ಎಂದು ಚೆನ್ನಬಸವರಾಜ ದೇವರು ಬಿತ್ತರಿಸಿದಂತೆ ಮಹಾ ಲಿಂಗೈಕ್ಯನಾಗಿಹ ಘನವಂತನ ದೃಷ್ಟಿಗೆ ವಿಷಮವಿಲ್ಲ, ಸಮವಿಲ್ಲ, ಅಕಥನೀಯ ನಿಲುವಿನಲ್ಲಿ ನಿಂತ ಪ್ರಭುವಿಂಗೆ ಮಹಾಲಿಂಗವೆಂಬುದು ಹೇಗೆ ವಿರೋಧವಾಗಿದೆ ಹಾಗೆ ಸಮತೆ ಎಂಬುದು ವಿರೋಧವಾಗಿದೆ.

ಮಹಾಂತರಿಗೆ ಮಹಾಲಿಂಗ ಘನವಾಗಲಿಲ್ಲ, ಮಹಾಲಿಂಗ ಮುಟ್ಟದ ತಾನು ಘನವಾಗಿಹರು, ತನ್ನನ್ನು ಮಹಾಲಿಂಗ ಬೆಳಗಲಿಲ್ಲ ಮಹಾಲಿಂಗಕ್ಕೆ ತಾನೆ ನಿರಂತರವಾಗಿಹ ಬೆಳಗಿನ ಬೆಳಗು ತನ್ನಯ ಇರುವೆಂದು ಅರಿದ ಮಹದರುವಿಂಗೆ ಸಮತೆಯೆಂಬುದು ಹೇಗೆ ಶ್ರೇಷ್ಠವೆನಿಸುವುದು. ಪುರುಷಾರ್ಥನ ದೃಷ್ಟಿಗೆ ಸಮತೆ ಘನವಾಗಿಹುದು. ಅಕ್ಷರಾಕ್ಷರ ಮೀರಿದ ಘನವಂತನಿಗೆ ಸಮತೆಯೆಂಬುದು ಸೂತಕವಾಗಿದೆ. ಘಟಾಕಾಶ ದೃಷ್ಟಿಗೆ ಮಠಾಕಾಶ ಜಲಾಕಾಶವೆಂಬಿವು ಸಮವು ಶ್ರೇಷ್ಠವಾಗಿಹುದು. ಮಹಾಕಾಶ ದೃಷ್ಟಿಗೆ ಘಟಾಕಾಶ ಮಠಾಕಾಶ ಸಮವು ಎಂಬುದು ಪುಸಿಯಾಗಿ ಸೂತಕವಾಗಿದೆಯೋ ಹಾಗೆ ಜೀವರ ದೃಷ್ಟಿಗೆ ಸಯವೆಂಬುದು ಶ್ರೇಷ್ಠವಾಗಿದೆ.

ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನಯ ನಿಲುವು ಆಗಿರುವಲ್ಲಿ ವಿಷಮವೆಲ್ಲಿ ಸಮವೆಲ್ಲಿ ? ಅಲ್ಲಾದುದೆಲ್ಲಿ ಅಹುದಾದುದೆಲ್ಲಿ ? ಬೆಳಗಿಸಿಕೊಳ್ಳುವುದೆಲ್ಲಿ ಬೆಳಗುವುದೆಲ್ಲಿ ? ದೃಶ್ಯವೆಲ್ಲಿ, ದೃಕ್‌ವೆಲ್ಲಿ ?

ಆನು ನೀನೆಂಬುದಿಲ್ಲ ತಾನಿಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದು ಎಲ್ಲಿಪ್ಪುದು ? ಇಲ್ಲಾದುದಿಲ್ಲಾದುದೆಂದಿಪ್ಪುದು ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು. ಇಲ್ಲದುದು ಇಲ್ಲವೆ ಇಲ್ಲ, ಆನು ನೀನೆಂಬುದು ಇಲ್ಲ, ಈ ವಿವೇಕ ರೂಪು ತಾನಿಲ್ಲ, ತಾನರಿದ ಬಳಿಕ ವಿವೇಕ ಅವಿವೇಕವೂ ಇಲ್ಲ. ಹೇಗೆಂದಲ್ಲಿ ಈ ವಿವೇಕ ರೂಪಿ ಆನು ನೀನೆಂಬುದಿಲ್ಲ. ಈ ಇಲ್ಲವೆಂಬ ವಿವೇಕವೂ ಇಲ್ಲ, ಇಲ್ಲದುದು ಎಂದಿದೆ. ಇಲ್ಲದುದು ಎಲ್ಲಿಪ್ಪುದು. ಬಂಜೆ ಮಗನ ಸದೃಶವಾಗಿಹ ನಾನು ನೀನು ಇಲ್ಲದುದು, ಇಲ್ಲದುದು ಎಂದಿದೆ. ಇಲ್ಲದುದು ಎಲ್ಲಿಪ್ಪುದು, ಅನುವರಿತು ತನುವ ಮರೆದಡೆ ಭಾವರಹಿತ ಗುಹೇಶ್ವರ ಬಯಲು, ತೆರಹಿಲ್ಲದ ಘನವಾವುದು ಅದು ತನ್ನಯ ಸ್ವರೂಪ, ತನ್ನಿಂದ ತನ್ನ ಅರಿತು ಕಲ್ಪಿತ ಪುರುಷನ ಮರದಡೆ ಭಾವಕ್ಕಗಮ್ಯವಾಗಿಹ ಘನ ತಾನೆ ಅಲ್ಲಿ ಸಮತೆ ಎಂಬುದು ಸೂತಕವಾಗಿಹುದು. ನುಡಿಗೆಡೆಗೊಡದ ಘನದಿರುವಿನಲ್ಲಿ ಸಮವೆಂಬುದಾಗಲಿ, ವಿಷಮವೆಂಬುದಾಗಲಿ ನಾನು ಎಂಬುದಾಗಲಿ, ನೀನು ಎಂಬುದಾಗಲಿ, ಭಾವವಾಗಲಿ ನೆನಹು ಆಗಲಿ ಅದು ಸೂತಕವಲ್ಲವೆ ? ಅದಕ್ಕಾಗಿ ಪ್ರಭುದೇವ, ನಿಃಶಬ್ದವೇದಿಯಾದುದರಿಂದ ಶಬ್ದವೇದಿಗಳೆಲ್ಲ ಸೂತಕರಾಗಿ ಕಾಣುವರು.

ಗುಹೇಶ್ವರಾ ನಿಮ್ಮ ಶರಣ ನಿಸ್ಸೀಮನೆಂದು ಹೇಳಿಹನು. ಶರಣರು ನಿಸ್ಸೀಮರು ಕರ್ಮಿಗಳ ಕಾಣರು, ಉಪಾಸಕರ ಕಾಣರು, ಜ್ಞಾನಿಗಳ ಕಾಣರು, ಕಾಣದುದ ಕಂಡವರು ಮೂರೊಂದಾದುದ ಕಂಡವರು, ಅಖಂಡಿತ ಘನಪೂರ್ಣವಪ್ಪ ತನ್ನಿರುವೆಂದರಿದ ಮಹಂತರಿಗೆ ಇನ್ನೊಂದು ಕಾಣದು, ಎಲ್ಲೆಲ್ಲೂ ತನ್ನನ್ನೆ ಕಂಡುದು ಆಕಾಶವತ್ ಆಕಾಶವಾಗಿಹ ಆಕಾಶ ಮೌನವು ಅಂದು ಮೌನವು ಇಂದು ಮೌನವು ಎಂದೆಂದೂ ಮೌನವು ಹೇಗೊ ಹಾಗೆ ಮುನ್ನ ಮುನ್ನವೆ ಆದುದು, ತನ್ನಿಂದ ತಾನಾದುದು, ಲಿಂಗದಲ್ಲಿ ಉದಯವಾದ ಲಿಂಗೈಕ್ಯರು. ಅಲ್ಲಿ ಭಾಷೆ ಪ್ರಸಾದಕ್ಕಿಂಬಿಲ್ಲ, ಮಿಗೆ ಮಿಗೆ ಮೀಸಲವಾಗಿಹುದನ್ನು ಬಲ್ಲ ಮಹಾಂತಂಗೆ ಭವಿ ಎಂಬುದು ಹುಸಿ ಭಕ್ತನೆಂಬುದು ಉಪದೇಶವಾಗಿದೆ. ಶೀಲ ಸಂಕಲ್ಪವಾಗಿದೆ. ಸಮತೆ ಸೂತಕವಾಗಿದೆ. ನಿಸ್ಸೀಮರಿಗೆ ಸೀಮಿತವಾಗಿ ಕಲ್ಪಿಸುವುದೆಲ್ಲ ಯತಾರ್ಥವಾಗದ್ದರಿಂದ ದೋಷದಿಂದುಕ್ತವು ಎಂದು ಹೇಳಿಹರು.

**139**

**ತನುವಿನ ಕೊರತೆಗೆ ಸುಳಿಸುಳಿದು, ಮನದ ಕೊರತೆಗೆ ನೆನೆನೆನೆದು,**
**ಭಾವದ ಕೊರತೆಗೆ ತಿಳಿತಿಳಿದು, ಶಬ್ದದ ಕೊರತೆಗೆ ಉಲಿದುಲಿದು,**
**ಗುಹೇಶ್ವರನೆಂಬ ಲಿಂಗವು ಮನದಲ್ಲಿ ನೆಲೆಗೊಳ್ಳದಾಗಿ!** ॥ 526 ॥

**ತಾತ್ಪರ್ಯ** : ತನುವಿನ ಕೊರತೆಗಾಗಿ ಸುಳಿ ಸುಳಿದು : ಮಾನವ ತನುವಿನ ಕೊರತೆಗಾಗಿ ಎಲ್ಲೆಲ್ಲೊ ಸುಳಿದಾಡುವನು ; ಸುಳಿದಾಡಿದರೂ ಇದರ ಕೊರಗು ಇದ್ದೇ ಇದೆ. ನೋಡುವುಡೆ ತನುವು ಅಲ್ಪ ತೃಪ್ತಿ, ಬಹಳಷ್ಟು ಅನ್ನವು ಬೇಕಾಗಿಲ್ಲ ; ಹೊದೆಯಲು ಬಟ್ಟೆಯು ಬಹುಬೇಕಾಗಿರುವುದಿಲ್ಲ, ಸ್ವಲ್ಪದರಲ್ಲಿ ತೃಪ್ತಿಯಾಗುತ್ತದೆ. ಅರ್ಧಸೇರು ಅಕ್ಕಿ ಅರ್ಧ ಲೀಟರ್ ಹಾಲಿನಲ್ಲಿ ತೃಪ್ತಿಯಾಗುವ ತನು, ಮೈಗೆ ಮುಚ್ಚುವಷ್ಟು ಸ್ವಲ್ಪ ವಸ್ತ್ರವಾದರೆ

ಸಾಕು, ಮುಚ್ಚಿಕೊಳ್ಳುವುದು. ಇಷ್ಟು ಅಲ್ಪದರಲ್ಲಿ ತನುವಿನ ಕೊರಗು ನಷ್ಟವಾಗುವದಿದ್ದು, ಇಡೀ ವಿಶ್ವವ ಸುತ್ತಾಡಿದರೂ ಇದರ ಕೊರಗು ಕಡಿಮೆಯಾಗದು. ಇದರ ಭ್ರಾಂತಿ ಅಧಿಕವಾಗುವುದಲ್ಲದೆ, ತಗ್ಗದು. ಈಶ್ವರನಿಂದ ರಚಿತವಾದ ಶರೀರ ಮಾತ್ರ ಅದು ಸ್ವಲ್ಪದರಲ್ಲಿಯೆ ತೃಪ್ತಿಹೊಂದುವುದು.

ಈ ಭ್ರಾಮಕ ತನು, ನಾನು ನನ್ನದೆಂಬ ದುರಾಭಿಮಾನಕ್ಕೊಳಪಟ್ಟ ತನು. ಆಡಂಬರಕ್ಕೆ ಬಲಿಯಾದ ತನುವಿಂಗೆ ವಿಶ್ವದ ಐಶ್ವರ್ಯ, ಇಚ್ಛಿತ ಭೋಗ, ಅಧಿಕಾರ ಪದವಿ ಕೀರ್ತಿ ಲಭ್ಯವಾದರೂ ಅಶಾಂತಿಯೆ ಹೆಚ್ಚಾಗುವುದಲ್ಲದೆ ಶಾಂತಿ ಲಭಿಸದು. ಮಾನವ ಜನ್ಮ ಜ್ಞಾನವಾನ್ ಜನ್ಮ. ಶಾಂತಾತ್ಮ ಜನ್ಮ ದೊರೆತರೂ, ಮಾನವ ತನುವಿನ ಕೊರತೆಗೆ ಎಂಭತ್ತು ನಾಲ್ಕು ಲಕ್ಷ ಜನ್ಮ ತಿರುಗಿದರೂ ಇದಕ್ಕೆ ತೃಪ್ತಿ ಇಲ್ಲ. ಮಲಮಯ ತನುವಿನ ಭೋಗದ ಕೊರತೆಗೆ ಊಚ, ನೀಚ ಶರೀರಗಳಲ್ಲಿ ಒಂದು ಇಂದ್ರಿಯ ಜನ್ಯ ವಿಷಯೋಪ ಭೋಗ ಭೋಗಿಸಿದರೂ ಇದರ ದಾಹಕ ಹೆಚ್ಚಾಗುವುದಲ್ಲದೆ ಕಡಿಮೆಯಾಗದ್ದು ಕಂಡು ಶರಣರು.

ಅನ್ನ ಪಾನ, ಯೌವ್ವನ ಪಾನ, ಐಶ್ವರ್ಯಪಾನ, ಅಂಗಭಂಗಿ, ಮನ ಭಂಗಿ, ಕಾಮ ಭಂಗಿ, ಈ ತ್ರಿವಿಧ ಸುಧೆಯ ಸೇವಿಸುವವರು ನಿಮ್ಮನೆತ್ತ ಬಲ್ಲರು ಕೂಡಲಚೆನ್ನಸಂಗಮದೇವಾ. ಎಂದು ಮಹಾಂತರು ಬಿತ್ತರಿಸಿದುದು ನೋಡುವುಡೆ ಹೊಟ್ಟೆ ತುಂಬಿಕೊಳ್ಳಲು ಮಾನವ ಸುಳಿದಾಟ. ಇದಲ್ಲದೆ ಯೌವ್ವನದ ಕೊರತೆಗಾಗಿ ಸ್ತ್ರೀಯು ಇದ್ದಲ್ಲಿ ಸುಳಿದಾಡುವುದು. ಇದಾದ ನಂತರ ಮಕ್ಕಳ ಮಮತೆಗೆ ಹಾಗೂ ಅವರ ವಿದ್ಯಾರ್ಜನೆ, ವಸ್ತ್ರ ಅಧಿಕಾರಕ್ಕಾಗಿ ಸುಳಿ ಸುಳಿದಾಡುವುದು. ಆನಂತರ ಐಶ್ವರ್ಯ ಸಂಪಾದಿಸಲು ಸುಳಿ ಸುಳಿದಾಡುವದೆ. ಇವನ ಹೃದಯದ ವ್ಯವಹಾರವಾಗಿ ಹಗಲಿರುಳು ಇದರ ದಾಹಕವೆ ಹೆಚ್ಚಾಗಿ ಕುಡಕನಷ್ಟು ಇವನು ಅವನತಿಗಿಳಿದಿಹನು. ಇಂತಪ್ಪ ಅಧೋಮುಖದ ಅಮಲಿನಲ್ಲಿ ದೇವನು ಕೊಟ್ಟ ಅಮೂಲ್ಯ ಆಯುಷ್ಯವನ್ನೆಲ್ಲ ತನ್ನ ಪುರುಷಾರ್ಥವನ್ನೆ ಹಾಳು ಮಾಡಿಕೊಳ್ಳಲು ಒಪ್ಪಿಕೊಂಡಿರುವುದರಿಂದ ಇವನ ಮನಸ್ಸು ಅಪವಿತ್ರ ನೆನಹಿನಿಂದುಕ್ತವಾಗಿಹುದು. ದೇಹಬುದ್ಧಿ, ದೇಹಾಭಿಮಾನ, ಅಷ್ಟೇ ಅಧಿಕವಾಗಿ ಪ್ರಜ್ಞಾಹೀನನಾಗಿಹನು. ಇವನಲ್ಲಿ ದಯವೆ ಧರ್ಮದ ಮೂಲವೆಂಬುದು ಮರೆತು ಅಧರ್ಮಿ, ಅಜ್ಞಾನಿ, ದೈತ್ಯ ಸ್ವಭಾವದವನಾಗಿ, ಪರರಿಗೆ ದುಃಖಕೊಡುವುದು ಇವನ ಧರ್ಮವಾಗಿರುವಲ್ಲಿ, ಇಂದ್ರಿಯ ರಾಮನಾಗಿರುವಲ್ಲಿ, ಇವನಲ್ಲಿ ಸದಿಚ್ಛೆಯ ಸುಳಿವು ಸಹ ಇಲ್ಲವಾಗಿಹುದು. ಅಂದ ಬಳಿಕ ನಿಜವಾದ ತತ್ವಜ್ಞಾನ, ಆ ಜ್ಞಾನದಿಂದ ಸಿಗುವ ಅಚ್ಚ ಸುಖದ ವಿಷಯ ಇವನ ಕನಸಿನಲ್ಲಿ ಬರದು. ದುರ್ವ್ಯಸನಕ್ಕಾಗಿ ಅಂಗ, ಮನ, ಇಚ್ಛೆಯನ್ನು ಉಪಯೋಗ ಮಾಡುವನು. ಸಕಾಮಿಯಾಗಿ ಕೆಲವು ದಿವಸ ತಪಸ್ಸು, ಜಪ, ಸ್ತೋತ್ರ ಧ್ಯಾನ, ಮೌನಗಳನ್ನಾದರೂ ಮಾಡುವ ಗುರಿ, ತನ್ನ ಅಂಗದ ಕೊರತೆಗಾಗಿ ಮನದ ಕೊರತೆಗಾಗಿ ಸತ್ಕರ್ಮಿಯು ಎನಿಸಿಕೊಳ್ಳುವನು. ಮನದ ಕೊರತೆಗಾಗಿ ನೆನೆ ನೆನೆದು, ಮನವ ತೃಪ್ತಿ ಮಾಡಲು ಹೋರಾಟ. ಈ ಹೋರಾಟ ನರರಲ್ಲಿ ಅಷ್ಟೇ ಅಲ್ಲ, ತಪಸ್ವಿ ತ್ಯಾಗಿಗಳಲ್ಲಿ, ಮನು ಮುನಿಗಳಲ್ಲಿ ಸುರಾಸುರರಲ್ಲಿ ದೇವನನ್ನು ಬಹು ವಿಧವಾಗಿ ಆರಾಧಿಸುವರು. ಸ್ತುತಿಸುವರು. ಅನುಷ್ಠಾನವ ಮಾಡುವರು.

ಬಹುಧಾ ಅನೇಕರಿಗೆ ಮನದ ಕೊರತೆ ಕೊರಗು ನೀಗಲು ಸರಿಯಾದ ಪರಿಹಾರ ಸಿಕ್ಕಿಲ್ಲವಾಗಿದೆ. ಈ ಮನದ ಕೊರಗ ಕಳೆಯಲು, ಅನ್ನಪಾನ ಐಶ್ವರ್ಯಪಾನ, ಯೌವ್ವನ

ಪಾನ ಈ ಮೂರನ್ನು ಮಾನವ ಪಾನ ಮಾಡಿದ. ಇದರಿಂದ ಅಧಿಕ ಕೊರತೆಯುಂಟಾಯಿತಲ್ಲದೆ ಪರಮ ಶಾಂತಿಯ ಸುಳಿವು ಸಹ ಇಲ್ಲದ್ದು ಕಂಡು, ಇದರಲ್ಲಿ ಸುಖವಿಲ್ಲ. ಇದರಿಂದ ಮನದ ಕೊರತೆ ನೀಗದು. ಸ್ವರ್ಗದ ಉಪಭೋಗದಿಂದ ತೃಪ್ತನಾಗುವುದೆಂದು ವಿಶ್ವಾಸವ ಮಾಡಿ ಸ್ವರ್ಗವ ಪ್ರಾಪ್ತಿ ಮಾಡಿಕೊಳ್ಳಲು ಸಕಾಮಿಯಾಗಿ ಈಶ್ವರಾರ್ಚನೆ ತಪಸ್ಸು ಇತ್ಯಾದಿ ದೇವತೆಗಳು ದೈತ್ಯ ದಾನವರು ಸ್ವರ್ಗವ ಪಡೆದರು. ಪರಮ ಶಾಂತರಾದರೆ ? ಅಮರರಾದರೆ ? ಅವರೆ ಅದರಿಂದ ತೃಪ್ತರಾಗಿಲ್ಲವೆಂದು ಪುರಾಣಗಳಿಂದ ತಿಳಿದು ಬರುವಲ್ಲಿ ಮಾನವ ಸಕಾಮಿಯಾಗಿ ಸ್ವರ್ಗವ ಪಡೆಯಲು ಈಶ್ವರನ ಧ್ಯಾನ ಅದೇಕೆ ಮಾಡುವರು. ಮನದ ಕೊರತೆ ಅದರಿಂದ ಹೋಗದು ಎಂದು ತಿಳಿದಲ್ಲಿ ಅದನ್ನು ಬಿಟ್ಟು ತನ್ನ ಪುರುಷಾರ್ಥ ಸಂಪಾದಿಸಲು ಮುಂದುವರಿದಲ್ಲಿ ಮನದ ಕೊರತೆ ಹಿಂಗುವುದು ಎಂಬ ಶರಣರ ಸೂಳ್ನುಡಿಯ ಮಾನವ ಮರೆತಷ್ಟು ಕಂಗಾಲಾಗುವನು.

ಇದು ಕಾರಣ ಶರಣರು ಆವುದನ್ನು ಸಂಪಾದಿಸಿ ಮನವನ್ನೆ ಘನಮನ ಮಾಡಿಹರು. ಮನವ ಲಿಂಗವ ಮಾಡಿಹರು. ಆ ತತ್ವವ ಪಾಲಿಸಲು ಮುಂದುವರಿಯುವುದು. ಕರಿಯನಿತ್ತಡೊಲ್ಲೆ, ಹಿರಿದಿಪ್ಪ ರಾಜ್ಯವನಿತ್ತಡೊಲ್ಲೆ, ಬ್ರಹ್ಮಪದವಿ, ವಿಷ್ಣು ಪದವಿ, ರುದ್ರ ಪದವಿ, ನಾನಾ ಪದವಿಯನೊಲ್ಲೆ ನಿಮ್ಮ ಶರಣರ ಸೂಳ್ನುಡಿಯಿತ್ತಡೆ ನಿಮ್ಮನಿತ್ತಂತೆ ಕಾಣಾ ರಾಮನಾಥ. ಪ್ರಥಮ ಮನಸ್ಸಿಗೆ ನಿಶ್ಚಲತ್ವ ಬರಬೇಕಾದರೆ ಶರಣರ ಮಹಾನುಭವ ನೋಡಿ, ಪ್ರವೃತ್ತಿ ಮನ ಅಂದರೆ ಬೇಕು, ಬೇಕು ಎಂಬ ಕೀಳು ಮನವ ಹೋಗಿ ನಿವೃತ್ತಿ ಮನ ಅಂದರೆ ಬೇಡ, ಬೇಡ ಆವುದು ಬೇಡ, ಆನೆಕೊಟ್ಟರೂ ಬೇಡ, ಈ ಲೋಕದ ರಾಜ್ಯವು ಬೇಡ, ಇದಕ್ಕಿಂತ ಹಿರಿದಾದ, ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿ ಕೊಟ್ಟರೂ ಬೇಡ ಎನ್ನುವಷ್ಟು ಈಶ್ವರನಲ್ಲಿ ಪ್ರಾರ್ಥನೆ ಬೇಕು. ಈ ಪ್ರಾರ್ಥನೆಯಿಂದ ಮನ ಶುದ್ಧವಾಗಿ ಶರಣರ ಸೂಳ್ನುಡಿಯ ಮೇಲೆಷ್ಟು ಆಸ್ತಿಕನಾಗುವನು; ಆಗ ಮನದ ಕೊರಗು ನಷ್ಟವಾಗುವ ಮಹಾನುಭವರೂಪಿ ದಿವ್ಯ ಔಷಧ ಸಿಗುವುದು.

ಉಪಾಧಿಕ ಮನ, ಉಪಾಧಿರಹಿತ ಮನನಿಂದಲ್ಲಿ ನಿವಾತವಾಯಿತ್ತು, ನಿಶ್ಚಿಂತವಾಯಿತ್ತು, ಲಿಂಗೋದ್ಭವ ಪ್ರಜ್ವಲಿಸುತ್ತಿತ್ತು. ಗುಹೇಶ್ವರ ಲಿಂಗ ತಾನಾಗಿ ಮನದ ಕೊರಗು ನೀಗಿ ನಿಶ್ಚಿಂತನಾಗಲು ಪ್ರಭುವಿನ ಸಹಜದರುವು, ನಮ್ಮ ಹೃದಯದಲ್ಲಿ ಬೆಳಗುಳ್ಳ ಘನವು ಬೆಳಗಿದಾಗ ಮನದ ಕೊರಗು ನಷ್ಟವಾಗಿ ನೆನೆಯದ ಮನವಾಗುವುದು. ಲಿಂಗ ಘನವಾಗುವುದು. ಆಗ ಮನದ ಇರುವು ಲಿಂಗ. ದೇವರ ದೇವ ಘನಕ್ಕೆ ಘನ ತಾನೆ ಆಗಿರುವಲ್ಲಿ ನೆನೆವುದಿನ್ನಾರನ್ನು ? ನೆನೆಯಲು ತನಗಿಂತನ್ಯ ಆರಾದರೂ ಇರುವರೆ ? ಎಲ್ಲೆಲ್ಲೂ ತಾನೆ.

ಭಾವದ ಕೊರತೆಗೆ ತಿಳಿ ತಿಳಿದು : ಭಾವದ ಕೊರತೆಯುಳ್ಳವರು ಇವರಾರು ? ಇವರು ಜೀವರು, ಜೀವರಲ್ಲಿ ಕನಿಷ್ಠ ಮಧ್ಯಮ ಉತ್ತಮರೆಂದು ತ್ರಿವಿಧ ರೂಪರಾಗಿಹರು. ಅವಿವೇಕಿಯು ಕನಿಷ್ಠ ಜೀವನು, ವಿವೇಕಿಯು ಮಧ್ಯಮ ಜೀವನು, ಇವೆರಡಕ್ಕೂ ಮೀರಿದ ಅರುವಿನ ಪ್ರೇಮಿಯು ಶ್ರೇಷ್ಠ ಒಬ್ಬನು ಜೀವನೆಂದು ಭಾವಿಸಿ, ಆ ಜೀವ ಭಾವದ ಕೊರತೆಗೆ ತಿಳಿ ತಿಳಿದು ಕರ್ತೃತ್ವ ಭೋಕ್ತೃತ್ವವುಳ್ಳವನಾಗಿ ಪರತಂತ್ರನಾದ.

ಮಧ್ಯಮ ಭಾವಿಯಾಗಿಹ ಅಂತರಾತ್ಮನು, ಇವನು ಆತ್ಮಾನಾತ್ಮ ವಿವೇಕವುಳ್ಳವನಾಗಿ

ತಿಳಿಸಿಕೊಳ್ಳುವ ಅನಾತ್ಮ ನಾನು ಆಗಲಾರೆ, ತಿಳಿಯುವ ದೃಕ್ ರೂಪಾತ್ಮ ನಾನಾಗಿಹೆನೆಂಬ ವಿವೇಕವೆ ಇವನಿಗೆ ಸ್ವರೂಪವಾಗಿ ಅದರ ಸುಳುವಿನಲ್ಲಿ ಸುಳಿದಾಡುವುದರಿಂದ ಅಂತರಾತ್ಮನೆಂಬ ಭಾವ ಬಂದಿದೆ. ತಾನು ಅಂತರಾತ್ಮನೆಂಬ ಭಾವ ಬಲಿದು, ತನ್ನ ವಿವೇಕದಿಂದ ಅನಾತ್ಮ ತಾನಾಗದೆ, ಆತ್ಮ ತಾನೆನ್ನುವ ಭಾವಕ್ಕೆ ಬಲಿಯಾಗಿ ಇಷ್ಟಕ್ಕೆ ತಿಳಿದವ ತಾನೆಂದು ಸುಳಿದಾಡುವುದೆ ತಿಳಿ ತಿಳಿದು ಎಂದು ಹೇಳಿಹರು. ಇದರಿಂದ ತನ್ನ ಭಾವಕ್ಕಗಮ್ಯವಾಗಿಹ ಘನದಿರುವ ನೋಡಲಿಲ್ಲ, ಭರಿತ ಭಾವದವನಾಗದುದೆ ಭಾವದ ಕೊರತೆಗೆ ತಿಳಿ ತಿಳಿದು ಎಂದು ಹೇಳಿಹರು.

ಶ್ರೇಷ್ಠಭಾವಿಯಾಗಿಹ ಪರಮಾತ್ಮರೂಪಿ ಅರುವಿನ ಭಾವದವನು, ನಿತ್ಯಾನಿತ್ಯ ವಿಚಾರಕ್ಕೆ ಮೀರಿದವನು. ಅರುವಿನ ಭಾವಸಂಪನ್ನನು. ಸಚ್ಚಿದಾನಂದ ನಾನಿದ್ದೇನೆ. ಪೂರ್ಣ ನಾನಿದ್ದೇನೆ. ಅಖಂಡ ನಾನಿದ್ದೇನೆ ಎನ್ನುವ ಭಾವ ಸಂಪನ್ನನು. ಈ ಅರುವು ಸಾಪೇಕ್ಷೆ ಈ ಭಾವ ಸಾಪೇಕ್ಷವೆಂದು ತಿಳಿ ತಿಳಿದು, ಅದರಲ್ಲಿಯೆ ಸುಳಿದಾಡುತ್ತಿಹರು. ಇವರಲ್ಲಿಯು ಸಹ ಸಕಲ ಭಾವಂಗಳಿಗೂ ಬೆಳಗುವ ಬೆಳಗುಳ್ಳ ಘನದಿರುವಿನ ಅರುವ ಬೆಳಗದ್ದರಿಂದ ಇವರು ಭಾವದ ಕೊರತೆಯುಳ್ಳವರು. ಇವರು ಭಾವದ ಕೊರತೆಯ ತಿಳಿ ತಿಳಿದವರು ಅಲ್ಲದೆ ಭರಿತಭಾವ ನೆಲೆಗೊಳ್ಳಲಿಲ್ಲ.

ಶಬ್ದದ ಕೊರತೆಗಾಗಿ ಉಲಿ ಉಲಿದು ಗುಹೇಶ್ವರನೆಂಬ ಲಿಂಗವು ಮನದಲ್ಲಿ ನೆಲೆಗೊಳ್ಳದಾಗಿ : ಶಬ್ದದ ಕೊರತೆಗಾಗಿ ಮಾತಾಡುವುದೆ, ಮಾತಾಡುವುದು. ಇವರಿಗೆ ಶಬ್ದವು ನಿಶಬ್ದ ಘನವಾಗದು, ನಿಶಬ್ದ ಘನವ ತಿಳಿಸದು ಎಂಬ ಜ್ಞಾನವಿಲ್ಲದೆ ಎಂಜಲ ಮಾತನಾಡುವರು.

ಇವರು ಶೃತಿಗಗೋಚರ ವಾಙ್ಮನೋತೀತ ಶಬ್ದಮುಗ್ಧ ಅನ್ನುವರು. ನಿಶಬ್ಧ ಬ್ರಹ್ಮ ಮುಚ್ಚತೆ, ಅಕಥನೀಯ ಅನುಪಮ ಮಿಗೆ ಮಿಗೆ ಮೀಸಲು ಅನ್ನುವರು. ಮುನ್ನ ಮುನ್ನಲಾದ ಘನ ತನ್ನಿಂದ ತಾನಾದುದು ಎಂದು ಮಾತನಾಡಿ ಮಾತನಾಡಿ ಶಬ್ದವ ಪೂರ್ಣ ಮಾಡುವ ಹಂಬಲಿಗರು. ಇಂಥವರಲ್ಲಿ ಗುಹೇಶ್ವರನೆಂಬ ಲಿಂಗವು ಮನದಲ್ಲಿ ನೆಲೆಗೊಳ್ಳದಾಗಿ ಎಂದು ಹೇಳಿಹರು. ಭಕ್ತನು ಹುಸಿಯುಳ್ಳವನಾಗುವನೆ ? ಜಂಗಮನಾದಲ್ಲಿ ಬಾಧೆಯುಳ್ಳವನಾಗುವನೆ ? ಶರಣನು ಆಶಾಪುರಷನೆ ?

**140**

**ಹುಸಿವುಳ್ಳಾತ ಭಕ್ತನಲ್ಲ ಬಾಧೆಯುಳ್ಳಾತ ಜಂಗಮನಲ್ಲ,**
**ಆಶೆಯುಳ್ಳಾತ ಶರಣನಲ್ಲ .**
**ಇಂತಪ್ಪ ಆಸೆ ಹುಸಿ ಬಾಧೆಯ ನಿರಾಕರಿಸಿ ಇರಬಲ್ಲಡೆ-**
**ಗುಹೇಶ್ವರಾ ನಿಮ್ಮ ಶರಣ.** ॥ 527 ॥

**ತಾತ್ಪರ್ಯ** : ಹುಸಿವುಳ್ಳಾತ ಭಕ್ತನಲ್ಲ : ಪೂರ್ವಿಕ ಪೂಜಕ ಅಪೂರ್ವಿಕ ಭಕ್ತ, ಪೂಜ್ಯ ಪೂಜಕ ಭಾವದಿಂದುಕ್ತನು ಅವನು ಪೂರ್ವಿಕನು. ಇವನಿಗೆ ದೇವನು ಕುರುಹುಳ್ಳವನಾದುದರಿಂದ ತಾನು ಪೂಜಕನೆಂಬ ಭಾವ ದೃಢವಾಗಿದೆ. ಬಹು ಭಕ್ತರ

ಭಾವ, ದೇವನಲ್ಲಿ ಕೂಡಿದವನು ಸೇರಿದವನು ಭಕ್ತರೆಂದು ತಿಳಿದಿಹರು. ಭಕ್ತ ಕೂಡ ಬೇರೊಂದಾಗು ಎಂದು ಅರ್ಥವಾಗುವುದು. ಕೂಡು ಬೆರೆ ಅಡ್ಡಿ ಇಲ್ಲ, ಕೂಡಿದ ಮೇಲೆ ಅಗಲಿರಬಾರದು. ಕೂಡದಗಲದ ಘನದಲ್ಲಿ ಕೂಡು ಬೆರೆ, ಎರಡೊಂದಾದ ಬಳಿಕ ಅರ್ಚನೆಯಿಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ, ಶಬ್ದಕ್ಕೆ ತೆರಹಿಲ್ಲವೆಂದು ಹೇಳಿಹರು. ಭಕ್ತನಾದಲ್ಲಿ ದಿಟದಲ್ಲಿ ಕೂಡುವುದು. ಕುರುಹು ದಿಟವಾಗದು, ಕುರುಹು ಹುಸಿ, ಹುಸಿಯೊಳಗೆ ಕೂಡಿದುದು ಹುಸಿ, ದೇವನು ಹುಸಿ, ದೇವನನ್ನು ಪೂಜಿಸಿದ ಭಕ್ತನು ಹುಸಿ, ಇದು ಕಾರಣ ಪೂಜಾ ಲಿಂಗ ಹುಸಿಯಾದುದರಿಂದ ಇದನ್ನು ಪೂಜಿಸಿದವನು ಹುಸಿವುಳ್ಳವನು. ಇದು ಕಾರಣ ಹುಸಿವುಳ್ಳಾತ ಭಕ್ತನಲ್ಲವೆಂದು ಹೇಳಿಹರು.

ಕೂಡದಗಲದ ಘನದಲ್ಲಿ ಆವ ಭಕ್ತ ಒಂದಾಗಿಹನು ಆತ ಹುಸಿಯುಳ್ಳ ಭಕ್ತನಲ್ಲ, ಆರು ಕೂಡದಗಲದ ಘನದಲ್ಲಿ ಒಂದಾಗಿಹ ಭಕ್ತಂಗೆ ಉತ್ಪತ್ತಿ ಇಲ್ಲ, ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ, ಸ್ಥಿತಿ ಇಲ್ಲಾಗಿ ಲಯವಿಲ್ಲ, ಆವ ಭಕ್ತ ಉತ್ಪತ್ತಿ, ಸ್ಥಿತಿ ಲಯವುಳ್ಳವನಾಗಿಹನು, ಅವನು ಹುಸಿಯುಳ್ಳಾದನೆಂದು ತಿಳಿವುದು. ಎರಡೊಂದಾದುದು ಆವುದು ? ದೇವ, ಭಕ್ತ ಒಂದಾದುದು, ಪೂಜ್ಯ ಪೂಜಕ ಒಂದಾದುದು, ಸ್ವಾಮಿ ಸೇವಕ ಒಂದಾದುದು. ಕೂಡದಗಲದ ಘನವಾವುದು, ಅದು ದೇವ. ಕೂಡದಗಲದ ಘನ ಆವನು ಅವನು ಭಕ್ತ. ದೇವನ ಇರವು ಆವುದು ಅದು ಭಕ್ತನ ಇರವು, ಭಕ್ತನ ಇರವು ಆವುದು ಅದು ದೇವನ ಇರವು. ದೇವನೆಂದರೆ ಭಕ್ತ ಭಕ್ತನೆಂದರೆ ದೇವ. ದೇವನೊಂದಾಗಿರ್ದ ಭಕ್ತ, ಭಕ್ತನೊಂದಾಗಿರ್ದ ದೇವ, ಇಂತಪ್ಪ ಪರಮಜ್ಞಾನಿ ಭಕ್ತಂಗೆ ಅರ್ಪಿತವಿಲ್ಲ, ಅರ್ಚನೆಯಿಲ್ಲ, ಅವಧಾನವಿಲ್ಲ ಶಬ್ದಕ್ಕೆ ತೆರಹಿಲ್ಲವೆಂದು ಹೇಳಿಹರು. ಆರು ಲಿಂಗಾರ್ಚಕರು ಅವರಿಗೆ ಅರ್ಪಿತ ಉಂಟು. ಫಲ ಪದಂಗಳುಂಟು ಭವ ಉಂಟು, ಇದು ಕಾರಣ ಜಂಗಮಾರ್ಚನೆಯಾಗಿಹ ಸುಜ್ಞಾನವೆ ಲೇಸು. ಸುಜ್ಞಾನಿಯ ಇರವು ಅದು ಭಕ್ತನ ಇರವು. ಕೂಡದಗಲದ ಘನವಾವುದು, ಅದು ಮುನ್ನ ಮುನ್ನಲಾದ ಘನವು, ತನ್ನಿಂದ ತಾನಾದುದು, ಅದುವೆ ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ಭಕ್ತ ಅಲ್ಲಿ ಕಲ್ಪಿತಭಾವ ನೆನಹು, ಅರ್ಚನೆ, ಅರ್ಪಿತಕ್ಕಿಂಬಿಲ್ಲದ್ದರಿಂದ ಹುಸಿಯುಳ್ಳಾತ ಭಕ್ತನಲ್ಲವೆಂದು ಹೇಳಿಹರು.

ಬಾಧೆಯುಳ್ಳಾತ ಜಂಗಮನಲ್ಲ : ಬಾಧಾರಹಿತ ಜಂಗಮ ಸಿಕ್ಕುವುದು ವಿರಳ. ತನುವಿನ ಬಾಧೆಯುಳ್ಳವನು ತನುವಿನ ವಿಕಾರದ ಭಾದೆಯುಳ್ಳವನು ಇಂದ್ರಿಯಂಗಳ ಬಾಧೆ. ಪ್ರಾಣಾದಿಗಳ ಬಾಧೆ, ಕರಣಂಗಳ ಬಾಧೆ, ಒಂದಿಲ್ಲೊಂದು ಬಾಧೆಯುಳ್ಳ ಜಂಗಮರಿದ್ದಾರೆ. ಈ ಬಾಧೆಯುಳ್ಳವರಾಗಿಯೆ ಬೇಡುವ ಜಂಗಮನಾಗಿಹನು. ಇವರು ಗಮನಾಗಮನವುಳ್ಳ ಜಂಗಮರು. ಹುಟ್ಟು ಸಾವಿಂಗೆ ಒಳಪಟ್ಟ ಜಂಗಮರು, ಇವರು ವಿರತಿ ಇರಲಿ, ಸನ್ಯಾಸಿಗಳೆ ಇರಲಿ, ಯೋಗಿಗಳೆ ಇರಲಿ, ಇವರಿಗೆ ಲೋಕದೃಷ್ಟಿ ದೃಢವಾಗಿದೆ. ಮೇಲಾಗಿ ದೇಹಬುದ್ಧಿ ದೇಹಾಭಿಮಾನ ತನ್ನ ಶರೀರದಿಂದಾಗುವ ಸತ್ಕರ್ಮದಲ್ಲಿ ಪೂರ್ಣ ಅಭಿಮಾನವದೆ, ಈ ಅಭಿಮಾನ ಲೋಕದವರಿಂದ ಜಗದ್ವಂದ್ಯನೆನ್ನಿಸಿಕೊಳ್ಳುವ ವಾಸನೆಯಿಂದ ಒಳಗೊಳಗೆ ತನ್ನ ಕೀರ್ತಿ ಪ್ರತಿಷ್ಠೆತೆ ಗೌರವವನ್ನು ಬಹು ಘನವಾಗಿ ಇಟ್ಟುಕೊಂಡಿರುವುದರಿಂದ ಈ ಲೋಕದ ವಾಸನೆ ದೇಹದ ವಾಸನೆ, ಬಹುಬಾಧೆಪಡಿಸುತ್ತಿರುತ್ತದೆ.

ಅದಕ್ಕೂ ಪ್ರಭು, ಲೋಕದ ನಚ್ಚುಮಚ್ಚು ಬಿಟ್ಟವಂಗೆ ನಿಶ್ಚಿಂತವಾಯಿತ್ತು, ಏನು

ಹೊದ್ದಿತ್ತೆಂದರಿಯೆ, ಏನು ಹೊಂದಿತ್ತಿಂದರಿಯೆ ಗುಹೇಶ್ವರ ಲಿಂಗ ಅವಗ್ರಹ ಒಳಕೊಂಡಿತ್ತಾಗಿ ಎಂದು ಚಿತ್ತರಿಸಿದುದು ನೋಡುವುಡೆ, ಈ ಲೋಕದವರ ಪ್ರೀತಿ, ಲೋಕದವರ ಒಪ್ಪಿಗೆ ಲೋಕ ನಂಬಿಗೆ ಲೋಕದ ಭಾವ ಲೋಕದ ಪ್ರತಿಷ್ಠಿತೆ ಇದು ಮಹಾಕೇಡಕು. ಇದರಿಂದ ಅಂಗಬುದ್ಧಿ, ಅಂಗಾಭಿಮಾನ ದೃಢವಾಗುವುದಲ್ಲದೆ ನಷ್ಟವಾಗದು. ಈ ಕಾರಣದಿಂದ ಪಿಂಡಾಂಡ ಬ್ರಹ್ಮಾಂಡ ಈ ಎರಡರ ಸತ್ಯತ್ವ ಬುದ್ಧಿ ಮೊದಲು ನಷ್ಟವಾಗದ ವಿನಃ ನಿಶ್ಚಂತತೆ ಅಸಾಧ್ಯವು. ಆಗ ಏನೊಂದಾಗದ ಘನದಿರುವಿನ ಅರುವು ತನ್ನ ಅಂತರಂಗದಲ್ಲಿ ಬೆಳಗಿದಾಗ ಅಲ್ಲಿ ಅಕಥನೀಯ ಸುಖವು, ನೆಲೆಗೊಂಡಿಪ್ಪುದು. ಅಲ್ಲಿ ಗುಹೇಶ್ವರನೆಂಬ ಸ್ವಯಂಜ್ಯೋತಿಯೆ ತನ್ನಿರುವಾಗಿ ಬೆಳಗುವಲ್ಲಿ ಬಾಧೆ ಏತರದು, ಅಂತಪ್ಪ ಜಂಗಮ ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಉಪಮೆಗೆ ತಂದು ಎರಡೆನ್ನಬಹುದೆ ? ನಿರುಪಾದಿ ಜಂಗಮ, ನಿರ್ಗಮನಿ ಜಂಗಮ ನಿರಾಳ ಜಂಗಮ ಶುದ್ಧ ಶಿವೈಕ್ಯ ಜಂಗಮ ಕೂಡಲ ಚೆನ್ನಸಂಗಯ್ಯ.

ಜಂಗಮನೆಂಬುದು ಲಿಂಗಘನ, ಲಿಂಗಘನವದು ಜಂಗಮ, ಚರಿಸಿ ಜಂಗಮವೆನಿಸಿತ್ತು. ನೆಲಿಸಿದಲ್ಲಿ ಲಿಂಗವೆನಿಸಿತ್ತು, ಅದು ಚರಿಸಿ ಚರಿಸದಂತಿಹುದು ಉಪಾಧಿ ಯುಳ್ಳದ್ದಾಗಿ ಕಂಡರೂ ನಿರುಪಾಧಿಯಾಗಿಹುದು. ಕಥನವೆ ಅಕಥನೀಯವು ಏಕೆಂದರೆ ನಿರ್ಲಿಖಿತ ಜಂಗಮವಾಗಿದೆ.

ಜಂಗಮದ ಇರವು ವರ್ಣಿಸುವರೆ ಶಬ್ದಮುಗ್ಧವು ಆಗಿರುವಲ್ಲಿ ನಿರ್ನಾಮ ಜಂಗಮವಾಗಿದೆ. ಇದು ಅಚಿಂತ್ಯ ಪದವುಳ್ಳದ್ದಾದುದರಿಂದ ನಿರಾಳವು ನಿಶ್ಚಿಂತವು ಪರಮ ಶಾಂತಾತ್ಮವು ಆಗಿಹುದು. ನಿಜವರಿತು ಸ್ವಯಾನಂದದಲ್ಲಿ ಲೀಯವಾಗಿಹ ಘನವ ಅದೆಂತು ವರ್ಣಿಸುವುದು. ಸತ್ಯ ಜ್ಞಾನಾನಂದವದು ಅವರ್ಣೀಯವು, ವರ್ಣಿಸುವರೆ ವಾಙ್ಮನೋತೀತವು ಇಂತಪ್ಪ ಮಹದರುವುಳ್ಳ ನಿರಾಭಾರಿ ಜಂಗಮ ಲಿಂಗಕ್ಕೆ ಅದಾವ ಬಾಧೆ, ನಿರ್ದೇಹಿಗೆ ಅದಾವ ದೇಹ ?

ಆಶೆಯುಳ್ಳಾತ ಶರಣನಲ್ಲ, ಶರಣರ ನಿಲುವು ಅಪಾರವು ಅನುಪಮವಾಗಿದೆ. ನರರು, ಸುರರು ಪಿಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ರೂಢಿಸಬಲ್ಲೆನೆ ? ದೇವಗಣ, ರುದ್ರಗಣ, ಪ್ರಮಥಗಣ, ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ಭಾವಿಸಬಲ್ಲೆನೆ ? ಅಯ್ಯ ಸತ್ಯರು, ನಿತ್ಯರು, ಮುಕ್ತರು ಎಂಬ ಮಹಾಮಹಿಮರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ಅರಿಯಬಲ್ಲೆನೆ ? ಅಯ್ಯ ಇಂತೀ ತ್ರಿಭಾಂಡವನೊಳಕೊಂಡು ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ನಿಜಲಿಂಗೈಕ್ಯನ ಉಪಮಿಸಲಿಲ್ಲಾಗಿ ಭಾವಿಸಲಿಲ್ಲ, ಭಾವಿಸಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯದರುವೆ ತನ್ನಿರುವಾಗಿಹನು ಗುಹೇಶ್ವರಾ ನಿಮ್ಮ ಶರಣನು.

ಶರಣ ! ನಿಜಶರಣ ! ಉಪಮಿಸಲು ನಿಲುಕದ ಶರಣ, ಏಕೆಂದರೆ ನಿಜಲಿಂಗೈಕ್ಯ, ನಿಜವೆನ್ನದ ಅಖಂಡಿತನೆನ್ನದ ಅಚಲಿತನೆನ್ನದ ಆತ್ಮನೆನ್ನದ, ಅನಾತ್ಮನೆನ್ನದ, ದ್ವೈತನೆನ್ನದ, ಅದ್ವೈತನೆನ್ನದ, ಅಂಗನೆನ್ನದ, ಲಿಂಗನೆನ್ನದ, ಸಂಗನೆನ್ನದ, ಸಮರಸವೆನ್ನದ ನಿಶಬ್ದವೇದಿ; ಶಬ್ದದ ಹಂಗಿಗನಲ್ಲ, ಕಲ್ಪಿತ ಕಾಣದವನಾದುದರಿಂದ ನಿರುಪಮ ಘನ, ಪಿಂಡವ ಕಾಣ, ಬ್ರಹ್ಮಾಂಡವ ಕಾಣ, ಬ್ರಹ್ಮಾಂಡದ ಒಡೆಯರನ್ನು ಕಾಣ. ಕಾಣದುದ ಕಂಡುದರಿಂದ ತನ್ನನ್ನೆ

ಕಂಡ, ತನ್ನ ಕಂಡುದಕ್ಕಾಗಿ ಜಗತ್ತನ್ನು ಕಾಣನು, ಜೀವನೆಂಬುದನ್ನು ಕಾಣನು. ಈಶ್ವರನೆಂಬುದನ್ನು ಕಾಣನು. ಆವಾವುದನ್ನು ಕಾಣದವನು. ಲೋಕ ಕಂಡುದು ಶರಣ ಕಾಣನು, ಶರಣ ಕಂಡುದು ಲೋಕ ಕಾಣದು. ಲೋಕ ಕಂಡುದು ಜೀವ ತನ್ನ ಕಂಡುದು ಶರಣ. ಮರೆತದು ಜೀವ, ಅರುವಿಂಗರುವಾದುದು ಶರಣ. ಅಚ್ಚ ಸುಖಿ ಶರಣ, ಸುಖದುಃಖ ಮಿಶ್ರಿತ ಜೀವ, ಜೀವ ಕಾಮಿ, ಶರಣ ಕಾಮವ ಕಾಣದ ಪರಮ ಸುಖಿ, ಪರಮ ಸುಖವೆ ತನ್ನಿರುವು ಆದವಂಗೆ ಅದಾವ ಆಶೆ ಮಾಡುವುದು. ಸುಖದ ಸುಖಿಯಾದವಂಗೆ ಅದಾವ ಬಯಕೆ ? ನಿತ್ಯ ತೃಪ್ತಂಗೆ ಅದಾವ ಊಟದ ಆಶೆ ಮಾಡುವುದು. ಸೂರ್ಯನು ಅದಾವ ಕೈ ದೀಪದ ಆಶೆ ಮಾಡುವುದು. ಚಿತ್ ಸ್ವರೂಪನರಿತ ಶರಣಂಗೆ ಅದಾವ ಜ್ಞಾನದ ದಾಹ ಇರಬೇಕು, ಜ್ಞಾನಗಂಗೆಗೆ ಅದಾವ ದಾಹ, ಗಂಗೆಗೆ ಎಂದಾದರೂ ನೀರಿನ ದಾಹವಾಗಿರಬಹುದೆ ? ಸತ್ಯ ಜ್ಞಾನಾನಂದಮಯನಾದವಂಗೆ, ಅದಾವ ಆಶೆ ಮಾಡುವುದು, ಚಿದ್ರಸವ ಸೇವಿಸುವ ರಸನೇಂದ್ರಿಗೆ ಅದಾವ ಫಲಾಹಾರ ? ಅದಾವ ಅಮೃತಾನ್ನ ತರುವುದು ? ಶರಣನೆಂದರೆ ನುಡಿಗೆಡೆಗೊಡದ ಘನನಾದುದರಿಂದ, ಅಲ್ಲಿ ಪ್ರಮತಾ ಪ್ರಮಾಣ ಪ್ರಮೇಯಗಳೆಂಬ ತ್ರಿಪುಟಗಳೆಲ್ಲಿ ? ತ್ರಿಪುಟಲೋಕವೆಲ್ಲಿ ? ಈ ಲೋಕಂಗಳ ಒಡೆಯರೆಲ್ಲಿ ? ಒಡೆಯರ ಒಡೆಯನಾಗಿಹ ಶರಣ, ಈ ಮಹಾಂತ ಇಹದ ಆಶೆ ಮಾಡುವನೆಂತು ? ಪರದ ಆಶೆ ಮಾಡುವನೆಂತು ? ಇದು ಕಾರಣ ಶರಣ ಒಡಲಿಲ್ಲದ ಘನವಂತ ಹೃದಯದ ಹೃದಯವಾಗಿಹ ಅರು ಹೃದಯವಾದ್ದರಿಂದ ಆಶೆವುಳ್ಳಾತ ಶರಣನಲ್ಲವೆಂದು ಹೇಳಿಹರು.

ಆಸೆ ಹುಸಿ ಬಾಧೆ ನಿರಾಕರಿಸಿ ಇರಬಲ್ಲ ಗುಹೇಶ್ವರಾ ನಿಮ್ಮ ಶರಣ: ನಿಜಲಿಂಗೈಕ್ಯನಾಗಿಹ ಶರಣ, ತ್ರಿಲೋಕವಲ್ಲ ಹದಿನಾಲ್ಕು ಲೋಕವ ಕಾಣದ್ದರಿಂದ ತನ್ನ ಸ್ವ ಸುಖಿಯಾಗಿರುವದರಿಂದ ಆಶೆ, ಹುಸಿ, ಬಾಧೆ ನಿರಾಕರಿಸಿ ಇರಬಲ್ಲ ಗುಹೇಶ್ವರ ನಿಮ್ಮ ಶರಣ.

**141**

**ತನು ಬತ್ತಲಿದ್ದರೇನೊ? ಮನ ಶುಚಿಯಾಗದನ್ನಕ್ಕರ?**
**ಮಂಡೆ ಬೋಳಾದಡೇನೊ, ಭಾವ ಬಯಲಾಗದನ್ನಕ್ಕರ?**
**ಭಸ್ಮವ ಹೂಸಿದಡೇನೊ,**
**ಕರಣಾದಿ ಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ ?**
**ಇಂತೀ ಆಶೆಯ ವೇಷದ ಭಾಷೆಗೆ,**
**ಗುಹೇಶ್ವರಾ ನೀ ಸಾಕ್ಷಿಯಾಗಿ ಛೀ ಎಂಬೆನು.** ॥ 529 ॥

**ತಾತ್ಪರ್ಯ** : ತನು ಬತ್ತಲೆ ಇದ್ದಡೇನೋ ? ಮನ ಶುಚಿಯಾಗದನ್ನಕ್ಕ : ಮನ ನಿರ್ವಿಷಯವಾಗದಿದ್ದಲ್ಲಿ ತನು ಬತ್ತಲೆಯಿದ್ದರೇನಾಯಿತು, ಸನ್ಯಾಸಿಗಳಲ್ಲಿ ಜೈನ ಸನ್ಯಾಸಿಗಳು ಇರುವರು. ಅವರು ತನು ಬತ್ತಲೆಯಾಗಿರುವುದೆ ಅವರ ನಿಯಮವಾಗಿದೆ. ಅವರ ದೃಷ್ಟಿಯಲ್ಲಿ ಲೋಕ ತುಚ್ಛವಾಗಿದೆ. ಲೋಕದೃಷ್ಟಿಯು ತುಚ್ಛವಾಗಿದೆ. ತುಚ್ಛವಾದಂತೆ ನಾನು

ನನ್ನದೆಂಬ ಅವಿದ್ಯಾದೃಷ್ಟಿ ನಷ್ಟವಾಗಿದ್ದರೆ ಒಳ್ಳೆಯದು.

ಮನೊ ವೈ ಗಗನಾಕಾರಂ, ಮನೊ ವೈ ಸರ್ವತೋಮುಖಿವಾ ॥ ಮನೋತೀತ ಮನಃ । ಸರ್ವಂ ನಮನಃ ಪರಮಾರ್ಥತ ಃ ॥ ಅರ್ಥ ಮನಸ್ಸು ಗಗನದಂತೆ ಇದೆ. ಮನಸ್ಸು ಸರ್ವತೋಮುಖವಾಗಿದೆ, ಹಿಂದೆ ಹೋಗಿರುವುದು ಮನಸ್ಸು ಮನವೆ ಸರ್ವವು ಆಗಿದೆ. ಪರಮಾರ್ಥ ದೃಷ್ಟಿಯಿಂದ ನೋಡಿದರೆ ಮನಸ್ಸೇ ಇಲ್ಲ, ಮನಸ್ಸು ಬಹು ವಿಚಿತ್ರವು. ಮನವು ಸಕಲ ಮುಖವುಳ್ಳದ್ದಾಗಿದೆ. ಸರ್ವವು ಅದುವೆ ಗಗನದಂತೆ ಇದೆ. ಚರಾಚರ ಜಗವು ಅದುವೆ ಚತುರ್ಯುಗವು ಅದುವೆ ವಾರ ತಿಥಿ ಮಾಸ ಸಂವತ್ಸರವಾದುದು ಅದುವೆ. ವೇದಂಗಳು ಸಕಲ ಶಾಸ್ತ್ರಂಗಳು, ಪುರಾಣಂಗಳು ಆದುದು ಅದುವೆ. ಗುರು, ಶಿಷ್ಯ, ಬೋಧ ಅಬೋಧ ಆದುದು ಅದುವೆ. ವರ್ಣಾಶ್ರಮವಾದುದು ಅದುವೆ, ಬಂಧಮೋಕ್ಷವಾದುದು ಅದುವೆ. ಭೇದರೂಪವದುವೆ, ಅಭೇದವದುವೆ ಸಕಲವು ಇದುವೆ ಆಗಿರುವಲ್ಲಿ ಗಗನದಂತಿರುವ ಜ್ಞಾನಾಮೃತ ದರ್ಶನವಾದರೆ ಮಾತ್ರ ಶುದ್ಧವಾಗುವುದು. ಇಲ್ಲವಾದರೆ ಮನಸ್ಸು ನಾನಾಮುಖವುಳ್ಳದ್ದಾಗಿ ಸಂಚರಿಸುತ್ತದೆ.

ತಾನು ಬತ್ತಲೆ ಇದು ಬಹಿರ್ ಬತ್ತಲು, ಅಷ್ಟು ಶ್ರೇಷ್ಠವಲ್ಲ, ಮನದ ಸಂಕಲ್ಪ ವಿಕಲ್ಪ ಕೆಡಬೇಕು, ಮನ ಕುರುಹಿನ ಕಲ್ಪಿತ ಕೆಟ್ಟು ಅಕಲ್ಪಿತ ಘನದಿರುವಿನ ಅರುವಾಗಬೇಕು, ಇದು ಮನ ಶುದ್ದವಾದ ಪರಿಯು. ಮಂಡೆ ಬೋಳಾದಡೇನು, ಭಾವ ಬಯಲಾಗದನ್ನಕ್ಕರ ಮಂಡೆ ಬೋಳಾದಲ್ಲಿ ಕೂದಲುಗಳು ಹೇಗೆ ಇಲ್ಲವಾಗಿ ಮಂಡೆ ಎಷ್ಟು ಶುದ್ಧವಾಗಿದೆ ಹಾಗೆ ಭಾವರೂಪ ಭ್ರಮ ಕೂದಲಿನಂತೆ ಅಷ್ಟು ದಟ್ಟವಾಗಿದೆ. ಈ ಭ್ರಮ ನಷ್ಟವಾಗುವವರೆಗೂ ಭಾವನಿರ್ಭಾವವಾಗದು. ನಿರ್ಭಾವ ಭಾವರಹಿತೋನ ಭವಾಮಿ ವತ್ಸ । ನಿರ್ಯೋಗ ಯೋಗ ರಹಿತೋನ ಭವಾಮಿ ವತ್ಸ । ನಿಶ್ಚಿತ್ ಚಿತ್ ರಹಿತೋನ ಭವಾಮಿವತ್ಸ । ಜ್ಞಾನಾಮೃತಂ ಸಮರಸಂ ಗಗನೋಪಮೋಹಮ್ ॥ ಭಾವ ಬಯಲಾಗಬೇಕಾದರೆ ಭಾವಕ್ಕಗಮ್ಯವಾಗಿಹ ಘನದಿರುವುಳ್ಳ ಅರುವು ಜಾಗೃತವಾದಲ್ಲಿ ಭಾವ ಬಯಲಾದ ಸೂಚನೆ. ಮಂಡೆಯು ಬೋಳಾದ ಚೆನ್ನ ಸನ್ಯಾಸಿ ಇರಲಿ, ಆರೆ ಇರಲಿ ಬೋಳಿಸಿಕೊಂಡ ಮಾತ್ರಕ್ಕೆ ಭಾವ ನಿರ್ಭಾವವಾಗದು.

ಭಾವ ಪುಸಿಯಾಗಬೇಕಾದರೆ ನಿರ್ಭಾವದ ಬೋಧವು ಅವಶ್ಯಕವು. ನಿರ್ಭಾವದ ಬೋಧವು ಆದಲ್ಲಿ ಆಗ ತಾನು ಭಾವವೂ ಆಗುವುದಿಲ್ಲ, ಅಭಾವವೂ ಆಗುವುದಿಲ್ಲ, ತನಗೆ ಯೋಗವೂ ಇಲ್ಲ, ವಿಯೋಗವೇ ಇಲ್ಲ, ತಾನು ಮನ ಇದ್ದವನು ಆಗುವುದಿಲ್ಲ, ಗಗನದಂತೆ ಸಮರಸವಾಗಿರುವ ಜ್ಞಾನಾಮೃತ ತಾನು ಈ ನಿರ್ಭಾವದ ಜ್ಞಾನವಾಗುವುಡೆ ಮಂಡೆ ಬೋಳಾದಡೇನು, ಅದು ಕೂದಲಗಳಿಂದ ತುಂಬಿದರೇನು ತಾನು ಇದ್ದಂತಿಹ ಜ್ಞಾನಾಮೃತ. ಶರೀರ ದೃಷ್ಟಿಯು ಅಷ್ಟು ಮಹತ್ವವಾದುದಲ್ಲ. ಮಂಡೆ ಬೋಳಾದವರು ನಾಲ್ಕು ವರ್ಣಾಶ್ರಮಗಳಲ್ಲಿಯು ಸಿಕ್ಕುವರು. ಭಾವರೂಪ ಭ್ರಮ ಬೋಳಾದವರು ಸಿಕ್ಕುವುದು ವಿರಳ, ಭ್ರಮರೂಪ ಭಾವ ನಷ್ಟವಾಗಿ ಭಾವಕ್ಕಗಮ್ಯವಾಗಿಹ ಘನದರ್ಶನ ಅದು ತನ್ನ ದರ್ಶನ, ಜ್ಞಾನಾಮೃತ ದರ್ಶನ. ಇದು ಗಗನದಂತೆ ಮೌನವಾಗಿಹ ಜ್ಞಾನಾಮೃತ, ಈ ಜ್ಞಾನಾಮೃತ ಕರಿಗೊಂಡವರು ಭಾವ ಬಯಲಾದವರು. ನಷ್ಟವಾದವರು. ಅವರಿಗೆ ತನುವಿನ ಭಾವ, ಇಂದ್ರಿಯುಂಗಳ ಭಾವ, ಪ್ರಾಣಾದಿಗಳ ಭಾವ, ಕರಣಂಗಳ ಭಾವ

ನಷ್ಟವಾಗುವುದಲ್ಲದೆ, ಅಭಾವ ತಾನೆಂಬ ಭಾವ ನಷ್ಟವಾಗಿ, ಸಾಕ್ಷಿ ನಾನು, ದೃಕ್ ನಾನು, ನಿಸ್ಸಂಗ ನಾನು, ಆತ್ಮ ನಾನು, ಪರಬ್ರಹ್ಮ ನಾನೆನ್ನುವ ಭಾವ ನಷ್ಟವಾಗಿ ಭಾವಕ್ಕಗಮ್ಯವಾಗಿಹ ಘನದಿರುವುಳ್ಳವನಾಗಿಹ ಮಹಾಂತ ಜೀವಾತ್ಮ ಅಂತರಾತ್ಮ ಪರಮಾತ್ಮನೆಂಬ ತ್ರಿತ್ರಯ ಭಾವಂಗಳು ನಷ್ಟವಾಗಿ ಗಗನದಂತೆ ಅಖಂಡವಾಗಿಹ ಜ್ಞಾನಾಮೃತವೆ ತನ್ನಿರುವೆಂಬ ಅರುವಾಗಿಹ ಮಹಾಂತಂಗೆ ನಿಜವಾದ ಮಂಡೆ ಬೋಳಾಗಿದೆ. ಅದು ಭಾವ ಬಯಲಾದ ಚಿನ್ಹವೆಂದು ತಿಳಿವುದು.

ಭಸ್ಮ ಹೂಸಿದಡೇನು ಕರುಣಾದಿ ಗುಣಂಗಳನೊತ್ತಿ ಮೆಚ್ಚಿ ಸುಡದನ್ನಕ್ಕರ ಮೈ ತುಂಬ ಭಸ್ಮ ಹೂಸಿದಡೇನು ಶರಣ ಗುಣಂಗಳು ಜ್ಞಾನಾಗ್ನಿಯಲ್ಲಿ ಭಸ್ಮವಾಗದಿದ್ದರೆ ಭಸ್ಮ ಹೂಸಿದಡೇನು ಪ್ರಯೋಜನ ಚಿದ್ ಭಸ್ಮವ ಧರಿಸಬೇಕಲ್ಲದೆ ಗೋವುಗಳ ಸೆಗಣಿಯ ಸುಟ್ಟು ನಾನಾ ಸುಗಂಧ ದ್ರಾವಕವ ಹಾಕಿ, ಮಂತ್ರಪುರಶ್ಚರ್ಣದಿಂದ ಕ್ರಿಯಾಘಟ್ಟಿ ಮಾಡಿ ಅದು ಚಿದ್‌ಭಸ್ಮವೆಂದು ಹಚ್ಚಿದ ಮಾತ್ರಕ್ಕೆ ಕರಣಗುಣಂಗಳ ನಷ್ಟ ಮಾಡೀತೆ ? ನಷ್ಟಮಾಡದು. ನಿರ್ಮೋಹ, ಮೋಹ ಪದವೀತೆ ನಮೆವಿಕಲ್ಪೋ ॥ ನಿಃಶೋಕ ಶೋಕ ವೀತಿನ ಮೇವಿಕಲ್ಪಃ ॥ ನಿರ್ಲೋಭ ಲೋಭ ಪದವಿವೀತಿ ನಮೇವಿಕಲ್ಪೋ। ಜ್ಞಾನಾಮೃತಂ ಸಮರಸಂ ಗಗನೋಪಮೋಹಮ್॥ ಭಸ್ಮಧಾರಿಗಳಾದವರು ಆರೆ ಆಗಲಿ, ತಮ್ಮ ಕರಣಗುಣಂಗಳನೊತ್ತಿ ಮೆಟ್ಟಿ ಸುಡಬೇಕಾದರೆ ಗಗನದಂತೆ ಅಖಂಡವಾಗಿಹ ಜ್ಞಾನಾಗ್ನಿಯಲ್ಲಿ ಅವುಗಳ ಸುಡುವುದು. ಅಂದರೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲುವುಳ್ಳ ಜ್ಞಾನ ಬೋಧವಾಗಬೇಕು. ಇದರಿಂದ ಸಹಜ ಕರಣಂಗಳ ಪೂರ್ವಸ್ವಭಾವ ನಷ್ಟವಾಗಿ ಜ್ಞಾನಾನಂದಮಯವಾಗುವುದು.

ಓ ಸ್ವಸುಖದ ಜಿಜ್ಞಾಸುಗಳೆ ? ನಿಮ್ಮ ಕರಣಂಗಳಿಗೆ ನೀವೆ ಬೋಧ ಮಾಡುವ ಗುರುಗಳಾಗುವುದು, ಎಲೈ ಕರಣಂಗಳೆ ನಿಮ್ಮ ಗುಣಂಗಳಾದ ಮೋಹ ನಿರ್ಮೋಹವೆಂಬ ದ್ವಂದ್ವಗಳ ವಿಕಲ್ಪ ನನ್ನಲ್ಲಿ ಇಲ್ಲ, ನಿಮ್ಮ ಗುಣಂಗಳಾದ ಶೋಕ ಅಶೋಕಗಳೆಂಬಿವು ನನ್ನಲ್ಲಿ ಇಲ್ಲ. ಇದಲ್ಲದೆ ನನ್ನಲ್ಲಿ ಲೋಭ ನಿರ್ಲೋಭವೆಂಬ ವಿಕಲ್ಪವು ಇಲ್ಲ. ಈ ದ್ವಂದ್ವದಿಂದುಕ್ತವಾದುದು ನಿಮ್ಮಗಳ ಇರವು ಇಲ್ಲ, ಎಲೈ ಕರಣಂಗಳೆ ನೀವು ನಿಜವಾಗಿ ನನ್ನಯ ಇರವು, ನನಗಿಂತ ನೀವು ಅನ್ಯವಲ್ಲ, ತೆರಹಿಲ್ಲದ ಘನವೆ ನಿಜದಿರುವು ಅಲ್ಲಿ ಕರಣಂಗಳಾದ ನೀವು ಇಲ್ಲ, ನಿಮಗೆ ಬೆಳಗುವ ನಾನು ಇಲ್ಲ, ಪ್ರಕಾಶಿತ, ಪ್ರಕಾಶವೆಂಬಿವು ಕಲ್ಪಿತ. ಬೆಳಗಿಸಿಕೊಳ್ಳುವುದು ಬೆಳಗುವುದು ಎಂಬುದು ಕಲ್ಪಿತ. ಕಲ್ಪಿತವಲ್ಲದ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲವು ಅಲ್ಲಿ ಕಲ್ಪಿತಕ್ಕೆಡೆಯುಂಟೆ ? ಎಂಬ ಸುಜ್ಞಾನದಲ್ಲಿ ಕರಣಂಗಳ ಗುಣಂಗಳ ಸುಡುವುದಲ್ಲದೆ ಲಿಂಗ ಕರಣಂಗಳ ಮಾಡುವುದು. ಇಂತಪ್ಪ ಸುಜ್ಞಾನ. ಚಿನ್ಹಕ್ಕೆ ನಿಜವಾದ ಭಸ್ಮದಾರಿಗಳೆಂದು ತಿಳಿವುದು. ನಿಷ್ಕಾಮ ಕಾಮ ಮಿಹ ನಾಮ ಕಥಂವದಾಮಿ । ನಿಸ್ಸಂಗ ಸಂಗಮಿಹ ನಾಮಕಥಂವದಾಮಿ । ನಿಸ್ಸಾರಸಾರರಹಿತಂ ಚ ಕಥಂವದಾಮಿ । ಜ್ಞಾನಾಮೃತಂ ಸಮರಸಂ ಗಗನೋಪಮೋಹಮ್। ಇಂತಪ್ಪ ಸುಜ್ಞಾನದಿಂದ ಕರಣಂಗಳ ಗುಣಂಗಳ ಸುಟ್ಟು ಲಿಂಗ ಕಿರಣಂಗಳಾದಲ್ಲಿ ಕರಣಂಗಳು ಇಚ್ಛೆವುಳ್ಳವುಗಳು ಇಚ್ಛಾ ರಹಿತವು ಎಂದು ಹೇಗೆ ಹೇಳಲಿ, ಇವು ಸಂಗವುಳ್ಳವುಗಳು, ಸಂಗರಹಿತವು ಎಂದು ಹೇಗೆ ಹೇಳಲಿ, ಇವು ಸಾರ ರೂಪವು ನಿಸ್ಸಾರವು ಎಂದು ಹೇಗೆ ಹೇಳಲಿ, ಗಗನದಂತೆ ಅಖಂಡವಾಗಿಹ ಜ್ಞಾನಾಮೃತದಲ್ಲಿ ಲೀಯವಾಗಿರುವಲ್ಲಿ ಕರಣಂಗಳು ಜ್ಞಾನಾಮೃತದ ಹೊರ್ತು-

ಅನ್ಯವೆ ಇಲ್ಲವೆಂದು ಹೇಳಲು ಇಂಬಿಲ್ಲವಾಗಿ ಶಬ್ದಮುಗ್ಧವಾಗಿಹ ಘನದಿರುವ ಅದನೆಂತು ವರ್ಣಿಸುವುದು. ಮನವೆ ಲಿಂಗವಾದ ಬಳಿಕ ನೆನೆವುದಿನ್ನಾರನಯ್ಯ, ಭಾವವೆ ಐಕ್ಯವಾದ ಬಳಿಕ ಬಯಸುವದಿನ್ನಾರನಯ್ಯ, ಭ್ರಮೆ ಅಳಿದು, ನಿಜವು ಸಾಧ್ಯವಾದ ಬಳಿಕ ಗುಹೇಶ್ವರನಲ್ಲಿ ಅರಿವುದು ಇನ್ನಾರನಯ್ಯ, ಹೃದಯವೆ ಕರಣಂಗಳ ಗುಣಗಳ ಕೆಟ್ಟು ಅರುಹೃದಯವಾದ ಮೇಲೆ ಮನವೆಂದರೆ ಲಿಂಗ, ಭಾವವೆಂಬೆನೆ ನಿರ್ಭಾವ, ಅರುವು ಎಂಬೆನೆ ಅರಿಯದರುವು ಆಗಿಹವು. ಹೀಗೆ ಕರಣಂಗಳ ಗುಣಂಗಳ ಸುಟ್ಟು ಜ್ಞಾನಾಮೃತನಾದರೆ ಒಳ್ಳೆಯದು, ಇದನ್ನು ಬಿಟ್ಟು ಈ ಆಶೆಯ ವೇಷದ ಭಾಷೆಗೆ ಗುಹೇಶ್ವರಾ ನೀ ಸಾಕ್ಷಿಯಾಗಿ ಛೀ ಎಂಬೆನು ಎಂದು ಪ್ರಭು ನಿಷ್ಠುರವಾಗಿ ಹೇಳಿಹನು.

**142**

**ಭಸ್ಮವ ಹೂಸಿ ಬತ್ತಲೆಯಿದ್ದಡೇನು, ಬ್ರಹ್ಮಚಾರಿಯೆ?**
**ಅಶನವನುಂಡು ವ್ಯಸನವ ಮರೆದಡೇನು ಬ್ರಹ್ಮಚಾರಿಯೆ ?**
**ಭಾವ ಬತ್ತಲೆಯಿರ್ದು ಮನ ದಿಗಂಬರವಾಗಿರ್ದಡೆ**
**ಅದು ಸಹಜ ನಿರ್ವಾಣವು ಕಾಣಾ ಗುಹೇಶ್ವರಾ.** ॥ 530 ॥

**ತಾತ್ಪರ್ಯ :** ಭಸ್ಮವ ಹೂಸಿ ತನು ಬತ್ತಲೆ ಇದ್ದಡೇನು ಬ್ರಹ್ಮಚಾರಿಯೆ ? : ಬ್ರಹ್ಮಚಾರಿಯೆಂಬುದು ನಾಲ್ಕು ಆಶ್ರಮಗಳಲ್ಲಿಯ ಒಂದು ಆಶ್ರಮ. ಬಾಲ್ಯದಲ್ಲಿದ್ದು ಪ್ರಬುದ್ಧವಾಗವ ತನಕ ಸಕಲ ಶರೀರಗಳು ಈ ಆಶ್ರಮವನ್ನು ಅವಲಂಬಿಸಿಕೊಂಡಿರುತ್ತವೆ. ಅವಲಂಬಿಸಿಕೊಂಡಿದ್ದರೂ ಬ್ರಹ್ಮಚರ್ಯದ ಪರಿಚಯವಿಲ್ಲ. ಎಲ್ಲೊ ಕೆಲವರು ಬ್ರಹ್ಮಚರ್ಯ ಪಾಲನೆಯಲ್ಲಿಹರು ಎಂದು ತಿಳಿದವರು ಹೇಳುವರು ಬ್ರಹ್ಮಚರ್ಯವೆಂಬುದು ಏಕೆ ಪ್ರಸಿದ್ಧವಿದೆ ಗೊತ್ತೆ?

ಪೂರ್ವದಲ್ಲಿ ಪ್ರಜಾಪತಿ ಬ್ರಹ್ಮನು ನರರಿಗೂ ಸುರಾಸುರರಿಗೂ ''ದ'' ಎಂಬುದನ್ನು ಆಚರಿಸಿರಿ ಎಂದು ಬೋಧಿಸಿದನು. ನರರಲ್ಲಿ ಸುರಾಸುರರಲ್ಲಿ ''ದ'' ಎಂಬ ಬ್ರಹ್ಮನ ಕಾರುಣ್ಯ ಅದು ಬೇರೆ ಬೇರೆ ರೂಪದಲ್ಲಿ ಅರ್ಥವಾಯಿತು, ಅಸುರರಿಗೆ ''ದ'' ಎಂಬ ಸಂಜ್ಞೆ ಅವರಿಗೆ ಈ ಪರಿ ಅರ್ಥವಾಯಿತು ''ದ'' ಎಂಬುದು ದಮನ, ಇಂದ್ರಿಯಂಗಳ ನಿಗ್ರಹವೆಂದು ಅರ್ಥವಾಗಿ ಇಂದ್ರಿ ನಿಗ್ರಹ ಸಾಧನದಲ್ಲಿಯೆ ನಿರತರಾದರು. ಇತ್ತ ಸುರರು ''ದ'' ಎಂಬ ಸಂಜ್ಞೆ ಈ ಪರಿ ಅರ್ಥ ಮಾಡಿಕೊಂಡರು. ''ದ'' ಎಂಬುದು ದಯೆ ಎಂದು ಅರ್ಥ ಮಾಡಿಕೊಂಡು ಸಕಲ ಜೀವರುಗಳಲ್ಲಿ ದಯವುಳ್ಳವನಾಗಿರುವುದು ನಿಜವಾದ ಧರ್ಮವೆಂದು ದಯವ ಪಾಲಿಸ ಹತ್ತಿದರು. ನರರಿಗೆ ಹೀಗೆ ಅರ್ಥವಾಯಿತ್ತು. ''ದ'' ಎಂಬುದು ದಾನ, ದಾನ ಮಾಡುವುದೆ ನಮ್ಮ ಮುಖ್ಯ ಧರ್ಮವೆಂದು ದಾನವ ಪಾಲಿಸ ಹತ್ತಿದರು. ಬ್ರಹ್ಮನ ಕಾರುಣ್ಯ ಅವರವರ ಅಂತಃಕರಣ ಮೇಲಿಂದ ಇದ್ದುದೊಂದೆ ''ದ'' ಈ ಪರಿ ಧರ್ಮವಾಗಿ ನಿಂತಿಹವು. ''ದ'' ಎಂಬ ಸಂಜ್ಞೆಯಿಂದುಕ್ತವಾದ ''ಬ್ರಹ್ಮನ ಕಾರುಣ್ಯ ಮೇಲೆ ತಿಳಿಸಿದ ಮೇರೆಗೆ, ಒಂದೆಯಾಗಿದ್ದರೂ ಇವರುಗಳ ಅಂತಃಕರಣದ ಮೇರೆಗೆ ಈ ರೀತಿ ಅರ್ಥವಾಗಿ ಬ್ರಹ್ಮದೇವನಿಂದ ''ದ'' ಎಂಬುದು ಲಭ್ಯವಾದುದರಿಂದ

ಬ್ರಹ್ಮಚರ್ಯವೆಂಬ ನಾಮವಾಯಿತ್ತು. ಈ ವಿಷಯ ಉಪನಿಷದದಲ್ಲಿ ಬಂದಿದೆ. ನರರಿಗೂ ಸುರಾಸುರರಿಗೂ ''ದ'' ಎಂಬ ಸಂಜ್ಞೆಯ ಅರ್ಥ ಒಬ್ಬನಿಗೆ ದಮನ, ಮತ್ತೊಬ್ಬನಿಗೆ ದಯಾ, ಮಗದೊಬ್ಬನಿಗೆ ದಾನವೆಂಬುದಾಗಿ ತಿಳಿದು ನರರಿಗೆ ದಾನವೆ ಆಚಾರವಾಯಿತ್ತು. ಸುರರಿಗೆ ದಯವೆ ಆಚಾರವಾಯಿತ್ತು. ಅಸುರರಿಗೆ ದಮನವೆ ಆಚಾರವಾಯಿತ್ತು. ಈ ಮೂವ್ವರು ತಮತಮಗೆ ತಿಳಿದಂತೆ ಆಚರಿಸಿದರೆ ಬ್ರಹ್ಮತತ್ವವ ಆಚರಿಸಿದಂತಾಯಿತ್ತು.

ಬ್ರಹ್ಮಚರ್ಯವೆಂಬುದು ಬ್ರಹ್ಮತತ್ವ ತಿಳಿಯುವುದೆ ಬ್ರಹ್ಮಚರ್ಯವಾಗಿದೆ. ತತ್ವವ ತಿಳಿದು ಸ್ವಯಾನಂದದಲ್ಲಿರುವುದೆ ಬ್ರಹ್ಮಚರ್ಯವಾಗಿದೆ. ಇದೊಂದು ಸ್ವಯಮೇವ ತನ್ನದಾದ ಆಚಾರವು, ಇದು ಶ್ರೇಷ್ಠವಾದ ಆಚಾರವಾಗಿದೆ. ಆವುದಾದರೂ ಆಚಾರ ಮಾಡಬಹುದು. ಈ ನಿಷ್ಕಳಂಕರೂಪಿ ಬ್ರಹ್ಮ ತಿಳಿಯುವ ಆಚಾರ, ಸುಲಭವು ಆಗಿದೆ, ಕಠಿಣವು ಆಗಿದೆ.

ಆರಿಗೆ ಸುಲಭವಾಗಿದೆ ?

ಆರಿಗೆ ಕಠಿಣವಾಗಿದೆ ?

ಬ್ರಹ್ಮತತ್ವ ತಿಳಿಯದವರು ಆವ ಸಾಧಕರಿಗೆ ದೊರತಿಹರು. ಅವರು ಬ್ರಹ್ಮತತ್ವ ತಿಳಿಯದಿದ್ದರೂ ತಿಳಿದಂತೆ ನಟಿಸಿ ವೇದಾಧ್ಯಯನ ಮಾಡಿ ಪ್ರತಿಯೊಂದಕ್ಕೂ ವೇದದಲ್ಲಿರುವ ಶ್ಲೋಕವ ಹೇಳಿ ಜನರನ್ನು ಮರುಳಗೊಳಿಸಿ ಕರ್ಮ ಮಾಡಲು ಹಚ್ಚುವವರಿಗೆ ಬ್ರಹ್ಮ ತತ್ವ ತಿಳಿಯುವುದು ಕಠಿಣವಾಗಿದೆ.

ಬ್ರಹ್ಮತತ್ವ ತಿಳಿದು ಬ್ರಹ್ಮವೆ ಆಗಿಹ ಮಹಾಂತ ದೊರತಲ್ಲಿ ಆತನು ನೇರವಾಗಿ ಬ್ರಹ್ಮತತ್ವವ ಸಂಜ್ಞೆಯ ಮೂಲಕ ಅರಿಯಲು ಅನುವ ಮಾಡಿ ಕರುಣಿಸುವನು. ಆ ಅನುವಿನಿಂದ ತಿಳಿಯ ಹೋದವರಿಗೆ ಬಹು ಸುಲಭವಾಗುವುದು.

ದಿಟತತ್ವ ತಿಳಿದ ಸಟೆಯ ಕಾಣದ ಮಹಾಂತನಾದುದರಿಂದ ಪ್ರಭುದೇವ, ಈ ಅರೆ ಮರುಳರ ನೋಡಿ, ಭಸ್ಮವ ಹೂಸಿ ತನು ಬತ್ತಲೆ ಇದ್ದಡೇನು, ಬ್ರಹ್ಮಚಾರಿಯೆ ? ಎಂದು ಪ್ರಶ್ನಿಸಿಹನು. ಭಸ್ಮವ ಹೂಸಿದುದು ತನುವಿಂಗಲ್ಲವೆ ? ಬತ್ತಲೆ ಇದ್ದುದು ತನು ಅಲ್ಲವೆ ? ತನುವನ್ನೆ ತಿರಸ್ಕರಿಸಿದ ಅದನ್ನೆ ಹೇತುವೆಂದು ಮಲಮಯ ಭಂಡಾರವೆಂದು ವೈರಾಗ್ಯವಂತನಾಗಿ ಬತ್ತಲೆ ಇದ್ದರೆ, ಬ್ರಹ್ಮವ ತಿಳಿದಂತಾಯಿತೆ ? ಮೈಯೆಲ್ಲ ಭಸ್ಮವ ಬಡಿದುಕೊಂಡಲ್ಲಿ ಬ್ರಹ್ಮವಾದನೆ ? ಚೈತನ್ಯಮಯನಾದನೆ ? ತನು ಬತ್ತಲೆಯಾಗಿ ತಿರುಗಿದರೆ ಗಮನವಿಲ್ಲದೆ ಸುಳಿದಂತಾಯಿತೆ ? ನಿರ್ಗಮನಿಯಾಗಿ ಅಚಲಿತನಾಗಿ ನಿಂತಂತಾಯಿತ್ತೆ ? ಇದರಿಂದ ತನ್ನ ತಾನರಿದಂತಾಯಿತ್ತೆ ? ತನು ಬತ್ತಲೆ ಇದ್ದಡೆ ತನ್ನನರಿದ ಸ್ವಯಾನಂದದಲ್ಲಿದ್ದುದಾಯಿತೆ ? ಇಲ್ಲವಾದಲ್ಲಿ ಅದು ಹೇಗೆ ಬ್ರಹ್ಮಚರ್ಯವಾಗುವುದು.

ಅಸನವನುಂಡು ವ್ಯಸನವ ಮರದಡೇನು ಬ್ರಹ್ಮಚಾರಿಯೆ ? ಅಸನವನುಂಡುದು ಆವುದು ? ವ್ಯಸನವ ಮರೆತುದು ಆವುದು ? ಎಂಬ ಪರಿಜ್ಞಾನವಿಲ್ಲದವರು ಇವರು ತತ್ವವರಿಯದವರು. ಉಂಡೆನುಟ್ಟೆನೆಂಬ ಸಂದೇಹ ನಿನಗೇಕೆ ? ಎಂಬುದೆ ಅಗ್ನಿ. ಉಡುವುದೆ ಪೃಥ್ವಿ, ನೀನೆಂದು ಉಂಡೆ ನಾನೆಂದು ಕಂಡೆ, ವುಂಬದೆ ಉಡದೆ ಹೊಗೆಯ ಕೈಯಲ್ಲಿ ಸತ್ತೆನೆಂಬ ಅಂಜಿಕೆ ಬೇಡ ಗುಹೇಶ್ವರಾ. ನಿನಗಾವ ಅಂಜಿಕೆಯೂ ಇಲ್ಲ.

ಅಸನವನುಂಡುದು ಜಠರಾಗ್ನಿ. ವೈಶ್ವಾನರ ವ್ಯಸನವ ಮರೆತುದು ಕರಣಂಗಳ ಕಾಯ ಉಂಬುದು ಊಟ ಮಾಡದಿರುವುದು ಜಠರಾಗ್ನಿ ಕಾರ್ಯ. ವ್ಯಸನವ ಮಾಡುವುದು

ಮಾಡದಿರುವುದು ಕರಣಂಗಳ ಕೆಲಸ, ಜಠರಾಗ್ನಿ ಮಂದವಾದಾಗ ಉಂಬುವುದು ಬಿಡುವುದು ಪ್ರದೀಪ್ತವಾದಾಗ ಉಂಬುವುದು. ಕರಣಂಗಳ ವಿಷಯಾಸಕ್ತಿಯುಳ್ಳದ್ದಾಗಿರುವಲ್ಲಿ ವ್ಯಸನಿಯಾಗುವವು. ಅದು ರಜ ತಮೋಗುಣದ ಕಾರ್ಯ. ನಿರ್ವ್ಯಸನಿಯಾಗುವುದು ಸತ್ವ ಗುಣದ ಕಾರ್ಯ. ಇದು ಪ್ರಕೃತಿ ಕಾರ್ಯ. ಈ ಕಾರ್ಯಕ್ಕೆ ತನ್ನದೆಂದು ತಿಳಿದಿಹುದು ಕರಣಂಗಳ ಭ್ರಾಂತಿ. ಈ ಭ್ರಾಂತಿಯಿಂದುಕ್ತರು ನಿಭ್ರಾಂತರಾದರೆ ? ಬ್ರಹ್ಮವರಿತರೆ ? ಬ್ರಹ್ಮವರಿತ ಘನವಂತ, ಓ ಕಲ್ಪಿತ ಪುರುಷನೇ ನೀನೆಂದು ಉಂಡೆ ನೀನೆಂದು ಕಂಡೆ ಉಂಡವನು ನೀನಲ್ಲ, ಉಣ್ಣದವನು ನೀನಲ್ಲ, ವ್ಯಸನಿಯು ನೀನಲ್ಲ, ನಿರ್ವ್ಯಸನಿಯು ನೀನಲ್ಲ, ನಿನ್ನದಲ್ಲ ನನ್ನದಲ್ಲ ಅದು ಉಪಾಧಿಯ ಕಾರ್ಯ, ಈ ಉಪಾಧಿಯ ಕಾರ್ಯ ತಾನಾದವನು ನಿರುಪಾಧಿಯ ತತ್ವ ಅರಿತಂತಾಯಿತೆ ? ನಿರುಪಾಧಿ ತಾನಾದನೆ ? ನಿರಾಲಂಬ ತಾನಾದನೆ ?

ಭಾವಬತ್ತಲೆಯಿದ್ದು, ಮನ ದಿಗಂಬರವಾದಡೆ ಅದು ಸಹಜ ನಿರ್ವಾಣವು ಕಾಣಾ ಗುಹೇಶ್ವರಾ. ಆರು ವಾಣಿಗೆ ನಿಲುಕದ ತತ್ವ ತಿಳಿದಿಹರು. ಅವರು ಸಹಜ ನಿರ್ವಾಣರು. ಅವರಿಗೆ ಮಾತೆ ಎಂಜಲವಾಗಿದೆ, ಸೂತಕವಾಗಿದೆ. ಶೃತಿಯೆ ಸೂತಕವಾಗಿದೆ. ಅವರು ಶೃತಿಗಗೋಚರವಾಗಿಹ ತತ್ವಬಲ್ಲವರಾಗಿ ಅದುವೆ ಆಗಿಹರು. ಅವರಲ್ಲಿ ಭಾವವೆಂಬುದು ಭ್ರಮವಾಗಿದೆ. ಅದು ಜೀವಭಾವವುಳ್ಳದ್ದು ಆಗಿರುವಲ್ಲಿ ಅಂತರಾತ್ಮನೆಂಬ ಭಾವವಿರಲಿ ಪರಮಾತ್ಮನೆಂಬ ಭಾವವಿರಲಿ, ಅದು ಪುಸಿಯಾಗಿದೆ.

ಭಾವಕ್ಕಗಮ್ಯವಾಗಿಹ ಘನವೆ ತನ್ನಿರುವೆಂದರಿದ ಮಹಾಂತ, ಭಾವ ಒಪ್ಪದ್ದರಿಂದ ಭಾವ ಬತ್ತಲೆಯಾಗಿಹುದು ಎಂದು ತಿಳಿಯುವುದು. ಮನದಿಗಂಬರವಾದುದು ಅದು ಸಹಜ ನಿರ್ವಾಣವು, ಆವ ಮನದಿಗಂಬರವು ಅದು ಕಲ್ಪಿತಕ್ಕೆಡೆಗೊಡದ್ದಾಗಿರುವುದು, ಅಂದರೆ ಕಲ್ಪಿತವ ಸೇರದು ಅದು ಘನಮನವಾದ್ದರಿಂದ ಹೆತ್ತರುವಿಗೆ ಸೇರದ್ದಾಗಿಹುದು. ಗುರು, ಲಿಂಗವೆಂಬಿವು ಅದಕ್ಕೆ ಕಲ್ಪಿತವಾಗಿಹವು. ದಿಗಂಬರ ಮನವದು ಅಕಲ್ಪಿತ ಘನವಾಗಿಹುದು. ಮನವೆ ಲಿಂಗವಾದುದರಿಂದ ಅದು ದಿಗಂಬರ ಮನವಾದುದಕ್ಕಾಗಿ ಸಹಜ ನಿರ್ವಾಣವು ಎಂದು ಹೇಳಿದೆ. ಈ ನಿರ್ವಾಣನಾದ ಮಹಾಂತಂಗೆ ಜಪಸೂತಕ ಧ್ಯಾನಾದಿಗಳು ಸೂತಕವಾಗಿಹವು.

**143**

**ಧ್ಯಾನ ಸೂತಕ, ಮೌನ ಸೂತಕ, ಜಪ ಸೂತಕ, ಅನುಷ್ಠಾನ ಸೂತಕ.**
**ಗುಹೇಶ್ವರನೆಂಬ ಲಿಂಗವನರಿದ ಬಳಿಕ ಸೂತಕ ಹಿಂಗಿತ್ತು,**
**ಯಥಾ ಸ್ವೇಚ್ಛೆ.** ॥ 533 ॥

**ತಾತ್ಪರ್ಯ :** ಸೂತಕ ವಿಷಯದಲ್ಲಿ ಹಲವರು ಹಲವು ವಿಧದಲ್ಲಿ ಹೇಳಿಹರು. ಕೆಲಬರು ಜಾತಿ ಸೂತಕ, ಜನನ ಸೂತಕ, ಪ್ರೇತಸೂತಕ, ರಜಸ್ಸು ಸೂತಕ, ಎಂಜಲು ಸೂತಕಗಳೆಂದು ಪಂಚಸೂತಕಗಳ ಹೇಳಿಹರು. ಇವುಗಳ ದೋಷ ಕಳೆಯಲು

ಯಜ್ಞಯಾಗಾದಿಗಳ ಮಾಡಲು ಹೇಳುವರು. ಇದಲ್ಲದೆ ಜಪ, ತಪ, ಧ್ಯಾನ, ಮೌನಾದಿಗಳ ಹೇಳುವರು. ಇದಲ್ಲದೆ ಕೆಲಬರು ಜಪ, ತಪ, ಧ್ಯಾನ ಅನುಷ್ಠಾನ ಇವುಗಳಲ್ಲಿ ರತರಾಗಿ ಮಹಾತ್ಮರೆನಿಸಿಕೊಂಡಿಹರು. ಇವುಗಳು ದೋಷ ಕಳೆಯುವ ಪವಿತ್ರ ಮತ್ತು ಶ್ರೇಷ್ಠ ಸಾಧನಗಳಾಗಿಹವು.

ಪ್ರಭುವಿನ ದಿವ್ಯ ದೃಷ್ಟಿಗೆ ಇವುಗಳೆ ಸೂತಕಗಳಾಗಿಹವು. ಸೂತಕದ ಯತಾರ್ಥ ಅರಿವು ಪ್ರಭವಿಗೆ ವೇದ್ಯವಾದುದಕ್ಕಾಗಿ ಗುಹೇಶ್ವರನೆಂಬ ಲಿಂಗವನರಿದಬಳಿಕ ಸೂತಕ ಹಿಂಗಿತ್ತು ಯಥಾಸ್ವೇಚ್ಛೆ ಎಂದು ಬಿತ್ತರಿಸಿಹನು.

ಪ್ರಭುವಿನದು ಘನದೃಷ್ಟಿಯಾದುದರಿಂದ ಧ್ಯಾನವು ಸೂತಕವಾಗಿದೆ. ಧ್ಯಾನಸ್ಥರಾಗಲು ತ್ರಿಪುಟಿಯ ಅರುವುಳ್ಳರಾಗಿಯೆ ಧ್ಯಾನವು ಅವರಿಗೆ ಪ್ರಧಾನವಾಗಿದೆ. ಅವರು ಕಲ್ಪಿತ ಪುರುಷನಾಗಿಹ ಅರುವು ದೃಢವಾದುದರಿಂದ ಅಲ್ಲಿ ದ್ವೈತಾ, ಧ್ಯಾನ, ಧ್ಯೇಯವೆಂಬ ಕಲ್ಪಿತ ಅರಿವು ಸತ್ಯವಾಗಿದೆ. ಆದ್ದರಿಂದ ಅಕಲ್ಪಿತರ ಘನದಿರುವು ಪ್ರಜ್ವಲಿಸದಂತಾಗಿ ತ್ರಿಪುಟಿಯ ಅರುವು ನಿಜವಾದುದಂತಾಗಿ ಧ್ಯಾನವೆ ಮುಖ್ಯವೆಂಬುದಾಗಿದೆ. ॥ ಅಲಕ್ಷ್ಯಮದ್ವಯಂ, ಶೂನ್ಯಮಮೂರ್ತಮ್, ಪರಮವ್ಯಯಮ। ಅನಾಮಮಕುಲಂ ಶುದ್ಧ ಅನಾದ್ಯಂ ಶಿವಮುಚ್ಯತೆ । ಅಕಾರಣ ಮಕಾರ್ಯಂಚ ಮನೋವಾಚಾಮಗೋಚರಮ । ಆದಿ ಮಧ್ಯಾಂತ ಶೂನ್ಯಂ. ವ್ಯೊಮಾ ವ್ಯೋಮ ವಿವರ್ಜಿತಮ। ಧ್ಯಾನ ಜ್ಞಾನ ದ್ವಯೋರ್ಹೀನಂ ಶೂನ್ಯಲಿಂಗಮನಾಶ್ರಯಮ್ ॥ ಅಲಕ್ಷ್ಯನಿಗೆ ಲಕ್ಷಣದಿಂದುಕ್ತನೆಂದು ಹೇಗೆ ಹೇಳುವುದು. ಲಕ್ಷ್ಯನು ಎಂದು ಹೇಗೆ ಹೇಳುವುದು ? ಸತ್ ಎಂದು ಹೇಗೆ ಹೇಳುವುದು. ಅಸತ್ ಎಂದು ಹೇಗೆ ಹೇಳುವುದು. ಚಿತ್ ಎಂದು ಹೇಗೆ ಹೇಳುವುದು, ಅಚಿತ್ ಎಂದು ಹೇಗೆ ಹೇಳುವುದು. ಆನಂದನೆಂದು ಹೇಗೆ ಹೇಳುವುದು. ನಿರಾನಂದನೆಂದು ಹೇಗೆ ಹೇಳುವುದು. ನಿತ್ಯನೆಂದು ಹೇಗೆ ಹೇಳುವುದು, ಅನಿತ್ಯನೆಂದು ಹೇಗೆ ಹೇಳುವುದು. ಪರಿಭಿನ್ನೆಂದು ಹೇಗೆ ಹೇಳುವುದು, ಪೂರ್ಣನೆಂದು ಹೇಗೆ ಹೇಳುವುದು. ಖಂಡನೆಂದು ಹೇಗೆ ಹೇಳಲಿ, ಅಖಂಡನೆಂದು ಹೇಗೆ ಹೇಳಲಿ, ಸಂಗಿ ಎಂದು ಹೇಗೆ ಹೇಳುವುದು. ಅಸಂಗನೆಂದು ಹೇಗೆ ಹೇಳುವುದು. ನಾಮಿಯೆಂದು ಅನಾಮಿಯೆಂದು ಹೇಗೆ ಹೇಳುವುದು. ಕಥನಕ್ಕೊಳಪಟ್ಟವನೆಂದು ಹೇಗೆ ಹೇಳಲಿ, ಅಕಥನೀಯನೆಂದು ಹೇಗೆ ಹೇಳಲಿ, ಚಿಂತನವುಳ್ಳವನೆಂದು ಹೇಗೆ ಹೇಳಲಿ, ಅಚಿಂತ್ಯನೆಂದು ಹೇಗೆ ಹೇಳಲಿ, ಅವಯವವುಳ್ಳವನೆಂದು ಹೇಗೆ ಹೇಳಲಿ, ನಿರವಯನೆಂದು ಹೇಗೆ ಹೇಳಲಿ, ಶೃತಿ ಪ್ರಮಾಣಕ್ಕೆ ಗೋಚರನೆಂದು ಹೇಗೆ ಹೇಳಲಿ, ಶೃತಿ ಪ್ರಮಾಣಕ್ಕಗೋಚರ ಎಂದು ಹೇಗೆ ಹೇಳಲಿ, ಪ್ರಮಾಣರೂಪನು ಎಂದು ಹೇಗೆ ಹೇಳುವುದು. ಅಪ್ರಮಾಣನೆಂದು ಹೇಗೆ ಹೇಳುವುದು. ಏನೆಂದೆನಲಿಲ್ಲ, ನುಡಿದು ಹೇಳಲಿಕ್ಕಿಲ್ಲ, ನಿಜದಲ್ಲಿರ್ದ ಬೆರಗು ಕುರುಹ ಅರಿವುದೆ ? ಅದು ತನ್ನಲ್ಲಿ ತಾನು ಇಲ್ಲ, ಚಿಕ್ಕಯ್ಯ ಪ್ರಿಯಸಿದ್ಧಲಿಂಗ ತಾನಿಲ್ಲ, ನುಡಿಗೆಡೆಗೊಡದ ಘನವು ಅದು ಅಲಕ್ಷ್ಯವು. ಅದ್ವಯವು ಆಗಿದೆ. ಶೂನ್ಯವು, ಅಮೂರ್ತವೂ ಆಗಿದೆ. ಅದುವೆ ಪರಮವ್ಯಯವು ಆಗಿದೆ. ಇದು ಅನಾಮತ್ತ ಅಕುಲವು ಆಗಿದೆ. ಶುದ್ಧವು ಅಸಾಧ್ಯವು ಶಿವನಾಗಿ ತುಂಬಿದೆ. ಅದು ಅಕಾರಣವು ಅಕಾರ್ಯವು ಮನಸ್ಸಿಗೂ ವಾಣಿಗೂ ನಿಲುಕದ್ದಾಗಿದೆ, ತಿಳಿಯದ್ದಾಗಿದೆ. ಅದಕ್ಕೆ ಆದಿಯು ಇಲ್ಲ, ಅಂತ್ಯವೂ ಇಲ್ಲ, ಇವೆರಡು

ಇಲ್ಲವಾದುದರಲ್ಲಿ ಮಧ್ಯವು ಹೇಗೆ ಇರುವುದು. ಅದು ಆಕಾಶ, ಗೀಕಾಶವೆನ್ನುವುದಕ್ಕೂ ಬೇಕಾಗಿದೆ. ಅಲ್ಲಿ ಧ್ಯಾನವೂ ಜ್ಞಾನವೂ ಇಲ್ಲದುದು ಆಗಿದೆ. ಇಂತಪ್ಪ ಶಬ್ದದಿಂದ ಉಸರಲು ಸಂದುಕೊಡದ ಘನವು ಅದಕ್ಕಾವ ಆಶ್ರಯವೂ ಇಲ್ಲ. ಇಂತಪ್ಪ ಶಬ್ದಮುಗ್ಧವಾಗಿಹ ಘನಗಂಭೀರವು ಧ್ಯಾನವು ಹೇಗೆ ಮಾಡುವುದು.

ತೋರಬಾರದ ಘನ ಹೇಳಲೆಂದೇನೊ ? ಹೇಳಬಾರದ ಘನ ತೋರಲೆಂದೇನೊ , ಸರಸಂಧಾನದ ಪರಿಯಲ್ಲ ಗುಹೇಶ್ವನೆಂಬುದು ಕಲ್ಪಿತವಲ್ಲ ನೋಡಾ. ತೋರಬಾರದ ಘನವ ಹೇಳುವದದೆಂತು ಹೇಳಬಾರದ ಘನವ ತೋರುವದದೆಂತು ? ಹೇಳಲು ತೋರಿಸಲು ಬಾರದ ಘನದಿರುವಿನ ಧ್ಯಾನ ಮಾಡುವದದೆಂತು, ಧ್ಯಾನ ಮಾಡುವವರೆಲ್ಲ ನುಡಿಗೆಡೆಗೊಡದ ಘನವನರಿಯದವರು. ಪ್ರಭು ಎಡೆಯಿಲ್ಲದ ಪರಿಪೂರ್ಣವೆ ತನ್ನಿರುವು ಆಗಿರುವುದರಿಂದ ನುಡಿ ನಡೆ ಕೆಟ್ಟವನು. ನುಡಿನಡೆ ಕೆಟ್ಟುದರಿಂದ ಧ್ಯಾನ ಸೂತಕವಾಗಿದೆ. ಎಡೆಯಿಲ್ಲದ ಪರಿಪೂರ್ಣವು ತನ್ನಿರುವು ಆಗಿಹ ಮಹಾಮಹಿಮಂಗೆ ತನಗಿಂತನ್ಯ ಆವಾವುದು ಇಲ್ಲವಾದ್ದರಿಂದ ಇಲ್ಲದುದರ ಧ್ಯಾನವೇನು ಮಾಡುವುದು. ತನ್ನ ಧ್ಯಾನ ಮಾಡಬೇಕೆಂದಲ್ಲಿ ತಾನು ಧ್ಯಾನ, ಧ್ಯಾನಾತೀತವೆಂಬುದಿಲ್ಲದ ಅಲಕ್ಷ್ಯನು. ಅದ್ವಯನು ಇರುವಲ್ಲಿ ಧ್ಯಾನಸೂತಕವೆಂದು ಹೇಳಿಹರು.

ಮೌನಸೂತಕ, ಮೌನದ ಘನವನರಿಯದೆ, ವಾಣಿಮೌನವಾಗಿದ್ದರೆ ಮೌನದ ಘನವ ತಿಳಿದಂತಾಯಿತೆ ? ಕೆಲಬರು ಶಬ್ದಮುಗ್ಧವು ಬ್ರಹ್ಮವೆಂದು ಮೌನವಾಗಿಹರು. ಮಾತಾಡಿದುದು ಬ್ರಹ್ಮವಾಗದೆಂದು ಮೌನವ ಮಾಡಿಹರು. ಈ ವಾಣಿಯ ಮೌನವ ಮಾಡಿ ಲೋಕದಲ್ಲಿ ಮಹಾತ್ಮರೆನಿಸಿಕೊಂಡಿಹರು. ಗುರುನಾಥಾರೂಢರು, ಮೌನವಾಗಿಹರು. ಮುರುಗೋಡಯಲ್ಲಾಲಿಂಗ ಮಹಾರಾಜರು ಮೌನವಾಗಿದ್ದರು. ಪೂರ್ವದಲ್ಲಿ ಶುಕಮುನಿಯು ಮೌನವಾಗಿದ್ದನು. ಕೆಲಬರು ಆರೊಡನೆ ಮಾತನಾಡದೆ ಮೌನವಾಗಿಹರು. ಬಹು ಕಾಲದಿಂದಲೂ ಮೌನದಿಂದಿರುವುದು ಕೆಲಬರ ಇರುವು ಆಗಿದೆ, ಅಜಗಣ್ಣ ಶಬ್ದಮುಗ್ಧನಾಗಿಹನೆಂದರೆ ಅಜಗಣ್ಣನ ಐದು ವಚನಗಳು ಹೇಳಿದುದು ವಚನಗಳಿಂದ ತಿಳಿದು ಬರುತ್ತದೆ.

ಪ್ರಭುದೇವ ತಿಳಿಯದೆ ವಾಣಿಯ ನಿಯಂತ್ರಣಕ್ಕೆ ಒಪ್ಪದೆ ಮೌನ ಸೂತಕವೆಂದು ಹೇಳಿದುದಲ್ಲದೆ ಮೌನದ ರಹಸ್ಯವ ತಿಳಿಸಿಹನು. ಶೃತಿಗಗೋಚರ, ವಾಙ್ಮನಕ್ಕಗೋಚರವಾಗಿಹ ತನ್ನಿರುವ ತಿಳಿದು ಕಥನ ಮಾಡಲು ಬಾರದಂತಾಯಿತ್ತು. ನೆನೆಯುವ ಮನನಷ್ಟವಾಯಿತ್ತು. ಬುದ್ಧಿ ಭಸ್ಮವಾಯಿತ್ತು. ಅರಿಯುವ ಅರುವೆ ಅರಿಯದಂತಾಗಿ ಅರಿಯದಿರುವೆ ಆಗಿ ಪ್ರಜ್ವಲಿಸುವಲ್ಲಿ ಈ ಬಾಹ್ಯಮೌನ, ಮಾತಾಡದ ಮೌನವು ಸೂತಕವೆನಿಸಿತ್ತು. ಈ ಮೌನ ವಾಣಿ ಮೌನವಾಗಿದ್ದರೂ ಮೌನ, ವಾಣಿ ಮಾತಾಡಿದರೂ ಮೌನ, ವಾಣಿಯ ಹಂಗಿಲ್ಲದೆ ಸ್ವಯಂಪ್ರಕಾಶಿಸುವ ಘನವು, ವಾಣಿ ಮಾತಾಡಿದರೂ ತಾನು ಇದ್ದಂತೆ ಇರುವುದು ಅದು ಮಾತಾಡದಿದ್ದರೂ ಇದ್ದಂತೆ ಇರುವ ಮೌನ. ಘನಕ್ಕೆ ಘನವಾಗಿಹ ಘನವು ಇದರ ಯತಾರ್ಥ ಇರುವು ಪ್ರಜ್ವಲಿಸಿದುದು ಕಂಡು, ನಿರಂತರ ಮೌನ ಹಂಗಿಲ್ಲದ ಮೌನ ಕೆಡದ ಮೌನ, ಇಂತಪ್ಪ ಮೌನದ ರಹಸ್ಯ ತನ್ನಿಂದ ತನಗೆ ವಿದಿತವಾದಲ್ಲಿ ವಾಣಿ ನುಡಿದರೂ ತನ್ನ ಮೌನ ಕೆಟ್ಟಿಲ್ಲ, ಅದು ಮೌನ ಧರಿಸಿದರೂ ಅದು ತಾನಾಗಿರುವುದಿಲ್ಲ, ಅದಕ್ಕಾಗಿ ಬಾಹ್ಯಮೌನ

ಸೂತಕವೆಂದು ಹೇಳಿಹನು.

ಜಪಸೂತಕವೆಂದು ಪ್ರಭು ಬಿತ್ತರಿಸಿದುದು ನೋಡುವುಡೆ ಕೆಲಬರಿಗೆ ಜಪವು ಬಹುಶ್ರೇಷ್ಠವಾಗಿದೆ. ಜಪದಲ್ಲಿ ಓಷ್ಟಂಪಾಂಸು ಮಾನಸಿಕವೆಂದು ಮೂರು ವಿಧದಿಂದ ಜಪವ ಮಾಡುತ್ತಿಹರು. ದ್ವೈತಮತಾಚಾರ್ಯರಾದ ಮಾಧ್ವರು, ಮಂತ್ರಾಲಯದ ರಾಘವೇಂದ್ರಸ್ವಾಮಿಗಳು, ಜಪಕ್ಕೆ ಬಹು ಮಹತ್ವವ ಮಾಡಿಹರು. ದಾಸಪಂಥದವರು ಜಪಾನುಷ್ಠಾನಕ್ಕೆ ಬಹು ಪ್ರಾಧಾನ್ಯತೆ ಕೊಟ್ಟಿಹರು. ಇತ್ತ ಭಗವದ್ಗೀತೆಯಲ್ಲಿ ಯಜ್ಞದಲ್ಲಿ ಜಪಯಜ್ಞವೆ ನಾನು ಎಂದು ಹೇಳಿದೆ. ರಾಮಾನುಜಾಚಾರ್ಯರು ಧ್ಯಾನಕ್ಕೆ ಮಹತ್ವ ಮಾಡಿಹರು. ಪ್ರಭುದೇವ ಜಪ ಸೂತಕವೆಂದು ಹೇಳಿಹನು. ಅಧಿಕಾರಿಗಳಿಗನುಸಾರವಾಗಿ ಜಪವೆಂಬುದು ಪ್ರಿಯವಾಗಿದೆ. ಪ್ರಭುವಿಗೆ ಸೂತಕವಾಗಿದೆ, ಏಕೆಂದರೆ ನಿಃಶಬ್ದವೇದಿಸಿದ ಘನವಂತ ಶಬ್ದವೆ ಸೇರದ ಮಹಾಮಹಿಮ, ಏನೆಂದುಸರಲು ಎಡೆಗೊಡದ ಘನವ ನುಡಿದು ಹೇಳುವದದೆಂತು ? ನುಡಿಯುವದು ನೆನೆಯುವುದು ಜಪದ ಕಾರ್ಯ ನುಡಿಗೆಡೆಗೊಡದ ಘನವರಿಯದವರು ಇವರಿಗೆ ನುಡಿಯುಳ್ಳ ಜಪವು ಶ್ರೇಷ್ಠವು ಪ್ರಧಾನವಾಗಿದೆ. ಪ್ರಭು ನುಡಿಗೆಡೆಗೊಡದ ಘನ ಗಂಭೀರವರಿತವನಾದುದರಿಂದ ಜಪವದು ಸೂತಕವೆಂದು ಹೇಳಿಹನು.

ಅನುಷ್ಠಾನ ಸೂತಕ : ಅನುಷ್ಠಾನವೆಂಬುದು ಆಚರಣೆ, ಅನುಷ್ಠಾನ ಮಾಡುವವರಿಗೆ ಆಚರಣೆ ಬಹು ಶ್ರೇಷ್ಠವಾಗಿ ಧ್ಯಾನವ ಆಚರಿಸುವರು ಮೌನವ ಆಚರಿಸುವರು. ಜಪದಲ್ಲಿ ಮೂರು ವಿಧ ಮೂರರಲ್ಲೊಂದು ಆವುದಾದರೂ ಜಪ ಆಚರಿಸುವರು ಅಲ್ಲಿ ಆಚರಣೆ ಬಹು ಕಟ್ಟಳೆಯಿಂದುಕ್ತವಾಗಿದೆ. ಈ ಅನುಷ್ಠಾನದ ನಿಷ್ಠೆಯುಳ್ಳವರು ದಿನ ನಿತ್ಯವು ಮಾಡುವರು. ಕೆಲಬರು ಚಾತುರ್ಮಾಸವೆಂದು ನಾಲ್ಕು ತಿಂಗಳು ಆಷಾಢ ಮಾಸವೆ ಪ್ರಾರಂಭ ಮಾಡಿ ಆಶ್ವೀಜದ ಕೊನೆಯವರೆಗೂ ಈ ನಾಲ್ಕು ತಿಂಗಳು ಅನುಷ್ಠಾನಕ್ಕೆ ಕೂಡುವರು. ಕೆಲಬರು ಶ್ರಾವಣಮಾಸ, ಮಾಘಮಾಸ, ಇವರು ಒಂದು ತಿಂಗಳು ಅನುಷ್ಠಾನ ಮಾಡುವರು. ಅದರಲ್ಲಿ ಇನ್ನು ಕೆಲಬರು 21 ದಿವಸ, 41 ದಿವಸ ಅನುಷ್ಠಾನವ ಕೈಗೊಳ್ಳುವರು.

ಅನುಷ್ಠಾನ ಸೂತಕವೆಂದು ಪ್ರಭು ಬಿತ್ತರಿಸಿದುದು ನೋಡುವುಡೆ ಈ ಅನುಷ್ಠಾನಕ್ಕೆ ಮಹತ್ವವ ಮಾಡಿ ಆಚರಿಸುವವರೆಲ್ಲ ಕಲ್ಪಿತಪುರುಷರೆಂದು ಸಿದ್ಧವಾಗುವುದು. ಕಲ್ಪಿತವಲ್ಲದ ಘನದಿರುವ ಅರಿಯಹೋದವರಲ್ಲವೆಂದು ಸಿದ್ಧವಾಗುವುದು. ಆರಿಗೆ ಎಡೆಯಿಲ್ಲದ ಪರಿಪೂರ್ಣತ್ವವೆ ತನ್ನಿರುವು ಆಗಿದೆ. ಅವರು ಅದಾವ ಕಾರಣದಿಂದ ಅನುಷ್ಠಾನ ಮಾಡುವುದು ? ಇವರು ನೇರವಾಗಿ ತನ್ನ ತಾನರಿತವರು, ಅದಕ್ಕಾಗಿ ಇವರಿಗೆ ಅನುಷ್ಠಾನ ಸೂತಕವಾಗಿದೆ.

ಗುಹೇಶ್ವರ ಲಿಂಗವನರಿದ ಬಳಿಕ ಸೂತಕ ಹಿಂಗಿತ್ತು. ಯಥಾಸ್ವೇಚ್ಛೆ ಎಲ್ಲಿಯವರೆಗೆ ತಾನು, ತನ್ನ ದೇಹವೆಂಬ ಗುಹೆಗೆ ಒಡೆಯನಾಗಿಹ ಚೈತನ್ಯ ರೂಪಿ, ಗುಹೇಶ್ವರ ಲಿಂಗವರಿಯುವುದಿಲ್ಲ , ಅಲ್ಲಿಯವರೆಗೆ ಆರೆ ಇರಲಿ ಅವರು ಸೂತಕಿಗಳು. ಆರು ತನ್ನ ಅಂತರಂಗದೊಳಗಿರುವ ಚೈತನ್ಯ ಜ್ಞಾನಸ್ವರೂಪವರಿಯುವನು ಆಗ ಸೂತಕ ಹಿಂಗಿತ್ತು ಅಂದರೆ ನಷ್ಟವಾಗಿಹವು. ಆ ಮಹಾಂತನು ಸ್ವತಂತ್ರನು ಎಂದು ಹೇಳಿಹರು.

144

**ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವು.**
**ಸಂಗದೊಳಗೆ ಶರಣರ ಸಂಗವೆ ಚೆಲುವು.**
**ಕಾಯಗೊಂಡು ಹುಟ್ಟಿದ ಮೂಢರೆಲ್ಲರು**
**ಸಾಯದ ಸಂಚವನರಿವುದೆ ಚೆಲುವು- ಗುಹೇಶ್ವರಾ.** ॥ 538 ॥

**ತಾತ್ಪರ್ಯ** : ಪರಿಣಾಮದೊಳಗೆ ಮನದ ಪರಿಣಾಮವೇ ಚೆಲುವು: ಪರಿಣಾಮ, ವಿದ್ಯಾಲಯದಲ್ಲಿ ಮಕ್ಕಳು ತಮಗೆ ಬೇಕಾದ ವಿಷಯ ತೆಗೆದುಕೊಂಡು ಅಭ್ಯಾಸ ಮಾಡಿ ತೇರ್ಗಡೆ ಹೊಂದುವರು. ತೇರ್ಗಡೆಯಲ್ಲಿ ಪ್ರಥಮ, ಮಧ್ಯಮ, ಕನಿಷ್ಠ ಶ್ರೇಣಿಯವರಾಗಿರುವರು. ಇದು ಮಕ್ಕಳ ಕಾಲೇಜಿನ ವಿಷಯ. ಶರಣರು ತೆಗೆದುಕೊಂಡ ವಿಷಯ ಆರಾದರೂ ಈ ಲೌಕಿಕರು ತೆಗೆದುಕೊಂಡಿಹರೆ? ಅವರು ತೆಗೆದುಕೊಂಡ ವಿಷಯ 'ಮನ ' ಎಂಬುದು. ಈ ವಿಷಯದಲ್ಲಿ ನೇರವಾಗಿ ಪರಿಶೋಧಿಸಿ ತೇರ್ಗಡೆ ಹೊಂದಿದವರೆಂದರೆ ಶರಣರು, ಶರಣೆಯರು. ಅವರುಗಳಲ್ಲಿ ಬಸವರಸರೇ ಈ ವಿಷಯದಲ್ಲಿ ಹೇಗೆ ಪರಿಶೋಧಿಸಿ ತೇರ್ಗಡೆ ಹೊಂದಿ ವಿಶ್ವಕ್ಕೆ ಚೆಲುವರಾಗಿರುವರು ಅದನ್ನು ನೋಡೋಣ. ಇದು ಮನವ ಶೋಧಿಸಿ ಪರಿಣಾಮ ತೆಗೆದ ಪ್ರಥಮ ಶ್ರೇಣಿಯಾದುದರಲ್ಲಿ ಪ್ರಥಮ.

ಮನದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ, ಆದಿವಿಡಿದು ಬಂದಾತನೇ ಭಕ್ತ. ಅನಾದಿವಿಡಿದು ಬಂದಾತನೇ ಜಂಗಮ. ಆದಿಗುರು ಅನಾದಿ ಶಿಷ್ಯ ಈ ಉಭಯ ಕುಳಸ್ಥಳವ ಬಲ್ಲರೇ ಆತ ಲಿಂಗ ಸಂಬಂಧಿ ಕಾಣಾ ಕೂಡಲ ಸಂಗಮದೇವಾ. ಮನವೆಂಬ ವಿಷಯ ತೆಗೆದುಕೊಂಡು ಅದರಲ್ಲಿ ತೇರ್ಗಡೆಯಾದ ಘನವ ನೋಡಿರೇ, ಮನದ ಕೊನೆಯ ಶೋಧಿಸಿದನೇ? ಕೊನೆಯ ಶೋಧಿಸಿದುದಲ್ಲದೇ ಕೊನೆಯ ಮೊನೆಯ ಮೇಲೆ ಮನೆಯ ಕಟ್ಟಿ ದಾಸೋಹದ ಮನೆ ಕಟ್ಟಿ ದಾಸೋಹಿಯಾದನೇ ? ಈ ಮಹಾಂತ. ಮನವೆಂಬ ಮನೆಯಲ್ಲಿ ವಾಸಿಸಲಿಲ್ಲ , ಮನದ ಕೊನೆಯ ಮೊನೆಯ ಮೇಲೆ ಮನೆ ಮಾಡಿಕೊಂಡಿಹನೇ ಇದೆಂಥ ಸಾಹಸ ? ಅಪ್ರತಿಮ ಕಾರ್ಯ ಘನ ಕಾರ್ಯ. ಈ ಮನೆ ಕರ್ಮಾಧೀನಕ್ಕೊಳಪಟ್ಟ ಕರ್ಮಿಗಳ ಮನೆಯಂಥ ಮನೆಯಲ್ಲ . ಸ್ವಾಮಿ, ಸೇವಕ, ಪೂಜ್ಯ, ಪೂಜಕರೆಂಬ ಉಪಾಸಕರ ಮನೆಯೂ ಅಲ್ಲ, ದೇಹ, ದೇಹಿ, ವಿದೇಹಿ ಎಂಬ ಭಾವಿಕರ ಮನವಲ್ಲ, ಮನೆಯೆಂಬುದು ಮನವೆಂದು ತಿಳಿಯುವುದು ಚಿದಹಂ ಉಳ್ಳವರ ಅರುಹಿನ ಮನ ತೂರ್ಯಕ್ಕೊಳಪಟ್ಟ ಮನವೂ ಅಲ್ಲ. ಇವೆಲ್ಲವುಗಳ ಕೊನೆಯ ಮೊನೆಯ ಮೇಲೆ ಮನೆ ಮಾಡಿಕೊಂಡಿಪ್ಪನೊಬ್ಬ ದಾಸೋಹಿ.

ಮನದ ಕೊನೆ ಯಾವುದು ? ಪ್ರವೃತ್ತಿ ನಿವೃತ್ತಿಯ ಅಂತ್ಯ ಯಾವುದು ? ಅದು ಮನದ ಕೊನೆಯು. ಆ ಕೊನೆಯ ಮೊನೆ ಯಾವುದು ? ಈ ಪ್ರವೃತ್ತಿ ನಿವೃತ್ತಿ ಯಾವುದನ್ನು ಆಶ್ರಯಿಸಿಕೊಂಡಿರುವುದು ಅದು ಅತೀತವು. ಅತೀತವೇ ಮನದ ಕೊನೆಯು. ಮೊನೆಯ ಮೇಲೆ ಮನೆ ಮಾಡಿದುದ ನೋಡಿರೇ ! ಅತೀತವೆಂಬುದು ಅತತ್ವ ಮನೆಯಲ್ಲ, ತತ್ವದ

ಮನೆ. ನಿಜ ನಿವಾಸದ ಮನೆ.

ಅತೀತನ ಹೊರತು ಅನ್ಯವ ಕಾಣದ ಮನೆಯಾದುದರಿಂದ ಬಸವರಸರು ಮರಳು ತಲೆ ಹುರುಳು ತಲೆ ನೀನೇ ದೇವಾ, ಹೆಂಗೂಸು ಗಂಡುಗೂಸು ನೀನೇ ದೇವಾ, ಎಮ್ಮಕ್ಕನ ಗಂಡ ನೀನೇ ದೇವಾ ಭ್ರಾಂತಳಿದು ಭಾವ ನೆಲೆಗೊಂಡಿತಾಗಿ ಕೂಡಲಸಂಗಮದೇವಾ.

ಮನದ ಪರಿಣಾಮವ ನೋಡಿರೆ. ಎಲ್ಲೆಲ್ಲೂ ದೇವನ ಕಾಣುವ ಮನ ಸಕಲ ನಿಃಕಳ ದೇವನಾಗಿ ಕಂಡ ಮನ. ಅಜ್ಞಾನಿಯು ಅಜ್ಞಾನಿಯಲ್ಲ ಅವನು ದೇವನೇ. ಜ್ಞಾನಿಯು ಜ್ಞಾನಿಯಲ್ಲ ಅವನೂ ದೇವನೇ. ಪ್ರಕೃತಿ ಪ್ರಕೃತಿಯಲ್ಲ ಅದು ದೇವನೇ. ಪುರುಷ ಪುರುಷನಲ್ಲ ಅದು ದೇವನೇ. ವ್ಯಕ್ತ ವ್ಯಕ್ತನಲ್ಲ ಅವನು ದೇವನೇ. ಅವ್ಯಕ್ತ ಅವ್ಯಕ್ತನಲ್ಲ ಅವನೂ ದೇವನೇ. ಇದು ನಿಸ್ಸೀಮತ್ವ ನಿಜ ಧಾಮವಾಗಿರುವುದರಿಂದ ಅಖಂಡ ಮನ. ಮರವು ಅರವು ಒಂದೇ ಮಾಡಿದ ಮನ. ಅಖಂಡೈಕ ರಸವಾದ ಮನ. ಪೂರ್ಣಮದಃ ಪೂರ್ಣಮಿದಂ ಎಂದೆನ್ನುವ ಮನ ಇದು ಮನವ ಪರಿಶೋಧಿಸಿ ಮನದ ಪರಿಣಾಮ ತೆಗೆದ ಮನ. ಇದು ಜ್ಞಾನ ದಾಸೋಹಿ ಮನ ಸ್ವಾನುಭವದ ಮನ.

ಆದಿವಿಡಿದು ಬಂದಾತ ಭಕ್ತ. : ಆದಿ ಯಾವುದು ಅದನ್ನು ಹಿಡಿದು ಬಂದಾತ, ಮೂಲವಿಡಿದು ಬಂದಾತ, ಮೂಲದಲ್ಲಿಯೇ ಇದ್ದಾತ ಮೂಲವೇ ಆಗಿಹ ಮಹದರಿವು. ಈ ಮಹದರಿವು ಯಾವುದು ? ಸತ್ಯಾಸತ್ಯವೆಂಬುದಕ್ಕೆ ಸಮ ಪ್ರಕಾಶವಾದುದು ಅದು ಮಹದರುವು. ಇದು ನುಡಿಗೆಡೆಗೊಡದ ಘನವಾದುದರಿಂದ ಸತ್ಯವೆಂದು ಹೇಗೆ ಹೇಳುವುದು ಅಸತ್ಯವೆಂದು ಹೇಗೆ ಹೇಳುವುದು ? ಮಿಥ್ಯವೆಂದು ಹೇಗೆ ಹೇಳುವುದು ? ಅಕಥನೀಯವೂ, ಕಥನವುಳ್ಳದ್ದೂ ಹೇಗೆ ಆಗುವುದು ? ಮುನ್ನೆಲ್ಲಿಂದ ಬಂದ ನಲ್ಲಿಗೆ ಹೋಗಿ ನಿತ್ಯನಾಗಿಹ ಭಕ್ತನ ಹಿರಿಮೆ ಆದ್ಯಾರು ವರ್ಣಿಸುವುದು. ಇದು ಮನದ ಪರಿಣಾಮವು.

ಅನಾದಿವಿಡಿದು ಬಂದಾತ ಜಂಗಮ : ಅನಾಮಯವಾಗಿರುವ ನಿರ್ವಾಣವಿಡಿದು ಬಂದಾತ ಜಂಗಮ, ಈ ಮಹಾಂತ ನಿರಾಲಂಬ ಜಂಗಮ, ನಿಸ್ಸೀಮ ಜಂಗಮ ನಿಜೈಕ್ಯ ಜಂಗಮ, ನಿರ್ನಾಮ ಜಂಗಮ, ನಿರ್ಲಿಖಿತ ಜಂಗಮನಾದುದರಿಂದ ಮನದ ಪರಿಣಾಮಿ. ಈತ ಮಹಾಚೆಲುವನೆಂದು ಹೇಳಿಹರು.

ಈ ಘನ ಮಹಿಮಂಗೆ ಆದಿ ಆವುದು ? ಮಧ್ಯ ಆವುದು ? ಅಂತ್ಯ ಆವುದು ? ಅನಂತಂಗೆ ಆದಿಯು ಇಲ್ಲ, ಮಧ್ಯವೂ ಇಲ್ಲ, ಅಂತ್ಯವು ಇಲ್ಲ, ನಿಸ್ಸೀಮನಾವನು, ಅವನೆ ಅನಾದಿವಿಡಿದ ಜಂಗಮನೆಂದು ಹೇಳಿಹರು. ಈ ಮಹಿಮನು, ಅಚಿಂತ್ಯವಿಡಿದು ಬಂದಾತ, ಅರಿಯಲಿಲ್ಲದ ಅರುವುವಿಡಿದು ಬಂದಾತ ಈ ಮಹಾಂತ ಮನದ ಪರಿಣಾಮದ ಮಹಾಚೆನ್ನಿಗನು ಎಂದು ಹೇಳಿಹರು.

ಆದಿ ಗುರು, ಅನಾದಿ ಶಿಷ್ಯ ಈ ಉಭಯ ಕುಳಸ್ಥಳವರಿತವರು ಲಿಂಗ ಸಂಬಂಧಿಗಳು ಕಾಣದುದ ಕಂಡ ಸ್ವಮಹಿಮನೆ ಅಜನು, ಅಚಿಂತ್ಯನು ಈ ಮಹಾಂತ ಆದಿ ಗುರು, ಈ ಸ್ವಮಹಿಮನಾಗಿಹ ಅಜ ಅಚಿಂತ್ಯತ್ವ ಕಂಡು ತನ್ನಿಂದ ತನಗೆ ತಾನೆ ಉಪದೇಶ ಕೊಂಡವನೆ ಅನಾದಿ ಶಿಷ್ಯನು. ಗುರುವಿಂಗೆ ಗುರುವಾಗಿ ಗುರು ಪ್ರಸಾದವ ಕೊಂಡವನೆ ಅನಾದಿ ಶಿಷ್ಯನು. ಗುರು ಶಿಷ್ಯರು ಮುನ್ನಲಾದವರು, ತನ್ನಿಂದ ತಾನಾದವರು. ಇವರೀರ್ವರ

ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಎಂಬ ನಿಜವಾದ ಫಲಿತಾಂಶ ಶರಣರ ಸಹೃದಯಕ್ಕೆ ತಮ್ಮ ಮಹದರುವು ತೋರಿಸಿಕೊಟ್ಟವರು. ಆದುದರಿಂದ ಮಹಾಚೆಲುವ ಎಂದು ಹೇಳಿಹರು.

ಸಂಗದೊಳಗೆ ಶರಣರ ಸಂಗವೆ ಚೆಲುವ : ಲಿಂಗ ಸಂಗಿ ಸೀಮಿತ ನೋಡಾ, ಜಂಗಮ ಸಂಗಿ ನಿಸ್ಸೀಮ ನೋಡಾ, ಅಂಗಸಂಗಿ ಸೀಮಿತ, ಶರಣ ಸಂಗಿ ನಿಸ್ಸೀಮ ನೋಡಾ, ಲಿಂಗವೆ ಗಮ್ಯ, ಶರಣನೆ ಅಗಮ್ಯ, ಯದ್ಭಾವಂ ತದ್ಭವತಿ ಎಂಬುದಿಲ್ಲವಾಗಿ ಆದಿ ಲಿಂಗ ಅನಾದಿ ಶರಣ ಕೂಡಲಸಂಗಾ.

ಲಿಂಗಸಂಗವ ಮಾಡಿದವರುಂಟು, ಶರಣ ಸಂಗ ಮಾಡಿದವರುಂಟೆ ? ಲಿಂಗವು ಸೀಮಿತವಾಗಿಹುದು. ಶರಣ ನಿಸ್ಸೀಮನಾಗಿಹನು. ಲಿಂಗವು ಪೂರ್ವಿಕವಾಗಿದೆ. ಶರಣ ಅಪೂರ್ವಿಕನಾಗಿಹನು. ಲಿಂಗವು ಸಂಜ್ಞೆಯಿಂದುಕ್ತವು, ಶರಣ ಸಂಜ್ಞಾರಹಿತನು, ಲಿಂಗವು ಅಖಂಡವು, ಶರಣ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನು ಅದು ತನ್ನಲ್ಲಿಯೆ ಕಂಡವನು ತಾನೆ !

ಶರಣ ಸಂಗವು ಅನುಪಮವು ಅಗಮ್ಯವು ಇವರದು ನೆಲೆಯಿಲ್ಲದ ನಿಲುವು, ತನ್ನಲ್ಲಿಯೆ ನೋಡುವುದು, ಬೇರೆ ಮತ್ತೊಂದೆಡೆಯಿಲ್ಲ. ಶರಣರ ಸಂಗದಿಂದ ತನ್ನಲ್ಲಿದ್ದ ಘನಕ್ಕೆ ಘನವಾಗಿಹ ನುಡಿಗೆಡೆಗೊಡದ ಘನವೆ ಪ್ರಜ್ವಲಿಸುವುದು. ಅದು ಕೂಡದಗಲದ ಘನ, ಅದು ಮುನ್ನಮುನ್ನಲಾದ ಘನ ತನ್ನಿಂದ ತಾನಾದ ಘನವ ವಿದಿತ ಮಾಡಿಕೊಡುವ ದಯಾಮಯ ಶರಣನು, ಅದಕ್ಕಾಗಿ ಬಸವಣ್ಣನವರು ಕೂಡಲಸಂಗನ ಶರಣರು, ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು ಎಂದು ಸ್ತುತಿಸಿಹರು. ಶರಣರ ಸಂಗದಿಂದ ಲಿಂಗ ತಾನಾದುದೆ ಅವರ ಸಂಗದ ಚೆಲುವು ಎಂದು ಹೇಳಿಹರು.

ಕಾಯಗೊಂಡು ಹುಟ್ಟಿದ ಮೂಢರೆಲ್ಲ ಸಾಯದ ಸಂಚವನರಿವುದೆ ಚೆಲುವು ಗುಹೇಶ್ವರಾ : ಶರೀರ ಧರಿಸಿ ಬಂದ ಮೇಲೆ ಅಮರದ ಹೊಲಬನರಿವುದೆ ಚೆಲುವು. ಈ ಸಾಯದ ರಹಸ್ಯವನರಿವುದು ಇದು ತನ್ನೊಳಗಿರ್ದ ಘನವ ತಾ ತಿಳಿವುದು. ತನ್ನವ ಹುಸಿ ಮಾಡಿ ಇನ್ನೊಂದು ದಿಟವ ಮಾಡುವ ಅಣ್ಣಂಗೆ ನಂಬುಗೆಇವುದಯ್ಯ, ತನ್ನೊಳಗಿರ್ದ ಘನವ ತಾ ತಿಳಿಯಲರಿಯದೆ ಪರಬ್ರಹ್ಮಕ್ಕೆ ತಲೆಯಿಕ್ಕಿ ತೆಗೆದೆನೆಂಬ ಅಣ್ಣ ಗಾವಿಲನೆಂದ ಅಂಬಿಗ ಚೌಡಯ್ಯ.

ತನ್ನನ್ನೆ ಸುಳ್ಳು ಮಾಡಿ ತನಗಿಂತ ಬೇರಾದುದು ಘನವೆಂದು ತಿಳಿದವಂಗೆ ತನ್ನ ನಂಬಿಗೆಯನ್ನೆ ಕಳೆದುಕೊಂಡಿಹನು. ತನ್ನ ನಂಬಿಗೆಯೆಂಬುದು ದಿಟದ ನಂಬಿಗೆ, ನಿಜದ ನಂಬಿಗೆಯನ್ನೆ ಕಳೆದುಕೊಂಡಿಹನು. ತನ್ನ ನಂಬಿಗೆ ಮಾಡಿದುದು ನಿಜವಾದ ಪರಬ್ರಹ್ಮದ ನಂಬಿಗೆ ಮಾಡಿದಾತ. ಇದನ್ನು ಬಿಟ್ಟು ತನ್ನ ಮರೆತು ಗ್ರಂಥಗಳಲ್ಲಿರುವ ಪರಬ್ರಹ್ಮ, ವೇದ ವೇದಾಂತಗಳಲ್ಲಿರುವ ಪರಬ್ರಹ್ಮದ ಅಧ್ಯಯನಕ್ಕಾಗಿ ತನ್ನ ಆಯುಷ್ಯವ ಕಳೆದರೂ ತನ್ನೊಳಗಿರ್ದ ಘನವ ತಾ ತಿಳಿಯದವರು ಇವರು ಅಣ್ಣ ಗಾವಿಲನೆಂದರೆ ದಡ್ಡರದಡ್ಡ ಎಂದು ಹೇಳಿಹರು.

ತನ್ನವ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿ, ಸುರ, ಬ್ರಹ್ಮಾದಿಗಳೆಲ್ಲರು ತಲೆ ಕೆಳಗಾಗಿ ಹೋದರು. ಆ ದೇವರ ಮರೆದು ತನ್ನುವನರಿದುದಾರೆ, ತಾನೆ ದಿಟವೆಂದ ನಂಬಿಗಚೌಡಯ್ಯ. ಅಮರದ ಹೊಲಬನರಿದಾತನೆಂದರೆ ಅಂಬಿಗ ಚೌಡಯ್ಯ, ಹರಿ

ಬ್ರಹ್ಮಾದಿಗಳಿಗೆ ಅಸಾಧ್ಯವಾದುದು ಸಾಧ್ಯವ ಮಾಡಿ ತೋರಿಸಿದ ಈ ಮಹಾಂತ ಸಾಯದ ರಹಸ್ಯವ ಅರಿದಾತ. ತನ್ನೊಳಗಿರ್ದ ಘನವ ತಾ ತಿಳಿದಾತ. ತನಗಿಂತನ್ಯವಾದ ದೇವರ ಮರೆದಾತ. ತನ್ನವ ಅರಿದಾತ. ನುಡಿಗೆಡೆಗೊಡದ ಘನವೆ ತನ್ನಿರುವು ಆದುದರಿಂದ ಅರುವು ಅರುವು ಎನಲಿಲ್ಲ, ಸಚ್ಚಿದಾನಂದ ಸಚ್ಚಿದಾನಂದ ಎನಲಿಲ್ಲ, ಪೂರ್ಣ ಅಖಂಡ ಚೈತನ್ಯವಾಗಿಹ ತನ್ನೊಳಗಿರ್ದ ಘನವ ತಿಳಿದುದರಿಂದ ಸಾಯದ ಸಂಚವನರಿದುದರಿಂದ ಅಂಬಿಗ ಚೌಡಯ್ಯನೆ ಚೆಲುವನೆಂದು ಹೇಳಿದೆ. ಅರುವರಿತವರೆ ಚೆಲುವರು. ಅರುವಿಂಗರುವಾಗಿಪ್ಪವರೆ ಚೆಲುವರು, ದೇಹಿಗೆ ದೇಹಿಯಾಗಿಹ ರಹಸ್ಯವರಿತವರಾದುದರಿಂದ ಚೆಲವರು ಎಂದು ಹೇಳಿಹರು.

**145**

**ಅಂಗ ಲಿಂಗದಲ್ಲಿ ತರಹರವಾಗಿ,ಸಮತೆ ಶಾಂತಿಯಲ್ಲಿ ತರಹರವಾಗಿ,**
**ಮನ ಜ್ಞಾನದಲ್ಲಿ ತರಹವಾಗಿ,ಭಾವ ನಿರ್ಭಾವದಲ್ಲಿ ತರಹರವಾಗಿ ಇರಬಲ್ಲಡೆ,**
**ಆತನೆ ಅಚ್ಚಶರಣನು ಕಾಣಾ ಗುಹೇಶ್ವರಾ.** ॥ 540 ॥

**ತಾತ್ಪರ್ಯ** : ಅಂಗ, ಲಿಂಗದಲ್ಲಿ ತರಹರವಾಗಿ ಲಿಂಗದಲ್ಲಿ ಅಂಗವು ಲೀಯವಾಯಿತೆ ? ಇದೆಂಥ ನಿಲ್ಲುವಿಕೆ, ಅಂಗಾಂಗವು ಲಿಂಗದಲ್ಲಿ ಲೀಯವಾದವೆ ? ಎಲ್ಲಿ ರೂಪಲ್ಲಿಯೆ ಲಿಂಗಸ್ವಾಯತವಾಯಿತ್ತೆ ? ಅಹಹ ! ರೂಪದ ನಿವಾಸ, ಲಿಂಗದಲ್ಲಿಯೆ ! ಸ್ಥೂಲಾಂಗ ಸೂಕ್ಷ್ಮಾಂಗ, ಕಾರಣಾಂಗ, ಮಹಾಕಾರಣಾಂಗ ಇವುಗಳು ಲಿಂಗದಲ್ಲಿ ಲೀಯವಾದವೆ ? ತ್ಯಾಗಾಂಗ, ಭೋಗಾಂಗ, ಯೋಗಾಂಗಗಳು ಲಿಂಗದಲ್ಲಿ ತಲ್ಲೀಯವಾದವೆ ? ಇದೆಂಥ ಶರಣನ ನಿಲುವು, ಉಪಮಿಸದ ನಿಲುವು, ಪ್ರವಾಹ ರೂಪ ಹಳ್ಳ ಹೊಳೆ ನದಿಗಳೆಲ್ಲವು ಸಮುದ್ರದಲ್ಲಿ ಹೇಗೆ ಲೀಯವಾಗುವವೊ ಹಾಗೆ ಪ್ರವೃತ್ತಿ ನಿವೃತ್ತಿಗಳೆಲ್ಲ ಲಿಂಗದಲ್ಲಿ ವಿಶ್ರಾಂತಿ ಹೊಂದಿದವೆ ! ಮನನಿವಾಸ, ಲಿಂಗನಿವಾಸವಾಯಿತೆ ? ಕರಣಂಗಳೆಲ್ಲ ಲಿಂಗದಲ್ಲಿ ಲೀಯವಾದವೆ ! ಅಂಗಗಳು, ಚಿದಂಗದಲ್ಲಿ ಲೀಯವಾದವೆ ? ಅಚ್ಚ ಶರಣನ ನೋಟ, ಲಿಂಗದಲ್ಲಿ ಲೀಯವಾದ ನೋಟ, ನೋಡದ ನೋಟ, ತನ್ನನ್ನೆ ನೋಡಿದ ನೋಟ, ತನಗಿಂತ ಅನ್ಯವ ಕಾಣದ ನೋಟ, ಅಖಂಡವಾಗಿಹ ನೋಟವೆ ಅಂಗ ಲಿಂಗದಲ್ಲಿ ನಿಶ್ಚಲವಾಗಿಹುದು ನೋಡಾ.

ಸಮತೆ ಶಾಂತಿಯಲ್ಲಿ ತರಹರವಾಗಿ: ಶಾಂತಿ ಸ್ಥಾಯಿಯಾಗಿ ನಿಂತುದೆ ಸಮತೆ ಸಯವಾದ ಲಕ್ಷಣವು ಗಗನವು ಸಕಲಕ್ಕೂ ಸಮವಾಗಿಹುದು. ಸಮವಾಗಿರುವುದರಿಂದ ಸದಾ ನಿಶ್ಚಲವಾಗಿ ನಿಶ್ಚಿಂತವಾಗಿ ನಿರಾಳವಾಗಿಹುದು.

ಸಮತೆ ಸಯವಾದ ಶರಣಂಗೆ ಅರುವು ಮರವುಗಳುಂಟೆ ? ಉಪಮೆ ನಿಸ್ಥಲವಾದ ಶರಣಂಗೆ ಶಬ್ದ ಸಂದಣಿಯುಂಟೆ ? ಅಖಂಡಿತ ಲಿಂಗಕ್ಕೆ ಅಪ್ರಮಾಣ ಶರಣಂಗೆ ಸೀಮೆ ಸಂಬಂಧವೆಂಬ ಸಂಕಲ್ಪವುಂಟೆ ? ಇದು ಕಾರಣ ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ ಭವವಿಲ್ಲ, ಬಂಧನವಿಲ್ಲ, ಸಮತೆಯ ತನ್ನಿರುವು ಆಗಿಹ ಶರಣಂಗೆ ದೇಹಬುದ್ಧಿ, ಆತ್ಮಬುದ್ಧಿ ಇರಬಹುದೆ ? ಬುದ್ಧಿಯೆ ಭಸ್ಮವಾಗಿ ಚಿದಾಕಾಶವೆ ತಾನಾಗಿಹ ಘನವಂತನಿಗೆ ಚಿತ್, ಅಚಿತ್ ಎಂಬ ತೋರಿಕೆಯ ಗಜಿ ಬಿಜಿ ಇರಬಹುದೆ ? ನಿಶಬ್ದವೇದಿಗೆ ಆದಾವ ಉಪಮೆ;

ಅದಾವ ಸ್ಥಲ ? ಸ್ಥಲವೆ ನಿಸ್ಥಲವಾದವಂಗೆ ಅಹುದಾವುದು, ಅಲ್ಲಾವುದು ? ಸಂಗಮವಾವುದು, ನಿಸ್ಸಂಗವಾವುದು ? ಅಜ್ಞಾನವಾವುದು ? ಜ್ಞಾನವಾವುದು, ತೆರಹಿಲ್ಲದ ಘನಕ್ಕೆ ಮರವು ಆವುದು, ಅರುವು ಆವುದು ? ನಾನು ಆವುದು ? ನೀನು ಆವುದು ? ಬಂದುದು ಆವುದು, ಬಾರದುದು ಆವುದು.

ಸುಖದುಃಖ ವಿರ್ವಜಿತ ಸರ್ವ ಸಮಂ । ಇದು ಶೋಕ ವಿಶೋಕ ವಿಹೀನಪರಮ್ ಗುರು ಶಿಷ್ಯ ವಿವರ್ಜಿತ ತತ್ವಪರಂ। ಕಿಮುರೋದಷಿ ಮಾನಸಿ ಸರ್ವ ಸಮಂ । ಈ ಸರ್ವ ಸಮವಾದ ಸ್ಥಿತಿಗೆ ಸುಖವೂ ಇಲ್ಲ, ದುಃಖವೂ ಇಲ್ಲ, ಶೋಕವೂ ಇಲ್ಲ, ವಿಶೋಕವೂ ಇಲ್ಲ, ಗುರು ಶಿಷ್ಯರ ವಿಭಾಗವೆ ಇಲ್ಲ, ಸರ್ವ ಸಮವಾಗಿಹ ಸತ್ಯವೆ ನೀನಾಗಿರುವಾಗ ಎಲೆ ಮನವೆ ಏತಕ್ಕೆ ರೋಧಿಸುವೆ ಹೀಗೆ ಮನಸ್ಸಿಗೆ ಬೋಧ ಮಾಡುವವರಾಗಬೇಕು. ಆಗ ಸಮತೆಯು ನಮ್ಮಯ ಇರವು ಆಗುವುದು. ಆವಲ್ಲಿ ಸಮವು ತನ್ನಯ ಇರವು ಆಗಿದೆ. ಅಲ್ಲಿಯೆ ಶಾಂತಿಯು ಸ್ಥಾಪಿತವಾಗುವುದು. ಎಲ್ಲಿ ಶಾಂತಿಯು ಸ್ಥಾಪಿತವಾಗಿಹುದು, ಅಲ್ಲಿ ಸಮತೆಯ ಸಿದ್ಧಿಸುವುದು. ಸಮತೆಗೆ ಉಪಮೆಗಳಿಲ್ಲ, ಅದು ಅನುಪಮವಾಗಿಹ ನಿಲುವು. ಆಕಾಶ, ಘಟಾಕಾಶ, ಮಠಾಕಾಶ, ಮಹಾಕಾಶವಾಗಿಲ್ಲ, ಅದು ಇದ್ದಂತೆ ಇದೆ. ಮಠದಲ್ಲಿ ಮನೆಯಲ್ಲಿ ಕಲ್ಪಿಸುವುದು ಹೇಗೆ ಅಜ್ಞಾನವೊ ಹಾಗೆ ಮನ ಮೇರೆದಪ್ಪಿದ ನಿಲುವು. ಮನೆಯ ಒಳಹೊರಗೆನ್ನದೆ ವ್ಯಾಪಕವಾಗಿಹ ಬಯಲಿಂಗೆ ಮನೆಯಿಲ್ಲ, ಮಠವಿಲ್ಲ ಆಕಾಶ ತಿಳಿದವರ ದೃಷ್ಟಿಗೆ ಎಲ್ಲೆಲ್ಲೂ ಆಕಾಶವೆ ಆಕಾಶ. ಇದು ಅಖಂಡಿತವು ಆಗಿರುವಲ್ಲಿ ಅದಕ್ಕೆ ಒಳಗೆನ್ನಲು ಬರದು, ಹೊರಗೆನ್ನಲು ಬರದು, ಹಾಗೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಇದು ತಾನೆ ತಾನಾದ ನಿಲುವು. ಇದು ಸಮತೆ ಸಯವಾದ ನಿಲುವು. ಪ್ರಪಂಚ ಸತ್ಯಮಿಥ್ಯೆವೆಂಬುದಕ್ಕೂ ಮೀರಿದ ಘನವು, ಪರಮಾರ್ಥ ಸತ್ಯಮಿಥ್ಯೆ ಎಂಬುದಕ್ಕೂ ಮೀರಿದ ಘನವು, ಈ ಮೀರಿದ ಘನವೆ ತನ್ನಿರುವು ಎಂದರಿದ ಶರಣಂಗೆ ಮರವು ಇಲ್ಲ, ಅರುವು ಇಲ್ಲ, ಈ ಮಹಾಂತ ಆವಾವುದಕ್ಕೂ ಅರಿಯಲಿಲ್ಲದ ಅರುವು ಆದುದರಿಂದ ಉಪಮೆಗೆ ಅವಕಾಶವಿಲ್ಲವಾಗಿದೆ. ಏಕೆಂದರೆ ಶಬ್ದಸಂದಣಿಗೆ ಅವಕಾಶವಿಲ್ಲವಾಗಿದೆ. ಲಿಂಗವೆಂಬುದು ಅಖಂಡವು ತಾನೆಂಬುದು ಅಪ್ರಮಾಣ ಅಚಿಂತ್ಯನಾದುದರಿಂದ ಶರಣ ಸದಾ ಶಾಂತಾತ್ಮನು. ಶಾಂತಿಯೆ ಅವನು ನಿಂತ ನಿಲುವು. ನಿಜಧಾಮವು ಆಗಿಹುದು. ಶಾಂತಿಯಲ್ಲಿ ನಿಂತ ನಿಲುವು ಅಕಥನೀಯವು ಆಗಿದೆ. ಸಮತೆ ಸಯವಾದುದು ಅಪ್ರಮಾಣವಾಗಿದೆ. ಇದು ಸಮತೆ ಶಾಂತಿಯಲ್ಲಿ ತರಹರವಾದ ಇರುವು.

ಭಾವ ನಿರ್ಭಾವದಲ್ಲಿ ತರಹರವಾಗಿ : ಓಹೋ ಅಪ್ರತಿಮ ಶರಣ ಅಗಮ್ಯ ಶರಣ, ಅಹುದು ಅಲ್ಲ ಎಂಬ ಭಾವಂಗಳ ನಿರ್ಭಾವದಲ್ಲಿ ನೆಲಸಿಹನೆ ? ಇದೆಂಥ ಸಾಹಸ, ಇದೆಂಥ ಅರು ಹೃದಯ, ಇದೆಂಥ ಅರುವಿಂಗರುವಾಗಿಹ ಇರುವು, ಭಾವನೆ ಭಾವಕ್ಕಗಮ್ಯವಾಗಿಹ ಘನವಾದವೆ ? ನರರ ಭಾವಂಗಳು ಭಾವಕ್ಕಗಮ್ಯವಾಗಿಹ ಘನವಾಗಿ ನಿರ್ಭಾವದಲ್ಲಿ ನೆಲಿಸಿದವೆ ? ಸುರಾಸುರರು, ದೇವಗಣ, ರುದ್ರಗಣ, ಪ್ರಮಥಗಣರ ಭಾವಂಗಳು ಭಾವಕ್ಕಗಮ್ಯವಾಗಿಹ ಘನವಾಗಿ ನಿರ್ಭಾವದಲ್ಲಿ ನೆಲಿಸಿದವೆ ? ಸತ್ಯರು, ನಿತ್ಯರು ಮುಕ್ತರು ಎಂಬ ಮಹಾಮಹಿಮರ ಚಿದ್‌ಭಾವವು ಭಾವಕ್ಕಗಮ್ಯವಾಗಿಹ ಘನದಲ್ಲಿ ನೆಲೆಯೂರಿ ನಿಂತಿಹವೆ ? ಕಂಡುದೆಲ್ಲ ಭಾವಕ್ಕಗಮ್ಯವಾಗಿಹ ಘನವಾಯಿತೆ ? ಕೇಳಿದುದೆಲ್ಲವು

ನಿರ್ಭಾವದ ಘನವಾಯಿತೆ ? ಮುಟ್ಟಿದುದೆಲ್ಲ ಘನಕ್ಕೆ ಘನವಾದುದಾಯಿತೆ ? ರುಚಿಸಿದುದೆಲ್ಲ ಚಿದ್ರಸವೆಂಬುದಕ್ಕೂ ನಿಲುಕದಾಯಿತೆ ? ಘ್ರಾಣೇಂದ್ರಿಗೆ ತಾಕಿದುದೆಲ್ಲವು, ಮುಟ್ಟ ಬಾರದ ಘನವಾಯಿತೆಂಬುದಕ್ಕೂ ನಿಲುಕದಾಯಿತೆ ? ಅರಿಯಲಿಲ್ಲದ ಅರುವು ಕೈ ಕರಣವಾಯಿತೆ ? ಸುಜ್ಞಾನವು ಸ್ವಪ್ರಭೆಯು ಪ್ರಜ್ವಲಿಸಿತು ಎಂಬುದು ಎಂಜಲಾಯಿತೆ ? ಜ್ಯೋತಿಯ ಬಸುರಿನೊಳಗೆ ಬಂದ ಜ್ಯೋತಿಯೆಂಬುದು ಮಿಗೆ ಮಿಗೆ ಮೀಸಲವಾಗ ದಾಯಿತೆ ? ಇಂತಪ್ಪ ಮಹಾಂತನ ಮಹದರುವು ಹೇಳಲಿಲ್ಲ, ಕೇಳಲಿಲ್ಲವಾದ್ದರಿಂದ ಅಚ್ಚ ಶರಣ ಗುಹೇಶ್ವರ ಎಂದು ಹೇಳಿಹರು.

ಅಚ್ಚ ಶರಣ ಚತುರ್ದಶ ಭುವನಂಗಳ ಮೂಲವ ಕಂಡು ತನ್ನೊಳ ಇಂಬಿಟ್ಟುಕೊಂಡ ಶರಣ ಎಲ್ಲೆಲ್ಲೂ ತನ್ನ ಕಂಡುದು, ಹೇಳಲಿಲ್ಲ ಕೇಳಲಿಲ್ಲ, ಅಲ್ಲಿ ಪರಮ ಶಾಂತಿಯು, ಅಲ್ಲಿಯೆ ಭಾವ ನಿರ್ಭಾವವಾದುದು. ಶಬ್ದಮುಗ್ಧವಾದುದು, ಅರಿಯಲಿಲ್ಲದ ಅರುವಾಗಿಹ ಸುಖಮಯನು ಅಚ್ಚ ಶರಣನು ಎಂದು ಹೇಳಿಹರು. ಅಂತಪ್ಪ ಮಹಾಂತ ಕಾಯದ ಕಳವಳ ಕಂಡವನಲ್ಲ, ಮಾಯೆ ಕಂಡವನಲ್ಲ, ಅರುವಿಂಗರುವಾಗಿಹ ಘನ ಮಹಿಮನು ತಾನು ತಾನಾದ ಶರಣನು ಆತನೆ ಅಚ್ಚ ಶರಣನು ಎಂದು ಹೇಳಿಹರು.

**146**

**ಕಾಯದ ಕಳವಳವ ಗೆಲಿದಡೇನೊ,ಮಾಯದ ತಲೆಯನರಿಯದನ್ನಕ್ಕರ ?**
**ಮಾಯೆಯ ತಲೆಯನರಿದಡೇನೊ,ಜ್ಞಾನದ ನೆಲೆಯನರಿಯದನ್ನಕ್ಕರ?**
**ಜ್ಞಾನದ ನೆಲೆಯನರಿದಡೇನೊ, ತಾನು ತಾನಾಗದನ್ನಕ್ಕರ?**
**ತಾನು ತಾನಾದ ಶರಣನ ನಿಲುವಿಂಗೆ**
**ಒಂದು ಧಾರೆ ಮೇರೆಯುಂಟೆ ಗುಹೇಶ್ವರಾ?** ॥ 542 ॥

**ತಾತ್ಪರ್ಯ :** *ಕಾಯದ ಕಳವಳಗೆಲಿದಡೇನೊ ಮಾಯದ ತಲೆಯನರಿಯದನ್ನಕ್ಕರ:* ಕಾಯದ ಕಳವಳಗೆಲಿದವರು ಹುಡುಕಿದರೆ ಸಿಕ್ಕಬಹುದು, ಮಾಯದ ತಲೆಯನರಿತವರು ಸಿಕ್ಕುವುದು ವಿರಳ. ಪೂರ್ವದಲ್ಲಿ ಎಷ್ಟೊ ವೈರಾಗ್ಯ ಪುರುಷರು ಆಗಿ ಹೋಗಿಹರು, ಅವರು ಕಾಯ ತಾವಾಗಲಿಲ್ಲ, ಕಾಯದಲ್ಲಾಗುವ ವ್ಯಥೆ, ಚಿಂತೆ, ಸಂತಾಪ ವ್ಯಸನಗಳಿಗೆ ವಿರುದ್ಧ ಆಚರಿಸಿಹರು. ಒಂದು ಸಾರೆ ಚಿದಾನಂದಾವದೂತರು ಒಮ್ಮೆ ಮಹಾಪ್ರಸ್ತಕ್ಕೆ ಹೋಗಿದ್ದರಂತೆ ಅಲ್ಲಿ ಊಟಕ್ಕೆ ಕೂತಾಗ ಬದನೆಕಾಯಿ ಪಲ್ಲೆ ಊಟ ಮಾಡಲು ಬಹು ರುಚಿಯಾಗಿ ಪಲ್ಲೆ ನೀಡುವವರಿಗೆ ಇನ್ನು ಸ್ವಲ್ಪು ಪಲ್ಲೆ ಹಾಕಿರಿ ಎಂದು ಕೇಳಿದರಂತೆ ಅವರಿಗೆ ಆ ಮಾತು ಕೇಳಿತೊ ಕೇಳಲಿಲ್ಲವೊ ಅವರು ಪಲ್ಲೆ ನೀಡದೆ ಹಾಗೆ ಹೋದರಂತೆ. ಆಗ ಮನಸ್ಸಿಗೆ ಪಲ್ಲೆ ತಿನ್ನಲು ಹೆಚ್ಚಿನ ಬಯಕೆ ಆಯಿತಂತೆ. ಆಗ ತಮ್ಮ ಮನಸ್ಸಿಗೆ ಹೀಗೆ ಉಪದೇಶಿಸಿದರಂತೆ, ಬೇಡಿ ಉಂಡರೆ ನೀಡಿದಷ್ಟು , ಮಾಡಿ ಉಂಡರೆ ಬೇಡಿದಷ್ಟು ಎಂದು ಬುದ್ಧಿ ಹೇಳಿ, ಅಲ್ಲಿಂದ ಬಂದು ತಾವು ಒಂದು ಹಳ್ಳದದಂಡಿಗೆ ಸ್ವಲ್ಪ ಕ್ಷೇತ್ರ ಹಸನ ಮಾಡಿ ಅಲ್ಲಿ ಬದನಿ

ಸಸಿ ತಂದು ಹಚ್ಚಿ ಅವುಗಳನ್ನು ಫಲವತ್ತಾಗಿ ಬೆಳೆಯುವಂತೆ ಕಸ ತೆಗೆದು, ಗೊಬ್ಬರವ ಹಾಕಿದಾಗ ಅವು ಚೆನ್ನಾಗಿ ಬೆಳೆದು ಕಾಯಿಗಳು ಬಿಡಹತ್ತಿದವು. ಆಗ ತಾನು ಬದನೆ ಪಲ್ಲೆ ಮಾಡಿ, ಮನಸ್ಸಿಗೆ ಹೇಳಿದರಂತೆ ಆ ದಿವಸ ಬೇಡಿ ಉಂಡಿದ್ದಿ, ಅವರು ಕೊಟ್ಟಷ್ಟು ದೊರತಿತ್ತು. ಈ ದಿವಸ ಮಾಡಿರುವೆ, ಬೇಡಿದಷ್ಟು ತಿನ್ನು ಎಂದು ತಿನ್ನಿಸ ಹತ್ತಿದರು. ಆಗ ಅದು ಹೆಚ್ಚು ಹೆಚ್ಚಾಗಿ ವಾಂತಿಯಾದರೂ ಬಿಡಲಿಲ್ಲವಂತೆ. ತಿನ್ನು ತಿನ್ನು ಎಂದು ಅದರ ಅಭಿಲಾಷೆ ಏಳದಂತೆ ಮಾಡಿದರಂತೆ.

ಮತ್ತೊಂದು ಸಲ ಮತ್ತೊಬ್ಬ ಮಹಾಪುರುಷರಾಗಿಹ ಘನಮಠದಾರ್ಯರಿಗೆ, ಭಕ್ತರಾದವರು ಅವರಿಗೆ ನೀರು ಕುಡಿಯಲು ತಮ್ಮ ವಿಳಾಸ ಹಾಕಿ, ತಂಬಿಗೆ ಕೊಟ್ಟರಂತೆ, ಆಗ ಆ ಮಹಾಂತ ಅದನ್ನು ನೋಡಿ ಅಪ್ಪ ಈ ತಂಬಿಗೆ ಹೊರಲು ಸಾಕು, ನಿನ್ನ ಹೆಸರನ್ನು ಎಲ್ಲಿ ಹೊತ್ತುಕೊಂಡು ಹೋಗುವುದು, ತ್ಯಾಗಿಗಳಾದ ಮೇಲೆ ಹೊನ್ನು, ಹೆಣ್ಣು, ಮಣ್ಣಿನ ಆಸಕ್ತಿ ಇರಬಾರದಪ್ಪ, ಈ ದಿವಸ ಈ ತಂಬಿಗೆಯ ಆಸಕ್ತಿ ಬೆಳೆದು, ಇನ್ನೊಂದು ದಿವಸ ಮತ್ತೊಂದು ಆಸಕ್ತಿ ಬೆಳೆದು ಒಳಗೊಳಗೆ ಇದರ ರುಚಿಯೆ ಬೆಳೆದು ಸಂಗ್ರಹಬುದ್ಧಿಯು ಅಧಿಕವಾಗಿ ವಾಸನೆ ಬೆಳೆದು ಆಸಕ್ತಿಯೆ ಹೃದಯದಲ್ಲಿ ನಿವಾಸವಾಗಿ ಇಡೀ ಜೀವನ, ಬಾಳು ನಿಷ್ಪ್ರಯೋಜಕವಾಗುತ್ತದೆಂದು ಹೇಳಿದರಂತೆ. ಇವರು ಕಾಯದ ಕಳವಳ ಗೆಲಿದವರು. ಇವರ ಬಾಹ್ಯತ್ಯಾಗ ನೋಡಿದರಲ್ಲದೆ ಇವರು ಮಾಯೆಯ ತಲೆಯನರಿತುದು ತಿಳಿಯಲಿಲ್ಲ, ಇದಲ್ಲದೆ ಮಾಯೆಯ ತಲೆಯನರಿತವರು ಬಹು ಕಡಿಮೆ ಇದ್ದಾರೆ. ಏಕೆಂದರೆ ಮಾಯೆ ತಲೆ ಬಹು ಸೂಕ್ಷ್ಮವಾಗಿದೆ. ಅಂದರೆ ಮಾಯೆಯ ಜ್ಞಾನ ಅರಿವುದು ಬಹು ಸೂಕ್ಷ್ಮವು. ಇದನ್ನು ಅರಿತರೂ ಜ್ಞಾನದ ನೆಲೆ ಅರಿಯುವುದು ಸೂಕ್ಷ್ಮವಾಗಿದೆ. ಮಾಯದ ತಲೆ ಅರಿಯದವನು ಜ್ಞಾನದ ನೆಲೆ ಅರಿವುದು ಆವಾಗ? ಜ್ಞಾನದ ನೆಲೆ ತಿಳಿಯದಿರುವಲ್ಲಿ ತಾನು ತಾನಾಗುವುದು ಆವಾಗ ?

ಬಹು ಜ್ಞಾನಿಗಳಲ್ಲಿ ಕಾಯದ ಕಳವಳ ಆವುದರಿಂದ ಗೆಲುವುದು ಮಾಯೆ ಆವುದರಿಂದ ಗೆಲುವುದು ಜ್ಞಾನದ ನೆಲೆ ಆವುದರಿಂದ ಅರಿವುದು ತಾನೆ ತಾನಾಗುವುದು ಹೇಗೆ ಎಂಬುದು ಸಕ್ರಮವಾಗಿ ತಿಳಿದಿರುವ ಜ್ಞಾನಿ ಪುರುಷರು ಬಹು ಕಡಿಮೆ ಇಹರು. ಕೆಲವರಲ್ಲಿ ಒಂದು ಇದೆ. ಒಂದು ಇಲ್ಲ, ಬಾಹ್ಯ ತ್ಯಾಗವಿದ್ದರೆ ಅಂತರ ತ್ಯಾಗವಿಲ್ಲ, ಅಂತರ ತ್ಯಾಗವಿದ್ದಲ್ಲಿ ಯತಾರ್ಥವಾಗಿ ತಿಳಿಯುವ ಅರಿವು ಇಲ್ಲ, ಅರಿವು ಇದ್ದಲ್ಲಿ ಅರುವಿಂಗರುವಾದುದು ಇಲ್ಲ, ಹೀಗೆ ಒಂದು ಇದ್ದು ಮತ್ತೊಂದು ಇಲ್ಲದವರೆ ಪೂರ್ವದಲ್ಲಿ ಎಷ್ಟೋ ಬಾಹ್ಯ ತ್ಯಾಗಿಗಳೆ ಲಿಂಗೈಕ್ಯ ನಿಲುವುಳ್ಳವರೆನಿಸಿಕೊಂಡಿಹರು. ಅವರು ಬರೆದ ಸದ್‌ಗ್ರಂಥಗಳ ನೋಡಿದರೆ ಲಿಂಗೈಕ್ಯ ಜ್ಞಾನದ ಸುಳಿವು ಸಹ ಇಲ್ಲ, ಹೀಗಾಗಿ ಮಹಾಪುರುಷರಾರು ಎಂಬುದು ತಿಳಿಯದಾಗಿ ನಿಶಬ್ದ ವೇದಿಯಾಗಿಹ ಮಹಾನುಭವವನ್ನು ಆಶ್ರಯಿಸುವುದು ಕಠಿಣವಾಗಿದೆ. ಇದು ಕಾರಣ ಅಕ್ಕನು ಮಹಾನುಭವಿ. ಲಿಂಗೈಕ್ಯನಿಲುವುಳ್ಳ ಮಹಾಶಕ್ತಿ ಎಂದು ಕಂಡರೂ ಜಗತ್ ಕಲ್ಯಾಣಕ್ಕೋಸ್ಕರ ಭಕ್ತರ ಜಿಜ್ಞಾಸುಗಳ ಕಲ್ಯಾಣಕ್ಕೋಸ್ಕರ ಈ ಮಹಾಶಕ್ತಿಯಿಂದ ಮಹಾನುಭವ ಪ್ರಕಟವಾಗಲೆಂಬ ಉದ್ದೇಶದಿಂದ ಪ್ರಭು, ಅಣ್ಣಿ ಬಸವಣ್ಣ , ಸಿದ್ಧರಾಮ ಶಿವಯೋಗಿ ತಂದೆ ಆ ಮಹಾತಾಯಿಯ ಪರೀಕ್ಷಿಸಲು ಕಿನ್ನರಿ ಬೊಮ್ಮಯ್ಯನನ್ನು ಕಳಿಸಿಹರು. ಇಲ್ಲಿ ಅಕ್ಕನ ಮಹಾನುಭವರೂಪಿ ಬಂಗಾರವ ಕಿನ್ನರಿ

ಬೊಮ್ಮಯ್ಯನು ಪರೀಕ್ಷಿಸುವ ಒರೆಗಲ್ಲಾಗಿಹನು.

ಕಿನ್ನರಿ ಬೊಮ್ಮಯ್ಯ : ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆ ಇರಲು, ಇದೇತರ ಮನ, ಇದೇತರ ನಿರ್ವಾಣ, ಮಹಾಲಿಂಗ ತ್ರಿಪುರಾಂತಕನು ನಿನ್ನ ಸಂಸಾರಿ ಎಂಬುವನಲ್ಲದೆ ಸಜ್ಜನೆ ಎಂದು ಕರೆವವನಲ್ಲ ಕೇಳಾ ಮರುಳೆ ಇದಕ್ಕೆ ಅಕ್ಕನ ಉತ್ತರ.

ಅಕ್ಕ ಮಹಾದೇವಿ-ಅಕ್ಕ ಪರಮಜ್ಞಾನಿ ಪರಾತ್ಪರವಾಗಿಹ ಮಹಾಶಕ್ತಿ, ಈ ಮಹಾಶಕ್ತಿಯ ಮಹಾನುಭವ ನೋಡಿರೆ ? ಅಂಗದ ಭಂಗವ ಲಿಂಗ ಸುಖದಿಂದ ಗೆಲಿದೆ. ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ. ಜೀವದ ಭಂಗವ ಶಿವಾನುಭವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರ ಮಿಂಚಿನ ಕಣ್ಣಿಂಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮ ನೋಡಯ್ಯ ಎಂದು ಬಿತ್ತರಿಸಿದುದು ನೋಡುವುಡೆ, ಕಾಯದ ಕಳವಳ ಗೆದಿಯಬೇಕಾದರೆ ಲಿಂಗಸುಖದ ಸುಖಿಗಳಾದಾಗ ಕಾಯದ ಕಳವಳ ಸಹಜ ಗೆಲಿಯುವನು. ಈ ಬಹಿರ್ ಕಾಯದ ಕಳವಳ ಕೆಡಬೇಕಾದರೆ, ಕಾಯಕ್ಕೆ ಕಾಯವಾಗಿಹ ಘನ ಕಾಯವ ಕಾಣುವುದು. ಆಗ ಕಾಯ ಅಳಿದರೇನು ಉಳಿದರೇನು ? ಅದು ಸೊಕ್ಕಿದರೇನು, ಸೊರಗಿದರೇನು ? ಅದಕ್ಕೆ ಲೋಕವು ಪೂಜಿಸಿದರೇನು ? ಅಗೌರವಿಸಿದರೇನು ? ಅದು ನೂರಾರು ವರ್ಷ ಬಾಳಿದರೇನು ? ಅಂದೆ ಅಥವಾ ಆಗಳೆ ಮರಣವಾದರೇನು. ಅದರ ಹಂಗಿಗನಲ್ಲ, ತಾನು ನಿರುಪಮ ಘನ, ನಿರವಯ ನಿರವಧಿ ನಿತ್ಯಾನಂದನಾಗಿಹ ಸ್ವಮಹಿಮಂಗೆ, ತನು ನಷ್ಟವಾಗಿಹುದು ನೋಡಾ. ಇಂದ್ರಿಯಂಗಳ ಕಳವಳವುಳ್ಳವನೆಂದಲ್ಲಿ ಕಣ್ಣಿನ ಕಣ್ಣಾಗುವುದು, ಕಿವಿಯ ಕಿವಿಯಾಗುವುದು, ಮೂಗಿನ ಮೂಗು ಆಗುವುದು, ರಸನೇಂದ್ರಿಯ ರಸವಾಗುವುದು ತ್ವಕ್ಕೇಂದ್ರಿಯತ್ವಕ್ಕಾಗುವುದು. ಇವುಗಳ ಮೂಲವಾಗಿಹ ಅತೀಂದ್ರಿಯು ತಾನೆಂಬುದು ತನ್ನಿಂದ ತನಗದು ವಿದಿತವಾದಲ್ಲಿ ಆಗ ವಾಕ್ಕಿನ ಶುಭಾಶುಭ ಕರ್ಮಗಳು ತನಗಿಲ್ಲವೆಂಬ ಅರಿವು ತನ್ನೊಳಗೆ ತನ್ನಿಂದ ತನಗಾದಲ್ಲಿ ಇಂದ್ರಿಯಂಗಳ ಶುಭಕಾರ್ಯವು ಆಗುವುದಿಲ್ಲ, ಅಶುಭವು ಆಗುವುದಿಲ್ಲ, ಇದರಿಂದ ವಿಜಿತೇಂದ್ರಿಯತ್ವವು ಸಿದ್ಧಿಸುವುದು, ಅವುಗಳ ಭೋಗವು ತಾನಾಗುವುದಿಲ್ಲ, ತ್ಯಾಗವು ತಾನಾಗುವುದಿಲ್ಲ, ಅಲ್ಲಿ ಬೇಕೆಂಬುದು ನಷ್ಟ, ಬೇಡೆಂಬುದು ನಷ್ಟವಾಗಿ ಇಂದ್ರಿಯಂಗಳು ಅತೀಂದ್ರಿಯವಾಗಿಹ ಘನದಲ್ಲಿ ಲೀಯವಾಗಲು ಪ್ರವೃತ್ತವಾಗುವವು. ಇದರಿಂದ ಇಂದ್ರಿಯಂಗಳ ಉಪಭೋಗದ ಕಳವಳವು ನಷ್ಟವಾಗುವುದು. ಪ್ರಾಣದ ಕಳವಳವುಳ್ಳವನಾಗಿಹನೆಂದಲ್ಲಿ ಈ ಪ್ರಾಣದ ಮೂಲವ ನೋಡಲು ಹೋಗಬೇಕು. ಆಗ ಪ್ರಾಣ ತಾನಾಗದೆ ಪ್ರಾಣದ ಪ್ರಾಣ ತಾನಾಗುವನು. ಪ್ರಾಣದ ಪ್ರಾಣವದು ಪರಂಜ್ಯೋತಿ, ಚಿಜ್ಯೋತಿ, ಪರಮಾನಂದ, ಪರಮಶಾಂತವು ಇಂತಪ್ಪ ಪ್ರಾಣದ ಪ್ರಾಣ ತಾನೆಂಬ ಅರಿವು ತನ್ನೊಳ ಬೆಳಗುವುಡೆ ಆಗ ಪ್ರಾಣ ಭೀತಿನಷ್ಟ ಅಮರವಾಗಿಹ ನಿರ್ಭೀತಿ ಸಿದ್ಧಿಸುವದು.

ಮನಭಂಗವ ಅರುಹಿನ ಮುಖದಿಂದ ಗೆಲಿದೆ: ಏಕೆಂದರೆ ಮನವೆ ತನ್ನ ಕಲ್ಪನೆಯಿಂದ ಬಹುಮುಖವಾಗಿದೆ. ಕಲ್ಪಿತ ಕಲ್ಪನೆ ಇವು ಅಕಲ್ಪಿತ ಘನದಲ್ಲಿ ಇಲ್ಲದುದು, ಇಲ್ಲದುದು ಇದ್ದಂತಾಗಿ ತೋರುವುದೆ ಮಾಯೆ, ಬಂಗಾರದಲ್ಲಿ ಆಭರಣ ಹೇಗೆ ತೋರುವುದೊ ಹಾಗೆ ಅಕಲ್ಪಿತದಲ್ಲಿ ಕಲ್ಪಿತವು ತೋರುತ್ತದೆ. ವಿಚಾರ ಮಾಡಲು ಆಭರಣವು ಬಂಗಾರವಲ್ಲದೆ ಅನ್ಯವಲ್ಲ, ಹಾಗೆ ಕಲ್ಪಿತ ಕಲ್ಪನೆ, ಅಕಲ್ಪಿತ ಘನವಲ್ಲದೆ ಅನ್ಯವಾಗದ್ದರಿಂದ

ತೋರುವ ತನು, ಇಂದ್ರಿ, ಪ್ರಾಣ, ಮನ, ಪರಬೊಮ್ಮವಲ್ಲದೆ ಅನ್ಯವಲ್ಲವಾದ್ದರಿಂದ ಅಕ್ಕನದು, ಅರುವಿಂಗರುವಾಗಿಹ ದಿವ್ಯದೃಷ್ಟಿ. ಎಲ್ಲೆಲ್ಲೂ ಒಂದನ್ನೆ ಕಾಣುವ ಮಹಾತೇಜ. ಅದಕ್ಕಾಗಿ ಮನಭಂಗವ ಅರುಹಿನ ಮುಖದಿಂದ ಗೆಲಿದೆ ಎಂದು ಹೇಳಿಹಳು.

ಮಾಯೆ ತಲೆಯನರಿಯದನ್ನಕ್ಕರ ಮಾಯೆಯ ತಲೆಯನರಿದಡೇನೊ: ಜ್ಞಾನದನೆಲೆಯನರಿಯದನ್ನಕ್ಕರ ತಾನು ತಾನಾದನಿಲುವಿಂಗೆ ಒಂದು ಧಾರೆ ಮೇರೆಯುಂಟೆ ಗುಹೇಶ್ವರಾ. ಮಾಯೆಯ ತಲೆಯನರಿತವರು ಶರಣರು ಶರಣೆಯರು. ತಾನಿದಿರೆಂಬುದು ಮಾಯೆ ತೋರಿತ್ತಾಗಿ ತಾನಲ್ಲ, ತಾನುಳುಮೆ ಜ್ಞಾನಾನಂದವೆಂಬುದನಾರು ಅರಿಯರಲ್ಲ. ನೋಡಲೇನೂ ಇಲ್ಲವಾಗಿ ನಿಜಸಿದ್ಧ ನೀನೆ, ಚಿಮ್ಮಲಿಗೆಯ ಚೆನ್ನರಾಮನೆಂಬ ಮಹಾಂತರ ಮಹಾನುಭವ ಅರಿದು ನೋಡಿರೆ ? ತನಗಿದುರಾಗಿ ತೋರಿದುದೆಲ್ಲವು ಮಾಯೆ, ಕುರುಹು ಇದ್ದಲ್ಲಿ ಶಬ್ದವಿದೆ, ಶಬ್ದವಿದ್ದಲ್ಲಿ ಕುರುಹು ಇದೆ. ಇವೆರಡು ತನಗಿದುರಾಗಿ ತೋರಿತ್ತಾಗಿ ತಾನಲ್ಲ, ತಾನು ಜ್ಞಾನಾನಂದವೆಂದು ಅನ್ನುವವರುಂಟು. ಅರಿತವರು ಸಿಗುವುದು ದುರ್ಲಭ. ಕುರುಹು ಶಬ್ದ ಇವೆರಡು ಮಾಯೆ ಎಂದು ತಿಳಿದವರು ಮಾಯೆಯ ಜ್ಞಾನವರಿತವರು. ಮಾಯೆಯ ಅರಿವಾದಡೇನಾಯಿತು, ಅದರ ಅಧಿಷ್ಠಾನದ ಅರಿವು ಆಗಬೇಕು, ಅದರ ಅಧಿಷ್ಠಾನದ ಅರಿವೆಂಬುದು ಜ್ಞಾನಾನಂದ, ಈ ಜ್ಞಾನಾನಂದವೆಂಬ ಅರಿವು ಆದರೇನು, ಅದರ ಇರುವು ಅರಿವುದು ಅದರ ಇರುವು ಅರಿದಲ್ಲಿ ತಾನು ತಾನಾದುದು ಈ ತಾನೆ ತಾನಾದ ನಿರವಧಿ ನಿರುಪಮಕ್ಕೆ ಒಂದು ಧಾರೆ ಮೇರೆಯುಂಟೆ ? ಸಮುದ್ರಕ್ಕೆ ಒಂದು ಧಾರೆ ಮೇರೆ ಇರಬಹುದೆ ? ಅರುವಿಂಗರುವಾಗಿಹ ಘನಕ್ಕೆ ಪ್ರಕಾಶಕ, ಪ್ರಕಾಶಿತವೆಂಬ ಧಾರೆ ಮೇರೆಯಂಟೆ ? ಎಂದು ಹೇಳಿಹರು. ಇಲ್ಲಿ ಇದಲ್ಲದೆ ಕ್ರಿಯಾಚಾರ, ಭಾವಾಚಾರ ಜ್ಞಾನಾಚಾರವೆಂಬ ಸೀಮಿತ ಉಂಟೆ ? ಚಿದಾಕಾಶಕ್ಕೆ ಅದಾವ ಕ್ರಿಯೆ, ಅದಾವ ಭಾವ, ಅದಾವ ಜ್ಞಾನ, ಆವುದು ಅಹುದು, ಆವುದು ಇಲ್ಲ, ನಿಸ್ಸೀಮನು ಸೀಮಿತವ ಕಾಣಬಾರದು.

**147**

**ಕಲ್ಯಾಣವರಿಯೆ ಕಟಕವರಿಯೆ ಬೇಂಟೆಯನಾಡುತ್ತಿದ್ದೆ.**
**ಎನ್ನ ಕೈ ನೋಡಿ ಭೋ ಕಲಿವೀರ ಸುಭಟರು.**
**ಎನ್ನ ಕೈ ನೋಡಿ ಭೋ ಅರುಹಿರಿಯರು.**
**ಕಾದಿ ಗೆಲಿದು ಗುಹೇಶ್ವರಲಿಂಗದಲ್ಲಿಗೆ ತಲೆಯವರಿಗೆಯನಿಕ್ಕಿ ಬಂದೆ,**
**ಎನ್ನ ಕೈ ನೋಡಿ ಭೋ.** ॥ 547 ॥

**ತಾತ್ಪರ್ಯ** : ಪ್ರಭು ಹೆಸರಿಗೆ ತಕ್ಕ ಘನವಂತ ಸಮರ್ಥ, ಸಮದರ್ಶಿ ತಾನಾರೆಂದರಿದ ಸ್ವಮಹಿಮ. ಈ ಮಹಿಮನ ದಿವ್ಯ ದೃಷ್ಟಿಗೆ ಕಲ್ಯಾಣವ ಕಾಣ, ಕಟಕವ ಕಾಣ, ಕಾಣದುದ ಕಂಡ ಮಹಿಮಂಗೆ ರಾಜಧಾನಿ ಎಲ್ಲಿ ? ಲಕ್ಷದ ಮೇಲೆ ತೊಂಭತ್ತಾರು ಗಣತಿಂಥಿಣಿಯು ಎಲ್ಲಿ ? ಎಲ್ಲಿಯ ಪ್ರಧಾನಿಯ ಮನೆ, ಎಲ್ಲಿಯ ದಾಸೋಹದಮನೆ, ಭಾವಕ್ಕಗಮ್ಯವಾಗಿಹ ಘನಮ ಹಿಮ ಭಾವಿಗಳ ಭ್ರಮವ ಕಾಣುವನೆ ?

ಪ್ರಭು, ಭಾವರೂಪಿ ಮೃಗಗಳ ಬೇಟೆಯಾಡಲು ಬಂದ ಬೇಟೆಗಾರ. ಈ ಲೋಕದ

ಬೇಟೆಗಾರರಂಥ ಬೇಟೆಗಾರನು ಅಲ್ಲ, ಈತನೊಬ್ಬ ವಿಸ್ಮಯ ಬೇಟೆಗಾರ, ಈ ಬೇಟೆಗಾರನ ಕೈ ಬೇರೆ, ಆಯುಧ ಬೇರೆ, ಲೋಕದ ಕಣ್ಣಿಂಗೆ ಕಾಣದ ಈತನ ರೂಪು, ಈತನ ಕೈ, ಈತನ ಮಾತು, ಈತನ ಶಸ್ತ್ರ ಪರಮಾಶ್ಚರ್ಯ ಮಾಡುವ ದೃಶ್ಯ. ಈತನನ್ನು ಕಂಡವರು ಅನನ್ಯ ಭಕ್ತರು. ಭರಿತ ಭಾವಿಕರು. ನಿರಹಂಭಾವಿಗಳು. ದಾಸೋಹಿಗಳು. ಅದಕ್ಕಾಗಿ ಅವರು ವರವೇದಿಗಳು. ಪುಣ್ಯವಂತರುಗಳಲ್ಲಿ ಪುಣ್ಯವಂತರು. ತ್ಯಾಗದ ತ್ಯಾಗಿಗಳು, ಅನುಭಾವದಗಮ್ಯರು. ಅರುವಿನ ಪರಿಮಳದವರು. ಅನಿಯಮದ ಬೆಡಗುಳ್ಳವರು. ಇವರು ಪುಸ್ತಕವಾಗಲಿಲ್ಲ, ಮಸ್ತಕವಾಗಿಹರು. ಪೂಜೆಗೆ ಬಾರದ ಲಿಂಗಯ್ಯನ ಪೂಜೆ ಮಾಡುವವರು ಕಿವಿಗೆ ಕೇಳದ ಮಂತ್ರದಲ್ಲಿ ರಮಿಸಿದವರು. ಇವರು ಈತನ ಭಕ್ತರು, ಭಾವಿಕರು, ಇಂತಪ್ಪ ಸುಜ್ಞಾನಿಗಳಿಗೆ ಕಲ್ಯಾಣವರಿಯೆ ಕಟಕವನರಿಯೆ ಬೇಟೆಯನಾಡುತ್ತಿದ್ದ ಎನ್ನ ಕೈ ನೋಡಿ ಭೋ ಎಂಬ ಮಹಾಪ್ರಸಾದವ ಕೇಳಿ ಶಬ್ದಮುಗ್ಧವಾಗಿಹರು.

ಓಹೋ ? ಈ ಮಹಾಂತಂಗೆ ಇದೆಂಥ ಅನುಪಮ ದೃಷ್ಟಿ, ಬಸವರಸನ ಶಿವಾನುಭವ ನಡೆಸುವ ಅನುಭವ ಮಂಟಪ ಕಾಣಲಿಲ್ಲವೆ, ತಿಳಿಯಲಿಲ್ಲವೆ ? ಇತ್ತ ಬಸವನ ಅರಮನೆ ಕಾಣಲಿಲ್ಲವೆ, ಅರಿಯದರುವಿಂಗೆ ಎಲ್ಲಿಯ ಅರುವಿನಗೋಷ್ಠಿ, ಮರವಿನಗೋಷ್ಠಿ, ಎಲ್ಲಿಯ ಆತ್ಮಾನುಭವ, ಎಲ್ಲಿಯ ಭಾವಿಕರ ಭಾವ, ಬಿಜ್ಜಳನೆತ್ತ ? ಅವನ ಅರಮನೆ ಎತ್ತ, ಪ್ರಧಾನಿ ಬಸವಣ್ಣನೆತ್ತ ಪ್ರಧಾನಿಯ ಮಹಾಮನೆ ಎತ್ತ, ಸೀಮಿತವೆತ್ತ, ನಿಸ್ಸೀಮವೆತ್ತ ? ಗಂಗೆ ಎತ್ತ ? ಜ್ಞಾನಗಂಗೆ ಎತ್ತ ? ಭಾವರೂಪಿ ಗಂಗೆ ಎತ್ತ ? ಭಾವಕ್ಕಗಮ್ಯವಾಗಿಹ ಘನಾಮೃತರೂಪಿ ಜ್ಞಾನಗಂಗಾ ಎತ್ತ ? ಇವೆರಡನ್ನು ಕಾಣದ ಅರಿಯದರುವಾಗಿಹ ಪ್ರಭುವಿನ ಕೈ ಎತ್ತ ? ಅರಿಯುವ ಭಾವರೂಪಿ ಭಕ್ತರುಗಳು ಎತ್ತ ? ಇದು ಕಾರಣ ಪ್ರಭು, ಅರುವುಳ್ಳ ಕಲ್ಯಾಣವ ಕಾಣಲಿಲ್ಲ, ಮರವುಳ್ಳ ರಾಜಧಾನಿ ಕಾಣಲಿಲ್ಲ, ಅದಕ್ಕಾಗಿ ಪರಮಾರ್ಥಿ ರೂಪಿ ಕಲ್ಯಾಣವರಿಯೆ, ಪ್ರಪಂಚರೂಪಿ ಕಟಕವನರಿಯೆ, ನನ್ನ ಕೈ ನೋಡಿ ಭೋ । ಸುಜ್ಞಾನರೂಪಿ ನನ್ನ ಕೈ ನೋಡಿ ಭೋ । ಅರಿಯದರುವುಳ್ಳ ಕೈ ನೋಡಿರೊ ? ಅರಿಯುವವನಾಗಿದ್ದಲ್ಲಿ ನಿಮ್ಮ ಅನುಭವರೂಪಿ ಕಲ್ಯಾಣವ ತಿಳಿಯುತ್ತಿದ್ದೆ ಇತ್ತ ಅನಾನುಭವಿಯಾದ ಮರವಿನ ಪ್ರಪಂಚರೂಪಿ ಕಟಕವ ತಿಳಿಯುತ್ತಿದೆ. ನನ್ನ ಸ್ವಂತ ಸ್ವಸುಖವಾಗಿಹ ಸ್ವಮಹಿಮೆಯಲ್ಲಿದ್ದ ನನಗೆ ಇವಾವು ಕಾಣದೆ ಇಹವು ನೋಡಿರೆ !

ಕಲಿ ವೀರ ಸುಭಟರು ಎನ್ನ ಕೈ ನೋಡಿ ಭೋ: ಕಲಿ ವೀರರು ಇವರು ಪ್ರಾಣ ವಿಷಯದಲ್ಲಿ ನಿರ್ಭಯರು, ಪ್ರಾಣವು ಇವರಿಗೆ ಹುಲ್ಲು ಕಡ್ಡಿಯಾಗಿದೆ. ವೀರರಲ್ಲಿ ಇವರು ಕಲಿವೀರರು, ಪ್ರಾಣವಿದ್ದರೆ ಲೋಕವನಾಳುವುದು ಅದು ವಿಯೋಗವಾದರೆ ಸ್ವರ್ಗವ ಸೇರುವುದು. ದಿಟ್ಟರು. ಕ್ಷಾತ್ರ ಧರ್ಮದ ಯೋಧರು, ಧರ್ಮ ಸ್ಥಾಪಿಸಲು ಅಧರ್ಮ ಅತ್ಯಾಚಾರಕ್ಕಾಶ್ರಯ ಕೊಡದಂತೆ ಸಕಲ ಪ್ರಜೆಗಳ ಹಿತಕ್ಕಾಗಿ ತಾವು ರಾಜ್ಯವಾಳುವುದೆ ಸುಭಟರು ಆಗಿದೆ. ಇಂತಪ್ಪ ಪ್ರಜಾಪ್ರೇಮಿಯಾಗಿಹ ಸುಭಟರ ಕಾಣಲಿಲ್ಲ, ಓ ಸುಭಟರೆ ನೀವು ಕಲಿ ವೀರರಾದಿರಿ. ಇತ್ತ ಪ್ರಜೆಗಳ ಹಿತಚಿಂತನಕ್ಕಾಗಿ ನಿನ್ನ ರಾಜ್ಯವನ್ನೇ ಮಿಸಲಾಗಿಟ್ಟ ಸುಭಟರ ನಾಡವನು ನೀನಾರು, ನಿನ್ನ ನೋಡಿಕೊಳ್ಳಲಿಲ್ಲವೆ ? ನೀನಾರು ಎಂದು ನಿನ್ನ ನೀನು ತಿಳಿಯಲಿಲ್ಲವೆ ? ನಿನ್ನಿಂದ ನಿನಗೆ ತಿಳಿಯಲು ಅಸಾಧ್ಯವಾದರೂ ಚಿಂತೆ ಬೇಡ, ಕೊನೆಗೆ ನನ್ನ ಸುಜ್ಞಾನರೂಪಿ ನನ್ನ ಕೈಯಾದರೂ ನೋಡಿರೆ ? ಓ ಕಲಿವೀರ ಸುಭಟರೆ ?

ದೇಶದ ಹಿತಕ್ಕಾಗಿ ಪ್ರಜೆಗಳ ಹಿತಕ್ಕಾಗಿ ನಿಮ್ಮ ಪ್ರಾಣವನ್ನೆ ಹುಲ್ಲು ಕಡ್ಡಿಯಂತೆ ಕಾಣುವ ಕ್ಷಾತ್ರ ತೇಜವು ಅಹುದು, ಇದು ನಿಜವಾದ ಕ್ಷಾತ್ರ ತೇಜವಲ್ಲ, ನಿಮ್ಮ ಕ್ಷಾತ್ರದ ತೇಜ ನಿಜ ತೇಜವಲ್ಲ, ನಿಜ ತೇಜವೆಂಬುದು ಕ್ಷಾತ್ರದ ಕ್ಷಾತ್ರವು. ನೀವು ಕೇವಲ ಪ್ರಾಣ ಒಂದೆ ಹುಲ್ಲು ಕಡ್ಡಿಯಂತೆ ತಿಳಿದರೆ ಕ್ಷಾತ್ರ ತೇಜವಾಗಲಿಲ್ಲ. ನೀವು ಪ್ರಾಣದ ಪ್ರಾಣವಾಗಿಹ ಪ್ರಾಣಲಿಂಗಿಯಾದರೆ ನೀವು ಎಮ್ಮವರು. ಎಮ್ಮವರಿಗೆ ಸಾವಿಲ್ಲ. ಸಾವನರಿಯರು. ಸಾವೆಂಬುದು ಸ್ವಯವಲ್ಲ, ಲಿಂಗದಲ್ಲಿ ಉದಯವಾದ ಲಿಂಗೈಕ್ಯರು. ಇಂತಪ್ಪ ಸುಜ್ಞಾನಿಗಳಾದರೆ ನೀವು ನಿಜವಾದ ಕಲಿವೀರರು ಅಹುದು, ಸುಭಟರು ಅಹುದು ಎಂದು ಅವರುಗಳನ್ನು ಎಚ್ಚರಿಸಿಹನು.

ಅರು ಹಿರಿಯರ ಕಾದಿಗೆಲಿದು ಗುಹೇಶ್ವರ ಲಿಂಗದಲ್ಲಿಗೆ ತಲೆಯವರಿಗೆಯ ನಿಕ್ಕಿಬಂದೆನ್ನ ಕೈ ನೋಡಿ ಭೋ : ಅಂಗ, ಲಿಂಗ ಬೇರೆನ್ನುವ ಭೇದಜ್ಞಾನವನ್ನೆ ನಾಶ ಮಾಡುವ ಅರು ಹಿರಿಯರು ನೀವಲ್ಲವೆ ? ಪೂಜ್ಯ ಪೂಜಕವೆಂಬ ಭೇದ ಜ್ಞಾನವನ್ನು ನಾಶ ಮಾಡಿದ ಅರು ಹಿರಿಯರು ನೀವಲ್ಲವೆ ? ತಾವು ಅಹಂಮಮವನ್ನೆ ನಷ್ಟ ಮಾಡಿ ಸೋಹಂಭಾವಿಗಳಾದ ಅರುಹಿರಿಯರು ನೀವಲ್ಲವೆ ? ಷಡ್‌ಧಾತು ಶರೀರ ಭಾವನಷ್ಟ ಮಾಡಿ ಷಡಕ್ಷರ ಮಾಡಿದ ಅರು ಹಿರಿಯರು ನೀವಲ್ಲವೆ ? ಲಿಂಗಾಂಗ ಸಮರಸ ಜ್ಞಾನಿಗಳಾಗಿಹ ಅರು ಹಿರಿಯರು ನೀವಲ್ಲವೆ ? ಇಂತಪ್ಪ ಅರು ಹಿರಿಯರ ಕಾದಿಗೆಲಿದು, ಗುಹೇಶ್ವರ ಲಿಂಗದಲ್ಲಿಗೆ ತಲೆವರಿಗೆಯನಿಕ್ಕಿ ಬಂದೆನ್ನ ಕೈ ನೋಡಿಭೋ ? ಅರು ಹಿರಿಯರೆಂದರೆ ಅರುವಿನ ಹಿರಿಯರು ಅರುವಿನ ಭಾವಿಗಳು, ಅರುವಿನ ಅಭಿಮಾನಿಗಳು ಇವರು ನಾಮರೂಪವ ಸೇರದವರು. ಅಸ್ತಿ, ಭಾತಿ, ಪ್ರಿಯದ ಪ್ರೇಮಿಗಳು. ಇವರು ಅರುವಿನ ಹಿರಿಯರು. ಲೋಕ ವಿರೋಧಿ ಭಕ್ತ, ಭಕ್ತ ವಿರೋಧಿ ಶರಣ, ಶರಣ ವಿರೋಧಿ ಲಿಂಗೈಕ್ಯ. ಇಂತೀ ತ್ರಿವಿಧ ವಿರೋಧಿ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾ ಲಿಂಗೈಕ್ಯನು.

ಭಕ್ತರು ಅರುಹಿರಿಯರು, ಶರಣರು ಅರು ಹಿರಿಯರು, ಲಿಂಗೈಕ್ಯರು ಅರುಹಿರಿಯರು. ಇಂತಪ್ಪ ಅರುಹಿರಿಯರು ಕಾದಿಗೆಲಿದು ಗುಹೇಶ್ವರ ಲಿಂಗದಲ್ಲಿಗೆ ತಲೆಯವರಿಗೆಯನಿಕ್ಕಿ ಬಂದೆನ್ನ ಕೈ ನೋಡಿಭೋ ಎಂದು ತನ್ನ ಸುಜ್ಞಾನರೂಪಿ ಕೈ ನೋಡಿ ಭೋ, ಓಹೋ ! ನೀವು ಅರುವಿನ ಹಿರಿಯರಾದರೆ ನನ್ನ ಅರುವಿಂಗರುವಾಗಿಹ ಸ್ವಮಹಿಮವು. ನನ್ನ ಸ್ವಮಹಿಮನಾಗಿಹ ನನ್ನ ಕೈ ನೋಡಿ ಭೋ, ಅರು ಹಿರಿಯರು ಹಂಗಿನ ಸಂಯೋಗಿಗಳು, ಭಕ್ತನು ಹಂಗಿಗನ ಸಂಯೋಗಿಯು, ಶರಣನೆನ್ನಿಸಿಕೊಂಡವನು ಹಂಗಿನ ಸಂಯೋಗಿಯು, ಲಿಂಗೈಕ್ಯನು ಹಂಗಿನ ಸಂಯೋಗಿಯು, ನನ್ನ ತೇಜ, ಹಂಗಿಲ್ಲದ ತೇಜ, ನನ್ನ ಸ್ವಮಹಿಮೆಯಲ್ಲಿದ್ದುದು, ನನ್ನಯ ತೇಜವಾದುದರಿಂದ ಆರಾರ ಆವಾವ ಹಂಗಿಲ್ಲದ ಸಂಯೋಗ, ಗುಹೇಶ್ವರನ ಸಂಯೋಗ, ಹಂಗಿಲ್ಲದ ಸಂಯೋಗವಾದುದರಿಂದ ನೋಡಿರೆ ? ದೇಹವೆಂಬ ಗುಹೆಯೊಳಗೆ ಈಶ್ವರನಾಗಿಹ ಘನ ಚೈತನ್ಯರೂಪಿ ಲಿಂಗವನರಿದು, ಸ್ವಯಲಿಂಗಿಯಾಗಿ ಗುಹೇಶ್ವರನೆಂಬ ಲಿಂಗರೂಪಿ ಡಾವು ಕೆಳಗಿಕ್ಕಿ , ನನ್ನ ಸ್ವಮಹಿಮೆಯಲ್ಲಿದ್ದ ನನ್ನ ಕೈ ನೋಡಿರೆ ಎಂದು ಬಿತ್ತರಿಸಿಹನು.

ಪ್ರಭುವಿನ ಘನ ದೃಷ್ಟಿಗೂ ಲೋಕದವರ ದೃಷ್ಟಿಗೂ ಎತ್ತಣದಿಂದ ಎತ್ತ ಈ ಮಹಾಂತ ತಿಳಿದ ರಹಸ್ಯವ ಬೇರೆ, ಲೋಕ ಮಾನವರು ಈ ಘನವಂತನನೇನು ತಿಳಿಯುವರು.

ಪೂಜಾಲಿಂಗವ ಪೂಜಿಸುವ ಲಿಂಗಾರ್ಚಕರಿಗೂ ತಿಳಿಯದ ರಹಸ್ಯವಾಗಿದೆ. ಲಿಂಗತತ್ವ ತಿಳಿಯಬೇಕೆಂಬ ಲವಲವಿಕೆಯುಳ್ಳವರಿಗೂ ತಮ್ಮಿಂದ ತಾವೆ ನೋಡಿಕೊಳ್ಳುವ ವಚನ ಸಾಹಿತ್ಯದ ಸಪ್ರೇಮಿಗಳಿಗೂ ಎಟಕದ ವಿಷಯವಾಗಿದೆ. ಇತ್ತ ಪೂರ್ವಾಶ್ರಯದಿಂದುಕ್ತರಾಗಿ ಷಟಸ್ಥಲ ಬ್ರಾಹ್ಮಿ ಎನ್ನಿಸಿಕೊಳ್ಳವವರಿಗೂ ನುಂಗದ ತತ್ವರೂಪಿ ತುತ್ತಾಗಿದೆ. ಪ್ರಭುವಿನ ಘನಪ್ರಸಾದ ಪ್ರಭು ಹೃದಯರಾಗಿ ಅರುಹೃದಯರಾಗಿ ನೋಡಿದವರಿಗೆ ಸಾಧ್ಯವಲ್ಲದೆ ಮರವುಳ್ಳ ಹೃದಯಕ್ಕೆ ಹೇಗೆ ಸಾಧ್ಯವು ಇದು ಕಾರಣ ಮರವುಳ್ಳವರ ಪುಣ್ಯ ಪಾಪವೇ ಬೇರೆ. ಅರುಹೃದಯರಾಗಿಹ ಮಹಾಂತರ ಪಾಪ ಪುಣ್ಯವೇ ಬೇರೆ. ಇವರ ತಿಳುವಳಿಕೆಗೂ ಮಹಾಂತರ ತಿಳುವಳಿಕೆಗೂ ಮಹದಂತರವಿದೆ. ಇವರು ತಿಳಿದುಕೊಂಡ ಪಂಚ ಮಹಾಪಾತಕ ಬೇರೆ, ಮಹಾಂತರ ದಿವ್ಯದೃಷ್ಟಿಗೆ ಕಂಡುದು ಬೇರೆ.

**148**

**ಪಂಚಮಹಾಪಾತಕವಾವುದೆಂದರಿಯರು-**
**ಭವಿಯ ತಂದು ಭಕ್ತನ ಮಾಡುದು ಪ್ರಥಮ ಪಾತಕ.**
**ಭಕ್ತರಿಗೆ ಶರಣೆಂಬುದು ದ್ವಿತೀಯ ಪಾತಕ, ಗುರುವೆಂಬುದು ತೃತೀಯ ಪಾತಕ.**
**ಗುರು ಲಿಂಗ ಜಂಗಮದ ಪ್ರಸಾದವ ಕೊಂಡಡೆ ನಾಲ್ಕನೆಯ ಪಾತಕ.**
**ಗುಹೇಶ್ವರಲಿಂಗದಲ್ಲಿ ಹಿರಿದು ಭಕ್ತಿಯ ಮಾಡೂದು ಪಂಚಮ ಪಾತಕ.**॥ 552 ॥

**ತಾತ್ಪರ್ಯ** : ಬಹುಜನ ಪಂಚ ಮಹಾಪಾತಕಂಗಳಾವುದೆಂದರಿಯರು. ಪೂಜಾಲಿಂಗವ ಪೂಜಿಸುವ ಪೂಜಕರೆ ಇರಲಿ, ಇವರುಗಳಲ್ಲಿ ಶೈವರಿರಲಿ, ವೀರಶೈವರಿರಲಿ, ಈ ಪಂಚ ಮಹಾಪಾತಕಂಗಳು ತಿಳಿದವರು ವಿರಳ. ಸಂಸಾರಾಸಕ್ತರಲ್ಲಿ ಮಗ್ನರಾಗಿಹ ಮಾನವರುಗಳಿಗೆ ಹೇಗೆ ತಿಳಿಯುವುದು. ಕೆಲಬರು ಪಾತಕಂಗಳ ಹೀಗೆ ಕೈಗೊಂಡಿಹರು. ಇವರು ವೈದಿಕ ಹಿರಿಯರೆನ್ನಿಸಿಕೊಂಡವರು. ಪಂಚಮಹಾಪಾತಕಗಳೆಂದರೆ ಗೋಹತ್ಯೆ, ಸ್ತ್ರೀಹತ್ಯೆ, ಶಿಶುಹತ್ಯೆ, ಗರ್ಭಿಣಿ ಹತ್ಯೆ, ಬ್ರಹ್ಮಹತ್ಯೆ ಇವುಗಳನ್ನು ಪಂಚ ಮಹಾಪಾತಕಂಗಳೆಂದು ತಿಳಿದ ಆಚಾರ್ಯಪಂತ ಬಹು ಇದೆ.

ಇವರುಗಳೆಲ್ಲ ಪ್ರಥಮವೇದಿಗಳು. ಗತಿಮತಿಯಲ್ಲಿ ಸಿಲುಕಿದವರಾದುದರಿಂದ ಕರ್ಮಕ್ಕೆ ಪ್ರಧಾನತ್ವ ಕೊಟ್ಟವರು. ಅಕರ್ಮದ ರಹಸ್ಯವರಿಯದವರು ಮಾಡಿ ಮಾಡದವನು. ಮುಟ್ಟಿ ಮುಟ್ಟದವನು. ಈ ರಹಸ್ಯವ ತಿಳಿಯದೆ ಕ್ರಿಯಾಶೀಲರಾಗಿಹರು. ಮಾಡಿ ಮಾಡಿ ಹೋದರು ಹಲಬರು, ನೀಡಿ ನೀಡಿ ಹೋದರು ಹಲಬರು, ನೋಡಿ ನೋಡಿ ಹೋದರು ಹಲಬರು, ಮಾಡದೆ ನೀಡದೆ ನೋಡದೆ ಹೋದವರಾರನು ಕಾಣೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬ ಶಿವಯೋಗಿಯ ಶಿವತತ್ವ ತಿಳಿಯದ್ದರಿಂದ ಮಾಡಿದವರೆ ಆಗಿಹರು. ನೀಡಿದವರೆ ಆಗಿಹರು, ನೋಡಿದವರೆ ಆಗಿಹರು. ಇದರಿಂದ ಗತಿಮತಿಯಲ್ಲಿ ಸಿಲುಕಿ ಪಂಚ ಮಹಾಪಾತಕವ ಕಂಡರು.

ವೈದಿಕರ ತಿಳುವಳಿಕೆಗೂ ಪ್ರಭುವಿನ ತಿಳುವಳಿಕೆಗೂ ಮಹದಂತರ. ಬೆಳಕು ಕತ್ತಲೆಗಿರುವಷ್ಟು ವ್ಯತ್ಯಾಸ. ಬೆಳಕಿನಲ್ಲಿ ಕತ್ತಲೆ ಹೇಗೆ ಇಲ್ಲವೊ ಹಾಗೆ ಪ್ರಭುವಿನ ಸುಜ್ಞಾನದ

ಮುಂದೆ ಇವರ ಕ್ರಿಯೆ ಹಾಗೆ ಇಲ್ಲವಾಗಿವೆ. ಇವರು ತಿಳಿದ ಪಂಚ ಮಹಾಪಾತಕಕ್ಕೂ ಪ್ರಭು ತಿಳಿದ ಪಂಚ ಮಹಾ ಪಾತಕಕ್ಕೂ ಎತ್ತಣದಿಂದೆತ್ತ ? ಪೂರ್ವವೆತ್ತ ಅಪೂರ್ವವೆತ್ತ ? ಕ್ರಿಯೆ ಎತ್ತ ಅಕ್ರಿಯೆ ಎತ್ತ ? ಪೂರ್ವಿಕರ ಪೂಜ್ಯ ಪೂಜಕ ಭಾವವೆತ್ತ ? ಅಪೂರ್ವಿಕರಾಗಿಹ ಭಾವಕ್ಕಗಮ್ಯವಾಗಿಹ ಘನದಿರುವುಳ್ಳ ಅರುವೆತ್ತ ? ಮರವ ಅರಿದುದೆತ್ತ ? ಅರುವ ಅರಿದುದೆತ್ತ ? ಪ್ರಭು ತಿಳಿದ ಪಂಚ ಮಹಾಪಾತಕಗಳೆಂದರೆ ಭವಿಯ ತಂದು ಭಕ್ತನ ಮಾಡುವುದೆ ಪ್ರಥಮ ಪಾತಕ, ಭಕ್ತಂಗೆ ಶರಣೆಂಬುದು ದ್ವಿತೀಯ ಪಾತಕ, ಗುರುವೆಂಬುದು ತೃತೀಯ ಪಾತಕ, ಗುರು ಲಿಂಗ ಜಂಗಮ ಪ್ರಸಾದವಕೊಂಡಡೆ ನಾಲ್ಕನೆಯ ಪಾತಕ ಗುಹೇಶ್ವರ ಲಿಂಗದಲ್ಲಿ ಭಕ್ತಿ ಮಾಡುವುದು ಪಂಚಮಹಾಪಾತಕ.

ಪ್ರಭುವಿನ ಅವಿರಳ ಇರುವೆತ್ತ, ಪ್ರಥಮ ಭಾಗವ ವೇದವನೋದಿದ ವೈದಿಕರು ಇಲ್ಲದುದು ಉಂಟು ಮಾಡಿಕೊಂಡು ತಲ್ಲಣಿಸುವ ಕಲ್ಪಿತ ಜ್ಞಾನವೆತ್ತ ? ಕತ್ತಲವ ಕಂಡವ ಬೆಳಕೆಂತು ಕಾಣುವನು. ಭ್ರಮಾತ್ಮರ ನಿವಾಸ ಕಲ್ಪಿತರೂಪಿ ಕತ್ತಲೆಯಲ್ಲಿ ಇವರು ಗೋಹತ್ಯ, ಸ್ತ್ರೀಹತ್ಯ, ಗರ್ಭಿಣಿಹತ್ಯ, ಶಿಶುಹತ್ಯ, ಬ್ರಾಹ್ಮಣಹತ್ಯ ಹೇಳುವವರು. ಇವರು ಕಲ್ಪಿತರು. ಅಕಲ್ಪಿತದ ಘನವ ತಿಳಿಯದ್ದರಿಂದ ಇವರ ವಿಪರೀತ ದೃಷ್ಟಿಯೆ ಇವರುಗಳಿಗೆ ಪಂಚಮಹಾಪಾತಕಂಗಳಾಗಿಹವು.

ಪ್ರಭು ಇದ್ದ ಸ್ವಮಹಿಮವನರಿತು ಎತ್ತ ನೋಡಿದಡತತ್ತ ತನ್ನನ್ನೆ ಕಾಣುವ ಸ್ವಪ್ರಭೆಯ ಪ್ರಭು, ನಿಸ್ಸೀಮ ಮಹಾಂತನೆಂತು ಸೀಮಿತ ಮಾಡುವನು. ಇಲ್ಲದ ಭವಿಯ ಕಾಣಲಿಲ್ಲ, ಕಾಣದ್ದರಿಂದ ಭವಿಯ ತಂದು ಭಕ್ತನ ಮಾಡಲಿಲ್ಲ, ಭಕ್ತಂಗೆ ಶರಣೆನಲಿಲ್ಲ, ಗುರುವೆನಲಿಲ್ಲ, ಗುರು, ಲಿಂಗ, ಜಂಗಮ, ಪ್ರಸಾದಕೊಳಲಿಲ್ಲ, ಗುಹೇಶ್ವರ ತನಗಿಂತನ್ಯವಾಗಿ ಕಾಣದ್ದರಿಂದ ಭಕ್ತಿಯ ಮಾಡಲಿಲ್ಲ.

ಭವಿಯ ತಂದು ಭಕ್ತನ ಮಾಡುವುದೆ ಪ್ರಥಮ ಪಾತಕ, ಆಧುನಿಕ ಸಮಯದಲ್ಲಿ ಎಷ್ಟೋ ಗುರು ವರ್ಗದವರು, ಜಂಗಮ ದೇವಯ್ಯಗಳು, ಪ್ರಥಮ ಪಾತಕಿಯ ಕಾರ್ಯ ಬಹುಮುಂದುವರಿಸಿಹರು. ಇವರ ದೃಷ್ಟಿ ಸೀಮಿತ. ಭವಿಯಾರು, ಭಕ್ತನಾರು ಎಂಬುದನರಿಯರು.

ಪ್ರಭುವಿನ ದಿವ್ಯ ದೃಷ್ಟಿ ಎತ್ತ ? ಇವರ ಸಂಕುಚಿತ ದೃಷ್ಟಿ ಎತ್ತ ? ಕೊರಳೋಳ್ ಪೂಜಾಲಿಂಗವ ಧರಿಸದವರು ಭವಿಗಳೆನ್ನುವ ದೃಷ್ಟಿ ಇವರದು. ಪೂಜಾಲಿಂಗವ ಧರಿಸಿ, ಪ್ರತಿ ದಿನ ಲಿಂಗಾರ್ಚನೆ ಮಾಡುವ ಲಿಂಗವಂತರುಗಳು ಭಕ್ತರು ಎನ್ನುವ ಸೀಮಿತ ದೃಷ್ಟಿ ಇವರದು. ಪ್ರಭು ಅವಿರಳ ಜ್ಞಾನಸಂಪನ್ನ, ನಿಜವರಿತ ನಿಲುವು ನೆಲೆಯಿಲ್ಲದ ನಿಲುವು. ನಿರವಧಿ ನಿಲುವು, ಸದಾ ಸರ್ವತ್ರ ಮಂಗಳಮಯನಾಗಿಹ ಚಿದ್ಘನವೆ ಭವಿಯು. ಲಿಂಗ ದೇವನು. ಲಿಂಗದೇವನಿಗೆ ಲಿಂಗವೇಕೆ ? ಭವಿ ಲಿಂಗಸ್ವರೂಪನಾದುದರಿಂದ ಅವನಿಗೇಕೆ ಲಿಂಗವು ? ತಾನೆ ದೇವನಿರುವಲ್ಲಿ ತಾನೆ ಚೈತನ್ಯನಿರುವಲ್ಲಿ ಚೈತನ್ಯಕ್ಕೆ ಮತ್ತೊಂದು ಚೈತನ್ಯ ತರುವುದೆ ! ಇದೆಂಥ ಮಹಾದಾಶ್ಚರ್ಯ, ತೆರಹಿಲ್ಲದ ಘನಕ್ಕೆ ಮರವುಬಹುದೆ ? ಮರವರುವಿಂಗೆ ಮೀರಿದ ಘನ, ಅದು ಸಮಪ್ರಕಾಶಮಾನವಾಗಿಹ ಪರಂಜ್ಯೋತಿ. ಸಮತೆ ಸಯವಾದ ಶರಣಂಗೆ ಅರುವು ಮರವುಗಳುಂಟೆ ? ಬೆಳಕಿನಲ್ಲಿ ಕತ್ತಲೆ ಕಂಡುದು ಆಶ್ಚರ್ಯ. ಚಿದಾಕಾಶದಲ್ಲಿ ಮರವೆಂಬ ಕತ್ತಲು ಕಂಡುದು ಆಶ್ಚರ್ಯ. ಕೆಲವು ಗುರುದೇವಯ್ಯರುಗಳು

ಜಂಗಮದೇವಯ್ಯಗಳು ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನಘನವ ತಿಳಿಯದ್ದರಿಂದ ಇವರದು ಸೀಮಿತದೃಷ್ಟಿ, ಸೀಮಿತ ಭಾವ, ಸೀಮಿತ ಜ್ಞಾನವಾದದರಿಂದ ಭವಿಯ ತಂದು ಭಕ್ತನ ಮಾಡಿದೆವು ಎನ್ನುವರು. ನಿಸ್ಸೀಮನು ಸೀಮಿತವ ಹೇಗೆ ಒಪ್ಪುವನು. ಪ್ರಭು, ಲಿಂಗ ಒಂದಾಗಿರ್ದ ಜಂಗಮ, ಎಲ್ಲಿ ನೋಡಿದಡಲ್ಲಲ್ಲಿ ಅವರ್ಣೀಯ ಲಿಂಗವ ನೋಡುವ ಅನುಪಮ. ಸೀಮಿತ ದೃಷ್ಟಿಯುಳ್ಳವನಾಗದ್ದರಿಂದ ಭವಿಯೆಂದರೆ ಲಿಂಗ, ಲಿಂಗವೆಂದರೆ ಅನುಪಮ, ಅಚಲಿತ, ಅಕಲ್ಪಿತ, ಚಿಜ್ಯೋತಿ, ನೆನಹು ನಿರ್ಣಯಕ್ಕೂ ನಿಲುಕದ ಲಿಂಗ, ಅರಸಿ ಕಾಣಬಾರದ ಲಿಂಗ, ಘನ ಗಂಭೀರ ಮಹಾಘನವೆಂಬ ಲಿಂಗವರಿತು ಸಯಲಿಂಗಿಯಾದ ಸ್ವಪ್ರಭೆಯುಳ್ಳ ಭವಿಯ ತಂದು ಭಕ್ತನ ಮಾಡದ್ದರಿಂದ ಪ್ರಥಮ ಪಾತಕಿಯಾಗಲಿಲ್ಲ, ಭವಿಯೆಂಬುದು ಅರಿತಾತ, ಭಕ್ತನೆಂಬುದು ಅರಿತಾತ, ಇದ್ದಂತಿದ್ದ ಮಂಗಳಮಯ ಚಿನ್ಮಯ ಇದು ಕಾರಣ ಭವಿಯು ಕಾಣದಾತ, ಭಕ್ತನನ್ನು ಕಾಣದಾತ, ಈ ಮಹಾಂತನ ದಿವ್ಯ ದೃಷ್ಟಿಗೆ, ಭವಿಯು ತೆರಹಿಲ್ಲದ ಘನವು, ಭಕ್ತನು ತೆರಹಿಲ್ಲದ ಘನವು ಕಂಡುದರಿಂದ ಕೂಡದಗಲದ ಘನವೆ ಎತ್ತನೋಡಿದಡತ್ತತ್ತ ಪ್ರಜ್ವಲಿಸುತಿಹ ಪರಂಜ್ಯೋತಿಯಾಗಿಹ ಘನವನ್ನು ವಿಪರೀತ ದೃಷ್ಟಿಯಿಂದ ಹೇಗೆ ಕಾಣುವನು. ಯಾರು ವಿಪರೀತ ದೃಷ್ಟಿಯುಳ್ಳವರಾಗಿಹರು ಅವರು ಭವಿಯ ತಂದು ಭಕ್ತನ ಮಾಡಿದೆವು ಎನ್ನುತ್ತಾರೆ. ಹೀಗೆ ಅನ್ನುವವರೆಲ್ಲ ಪ್ರಥಮ ಪಾತಕಿಗಳಾಗಿಹರು.

ಭಕ್ತರಿಗೆ ಶರಣೆಂಬುದೆ ದ್ವಿತಿಯ ಪಾತಕ: ಪೂಜಾಲಿಂಗವಂತರಾಗಿಹ ಲಿಂಗಾರ್ಚಕರು ತಮ್ಮ ತಮ್ಮೊಳಗೆ ನಾವು ಲಿಂಗ ಧರಿಸಿದ ಲಿಂಗವಂತರು, ನಾವು ಲಿಂಗಯ್ಯನ ಪೂಜಿಸುವ ಭಕ್ತರು, ಗುರು ಜಂಗಮ ಕೃಪೆಯಲ್ಲಿ ಹುಟ್ಟಿದವರು. ನಾವು ದ್ವಿಜರು, ಗುರು ಪುತ್ರರು ಅಹುದು. ಗುರು ಭಕ್ತರು ಅಹುದು, ಇತ್ತ ಜಂಗಮ ಭಕ್ತರು ಅಹುದು, ಸಕಲರು ಒಂದೆ. ನೀವು ಲಿಂಗದೇವನ ಭಕ್ತರಾದುದರಿಂದ ನಿಮಗೆ ನಮೋ ನಮೋ ಎನ್ನುವರಲ್ಲದೆ, ಶರಣು ಶರಣಾರ್ಥಿ ಎನ್ನುವ ನಮ್ರ ಭಾವಿಗಳಾಗಿಹರು. ಅವರು ಗುರುವನರಿಯದವರು, ಲಿಂಗವನರಿಯದವರು, ಗುರುಪುತ್ರರಾದಲ್ಲಿ ತಾವು ಮತ್ತೊಂದು ಸಾರೆ ಹುಟ್ಟಿದ ಅಜಾತರು, ಅಯೋನಿಜರು ಎನ್ನುವ ಘನತ್ವವರಿಯದೆ ಅವರು ಬೇರೆ ಅಂದರೆ ಗುರು ಗುರುಗಳು ಬೇರೆ, ಶಿಷ್ಯ ಶಿಷ್ಯರು ಬೇರೆ, ಭಕ್ತ ಭಕ್ತರು ಬೇರೆ, ಜಂಗಮ ಜಂಗಮ ಬೇರೆನ್ನುವ ಖಂಡದೃಷ್ಟಿ, ಖಂಡ ಭಾವ, ಖಂಡ ಜ್ಞಾನಿಗಳಾಗಿಹರಲ್ಲದೆ ಅಖಂಡವಾಗಿಹ ಪರತತ್ವ ಅರಿಯದ್ದರಿಂದ ವಿಷಮ ದೃಷ್ಟಿಗಳಾಗಿಹರು. ವಿಷಮದೃಷ್ಟಿ ವಿಷಮ ಭಾವಿಗಳಾದ್ದರಿಂದ ಇವರ ಭಾವ ಇವರಿಗೆ ದ್ವಿತೀಯಪಾತಕವಾಗಿದೆ. ಏಕೆಂದರೆ ಇವರಲ್ಲಿ ಭಕ್ತರಾದ ಲಕ್ಷಣವಿಲ್ಲ ? ಇವರು ತನುವ ಗುರುವಿಂಗಿಕ್ಕಿ ಭಕ್ತರಾದರೆ ? ತನುವು ಕೊಡುವುಡೆ ಗುರುವಿನದದು ಮನವ ಲಿಂಗಕ್ಕಿಕ್ಕಿ ಭಕ್ತರಾದರೆ ? ಮನವ ಇಕ್ಕಿ ಭಕ್ತನಾದನೆಂದರೆ ಲಿಂಗದದು. ಧನವ ಜಂಗಮಕಿಕ್ಕಿ ಭಕ್ತರಾದರೆ ? ಧನ ಜಂಗಮಕಿಕ್ಕಿ ಭಕ್ತನಾದನೆಂದರೆ ಧನವು ಜಂಗಮದದು. ಅವರ ಪದಾರ್ಥ ಅವರಿಗೆ ಕೊಟ್ಟು ಭಕ್ತನಾದೆನೆಂಬುದು ಹಿರಿಯತನದ ಕೇಡು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ. ತನುವ ಗುರುವಿಂಗಿಕ್ಕುವುಡೆ ತಾನೆ ಗುರುವಾಗುವಲ್ಲಿ ಅಲ್ಲಿ ಭಕ್ತನೆಂಬುದೆಲ್ಲಿಯದು, ಉರಿವಕೆಂಡದ ಮೇಲೆ ತೃಣವ ತಂದಿಳಿಸಿದರೆ ಆ ತೃಣವ ಕೆಂಡ ನುಂಗಿದಂತೆ ಗುರುಚರಣದ ಮೇಲೆ ತನು ತೃಣವನಿಳುಹಿದರೆ

ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥ.

ಗುರು ಚರಣದ ಮೇಲೆ ತನು ತೃಣವ ನಿಳುಹಿದರೆ, ಆತನ ಸರ್ವಾಂಗವೆಲ್ಲ ಲಿಂಗವಾಗಿರುವಲ್ಲಿ ಭಕ್ತನ ಮಾಡುವುದು ಇದೆಯಾ ? ಇಲ್ಲದುದು ಇಲ್ಲವೆ ಇಲ್ಲ, ಇದ್ದುದು ಲಿಂಗ, ಅಂದು, ಇಂದು, ಎಂದೆಂದೂ ಇದ್ದಂತಿದ್ದ ಘನ ಲಿಂಗವ ಮರೆತು, ಭಕ್ತನ ಮಾಡಿದೆವೆನ್ನುವವರು ಇವರು ಸೂತಕಿಗಳು. ಇಲ್ಲದ ಭಕ್ತನ ಉಂಟು ಮಾಡಿ, ಇದ್ದುದ ಘನ ಲಿಂಗವ ಮರೆತು ಭಕ್ತರು, ಭಕ್ತರು ಕೂಡಿ ಶರಣೆಂಬುದು ದ್ವಿತೀಯ ಪಾತಕವಾಗಿದೆ. ಇವರು ಗುರುವನರಿಯರು, ಭಕ್ತನರಿಯದವರಾದುದರಿಂದ ಪಾತಕಿಗಳಾಗಿಹರು.

ಗುರುವೆಂಬುದು ತೃತೀಯಪಾತಕ : ಬಹು ಭಾವಿಕರಿಗೂ ಬಹು ಶಬ್ದವೇದಿಗಳಿಗೂ ಗುರುವಿನ ಹುಚ್ಚು ಬಹು ಹಿಡಿದಿದೆ. ಭಾವಿಕರಿಗೆ ಗುರುವೆಂಬುದು ಸಮಾಧಾನ. ಅವನನ್ನು ಕುರುಹಾಗಿ ಕಂಡು ವರ್ಣಿಸಿದರೆ ಸಂತೋಷ, ಶಬ್ದವೇದಿಗಳಿಗೆ ಗುರುವೆನ್ನಿಸಿಕೊಂಡು ಅವರು ಕೊಂಡಾಡುವುದು ಪ್ರಾರ್ಥಿಸುವುದಕ್ಕೆ ಮೆಚ್ಚಿ ಒಳಗೊಳಗೆ ತನ್ನ ಪ್ರತಿಷ್ಠತೆ ಕಂಡು ಹಿಗ್ಗುವನು. ಇಂತಪ್ಪ ಮಾಯೆಯ ಬಲೆಯಲ್ಲಿ ಸಿಕ್ಕಿಕೊಂಡವರು. ಸಹಜ ತೃತೀಯ ಪಾತಕರಾಗಿಹರು. ಇದು ಕಾರಣ, ಪ್ರಭುದೇವ ಇಬ್ಬರ ಮಧ್ಯದಲ್ಲಿ ಒಂದು ವಸ್ತುವುಂಟು. ಕಂಡಿರೆ ಗಣಂಗಳಿರಾ, ಕಂಡಿರೆ ಅಯ್ಯಗಳಿರಾ, ಗುರುವಿನ ಗುರು ಬೇಗಲರಿಯಿರೆ ಗುಹೇಶ್ವರಾ ಎಂದು ಎಚ್ಚರಿಸಿಹನು. ಆಧ್ಯಾತ್ಮ ವಿದ್ಯೆಯಲ್ಲಿ ಗುರುವಿನ ಪ್ರಧಾನತ್ವ ಬಹು ಮುಖ್ಯವಾಗಿದೆ. ಏಕೆಂದರೆ ಊರಿಂಗೆ ದಾರಿಯನು ಆರು ತೋರಿದಡೇನು, ಸಾರಾಯದ ನಿಜವ ತೋರುವ ಗುರು ಆರಾದಡೇನು ಸರ್ವಜ್ಞ ಎಂದು ಹೇಳಿರುವುದು ನೋಡುವುಡೆ, ಸಾರಾಯದ ನಿಜವ ತೋರಿಸುವವನೆ ಇಬ್ಬರ ಮಧ್ಯದಲ್ಲಿ ವಸ್ತುವಾಗಿಹ ಗುರುವಿನ ಗುರುವ ತೋರಿಸುವ ನಿಜಗುರು. ವಸ್ತುವರಿದಾತ ವಿಶ್ವವೆ ಗುರುವಾಗಿ ಕಂಡಾತ. ಇದು ಅನಿಯಮದ ಬೆಡಗು. ಅರುವಿನ ಪರಿಮಳ ಅರುವಿಂಗರುವು. ಈ ಮಹಾಂತ ದೇಹಿಗೆ ದೇಹಿಯಾಗಿಹ ಭೇದವನರಿದಾತ. ತನ್ನೊಳ ಗುರುವಿನ ಗುರು ಕಂಡಾತ, ಸಕಲರ ಹೃದಯ ಗುರುಹೃದಯ ಮಾಡುವಾತ. ಅಲ್ಲಿ ಗುರುವಿನ ಪರಿ ವಿಪರೀತವಾಯಿತ್ತಯ್ಯ. ಭ್ರಮರ ಕೀಟ ನ್ಯಾಯದಂತೆ ತನ್ನ ನೆನಹನ್ನಬರ ತನ್ನಂತೆ ಮಾಡಿಕೊಂಡ ಇನ್ನು ಶಿಷ್ಯನಾಗಿ ಪೂಜಿಸುವವರಾರು ಹೇಳಾ ಗುಹೇಶ್ವರಾ. ಈ ಮಹಾಮಹಿಮ ತನ್ನಂತೆ ಮಾಡುವ ಘನಗಂಭೀರ. ಗುರು ಘನ, ತನ್ನಂತೆ ಮಾಡಿದುದು, ಅಲ್ಲಿ ಭಾವಕ್ಕಿಂಬಿಲ್ಲ ನೋಡಾ. ಶಬ್ದಮುಗ್ಧನ ಮಾಡಿದ ಮಹದರುವು ಅದನೆಂತು ಹೇಳುವುದು. ಹೇಳಿದರದಕ್ಕದೆ ಕೊರತೆ, ಎರಡೊಂದಾದ ನಿಲುವು ಅವರ್ಣೀಯವು. ಎರಡೊಂದಾದವಂಗೆ ಅರ್ಚನೆ ಇಲ್ಲ, ಅರ್ಪಿತವಿಲ್ಲ, ಅವಧಾನವಿಲ್ಲ, ಶಬ್ದಕ್ಕೆ ತೆರಹಿಲ್ಲ ಗುಹೇಶ್ವರಾ. ಇವರು ಇಬ್ಬರ ಮಧ್ಯದಲ್ಲಿ ಒಂದು ವಸ್ತುವನರಿತವರು. ವಸ್ತುವೆಂಬುದು ಗುರುವಿನ ಗುರು. ಅರಿತುದರಿಂದ ಶಬ್ದಕ್ಕೆ ತೆರಹಿಲ್ಲವಾದಲ್ಲಿ ಗುರುವೆಂಬುದು ತೃತೀಯ ಪಾತಕವಾಗಿಹುದು. ಏಕೆಂದರೆ ಗುರು ಶಿಷ್ಯರೀರ್ವರು ಒಂದೆನ್ನ ಅರಿತು ಒಂದಾದವರು. ಗುರುವೆಂಬುದು ಗುರುವಿನ ಗುರು, ಶಿಷ್ಯನೆಂಬುದು ಗುರುವಿನ ಗುರು, ಅವರ್ಣೀಯವಾದುದರಿಂದ ಇಲ್ಲಿ ಶ್ರೇಷ್ಠ ಕೀಳು, ಅರಿತವ ಅರಿಯದವನೆಂಬ ಖಂಡ ದೃಷ್ಟಿಗಿಂಬಿಲ್ಲದುದರಲ್ಲಿ ಖಂಡದೃಷ್ಟಿಯುಳ್ಳವನಾಗಿ ಗುರುಘನವ ಚಾರಿತ್ರ ಪುರುಷನನ್ನಾಗಿ ಕಂಡು ಗುರು ಗುರುವೆಂಬುದು ತೃತೀಯ ಪಾತಕವಾಗಿದೆ.

ಗುರು, ಲಿಂಗ, ಜಂಗಮ ಪ್ರಸಾದವ ಕೊಂಡಡೆ ನಾಲ್ಕನೆಯ ಪಾತಕ : ಇವರು ಪೂರ್ವಿಕ ಗುರು, ಪೂರ್ವಿಕ ಶಿಷ್ಯರು, ಪೂರ್ವಿಕ ಭಕ್ತ, ಪೂರ್ವಿಕ ಜಂಗಮರಾದುದರಿಂದ ಗುರು ಬೇರೆ, ಶಿಷ್ಯ ಬೇರೆ, ಲಿಂಗ ಬೇರೆ, ಭಕ್ತ ಬೇರೆ, ಜಂಗಮ ಬೇರೆಂಬ ಭೇದ ಜ್ಞಾನಿಗಳಾಗಿಹರು. ಇವರುಗಳಿಗೆ ಕ್ರಿಯಾಚಾರ ಪ್ರಧಾನವಾಗಿ ಜ್ಞಾನಾಚಾರ ವಿದಿತವಿಲ್ಲದಂತಾಗಿದೆ.

ಭಕ್ತರಾದೆವೆಂದು ಯುಕ್ತಿಗೆಟ್ಟು ನುಡಿವರು. ಭಕ್ತಿ ಸ್ಥಲವೆಲ್ಲರಿಗೆಲ್ಲಿಯದು, ಗುರುವಿನಲ್ಲಿ ತನು ವಂಚನೆ ಲಿಂಗದಲ್ಲಿ ಮನ ವಂಚನೆ ಧನದಲ್ಲಿಯು ವಂಚನೆಯುಳ್ಳನ್ನಕ್ಕರ ಭಕ್ತನೆ ? ಗುರುವಿನಲ್ಲಿ ಚಾರಿತ್ರವ ಲಿಂಗ ಲಕ್ಷಣವ ಜಂಗಮದಲ್ಲಿ ಜಾತಿ ಅರಸುವನ್ನಕ್ಕರ ಅವನು ದೋಷಾರ್ಥಿ ಕೂಡಲಚೆನ್ನಸಂಗಮದೇವಾ.

ಇವರು ವಂಚಕರಾದುದಕ್ಕಾಗಿ ದೋಷಾರ್ಥಿಗಳು. ಗುರುವ ಕುರುಹಾಗಿ ಕಂಡವರು, ಲಿಂಗದಲ್ಲಿ ಲಕ್ಷಣವ ಕಂಡವರು ಜಂಗಮದಲ್ಲಿ ಜಾತಿ ಹುಡುಕುವರಾಗಿ ಸುಜ್ಞಾನದಿಂದ ವಂಚಕರಾದುದಕ್ಕಾಗಿ ವ್ಯವಹಾರಿಕಕ್ಕೆ ಮಹತ್ವ ಕೊಟ್ಟು ತನ್ನೊಳಗಿರುವ ಗುರು, ಲಿಂಗ, ಜಂಗಮವೆಂದು ಅರಿಯ ಹೋಗಲಿಲ್ಲ, ಅದಕ್ಕಾಗಿ ಬಹಿರ್ ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದ ಪ್ರಧಾನವಾಗಿ ಪ್ರಸಾದವ ಕೊಂಡಡೆ ನಾಲ್ಕನೆಯ ಪಾತಕವೆಂದು ಹೇಳಿಹರು. ಇವರು ತಮ್ಮಂಗದೊಳಿಹ ಗುರು, ಲಿಂಗ, ಜಂಗಮವರಿಯ ಹೋಗಲಿಲ್ಲ, ಇದಲ್ಲದೆ ಬಹಿರ್ ಪ್ರಸಾದಕ್ಕೆ ಮುಖ್ಯತೆ ಕೊಡುವದು. ಇವರಿಗೆ ಸಹಜವಾಗಿ ಸುಜ್ಞಾನರೂಪಿ ಪ್ರಸಾದದಿಂದ ವಂಚಕರಾಗಿ ಬಹಿರ್ ಪ್ರಸಾದಕೊಂಬುವರಾದುದರಿಂದ ನಾಲ್ಕನೆಯ ಪಾತಕವೆಂದು ಹೇಳಿದರು.

ಗುಹೇಶ್ವರ ಲಿಂಗದಲ್ಲಿ ಹಿರಿದು ಭಕ್ತಿ ಮಾಡುವುದು ಪಂಚಮ ಪಾತಕ : ಗುಹೇಶ್ವರ ಲಿಂಗವದು ಅನುಪಮ ಲಿಂಗ, ಅವರ್ಣಿಯ ಲಿಂಗ, ಅಚಿಂತ್ಯ ಲಿಂಗ, ಕಲ್ಪಿತವಲ್ಲದ ಘನ ಅದನ್ನು ಕಲ್ಪಿಸಿ ಕಲ್ಪಿಸಿ ಅಭಿಮಾನಿಯಾಗಿ ನೆನೆಯಲಿ, ಚಿಂತಿಸಲಿ, ಭಾವಿಸಲಿ ಅದು ಹೃದಯದಲ್ಲಿ ಬೆಳಗುಳ್ಳದ್ದಾಗಿ ಬೆಳಗದು, ಬೆಳಗದ್ದರಿಂದ ಇವರದು ಹಿರಿದು ಮಾಡಿದ ಭಕ್ತಿಯಾದುದರಿಂದ ಐದನೆಯ ಪಾತಕ ಎಂದು ಹೇಳಿಹರು. ಪ್ರಭುತತ್ವವೇತ್ತ. ಅತತ್ವ ಮತಿಗಳು, ಮಹಾಂತನ ಘನವ ತಿಳಿಯರು. ತತ್ತ್ವವ ತತ್ತ್ವವೇತ್ತರು ತಿಳಿಯುವರು.

**149**

**ತತ್ತ್ವವೆಂಬುದ ನೀನೆತ್ತ ಬಲ್ಲೆಯೊ ?**
**ಸತ್ತು ಮುಂದೆ ನೀನೇನ ಕಾಬೆಯೊ ?**
**ಇಂದೆ ಇಂದೆಯೊ ಇಂದೆ ಮಾನವಾ**
**ಮಾತಿನಂತುಟಲ್ಲ ಶಿವಾಚಾರದ, ದಸರಿದೊಡಕು ಕಾಣೆರಣ್ಣಾ.**
**ರಚ್ಚೆಯ ಮಾತಲ್ಲ ಬೀದಿಯ ಮಾತಲ್ಲ.**
**ಏಕೋ ರಾತ್ರಿಯ ಬಿಂದು ನೋಡಾ!**

**ಗುಹೇಶ್ವರನ ಕೂಡಿದ ಕೂಟ**
**ಇಂದು ಸುಖ, ಮುಂದೆ ಲೇಸು!** ॥ 500 ॥

**ತಾತ್ಪರ್ಯ** : ತತ್ವವೆಂಬುದ ನೀನೆತ್ತ ಬಲ್ಲೆಯೊ ? ಸತ್ತು ಮುಂದೆ ನೀನೇನ ಕಾಬೆಯೊ : ದೇಶ ವಿದೇಶಗಳಲ್ಲಿಯೂ ತತ್ವಕ್ಕೆ ಸಕಲರು ಘನವ ಮಾಡುವರು. ಇದಲ್ಲದೆ ಕೆಲಬರು ತತ್ವಕ್ಕಾಗಿ ತಮ್ಮ ಶರೀರ ಮೀಸಲಾಗಿಟ್ಟು ತತ್ವವ ಅಭ್ಯಾಸ ಮಾಡಿದವರು ಇದ್ದಾರೆ. ಇದೆ ವಿಷಯ ತೆಗೆದುಕೊಂಡು ಪದವಿಧರರಾಗಿಯು ಇದ್ದಾರೆ. ಇದರ ಬಗ್ಗೆ ಪ್ರವಚನ ಮಾಡುವವರು ಇಹರು. ಇದಲ್ಲದೆ ತತ್ವಶಾಸ್ತ್ರದ ಬಗ್ಗೆ ದೊಡ್ಡ ದೊಡ್ಡ ಆಶ್ರಮಂಗಳು ಇವೆ. ಆಶ್ರಮಂಗಳಲ್ಲಿ ತತ್ವ ಕಲಿಸುವ ಮಹಾಂತರು ಇದ್ದಾರೆ. ಗುರುಗಳು ಇಹರು. ಈ ತತ್ವಶಾಖೆಯ ಮೇಲಿಂದ ಗುರು ಶಿಷ್ಯ ಪರಂಪರೆ ನಡೆದಿದೆ. ಹೀಗೆ ನಡೆದ ಕಾರ್ಯ ಬಹುಸ್ತುತ್ಯವಾದುದು. ಇದರಿಂದ ಸಕಲಮಾನವರ ಕಲ್ಯಾಣ ಆತ್ಮನೆ ತಾನಾಗುವ ಕಲ್ಯಾಣ ನಿಜವಾಗಿ ಇದರಲ್ಲಿ ಹುದುಗಿದೆ. ಇದರ ಸಫಲತೆ ಅದೆಷ್ಟು ಜನರಿಗೆ ಲಾಭವಾಗುವುದೊ ಹೇಳಲಿಕ್ಕೆ ಆಗದು.

ಯುದ್ಧಕ್ಕೆ ಹೋದ ಸೈನ್ಯವೆಲ್ಲ ರಣರಂಗದಲ್ಲಿ ಕಾದಿಗೆಲಿದು ಜಯಮಾಲೆ ಹಾಕಿಕೊಳ್ಳುತ್ತಾರೆಂದು ಹೇಳಲಿಕ್ಕಾಗದು, ಹಾಗೆ ತತ್ವ ಅಭ್ಯಾಸ ಮಾಡಿದವರೆಲ್ಲ ಪದವಿಧರರು ಪಂಡಿತರಾಗುವರು ಎಂಬ ನಿಯಮವಿಲ್ಲ. ಪಂಡಿತರೆಂದರೆ ಅಕ್ಷರ ಕಲಿತು ಪಾಸಾಗಿ ಪದವಿಧರರಾಗಿಹ ಪಂಡಿತರ ಸುದ್ದಿ ಹೇಳಲಿಲ್ಲ. ಅಕ್ಷರ ಬಲ್ಲವನಾದರೆ ಗತಾಸೂನ ಗತಾಸೂಂಶ್ಚ ನಾನು ಶೋಚಂತಿ ಪಂಡಿತಾಃ ಎಂಬ ಭಗವದ್ಗೀತಾ ಸಂದೇಶದಂತೆ ಬದುಕಿದವರ ಕಂಡು ಹಿಗ್ಗುವುದಿಲ್ಲ, ಸತ್ತವರ ನೋಡಿ ಕುಗ್ಗುವುದೂ ಇಲ್ಲ, ಆರಿಗೆ ಇವೆರಡರಲ್ಲಿ ಸಮದರ್ಶಿತ್ವ ಬಂದಿದೆ. ಅವರು ಪಂಡಿತರು ಎಂದು ಹೇಳಿದೆ. ಅಕ್ಷರವೆಂದರೆ ಅವಿನಾಶಿ ತತ್ವ ; ಇದನ್ನು ತಿಳಿಯ ಹೋದವರು ಅಕ್ಷರೋತ್ತಮರು.

ತತ್ತ್ವವೆಂಬುದು ನೀನೆತ್ತ ಬಲ್ಲೆಯೊ ? ಎಂದು ಪ್ರಶ್ನೆ ಇದೆ. ತತ್ತ್ವ ಅನ್ನುವವರು ಬಹು ಅಭ್ಯಾಸಿಗಳು. ಜಿಜ್ಞಾಸುಗಳು, ಅನುಭವಿಗಳು ಇದ್ದಾರೆ. ತತ್ತ್ವವೆ ತಾವಾದವರು ಸಿಕ್ಕುವುದು ವಿರಳ. ಅವರಿಗೆಲ್ಲ ತತ್ವವ ನೀವು ತಿಳಿದಿರುವಿರಾ ? ಎಂಬುದೊಂದು ಪ್ರಶ್ನೆ ಇದೆ. ತಿಳಿದವರಾಗಿದ್ದರೆ ಓ ! ಮಾನವಾ, ನೀನು ಮಾನವನಾಗುತ್ತಿದ್ದಿಲ್ಲ, ಮುಮುಕ್ಷುವಾಗುತ್ತಿದ್ದಿಲ್ಲ, ಅಭ್ಯಾಸಿಯಾಗುತ್ತಿದ್ದಿಲ್ಲ, ಅನುಭವಿಯಾಗುತ್ತಿದ್ದಿಲ್ಲ, ಏನೊಂದಾಗದ ಘನವಸ್ತು ಅದು ತತ್ವ, ಅದುವೆ ತಿಳಿದಲ್ಲಿ ಅದಕ್ಕಿಂತ ನೀನು ಅನ್ಯನೆ ? ಎಂಬುದು ನಿನ್ನಿಂದ ನೀನು ತಿಳಿದು ನೋಡಿದೆಯಾ ? ಬಹು ಜನ ಶಾಸ್ತ್ರ ಓದಲು ತಮ್ಮ ಆಯುಷ್ಯವನ್ನೆ ಸವಿಸುವರು. ಬಹು ಸಂತೋಷ. ಇಂಥ ಪವಿತ್ರ ಕಾರ್ಯವ ಸಾಧಿಸಲು ತಮ್ಮ ಆಯುಷ್ಯವನ್ನೆ ಮೀಸಲವಾಗಿರುಸುವರೆಂದಲ್ಲಿ ಆ ಶರೀರಕ್ಕೆ ನಮಸ್ಕಾರ. ಶಾಸ್ತ್ರದ ಮೇಲಿರುವ ಶ್ರದ್ಧೆಗೆ ನಮಸ್ಕಾರ. ಪಠನ ಮಾಡುವದಲ್ಲದೆ ವಿವರಿಸಿ ನೋಡುವ ಹೃದಯವಾಗಿರುವದೆಂದಲ್ಲಿ ಅದು ಪೂಜ್ಯನೀಯವು ಆದುದು. ಆದರೆ ಜ್ಯೋತಿ ತಾನಾಗುವುದು. ಅದು ಮಾತಿನ ಜ್ಯೋತಿಯಾಗಬಾರದು. ಇದರಿಂದ ಪರಿಚ್ಛಿನ್‌ಭಾವ ಹೋಗದು. ಅಹಂಮಮ ನಷ್ಟವಾಗದು. ಏಕೆಂದರೆ ತತ್ವದರ್ಶಿಯಾಗುವುದು. ತೊತ್ತಿನ ದರ್ಶಿಯಾಗಬಾರದು. ತತ್ತ್ವದ ಪ್ರಿಯರಾದ

ಮೇಲೆ ಹೊರ ವೇಷದ ವಿಭೂತಿ ರುದ್ರಾಕ್ಷಿಯನು ಧರಿಸಿಕೊಂಡು ವೇದ, ಶಾಸ್ತ್ರ ಪುರಾಣ ಆಗಮದ ಬಹುಪಾಠಿಗಳು ಅನ್ನ, ಹೊನ್ನು ವಸ್ತ್ರವ ಕೊಡುವವನ ಬಾಗಿಲ ಕಾಯುವ ಮಣ್ಣ ಪುತ್ಥಳಿಯಂತಿಹ ನಿತ್ಯನಿಯಮದ ಹಿರಿಯರುಗಳು ಅದೆಂತೆಂದೊಡೆ '' ವೇದವೃದ್ಧಾ, ವಯೋವೃದ್ಧಾಃ, ಶಾಸ್ತ್ರ ವೃದ್ಧಾಃ ಬಹು ಶೃತಿಃ ಇತ್ಯೆತೆ ! ಧನ ವೃದ್ಧಸ್ಯ, ದ್ವಾರೆ ತಿಷ್ಠಂತಿ ಕಿಂಕರಾಃ '' ಎಂದುದಾಗಿ ಎಲ್ಲ ಹಿರಿಯರು ಲಕ್ಷ್ಮಿಯ ದ್ವಾರಪಾಲಕರಾದರು ಗುಹೇಶ್ವರಾ.

ತತ್ವ ಕಲಿಯುವುದು ಏತಕ್ಕಾಗಿ, ಓ ಮಾನವಾ ತತ್ವವೆಂದರೆ ನಿನ್ನ ವಾಣಿಗೂ ಮನಸ್ಸಿಗೂ ನಿಲುಕದ ತತ್ವ. ಅದನೆಂತು ಅಭ್ಯಾಸ ಮಾಡುವಿ. ಮನನ ಮಾಡುವಿ, ನಿಧಿ ಧ್ಯಾಸ ಮಾಡುವಿ, ಅದನೆಂತು ಧ್ಯಾನಿಸುವೆ.

ತತ್ವವೆಂದರೆ ಆವುದು ಗೊತ್ತೆ ! ಮಹಾಂತರು ಕರುಣಿಸುವುದು ಸಂಜ್ಞೆ, ಶ್ರೀಗುರು ಕರುಣಿಸಿದ ಸಂಜ್ಞೆ ಅರುವ ಅರಿಯ ಹೇಳಿದ ಸಂಜ್ಞೆ ಅದು ತತ್ತ್ವ. ಈ ತತ್ತ್ವವೆಂದರೆ ಆವುದು ? ಶ್ರೀಗುರು ಕರುಣಿಸಿದ ತತ್ತ್ವ. ಈ ತತ್ತ್ವ ಅರಿಯದವರೆಲ್ಲ ಅದು ಮಾತಿನಲ್ಲುಂಟಾದ ಶಾಸ್ತ್ರವಾಯಿತ್ತು. ಜನರನ್ನು ಮರುಳುಗೊಳಿಸುವ ಮಾತಾಯಿತ್ತು. ವಾಚಾಳಿಯಾಯಿತ್ತು. ಇದರಿಂದೇನಾಯಿತ್ತು. ಅನ್ನ ಕೊಡುವವನ, ಹೊನ್ನು ಕೊಡುವವನ, ವಸ್ತ್ರ ಕೊಡುವವನ ಆಳಿನ ಆಳು ಮಾಡಿತ್ತು. ತತ್ವವ ಹೇಳಿಕೊಡುವ ಬಹು ಆಶ್ರಮಗಳಲ್ಲಿ ಪೀಠಾಧಿಪತಿಗಳು, ಅಧಿಕಾರಿಗಳು ಗುರುವರ್ಗ ಇವೆ. ಲಕ್ಷ್ಮಿದ್ವಾರ ಪಾಲಕರಾಗದಿರುವ ಮಹಾಂತ ಸಿಕ್ಕುವುದು ವಿರಳ. ಆಶ್ರಮ ಬಲಿಸುವ ಹುಚ್ಚು ಹಿಡಿದು, ಹಿಂದಿನವರು ಅದನ್ನೆ ವೃದ್ಧಿ ಮಾಡುತ್ತ ಬಂದಿರುವರು. ಮುಂದಿನವರಿಗೆ ಅದುವೆ ಪಾಠ ಹಾಕಿದಂತಾಗಿದೆ. ಹೀಗಾಗಿ ತತ್ತ್ವ ತಿಳಿಯದಾಗಿರುವುದು ಇದೆಂಥ ಯುಗದ ನೀತಿ. ಆಶ್ರಮ ವೃದ್ಧಿ ಮಾಡುವ ವ್ಯವಹಾರಿಕ ಬುದ್ಧಿಯ ಮಹಾಂತರು ಎನ್ನುವಷ್ಟು ಮಾನವ ಮಂದಮತಿಯಾಗಿದ್ದಾನೆ. ಈ ಮಂದಮತಿ ಹೋಗಬೇಕು. ತತ್ತ್ವ ತಿಳಿಯುವ ಹೃದಯವಾಗಬೇಕು. ತತ್ತ್ವ ತಿಳಿಸುವ ಮಹಾಂತನನ್ನು ಒಪ್ಪಿಕೊಳ್ಳಬೇಕು. ಆಗ ತತ್ತ್ವವೆಂಬುದು ನೀನೇನ ಬಲ್ಲೆಯೊ ? ಸತ್ತು ಮುಂದೆ ನೀನೇನ ಕಾಬೆಯೊ, ಇಂದೆ ಇಂದೆಯೇ ಇಂದೆ ಮಾನವಾ, ಮಾತಿನಂತುಟುಲ್ಲ, ಶಿವಾಚಾರದ ಸರಿದೊಡಕು ಕಾಣಿರಣ್ಣಾ ಎಂಬ ಸಿಂಹ ಗರ್ಜನೆ ನಮಗೆ ತಾಕುವುದು.

ತತ್ತ್ವವೆಂಬುದು ನೀನೆತ್ತ ಬಲ್ಲೆಯೊ ? ಎಂದು ಆದಾರು ಗರ್ಜಿಸುವರು. ಈ ತತ್ತ್ವದ ಘನವ ಅದಾರು ಬಲ್ಲರು. ಶ್ರೀಗುರು ಕರುಣಿಸಿದ ಸಂಜ್ಞೆಯೆ ತತ್ತ್ವ ವೀರಶೈವರ ಕರಕಮಲದಲ್ಲಿ ಬೆಳಗುವ ಬೆಳಗುಳ್ಳ ಘನ. ಅದು ತತ್ತ್ವವಾದುದಕ್ಕಾಗಿ ವೇದ ವೇದಾಂತಗಳಿಗಸಾಧ್ಯವಾದ ಅನುಪಮ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ಎಂದು ಬಿತ್ತರಿಸಿರುವಲ್ಲಿ ಅರಿದು ನೋಡುವುಡೆ ಶ್ರೀಗುರು ಕರುಣಿಸಿದುದು ವೇದ ವೇದಾಂತಗಳಲ್ಲಿ ಸಿಗದು. ಅಂತಪ್ಪ ಅನುಪಮ ಜ್ಞಾನ ಕರುಣಿಸಿದರೂ ಅದನ್ನು ತಿಳಿದವರು ಎಷ್ಟು ತತ್ತ್ವವೇತ್ತರು ಸಿಗಬಹುದು.

ಇತ್ತ ವೇದಾಂತಗಳಲ್ಲಿ ಬೃಹದ್ ಗ್ರಂಥಗಳಾಗಿಹ ಭಗವದ್ಗೀತೆ, ಉಪನಿಷದ್ ಬ್ರಹ್ಮಸೂತ್ರಗಳಲ್ಲಿಯೂ ತತ್ವವದು ಜ್ಞಾನಸ್ವರೂಪ. ಸಚ್ಚಿದಾನಂದ ನಿತ್ಯ ಪೂರ್ಣ, ಅಖಂಡ ಅದ್ವಯ ಅವಿಕಾರ ಅಸಂಗ, ಅಕಲ್ಪಿತ ಚೈತನ್ಯವೆಂದು ಈ ಮಹದ್ಗ್ರಂಥಗಳಿಂದ ಜಿಜ್ಞಾಸುಗಳಿಗೆ ಈ ಸಂಜ್ಞೆ ಕರುಣಿಸಿದುದು ಕಂಡು ಬರುವುದು. ಇದು ಜ್ಞಾನ ಸಂಜ್ಞೆ, ಅರುವಿನ ಸಂಜ್ಞೆ,

ಅರಿದರಿದು ನೋಡುವ ಸಂಜ್ಞೆ, ಇದು ತನ್ನಲ್ಲಿಯೆ ಕಂಡುಕೊಳ್ಳುವ ಸಂಜ್ಞೆ, ಗ್ರಂಥಗಳಲ್ಲಿ ಸಿಗದ ವಸ್ತು ಎಂದು ತಿಳಿದು ತನ್ನಲ್ಲಿ ನೋಡಿ ಕೊಂಡವರು ಅದೆಷ್ಟು ಮಹಾಂತರು ಸಿಕ್ಕುವರು, ಸಿಗಬಹುದು ವಿರಳ. ಇತ್ತ ಗುರು ಕರುಣಿಸಿದ ಲಿಂಗ ಅದಾರ ಕೂಡ ಮಾತಾಡಿದೆ. ಅದು ಲಿಂಗವೆಂದು ಅದಾರಿಗೆ ಹೇಳಿದೆ. ನನ್ನನ್ನು ಪೂಜಿಸು, ಧ್ಯಾನಿಸು ಎಂದು ಅದಾರಿಗೆ ಹೇಳಿದೆ. ಗುರು ಘನನು ಅದನ್ನು ಅರಿಯಲು ಕೊಟ್ಟರೆ, ಮರೆತು ಪೂಜಿಸಿದರೆ ತನ್ನಿರುವಿನ ಘನವ, ತಾನೆ ಹಾಳು ಮಾಡಿಕೊಂಡಿಹನು. ಲಿಂಗವರಿತು ಲಿಂಗವಾಗಿಹ ಘನವೆತ್ತ ? ಲಿಂಗವ ನೋಡಿ ಅರಿಯದೆ ಮರವುಳ್ಳವನಾಗಿ ಲಿಂಗ, ಲಿಂಗ ಎಂದು ಪೂಜಿಸುವ ಭಾವಿಸುವ ಚಿಂತಿಸುವ ಪೂಜೆ ಎತ್ತ.

ಗುರುಸಂಜ್ಞೆ ಅರಿಯೆನಾದಡೆ ಎನ್ನ ಬ್ರಹ್ಮ ಸಂಜ್ಞೆ ಬತ್ತಿ ಹೋಗಲಿ ಎಂದು ಸಿದ್ಧರಾಮ ಶಿವಯೋಗಿಯು ಎಚ್ಚರಿಸಿದರೂ ಅದನ್ನು ಮರೆತು ಈ ಲಿಂಗವೆಂಬ ಸಂಜ್ಞೆ ಅರಿಯದ್ದರಿಂದ ತನ್ನಿರುವಿನ ಘನವೆ ಬತ್ತಿಹೋಗಿದೆ. ಇತ್ತ ವೇದಾಂತಗಳಲ್ಲಿ ಬ್ರಹ್ಮಸೂತ್ರ, ಉಪನಿಷದ್‌ಗಳಲ್ಲಿ ಆವಲ್ಲಿ ಬೇರೊಂದನ್ನು ನೋಡುವುದಿಲ್ಲವೊ, ಕೇಳುವುದಿಲ್ಲವೊ, ತಿಳಿವುದಿಲ್ಲವೊ ? ಅದುವೆ ಭೂಮಾ ಎಂದು ಹೇಳಿದೆ. ಇತ್ತ ಈ ಸಂಜ್ಞೆ ಅದೆಷ್ಟು ವೇದಾಂತದ ಸಪ್ರೇಮಿಗಳು ತಿಳಿದಿಹರು.

ತತ್ತ್ವವೆಂದರೆ ಅನುಪಮ, ಅಖಂಡ, ಅಚಲ, ಜ್ಞಾನಸ್ವರೂಪ, ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲುವು ಆದುದರಿಂದ ಇದನ್ನಾರು ಬಲ್ಲವರಾಗಿಹರು. ಅವರಿಗೆ ಬೇರೊಂದು ನೋಡುವುದಿಲ್ಲ, ತನ್ನನ್ನೇ ನೋಡುವುದು. ನುಡಿಗೆಡೆಗೊಡದ ಘನವಾಗಿಹ ತನ್ನಿರುವು ಅದು ಶಬ್ದಕ್ಕೊಳಪಟ್ಟಿದೆಯೊ ? ಎಡೆಯಿಲ್ಲದ ಪರಿಪೂರ್ಣವಾಗಿಹ ತನ್ನಿರುವು ತನ್ನಿಂದ ತಿಳಿದಲ್ಲಿ ಬೇರೊಂದು ತಿಳಿವುದಿಲ್ಲ. ತಾನೆ ಕಿವಿಯ ಕಿವಿಯಾಗಿರುವಲ್ಲಿ ತನ್ನದು ಕಿವಿಗೆ ಕೇಳದ ಮಂತ್ರವದು. ನಿಶಬ್ದ ಬ್ರಹ್ಮ ಅದುವೆ ನಿರಂತರ ತನ್ನಿರುವು ಆಗಿರುವಲ್ಲಿ ಬೇರೊಂದು ಕೇಳುವುದಿಲ್ಲ, ತತ್ತ್ವ ಬೇರಲ್ಲ ಶ್ರೀಗುರು ಕರುಣಿಸಿದ ಸಂಜ್ಞೆ ಬೇರಲ್ಲ, ಇದು ಅನಂತ ಜನ್ಮಂಗಳ ಸುಕೃತದಿಂದ ಲಭ್ಯವಾಗಿರುವಲ್ಲಿ ಇಂದೆ ಇಂದೆಯೊ ? ಇಂದೆ ಮಾನವಾ ಮಾತಿನಂತುಟಲ್ಲ ಶಿವಾಚಾರದ ಸರಿದೊಡಕು, ಬೀದಿಯ ಮಾತಲ್ಲ, ರಚ್ಚೆಯ ಮಾತಲ್ಲ, ತತ್ತ್ವವದು ತಿಳಿಯುವುದಾಗಿದೆ. ಅದು ಮಾತಾಡಿದಂತೆಲ್ಲಾ ಮಾತು ವೃದ್ಧಿಯಾಗುತ್ತ ಹೋಗುತ್ತದೆ. ಮಾತು ನಷ್ಟವಾಗಬೇಕು, ತತ್ತ್ವವದು ತತ್ತ್ವವೆಂದಿರುವುದಿಲ್ಲ ಅದು ಸತ್ಯಜ್ಞಾನಾನಂದವೆಂಬ ಗುರುಲಿಪಿ, ತನ್ನಂಗದೊಳಗೆ ನೋಡಿಕೊಳ್ಳುವುದು ತಿಳಿಯುವುದು ಆಗ ಅದು ನುಡಿಗೆ ಒಳಪಡದು, ನೆನಹಿಂಗೆ ಒಳಪಡದು, ಭಾವಕ್ಕೊಳಪಡದು, ಅರಿಯುವ ಅರುವಿಂಗೂ ಒಳಪಡದು ಎಂಬುದು ತನ್ನಿಂದ ತನಗದು ಸಿದ್ಧವಾದಾಗ ಮಾತಿನಂತುಟಲ್ಲ, ಶಿವಾಚಾರದ ಸರಿದೊಡಕು ಇದು ಹರಟೆಯ ಮಾತಲ್ಲ, ಬೀದಿಯ ಮಾತಲ್ಲವೆಂಬುದು ತನಗದು ಸಹಜವಿದಿತವಾಗುವುದು.

ಏಕೋ ರಾತ್ರಿಯ ಬಿಂದು ಗುಹೇಶ್ವರ ಕೂಡಿದ ಕೂಟ ಇಂದು ಸುಖ, ಮುಂದೆ ಲೇಸು : ಏಕೋ ರಾತ್ರಿಯ ಬಿಂದು ಬಹು ಅರ್ಥ ಗರ್ಭಿತವಾದುದು. ''ಮನೋವಚೊಯತ್ರ ನಶಕ್ತಿ ಮೀರಿತುಂ ನೂನಂ ಕಥಂ ತತ್ವ ಗುರೂಪದೇಶಃ । ಇಮಾಂ ಕಥಾಮುಕ್ತವತೋ ಗುರೋಸ್ತದ್ಯುಕ್ತ । ತತ್ವಂಹಿ ಸಮಂಪ್ರಕಾಶಯೇತ್'' ಎಲ್ಲಿ ಮನಸ್ಸು

ವಾಕ್ ಅರಿಯಲು ಅಶಕ್ತವಾಗಿವೆಯೊ ಅಲ್ಲಿ ಗುರುವಿನಿಂದ ಉಪದೇಶವನ್ನು ಪಡೆಯುವುದು ಹೇಗೆ ? ಇದನ್ನು ಬೋಧಿಸಿದ ಗುರು ಕಲಿತುಕೊಂಡ ಶಿಷ್ಯ, ಇವರಿಬ್ಬರು ಸಮಪ್ರಕಾಶವಾದ ತತ್ವವ ತಿಳಿದುಕೊಂಡಿರುವರು. ತತ್ವವೆಂಬುದು ನುಡಿಗೆಡೆಗೊಡದ ಘನ, ಅದನ್ನು ಗುರುವಿನಿಂದುಪದೇಶಪಡೆದುದು ಹೇಗೆ ? ಶಿಷ್ಯನಾದವನು ಕಲಿತುದು ಹೇಗೆ ? ತತ್ತ್ವವ ತಿಳಿದವರು ನುಡಿಗಳಿಗೆ ಅವಕಾಶ ಕೊಡದಂತೆ ಘನದಿರುವಿನ ಅನುವ ತೋರಿಸುವರು. ಜಿಜ್ಞಾಸು ಅರ್ಥಾತ್ ತತ್ವ ತಿಳಿಯಬೇಕೆಂಬ ಹಸಿವುಳ್ಳವನು ಮಹಾಂತರು ತಿಳಿಸಿದ ಅನುವ ಅರಿದು ತಾನು ನುಡಿಗೆಡೆಗೊಡದ ಘನವಾಗಿ ಪ್ರಜ್ವಲಿಸುವಲ್ಲಿ ಈರ್ವರ ಇರುವು ಒಂದೆ, ಅರುವು ಒಂದೆ ಇವರಲ್ಲಿ ಅನಿಯಮದ ಬೆಡಗ ಅರುವಿನ ಅರುವುವಾಗಿರುವುದರಿಂದ ಗುರುಶಿಷ್ಯರೆಂಬುದು ಒಂದು, ಇದು ಏಕೋ ರಾತ್ರಿ ಬಿಂದು, ನಿರಂತರವಾಗಿಹ ತನ್ನಿರುವ ತತ್ವವಾಗಿದ್ದುದು ತನ್ನಿಂದ ತನಗೆ ವಿದಿತವಾದುದು ಏಕೊ ರಾತ್ರಿ ಬಿಂದು, ಇದು ಗುಹೇಶ್ವರನ ಕೂಡಿದ ಕೂಟ, ಇದು ಕೂಡದಗಲದ ಕೂಟ, ತನ್ನಯ ಕೂಟ, ನಿಜದ ಕೂಟ, ಶಬ್ದಮುಗ್ಧ ಕೂಟ, ಈ ಕೂಟವು ಇಂದು ಸುಖವು, ಮುಂದೆ ಲೇಸು.

ಬಹು ತತ್ವದರ್ಶಿಗಳು ಇಲ್ಲವಾದುದರಿಂದ ಕಲ್ಪಿತವೆ ಘನವಾಗಿರುವುದಲ್ಲದೆ ಕಲ್ಪಿತ ತುಚ್ಛವಾಗಲೊಲ್ಲದು. ತುಚ್ಛವಾಗದಿರುವಲ್ಲಿ ಕಲ್ಪಿತ ಕಾಣದಂತಾಗುವುದು ಹೇಗೆ ? ಇದು ಕಾರಣ ಶಬ್ದವೇದಿಗಳೆ ಹೆಚ್ಚಾಗಿ ಸಾವ ನುಂಗುವ ಶ್ರೀಗುರು ಕಾರುಣ್ಯ ಸಿಗದಂತಾಗಿದೆ.

**150**

**ಇರುಳ ನುಂಗಿತ್ತು, ಇರುಳಿಲ್ಲ ; ಹಗಲ ನುಂಗಿತ್ತು ಹಗಲಿಲ್ಲ.**
**ಅರಿವ ನುಂಗಿತ್ತು ಅರಿವಿಲ್ಲ , ಮರಹ ನುಂಗಿತ್ತು ಮರಹಿಲ್ಲ .**
**ಕಾಯವ ನುಂಗಿತ್ತು ಕಾಯವಿಲ್ಲ , ಜೀವವ ನುಂಗಿತ್ತು ಜೀವವಿಲ್ಲ,**
**ಇವೆಲ್ಲವ ನುಂಗಿತ್ತು-ಇದೇನಯ್ಯಾ , ಸಾವ ನುಂಗದು ಗುಹೇಶ್ವರಾ?** ॥ 519 ॥

**ತಾತ್ಪರ್ಯ** : ಇರುಳ ನುಂಗಿತ್ತು ಇರುಳಿಲ್ಲ. ಈ ಇರುಳ ನುಂಗಿದುದು ಅದಾವ ಬೆಳಕು ? ಸೂರ್ಯ ಪ್ರಕಾಶವೆನ್ನಲೆ ? ಬಾರದು, ಸೂರ್ಯ ಪ್ರಕಾಶ ಇರುಳು ನುಂಗಿತ್ತೆಂಬೆನೆ ? ಇರುಳ ಸೂರ್ಯನ ನುಂಗಿತ್ತು, ಸೂರ್ಯನ ನುಂಗಿತ್ತೆಂಬೆನೆ ? ಇರುಳ ಸೂರ್ಯನು ನುಂಗಿದುದು ನೋಡಾ, ಇವು ಒಂದನ್ನೊಂದು ನುಂಗಿಹವು ನೋಡಾ. ಅದನ್ನು ಇದು ನುಂಗಿಹುದು. ಇದನ್ನು ಅದು ನುಂಗಿಹುದು. ಸಕಲರಿಗೆ ವಿದಿತವಿದ್ದ ವಿಷಯ. ಈ ವಿಷಯ ಇಲ್ಲಿ ಬಾರದು, ಏಕೆಂದರೆ ಇವುಗಳ ದಿನನಿತ್ಯ ವ್ಯವಹಾರ ಉದಯವಾದುದು, ಅಸ್ತವಾಗುವುದು. ಅಸ್ತವಾದುದು ಉದಯವಾಗುವುದು. ಇಲ್ಲಿ ಹಾಗಿಲ್ಲ, ಇರುಳ ನುಂಗಿತ್ತು ಇರುಳಿಲ್ಲ. ಹಗಲು ನುಂಗಿತ್ತು ಹಗಲಿಲ್ಲ. ನುಂಗಿದ ಮೇಲೆ ಪುನಃ ಅದು ಇಲ್ಲ, ಇರುಳನ್ನೆ ನುಂಗಲಿ, ನುಂಗಿದ ಮೇಲೆ ಅದು ಇಲ್ಲ, ಹಗಲನ್ನೆನುಂಗಲಿ ನುಂಗಿದ ಮೇಲೆ ಅದು ಇಲ್ಲ ಅಂದಲ್ಲಿ ಇಲ್ಲಿ ಇರುಳ ನುಂಗಿದುದು ಬೇರೆ, ಹಗಲು ನುಂಗಿದುದು ಬೇರೆ, ಇಲ್ಲಿ ಹಗಲು ಇರುಳ ನುಂಗಿಲ್ಲ, ಇರುಳ ಹಗಲು ನುಂಗಿಲ್ಲ, ಇವೆರಡನ್ನು ನುಂಗಿದುದು ಇವುಗಳಿಗಿಂತ ಬೇರಾದ ವಸ್ತುವು. ಆ ವಸ್ತುವೆ ಪ್ರಭು, ಪ್ರಭು

ಎಂದರೆ ಪರ ಪ್ರಕಾಶನಲ್ಲ, ಸ್ವಯಂ ಪ್ರಕಾಶನು. ಉದಯಾಸ್ತವಿಲ್ಲದ ಜ್ಯೋತಿ, ಚಿಜ್ಯೋತಿ, ನಿರಂತರ ಇಂತಪ್ಪ ಮಹಾನುಭವದ ಘನದಲ್ಲಿರುವಂಗೆ ಪರಪ್ರಕಾಶವಾಗಿಹ ಹಗಲು ಇಲ್ಲ, ರಾತ್ರಿಯೂ ಇಲ್ಲ.

ಪ್ರಭುವಿನ ಸುಜ್ಞಾನ, ಇರುಳ ನುಂಗಿತ್ತು ಇರುಳಿಲ್ಲ. ನಾಸತೋಭಾವ ನಾ ಭಾವೊವಿದ್ಯತೆ ಸತಃ, ಇದ್ದ ವಸ್ತುವಿಗೂ ಇಲ್ಲದಿರುವಿಕೆಯು ಇಲ್ಲ, ಇಲ್ಲದುದಕ್ಕೆ ಇರುವಿಕೆಯು ಇಲ್ಲ, ಪ್ರಭು ತತ್ವವರಿತಾತ, ಅಬಾಧಿತವಾಗಿಹ ಸದ್‌ಜ್ಞಾನ ಭರಿತಂಗೆ ಇದ್ದ ತಾನು ನಿರಂತರ ಇದ್ದವನು. ಇಲ್ಲದ ಹಗಲು ಇಲ್ಲ, ರಾತ್ರಿಯು ಇಲ್ಲ, ಹಗಲೆಂಬುದು ತೋರಿಕೆ, ರಾತ್ರಿಯೆಂಬುದು ತೋರಿಕೆ, ತೋರದಡಗದ ಘನವಾಗಿಹ ಈ ತೋರಿಕೆ ಇಲ್ಲದುದು, ಅದಕ್ಕಾಗಿ ದಿವ್ಯದೃಷ್ಟಿಯು ಇರುಳ ನುಂಗಿತ್ತು ಇರುಳಿಲ್ಲ. ಹಗಲು ನುಂಗಿತ್ತು ಹಗಲು ಇಲ್ಲ, ಬಂಗಾರದಲ್ಲಿ ತೋರಿದ ಆಭರಣಂಗಳು ನಿಜವೆ ? ತನ್ನ ಸ್ವಪ್ರಕಾಶದಲ್ಲಿ ತೋರಿದ ಪರಪ್ರಕಾಶವಾಗಿಹ ಹಗಲು ರಾತ್ರಿ ನಕ್ಷತ್ರ ತಾರೆ ಚಂದ್ರಮ ನಿಜವೆ ? ಸ್ವಪ್ರಕಾಶನಿಂದ ಸ್ವಮಹಿಮಂಗೆ ಕಲ್ಪಿತವಾದ ಹಗಲು ರಾತ್ರಿಯು ನಿಜವೆ ?

ಅರುವ ನುಂಗಿತ್ತು ಅರುವಿಲ್ಲ ಮರಹ ನುಂಗಿತ್ತು ಮರಹವಿಲ್ಲ, ಅರುವ ನುಂಗಿದ ಅರುವು ಇದಾವ ಅರುವು. ಅಬಾಧಿತ ಅರುವು, ಇದು ಅರುವು ನುಂಗಿದ ಅರುವು. ಇದು ನುಡಿಗೆಡೆಗೊಡದ ಅರುವು. ಅರುವೆನ್ನದ ಅರುವು. ಈ ಅರುವು ನುಡಿಗೊಳಪಟ್ಟ ಅರುವ ನುಂಗಿತ್ತು ಅರುವಿಲ್ಲ, ಇದು ತನ್ನಿಂದ ತನ್ನಲ್ಲಿ ನೋಡಿಕೊಳ್ಳುವುದು. ನುಡಿಗೊಳಪಟ್ಟ ಅರುವು. ನುಡಿಗೆಡೆಗೊಡದ ಘನದಿರುವಿನ ಅರುವು ಉದಯವಾಗುವುಡೆ ನುಡಿಗೊಳಪಟ್ಟ ಅರುವು ನಷ್ಟವಾಗಿ ಪುನಃ ಅರುವೆನ್ನದಂತಾದುದು ತನ್ನಲ್ಲಿ ನೋಡಿಕೊಳ್ಳುವುದು. ಆವಲ್ಲಿ ಶಬ್ದಮುಗ್ಧವಾಗಿ ಅರಿಯದರುವಾಗಿ ತನ್ನ ಸ್ವಮಹಿಮೆಯ ಮಹಿಮ್ನವಾಗಿ ಸ್ವಪ್ರಕಾಶಿಸುವುದೋ ಅಲ್ಲಿ ಅರುವು ಎನ್ನಲು ಬಾರದಂತಾಗಿದೆ. ಇದು ಅರುವ ನುಂಗಿತ್ತು ಅರುವಿಲ್ಲವೆಂಬುದು ನಿನ್ನೊಳಗೆ ನೀನೆ ನೋಡಿಕೊಳ್ಳುವುದು. ಆರು ನಿಶಬ್ದವೇದಿಗಳು ಅವರು ಅರುವ ನುಂಗಿ ಅರುವೆಂಬುದು ಇಲ್ಲವಾಗಿದೆ. ಅರುವಿನಲ್ಲಿ ಸಾಮಾನ್ಯ ಅರುವು, ಕಲ್ಪಿತ ವಿಶೇಷ ಅರುವು. ವಿಶೇಷ ಅರುವು ಈ ಅರುವುಗಳೆಲ್ಲವು ನಷ್ಟವಾದುದೆ ಅರುವ ನುಂಗಿದಂತೆ ಎಂದು ತಿಳಿವುದು.

ಅಕಲ್ಪಿತದರುವು ಈ ಕಲ್ಪಿತ ಅರುವುಗಳ ನುಂಗಿ, ಕಲ್ಪಿತವೆಂಬುದು ಇಲ್ಲವಾಯಿತ್ತು. ಅಲ್ಲಿ ನಾನು ಇದ್ದೇನೆನ್ನುವ ಸಾಮಾನ್ಯ ಅರುವು ಇಲ್ಲ, ನಾನು ಗೃಹಸ್ಥನು ಪುರುಷನು ಸ್ತ್ರೀಯು ಬ್ರಹ್ಮಚಾರಿ ನಾನು ಶೋಕಿ ಮೋಹಿ, ನಾನೆ ಕರ್ತಾ ನಾನೆ ಭೋಕ್ತ ಎನ್ನುವವನೆ ಕಲ್ಪಿತ ವಿಶೇಷ ಅರುವು ಎಂದು ಹೇಳಿ ನಾನು ಸಾಕ್ಷಿ, ದೃಕ್, ಸಚ್ಚಿದಾನಂದ, ನಿತ್ಯ, ಪೂರ್ಣ, ಅಖಂಡ ಅಸಂಗಾದಿ ಆತ್ಮನ ಲಕ್ಷಣದಭಿಮಾನಿಯಾಗಿಹುದೆ ವಿಶೇಷ ಅರುವು ಎನಿಸಿಕೊಳ್ಳುವುದು. ಆರಲ್ಲಿ ಅಕಲ್ಪಿತ, ಅವರ್ಣೀಯ ಅಖಂಡವಾಗಿಹ ಅರುವು ಪ್ರಜ್ವಲಿಸುವುದು, ಅಲ್ಲಿ ಕಲ್ಪಿತ ಅರುವುಗಳೆಲ್ಲ ನಷ್ಟವಾಗಿರುವುದರಿಂದ ಪುನಃ ಅವುಗಳ ಉತ್ಥಾನವಿಲ್ಲ, ಇದು ಕಾರಣ ಅರುವ ನುಂಗಿತ್ತು ಅರುವಿಲ್ಲವೆಂದು ಹೇಳಿಹರು.

ಮರಹು ನುಂಗಿತ್ತು ಮರಹು ಇಲ್ಲ, ಮರಹು ? ಇದಾವ ಮರಹು, ಅರುವು ತಾನಿದ್ದು, ತನ್ನನ್ನು ಅರಿಯದಿಹುದೆ ಮರಹು. ತನ್ನನ್ನು ತನ್ನಿಂದ ಯತಾರ್ಥವಾಗಿ ಅರಿತು

ತಾನೆ ತಾನಾಗಿ ತನ್ನ ಸ್ವಮಹಿಮೆಯಲ್ಲಿರುವುದು ಮರೆತುದೆ ಮರಹು. ಯತಾರ್ಥವರಿಯದೆ ಒಮ್ಮೆ ಅರುವು ತಾನೆನ್ನುವುದು ಒಮ್ಮೆ ಅನಾತ್ಮ ಬುದ್ಧಿಯುಳ್ಳವನಾಗುವುದು. ಮರಹು, ತನ್ನೊಳಿಲ್ಲದ ಮರವು, ಅರುವು ತಾನಾದುದೆ ಮರಹು, ಮರಹು ನುಂಗಿತ್ತು ಮರಹು ಇಲ್ಲ, ಆರು ತನ್ನನ್ನು ಯತಾರ್ಥವರಿತಿಹ ಸುಜ್ಞಾನಿಗೆ ಮರಹು ತಾನೆಲ್ಲಿಯದು. ಸುಜ್ಞಾನಿಗೆ ಮರವೆಂಬುದಿಲ್ಲ, ಅರುವೆಂಬುದಿಲ್ಲ, ನುಡಿಗೆಡೆಗೊಡದ ಘನದಿರುವು ತನ್ನಯ ಇರುವು ಅರುವು ಆದುದರಿಂದ ಮರವುಳ್ಳವ ನಾನೆಂಬುದು ಇಲ್ಲ, ಅರುವುಳ್ಳ ನಾನೆಂಬುದು ಇಲ್ಲ, ಸಮತ ಸಯವಾದ ಶರಣಂಗೆ ಅರುವು ಮರವುಗಳುಂಟೆ ? ಮರವು ಅರುವಿಂಗೆ ಮೀರಿದ ಘನದಿರುವೆ ತನ್ನಯ ಅರುವಾದವಂಗೆ ದೇಹ ನಾನೆಂಬ ಮರವು ನುಂಗಿತ್ತು. ಅರುವು ನಾನೆಂಬ ಅರುಹು ನುಂಗಿತ್ತು. ನಿರವಧಿಯಾಗಿಹ ನಿಸ್ಸೀಮನ ದೃಷ್ಟಿಯಲ್ಲಿ ಈ ಸೀಮಿತ ದೃಷ್ಟಿ ಇಲ್ಲವಾದುದರಿಂದ ಮರಹು ನುಂಗಿತ್ತು. ಮರಹು ಇಲ್ಲ, ಅಖಂಡ ಜ್ಞಾನಿಗೆ ಈ ಮರವು ಅರುವುಳ್ಳ ಭೇದ ಜ್ಞಾನದ ಮರಹು ನಷ್ಟವಾದುದರಿಂದ ಮರಹ ನುಂಗಿತ್ತು. ಪುನಃ ಮರವುಳ್ಳನಾಗಲಾರ ಅರುವುಳ್ಳನಾಗಲಾರ. ಅಲ್ಲಿ ಬಂಧವೇತರದು, ಮೋಕ್ಷವೇತರದು, ಇವೆರಡು ಕಾಣದ ಅನುಪಮನಾದುದರಿಂದ ಉಪಮೆಗೊಳಪಟ್ಟ ಜ್ಞಾನವು ನಷ್ಟವಾದುದರಿಂದ ಮರಹನುಂಗಿತ್ತು. ಮರಹಿಲ್ಲವೆಂದಿಹರು ಅಜ್ಞಾನಿಗೆ ಅರುವು ತಾನೆಲ್ಲಿಯದು, ಸುಜ್ಞಾನಿಗೆ ಮರಹು ತಾನೆಲ್ಲಿಯದು, ಸುಜ್ಞಾನಿಯು ಅಜ್ಞಾನಿಯಾಗ ಬಹುದೆ ? ಆಗದ್ದರಿಂದ ಮರಹ ನುಂಗಿತ್ತು ಮರಹು ಇಲ್ಲವೆಂದು ಹೇಳಿಹರು. ಸುಜ್ಞಾನಿಗೆ ಅರುವಿನ ಅರುವು ನಿಜದಿರುವಿನ ಅರುವು ತಾನಾಗಿಹನು. ಇಂತಪ್ಪ ಯತಾರ್ಥ ಅರಿವು. ಅಜ್ಞಾನಿಗೆ ಸಾಧ್ಯವೆ ? ಅಜ್ಞಾನಿಯು ಮರಹು ನುಂಗುವುದು ಅಸಾಧ್ಯವು. ಸುಜ್ಞಾನಿಗೆ ಮರಹು ನುಂಗಿದುದು ಸಹಜವಾದುದರಿಂದ ಮರಹು ಇಲ್ಲವೆಂದು ಹೇಳಿಹರು.

ಕಾಯವ ನುಂಗಿತ್ತು ಕಾಯವಿಲ್ಲ : ಸುಜ್ಞಾನಿ ಕಾಯದ ಕಾಯ ಘನ ಕಾಯ, ಸತ್ಯಜ್ಞಾನಾನಂದ ಕಾಯ, ಅರುವಿನ ಕಾಯ, ಅರುವರಿತ ಕಾಯ, ಅನುಪಮ ಕಾಯ, ಈ ಘನ ಕಾಯ, ಮೊಲೆ ಮುಖವ ಕಂಡುದಿಲ್ಲ, ಗಡ್ಡ ಮೀಸೆ ಕಂಡುದಿಲ್ಲ, ಒಳಹೊರಗೆನ್ನದೆ ಭರಿತವಾಗಿಹ ತನ್ನ ಕಂಡ ಕಾಯ ತನಗೆ ಆಣವಮಲ, ಮಾಯಾಮಲ, ಕಾರ್ಮಿಕ ಮಲ, ಈ ಮಲತ್ರಯವುಳ್ಳ ಕಾಯವ ಕಾಣದ್ದರಿಂದ ಕಾಯ ನುಂಗಿತ್ತು ಕಾಯವಿಲ್ಲ ಎಂದು ಹೇಳಿಹರು. ಕಾಯವ ನುಂಗಿದ ಕಾಯ ಅದಾರಿಗೆ? ಪ್ರಭು, ಅಸ್ತಿ, ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮರೂಪವೆಂಬ ಹುಸಿ ಜನಸಿತೆಂದರಿಯೆನಯ್ಯ ಎಂಬ ಸಮ್ಯಜ್ಞಾನಿ, ದಿಟವರಿತವಂಗೆ ಸಟೆಯೆಂಬುದಿಲ್ಲ, ಸಟೆಯ ತಾನಾದವಂಗೆ ದಿಟವರಿತುದಿಲ್ಲ, ದಿಟವರಿತ ಮಹಾಂತನಾದುದರಿಂದ ತೋರುವ ಸಟೆಯುಳ್ಳ ಕಾಯವಾದುದರಿಂದ ಕಾಯನುಂಗಿತ್ತು, ಕಾಯವಿಲ್ಲ ಎಂದು ಹೇಳಿಹರು.

ಜೀವವ ನುಂಗಿತ್ತು ಜೀವವಿಲ್ಲ : ಆರು ಜೀವವ ನುಂಗಿಹರು ಅವರು ಜೀವ ಹೇಗಾಗುವವರು? ಅಕಲ್ಪಿತ ಘನನು, ಕಲ್ಪಿತ ತಾನೆನ್ನಬಹುದೆ ? ಚಿತ್‌ಸ್ವರೂಪನರಿತ ನಿಜ ಚಿದ್ರೂಪನು, ಚಿದಾಭಾಸನಾಗಬಹುದೆ ? ಚಿದ್ರೂಪವೆನ್ನದ ಚಿದ್ರೂಪ ಜೀವನೆನಬಹುದೆ ? ಅಂತರಾತ್ಮನೆನಬಹುದೆ ? ಪರಮಾತ್ಮನೆನಬಹುದೆ ? ಏನೊಂದಾಗದ ಘನ ಮಹಿಮನು, ಜೀವನಾಗನು, ಕಲ್ಪಿತನಾಗನು. ಅದಕ್ಕಾಗಿ ಜೀವ ನುಂಗಿತ್ತು ಜೀವವಿಲ್ಲ ಎಂದು ಹೇಳಿಹರು.

ಇವೆಲ್ಲವ ನುಂಗಿತ್ತು ಇದೇನಯ್ಯ ಇದೇನಯ್ಯ ಸಾವನುಂಗದು ಗುಹೇಶ್ವರಾ: ಇವೆಲ್ಲವ ನುಂಗಿದುದು ಅಂದರೆ ಹಗಲು ನುಂಗಿದುದು, ಇರುಳ ನುಂಗಿದುದು, ಅರುವು ನುಂಗಿದುದು ಮರಹು ನುಂಗಿದುದು ಕಾಯ ನುಂಗಿದುದು, ಜೀವ ನುಂಗಿದುದು ಇದೇನಯ್ಯ ಇದೇನಯ್ಯ ಸಾವ ನುಂಗದು ಗುಹೇಶ್ವರಾ. ಇವೆಲ್ಲವ ನುಂಗಿದುದು, ಸಾವನುಂಗದುದು ಇದೇನೊ, ಇದೇನೊ ? ಸಾವ, ಸಾವ ಹೇಗೆ ನುಂಗುವುದು. ಸಾವೆಂಬುದು ಕಲ್ಪಿತ, ಕಲ್ಪಿತ ಕಲ್ಪಿತವ ಹೇಗೆ ನುಂಗುವುದು. ಹಗಲು, ಇರುಳು ಅರುವು, ಮರಹು, ಕಾಯ, ಜೀವ, ಇವೆಲ್ಲವು ಕಲ್ಪಿತ. ಈ ಕಲ್ಪಿತ ನುಂಗಿದ ಅಕಲ್ಪಿತವೆಂಬುದು ಕಲ್ಪಿತ ಅರುವೆಂಬುದು ಕಲ್ಪಿತ, ಅರುವಿನರುವು ಎಂಬುದು ಕಲ್ಪಿತ, ಸಾವು ಎಂಬುದು ಕಲ್ಪಿತವಾದ್ದರಿಂದ ಸಾವನುಂಗದು ಗುಹೇಶ್ವರಾ ಎಂದು ಹೇಳಿಹರು.

ತನ್ನ ಸ್ವಂತ ಸ್ವಮಹಿಮೆಯಲ್ಲಿ ನೆಲಿಸಿದವಂಗೆ, ಸಾವು ಇಲ್ಲ, ನಾನು ಇಲ್ಲ, ನೀನು ಇಲ್ಲ, ಅರುವು ಇಲ್ಲ, ಮರಹು ಇಲ್ಲ, ಮಾಯೆ ಇಲ್ಲ, ಕಾಯ ಇಲ್ಲ, ಕಲ್ಪಿತ ಇಲ್ಲ, ' ಆತ್ಮನಿಲ್ಲ, ನನ್ನ ಸ್ವಮಹಿಮೆಯಲ್ಲಿರುವ ನನಗೆ ಮರಣವು ಇಲ್ಲ ಎಂದು ಹೇಳಿಹರು.

**151**

**ನಾ ದೇವನಲ್ಲದೆ ನೀ ದೇವನೆ ?**
**ನೀ ದೇವನಾದಡೆ ಎನ್ನನೇಕೆ ಸಲಹೆ?**
**ಆರೈದು, ಒಂದು ಕುಡಿಕೆ ಉದಕವನೆರೆವೆ,**
**ಹಸಿದಾಗ ಒಂದು ತುತ್ತು ಓಗರನಿಕ್ಕುವೆ.-**
**ನಾ ದೇವ ಕಾಣಾ ಗುಹೇಶ್ವರಾ!** ॥ 538 ॥

**ತಾತ್ಪರ್ಯ** : ನಾ ದೇವನಲ್ಲದೆ, ನೀ ದೇವನೆ : ಪ್ರಭುದೇವ, ದೇವರ ದೇವನಾದುದರಿಂದ ಈ ಕಲ್ಪಿತ ದೇವನನ್ನು ಕುರಿತು ನೀ ದೇವನೆ ಎಂದು ಪ್ರಶ್ನಿಸುತ್ತಿಹನು. ವೀರಶೈವರಲ್ಲಿ ಪ್ರಭುವಿನಂತೆ ಲಿಂಗಯ್ಯನಿಗೆ ನಾ ದೇವನಲ್ಲದೆ ನೀ ದೇವನೆ ಎಂದು ಅರು ಹೃದಯರಾಗಿ ಪ್ರಶ್ನಿಸಿದವರು ಸಿಕ್ಕುವರೆ ? ಇದರ ಉತ್ತರ ತಮ್ಮ ತಮ್ಮ ಹೃದಯದಲ್ಲಿ ನೋಡುವುದು. ಲಿಂಗಾರ್ಚಕರು ಪ್ರಭುವಿನಂತೆ ಲಿಂಗಯ್ಯನಿಗೆ ಈ ರೀತಿ ಪ್ರಶ್ನಿಸುವರಾಗಿದ್ದರೆ, ವೀರಶೈವರು ಇಷ್ಟು ಸಂಕುಚಿತ ಭೂಮಿಕೆಯುಳ್ಳವರಾಗುತ್ತಿದ್ದಿಲ್ಲ, ಇದು ಸೀಮಿತ ಜಾತಿಗೆ ಸೇರುತ್ತಿದ್ದಿಲ್ಲ. ಅಜಾತ ತತ್ವ ಹೋಗಿ ಈಗ ಇದು ಒಂದು ಜಾತಿಗೆ ಒಳಪಟ್ಟುದು ದುರದೃಷ್ಟ. ಮಹಾಕಾಶವಾಗಿಹ ಆಕಾಶ ಘಟಾಕಾಶವಾಯಿತೆ ? ಅಖಂಡ ಹೋಗಿ ತುಣು ತುಣುಕಾಯಿತೆ ? ಪೂರ್ಣ ಹೋಗಿ ಅಪೂರ್ಣವಾಯಿತೆ ? ಮನ ಮೀರೆದಪ್ಪಿದುದು ಮನಕ್ಕೆ ಒಳಪಟ್ಟಿತೆ? ನಿರಾಲಂಬ ಹೋಗಿ ಪೂಜಾಲಿಂಗದ ಅವಲಂಬನವುಳ್ಳದಾಯಿತೆ? ಚೈತನ್ಯಮಯವು ಜಡವಾಯಿತೆ ? ಅಪೂರ್ವಿಕವು ಪೂರ್ವಿಕವಾಯಿತೆ ? ಸುಜ್ಞಾನವು ಅಜ್ಞಾನವಾಯಿತೆ ? ಮತಿಗತಿಗೆ ಮೀರಿದ ಘನ ಗತಿಮತಿಗೆ ಒಳಪಟ್ಟಿತೆ ?

ಓ ಲಿಂಗಯ್ಯ ಇದಾರು ಹೀಗೆ ಮಾಡಿದವರು. ನೀ ದೇವನಾದರೆ ನಿನ್ನ ಸ್ಥಿತಿ ಹೀಗೇಕೆ ? ಜಡಮತೀಯರು ಜಡವಾಗಿ ನಿನ್ನ ಕಂಡರೆ ? ನೀ ದೇವನಾದರೆ ಅವರನ್ನೇಕೆ ಜಡಮೂಢರನ್ನಾಗಿ ಮಾಡಿದೆ. ನೀನು ಅಪ್ರಮಾಣನಾದರೆ ಅವರನ್ನೇಕೆ ನಿನ್ನಂತೆ ಮಾಡಲೊಲ್ಲೆ. ನೀನು ಅಚಿಂತ್ಯಾತ್ಮನಾದಲ್ಲಿ ನಿನ್ನ ಭಕ್ತರನ್ನೇಕೆ ಚಿಂತಕರ ಮಾಡಿದೆ. ನೀ ಅಮರನಾದಲ್ಲಿ ಅವರನ್ನೇಕೆ ಮರಣಕ್ಕೊಳಪಟ್ಟವರ ಮಾಡಿದೆ. ಓ ಲಿಂಗಯ್ಯ ಏನಿದು ನಿನ್ನಯ ವಿಷಮ ದೃಷ್ಟಿ ?

ಪ್ರಭು ಲಿಂಗಯ್ಯನ ಕೂಡ ಸಂವಾದವೆ ? ಲಿಂಗಾರ್ಚಕರಲ್ಲಿ ಪ್ರಭುವಿನಂತೆ ಲಿಂಗಯ್ಯನ ಕೂಡ ಸಂವಾದ ಮಾಡಿದ ಸುಜ್ಞಾನಿಗಳು ಎಷ್ಟು ಸಿಕ್ಕುವರು ? ಪ್ರಭುವಿನ ಸುಜ್ಞಾನ ತೇಜವೆತ್ತ, ಲಿಂಗಾರ್ಚಕರ ಸ್ವಾಮಿ ಸೇವಕರಾಗಿ ಪೂಜ್ಯ ಪೂಜಿಕರಾಗಿ ಭಾವಿಸುವ ಭ್ರಾಮಕ ಭಾವ ಎತ್ತ ? ಭಾವಕ್ಕಗಮ್ಯವಾಗಿಹ ಘನದಿರುವುಳ್ಳ ಅರುವೆತ್ತ ? ಭಾವಕ್ಕಗಮ್ಯವಾಗಿಹ ಘನ ಮಹಿಮರ ದೃಷ್ಟಿಯಲ್ಲಿ ನಾವು ಹುಟ್ಟಿಸಿದ ದೇವನಾಗಿದೆ. ಈ ಪೂಜಾ ಲಿಂಗಕ್ಕೆ ಓ ಲಿಂಗಯ್ಯ ನೀನು ಪೃಥ್ವಿಗೆ ಹುಟ್ಟಿದವನಾದೆಯಾ ? ಕಲ್ಲು ಕುಟಿಗ ನಿನ್ನನ್ನು ದೇವನ ಮಾಡಿದನೆ ? ಮಂತ್ರದಿಂದ ನೀನು ಅಮರನೆಂಬ ಭಾವ ತಾಳಿರುವೆಯಾ ? ಏನಿದು ನಿನ್ನಯ ಉಗಮ, ಇದಕ್ಕಿಂತಲೂ ನಿನ್ನಿರುವು ಬೇರೆಯಾಗಿದ್ದರೆ ಅದನ್ನು ತಿಳಿಸಿಕೊಡು, ಓಹೋ ! ಲಿಂಗಯ್ಯ ನಿನಗೆ ಸಚ್ಚಿದಾನಂದ ನಿತ್ಯ, ಪೂರ್ಣ, ಅಖಂಡನೆನ್ನುವರಲ್ಲ, ಒಳ್ಳೆಯದು.

ನೀ ದೇವನಾದಡೆ ಎನ್ನನೇಕೆ ಸಲಹೆ ? ಎಂಬ ಗಂಭೀರ ಜ್ಞಾನ ಬಹು ಲಿಂಗವಂತರಿಗಿರುವುದು ವಿರಳ. ಲಿಂಗವಂತರಲ್ಲಿ ಲಿಂಗಯ್ಯನನ್ನು ಬೇಡುವ ಭಕ್ತರೆ ಬಹುವಾಗಿ ಇಹರು. ಆತನು ಇವರ ಬೇಡಿದ ಇಷ್ಟಾರ್ಥವ ಕೊಡುವವನಾಗಿದ್ದಾನೆ. ಇವರು ಬೇಡಿ ಪಡೆಯುವ ಭಕ್ತರಾಗಿಹರು. ಸಂಸಾರದಲ್ಲಿ ವಿಷಯಾಸಕ್ತರಾಗಿರುವುದರಿಂದ ಇವರುಗಳಷ್ಟೆ ಅರ್ಥಾರ್ಥಿ ಭಕ್ತರಾಗಿರುವರು ಎನ್ನುವ ಹಾಗಿಲ್ಲ, ಇನ್ನುಳಿದವರು ಭಕ್ತರಾಗಿಹರು. ಅವರು ಸಹ ಲಿಂಗಯ್ಯನಿಗೆ ಸರ್ವಾರ್ಪಣ ಮಾಡಿ, ತಮ್ಮ ಯೋಗ ಕ್ಷೇಮ ಲಿಂಗಯ್ಯನು ನೋಡುವನು ಎಂಬ ಭಾವ ಬಲಿದು ಲಿಂಗಯ್ಯನ ಒಲಿಸಿಕೊಳ್ಳುವ ಹಂಬಲಿಗರಾಗಿಹರು. ಇನ್ನು ಕೆಲಬರು ತಮ್ಮ ಲಿಂಗಾರ್ಚನೆಗೆ ದೇವನ ಒಲಿದ ಭಾವ ತೋರಿಸುವರು. ಈ ಭಾವ ಜನರಲ್ಲಿ ಬೆಳೆದು, ಜನರು ಆತನನ್ನು ದೇವನಂತೆ ಕಾಣುವರು. ಇದಲ್ಲದೆ ಒಲಿಸಿಕೊಂಡ ಭಕ್ತರೆ ಇರಲಿ, ಅಯ್ಯಗಳೆ ಇರಲಿ, ಗುರು ವರ್ಗವಿರಲಿ ಅವರು ಹೇಳಿದ ಮಾತು ಖರೆ ಆಗುತ್ತವೆ. ಆತನದು ದೇವವಾಣಿಯೆಂದು, ಅಷ್ಟು ನಮ್ರತೆಯಿಂದ ಆ ಶರಣನನ್ನು ಕಾಣುವರು. ಹೀಗೆ ಶರಣನನ್ನು ಒಲಿಸಿಕೊಳ್ಳುವುದರಿಂದ ದೇವರು ಒಲಿಯುವನು. ಆ ಒಲುಮೆಯ ಪ್ರಭಾವದಿಂದ ಬಡವರಾದವರು ಶ್ರೀಮಂತರಾಗುವರು. ಭಕ್ತರ ಬೇಡಿಕೆಗಳು ಅವರಿಂದ ಈಡೇರುವವು ಎಂಬ ಇಂತಪ್ಪ ಕೊಡ ಕೊಳ್ಳುವ ವ್ಯವಹಾರವೆ ಅಧಿಕವಾಗಿ ಪ್ರವೃತ್ತವಾದಲ್ಲಿ, ಇಂಥವರಿಂದ ಲಿಂಗತತ್ವದರಿವು ಹೃದಯದಲ್ಲಿ ಬೆಳಗಬಹುದೆ ? ಹೀಗೆ ಬೇಡುವ ಹೃದಯದಲ್ಲಿ ನಾ ದೇವನಲ್ಲದೆ ನೀ ದೇವನೆ ? ಎಂದು ಪ್ರಶ್ನಿಸುವುದು ಆವಾಗ ? ನೀ ದೇವನಾದಡೆ ಎನ್ನನೇಕೆ ಸಲುಹೆ ಎಂದು ಪ್ರಶ್ನಿಸುವುದು ಆವಾಗ ?

ಲಿಂಗಯ್ಯನ ಪ್ರಶ್ನಿಸಬೇಕಾದರೆ ತಾನು ಮುನ್ನ, ಮುನ್ನವೆ ಇದ್ದ ಘನ ಲಿಂಗದಿರುವು

ತನ್ನೊಳ ಬೆಳಗಿರಬೇಕು, ತಾನು ಕಲ್ಪಿತ ಜ್ಞಾನಕ್ಕೆ ಮೀರಿ ಅಕಲ್ಪಿತ ಘನದಿರುವು ತನ್ನದಾಗಬೇಕು. ಆಗ ಈ ಕಲ್ಪಿತರೂಪಿ ಪೂಜಾಲಿಂಗಯ್ಯನಿಗೆ ಕೇಳುವ ನಿರ್ಭಯ ಹೃದಯವಾಗುವುದು. ಅಚಿಂತ್ಯಾತ್ಮದಿರುವು ಕರಿಗೊಂಡಲ್ಲಿ ಅಲ್ಲಿ ಕಲ್ಪಿತ ಚಿಂತೆಗಳಿಗೆಡೆಯಿಲ್ಲ. ತಾನು ದೇವ, ದೇವನಾಗಿರುವುದರಿಂದ ಭಾವನಾಮಯವಾಗಿಹ ದೇವರುಗಳಿಗೆ ಕರುಣಿಸುವ ಈಶನು ಅಹುದು, ಜಗದಾರಾಧ್ಯನು ಅಹುದು.

ಆರೈದು ಬಂದು ಕೂಡಿತೆ ಉದಕವ ನೆರೆವೆ, ಹಸಿದಾಗ ಒಂದು ತುತ್ತು. ಓಗರನಿಕ್ಕುವೆ ನಾ ದೇವ ಕಾಣಾ ಗುಹೇಶ್ವರಾ ನೀ ದೇವನಾದಡೆ ಎನ್ನನ್ನೇಕೆ ಸಲುಹೆ : ಈ ದೇವ ತನ್ನಷ್ಟಕ್ಕೆ ತಾನು ದೇವನು ಆಗಲು ಬರುವುದಿಲ್ಲ. ನಾನು ದೇವನೆಂದಾಗ ನೀನು ದೇವನಾಗುವಿ. ಆನಾಗಿ ಸತ್ಕಾರ ಮಾಡಿದಾಗ ನಿನ್ನ ಸತ್ಕಾರ ನಿನ್ನನ್ನು ಪತ್ರಿ, ಪುಷ್ಪ, ಧೂಪ, ದೀಪ, ಅರ್ಘ್ಯ ಅಚಮನಗಳಿಂದ ಜಪಸ್ತೋತ್ರಗಳಿಂದ ಪೂಜಾದಿಗಳ ಮಾಡಿದರೆ ಮಾಡಿಸಿಕೊಳ್ಳುವಿ. ನಾ ಪೂಜೆ ಮಾಡದಿದ್ದರೆ ನಿನ್ನ ಪೂಜೆ ಇಲ್ಲ, ಮಂಗಳಾರತಿ ಇಲ್ಲ, ಕಾಯಿ ಕರ್ಪೂರಗಳಿಲ್ಲ. ನನ್ನಿಂದ ಶೋಭೆಯಲ್ಲದೆ, ನಿನ್ನಷ್ಟಕ್ಕೆ ನಿನಗೆ ಶೋಭೆಯು ಬಾರದು. ಇದಲ್ಲದೆ ಶುದ್ಧೋದಕದಿಂದ ಉದಕವನೆರೆದರೆ ಸರಿ, ಇಲ್ಲದಿದ್ದರೆ ಆವ ನೀರೆರೆದರೂ ನೀನು ಮೌನವೆ.

ಹಸಿದಾಗ ಬಂದು ಅನ್ನವನಿಕ್ಕುವೆ ನಾ ದೇವ ಕಾಣಾ : ನೀನಾಗಿ ಜಂಗಮ ರೂಪದಿಂ ಬಂದರೆ ಮಜ್ಜನವೂ ಮಾಡಿಸುವೆ. ಹಸಿದರೆ ಉಣಬಡಿಸುವೆ ನಿನ್ನ ರಕ್ಷಣೆ ಮಾಡುವವ ನಾನಲ್ಲದೆ ನೀನೆನ್ನ ಸಲುಹೆ ಆದ್ದರಿಂದ ನಾನು ನುಡಿಗೆಡೆಗೊಡದ ಘನ, ಅಕ್ಷರಾಕ್ಷರನೆಂಬುದಕ್ಕೂ ತೆರಹಿಲ್ಲದ ಘನ, ಉಪಮೆಗೆ ಮೀರಿದ ದೇವ. ಚಿನ್ಮಯಾನಂದ ಶರಣರ ಹೃದಯದಲ್ಲಿ ಬೆಳಗುವ ಸ್ವಯಂಜ್ಯೋತಿ, ಚಿಜ್ಯೋತಿ ಗುಹೇಶ್ವರನೆಂಬುದು ಶರಣರ ಅರುಹೃದಯದಲ್ಲಿ ಬೆಳಗುವ ಚಿಜ್ಯೋತಿ ಈ ಜ್ಯೋತಿಯು ತೋರಬಾರದ ಘನವು.

**152**

**ನೀ ನಾನೆಂಬ ಭಾವವಾರಿಂದಾಯಿತ್ತು ಹೇಳಾ?**
**ನೀನೆಂಬುದೆ ಅಜ್ಞಾನ, ನಾನೆಂಬುದು ಮಾಯಾಧೀನ.**
**ನೀನೆನ್ನದೆ ನಾನೆನ್ನದೆ ಇಪ್ಪ ಸುಖವ**
**ಭಿನ್ನ ವಿಲ್ಲದೆ ಅರಿಯಬಲ್ಲಡೆ ;**
**ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.** ॥ 561 ॥

**ತಾತ್ಪರ್ಯ :** *ನೀ ನಾನೆಂಬ ಭಾವ ಆರಿಂದಾಯಿತ್ತು ಹೇಳಾ :* ವಾಙ್ಮನಕ್ಕಗೋಚರವಾದ ಪರಬ್ರಹ್ಮದಿಂದಾಯಿತ್ತು ಭಾವ, ಭಾವಕ್ಕಗಮ್ಯವಾಗಿಹ ಪರತತ್ವ ತಿಳಿದವರಿಂದಲೂ ತಿಳಿಯದವರಿಂದಲೂ ನೀನಾನೆಂಬ ಭಾವ ಉಂಟಾಗಿಹವು. ತತ್ವ ತಿಳಿದವರಿಂದ ಬಂದ ಭಾವ ಲೀಲೆಯಾಗಿದೆ. ಭಾವಿಸಿದರೂ ಭಾವಕ್ಕಗಮ್ಯವಾಗಿಯೆ ಇಹರು. ಇವರದು ವಿನೋದವಾಗಿದೆ.

ತತ್ವ ತಿಳಿಯದವರಿಂದ ಉಂಟಾದ ನೀ ನಾನೆಂಬ ಭಾವ, ಭ್ರಾಂತಿಗೂ ತನ್ನ

ಸ್ವರೂಪದ ವಿಸ್ಮೃತಿಗೂ ಕಾರಣವಾಗಿದೆ. ಏಕೆಂದರೆ ಆವರಣ ನಷ್ಟವಾಗದ ಕಾರಣದಿಂದ ನೀ ನಾನೆಂಬ ಭಾವ ಉತ್ಪತ್ತಿಗೆ ಕಾರಣವು ಎಂದು ಹೇಳಿದೆ.

ತತ್ವ ತಿಳಿದ ಮಹಾಪುರುಷರಲ್ಲಿ ನೀನೆಂಬ ಭಾವ ಆರದು ? ನಾನೆಂಬ ಭಾವ ಆರದು ? ನೀನೆಂಬ ಭಾವ ದಾಸೋಹಂಭಾವಿಗದು, ನಾನೆಂಬ ಭಾವ ಅದ್ವೈತಿಗಳದು, ದಾಸೋಹಂ ಭಾವದಲ್ಲಿ ಅಗ್ರಗಣ್ಯನಾದ ಬಸವರಸದು ? ಮರುಳ ತಲೆ, ಹುರುಳು ತಲೆ ನೀನೆ ದೇವಾ, ಹೆಂಗೂಸು ಗಂಡುಗೂಸು ನೀನೆ ದೇವಾ, ಎಮ್ಮಕ್ಕನ ಗಂಡ ನೀನೆ ದೇವಾ, ಕೂಡಲಸಂಗಮದೇವಾ, ಭ್ರಾಂತತಿಳಿದು ಭಾವ ನೆಲೆಗೊಂಡಿತ್ತಾಗಿ ದಣ್ಣಾಯಕರಲ್ಲಿ ನೀನೆಂಬ ಭಾವ ಭರಿತವಾಗಿದೆ. ಕಂಡುದೆಲ್ಲ ನೀನೆಂಬ ಭಾವ. ಕೂಡಲಸಂಗಯ್ಯನೆಂಬ ಭಾವ, ಪೂರ್ಣವಾಗಿದೆ. ಪೂರ್ಣ ಮದಃ ಪೂರ್ಣ ಮಿದಂ ಎಂಬ ಪೂರ್ಣತ್ವದ ಘನತ್ವವೆ ಬೆಳಗುತ್ತಿಹುದಾಗಿದ್ದರೂ ತತ್ವ ತಿಳಿಯದ ಭಾವುಕನಂತೆ ನಟಿಸಿ, ಭಕ್ತಿ ಭಾವದ ಲೀಲೆ ಅವನದಾಗಿತ್ತು. ನಾನೆಂಬ ಚಿದಹಂಭಾವ, ಈ ಭಾವಜ್ಞಾನ ಶಂಕರಾಚಾರ್ಯರು, ವ್ಯಾಸರು, ಗರಗದ ಮಡಿವಾಳೇಶ್ವರರು, ಸಿದ್ಧಾರೂಢರು, ಗುರುನಾಥಾರೂಢರು, ಕಬೀರದಾಸರು ಇವರುಗಳೆಲ್ಲ ಅಹಮಿಲ್ಲದ ಚಿದ್ಘನವ ತಿಳಿದವರು. ತಿಳಿದರೂ ಲೀಲಾಮಯರಾಗಿ ಸಕಲವು ನಾನೆಂದು ಚಿದಾನಂದ ರೂಪಃ ಶಿವೋಹಂ ಶಿವೋಹಂ ಎಂದು ಸಿಂಹಗರ್ಜನೆಯ ಗರ್ಜಿಸಿದರು. ಇದು ಜಗತ್ಕಲ್ಯಾಣದ ಅಭಿನಯ, ನಿರಾಭಾರಿ ಅಭಿನಯ. ಆವಾವ ಅಭಿನಯ ಅಭಿನಯಿಸಿದರೂ ಅದರ ತಾದಾತ್ಮ್ಯಯುಳ್ಳವರಲ್ಲ, ಆರೋಪಿತರಲ್ಲ, ನಾನು ಘನ, ತಾನು ಘನವೆಂಬ ಹಿರಿಯರುಂಟೆ ? ಹಿರಿಯರ ಹಿರಿತನದಿಂದೇನಾಯಿತ್ತು. ಹಿರಿದು ಕಿರಿದು ಎಂಬ ಶಬ್ದವಡಗಿದರೆ ಆತನೆ ಶರಣ ಗುಹೇಶ್ವರಾ. ಇದು ಘನವರಿತು ಎಲ್ಲೆಲ್ಲೂ ತಾನು ಘನ, ನಾನು ಘನ, ಸಕಲವು ಘನವಾಗಿಹ ದಿವ್ಯದೃಷ್ಟಿ. ಮಾನವರಿಗೆಲ್ಲ ಶರಣರು ತಮ್ಮ ಮಹಾನುಭವವ ನೀಡಿಹರು. ಇವರು ತತ್ತ್ವವೇತ್ತರು. ಇವರು ಭಕ್ತರಾದವರಿರಲಿ, ಜಂಗಮವಾದವರಿರಲಿ ಗುರುವಾಗಿರಲಿ, ಅನುಭಾವಿಗಳಾಗಿರಲಿ ಇವರು ಅಭಿನಯವಂತರು. ತತ್ತ್ವದೃಷ್ಟಿಯುಳ್ಳವರಲ್ಲದೆ ಗುಣಯುಕ್ತರಲ್ಲ, ಗುಣಾತೀತರು ನುಡಿದು ನಿಶಬ್ದರು.

ಕೆಲಬರು ಶಬ್ದವೇದಿಗಳು ಭಾವದಿಂದುಕ್ತರು. ಅವರವರ ಭಾವ ಅವರಿಗೆ ದಿಟವಾಗಿದೆ. ಇವರು ನಾನೆಂಬ ಭಾವವುಳ್ಳವರಿರಲಿ, ನೀನೆಂಬ ದಾಸೋಹಂಭಾವಿಗಳೆ ಇರಿಲ, ಅವರಿಗವು ದಿಟವೆನಿಸಿವೆ. ಭಾವುಕರು ಭಾವಕ್ಕಗಮ್ಯವಾಗಿಹ ಘನವ ತಿಳಿಯದವರು ಗುರುಭಾವವಿರಲಿ, ಶಿಷ್ಯಭಾವವಿರಲಿ, ಭಕ್ತ ಜಂಗಮಭಾವವಿರಲಿ, ಅದು ದಿಟವಾದುದರಿಂದ ಇವರಲ್ಲಿ ನೀ ನಾನೆಂಬ ವಿಷಯಭಾವ, ವಿಷಮ ಜ್ಞಾನ, ವಿಷಮ ದೃಷ್ಟಿಯೆ ಸಿದ್ಧವಾದವಲ್ಲದೆ ಸಮತ್ವ ಸಿದ್ಧವಾಗಲಿಲ್ಲ. ಇವರು ನಿರಹಂಭಾವವಾದರೂ ಭ್ರಾಮಕವೆ ? ಸೋಹಂಭಾವವಾದರೂ ಭ್ರಾಮಕವೆ ? ಭ್ರಾಮಕವೆ ಅವರಿಗೆ ಯತಾರ್ಥ ಜ್ಞಾನವಾದಂತಾಗಿದೆ. ಜ್ಞಾನವಿಲ್ಲದೆ ನೀನೆಂಬ ಭಾವವು ಅಜ್ಞಾನವೆ ಆಗಿದೆ. ನಾನೆಂಬುದು ಮಾಯಾಧೀನವಾಗಿದೆ. ಬಸವಾದಿ ಪ್ರಮಥರ ಸಾಂಪ್ರದಾಯದಂತೆ ಕೆಲಬರು ಸಕಲವು ನೀನೆಂಬ ಭಾವದವರು ಇದ್ದಾರೆ ಇತ್ತ ಅದ್ವೈತ ಸಾಂಪ್ರದಾಯದವರು ಇದ್ದಾರೆ. ಇವರು ತತ್ತ್ವ ತಿಳಿಯದವರು ಅದಕ್ಕಾಗಿ ನೀನೆಂಬುದು ಅರಿಯದ ಅಜ್ಞಾನವು ನಾನೆಂಬುದು ಅರಿಯದ್ದರಿಂದ ಮಾಯಾಧೀನವಾಗಿದೆ.

ನೀನೆನ್ನದೆ ನಾನೆನ್ನದೆ ಇಪ್ಪಸುಖವು ಭಿನ್ನವಿಲ್ಲದೆ ಅರಿಯಬಲ್ಲಡೆ ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ. ನೀನೆನ್ನದೆ, ನಾನೆನ್ನದೆ ಇಪ್ಪ ಸುಖ ಸೀಮಾತೀತ ಸುಖ, ಇದು ತಾನಾರೆಂದರಿದ ಅರುವಿನ ಇರುವು ; ನಿಜನಿಲುವು. ಏಕಮೇವಾದ್ವಿತೀಯ ಪರಬ್ರಹ್ಮ ತಿಳಿದವರ ನಿಲವು. ಇದು ಅಖಂಡಿತ ಘನಪೂರ್ಣವಪ್ಪ. ಪರಾತ್ಪರವಾಗಿಹ ತನ್ನಯ ಇರವು. ಇಲ್ಲಿ ನಾನೆಂಬ ದೇಹಭಾವಕ್ಕೂ ಇಂಬಿಲ್ಲ, ಚಿದಹಮ್ಮಿಗೂ ಇಂಬಿಲ್ಲ, ನೀನೆಂಬ ದಾಸೋಹಂ ಭಾವಕ್ಕೂ ಇಂಬಿಲ್ಲ. ನೀನಾನೆಂಬ ಸಂದಳಿದ ಸಯಸುಖ ಇದನ್ನು ಭಿನ್ನವಿಲ್ಲದೆ ಅರಿತರು ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ.

ಸುಖದೇಕರಸವೆಂಬುದು ಭಿನ್ನವಿಲ್ಲದೆ ಅರಿತವರ ಸುಖ. ಅದು ನಿಜ ಸುಖ. ತನ್ನ ತಾನರಿತ ಮಹಾಂತ. ತಿಳಿಸಿಕೊಳ್ಳುವುದೂ ಆಗದವನು ತಿಳಿದವನು ಆಗದವನು. ಮರವು ಆಗದವನು. ಚಿದಹಮ್ಮು ಆಗದವನು. ಇವೆರಡಕ್ಕೂ ಮೀರಿದ ಸಮನಿಲಯ ನಿರಂತರವಾಗಿರುವ ಮಂಗಳಮಯ ತತ್ತ್ವವರಿತ ತತ್ತ್ವವೇತ್ತ ನಾನೆನ್ನದವನು, ನೀನೆನ್ನದವನು ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವು ಎಂದರಿದ ಶಬ್ದಮುಗ್ಧ, ಸುಖರೂಪ ಸುಖಿಗಳು, ಸವೆಯದ ಸುಖಿಗಳು, ಅವರ ದಿವ್ಯದೃಷ್ಟಿಯಲ್ಲಿ ಸಕಲವು ನೀನೆಂಬುದು ; ಅದನ್ನು ನೀನೆನ್ನದ ಅಧಿಷ್ಠಾನವಾಗಿಹ ಘನವೆಂದು ತಿಳಿದು ಏನೆಂದೆನಲಿಲ್ಲದ ಅರಿಯಲಿಲ್ಲದ ಅರುವುಳ್ಳವರಾಗಿ ನಿಶಬ್ಧ ಬ್ರಹ್ಮದ ನಿಲುವಿನಲ್ಲಿ ನಿಂತಿದ್ದಾರೆ.

ಇತ್ತ ನಾನೆಂಬ ಮಯಾಧೀನವಾದ ಚಿದಹಮ್ಮುಳವರಾಗದೆ, ಅದರ ಅಧಿಷ್ಟಾನವಾಗಿಹ ಘನವರಿತು ಅರಿಯದರುವುಳ್ಳರಾಗಿ ನಿಶಬ್ಧಬ್ರಹ್ಮದಲ್ಲಿಯೆ ನಿಂತು ತನ್ನ ನಿಜಸ್ವರೂಪವಾಗಿಹರು. ನಿಜವರಿತವರು. ನೀ ನಾನೆಂಬ ಭಾವ ಭಿನ್ನವಿಲ್ಲದೆ ಅರಿತವರು. ನೀನೆಂಬ ದಾಸೋಹಂ, ತನ್ನ ಸ್ವರೂಪಕ್ಕಿಂತ ಅನ್ಯವಾಗಿಲ್ಲ, ನಾನೆಂಬ ಚಿದಹಮ್ಮು ಅದು ತನಗಿಂತ ಅನ್ಯವಾಗಿಲ್ಲ ತನ್ನದು ನೀ ನಾನೆಂಬ ಸಂದಳಿದ ನಿಸ್ಸೀಮ ಸುಖನಿಲವು. ಇದು ಭಿನ್ವಿಲ್ಲದೆ ಅರುವರಿತ ಅರುವಿನ ಘನವು. ಅದು ಗುಹೇಶ್ವರನ ಬೆಳಗಿನ ಬೆಳಗು. ವಿಕಸಿತವಾದ ಅರುಹೃದಯ, ಇದು ನಿಮ್ಮದು, ನೀವೆಂಬುದಕ್ಕೂ ಸಂದಿಲ್ಲದಿಪ್ಪ. ಘನ ಗಂಭೀರ ಮಹಾಘನ ಇದೂ ಕೂಡಾ ನಿಮ್ಮದೆಂಬುದು ನಿಮಗರ್ಪಿತ ಎಂದು ಹೇಳಿಹರು.

ತತ್ವ ಅತತ್ವವೆಂದು ವಿಭಾಗ ಮಾಡುವ ತತ್ವದರ್ಶಿಗಳು ಬಹು ಪಂಡಿತರು ಆಗಿ ಹೋಗಿಹರು. ಪ್ರಭುವಿನ ದೃಷ್ಟಿಗೂ ವಿಭಾಗ ಮಾಡಿ ನೋಡುವ ದೃಷ್ಟಿಗೂ ಬಹು ಅಂತರವಿದೆ. ಸೀಮಿತರಿಗೂ ನಿಸ್ಸೀಮರಿಗೂ ಬಹು ವ್ಯತ್ಯಾಸ. ಸಾಪೇಕ್ಷವಂತರಿಗೂ ನಿರಪೇಕ್ಷವಂತರಿಗೂ ಬಹು ಅಂತರ.

ಖಂಡಾಖಂಡವೆಂದು ವಿಭಾಗ ಮಾಡುವರಿಗೂ ಖಂಡಾಖಂಡ ಸಂಗಯೋಗವಿಲ್ಲದ ಅಖಂಡಿತ ನಿಲುವುಳ್ಳವರಿಗೂ ಬಹು ಅಂತರವಲ್ಲವೆ ? ಇದು ಕಾರಣ ಶರಣರು ಮುನ್ನ ಮುನ್ನಲಾದವರು. ತಮ್ಮಿಂದ ತಾವಾದವರು. ಇವರ ಸ್ವಾನುಭವರೂಪಿ ಮಹಾನುಭವಕ್ಕೂ ಖಂಡಾಖಂಡವೆಂದು ಸಾಪೇಕ್ಷೆ ಮಾಡುವ ಕಲ್ಪಿತ ದೃಷ್ಟಿಗೂ ಬಹು ಅಂತರವಾಗಿದೆ. ಅದಕ್ಕಾಗಿ ಆವುದು ಕಲ್ಪಿತಮನವೋ ಅದಕ್ಕೆ ಮಹಾಬೋಧವ ನೀಡಿ ಅನುಪಮ ಮಾಡಿ ತೋರಿಸಿದ ಅವರ ಕರುಣಾರಸದ ಘನಾನುಭವದ ವರ್ಣನೆಯು ಆವಾವ ಭಾಷೆಯಿಂದ ವರ್ಣಿಸಲು ಅಸದಳವು.

153

**ಇಪ್ಪತ್ತೈದು ತತ್ತ್ವದ ಹತ್ತೆಂಬ ದ್ವಾರದಲ್ಲಿ ಬಳಲುವ**
**ವ್ಯರ್ಥಗೇಡಿ ಮನವ ನಾನೇನೆಂಬೆನಯ್ಯ?**
**ತನ್ನ ತಾ ತಿಳಿಯಲು ತನಗೆ ತಾನನ್ಯವಿಲ್ಲ ಮರುಳೆ**
**ಮುತ್ತಯ್ಯನ ಬೆಣ್ಣೆಯ,ಶಿಶು ನುಂಗಿತ್ತು.**
**ಮತ್ತೆ ಶಿಶುವಿನ ಸುಖವನೇನೆಂಬೆ ಗುಹೇಶ್ವರಾ?** ॥ 562 ॥

**ತಾತ್ಪರ್ಯ :** ಇಪ್ಪತ್ತೈದು ತತ್ವದ ಹತ್ತೆಂಬ ದ್ವಾರದಲ್ಲಿ ಬಳಲುವ ವ್ಯರ್ಥಗೇಡಿ ಮನವನೇನೆಂಬೆನಯ್ಯ : ಇಪ್ಪತ್ತೈದು ತತ್ವವ ಬಲ್ಲವರಿರುವರು, ಒಂಭತ್ತು ದ್ವಾರವ ಬಲ್ಲವರಿರುವರು. ಹತ್ತೆಂಬ ದ್ವಾರ ಬಲ್ಲವರು ಬಹಳಿಲ್ಲ. ಬಲ್ಲವರಿದ್ದರೂ ಅದನ್ನು ವಿಧ ವಿಧವಾಗಿ ತಿಳಿದಿಹರು. ಯತಾರ್ಥ ತಿಳಿದವರು ವಿರಳ. ಹತ್ತನೆಯ ದ್ವಾರವ ತಿಳಿದು ಅದೆ ದ್ವಾರದಲ್ಲಿದ್ದು ಬಳಲುವುದೆಂದರೆ ಅದು ವ್ಯರ್ಥ ಮನವು. ಅದನೇನೆಂಬೆನಯ್ಯ ಎಂದು ಹೇಳಿಹರು. ಇಲ್ಲಿ

ಮನದ ಪಾತ್ರ ಬಹು ಮುಖ್ಯವಾದುದು. ವಿಷಯಾಸಕ್ತರಾಗಿಹ ಸಂಸಾರಿಗಳಲ್ಲಿ ಇದರ ಪಾತ್ರ ಬಹು ದೊಡ್ಡದಿದೆ ಎನ್ನುವ ಹಾಗಿಲ್ಲ. ಸಕಾಮಿಗಳಲ್ಲಿ ನಿಷ್ಕಾಮಿಗಳಲ್ಲಿ ಯಜ್ಞ ಯಾಗಾದಿಗಳ ಮಾಡುವಲ್ಲಿ ತಪಸ್ವಿ, ತ್ಯಾಗಿ, ಯೋಗಿಗಳಲ್ಲಿ ಗುರು, ಶಿಷ್ಯರಲ್ಲಿ ಜಿಜ್ಞಾಸುಗಳಲ್ಲಿ ಸಾಧಕರಲ್ಲಿ ಸಿದ್ಧರಲ್ಲಿ ಪರಮಾರ್ಥದಲ್ಲಿಯು ಕೂಡ ಇದರ ಪಾತ್ರ ಬಹು ದೊಡ್ಡದಿದೆ. ಈ ಬಳಲುವ ಮನ, ಪೂರ್ವದಲ್ಲಿ ಪಾಂಡವರ ಪತ್ನಿಯಾದ ದ್ರೌಪತಿಗೆ ಮಾನಭಂಗವಾಗುವ ಸಮಯದಲ್ಲಿ ಅಲ್ಲಿರುವ ಸಾತ್ವಿಕ ಮನ, ಸಕಲ ಜೀವ ಗಳದಯ ತೋರುವ ಮನ ಬಹು ಬಳಲಿತು, ಬೆಂಡಾಯಿತು. ಬಹು ಹಾಯ, ಹಾಯಾಗಿ ಶ್ರೀಕೃಷ್ಣ ಪರಮಾತ್ಮನಲ್ಲಿ ಆರ್ತಧ್ವನಿಯಿಂದ ಕೃಷ್ಣಾ ಕೃಷ್ಣಾ ಎಂದು ಕೂಗಿತ್ತು. ಆಗ ಕೃಷ್ಣನ ಕೃಪಾನೇತ್ರದಿಂದ ತನ್ನ ಬಳಲಿಕೆಯ ಕಳೆದುಕೊಂಡಿತ್ತು ಎಂದು ಹಿರಿಯರಿಂದ ಕೇಳಿಬರುತ್ತಿದೆ.

ಹತ್ತನೆಯ ದ್ವಾರ ಸಾಧಿಸಿದ ಹಠಯೋಗಿಗಳಲ್ಲಿ ಪ್ರಸಿದ್ಧರಾದವರು ಪಂತಜಲಿ ಋಷಿ, ರೋಮೇಶ ಮುನಿ, ಇತ್ತಕಡೆ ಪ್ರಸಿದ್ಧ ಪುರುಷರೆಂದರೆ ಚಾಂಗದೇವ, ಅಡಿವೇಶ್ವರ ಸ್ವಾಮಿ, ಕುಂಭಕಯೋಗ ಸಾಧಿಸಿ ಹತ್ತನೆ ದ್ವಾರವಾಗಿಹ ಬ್ರಹ್ಮರಂಧ್ರದಲ್ಲಿ ತಮ್ಮ ಪ್ರಾಣವಿರಿಸಿ, ಚಾಂಗದೇವನು, ಹದಿನಾಲ್ಕು ನೂರು ವರ್ಷ ಬಾಳಿದರೆ ಅಂಕಲಿಮಠದ ಅಡವೀಶ್ವರ ಸ್ವಾಮಿ ಏಳು ನೂರು ವರ್ಷ ಬಾಳಿದರು. ಬಾಳಿದರೂ ಬಳಲುವ ಮನ, ಅದು ನಷ್ಟವಾಗದು. ಮನದ ಬಳಲಿಕೆ ನಷ್ಟವಾಗಬೇಕಾದರೆ ಮನದ ಮೂಲವ ತಿಳಿಯ ಹೋದಾಗ ಮನವೆ ಘನಮನವಾಗುವುದು.

ಎರಡೆಂಭತ್ತು ಕೋಟಿ ವಚನಂಗಳ ಹಾಡಿ ಹಾಡಿ ಸೋತಿತ್ತೆನ್ನ ಮನ, ಮನ ಘನವರಿಯದು ಘನ ಮನವರಿಯದು ಗುಹೇಶ್ವರ ಲಿಂಗವರಿವುಡೆ ಗೀತೆಯೆಲ್ಲ ಒಂದು ಮಾತಿನೊಳಗು ಎಂದು ಪ್ರಭುದೇವರು ಬಿತ್ತರಿಸಿದುದು ನೋಡುವುಡೆ ಎರಡೆಂಭತ್ತು ಕೋಟಿ ವಚನಂಗಳ ಹಾಡಿದರೂ ಬಳಲುವ ಮನವಾಗಿರುವಲ್ಲಿ ಇನ್ನುಳಿದವರ ಪಾಡೇನು.

ಮುಕ್ತಾಯಕ್ಕ ತನ್ನ ಗುರು ಘನವಾಗಿರುವ ಅಜಗಣ್ಣನಿಂದ ತತ್ತ್ವೋಪದೇಶ ಪಡೆದರೂ ಆ ತತ್ವದಿಂದ ತನ್ನ ಗುರುಗಳಾದ ಅಜಗಣ್ಣನ ಶಬ್ದಮುಗ್ಧತ್ವ ಕಂಡರೂ ಈ ಮನಸ್ಸಿಗೆ ನಾನು ಅಜಗಣ್ಣನಂತೆ ಶಬ್ದಮುಗ್ಧ ಆಗಿರುವುದಿಲ್ಲವಲ್ಲ ಎಂದು ಬಳಲುವ ಮನವಾಗಿತ್ತು. ಅಂದಾಗ ಪ್ರಭು ದೇವರು ಹೇಳಿದಂತೆ ಬಳಲುವ ಮನ ವ್ಯರ್ಥಗೇಡಿ ಮನ, ತನ್ನನ್ನು ಹಾಳು ಮಾಡಿಕೊಂಡ ಮನ, ತನ್ನ ತಾ ತಿಳಿಯದ ಮನ, ಇದು ಬಳಲುವ ಮನ, ಇಪ್ಪತ್ತೈದು ತತ್ತ್ವಗಳ ಬಿಡಿ ಬಿಡಿಸಿ ಹೇಳಿದರೂ ಅದಕ್ಕಾದರೂ ಬಳಲುವುದು ಇದ್ದೇ ಇದೆ. ಇತ್ತ ಹತ್ತನೆಯ ದ್ವಾರವಾಗಿರುವ ಬ್ರಹ್ಮರಂಧ್ರದಲ್ಲಿ ಪ್ರಾಣವು ವಾಸಿಸಿ ಬಹುದಿವಸ ಬಾಳಬೇಕೆಂಬ ಹಂಬಲದಿಂದ ಬಳಲುವದಾಗಿದೆ. ಇತ್ತ ಹತ್ತನೆಯ ದ್ವಾರ, ಅದು ತನ್ನ ದ್ವಾರ. ಅರುವಿನ ದ್ವಾರ. ಚೈತನ್ಯ ದ್ವಾರ. ಇದನ್ನು ಅರಿಯ ಹೋಗುವುದು ಆಗ ಹತ್ತನೆಯ ದ್ವಾರದಲ್ಲಿದ್ದು, ಮನವು ಘನವಾಗಿ ಬಳಲುವುದು ಬಿಡುವುದು. ಇದನ್ನು ಬಿಟ್ಟು ತನ್ನ ಪ್ರಾಣ ವಾಯುವನ್ನು ಬ್ರಹ್ಮರಂಧ್ರದಲ್ಲಿರಿಸಿದರೆ, ಮನ ಬಳಲುವುದು ಬಿಡದು. ಬಳಲುವ ಮನಕ್ಕೆ ತನ್ನ ಮೂಲವ ತಿಳಿಯಲು ಹೇಳಬೇಕು.

ಎಲೆ ಮನವೆ ನಿನ್ನ ನಿಜವ ತಿಳಿವುಡೆ ಹೇಳುವೆ ಕೇಳು, ಅದು ಕೇವಲ ಜ್ಯೋತಿ, ವರ್ಣಾತೀತ ಈ ಸಂಜ್ಞೆಯ ನಿನ್ನಲ್ಲಿ ತಿಳಿಯ ಹೋಗು, ಆವಲ್ಲಿ ವರ್ಣನೆಗೆ ನಿಲುಕದ ಜ್ಯೋತಿಯು ತಿಳಿಯುವೆ. ಅದುವೆ ನಿನ್ನ ಪರಿಪೂರ್ಣತ್ವದ ನೆಲೆ ಎಂದು ಅದು ನಿಶ್ಚಿಯಿಸು. ಅಂದಾಗ ಬಳಲುವ ಮನ ಹೋಗಿ, ಅಭವನ ಮನವಾಗುವುದು. ಆಗ ತನ್ನ ತಾ ತಿಳಿಯಲು ತನಗೆ ತಾನನ್ಯವಲ್ಲ ಮರುಳೆ ಎಂದು ಬೋಧಿಸಿದ. ಮನಸ್ಸಿಗೆ ತನ್ನ ತಿಳಿಯಲು ಹೇಳಿ ತನಗೆ ತಾನನ್ಯವಲ್ಲವೆಂದು ಮನಸ್ಸಿಗೆ ಬೋಧಿಸಿದವರೆಂದರೆ ಪ್ರಭುದೇವರು, ಇಪ್ಪತ್ತೈದು ತತ್ವದ ಹತ್ತೆಂಬ ದ್ವಾರವ ಹೊತ್ತುಕೊಂಡು ಬಂದ ಮನದ ಬಳಲಿಕೆ ಕಳೆದವರೆಂದರೆ ಶರಣ ಶರಣೆಯರು. ಮನಸ್ಸಿಗೆ ಶಾಸ್ತ್ರ ಕಲಿಸಲು ಒಪ್ಪಲಿಲ್ಲ, ತನ್ನ ತಾ ತಿಳಿಯಲು ಹೇಳಿದನಲ್ಲದೆ ತಾನನ್ಯವಲ್ಲವೆಂದು ಉತ್ತರವ ಹೇಳಿದುದಲ್ಲದೆ ತನ್ನ ಮನಕ್ಕೆ ತನ್ನ ತಿಳಿಯ ಹಚ್ಚಿ, ಬೇರೊಂದನ್ನು ಕಾಣದಾದ ತನ್ನನ್ನೆ ಕಂಡುದಲ್ಲದೆ

ಮುತ್ತಯ್ಯನ ಬೆಣ್ಣೆ ಶಿಶು ನುಂಗಿತ್ತು ಮತ್ತೆ ಶಿಶುವಿನ ಸುಖವನೇನೆಂಬೆ ಗುಹೇಶ್ವರಾ:

ಮುತ್ತಯ್ಯನ ಬೆಣ್ಣೆ ಶಿಶು ನುಂಗಿದುದು ; ಇದೆಂಥ ಶಿಶು ? ಇವನೆಂಥ ಮುತ್ತಯ್ಯ ? ಇದೆಂಥ ಬೆಣ್ಣೆ, ಮುತ್ತಯ್ಯ ಆರು ? ಮುತ್ತಯ್ಯನ ಬೆಣ್ಣೆ ಆವುದು ? ಶಿಶು ಆವುದು ? ಪ್ರಪಂಚದಲ್ಲಿ ತನ್ನ ತಂದೆಯ ತಂದೆ ಈತನ ಪರಿಚಯ ಮಕ್ಕಳಿಗೆ ಇರುತ್ತದೆ. ತಂದೆಯ ತಂದೆಗೆ ತಂದೆಯಾದವರ ಪರಿಚಯ ಬಹುಜನರಿಗೆ ಕಡಿಮೆ. ಇದ್ದರೂ ಇರಬಹುದು ವಿರಳ. ಹಾಗೆ ಗುರುಗಳ ಗುರುವಿನ ಪರಿಚಯವಿರುತ್ತದೆ. ಗುರುಗಳ ಗುರುಗಳಿಗೆ ಗುರುಗಳಾದವರ ಪರಿಚಯವಿದ್ದವರು ಸಿಕ್ಕುವುದು ವಿರಳ. ಇಲ್ಲಿ ಪ್ರಪಂಚದ ತಂದೆಯವರೆಂದರೆ ಬ್ರಹ್ಮಾದಿಗಳು ಬ್ರಹ್ಮಾದಿಗಳ ತಂದೆಯವರೆಂದರೆ ತತ್ವದ ವಾಚಾರ್ಥನಾಗಿಹ ಈಶ್ವರ, ಸರ್ವಜ್ಞ, ಸರ್ವಶಕ್ತಿ, ಸರ್ವಾಂತರ್ಯಾಮಿ, ಈ ಲಕ್ಷಣವುಳ್ಳ ತಂದೆಯು, ಈ ತಂದೆಯ ತಂದೆ ಅಂದರೆ ಸಚ್ಚಿದಾನಂದ ನಿತ್ಯ ಪರಿಪೂರ್ಣ, ಅಖಂಡ, ಅಸಂಗ, ಅವಿಕಾರ, ಸ್ವಯಂಪ್ರಕಾಶ, ಚೈತನ್ಯನು ನಿರುಪಾಧಿಯು ತಂದೆಯ ತಂದೆಗೆ ತಂದೆಯಾದವರು ಮುತ್ತಯ್ಯ ಅರಿವಿಂಗರುವಾಗಿಹ ಮುತ್ತಯ್ಯನು. ಚೈತನ್ಯಕ್ಕೆ ನಿಜಚೈತನ್ಯನಾಗಿಹ ಮುತ್ತಯ್ಯ

ನಿರ್ನಾಮ ಮುತ್ತಯ್ಯ ನಿರುವಧಿ ಮುತ್ತಯ್ಯ, ನಿರ್ಲಿಖಿತ ಮುತ್ತಯ್ಯ ನುಡಿಗೆಡೆಗೊಡದ ಘನವಾಗಿಹ ಮುತ್ತಯ್ಯ ಮುತ್ತಯ್ಯನಾಗಿಹನೆಂದಿಹರು.

ಮುತ್ತಯ್ಯನ ಬೆಣ್ಣೆ ಆವುದು, ಎಡೆಯಿಲ್ಲದ ಪರಿಪೂರ್ಣವೆ ಮುತ್ತಯ್ಯನ ಬೆಣ್ಣೆ ಮಾತಾಡಲಿಲ್ಲದ ಶಬ್ದವೆ ಮುತ್ತಯ್ಯನ ಬೆಣ್ಣೆ ಹಾಡಲಿಲ್ಲದ ಸ್ವರವೆ ಮುತ್ತಯ್ಯನ ಬೆಣ್ಣೆ ನೋಡಲಿಲ್ಲದ ಶೃಂಗಾರವೆ ಮುತ್ತಯ್ಯನ ಬೆಣ್ಣೆ, ಇಂತಪ್ಪ ಬೆಣ್ಣೆಯ ಶಿಶು ನುಂಗಿತ್ತು.

ನಿಶಬ್ದವೇದವ ನೋಡುವುಡೆ ಶಿಶು ಹಾಡಲಿಲ್ಲದ ಸ್ವರವ ಕಿವಿಯ ಕಿವಿಯಾಗಿ ಕೇಳಿದುದು ಶಿಶು, ಕಣ್ಣಿನ ಕಣ್ಣಾಗಿ ಕಂಡುದು ಇಂತಪ್ಪ ಶಿಶು ಕಾಣದೆ ಕಂಡು ಕೇಳದೆ ಕೇಳಿ ನೋಡದೆ ನೋಡಿ ಅರುವಿನ ಪರಿಮಳವಾಗಿ ಬೆರಸದೆ ಬೆರಿಸಿದುದು, ಇಂತಪ್ಪ ಬೆಣ್ಣೆಯ ಶಿಶು ನುಂಗಿತ್ತು ಎಂದು ಹೇಳಿಹರು. ಮತ್ತೆ ಶಿಶುವಿನ ಸುಖವನೇನೆಂಬೆ ಗುಹೇಶ್ವರ. ಮೌನದ ಮೌನನಾಗಿಹ ಶಿಶು, ಅದು ಮೌನದ ಮೌನನಾಗಿಹ ಮಾನದಲ್ಲಿದ್ದು ಶಿಶುವಿನ ಸುಖವು, ಭಾಷೆಕ್ಕಿಂಬುಗೊಡದ ಸುಖವು, ಏನೆಂಬೇನೆಂಬೆ ಇದು ಮಿಗೆ ಮಿಗೆಯಾಗಿಹ ಸುಖದ ಸುಖವು ಸದ್ದಿಲ್ಲದೆ ಸವಿದುದು. ಏನೆಂಬೆ ಏನೆಂಬೆ ಎಂದು ಹೇಳಿಹನು.

**154**

**ಶಬ್ದ ವೆಂಬೆನೆ? ಶ್ರೋತ್ರದೆಂಜಲು. ಸ್ಪರ್ಶವೆಂಬೆನೆ ತ್ವಕ್ಕಿನೆಂಜಲು.**
**ರೂಪಂಬೆನೆ? ನೇತ್ರದೆಂಜಲು.ರುಚಿಯೆಂಬೆನೆ? ಜಿಂಹ್ವೆಯೆಂಜಲು.**
**ಪರಿಮಳವೆಂಬೆನೆ? ಘ್ರಾಣದೆಂಜಲು. ನಾನೆಂಬೆನೆ ಅರಿವಿನೆಂಜಲು.**
**ಎಂಜಲೆಂಬ ಭಿನ್ನವಳಿದ,ಬೆಳಗಿನೊಳಗಣ ಬೆಳಗು**
**ಗುಹೇಶ್ವರನೆಂಬ ಲಿಂಗವು.** || 563 ||

**ತಾತ್ಪರ್ಯ :** ಏನಾದರೂ ಲಭ್ಯವಾಗಬಹುದು, ಲಿಂಗ, ಜ್ಞಾನ ಲಭ್ಯವಾಗುವುದು ಪುಣ್ಯದ ಪುಣ್ಯವುಳ್ಳವರಿಗೆ ಸಾಧ್ಯವು. ಏಕೆಂದರೆ ಜ್ಞಾನದೊಳಗಣ ಜ್ಞಾನವು ಜ್ಞಾನಕ್ಕೆಡೆಗೊಡದ ಜ್ಞಾನವು. ಅದಕ್ಕಾಗಿ ಪ್ರಭುದೇವ ಎಂಜಲೆಂಬ ಭಿನ್ನವಳಿದ ಬೆಳಗಿನೊಳಗಣ ಬೆಳಗು ಗುಹೇಶ್ವರ ಲಿಂಗವು ಎಂದು ಬಿತ್ತರಿಸಿಹನು. ಈ ಪರಾತ್ಪರ ಜ್ಞಾನ ಅದಾರಿಗೆ ? ಪೂಜಾಲಿಂಗದ ಲಿಂಗವಂತರ ಜ್ಞಾನವಿದು ಎನ್ನಲೆ ? ವೇದವನೋದಿದವರ ಜ್ಞಾನವಿದು ಎನ್ನಲೆ ? ಶಾಸ್ತ್ರವ ನೋದಿದವರ ಜ್ಞಾನವಿದು ಎನ್ನಲೆ ? ಪುರಾಣಂಗಳ ನೋಡಿದವರ ಜ್ಞಾನವಿದು ಎನ್ನಲೆ ?

ವೇದವ ನೋಡುವ ಅಣ್ಣಗಳಿರಾ ನೀವು ಕೇಳಿರೆ ? ವೇದ ವೇಧಿಸಲಿಲ್ಲ, ಶಾಸ್ತ್ರ ಸಾಧಿಸಲಿಲ್ಲ, ಪುರಾಣ ಪೂರೈಸಲಿಲ್ಲ, ಆಗಮಕ್ಕೆ ಆದಿ ಇಲ್ಲ, ಇದು ಕಾರಣ ಇವರು ಆಧ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲ ಬರಿಯ ಹಿರಿಯರು ನೋಡಾ ಕೂಡಲ ಚೆನ್ನಸಂಗಮದೇವಾ. ವೇದವೆ ತಿಳಿಯದಿರುವಲ್ಲಿ ವೇದವೆ ಪ್ರಧಾನವಾಗಿ ಓದಿದವರಿಗದೆಂತು ಸಾಧ್ಯ. ಶಾಸ್ತ್ರಕ್ಕೆ ತಿಳಿಯದಿರುವಲ್ಲಿ ಶಾಸ್ತ್ರವೆ ಘನ ಮಾಡಿದವರಿಗದೆಂತು ಸಾಧ್ಯ. ಇವರಿಗೆ ಅಸಾಧ್ಯವಾಗಿರುವಲ್ಲಿ ಪುರಾಣದವರಿಗೂ ಆಗಮದವರಿಗೂ ಹೇಗೆ ಸಾಧ್ಯ. ಇವರು ಎಂಜಲೆಂಬ ಭಿನ್ನವಳಿದ ಬೆಳಗಿನೊಳಗಣ ಬೆಳಗು ಎಂಬ ಗುಹೇಶ್ವರ ಲಿಂಗವರಿತವರಲ್ಲ.

ಇದು ಕಾರಣ ಇವರು ಎಂಜಲೆಂಬ ಭಿನ್ನವಳಿಯುವುದು ಕಠಿಣವಾಗಿದೆ. ಅದಕ್ಕಾಗಿ

ಶಬ್ದವೆಂಬೆನೆ ಶ್ರೋತೃವಿನ ಎಂಜಲು : ನುಡಿಗೊಳಪಟ್ಟುದೆಲ್ಲವು ಶ್ರೋತೃವಿಗೆ ತಾಕಿ ಎಂಜಲವಾಗಿರುವುದಲ್ಲವೆ ? ಲೋಕದ ನುಡಿಗಳಾಗಲಿ, ವೇದವಾಗಲಿ, ಶಾಸ್ತ್ರವಾಗಲಿ, ಆಗಮಂಗಳಾಗಲಿ, ಪುರಾಣಂಗಳಾಗಲಿ, ನುಡಿಗೊಳಪಟ್ಟವು. ನುಡಿಗೊಳಪಟ್ಟುದು ಅದು ಕಿವಿಗೆ ಕೇಳಿಸುತ್ತವೆ ಎಂದಲ್ಲಿ ಶ್ರೋತೃವಿನ ಎಂಜಲು ಎಂದು ಹೇಳಿಹರು. ಇವರು ಎಂಜಲೆಂಬ ಭಿನ್ನವಳಿಯದವರು. ಏಕೆಂದರೆ ಇವರಿಗೆ ನುಡಿಯುವ ಶಬ್ದವು ಪ್ರಧಾನವು ಕೇಳುವುದು ಪ್ರಧಾನವಾಗಿರುವಲ್ಲಿ ನಿಶಬ್ದವೇದ ಘನವರಿಯದ್ದರಿಂದ ಶ್ರೋತೃವಿನ ಶ್ರೋತೃ ಇವರದಾಗಲಿಲ್ಲ. ಅದಕ್ಕಾಗಿ ಇವರು ಎಂಜಲುಳ್ಳವರು ಎಂದು ಹೇಳಿದೆ.

ಸ್ಪರ್ಶವೆಂಬೆನೆ ತ್ವಕ್ಕಿನ ಎಂಜಲು : ಮುಟ್ಟುವುದು ಆವುದು ಅದು ತ್ವಕ್ಕಿನ ಎಂಜಲು, ತ್ವಕ್ಕನ್ನು ಮುಟ್ಟುವುದು ಆವುದು ಅದು ಸ್ಪರ್ಶವಾಗಿದೆ. ಸ್ಪರ್ಶಕ್ಕೆ ತ್ವಕ್ಕು ಪ್ರಧಾನವಾಗಿದೆ. ತ್ವಕ್ಕಿಗೆ ಸ್ಪರ್ಶವು ಪ್ರಧಾನವಾಗಿದೆ. ಸ್ಪರ್ಶವು ತ್ವಕ್ಕನ್ನು ಮುಟ್ಟಿತೋ, ತ್ವಕ್ಕನ್ನು ಸ್ಪರ್ಶ ಮುಟ್ಟಿತೊ, ಅದಾರು ನಿರ್ಣಯಿಸುವುದು. ಇವು ಎರಡು ಇದ್ದಲ್ಲಿ ಮುಟ್ಟಿಸಿಕೊಳ್ಳುವ ತ್ವಕ್ಕು, ಮುಟ್ಟುವ ಸ್ಪರ್ಶ ಸಿದ್ಧವಾಗುವುದು. ಇಲ್ಲಿ ಭಿನ್ನತ್ವವಿದೆ. ಭಿನ್ನತ್ವವಿದ್ದಲ್ಲಿ ಎಂಜಲು ಸ್ವಭಾವ ಸಿದ್ಧವು. ಆವಲ್ಲಿ ಭಿನ್ನವಳಿದ ಸಂಕೇತವು ಅಲ್ಲಿ ಎಂಜಲೆಂಬ ಸೂತಕವಳಿದ ಚಿನ್ಹವು. ಈ ಸೂತಕವಳಿಯಬೇಕಾದರೆ ಸ್ಪರ್ಶದ ಸ್ಪರ್ಶವಾಗುವುದು. ತ್ವಕ್ಕಿನ ತ್ವಕ್ಕಾಗುವುದು. ಆಗ ಅಲ್ಲಿ ಸ್ಪರ್ಶವೆಂಬುದಿಲ್ಲ, ತ್ವಕ್ಕುವೆಂಬುದಿಲ್ಲ. ಇವೆರಡು ಇಲ್ಲವಾದುದರಿಂದ ಭಿನ್ನವಳಿದ ಸಂಕೇತವು. ಅದು ಮಿಗೆ ಮಿಗೆ ಮೀಸಲವಾಗಿಹದಿರುವಿನ ಅರುವುಳ್ಳವರು. ಇದು ಪರಾತ್ಪರ ಜ್ಞಾನವು. ಅತೀಂದ್ರಿಯ ಜ್ಞಾನವು. ಗಗನಸದೃಶವಾಗಿಹ ಜ್ಞಾನದ ಜ್ಞಾನವಾಗಿರುವುದರಿಂದ ಜ್ಞಾನಾಮೃತವು ಎಂದು ಹೇಳಿದೆ.

ರೂಪವೆಂಬೆನೆ ನೇತ್ರದೆಂಜಲು : ರೂಪವಾವುದು, ಅದು ನೇತ್ರದೆಂಜಲು ಆಗಿಹುದು. ಚರಾಚರ ಜಗವು ರೂಪವಾಗಿಹುದು. ಅದು ನೇತ್ರದೆಂಜಲು ಆಗಿಹುದು. ನರರು ಸುರಾಸುರರು ಪಿಂಡವೆಂಬ ಭಾಂಡದಲ್ಲಿ ಅಡಗಿಹರಾದುದರಿಂದ ಇವರದು ನೇತ್ರದೆಂಜಲು ಆಗಿಹುದು. ದೇವಗಣ, ರುದ್ರಗಣ, ಪ್ರಮಥಗಣ ಮೊದಲಾದವರು ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾದುದರಿಂದ ಇವರದು ನೇತ್ರದೆಂಜಲು ಆಗಿಹುದು. ಇದಲ್ಲದೆ ಸುಪ್ರಸಿದ್ಧವಾದ ಹನ್ನೆರಡು ಕ್ಷೇತ್ರಗಳಲ್ಲಿರುವ ಶಿವಲಿಂಗಗಳು ಕುರುಹಾಗಿ ಕಾಣಿಸಿಕೊಂಡುದರಿಂದ ಈ ರೀತಿ ಹೆಸರಿವೆ. ಸೌರಾಷ್ಟ್ರ ಸೋಮೇಶ್ವರ, ಶ್ರೀಶೈಲ ಮಲ್ಲಿಕಾರ್ಜುನ, ಉಜ್ಜಯನಿಯ ಮಹಾಕಾಲೇಶ್ವರ, ಓಂಕಾರದ ಅಮಲೇಶ್ವರ, ಪರಳಿಯ ವೈಜನಾಥ, ಡಾಕಿನಿಯ ಭೀಮಾಶಂಕರ, ಸೇತು ಬಂಧದ ರಾಮೇಶ್ವರ, ದಾರುಕ ವನದ ನಾಗೇಶ್ವರ, ವಾರಣಾಸಿಯ ವಿಶ್ವೇಶ್ವರ. ನಾಸಿಕದ ತ್ರ್ಯಯಂಬಕೇಶ್ವರ, ಹಿಮಾಲಯದ ಕೇದಾರೇಶ್ವರ, ಶಿವಾಲಯದ ಘುಸಣೇಶ್ವರ ಇವು ದ್ವಾದಶ ಜ್ಯೋತಿರ್ಲಿಂಗಗಳು. ಈ ಜ್ಯೋತಿರ್ಲಿಂಗಗಳು ಕುರುಹಾಗಿ ಕಾಣಿಸುವುದರಿಂದ ನೇತ್ರದೆಂಜಲು ನಾಮದಿಂದುಕ್ತವಾಗಿರುವುದರಿಂದ ಶ್ರೋತೃವಿನ ಎಂಜಲು ಮುಟ್ಟಿಸಿಕೊಳ್ಳುವುದರಿಂದ ತ್ವಕ್ಕಿನ ಎಂಜಲು ಎಂದು ಹೇಳಿದೆ.

ರೂಪವೆಂಬೆನೆ ನೇತ್ರದೆಂಜಲು : ಕರಕಮಲದಲ್ಲಿ ಬೆಳಗುವುದಕ್ಕೆ ಲಿಂಗವೆಂದರೆ ಅದು ಪೂಜಾಲಿಂಗವಾಗಿದೆ. ಲಿಂಗಪೂಜಕರು ನೋಡಿ ನೋಡಿ ನೇತ್ರದೆಂಜಲಾಗಿಹುದು.

ನೋಟಕ್ಕೊಳಪಡದ ಲಿಂಗವು ರೂಪವಾಗದು. ರೂಪವಾಗದ ಲಿಂಗ ಅದು ಹೇಗೆ ನೇತ್ರದೆಂಜಲು ಆಗುವುದು ? ಅದು ನಿರೂಪಲಿಂಗ, ರೂಪವನೆ ಕಂಡು ನಿರೂಪನೆ ಕಾಣರು, ಅನುವನೆ ಕಂಡು ತನುವ ಕಾಣರು, ಆಚಾರವನೆ ಕಂಡು ವಿಚಾರವನೆ ಕಾಣರು, ಗುಹೇಶ್ವರ ನಿಮ್ಮ ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು. ಲಿಂಗದ ಜ್ಞಾನವಿಲ್ಲದವರು ಕುರುಹಾಗಿ ಕಂಡು ನೇತ್ರದೆಂಜಲಾಯಿತ್ತು. ಪ್ರಭು ಲಿಂಗವಾಗಿಹ ಘನಲಿಂಗಿಗೆ ರೂಪವನೆಂತು ಕಾಣುವನು. ಲಿಂಗಸ್ವರೂಪ ಕಡವಂಗೆ ತನುವ ಹೇಗೆ ಕಾಣುವುದು. ನಿಷ್ಕಳಂಕದ ಘನವರಿತವನಿಗೆ ಆಚಾರವು ಘನವಾಗಿ ಹೇಗೆ ತೋರುವುದು. ಗುಹೇಶ್ವರ ಲಿಂಗ ಗುರುಕಾರುಣ್ಯದಿಂದ ಕರಕಮಲದಲ್ಲಿ ಪ್ರಜ್ವಲಿಸಿದರೂ ಅದನರಿಯದೆ ಕೆಟ್ಟರು ಎಂದು ಹೇಳಿಹರು.

ರುಚಿಯೆಂಬೆನೆ ಜಿಂಹ್ವೆಯೆಂಜಲು : ರುಚಿಯೆಂದಾಕ್ಷಣ ಕೆಲಬರು ಪಂಚ ಪಕ್ವಾನ್ನಗಳಿಂದ ಮಾಡಿದ ಪದಾರ್ಥವೆಂದು ತಿಳಿದಿಹರು. ಆಕಳ ಹಾಲು, ಆಕಳ ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಗೋಧಿಯ ಹಿಟ್ಟು, ದ್ರಾಕ್ಷಿ, ಗೋಡಂಬಿ, ಬಾದಾಮಿಯ ಹಾಲು ಹಾಕಿ ಒಳ್ಳೆ ರುಚಿಯಾಗುವಂತೆ ಮಾಡಿದ ಪಂಚಾಮೃತವು ಅದು ಜಿಹ್ವೆಯ ಎಂಜಲು ಆಗಿದೆ. ಇಲ್ಲಿ ಜಿಹ್ವೆಯು ಇದೆ. ಪಂಚ ಪಕ್ವಾನ್ನವು ಇದೆ. ಇದು ಎರಡಳಿದುದು ಹೇಗಾಗುವುದು. ಆವಲ್ಲಿ ಎರಡು ಕಾಣಿಸುತ್ತವೆ. ಅಲ್ಲಿ ಭಿನ್ನವಳಿದ ಸಂಕೇತವಲ್ಲ, ಆವುದು ಭಿನ್ನತ್ವದಿಂದುಕ್ತವಾಗಿದೆ ಅಲ್ಲಿ ಜಿಂಹ್ವೆಯೆಂಜಲು ಸಿದ್ಧವಾಗುವುದು.

ರುಚಿ ಆವುದು ಗೊತ್ತೆ ? ರುಚಿಯ ರುಚಿಯು ನಿಜವಾದ ರುಚಿಯು. ಅದು ಚಿದ್ರಸವು, ಜ್ಞಾನಾಮೃತವು. ಇದು ಅತೀಂದ್ರಿಯಾಗಿಹ ಜ್ಞಾನ ವಿದ್ಯೆಯಿಂದ ಲಭ್ಯವಾಗುವ ಚಿದ್ರಸವು. ಜ್ಞಾನಾನಂದವು ಜಿಹ್ವೆ ಎಂಜಲು ಹೇಗಾಗುವುದು. ಆವಲ್ಲಿ ಜಿಹ್ವೆಯ ಜಿಂಹ್ವೆಯಾಗಿಹುದು, ಮಾತಾಡದ ಬೋಧವು. ಕೊನೆ ಮೊದಲಿಲ್ಲದ ಬೋಧವು. ಅದು ಮಾತಾಡಿದುದು ಹೇಗೆ. ಅದು ಕಾಣಿಸುವ ಜಿಂಹ್ವೆಯಾದುದು ಹೇಗೆ ? ಇದು ಅರು ಹೃದಯದಿಂದ ಹೊರ ಹೊಮ್ಮಿದ ಚಿದ್ರಸ, ಮೌನದ ಮೌನವಾಗಿ ಉಣ್ಣದ ಊಟ ಉಂಡ ಘನ ರುಚಿಯು ಅದು ಎಂಜಲಕ್ಕೊಳಪಡಬಹುದೆ ? ಇದು ಎಂಜಲೆಂಬ ಭಿನ್ನವಳಿದ ಬೆಳಗಿನೊಳಗಣ ಬೆಳಗು ಆದ್ದರಿಂದ ಇದು ಮಿಗೆ ಮಿಗೆ ಮೀಸಲು ಆದುದಾಗಿದೆ.

ಪರಿಮಳವೆಂಬೆನೆ ಘ್ರಾಣದೆಂಜಲು : ಲಿಂಗ ಜ್ಞಾನವು ಘಮಿ ಘಮಿಸುವುದಾದರೂ, ಲಿಂಗಯ್ಯನು ಘಮಿ ಘಮಿಸುವನು. ಕೆಲವು ಅರ್ಚಕರು, ಪೂಜಾಲಿಂಗಕ್ಕೆ ಸುಗಂಧವ ಲೇಪಿಸುವರು. ಈ ಸುಗಂಧ ಲೇಪನದಿಂದ ಲಿಂಗವ ಘಮಿ ಘಮಿಸುವುದು. ಈ ಸುಗಂಧವೆ ದೇವರಾದರೆ ಅದು ಘ್ರಾಣದೆಂಜಲು ಆಗುವುದು. ಪರಿಮಳವದು ಅರುವಿನ ಪರಿಮಳ. ಈ ಪರಿಮಳಕ್ಕೆ ಘ್ರಾಣದ ಘ್ರಾಣವು ಪ್ರಧಾನವಾಗಿದೆ. ಅರುವಿನ ಪರಿಮಳವು ಹೃದಯಕ್ಕೆ ವೇದ್ಯವು. ಘ್ರಾಣದ ಘ್ರಾಣವು ಹೃದಯಕ್ಕೆ ವೇದ್ಯವು. ಇಲ್ಲಿ ಅರುಹೃದಯದ ವಿಷಯ ಹೇಳಿರುವುದಲ್ಲದೆ ಹೃದಯದ ಸುದ್ದಿ ಹೇಳಲಿಲ್ಲ, ಇದು ಹೃದಯದ ಹೃದಯವಾಗಿಹ ಘನದಿರುವಿನ ಅರುವು. ಅದಕ್ಕಾಗಿ ಅರುಹೃದಯವೆಂದು ಹೇಳಿದೆ. ಇಂತಪ್ಪ ಗುಹ್ಯಾತಿ ಗುಹ್ಯವಾಗಿರುವ ಪರಿಮಳವ ಈ ಘ್ರಾಣವು ಹೇಗೆ ಎಂಜಲು ಮಾಡುವುದು ಇದು ಮಿಗೆ ಮಿಗೆ ಮೀಸಲವಾಗಿಹ ಪರಿಮಳ. ಹೃದಯದ ಹೃದಯವಾಗಿಹ ಘ್ರಾಣದ ಘ್ರಾಣ, ಮಿಗೆ

ಮಿಗೆ ಮೀಸಲವಾದ್ದರಿಂದ ಎಂಜಲವಾಗದು.

ನಾನೆಂಬೆನೆ ಅರುವಿನ ಎಂಜಲು : ಲಿಂಗ ನಾನೆನ್ನುವವರೆಲ್ಲ ಅರುವಿನ ಎಂಜಲದವರು. ಇವರು ಚಿದಹಮ್ಮುಳ್ಳ ಅರುವುಳ್ಳವರು. ತತ್ವಮಸಿ, ಅಯಾಮಾತ್ಮ ಬ್ರಹ್ಮ ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ ಸಚ್ಚಿದಾನಂದರೂಪಃ ಶಿವೋಹಂ ಎನ್ನುವರು ಇವರು ಅರುವಿನ ಎಂಜಲದವರು. ಇವರಿಗೆ ಎಂಜಲ ಜ್ಞಾನವಾಗಿಹುದಲ್ಲದೆ ಅಂದರೆ ಭಿನ್ನ ಸೂತಕವಳಿದ ಜ್ಞಾನವಾಗಿರುವುದಿಲ್ಲ. ಜ್ಞಾನವಾದರೆ ಭಿನ್ನ ಸೂತಕವಳಿದ ಜ್ಞಾನವಾಗಬೇಕು. ಅದುವೆ ಬೆಳಗಿನೊಳಗಣ ಬೆಳಗು ಗುಹೇಶ್ವರ ಲಿಂಗವಾಗುವುದು.

ಅರಿದೆವರಿದೆವೆಂಬಿರಿ ಅರಿದ ಪರಿ ಎಂತು ಹೇಳಿರೆ ? ಅರಿದವರು ಅರಿದೆವೆಂಬರೆ ? ಅರಿಯಬಾರದ ಘನವನರಿದವರು ಅರಿಯದಂತಿಪ್ಪರು ಗುಹೇಶ್ವರಾ. ಅರಿಯಬಾರದ ಘನವರಿತವರು ನಾಹಂ ಎನ್ನುವವರಲ್ಲ, ಕೋಹಂ ಎನ್ನುವವರಲ್ಲ, ಸೋಹಂ ಎನ್ನುವವರಲ್ಲ, ಚಿದಹಮ್ಮಿಗಳಲ್ಲ, ದಾಸೋಹಿ ಭಾವಿಗಳಲ್ಲ, ಇವುಗಳಿಗೆಲ್ಲ ಮೀರಿದ ಘನವೆ ಅರಿಯಬಾರದ ಘನವರಿತವರು. ಅವರು ಕಲ್ಪಿತನ ಅರುವಿಂಗೆ ಒಳಪಡಬಹುದೆ ? ಇದು ಕಾರಣ ಕಲ್ಪಿತ ಜ್ಞಾನವುಳ್ಳವರೆಲ್ಲ ಅರುವಿನೆಂಜಲು ಎಂದು ಹೇಳಿಹರು.

ಎಂಜಲೆಂಬ ಭಿನ್ನವಳಿದ ಬೆಳಗಿನೊಳಗಣ ಬೆಳಗು ಗುಹೇಶ್ವರ ಲಿಂಗವು: ಎಲ್ಲಿಯವರೆಗೆ ಕಲ್ಪಿತ ಜ್ಞಾನದಿಂದುಕ್ತವಾಗಿದೆ ಅದು ಎಂಜಲು ಆಗಿದೆ. ಸೀಮಿತವೆಲ್ಲ ಎಂಜಲೊಳಗೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು. ಇದು ಎಂಜಲೆಂಬ ಭಿನ್ನವಳಿದುದು. ಬೆಳಗಿನೊಳಗಣ ಬೆಳಗು ತಾನೆ ತಿಳಿಯಬೇಕೆಂದಲ್ಲಿ ತನ್ನಲ್ಲಿಯಲ್ಲದೆ ಮತ್ತೆಲ್ಲಿಯೂ ಇಲ್ಲ. ತನ್ನನ್ನು ಯತಾರ್ಥವಾಗಿ ಅರಿವುಡೆ ಬೆಳಗಿನೊಳಗಣ ಬೆಳಗು ಗುಹೇಶ್ವರ ಲಿಂಗವು ತಾನೆ ಎಂದು ಹೇಳಿಹರು.

**155**

**ಹಸಿವರಿತಲ್ಲದೆ ಪ್ರಸಾದಿಯಲ್ಲ .**
**ತೃಷೆಯರತಲ್ಲದೆ ಪಾದೋದಕಿಯಲ್ಲ,**
**ನಿದ್ರೆಯರತಲ್ಲದೆ ಭವವಿರಹಿತನಲ್ಲ,**
**ಅನಲ-ಪವನವರತಲ್ಲದೆ ಪ್ರಾಣಲಿಂಗಿಯಲ್ಲ.-**
**ಇದು ಕಾರಣ,ಗುಹೇಶ್ವರಲಿಂಗವು ಎಲ್ಲರಿಗೆಲ್ಲಿಯದೊ?** ॥ 564 ॥

**ತಾತ್ಪರ್ಯ :** ಹಸಿವರಿತಲ್ಲದೆ ಪ್ರಸಾದಿಯಲ್ಲ : ಹಸಿವು ಎಂದರೆ ಮೂಲ ಹಸಿವು. ಸಕಲದರ ಮೂಲವಾಗಿಹ ಹಸಿವು. ಇದು ತನ್ನ ಹಸಿವು. ಈ ಹಸಿವು ಆದವರು ಸಿಕ್ಕುವುದು ವಿರಳ. ತನಗಿಂತನ್ಯದ ಹಸಿವುಳ್ಳವರು ಸಿಕ್ಕಬಹುದು. ಸಕಲ ಜೀವರುಗಳು ತನಗಿಂತನ್ಯದ ಹಸಿವರಿತೆ ಅನ್ನಕ್ಕಾಗಿ ಅಲೆದಾಡುವರು. ಇದು ತನ್ನ ಹಸಿವು ಅಲ್ಲ, ವೈಶ್ವಾನರ ಹಸಿವು. ಈ ವೈಶ್ವಾನರ ಹಸಿವರಿತವರು ಇವರು ಅನ್ನದ ಮಕ್ಕಳು. ಅನ್ನಕ್ಕಾಗಿ ಹುಟ್ಟಿದವರು. ಅನ್ನದಿಂದ ಬೆಳೆದವರು. ಅನ್ನವಿಲ್ಲದೆ ಮೃತ್ಯುರೂಪರು.

ಇಂದ್ರಿಯಂಗಳ ಹಸಿವುಳ್ಳವರು ಬಹುವಾಗಿ ಇಹರು. ಇಂದ್ರಿಯಂಗಳ

ತೃಪ್ತಿಯಗೋಸ್ಕರ ಗೃಹಸ್ಥ ಧರ್ಮವ ಸ್ವೀಕರಿಸುವರು. ಅಲ್ಲಿ ಇಂದ್ರಿಯ ಜನ್ಯವಿಷಯಯೋಪಬೋಗದ ಸಲುವಾಗಿ ಸತಿ, ಪತಿ, ಸುತ, ಧನ, ಕನಕ, ಸ್ವೀಕರಿಸಿದವರು ಇವರು ಪರಮಜ್ಞಾನದ ಹಸಿವುಳ್ಳವರೆನಬೇಕೆ ? ಎನಲಾಗದು. ಇತ್ತ ಫಲದೇಚ್ಛೆಯು ಗುರಿಯನಿಟ್ಟುಕೊಂಡು ವಿರತಿಯಾಗಿ ವೇದಾಧ್ಯಯನ ಪಾಠ ಪಾರಾಯಣದಲ್ಲಿ ನಿಷ್ಣಾತನಾಗಿ ಲೋಕ ಮೆಚ್ಚುಗೆಯ ಪಡೆದು ನೈಷ್ಠಿಕ ಬ್ರಹ್ಮಚರ್ಯವಂತ ತ್ರಿವೇದಿಯು ಎನಿಸಿಕೊಂಡರೂ ಇವರು ಮೂಲದ ಹಸಿವರಿತವರೆ, ಇಂತಪ್ಪ ಬಹಿರ್ಮುಖರು ಪರಮ ಜ್ಞಾನದ ಹಸಿವುಳ್ಳವರಾಗಬಹುದೆ ? ಉಪನಿಷದ ಆಗಮಗಳ ಅಧ್ಯಯನ ಮಾಡಿ ತತ್ವಮಸಿ ಮಹಾಕಾವ್ಯವ ಹೇಳಿದರೂ ತನ್ನ ಮೂಲ ಹಸಿವು ಆಗಿರುವುದೆ ? ಆತನು ಶಬ್ದವೇದಿಯಾಗಿಹನಲ್ಲದೆ ಗುಹೇಶ್ವರ ಲಿಂಗದಿರುವಿನ ಹಸಿವು ಆಗಿದೆಯಾ ? ಸತ್‌ಗುರುವಿನ ಕಾರುಣ್ಯವ ಸತ್ತುಕೊಂಬ ಶಿಷ್ಯಂಗೆ ಭಕ್ತಿ ವಿಸ್ತರಿಸುವುದು ಎಂದಂತೆ ತನ್ನ ಹಸಿವು ಎಂಬುದು ಲಿಂಗಜ್ಞಾನದ ಹಸಿವು. ಈ ಹಸಿವರಿತಲ್ಲದೆ ಪ್ರಸಾದಿಯಲ್ಲ.

ಹಸಿವರಿತಲ್ಲದೆ ಪ್ರಸಾದಿಯಲ್ಲ, ಇವರು ಅರುವರಿಯುವ ಹಸಿವುಳ್ಳವರು. ಅಕ್ಷರಾಕ್ಷರಕ್ಕೆ ಮೀರಿದ ಘನದ ಹಸಿವುಳ್ಳವರು. ಈ ಹಸಿವುಳ್ಳವರೆಂದರೆ ಬಸವಾದಿ ಪ್ರಮಥರು. ನಿಶಬ್ದವೇದಿಗಳು, ಇವರು ಅರುವರಿಯದ ಹಸಿವುಳ್ಳವರು. ಇವರು ನಿಜವಾದ ಹಸಿವರಿತವರಾದುದರಿಂದ ಸತ್ತ ಗುರುವಿನ ಕಾರುಣ್ಯವ ಸತ್ತು ಕೊಂಬ ಶಿಷ್ಯರಾದುದರಿಂದ ಮುನ್ನ ಮುನ್ನಲಾದ ತಮ್ಮಿಂದ ತಾವಾದ ಸ್ವಮಹಿಮವ ಬಲ್ಲವರಾದುದು.

ಹಸಿವರಿತ ಪ್ರಸಾದವೆಂಬುದು ಗುರುಶಿಷ್ಯರ ಮಧ್ಯದಲ್ಲಿದ್ದ ಸ್ವಯಂಜ್ಯೋತಿ. ಅದು ಗುರುಶಿಷ್ಯರಾಗದ ಘನಜ್ಯೋತಿ. ಈ ಸ್ವಯಂಜ್ಯೋತಿಯು ವಾಙ್ಮನೋತೀತವು. ಪರಮಾಮೃತವು ಪರಮಜ್ಞಾನವು. ಇದು ತನ್ನಿಂದ ತಾನರಿವುದು.

ತೃಷೆ ಅರಿತಲ್ಲದೆ ಪಾದೋದಕಿಯಲ್ಲ, ತೃಷೆ ? ಅದಾವ ತೃಷೆ, ಅದಾವ ದಾಹ ? ಹೊನ್ನಿನ ದಾಹ, ಮಣ್ಣಿನ ದಾಹ, ಹೆಣ್ಣಿನ ದಾಹ, ಹಿರಿದಿಪ್ಪ ರಾಜ್ಯದ ದಾಹ ಇದಾದ ನಂತರ ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿ, ನಾನಾ ಪದವಿಗಳ ದಾಹವಿದ್ದವರು ಸಿಕ್ಕುವರು. ಕರಿಯನಿತ್ತಡೊಲ್ಲೆ ಹಿರಿದಿಪ್ಪ ರಾಜ್ಯವನಿತ್ತಡೊಲ್ಲೆ ಬ್ರಹ್ಮಪದವಿ, ವಿಷ್ಣುಪದವಿ. ರುದ್ರಪದವಿ, ನಾನಾ ಪದವಿಯನೊಲ್ಲೆ ಶರಣರ ಸೂಳ್ನುಡಿ ಇತ್ತಡೆ ನಿಮ್ಮನಿತ್ತಂತೆ ಕಾಣಾ ರಾಮಾನಾಥ ಎಂಬ ಶರಣರ ಸದು ಹೃದಯ ಸಿಕ್ಕುವುದು ವಿರಳ. ಬೇಕೆನ್ನುವವರು ಸಿಕ್ಕುವರು, ಬೇಡವೆನ್ನುವ ತೃಷೆವುಳ್ಳವರು ಸಿಕ್ಕುವರು. ಶರಣರ ಸ್ವಾನುಭವದ ದಾಹವುಳ್ಳವರು ಸಿಕ್ಕುವುದು ವಿರಳ.

ತೃಷೆಯ ಅರಿತಲ್ಲದೆ ಪಾದೋದಕಿಯಲ್ಲ. : ಬಹಿರ್ ಪಾದೋದಕ ಪ್ರೇಮಿಗಳು ಹಸಿವುಳ್ಳವರು ಸಿಕ್ಕುವರು. ಘನ ಚೈತನ್ಯರೂಪಿ ಜಂಗಮನ ಸ್ವಾನುಭವರೂಪಿ ಪಾದೋದಕದ ಹಸಿವುಳ್ಳವರು ಸಿಕ್ಕುವುದು ವಿರಳ.

ನಿತ್ಯವೆಂಬ ಭಕ್ತನ ಮನೆಗೆ ಘನ ಚೈತನ್ಯವೆಂಬ ಜಂಗಮ ಬಂದರೆ ಜಲವಿಲ್ಲದ ಜಲದಲ್ಲಿ ಪಾದೋದಕ ಮಾಡಿದಂತಾಯಿತ್ತಯ್ಯ. ಆ ಪಾದೋದಕವೆ ಮಹಾಪಾದೋದಕ ಸ್ವಚ್ಛಾನಂದ, ಜಲಂಪೀತ್ವಾ, ಪುನರ್ಜನ್ಮ ನ ಸಂಶಯಃ ಎಂದು ಬಿತ್ತರಿಸಿದಂತೆ. ಭಕ್ತರಾದವರು ಪುರುಷಾರ್ಥ ಜ್ಞಾನಿಗಳು ಸಿಕ್ಕುವರು. ಪರಮ ಪುರುಷಾರ್ಥ ಜ್ಞಾನಿಗಳು ಸಿಕ್ಕುವುದು ವಿರಳ.

ಇಂತಪ್ಪ ನಿತ್ಯವೆಂಬ ಭಕ್ತನ ಮನೆಗೆ ಅನುಪಮ ಜ್ಞಾನಿಯ ಘನ ಚೈತನ್ಯ ಜಂಗಮು. ಆತನೆ ನಿರಾಭಾರಿ ಜಂಗಮು, ನಿರ್ದೇಹಿ ಜಂಗಮು, ನಿರ್ಲಿಖಿತ ಜಂಗಮು, ಇಂತಪ್ಪ ಮಹಾನುಭವಿಗಳ ಸ್ವಾನುಭವವೆ ಪಾದೋದಕವಾಗಿದೆ. ಜಲವಿಲ್ಲದ ಜಲವದು, ಚಿದ್ರಸವು ಜ್ಞಾನಾನಂದವು. ಏಕೆಂದರೆ ಪಾಕಾರಂ ಪಾವನಂ ಜ್ಞಾನಂ, ದೋಕಾರಂ, ದೋಷನಾಶಂ, ದ ಕಾರಂ, ದಯಾಕಾರಂ, ಕ ಕಾರಂ, ಕರ್ಮನಾಶಂ ಎಂದುದಾಗಿ ಪಾದೋದಕವೆಂಬುದು ಪರಮಾತ್ಮನ ಚಿದ್ರೂಪ ನೋಡಾ. ಅದು ಚಿದ್ರಸವು ಅಖಂಡಾನಂದವು ಎಂದು ಹೇಳಿದೆ. ಇದು ತನ್ನೊಳ ಪ್ರಕಟವಾದುದೆ ಪಾದೋದಕವು ಆಗಿಹುದು.

ನಿದ್ರೆಯರಿತಲ್ಲದೆ ಭವವಿರಹಿತನಲ್ಲ : ಭವವಿರಹಿತನಾದಲ್ಲಿ ನಿದ್ರೆಯ ಅರಿಯ ಬೇಕು. ಅದಾವ ನಿದ್ರೆ ಸುಖದೇಕರಸವಾದ ತನ್ನ ನಿದ್ದೆ. ಇದು ಸ್ವಸುಖದಲ್ಲಿ ಲೀಯವಾದ ನಿದ್ದೆ. ಆಗ ಭವ ವಿರಹಿತನು ತಾನೆಂಬುದು ತನಗದು ಸ್ವತಃ ಸಿದ್ಧಿಸುವುದು. ಇದು ಹಂಗಿ ಲ್ಲದ ಸುಖ. ಸ್ವಮೇವ ಸುಖ. ಸವೆಯದ ಸುಖ. ಬೇಸರವಾಗದ ಸುಖ. ಅಖಂಡ ಸುಖ. ಅಚ್ಚಸುಖ. ನಿಜಸುಖ.

ಕಾರಣ ಶರೀರವಾದ ಮಾಯಾ ನಾಮಕ ಸುಖದಲ್ಲಿದ್ದ ಸುಷುಪ್ತಿ ಸುಖ. ಆ ಸುಖದಲ್ಲಿ ಮಗ್ನನಾದವಂಗೆ ಶರೀರದ ಪ್ರಜ್ಞೆ ಇರುವುದೆ ? ಶರೀರದ ಭಾನವೆ ಇಲ್ಲದಿರು ವಲ್ಲಿ ಅಲ್ಲಿ ಹುಟ್ಟು ಸಾವಿಗಳ ಕಲ್ಪನೆ ಎಲ್ಲಿ ? ತೋರಿ ಇಲ್ಲವಾಗುವ ಸುಷುಪ್ತಿ ಸುಖದಲ್ಲಿ ಹುಟ್ಟು ಸಾವುಗಳ ಕಲ್ಪನೆಯಿಲ್ಲದಿರುವಲ್ಲಿ, ಕೇವಲ ತನ್ನದಾದ ನಿಜಸುಖದಲ್ಲಿ ಲೀಯವಾದ ವಂಗೆ ಭವತೋರದು, ಅದಕ್ಕಾಗಿ ಭವ ವಿರಹಿತನೆಂದು ಹೇಳಿಹರು.

ಅನಲ ಪವನ ಅರಿತಲ್ಲದೆ ಪ್ರಾಣಲಿಂಗಿಯಲ್ಲ : ಪ್ರಾಣಲಿಂಗಿ ಆರು ಗೊತ್ತೆ ? ಪ್ರಾಣ ಲಿಂಗ, ಲಿಂಗ ಪ್ರಾಣವೆಂಬುದು ಸಂದುಸಂಶಯವಲ್ಲದೆ ನಿಜವಲ್ಲ ನೋಡಾ. ದಶ ಪ್ರಾಣ ವಾಯುವಳಿದು ಲಿಂಗವೆ ತಾನೆಂದರಿಯ ಬಲ್ಲಡೆ ಅದೆ ಪ್ರಾಣ ಲಿಂಗ ನೋಡಾ ಗುಹೇಶ್ವರಾ. ಅನಲ ಪವನ ಅರಿತವನು ಪ್ರಾಣಲಿಂಗಿಯು. ಆ ಮಹಾಂತ ಲಿಂಗವೆ ತಾನೆಂದರಿದ ಪ್ರಾಣಲಿಂಗಿಯು, ಅಗಣಿತ ಅಕ್ಷರೇಶ್ವರನು, ಚಿತ್‌ಪ್ರಾಣನು, ಅವನಿಗೆಂತು ದಶಪ್ರಾಣ ವಾಯುಗಳ ಭ್ರಾಂತಿ ? ನಿಭ್ರಾಂತನು. ನಿಜವ ನೆಯ್ದ ನಿಶ್ಚಿಂತನು. ಖಂಡಾ ಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವುಳ್ಳವಂಗೆ ಆತನಿಗೆಲ್ಲಿ ಪವನವು, ಪ್ರಾಣವು, ಗಗನಕ್ಕೆ ಪವನದ ಸಂಬಂಧವೆ ? ಸಂಗವೆ ? ಸಂಯೋಗವೆ ? ಅಗ್ನಿಯು ಕಂದಿದಡೇನು, ಕುಂದಿದಡೇನು ಅದು ಪ್ರಜ್ವಲಿಸಿದಡೇನು, ಪವನವು ಸ್ಪಂದವಾದರೇನು, ನಿಸ್ಪಂದವಾದ ರೇನು, ಅದಕ್ಕೆ ಸಂಬಂಧವೆ ? ಹಾಗೆ ಲಿಂಗ ತಾನೆಂದರಿದ ಶರಣಂಗೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಉಪಮೆಗೊಳಪಡದ ಅನುಪಮ. ಈ ಯತಾರ್ಥ ಅರುವಿ ನರುವು ಅದಾರಿಗೆ ಇದೆ ಅವರು ಅನಲ ಪವನವರಿತವರು ಪ್ರಾಣಲಿಂಗಿಗಳು ಎಂದು ಹೇಳಿಹರು.

ಇದು ಕಾರಣ ಗುಹೇಶ್ವರ ಲಿಂಗವೆಲ್ಲರಿಗೆಲ್ಲಿಯದೊ : ಗುಹೇಶ್ವರ ಲಿಂಗವೆಂಬುದು ಲಿಂಗಕ್ಕೆ ಲಿಂಗವಾಗಿಹ ಲಿಂಗ. ಅರಿವುಡೆ ತಾನೆ, ಲಿಂಗವೆಂಬುವಂಗೆ ಲಿಂಗವಿಲ್ಲ, ಲಿಂಗವೆನ್ನ ದವಂಗೆ ಲಿಂಗವುಂಟು. ಲಿಂಗವರಿತವನು ಲಿಂಗವೆನ್ನದವನು ಲಿಂಗವೆ ತಾನಾಗಿಹ ಸ್ವ ಮಹಿಮ. ಇದು ತನ್ನಿಂದ ತನ್ನ ಅರಿತವರ ಇರುವಿನ ಅರುವು. ಅರುವ ಅರಿಯ ಹೋದ

ವರ ಇರವು ಇದು ಸಕಲರಿಗೆ ಹೇಗೆ ಸಾಧ್ಯವೆಂದು ಪ್ರಭು ಬಿತ್ತರಿಸಿದುದು. ಗುಹೇಶ್ವರ ಲಿಂಗವೆಲ್ಲರಿಗೆ ಹೇಗೆ ಸಾಧ್ಯವಲ್ಲವೊ ಹಾಗೆ ತನ ತನಗೆ ತನ್ನಿರುವ ಲಿಂಗದಲ್ಲಿರಿಸುವುದು ಪರವ ಮನದಲ್ಲಿ ಹಿಡಿದಿರುವುದು ಅಷ್ಟೆ ಕಠಿಣವಾಗಿದೆ. ತಾನಾರೆಂದು ತನ್ನ ನೋಡಿದವಂಗೆ ತನ್ನ ಪರಮ ಸುಖದ ಪರಿಣಾಮವು ಅಷ್ಟೆ ಯತಾರ್ಥಗಿದೆ. ಇದು ಇಹ ಪರ ಭ್ರಾಂತಳಿದು ನಿರತಿಶಯ ಸುಖದೊಳಗೆ ನಿಜವಾಗಿರಬಲ್ಲ ಮಹಾತ್ಮನು ಅನುಪಮ ಪ್ರಸಾದಿಯು.

**156**

**ಪರಮಸುಖದ ಪರಿಣಾಮದ ಇರುವ ಬಲ್ಲವರಾರೊ ?**
**ಅದು ದೊರಕೊಳ್ಳದು ನೋಡಾ!**
**ತನತನಗೆ ತನ್ನ ಇರವ ಲಿಂಗದಲ್ಲಿರಿಸಿ, ಪರವ ಮನದಲ್ಲಿ ಹಿಡಿದು**
**ಇಹ ಪರವೆಂಬುದೊಂದು ಭ್ರಾಂತಳಿದು,**
**ನಿರತಿಶಯ ಸುಖದೊಳಗೆ ನಿಜವಾಗಿರಬಲ್ಲ**
**ನಿಮ್ಮ ಶರಣನನುಪಮಪ್ರಸಾದಿ ಗುಹೇಶ್ವರಾ.** ॥ 566 ॥

**ತಾತ್ಪರ್ಯ :** ಪರಮ ಸುಖದ ಪರಿಣಾಮದ ಇರುವ ಬಲ್ಲವರಾರೊ ? : ಪರಮಸುಖ, ಇದಾರ ಸುಖ ? ಮುನ್ನ ಮುನ್ನಲಾದವರ ಸುಖ, ತಮ್ಮಿಂದ ತಾವಾದವರ ಸುಖ, ಸ್ಥಲ, ನಿಸ್ಥಲವೆನ್ನದವರ ಸುಖ, ಏನೊಂದರಿಯದವರ ಸುಖ, ಸುಖವಾಗಿಹ ಸುಖ, ಶಬ್ದಮುಗ್ಧ ಸುಖ, ಮೌನಕ್ಕೆ ಮೌನವಾಗಿಹ ಸುಖ, ಇದು ಪರಿಣಾಮದ ಇರುವು. ಮನ ಮೇರೆದಪ್ಪಿದ ನಿಲುವು, ನೆಲೆಯಿಲ್ಲದ ನಿಲುವು. ಬುದ್ಧಿಯೆ ಭಸ್ಮವಾಗಿರುವಲ್ಲಿ ಅದರ ಇರುವ ಬಲ್ಲವರಾರೊ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನದಿರುವಿನ ಪರಿಣಾಮ ಅದಾರು ಬಲ್ಲರು ? ಏನೊಂದಾಗದ ಪರಿಣಾಮದ ಇರುವ ಬಲ್ಲವರಾರು. ಆವುದು ಆದುದು ಹೋದುದು ಅದರ ಪರಿಣಾಮವು ಸಿದ್ಧಿಸುವುದು, ನುಡಿಗೆಡೆಗೊಡದ ಘನ ಸುಖದ ಪರಿಣಾಮದ ಇರುವ ಬಲ್ಲವರಾರೊ ? ಅದು ದೊರಕೊಳ್ಳದು ನೋಡಾ, ಅದೊಂದು ತಾನೊಂದು ಆದವಂಗೆ ಅದು ದೊರಕೊಳ್ಳದು. ಕಲ್ಪಿತಕ್ಕೆಡೆಗೊಡದ ಪರತತ್ವ ಅದೆಂತು ದೊರಕೊಳ್ಳುವುದು ಅಭವವಾಗಿಹ ಘನವು, ಭವದಿಂದುಕ್ತರಾದವರಿಗೆ ಅದು ದೊರಕೊಳ್ಳದು.

ಅರುವಿನಿಂದ ಅರಿದಿಹೆನೆಂದಡೆ ಅರುವು ಮರಹಿಂಗೊಳಗಾಯಿತ್ತಾಗಿ ಆ ಅರುವಿನಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು. ಭಾವದಿಂದ ಭಾವಿಸಿಹೆನೆಂದಡೆ ಭಾವ ಭ್ರಾಂತಿಗೊಳಗಾಗಿತ್ತಾಗಿ ಆ ಭಾವದಿಂದ ಭಾವಿಸಿಹೆನೆಂಬ ಭ್ರಮಿತ ಮಾತು ಕೇಳಲಾಗದು. ಜ್ಞಾನದಿಂದ ಅರಿದಿಹೆನೆಂಬ ಜ್ಞಾನ, ಅಜ್ಞಾನಕ್ಕೊಳಗಾಯಿತ್ತಾಗಿ ಆ ಜ್ಞಾನದಿಂದ ಅರಿದಿಹೆನೆಂಬ ಅಜ್ಞಾನಿಯ ಮಾತು ಕೇಳಲಾಗದು. ಸದ್‌ಜ್ಞಾನಭರಿತ ಕೂಡಲಚೆನ್ನಸಂಗಾ ನಿಮ್ಮ ಶರಣ. ಮಹಾತ್ಮರ ಮಹದರುವು ಯತಾರ್ಥ ಅರಿವು ತಾನಾರೆಂದರಿತವರ ಅರಿವು. ತನ್ನಯ ಅರಿವು. ಸಂದೇಹ ನಿರಸನ ಮಾಡುವ ಅರಿವು. ಇದು ಕಲ್ಪಿತಕ್ಕೆಡೆಗೊಡದ ಘನದ

ರುವು ಸಂದು ಸಂಶಯ ನಿರಸನ ಮಾಡುವ ಅರುವು. ಬಹು ಆಧ್ಯಾತ್ಮ ಜ್ಞಾನಸಂಪನ್ನರು ಅದು ದೊರಕಿಸುವ ವಸ್ತುವೆಂದು ದೊರಕಿಸಿಕೊಳ್ಳಲು ಒಳ್ಳೆ ಸಾಹಸವಂತರಾಗಿ ಸಾಧನೆಯ ಸಾಧಿಸುವರು. ಶ್ರವಣಾದಿಗಳ ಮಾಡುವರು. ಬಹು ಜಿಜ್ಞಾಸುಗಳು ಇದಕ್ಕೆ ಒಪ್ಪಿಕೊಂಡು ಕಲ್ಪಿತರಾಗಿ ಮಾಡುವುದರಿಂದ ಅದು ದೊರಕಿಸಿಕೊಳ್ಳುವ ವಸ್ತುವಾಗಿದೆ. ಶರಣರು ಯತಾರ್ಥವೇದಿಗಳು ಅವರು, ಕಲ್ಪಿತರಾಗಿ ಮಾಡುವ ಅಭಾಸರಿಗೆ ಅದು ದೊರಕೊಳ್ಳದು ಎಂದು ಹೇಳಿಹರು.

ಅಭಾಸನಿಗೆ ಯತಾರ್ಥ ಜ್ಞಾನವಿಲ್ಲದ್ದರಿಂದ ತನ್ನ ವಿಚಾರವೆಂಬ ಮಾಪಿನಿಂದ ಅಳೆಯಲು ಹೋಗುತ್ತಾನೆ. ತಾನೊಂದಾಗಿ ಅದೊಂದಾಗಿ ತನ್ನ ಕರಣಂಗಳ ಮಾಪಿನಿಂದ ಅಳೆಯ ಹೋಗುವನು, ತಿಳಿಯ ಹೋಗುವನು, ಕಲ್ಪಿತಕ್ಕೆಡೆಗೊಡದ ಘನದಿರುವು ಈ ಕರಣಂಗಳಿಂದ ಅಳೆಯುವುದು ಹೇಗೆ ಸಾಧ್ಯ.

ಗಗನವ ಅದಾವ ಮಾಪಿನಿಂದ ಅಳೆಯುವುದು ಅಖಂಡವ ಅದಾವ ಕಲ್ಪಿತನಾಗಿ ತಿಳಿಯುವುದು. ಈ ಅಭಾಸನ ಬುದ್ಧಿಗತವಾದ ಮಾಪಿಗೆ ಅದು ದೊರಕೊಳ್ಳದು. ಇವನು ತನ್ನ ಅರುವಿನಿಂದ ಅರಿದಿಹೆನೆಂದಡೆ ಅದು ಮರಹಿನ ಒಳಗು ಅಖಂಡಿತ ನಿಲವುಳ್ಳದನ್ನು ಭೇದಾಭೇದವುಳ್ಳ ಬುದ್ಧಿಗತವಾದ ಅರಿವು ಅರಿಯಬಹುದೆ ? ಆಕಾಶವತ್ ಆಕಾಶವಾಗಿಹ ಘನವು, ಅದನ್ನು ಘಟಾಕಾಶ ಮಠಾಕಾಶವೆಂಬ ಕಲ್ಪಿತನಾಗಿ ಅಳೆಯ ಹೋದರೆ ಇದೆಂತು ಸಾಧ್ಯ. ನಿರಾಲಂಬವಾಗಿಹ ನಿರವಧಿಯು, ಅದು ನಿರುಪಮ ಅರುವೆತ್ತ. ಸೀಮಿತನಾಗಿ ಕಲ್ಪಿಸುವ ಬುದ್ಧಿಗತವಾದ ಅರುವೆತ್ತ, ಭಾವವೆತ್ತ, ಭಾವಕ್ಕಗಮ್ಯವಾಗಿಹ ನಿರ್ಭಾವವೆತ್ತ, ಹೆತ್ತ ರುವುಳ್ಳ ಜ್ಞಾನವೆತ್ತ, ತನ್ನಿಂದ ತನಗಾದ ಸ್ವಯಮೇವ ಜ್ಞಾನವೆತ್ತ, ದೊರಕಿಸಿಕೊಂಡ ಜ್ಞಾನ ವೆತ್ತ, ತನ್ನಿಂದ ತನಗಾದ ನಿರಂತರ ಜ್ಞಾನ. ಇದು ತನ ತನಗೆ ತನ್ನಿರುವ ಅರಿಯದರು ವಾದ ಘನವೆತ್ತ ಹಂಗಿನ ಸಂಯೋಗವೆತ್ತ, ಹಂಗಿಲ್ಲದ ಸಂಯೋಗವೆತ್ತ, ಸಂಯೋಗವಿಯೋ ಗವುಳ್ಳ ಕಲ್ಪಿತನ ಇರುವೆತ್ತ ? ಸಂಯೋಗ ವಿಯೋಗವ ಕಾಣದ ನಿಜದ ಇರುವೆತ್ತ ಅರು ವೆತ್ತ ಎತ್ತಣದಿಂದೆತ್ತ.

ತನ ತನಗೆ ತನ್ನ ಇರವ, ಲಿಂಗದಲ್ಲಿರಿಸಿ, ಪರವ ಮನದಲ್ಲಿ ಹಿಡಿದು, ಇಹಪರ ವೆಂಬುದೊಂದು ಭ್ರಾಂತಿ ಅಳಿದುದು ಇದಾರ ಸಾಹಸ, ತನ ತನಗೆ ತನ್ನ ಇರವ ಲಿಂಗದ ಲ್ಲಿರಿಸಿದ ಸಾಹಸ, ಅಪ್ರತಿಮ ಸಾಹಸ, ಅಸಾಧ್ಯವ ಸಾಧಿಸಿದ ಸಾಹಸ, ಅಗಮ್ಯ ಸಾಹಸ, ಅಚಿಂತ್ಯ ಸಾಹಸ, ಇದು ಮುನ್ನ ಮುನ್ನಲಾದವರದು. ತಮ್ಮಿಂದ ತಾವಾದವರದು. ಭಾಷೆ ಪ್ರಸಾದವೆ ಅವರಿಗೆ ಎಂಜಲವಾಗಿಹ ಘನವಂತರು. ಇವರು ಸಕಲ ಜೀವರಿಗೆ ಲೇಸನೆ ಬಯಸುವ ಕಲ್ಯಾಣ. ತನ ತನಗೆ ತನ್ನ ಇರುವ ಲಿಂಗದಲ್ಲಿರಿಸಿದ ಅನುವ ಕೃಪೆ ಮಾಡಿದ ಕಾರುಣ್ಯ. ಇದುವೆ ಅನಿಮಿಷಯ್ಯನ ನೋಟ, ಲಿಂಗವಾಗಿ ಲಿಂಗದಲ್ಲಿರಿಸಿದ ನೋಟ. ಶಬ್ದ ಮುಗ್ಧ ನೋಟ, ಇದು ನಿರವಧಿಯಾಗಿಹ ನಿಜದ ನೋಟ. ಇದುವೆ ತನ್ನಿರುವಿನ ಘನ, ಇದು ಮೂಕ, ಮೂಕರ ಸಂವಾದ ಇದು ಸಂಯೋಗ ವಿಯೋಗವಿಲ್ಲದ ನಿಜಯೋಗ ಅದನೆಂತು ವರ್ಣಿಸುವುದು.

ತನ ತನಗೆ ತನ್ನಿರುವ ಲಿಂಗದಲ್ಲಿ ಇರಿಸಿದುದು ಇದೆಂಥ ಘನ ಕಾರ್ಯವು, ತನ್ನದು ತನಗೆ ತನ್ನಿಂದ ತನಗೆ ತನ್ನಿರುವುಎಂಬಲ್ಲಿ ಭಾಷೆಗೆ ನಿಲುಕದಂತಾಗಿದೆ. ಔಪಚಾರಿಕ

ವಾಗಿ ಹೇಳಲು ಕೂಡಾ ನಾಚಿಕೆಯಾಗುತ್ತದೆ. ಆದರೂ ನನ್ನ ಘನವು ಸ್ವಲ್ಪು ಕಾಲ ಕೆಟ್ಟರೂ ಕೆಡಲಿ, ತನ್ನಿರುವ ಲಿಂಗದಲ್ಲಿರಿಸುವವರಿಗೆ ವಿದಿತವಾದರೆ ಸಾಕು, ಆಕಾಶವತ್ ಆಕಾಶವು, ತನ ತನಗೆ ತನ್ನಿರುವ ಲಿಂಗದಲ್ಲಿರಿಸಿದುದು ಅಂದರೆ ಅದು ಘನದಲ್ಲಿಹ ಆಕಾಶವ, ಆಕಾಶ ವತ್ ಆಕಾಶವೆಂದಂತೆ ಇದು ಮೌನದ ಮೌನವಾಗಿಹ ತನ್ನಿರುವ ಲಿಂಗದಲ್ಲಿ ಇರಿಸಿದುದು.

ಪರವ ಮನದಲ್ಲಿ ಹಿಡಿದು, ಓಹೋ!! ಅದಾವ ಪರವ ! ಇದು ಶ್ರೇಷ್ಠಾತಿ ಶ್ರೇಷ್ಠ ವಾಗಿಹ ಪರವ, ಅರುವಿಂಗರುವಾದುದು ಇದನು ಮನದಲ್ಲಿ ಹಿಡಿದು ಸುಖದ ಸುಖ ವೆಂದು ಕಲ್ಪಿತಕ್ಕೆಡೆಗೊಡದಂತೆ ಮನವ ಹಿಡಿದು, ಇದು ಸುಮನವಾದುದರಿಂದ ಅರುವಿಂಗ ರುವಾದುದ ಹಿಡಿದಿದೆ. ಇದು ಸದ್‌ಜ್ಞಾನ ಭರಿತವುಳ್ಳ ಮನ, ನಿರಂತರವಾಗಿಹ ಮಂಗಳ ಮಯ ತತ್ವವ ಹಿಡಿದಿಹ ಮನ, ಇದು ಮಂಗಳಮಯವಾಗಿಹ ಮನ, ನಿರಾಲಂಬ ಮನ, ನಿಶ್ಚಿಂತ ಮನ, ಸವೆಯದ ಸುಖವ ಸವಿಯುವ ಮನ, ಸುಖವೆ ಸುಖರೂಪವಾ ಗಿಹ ಮನ, ಅಚಿಂತ್ಯಪದವೆ ಕರಗತವಾಗಿಹ ಮನ, ಇದು ಪರವ ಮನದಲ್ಲಿ ಹಿಡಿದುದು ಎಂದು ಹೇಳಿಹರು.

ಇಹಪರವೆಂಬುದೊಂದು ಭ್ರಾಂತಳಿದು ನಿರತಿಶಯ ಸುಖದೊಳಗೆ ನಿಜವಾಗಿರಬಲ್ಲ ಗುಹೇಶ್ವರ ನಿಮ್ಮ ಶರಣನನುಪಮ ಪ್ರಸಾದಿ, ಇಹಪರವೆಂಬುದೊಂದು ಭ್ರಾಂತಳಿದು, ಚಿತ್ ಸ್ವರೂಪನಂತಿಹ ಶರಣ, ಚಿದಾಕಾಶವ ತಾನಾಗಿಹ ಶರಣ, ಆಕಾಶವು ತಾನು ಆಕಾಶ ವೆನ್ನದ ಆಕಾಶದ ಹಾಗೆ ಶರಣ ತಾನು ಚಿದಾಕಾಶನೆನ್ನದೆ ಅದುವೆ ಆಗಿಹ ಶಬ್ದಮುಗ್ಧ ಆ ಮಹಾಂತಂಗೆ ಇಹವಾವುದು ಪರವಾವುದು ? ಶ್ರೇಷ್ಠವಾವುದು ಕೀಳಾವುದು? ಊರ್ಧ್ವವಾ ವುದು ಅಧಃವಾವುದು ? ಆಕಾಶಕ್ಕೆ ಮೇಲು ಕೀಳು ಎಂಬುವದಿದೆಯೆ ? ಮನೆ ಮಠ ವೆಂಬುದಿದೆಯೇ ಹಳ್ಳಿ ನಗರವೆಂಬುದಿದೆಯೆ ? ಪುಣ್ಯರುಗಳ ಪಾಪಿಗಳ ಮನೆ ಎಂಬುದು ಇದೆಯಾ ? ಕೊನೆಗೆ ಸ್ವದೇಶ, ಪರದೇಶವೆಂಬುದಿದೆಯಾ ? ಅದು ನಿರಾಲಂಬವು ಅದು ಇದ್ದಂತೆ ಇದೆ. ಹಾಗೆ ಶರಣ, ಚಿದಾಕಾಶವೆ ತನ್ನಿರುವು ಆಗಿಹ ಮಹಾಂತ ನಿಭ್ರಾಂತನು. ಸೂರ್ಯನಿಗೆ ಕತ್ತಲು ಕಾಣುವುದುಂಟೆ ? ನಿರ್ಭಾವಿಗೆ ಭಾವಂಗಳು ಎಲ್ಲಿ ? ಇಹವಿಲ್ಲ, ಪರವಿಲ್ಲ ಅದಕ್ಕಾಗಿ ಭ್ರಾಂತಳಿದು ನಿಭ್ರಾಂತ ನಿರತಿಶಯ ಸುಖದೊಳಗೆ ನಿಜವಾಗಿರಬಲ್ಲ ಗುಹೇಶ್ವರ ನಿಮ್ಮ ಶರಣನನುಪಮ ಪ್ರಸಾದಿ.

ಶರಣ ತನ್ನನರಿದುದರಿಂದ ಗುಹೇಶ್ವರನ ಶರಣ, ಲಿಂಗಕ್ಕೆ ಲಿಂಗವಾಗಿಹ ಶರಣ, ಈ ಶರಣನನ್ನು ಲಿಂಗವು ಮಾಡಲಿಲ್ಲ, ತಾನೆ ಲಿಂಗ ಮಾಡಿದ ಮಹಾಂತ ಅದಕ್ಕಾಗಿ ಈ ಘನವಂತನು ನಿರತಿಶಯ ಸುಖಿಯು, ಈ ಸುಖವು ಸವೆಯದ ಸುಖ, ಅಖಂಡ ಸುಖ, ಅಚ್ಚ ಸುಖ, ಅಪ್ರಮಾಣ ಸುಖ, ಅನಂತವೆಂಬ ಎಂಜಲ ಮಾತಿನವರ ಸುಖವಲ್ಲ, ತನ್ನಿಂದ ತನಗೆ ಪ್ರಜ್ವಲಿಸಿದ ಸುಖ, ಶಬ್ದಮುಗ್ಧ ಸುಖ, ಈ ಸುಖದಲ್ಲಿದ್ದ ಶರಣ ನಿಜವಾ ಗಿಹ ಶರಣ ಈ ಶರಣ ನಿಜವೆನ್ನದವನಾದುದರಿಂದ ನಿಜವಾಗಿರಬಲ್ಲ ಶರಣ, ಈ ಶರಣನ ನುಪಮ ಪ್ರಸಾದಿ ಎಂದು ಹೇಳಿಹರು. ಇವರು ನಿಸ್ಸಂದೇಹಿಗಳು ನಿರಾಲಂಬಮತಿಯರು ಆಗಿರುವುದರಿಂದ ಸಕಲರ ಸಂದೇಹ ನಷ್ಟಮಾಡುವ ನಿಸ್ಸಂದೇಹಿಗಳು.

157

**ಉಂಡೆನುಟ್ಟೆನೆಂಬ ಸಂದೇಹ ನಿನಗೇಕಯ್ಯ?**
**ಉಂಬುದೆ ಅಗ್ನಿ? ಉಡುವುದೆ ಪೃಥ್ವಿ?**
**ನೀನೆಂದು ಉಂಡೆ? ನಾನೆಂದು ಕಂಡೆ?**
**ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತೆನೆಂಬ ಅಂಜಿಕೆ**
**ನಿನಗೆ ಬೇಡ, ಅಂಜದಿರು-**
**ಗುಹೇಶ್ವರಾ ನಿನಗಾವ ನಾಚಿಕೆಯೂ ಇಲ್ಲ.** ॥ 569 ॥

**ತಾತ್ಪರ್ಯ :** *ಉಂಡೆನುಟ್ಟೆನೆಂಬ ಸಂದೇಹ ನಿನಗೇಕಯ್ಯ* : ಉಂಡೆನುಟ್ಟೆನೆಂಬ ಸಂದೇಹ ಬಹುಜನರಿಗೆ ಇದೆ. ಈ ಸಂದೇಹ ಬರಲು ಕಾರಣ ? ಉಣ್ಣದ ಊಟವ ಉಣ್ಣುವಸಲುವಾಗಿ ತೊಡದ ತೊಡಿಗೆಯ ತೊಡಲಿಲ್ಲವಾದ್ದರಿಂದ ಈ ಸಂದೇಹ ಬಂದಿದೆ. ಈ ಅನುಮಾನವ ನಿವಾರಣೆಯಾಗಲು ಇದುವೆ ಉಪಾಯವು.

ಉಂಡೆನುಟ್ಟೆನೆಂಬ ಸಂದೇಹ ಇದಾರಿಂದ ಹುಟ್ಟಿತು. ಮಾಯಿಕವಾಗಿಹ ಅತತ್ವ ನಂಬಿದ ಭಾವಭ್ರಮಿತರಾಗಿಹ ಹಿರಿಯರಿಂದ ಬಂದುದು, ಇವರಿಗೆ ಶ್ರೀಗುರುವಿನ ದರ್ಶನವಿಲ್ಲದ ಭೇದ ಜ್ಞಾನಿಗಳು. ಇವರು ಕಾರ್ಯಕಾರಣ ಕಲ್ಪಿಸುವ ಕಲ್ಪಿತರು. ಕಾರ್ಯ ರೂಪಿ ಜಗತ್ತು, ಕಾರಣರೂಪಿ ದೇವರು ದೇವನು ಕೊಡುವ ಸ್ವಾಮಿಯು, ಇವರು ಕೊಳ್ಳುವ ಭಕ್ತನು. ತಮ್ಮ ಮನ ಬಂದಂತೆ ನೀತಿ ನಿಯಮಂಗಳ ಪಾಠ ಹಾಕಿರುವ ಆಚಾರ್ಯರು. ಇವರು ದೇವನನ್ನು ಅರಿಯದವರು. ತನ್ನನ್ನು ಅರಿಯದವರು. ಜೀವ ನಾರು ಎಂಬುದನ್ನು ಅರಿಯರು. ಜಗವು ಏನೆಂಬುದನ್ನು ಅರಿಯರು. ಇವರುಗಳು ಭಾವ ಭ್ರಮಿತರು ; ಭ್ರಮಿತರಾದುದರಿಂದ ಪರಮಾತ್ಮನ ಮಾಯಿಕ ತತ್ವವೆ ಇವರಿಗೆ ನಿಜವಾದು ದಾಗಿ ಮಾತೃಋಣ, ಪಿತೃಋಣ, ಆಚಾರ್ಯರ ಋಣ ಇದಲ್ಲದೆ ಭೂ ಋಣ, ಕನ್ಯಾ ಋಣ, ಧನ ಋಣ, ವಸ್ತ್ರ ಋಣ, ಅನ್ನದ ಋಣ, ಇವುಗಳ ಪರಿಹಾರವಾಗಬೇಕು. ಇಲ್ಲ ವಾದರೆ ಋಣ ತೀರಿಸಲು ಪುನಃ ಜೀವನು ಜನ್ಮ ತಾಳುವನು ಎಂಬ ಹಿರಿಯರ ಬೋಧವೆ ಆಗಿದೆ. ಇದು ಕಾರಣ, ಉಂಡೆನುಟ್ಟೆನೆಂಬ ಸಂದೇಹ ಬಂದಿದೆ.

ಹಿರಿಯರಾದವರು, ಉಂಡುದೇನು ಉಟ್ಟುದೇನು ? ಎಂದು ವಿಚಾರ ಮಾಡ ಹೋಗಲಿಲ್ಲ, ಉಂಡುದು, ಉಟ್ಟುದು ನಾನೊ ? ಅಥವಾ ನನಗಿಂತ ಭಿನ್ನವಾದುದು ಅದು ಆತ್ಮನೊ ಅನಾತ್ಮನೊ ಜೀವನೊ ? ಎಂಬ ವಿಚಾರ ಮಾಡದ್ದರಿಂದ ಈ ಸಂದೇಹ ಬಂದಿತು. ಬಂದ ಸಂದೇಹ ಪರಿಹಾರಗೋಸುಗ ನಾವು ಶ್ರೀಗುರುವಿನಲ್ಲಿ ಶರಣಾಗತವಾ ದಾಗ ಆ ಮಹಾಂತನ ಕಾರುಣ್ಯದಿಂದ ಜೀವನಿಗೆ ಪರತತ್ವದ ಅರಿವು ಆಗುವುದು.

ಪರತತ್ವದ ಅರಿವು ಅದು ಶ್ರೀಗುರು ಉಣಬಡಿಸಿದ ಊಟ, ಜೀವನು ಎಂದೆಂದೂ ಉಣ್ಣದ ಊಟ, ಘನವಂತನ ಘನಾನುಭವವೆಂಬುದು ತೊಡದ ತೊಡಿಗೆ ಇವೆರಡು ಲಭ್ಯ ವಾದಾಗ ಉಂಡೆನುಟ್ಟೆನೆಂಬ ಸಂದೇಹ ಸ್ವಭಾವತಃ ನಿರಸನವಾಗುವುದು. ತತ್ವದರುವು ಈ ಒಂದರ ಜ್ಞಾನವಾಗುವುದರಿಂದ ಸಕಲ ಸಂದೇಹಗಳು ನಿರಸನವಾಗುವವು. ಒಂದನ್ನು ತಿಳಿ ದರೆ ಎಲ್ಲವನ್ನು ತಿಳಿಯುವನು. ಒಂದೆಂದರೆ ತನ್ನನ್ನು ತನ್ನನೊಂದೆ ತಿಳಿದರೆ ಸಾಕು, ಸಕಲ ದರ ಸಂಶಯ ನಿರಸನವಾಗುವುದು. ಪರತತ್ವದ ಅರಿವು ಆಗುವುದು. ಗುರುಕರುಣೆಸೆ

ಬಿಟ್ಟಿತ್ತು ಮರವೆ, ಗುರು ಕರುಣಿಸೆ ಬಿಟ್ಟಿತ್ತು ಮಾಯೆ, ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚ ಕೂಡಲಚೆನ್ನಸಂಗಮದೇವಾ ಗುರು ಕರುಣಿಸೆ ಬಿಟ್ಟಿತ್ತು ಕರ್ಮಪಾಶ.

ಶ್ರೀಗುರುವಿನ ಕರುಣೆ ಅದೊಂದೆ ಆಗುವುದರಿಂದ ತಾನಾರೆಂಬ ತನ್ನಿರುವಿನ ಅರುವು ಪ್ರಜ್ವಲಿಸುವುಡೆ ತಾನೆ ಘನಕ್ಕೆ ಘನ, ತನ್ನ ಹೆತ್ತವರು ಉಂಟೆ ? ಹೊತ್ತವರು ಉಂಟೆ ? ಅನ್ನ ವಸ್ತ್ರವನಿಟ್ಟುವವರು ಉಂಟೆ ? ಹೊನ್ನು ಹೆಣ್ಣು ಮಣ್ಣು ಉಂಟೆ ? ಚರಾಚರ ಜಗ ಉಂಟೆ ? ಜಗವ ಸೃಷ್ಟಿಸಿದ ಹಿರಿಯರುಂಟೆ ? ಇಲ್ಲದುದು ಇಲ್ಲವೆ ಇಲ್ಲ, ಇಲ್ಲಾದುದಿಲ್ಲಾ ದುದೆಂದಿಪ್ಪುದು ಇಲ್ಲಾದುದಿಲ್ಲಾದುದೆಂತಿಪ್ಪುದು ಆನು ನೀನೆಂಬುದು ಇಲ್ಲ, ತಾನಿಲ್ಲ, ತಾನ ರಿದ ಬಳಿಕ ಏನೂ ಇಲ್ಲ, ಅನುವರಿತು ತನುವ ಮರದಡೆ ಭಾವರಹಿತ ಗುಹೇಶ್ವರ ಬಯಲು. ಮೊದಲು ನಾನು ನೀನೆಂಬುದು ಇಲ್ಲ, ಈ ಇಲ್ಲವೆಂಬ ವಿವೇಕವು ಇಲ್ಲ, ತಾನರಿದ ಬಳಿಕ ಏನೂ ಇಲ್ಲ, ಇಲ್ಲಾದುದು ಎಂದು ಇತ್ತು, ಹೇಗೆ ಇತ್ತು, ತನ್ನ ಸ್ವರೂಪವರಿತು ತನುವ ಮರದಡೆ ಭಾವಕ್ಕಗಮ್ಯನಾಗಿಹ ಗುಹೇಶ್ವರ ತಾನೆ.

ಎಲೈ ಜಿಜ್ಞಾಸುವೆ ತತ್ವ ದೃಷ್ಟಿಯುಳ್ಳವನಾಗಿ ನೋಡು, ನೀನು ನಿರಂತರವಾಗಿರುವ ಮಂಗಳಮಯ ಪರಮ ಸತ್ ಸ್ವರೂಪ ನಿತ್ಯ ತೃಪ್ತನಾಗಿರುವ ನೀನು ಆವಾಗ ಹಸಿದೆ, ನೀನಾವಾಗ ಉಟ್ಟೆ, ನಿರಾಕಾರ ನಿರವಯನಾಗಿರುವ ನಿನಗೆ ಅದಾವ ಹೊದಿಕೆ, ನಿತ್ಯತೃಪ್ತ ರೂಪ ತೃಪ್ತನಿಗೆ ಅದಾವ ಊಟ, ಉಂಡೆನುಟ್ಟೆನೆಂಬುದು ಇದು ನಿನ್ನ ಭ್ರಮಾತ್ಮಕ ಬುದ್ಧಿ, ತತ್ವದೃಷ್ಟಿಯುಳ್ಳವನಾಗಿ ನೋಡು, ಉಂಡುದು ಅಗ್ನಿ ಅಲ್ಲವೆ ? ಉಟ್ಟುದು ಪೃಥ್ವಿ ಅಲ್ಲವೆ ? ವೈಶ್ವಾನರ ರೂಪಿ ಜಠರಾಗ್ನಿಯು ಉಂಡುದು. ಪೃಥ್ವಿರೂಪಿಯಾಗಿರುವ ಶರೀರ ಉಟ್ಟುದು ಅಲ್ಲವೆ ? ನೀನೆಂದು ಉಂಡೆ ನಾನೆಂದು ಕಂಡೆ, ಲಿಂಗಕ್ಕೆ ಲಿಂಗವಾಗಿರುವ ನೀನು ಎಂದು ಉಂಡೆ, ಲಿಂಗರೂಪಿಯಾಗಿರುವ ನಾನೆಂದು ಕಂಡೆ. ಅಂಗವಾಗಿ ನೀನೆಂದು ಉಂಡೆ, ಲಿಂಗವಾಗಿ ನಾನೆಂದು ಕಂಡೆ ನಿರಂತರವಾಗಿಹ ಮಂಗಳಮಯ ಪರತತ್ವ ಒಂದೆ. ಅಖಂಡಿ ತವಾಗಿಹ ಘನದ ಪರಿಪೂರ್ಣ ಅರಿವು ತಿಳಿಯದ್ದರಿಂದ ಉಪಾಧಿ ಭೇದದಿಂದ ನೀನಾದೆ ನಾನಾದೆ ಯತಾರ್ಥ ತಿಳಿವುಡೆ ನೀ ನಾನೆಂಬುದಕ್ಕೆ ತೆರಹಿಲ್ಲದ ಘನವದಾರು ವರ್ಣಿಸು ವುದು, ಭಾವಕ್ಕಗಮ್ಯವಾಗಿಹ ಘನದೊಳ ನೀನೆಂಬುದೆಲ್ಲಿ ? ನಾನೆಂಬುದೆಲ್ಲಿ ? ನಿನ್ನ ದಾಸೋಹಂ ಭಾವವೆಲ್ಲಿ ? ನಿನ್ನ ಸಚ್ಚಿದಾನಂದ ರೂಪಃ ಶಿವೋಹಂ ಎಲ್ಲಿ ? ನಿಃಶಬ್ದ ಬ್ರಹ್ಮ ವಾಗಿರುವಲ್ಲಿ ಶಬ್ದದೋಷ ಅದಾರಿಗೆ ?

ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತೆನೆಂಬ ಅಂಜಿಕೆ ನಿನಗೆ ಬೇಡ: ಪರಾತ್ಪರ ಪರತತ್ವ ರೂಪವೆ ನೀನಿರುವಲ್ಲಿ ನೀನೆಂದು ಉಂಡೆ, ನಾನೆಂದು ಕಂಡೆ ಉಂಡವನಲ್ಲ, ಉಟ್ಟವನಲ್ಲ, ಉಂಡೆನುಟ್ಟೆನೆಂಬುದು ಹೊಗೆಯ ಕೈಯ ಇದುವೆ ವಾಸನೆ. ಈ ವಾಸನೆಯು ತ್ರಿವಿಧ ರೂಪದಿಂದ ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆಯ ಕರ್ತೃತ್ವ ಭೋಕ್ತೃತ್ವ ರೂಪದಿಂ ಪರಿಣಮಿಸುವುದು.

ತ್ರಿವಿಧ ವಾಸನೆಯ ತ್ಯಾಗವೆ ನಿಜವಾದ ತ್ಯಾಗ, ಈ ತ್ಯಾಗ ತಾನಾರೆಂದರಿತ ತತ್ವ ದೃಷ್ಟಿಯುಳ್ಳ ಮಹಾಂತನಿಗೆ ದಕ್ಕಿದೆ ಉಳಿದವರೆಲ್ಲ, ತ್ರಿವಿಧ ವಾಸನೆಯಲ್ಲಿ ಸಿಕ್ಕು ಬಿದ್ದವರು ಅಲ್ಲಿ ಕರ್ತೃತ್ವ, ಭೋಕ್ತೃತ್ವ ಬುದ್ಧಿ ದಿಟವಾಗಿದೆ. ಅದಕ್ಕಾಗಿ ಉಂಡೆನುಟ್ಟೆನೆಂಬ ಸಂದೇಹ ದಿಟವಾಗಿದೆ.

ಎಲ್ಲಿಯವರೆಗೆ ಅಕಲ್ಪಿತವಾಗಿಹ ತನ್ನ ಘನದಿರುವು ತನ್ನಿಂದ ತನ್ನನ್ನು ನೋಡಿಕೊಳ್ಳು ವುದಿಲ್ಲ ಅಲ್ಲಿವರೆಗೆ ತತ್ವದೃಷ್ಟಿ ಬರಲಾರದು. ಈ ದಿವ್ಯ ದೃಷ್ಟಿಯುಳ್ಳ ಮಹಾಜ್ಞಾನಿಗೆ ಉಂಡುದು ಉಟ್ಟುದು ತನಗಿಂತನ್ಯವಾದ ಅತತ್ವವಾಗಿದೆ. ತಾನು ನಿರಂತರ ಅಕರ್ತೃ ಅಭೋಕ್ತೃ ಎಂಬುದು ಘಟ್ಟಿಗೊಂಡುದರಿಂದ ನಿರ್ವಿಷಯನು ನಿರುಪಾದಿಯು, ನಿಸ್ಸಂಗಿಯು ಆಗಿರುವನು.

ಕೆಲಬರು ಕಲ್ಪಿತ ಪುರುಷನಾಗಿ ವಿವೇಕ ವೈರಾಗ್ಯ ಶ್ರವಣ ಮನನಾದಿಗಳ ಅಭ್ಯಾಸ ಬಲದಿಂದ ನಿಸ್ಸಂಗಿಗಳಾದವರು, ನಿರ್ವಿಷಯರಾಗಿದ್ದರೂ ಪೂರ್ವದ ಪೂರ್ವಾಶ್ರಯ ಉಂಡುದು ಉಟ್ಟುದು ದಿಟವಾಗಿ ಬುದ್ಧಿಯಲ್ಲಿ ತೋರುವುದು ತೋರಿದಾಗ ಪರಿತಪಿಸುವನು.

ಪ್ರಭು ಯತಾರ್ಥ ತತ್ವವರಿತ ಸ್ವಮಹಿಮ, ಗಗನ ಸದೃಶನು, ಗಗನಕ್ಕೆ ಅದಾವ ಹೊದಿಕೆ ಅದಾವ ಊಟ, ಗಗನದಂತೆ ಸಮರಸವಾಗಿರುವ ಅಖಂಡ ಜ್ಞಾನವು ತನಗೆ ಅದಾವ ಹೊದಿಕೆ, ಅದಾವ ಊಟ, ಉಂಡೆನುಟ್ಟೆನೆಂಬ ವಾಸನೆಯೆ ಇಲ್ಲದುದು ಅದಕ್ಕಾಗಿ ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತನೆಂಬ ಅಂಜಿಕೆ ನಿನಗೆ ಬೇಡ ಎಂದು ಪ್ರಭು ಹೇಳಿದುದು.

ಓ ಪರತತ್ವ ರೂಪಿಯಾಗಿಹ ಘನಾಂಗವೆ ನೀನು ಮಹಾಲಿಂಗವೆ ಇರುವಿ. ಘನಾಂಗವು ಎಂದಾದರೂ ಸಾಯಬಹುದೆ ? ಅದಕ್ಕೆ ವಾಸನೆ ಉಂಟೆ ? ಘನಾಂಗ ನೀನು ಇರುವಲ್ಲಿ ಅಂಜಿಕೆ ನಿನಗೆ ಬೇಡ, ತಪ್ಪು ತಿಳುವಳಿಕೆಯಿಂದ ಅಂಜಿಕೆ ಉಂಟಾಗಿದೆ. ನೀನು ನಿರಂತರವಾಗಿರುವ ಮಂಗಳಮಯ ಚಿಜ್ಯೋತಿಯಾಗಿರುವುದರಿಂದ ಅಂಜದಿರು. ನೀನು ಅಕಲ್ಪಿತನಾಗಿರುವ ಗುಹೇಶ್ವರನೇ ಇರುವಲ್ಲಿ ನಿನಗಾವ ನಾಚಿಕೆಯೂ ಇಲ್ಲ, ನಿನ್ನ ಘನವರಿಯದ ತತ್ವಬೋಧಿಸುವ ಗುರು ಹಿರಿಯರು ಶಬ್ದ ಸೂತಕರಾದರಲ್ಲದೆ ಸ್ಥಾವರ ವಿಧಿ ವಶವಾದರು.

**158**

**ಶಿಷ್ಯನ ಮುಖದಿಂದಾದ ಗುರುವಿಂಗೆ ಶಿಷ್ಯನ ಪ್ರಸಾದ,**
**ಶಿಷ್ಯನ ಪ್ರಸಾದ ಗುರುವಿಂಗಲ್ಲದೆ, ಗುರುವಿನ ಪ್ರಸಾದ ಶಿಷ್ಯಂಗಿಲ್ಲ!**
**ಇದು ಕಾರಣ, ಗುರುವೆ ಓಗರ, ಓಗರವೆ ಅರ್ಪಿತ.**
**ಪ್ರಸಾದ ಪ್ರಸಾದವೆಂದು ಉಂಡುಂಡು ಸವೆದರಲ್ಲಾ!**
**ಸುಡು ಸುಡು, ಶಬ್ದ ಸೂತಕರ ಕೈಯಲ್ಲಿ ,**
**ಸ್ಥಾವರ ವಿಧಿವಶವಾಯಿತ್ತು ಗುಹೇಶ್ವರಾ.** ॥ 571 ॥

**ತಾತ್ಪರ್ಯ** : *ಶಿಷ್ಯನ ಮುಖದಿಂದಾದ ಗುರುವಿಂಗೆ, ಶಿಷ್ಯನ ಪ್ರಸಾದ, ಶಿಷ್ಯನ ಪ್ರಸಾದ ಗುರುವಿಂಗಲ್ಲದೆ, ಗುರುವಿನ ಪ್ರಸಾದ ಶಿಷ್ಯಂಗಿಲ್ಲ* : ಶಿಷ್ಯನ ಮುಖದಿಂದಾದ ಗುರುಗಳು ಬಹಳ ಇದ್ದಾರೆ. ಇವರು ಶಿಷ್ಯನ ಕರ್ಮದ ಕೌಟಿಲ್ಯ ಕಂಡರಲ್ಲದೆ, ಶಿಷ್ಯನ

ಮೂಲವನರಿಯದವರು. ಇವರು ಶಬ್ದವೇದಿಗಳಲ್ಲದೆ ನಿಶಬ್ದವೇದಿಸದವರು. ಶಿಷ್ಯನ ಮುಖ ನೋಡಿದವರೆಂದರೆ ಅರು ಹೃದಯದವರು, ಶಿಷ್ಯನಂತುವ ಅರಿತವರು, ಶಿಷ್ಯನಾಗಿಹ ಕಂಡ ವರಲ್ಲ, ತಾವು ಗುರುವಾದವರಲ್ಲ, ಎಲ್ಲೆಲ್ಲೂ ಗುರುವಿನ ಗುರು ಕಂಡವರು. ಇವರು ಬಸ ವರಾಜ ದೇವರು, ಪ್ರಭುದೇವರು, ಚೆನ್ನಬಸವ ರಾಜದೇವರು, ಇವರು ಮುನ್ನ ಮುನ್ನಲಾ ದವರು ತಮ್ಮಿಂದ ತಾವಾದವರು. ಇದು ಕಾರಣ ಶಿಷ್ಯನ ಮುಖ ಕಾಣದವರು. ಅವ ರದು ಪೂರ್ಣ ದೃಷ್ಟಿ, ಪೂರ್ಣಭಾವ, ಪೂರ್ಣಜ್ಞಾನ, ಪೂರ್ಣಾನಂದಮಯನಿಗೆ ಮರವ ರುವಿನ ಗುರು ಶಿಷ್ಯರ ಮುಖ ಕಾಣಬಹುದೆ ? ಅದಕ್ಕಾಗಿ ಪ್ರಭುದೇವರು, ಶಿವಗುರು ವೆಂದು ಬಲ್ಲಾತನೆ ಗುರು, ಶಿವ ಲಿಂಗವೆಂದು ಬಲ್ಲಾತನೆ ಗುರು, ಶಿವ ಜಂಗಮವೆಂದು ಬಲ್ಲಾತನೆ ಗುರು, ಶಿವ ಶಿವಾಚಾರವೆಂದು ಬಲ್ಲಾತನೆ ಗುರು, ಶಿವ ಪ್ರಸಾದವೆಂದು ಬಲ್ಲಾ ತನೆ ಗುರು, ಇಂತಿ ಪಂಚವಿಧವೆ ಪಂಚಬ್ರಹ್ಮವೆಂದು ಅರಿದ ಮಹಾಮಹಿಮ ಸಂಗನ ಬಸ ವಣ್ಣ ಎನಗೆಯೂ ಗುರು ನಿನಗೆಯೂ ಗುರು ಜಗಕ್ಕೆಲ್ಲಕ್ಕೂ ಗುರು ಕಾಣಾ ಗುಹೇಶ್ವರ.

ಶೈವೋಪಾಸಕರಾಗಿಹ ಶಿವಭಕ್ತರು ಶಿವನನ್ನು ಯತಾರ್ಥ ತಿಳಿಯದ ಭಾವಿಕರು ಇರುವರು. ಶಿವ ಎಂಬುದು ತಿಳಿದವರು ಬಸವರಾಜ ದೇವರು, ಇನ್ನುಳಿದ ಶರಣ ಶರಣೆ ಯರು, ಭೇದಿಸಬಾರದೆ ಇಪ್ಪ ಅಭೇದ್ಯ ಶಿವನೆ, ನಿನ್ನ ಭೇದಿಸಿ ತಂದುಕೊಟ್ಟನೆನ್ನಯ ಶ್ರೀಗುರು, ಇನ್ನು ನಾನಿನ್ನ ಬಿಡುವೆನೆ ? ಬಿಡೆ ಬಿಡೆ ಮೆಚ್ಚಿದೆ ಪಾದೋದಕವ ಮಚ್ಚಿದೆ ನಚ್ಚಿದೆ ಪ್ರಸಾದವ, ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನ. ಶಿವನರಿತವರು ಶರಣರು, ಶರ ಣೆಯರು ಬಸವಾದಿ ಪ್ರಮಥರು.

ಶಿವನೆಂದರೆ ಭೇದಿಸಬಾರದಿಪ್ಪ ಅಭೇದ್ಯಶಿವ, ಭೇದಿಸಿ ತಂದುಕೊಟ್ಟನೆನ್ನಯ ಶ್ರೀಗುರು, ಶಿವ, ಗುರು, ಲಿಂಗ, ಜಂಗಮ, ಶಿವಾಚಾರ ಪ್ರಸಾದವೆಂದು ಬಲ್ಲಾತ ಗುರು. ಅಂದರೆ ಗುರು ಎಂದರೆ ಭೇದಿಸಬಾರದಿಪ್ಪ ಅಭೇದ್ಯ ಶಿವ, ಭೇದಿಸಿ ತಂದು ಕೊಟ್ಟವರು ಚೆನ್ನಬಸವಣ್ಣ ಬಸವಣ್ಣ ನುಡಿಗೆಡೆಗೊಡದ ಘನವೆ ಗುರು ಲಿಂಗ ಜಂಗಮ ಶಿವಾಚಾರ ಪ್ರಸಾದವಾಗಿ ತೋರಿಸಿದ ಮಹಾಂತ. ಉಪಮಿಸಲುಬಾರದ ಅರುವಿನ ಇರುವುಳ್ಳವನಾಗಿ ನಡೆದಡೆ ನಿರ್ಗಮನಿ, ನುಡಿದಡೆ ನಿಶಬ್ದನಾಗಿರುವದೆ ಇದು ಶಿವಾಚಾರ ಅರಿಯದರುವಾ ದುದೆ ಶಿವ ಪ್ರಸಾದ. ಇಂತೀ ಪಂಚ ಪ್ರಕಾರವಾಗಿ ಶಿವನನ್ನು ಕಂಡಾತ ಸಂಗನ ಬಸವಣ್ಣ ನನಗೆಯೂ ಗುರು, ನಿನಗೆಯೂ ಗುರು ವಿಶ್ವಕ್ಕೆಲ್ಲಕ್ಕೂ ಗುರು ಕಾಣಾ ಗುಹೇಶ್ವರಾ.

ಬೇಧಿಸಬಾರದೆ ಇಪ್ಪ ಅಭೇದ್ಯ ಶಿವನರಿದ ಮಹಾಂತರು, ಶಿಷ್ಯರ ಮುಖ ಕಾಣಬಹುದೆ ? ಶಿಷ್ಯರ ಮುಖವ ಕಂಡು ಗುರುವಾದವನು ಅಭೇದ್ಯ ಶಿವನರಿತವರೆ ? ಅರಿಯದೆ ತತ್ವಮಸಿಯೆಂದು ಮಹಾಕಾವ್ಯವ ಬೋಧಿಸುವರು. ಬೋಧಿಸಿದರೂ ಶಿಷ್ಯನೆಂಬ ಭಾವ ನಷ್ಟವಾಗಲಿಲ್ಲ, ಗುರುವೆಂಬ ಭಾವ ನಷ್ಟವಾಗಲಿಲ್ಲ, ಬೋಧವು ಮಾತ್ರ ನೀನು ಪರವಸ್ತು ಎಂದು ಬೋಧಿಸುವುದು. ಶಿಷ್ಯನು ಕೂಡಾ ಪರವಸ್ತುವೆಂದು ಶ್ರವಣಾದಿಗಳ ಮಾಡುವನು ಮಾಡಿದರೂ ಶಿಷ್ಯನಂತುವ ಗುರುವನರಿಯ, ಗುರುವಿನಂತುವ ಶಿಷ್ಯನರಿಯ. ಜಂಗಮನಂತುವ ಭಕ್ತನರಿಯ, ಭಕ್ತನಂತುವ ಜಂಗಮನರಿಯ. ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ, ಗುರು ಗುರುಗಳಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಜಂಗಮ ಜಂಗಮರಲ್ಲಿ ಸಮವಿಲ್ಲ, ಈ ಕಲಿಯುಗದಲ್ಲಿ ಉಪದೇಶ ಕೊಡುವ ಕಾಳಗುರಿಕೆಯ ಮಕ್ಕಳ

ನೇನೆಂಬೆ ಗುಹೇಶ್ವರ ಎಂದು ಪ್ರಭು ಖಂಡಿಸಿಹನು. ಇವರುಗಳೆಲ್ಲ ಶಿಷ್ಯ ಮುಖದಿಂದಾದ ಗುರುಗಳು. ಭಕ್ತರಿಂದಾದ ಜಂಗಮಯ್ಯಗಳು, ಮುನ್ನ ಮುನ್ನಲಾದ ತನ್ನಿಂದ ತಾನಾದ ಘನವರಿಯದವರು. ಅದಕ್ಕಾಗಿ ಶಿಷ್ಯನ ಪ್ರಸಾದ ಗುರುವಿಂಗಲ್ಲದೆ ಗುರುವಿನ ಪ್ರಸಾದ ಶಿಷ್ಯಂಗಿಲ್ಲ ಎಂದು ಹೇಳಿಹರು.

ಶಿಷ್ಯ ಪ್ರಸಾದವೆಂಬುದು ಜೀವ ಪರಮರ ಏಕತ್ವ ಜ್ಞಾನ, ಶಿಷ್ಯನ ನಿಮಿತ್ಯ ಮಾಡಿಕೊಂಡು ಹೇಳಿದ ಬೋಧ ತತ್ವಮಸಿ ಎಂದು ಅಂದರೆ ತತ್, ತ್ವಂ, ಅಸಿ ಪರಮಾತ್ಮನೆ ನೀನು ಇರುವಿ. ಅಯಮಾತ್ಮ ಬ್ರಹ್ಮ, ಪಂಚಕೋಶಾತೀತನಾದ ಆತ್ಮನಿದ್ದಿ ಪ್ರಜ್ಞಾನಂ ಬ್ರಹ್ಮ, ಅರುವೆ ಪರಬ್ರಹ್ಮವೆಂದು ಅಹಂ ಬ್ರಹ್ಮಾಸ್ಮಿ ನಾನು ಬ್ರಹ್ಮನಿದ್ದೇನೆ ಎಂದು ಶಿಷ್ಯನ ನಿಮಿತ್ಯ ಮಾಡಿಕೊಂಡು ಬಂದ ಜ್ಞಾನವು.

ಗುರುಪ್ರಸಾದವೆಂಬುದು ಎಲ್ಲೆಲ್ಲೂ ಗುರುಘನವ ಕಂಡುದು, ಗುರುಪ್ರಸಾದ ಇದು ಗುರುವಿಂಗೆ ಗುರುವಾಗಿ ಗುರುಪ್ರಸಾದಕೊಂಡ ಪ್ರಸಾದ. ನಿಸ್ಸೀಮ ನಿಲುವುಳ್ಳ ಅಖಂಡ ಅರಿವು ಇದು ಶಿಷ್ಯರಿಗೆ ಇಲ್ಲವಾಗಿದೆ.

ಶಿಷ್ಯ ಪ್ರಸಾದ ಮರವು ನಷ್ಟವಾದಂತಾಗಿದೆ. ಅರುವು ಪ್ರಾಪ್ತವಾದಂತಾಗಿದೆ. ಇದು ಸೀಮಿತ ಜ್ಞಾನ, ಪೂರ್ವದಲ್ಲಿ ಶಿಷ್ಯನು ಬಂಧನದಿಂದುಕ್ತನಾಗಿದ್ದನು. ಈಗ ಗುರು ಕಾರುಣ್ಯದಿಂದ ಮುಕ್ತನೆಂಬುದು ಇದು ಸೀಮಿತವು. ಇದು ಶಬ್ದವೇದಿಗಳ ನಿಲವು, ತಾನಾರೆಂದರಿತ ತನ್ನಯ ನಿಲುವು ಆಗದುದು.

ಗುರುವೆ ಓಗರ, ಓಗರವೆ ಅರ್ಪಿತ. ಪ್ರಸಾದ ಪ್ರಸಾದವೆಂದು ಉಂಡುಂಡು ಸವೆದರಲ್ಲ ಸುಡು ಸುಡು ಶಬ್ದ ಸೂತಕರ ಕೈಯಲ್ಲಿ :

ಗುರು ಪ್ರಸಾದ ಶಿಷ್ಯಂಗೆ ದಕ್ಕಬೇಕಾದರೆ ಸತ್ತುಕೊಂಬ ಶಿಷ್ಯನಾಗುವುದು. ನುಡಿಗೆಡೆಗೊಡದ ಘನದ ಇರುವು ನುಡಿಕೆಡಿಸಿದಲ್ಲಿ ನುಡಿಗೆ ಅವಕಾಶಕೊಡದ ಘನದಿರುವು ತಾನಾಗಿ ಪ್ರಜ್ವಲಿಸಬೇಕು. ಆಗ ಶಿಷ್ಯನಾದವನು ತನ್ನಿಂದ ತನ್ನ ಅರಿದರಿದು ನೋಡಿದಲ್ಲಿ ನುಡಿಗೆ ಅವಕಾಶ ಕೊಡದ ಘನದಿರುವು ತಾನಾಗಿ ಪ್ರಜ್ವಲಿಸುವುದು. ಇದು ಉಣ್ಣದ ಊಟ, ಜ್ಞಾನಾಮೃತದ ಊಟ, ಇಂತಹ ಉಣ್ಣದ ಊಟವ ಉಣಬೇಕು. ಅದು ಉಂಡುದು ಸರಿಯಾಗಿ ಪಚನವಾಗಬೇಕು. ಅಂದರೆ ದೃಢ ಜ್ಞಾನವಾಗಬೇಕು. ಅದು ಗುರುಪ್ರಸಾದ ಶಿಷ್ಯನಿಗಾದ ಇರವು. ಆಗ ಗುರು ಘನವು, ತನ್ನೊಳು ವ್ಯಾಪಕವು ಆಗುವಲ್ಲಿ ಅದುವೆ ತಾನು ಎಂಬುದು ಕರಿಗೊಳ್ಳುವಲ್ಲಿ ಅಲ್ಲಿ ಪ್ರಸಾದ ಪ್ರಸಾದವೆಂಬುವ ವರ್ಣನೆಯು ಇಲ್ಲ, ಹಲುಬಾಟವು ಇಲ್ಲ, ಸುಖದ ಸುಖಿಯಾಗಿರುವಲ್ಲಿ ಇನ್ನೇನಿನ್ನೇನು.

ಈಗಿನ ಆಧ್ಯಾತ್ಮರುಗಳಲ್ಲಿ ತಾನಾರು ? ತನ್ನ ಮೂಲವಾಗಿಹ ಮುನ್ನ ಮುನ್ನಲಾದ ತನ್ನಿಂದ ತಾನಾದ ಘನದಿರುವಿನ ಸುಖವ ಸವಿಯುವ ಹಸಿವು ಇಲ್ಲ, ಇದ್ದರೂ ಶಬ್ದಜ್ಞಾನದ ಹಸಿವು ಇದೆ. ಲೋಕದ ನಚ್ಚುಮೆಚ್ಚಿನ ಕಾಂಕ್ಷೆ ಅತಿಯಾಗಿದೆ. ಇದಲ್ಲದೆ ಅನ್ನ ವಸ್ತ್ರ ಹಣ ಕೊಡುವವನ ಮನೆಯ ಕಾಯುವಷ್ಟು ಹೃದಯವು ಕೀಳಾಗಿದೆ. ಅಲ್ಲಿ ಪರಿಶುದ್ಧತೆಗೆ ಅವಕಾಶವಿಲ್ಲವಾಗಿದೆ. ಅದಕ್ಕಾಗಿ ಗುರುದೇವನನ್ನು ಶಬ್ದವೇದಿಯ ಮಾಡಿ ಆತನೊಬ್ಬ ಚಾರಿತ್ರ ಪುರುಷನೆಂದು ಆತನ ಮಾತು ಕಲಿಯುವ ಜಾಣತನದಲ್ಲಿ ಸರಿಯರಾಗಿಹರು. ಆ ಮಹಾಂತನ ಮಾತು ಅದು ಜ್ಯೋತಿರ್ಲಿಂಗವೆಂಬ ತಿಳುವಳಿಕೆಯಾಗಲೊಲ್ಲದು.

ಆದುದರಿಂದ ಪ್ರಸಾದ ಪ್ರಸಾದವೆಂದು ಉಂಡು ಉಂಡು ಸವೆಯುತ್ತಿಹರು. ಇದು ಪ್ರಭುವಿನ ಹೃದಯಕ್ಕೆ ಒಪ್ಪದ ಅನುಭವವಾಗಿದೆ. ಇದು ನಿಕೃಷ್ಟವಾಗಿದೆ.

ಸುಡು ಸುಡು ಶಬ್ದಸೂತಕರ ಕೈಯಲ್ಲಿ ಸ್ಥಾವರ ವಿಧಿ ವಶವಾಯಿತ್ತು:

ಗುರುವಿನ ಪ್ರಸಾದ ಶಿಷ್ಯಂಗಿಲ್ಲವಾದ್ದರಿಂದ ಇವರು ಗುರು ಘನವ ತಿಳಿಯಲಿಲ್ಲ. ತಾವಾರು ಎಂಬುದು ತಿಳಿಯದ್ದರಿಂದ ಬೋಧಕ್ಕೆ ಮೀರಿದ ಘನದಿರುವು ತನ್ನೊಳ ಪ್ರಜ್ವಲಿಸದ್ದರಿಂದ ಇವರಿಗೆ ಗುರು ಶರೀರಧಾರಿಯಾಗಿ ಕಂಡ. ಆ ಮಹಾಂತನ ಸಂಜ್ಞೆ ಶಬ್ದದಲ್ಲಿಯೆ ಕಂಡರಲ್ಲದೆ ಜ್ಞಾನದ ಘನವರಿಯಲಿಲ್ಲ.

ಪ್ರಸಾದವೆ ಗುರು, ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ, ಪ್ರಸಾದವೆ ಪರಾತ್ಪರ, ಪ್ರಸಾದವೆ ಪರಮಾಮೃತ, ಪ್ರಸಾದವೆ ಪರಮ ಜ್ಞಾನ, ಪ್ರಸಾದವೆ ವಾಙ್ಮನೋತೀತವಾಗದ್ದರಿಂದ ಸುಡು ಸುಡು ಈ ಶಬ್ದ ಸೂತಕರ ಕೈಯಲ್ಲಿ ಮಹದರುವು ಅಹಂಕಾರಕ್ಕಿಂಬಾಯಿತ್ತು. ಕೊನೆಗೆ ದೇಹ ಬುದ್ಧಿ ದೇಹಾಭಿಮಾನಕ್ಕೆ ಇಂಬಾಗಿ ವಿಧಿಯ ಮೀರಲಿಲ್ಲ. ವಿಧಿ ವಶವಾಯಿತ್ತು ಗುಹೇಶ್ವರ ಎಂದು ಹೇಳಿಹರು.

ಪ್ರಸಾದ ರೂಪಿ ಪರಾತ್ಪರ ಪರಮಜ್ಞಾನ, ಪರಮಾಮೃತ ಅದು ವಾಙ್ಮನೋತೀತವಾದ ಘನದಿರುವಿನ ಅರುವುಳ್ಳವನಾದಲ್ಲಿ ಹಸಿವಿಲ್ಲದೆ ಉಣ್ಣುವವ 'ನಾಗಬೇಕು. ಉಪಾಧಿಯಿಲ್ಲದೆ ಬೇಡುವವನಾಗುವುದು ಅದು ಲೀಲೆ, ಅದು ವರ್ಮ, ಅದು ತನ್ನಿರುವು ತನಗಾದ ಸಂಬಂಧ.

### 159

**ಹಸಿವಿಲ್ಲದೆ ಉಣಬಲ್ಲಡೆ, ಉಪಾಧಿಯಿಲ್ಲದೆ ಬೇಡಬಲ್ಲಡೆ,**
**ಅದು ವರ್ಮ,ಅದು ಸಂಬಂಧ.**
**ಗಮನವಿಲ್ಲದೆ ಸುಳಿಯಬಲ್ಲಡೆ, ನಿರ್ಗಮನಿಯಾಗಿ ನಿಲಬಲ್ಲಡೆ**
**ಅದು ವರ್ಮ, ಅದು ಸಂಬಂಧ.**
**ಅವರ ನಡೆ ಪಾವನ, ಅವರ ನುಡಿ ತತ್ತ್ವ**
**ಅವರು ಜಗದಾರಾಧ್ಯರೆಂಬೆ ಗುಹೇಶ್ವರಾ.** ॥ 573 ॥

**ತಾತ್ಪರ್ಯ :** *ಹಸಿವಲ್ಲದೆ ಉಣಬಲ್ಲಡೆ ಉಪಾಧಿ ಇಲ್ಲದೆ ಬೇಡ ಬಲ್ಲಡೆ :* ಅದು ವರ್ಮ ಅದು ಸಂಬಂಧ ಹಸಿವಲ್ಲದೆ ಉಣುವ ಪರಿ, ವಿಧಾನದವರು ಶರಣರು. ಉಪಾಧಿಯಿಲ್ಲದೆ ಬೇಡುವ ವಿಧಾನ ಶರಣರದು. ಶರಣರು ಎಂದರೆ ತತ್ವಜ್ಞಾನಿಗಳು ತತ್ವವರಿತು ಅದುವೆ ಆದವರು. ತತ್ವವೆಂದರೆ ಸಚ್ಚಿದಾನಂದ ಅಖಂಡಿತ ಘನ ಪೂರ್ಣವಾಗಿಹ ಸತ್ಯಜ್ಞಾನಾನಂದವು. ಇದು ಸಕಲರ ಅರಿವು ಇರವು ಆಗಿದೆ. ಆಗಿದ್ದರೂ ಸಕಲರ ಇಚ್ಛೆ, ತಮ್ಮ ನಿಜಸುಖದ ಕಡೆ ಇಚ್ಛೆಯಿಲ್ಲ. ಶರಣರು ಸುಖದ ಸುಖಿಗಳು ಆಗಿರುವುದರಿಂದ ಅವರು ಸ್ವಾತ್ಮಾನಂದದ ಸಾಮ್ರಾಜ್ಯದ ಸಾಮ್ರಾಟರು. ಸವೆಯದ ಸುಖವ ಸವಿಯುವ ಅವರ ಹೃದಯವಾಗಿಹವು. ಪೂರ್ವಾಶ್ರಯದಲ್ಲಿದ್ದಂತೆ ಕಂಡರೂ ಅನಾತ್ಮದ

ಸತ್ವತ್ವ ಬುದ್ಧಿ ನಷ್ಟವಾಗಿದೆ. ತನ್ನಿರುವಿನ ಅರುವು ಕರಿಗೊಂಡ ಕರಣಂಗಳು ಲಿಂಗಕರಣಂಗಳಾಗಿವೆ. ಶರೀರ ಬದುಕಲು ಸುಜ್ಞಾನದಲ್ಲಿದ್ದು ಅದರ ಉಪಭೋಗಿಯಾಗಿದೆ.

ಬೇಕೆನಲಾಗದು, ಬೇಡೆನಲಾಗದು ಶರಣಂಗೆ ಬಂದ ಸುಖವ ನತಿಯಗಳೆಯಲಾಗದು ಶರಣಂಗೆ ಕೂಡಲ ಚೆನ್ನಸಂಗಾ ನಿಮ್ಮ ಶರಣರು ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು, ಹಸಿವಲ್ಲದೆ ಉಂಡ ಪರಿಯ ನೋಡಿರೆ ? ಆಶ್ಚರ್ಯ ಮಹಾದಾಶ್ಚರ್ಯ, ಸುಜ್ಞಾನಿಯ ನಿಲುವ ನೋಡಿರೆ ? ಬೇಕೆಂಬ ಆಸಕ್ತಿಗೂ ಮೀರಿ ನಿಂತಿದೆ. ಬೇಡೆಂಬ ವೈರಾಗ್ಯ ನಿರಿಚ್ಛೆ ನಿರಾಶೆಗೂ ಮೀರಿ ನಿಂತಿಹುದು. ಮೀರಿ ನಿಂತಿಹನು ಎಂಬೆನೆ ? ಉಂಡಿಹನು ತಿರಸ್ಕರಿಸಿಲ್ಲ. ಅದಾವ ಬಗೆಯಿಂದ ಉಂಡಿಹನು. ಬಂದ ಸುಖವ ನತಿಯಗಳೆಯಲಾಗದೆಂಬ ಹಸಿವಲ್ಲದೆ ಉಂಡಿಹನು. ಈ ಘನವಂತನ ದಿವ್ಯದೃಷ್ಟಿ ನೋಡಿರೆ ? ಈ ಮಹಾಂತನ ಉಂಡ ಪರಿ ಬೇರೆ, ಬಹು ಲೌಕಿಕರಲ್ಲಿ ಭಾವಿಕರು ಹಸಿವಿಲ್ಲದೆ ಉಂಡರು. ಇವರು ಅನ್ನ, ಪ್ರಸಾದ, ಪಂಚಾಮೃತವೆಂದು ಭಾವಿಸಿ ಉಂಬುವರು. ಶರಣರು ತಾವಿದ್ದಲ್ಲಿಗೆ ಬಂದುದು ಆಹಾರವೆನಲಿಲ್ಲ, ಬಂದುದು ಸುಖವೆಂದು ಸವೆದ ತಾನು ಸುಖ, ಬಂದುದು ಸುಖ, ಸುಖ ಸುಖವೆ ಸವಿಯುವುದು. ಇದು ಸ್ವಲೀಲೆಯೆಂದು ಕೆಲವರು ಲಿಂಗಲೀಲೆಯೆಂದು, ಕೆಲವರು ಬ್ರಹ್ಮಲೀಲೆಯೆಂದು ಹೇಳಿಹರು. ಆವಲ್ಲಿ ಕೂಡಲಚೆನ್ನಸಂಗಯ್ಯನಲ್ಲಿ ಪರತೊಂದನರಿಯದಿಹುದೆ ಬ್ರಹ್ಮಜ್ಞಾನವೆಂದು ಚೆನ್ನಬಸವರಾಜರು ಬಿತ್ತರಿಸಿಹರು.

ತತ್ತ್ವವೇತ್ತನ ದೃಷ್ಟಿಯಲ್ಲಿ ಸಕಲವು ಲಿಂಗಮಯವಾಗಿ ಪ್ರಜ್ವಲಿಸುವುದರಿಂದ ಬೇಕು, ಬೇಡೆಂಬ ಈ ಮಾಯಿಕ ದೃಷ್ಟಿಯೆ ನಷ್ಟವಾಗಿ ಲಿಂಗದೃಷ್ಟಿಯುಳ್ಳವನಾಗಿಹನು. ಅದಕ್ಕಾಗಿ ಲಿಂಗಕ್ಕಿಂತನ್ಯವಾವುದು ಇಲ್ಲವಾಗಿದೆ. ಇಲ್ಲವಾದುದರಿಂದ ಅವರಿಗೆ ಆವುದು ಬೇಕೆಂಬ ಬಯಕೆಯೂ ಇಲ್ಲ ದಾಹವೂ ಇಲ್ಲ. ಇಲ್ಲವಾದುದರಿಂದ ಹಸಿವಿಲ್ಲದವರು ಎಂದು ಹೇಳಿದೆ. ಈ ಹಸಿವಿಲ್ಲದವರು ಉಂಡಿಹರು. ತಾವಿದ್ದಲ್ಲಿಗೆ ಬಂದುದು ಸುಖರೂಪವು ಸುಖಮಯವು ಲಿಂಗ ಘನವೆಂದು ಸವಿದಿರುವರು.

ಉಪಾಧಿಯಿಲ್ಲದೆ ಬೇಡಿದವರು ಇವರಾರು ? ಶ್ರೀಗುರು ತಾನು ನಿರುಪಾಧಿ, ನಿಸ್ಸಂಗ ನಿರಾಲಂಬನಾಗಿದ್ದರೂ ಶಿಷ್ಯರಿದ್ದಲ್ಲಿಗೆ ಬಂದು ತನು, ಮನ, ಧನವ ಬೇಡಿದುದು ಬಹು ಆಶ್ಚರ್ಯವು. ಬೆಳಕು ಬಂದು ಕತ್ತಲೆಯ ಬೇಡಿದಂತಾಗಿದೆ. ಇದು ಉಪಾಧಿ ಯಿಲ್ಲದೆ ಬೇಡಿದುದು. ಶ್ರೀಗುರು ಚಿತ್‌ಸೂರ್ಯ, ಜ್ಞಾನಸೂರ್ಯಂಗೆ ತನು ಮನ ಧನವೆಂಬಿವು ಕತ್ತಲೆ ಇದ್ದಂತೆ. ಚಿದ್ಘನವೆಂಬ ಅರಿವು ಬೆಳಗುಳ್ಳದ್ದಾಗಿ ಬೆಳಗಿದರೆ ಸಾಕು, ಸೂರ್ಯೋದಯವಾಗುವುಡೆ ಕತ್ತಲೆ ಸ್ವಭಾವತಃ ಇಲ್ಲವಾಗುವುದು ಹಾಗೆ ಈ ಮಹದರುವು ಹೃದಯದಲ್ಲಿ ಪ್ರಜ್ವಲಿಸಿದರೆ ಸಾಕು, ಸ್ವಭಾವತಃ ತನು, ಮನ, ಧನವೆಂಬ ಭ್ರಮಾರೂಪಭಾವ ಸಹಜ ನಷ್ಟವಾಗುವುದು.

ಶ್ರೀಗುರು ತನ್ನೊಳು ತನು ಮನ ಧನವೆಂಬ ಉಪಾಧಿ ಕಾಣದಿದ್ದರೂ ಎಲ್ಲೆಲ್ಲೂ ತನಗೆ ನಿರುಪಾಧಿಯಾಗಿಹ ನಿಸ್ಸಂಗದಿರುವು ಪ್ರಜ್ವಲಿಸಿದರೂ ತನು, ಮನ, ಧನವೆಂಬ ಉಪಾಧಿಯ ಬೇಡುವವನಾಗಿಹನು. ಮಹಾಂತನು ಲೀಲಾಮಯನು. ಮಾಯಾ ಕೋಲಾಹಲನು ಎಂದು ತಿಳಿದು ಬಸವಣ್ಣನವರು ಮಾಡುವರಿಲ್ಲ ನೀ ಮಾಡದೆ ನಿಲಸಾಲೆ

, ಬೇಡುವರಿಲ್ಲ ನೀ ಬೇಡದೆ ನಿಲಸಾಲೆ ಕೂಡುವರಿಲ್ಲ ನೀ ಕೂಡದೆ ನಿಲಸಾಲೆ ಕೂಡಲ ಸಂಗಮದೇವಾ, ತಾನು ತಾನಾಗಿ ನೋಡದೆ ನಿಲಸಾಲೆ.

ಓ ! ಲಿಂಗ ಜಂಗಮವೆ ಮಾಡುವರಿಲ್ಲ ; ಏನು ಮಾಡುವರಿಲ್ಲ ತನ್ನಂತೆ ಮಾಡುವರಿಲ್ಲ, ಅಚಿಂತ್ಯನ ಮಾಡುವರಿಲ್ಲ, ಭೇದಿಸಬಾರದೆ ಇಪ್ಪ, ಅಭೇದ್ಯ ಶಿವನ ಮಾಡುವರಿಲ್ಲ, ಅಜಾತನ ಮಾಡುವರಿಲ್ಲ, ಓ ಶ್ರೀಗುರುವೆ ನೀ ಮಾಡದೆ ಸಾಧ್ಯವಿಲ್ಲ, ಬೇಡುವರಿಲ್ಲ ನೀ ಬೇಡದೆ ನಿಲಸಾಲೆ ಓ ! ಜಂಗಮ ಲಿಂಗವೆ ತನು ಮನ ಧನವೆಂಬ ಉಪಾಧಿಯ ಬೇಡುವರಿಲ್ಲ ನೀ ಬೇಡದ ವಿನಃ ನಿರುಪಾಧಿಯಾಗಿ ನಿಲ್ಲಲು ಅಸಾಧ್ಯವು. ಓ ಕೂಡಲಸಂಗಯ್ಯ ನೀ ತನುವ ಬೇಡದ ವಿನಃ ತನುವಿನ ತನುವಾಗಿ ನಿಲ್ಲಲು ಅಸಾಧ್ಯ. ನೀ ಮನವು ಬೇಡದ ವಿನಃ ಘನಮನವಾಗಿ ನಿಲ್ಲಲು ಅಸಾಧ್ಯವು. ಓ ಸಂಗನೆ ? ನೀ ಧನವು ಬೇಡದ ವಿನಃ ನಿರುಪಾಧಿ ಜಂಗಮ, ನಿರಾಲಂಬ ಜಂಗಮ, ನಿಸ್ಸಂಗ ಜಂಗಮ, ನಿರ್ಲಿಖಿತ ಜಂಗಮ, ನಿಜೈಕ್ಯ ಜಂಗಮವಾಗಿ ನಿಲ್ಲಲು ಅಸಾಧ್ಯವು. ಕೂಡುವರಿಲ್ಲ ನೀ ಕೂಡದೆ ನಿಲಸಾಲೆ ಓ ಗುರುವಿನ ಗುರುವೆ, ನಿನ್ನೊಳು ಕೂಡವರಿಲ್ಲ, ನೀನಾಗಿ ಕೂಡಿದರೆ ಕೂಡುವೆ, ಎಲ್ಲೆಲ್ಲೂ ಕೂಡದಗಲದ ಘನವಾಗಿಹ ನಿನ್ನಯ ರಹಸ್ಯವ ಕರುಣಿಸಿದರೆ ಕೂಡುವೆ  ಕೂಡಲ ಸಂಗಮದೇವಾ, ತಾನು ತಾನಾಗಿ ನೋಡದೆ ನಿಲಸಾಲೆ : ನಾನು ತಾನು ತಾನಾಗಿ ನಿಲಬೇಕಾದರೆ ನೀನು ಎನ್ನಂ ಕರುಣಾಕರನಾಗಿ ನೋಡದ ವಿನಃ ತಾನು ತಾನಾಗಿ ನಿಲುವುದು ಅಸಾಧ್ಯ. ಶ್ರೀಗುರು ರೂಪಿ ಕೂಡಲಸಂಗಯ್ಯ ಬಂದು ತನು ಮನ ಧನ ಬೇಡುವದೆಂದರೆ ಉಪಾಧಿಯಿಲ್ಲದೆ ಬೇಡಿದುದು. ತನ್ನ ಸುಜ್ಞಾನ  ದೃಷ್ಟಿಗೆ ತನು ಮನ ಧನವೆಂಬ ಉಪಾಧಿ ಇಲ್ಲವಾಗಿದ್ದರೂ ಶಿಷ್ಯರುಗಳಿಗೂ ಭಕ್ತರುಗಳಿಗೂ ಇಲ್ಲದ ಉಪಾಧಿ ಇಲ್ಲವಾಗಿ ಎಲ್ಲೆಲ್ಲೂ ಅಖಂಡ ಚೈತನ್ಯವೆ ಪ್ರಜ್ವಲಿಸಲು ಉಪಾಧಿಯಿಲ್ಲದೆ ಉಪಾಧಿ ಯ ಬೇಡ ಬಂದ ಘನವಂತ. ಈ ಮಹಾಂತ ತನ್ನಂತೆ ಮಾಡಲು ಬಂದ ಕರುಣಾನಿಧಿ; ತೋರಿಕೆಗೆ ಉಪಾಧಿಯ ಬೇಡಲು ಬಂದಾತನಾಗಿಹನು.

ಗಮನವಿಲ್ಲದೆ ಸುಳಿಯಬಲ್ಲವರು ಇವರಾರು ? ಈ ದೇಹವಲ್ಲ ದೇಹಿಯಲ್ಲ, ವಿದೇಹಿಯಲ್ಲ, ಬೋಧಕನಲ್ಲ, ನಿರ್ಬೋಧಕನಲ್ಲ, ಕಾಮಿಯಲ್ಲ, ನಿಃಕಾಮಿಯಲ್ಲ, ಆಸೆವಿಡಿದು ಬಂದ ಅನಿಮಿಷನಲ್ಲ ಆವ ಗುಣವಿಲ್ಲದ  ನಿರ್ಗುಣ ನೋಡಯ್ಯ ಕೂಡಲಚೆನ್ನಸಂಗಾ ನಿಮ್ಮ ಶರಣ. ಶರಣ ಸುಳಿದುದು ಬಹು ಆಶ್ಚರ್ಯವು. ಆಕಾಶ ಆವ ಊರಿಗೆ ಹೋಗಿದೆ ; ಬಂದಿದೆ. ಅದು ಆವ ಆಕಾಶವಾಗಿದೆ. ಘಟಾಕಾಶವೆಂದರೂ ಇದ್ದಂತೆ ಇದೆ. ಮಠಾಕಾಶವೆಂದಾಗಲೂ ಇದ್ದಂತೆ ಇದೆ. ಮೇಘಾಕಾಶವೆಂದಾಗಲೂ ಇದ್ದಂತಿದೆ. ಮಹಾಕಾಶವೆಂದಾಗಲೂ ಇದ್ದಂತಿದೆ. ಇದ್ದಂತಿದ್ದ ಆಕಾಶವು ಶಬ್ದಮುಗ್ಧವು. ಹಾಗೆ ಲೋಕವು ಜಿಜ್ಞಾಸುಗಳು ದೇಹದಾರಿ ಎನ್ನಲಿ ದೇಹಿ ಎನ್ನಲಿ ವಿದೇಹಿ ಎನ್ನಲಿ ಬೋಧಕ ಎನ್ನಲ್ಲಿ ನಿರ್ಬೋಧಕನೆನ್ನಲಿ ಕಾಮಿಯೆನ್ನಲಿ ನಿಃಕಾಮಿ ಎನ್ನಲಿ ಆಶಾಪುರುಷನೆನ್ನಲಿ ನಿರಾಶಿಕನೆನ್ನಲಿ ಆವಾವುದು ಆಗದ ಘನ ಮಹಿಮ ಸ್ವಮಹಿಮನು ಸುಳಿದುದು ಬಹು ಆಶ್ಚರ್ಯವು.

ಒಂದು ಭಾಂಡೆ ಇದೆ. ಅದನ್ನು ಕಾರ್ಯ ನಿಮಿತ್ಯಗೋಸ್ಕರ ಗ್ರಾಮದಿಂದ ಗ್ರಾಮಕ್ಕೆ ತೆಗೆದುಕೊಂಡು ಹೋಗುವರು. ಅದರೊಳಗಿದ್ದ ಬಯಲು ಬಂದಂತೆ ಹೋದಂತೆ

ಭಾಸವಾಗುವುದು. ಆದರೆ ಅದು ಹೋಗಿದೆಯಾ? ಬಂದಿದೆಯಾ ? ಅದು ಇದ್ದಂತೆ ಇದ್ದರೂ ಭಾಂಡೆ ಹೋಗುತ್ತದೆ ಬರುತ್ತದೆ. ಹಾಗೆ ಸುಜ್ಞಾನ ಶರಣ ದೇಹರೂಪಿ ಪಿಂಡವೆಂಬ ಭಾಂಡೆ ಈ ಲೋಕದಿಂದ ಆ ಲೋಕಕ್ಕೆ ಆ ಲೋಕದಿಂದ ಈ ಲೋಕಕ್ಕೆ ಹೋಗುತ್ತದೆ ಬರುತ್ತದೆ. ಪಿಂಡರೂಪಿ ಭಾಂಡೆಯಲ್ಲಿರುವ ಚಿದಾಕಾಶವಾಗಿಹ ಶರಣನು ಗಮನವಿಲ್ಲದೆ ಸುಳಿವನು. ಆರು ಚಿತ್ ಸ್ವರೂಪ ಅರಿಯಹೋಗಿ ಚಿದಾಕಾಶವೆ ತನ್ನಿರುವು ಆಗಿಹ ಸ್ವಮಹಿಮ ತಾನು ಅಚಲನಾಗಿದ್ದರೂ ಚರಿಸಿದಂತೆ ತೋರಿದರೂ ತಾನು ಗಮನವಿಲ್ಲದ ಅಚಲನಾಗಿಹ ಘನವಂತನಾದುದರಿಂದ ಇವರು ಸುಳಿದ ಸುಳುಹು ಜಗಕ್ಕೆ ಪಾವನ.

ನಿರ್ಗಮನಿಯಾಗಿ ನಿಲಬಲ್ಲವರೆಂದರೆ ತಾನಾರೆಂದರಿತ ಶರಣ, ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ನಿಜಲಿಂಗೈಕ್ಯನ ಉಪಮಿಸಲು ಇಂಬುಕೊಡನು. ಭಾವಕ್ಕಿಂಬುಕೊಡದವನು. ಅರಿಯದರುವೆ ತನ್ನಿರುವಾಗಿಹ ಘನವಂತನನುಪಮ. ತನ್ನ ಸ್ವಮಹಿಮೆಯಲ್ಲಿ ತಾನು ನಿಂತಿಹನಾಗಿರುವುದರಿಂದ ನಿರ್ಗಮನಿಯಾಗಿ ನಿಂತಿಹನು. ಆಕಾಶ ಹೇಗೆ ನಿರ್ಗಮನವಾಗಿ ನಿಂತಿಹುದೊ ಹಾಗೆ ತಾನೆ ತಾನಾಗಿಹ ಮಹಾಂತ ನಿರಾಲಂಬನಾಗಿ ನಿಂತಿಹನು ಅದು ವರ್ಮ, ಅದು ಸಂಬಂಧ ಇದೆಂಥ ರಹಸ್ಯ ಇದೆಂಥ ಸಂಬಂಧ.

ಶತಪತ್ರವು ನೀರೊಳಗಿದ್ದರೂ ನೀರಿಗೆ ಹೇಗೆ ಅಂಟದಂತಿದೆಯೋ ಹಾಗೆ ಅಖಂಡಿತ ಘನವಾಗಿಹ ಶರಣ ಪ್ರಪಂಚ ಪರಮಾರ್ಥದೊಳಿದ್ದರೂ ತಾನು ಅದಕ್ಕೆ ಅಂಟದಂತಿಹನು. ಪ್ರಪಂಚ ಪರಮಾರ್ಥವು ಜಲರೂಪವುಳ್ಳ ಮನವಿದ್ದಂತೆ, ಶರಣನೆಂಬ ತತ್ತ್ವವೇತ್ತನು ಶತಪತ್ರವಿದ್ದಂತೆ. ನೀರೊಳಗಿದ್ದ ಶತಪತ್ರವು ನೀರಿಗೆ ಅಂಟದಂತಿದ್ದುದು ಶತಪತ್ರಕ್ಕೆ ಗೊತ್ತು ಹಾಗೆ ಮನೋರೂಪಿ ಜಲವು ಪ್ರವಾಹವುಳ್ಳ ಪ್ರವೃತ್ತಿಯುಳ್ಳದ್ದಾಗಿರಲಿ, ಪ್ರವಾಹವಿಲ್ಲದ ನಿಂತ ಜಲವಿಧಿಯಾಗಿಹ ಪರಮಾರ್ಥರೂಪಿ ನಿವೃತ್ತಿಯಾಗಲಿ, ಅದಕ್ಕೆ ಅಂಟದಂತೆ ಇರುವ ರಹಸ್ಯ, ಅಂಟದಂತೆ ಇರುವ ಸಂಬಂಧ ತತ್ತ್ವಜ್ಞಾನಿಗೆ ಗೊತ್ತು ಅಂದರೆ ಅಖಂಡ ಘನವಾಗಿಹ ಶರಣಂಗೆ ಗೊತ್ತು.

ಅವರ ನಡೆ ಪಾವನ, ಅವರ ನುಡಿ ತತ್ವ ; ಅವರು ಜಗದಾರಾಧ್ಯರೆಂಬೆ ಗುಹೇಶ್ವರಾ. ಆರ ನಡೆ ಪಾವನ ಆರ ನುಡಿ ತತ್ವ ತತ್ವವರಿತು ತತ್ವವೆ ತನ್ನಿರುವು ಆಗಿಹ ಶರಣರ ನಡೆ ಪಾವನ. ಅವರ ನುಡಿ ಅಮರ ಏಕೆಂದರೆ ಶರಣ ಅಮರದ ರಹಸ್ಯವರಿತ ನುಡಿಯಾದುದರಿಂದ ಅದು ನುಡಿಯದ ನುಡಿ, ಅದು ಪರತತ್ವ ಅದಕ್ಕಾಗಿ ನಡೆದು ನಿರ್ಗಮನಿ ನುಡಿದು ನಿಃಶಬ್ದವಾಗಿರುವುದರಿಂದ ನಡೆ ಪಾವನ, ನುಡಿ ತತ್ವವಾಗಿರುವುದರಿಂದ ಜಗದಾರಾಧ್ಯರೆಂದು ಹೇಳಿಹರು.

**160**

**ಉಂಡೆನೆಂದಡೆ; ಕಂಡೆಹೆನೆಂದಡೆ ಪ್ರತಿಯಿಲ್ಲ .**
**ನೋಡಿಹೆನೆಂದಡೆ-ಉದಕದೊಳಗಣ ಜ್ಯೋತಿಯಂತೆ**
**ಗುಹೇಶ್ವರಾ, ನಿಮ್ಮ ನಾಮವ ಹಿಡಿದು ಬಿಟ್ಟಡೆ ಭಂಗವಯ್ಯಾ.** ॥ 574 ॥

**ತಾತ್ಪರ್ಯ :** *ಉಂಡೆಹೆನೆಂದಡೆ ಹಸಿವಿಲ್ಲ :* ಹಸಿವೆಯಾಗದ ಊಟ ಉಂಡವರಿಗೆ ಹಸಿವೆ ಏತರದು. ಹಸಿವೆಯಾಗದ ಊಟ ಅದಾವ ಊಟ, ಆ ಊಟ ಎಲ್ಲಿದೆ ಅದರ ದಾಹವಿದ್ದವರು ಎಷ್ಟು ? ಅದಾರ ಊಟ, ಆ ಊಟ ಲಭ್ಯವಾಗುವ ಪರಿ ಇದು ಪಕ್ಷದಿಂದುಕ್ತವಾದ ಊಟವೊ ? ಪಕ್ಷಾತೀತ ಊಟವೊ ? ಇದು ಸಕಲರ ಊಟವಾಗಿದ್ದರೂ ಆರಿಗೆ ಊಟದ ದಾಹ ಬಹುವಾಗಿದೆ ಮತ್ತು ಶ್ರೀಗುರು ಘನನನ್ನು ಒಲಿಸಿಕೊಂಡಿಹರು. ಆಗ ಹೆತ್ತ ಹಸು ಕರುವಿನ ಸಂಬಂಧದಂತೆ ಗುರು ಶಿಷ್ಯಸಂಬಂಧವಿದೆ. ಅಲ್ಲಿ ಮಾತ್ರ ಹಸಿವೆಯಾಗದ ಊಟ ಮಾಡುವ ಅಧಿಕಾರಿಗಳಾಗಿಹರು.

ಹಸಿವೆಯಾಗದ ಊಟ ಇದು ಬಾಹ್ಯಲೋಕದಲ್ಲಿ ಸಿಗದ ಊಟ, ಚತುರ್ದಶ ಭುವನಂಗಳಲ್ಲಿಯೂ ದೊರೆಯದ ಊಟ. ಈ ಊಟ ನರರು, ಸುರಾಸುರರು ದೇವಗಣ, ರುದ್ರಗಣ ಮೊದಲಾದವರು ಉಣ್ಣದ ಊಟ. ಇದು ಮೊದಲೆ ನಿರಂತರ ತೃಪ್ತರೂಪವಾದುದು. ಇದು ಜ್ಞಾನಾಮೃತವು. ನಿಸ್ಸೀಮವಾದುದು. ಆ ಊಟ ಎಲ್ಲಿದೆ, ಇದು ತನ್ನೊಳಿದ್ದ ಊಟ. ರಸನೇಂದ್ರಿಯ ಲಾಲಾರಸವಿದ್ದಂತೆ. ತನ್ನ ಅರು ಹೃದಯದೊಳಗಿದ್ದ ಘನಾಮೃತ ತನ್ನಿಂದ ತನಗೆ ಲಭ್ಯ ಮಾಡಿಕೊಳ್ಳುವ ಊಟ. ಇಲ್ಲದ ಮರವು ಉಂಟು ಮಾಡಿಕೊಂಡವರಿಗೆ ಲಭ್ಯವಾಗದ ಊಟ, ಕಲ್ಪಿತರಿಗೆ ಸಿಗದ ಊಟ, ಭಾವ ಭ್ರಮಾತ್ಮಕರಿಗೆ ದೊರೆಯದ ಊಟ, ಇದು ಹಲುಬುವರ ಊಟವಲ್ಲ, ಗುರು ಗುರು, ಲಿಂಗ ಲಿಂಗ, ಜಂಗಮ ಜಂಗಮ ಎಂದು ಹಲಬುವರ ಊಟದ ದಾಹವಿಲ್ಲದೆ ಗುರು ಕೃಪೆಯಿಲ್ಲದಿರೆ ಸಿಗದ ಊಟ. ಪರಿಶುದ್ಧ ಹೃದಯ ಹಾಗೂ ಶ್ರೀಗುರು ಕೃಪೆ ಇವೆರಡು ಇದ್ದಲ್ಲಿ ಸಾಧ್ಯವು.

ಮುಖವು ಇದೆ. ಕನ್ನಡಿಯು ಇದೆ. ಕನ್ನಡಿ ಕಲ್ಮಷವಾಗಿದ್ದರೆ ಮುಖ ಕಾಣುವದು ಹೇಗೆ ? ತಾಯಿ ತಯ್ಯಾರಿಸಿದ ಪಂಚಾಮೃತವು ಸಿದ್ಧವು ; ಅದನ್ನು ಸವಿಯುವ ಮಗುವಿನ ರಸನೇಂದ್ರಿ ಕೆಟ್ಟಿದ್ದರೆ ಪ್ರಸಾದ ರುಚಿ ತಿಳಿಯಬಹುದೆ ? ಹಾಗೆ ಅಖಂಡ ಜ್ಞಾನಾಮೃತವು ಅರುವೆಂಬ ಹೃದಯದಲ್ಲಿ ಹೃದ್ಗತವಾಗಿದೆ. ಅದು ಸ್ವತಃಸಿದ್ಧವಾಗಿದೆ. ಸಿದ್ಧವಿದ್ದರೂ ಕರಣಂಗಳು ಶುದ್ಧವಾಗದಿದ್ದರೆ ಅದರ ರುಚಿಯು ಸವಿಯುವದೆಂತು ? ಆವಲ್ಲಿ ಕರಣಂಗಳು ಲಿಂಗ ಕಿರಣಂಗಳಾಗಿಲ್ಲ ಅದರ ಘನವ ವಿದಿತವಾಗುವುದದೆಂತು!

ಈ ಊಟ ಲಭ್ಯವಾಗುವ ಪರಿ ? ಇದು ಲಭ್ಯವಾಗುವ ಪರಿಯ ನೋಡಿರೆ ? ಕಾಣಬಾರದ ಗುರು ಕಣ್ಣಿಗೆ ಗೋಚರವಾದರೆ ಹೇಳಲಿಲ್ಲದ ಭಿನ್ನಪ ಮುಟ್ಟಲಿಲ್ಲದ ಹಸ್ತ ಮಸ್ತಕ ಸಂಯೋಗ ಹೂಸಲಿಲ್ಲದ ವಿಭೂತಿ ಪಟ್ಟಿ, ಕೇಳಲಿಲ್ಲದ ಕರ್ಣಮಂತ್ರ ಪೂಜೆಗೆ ಬಾರದ ಲಿಂಗ, ಆಗಮವಿಲ್ಲದ ದೀಕ್ಷೆ ಸಂಬಂಧವಿಲ್ಲದ ಸಯವಪ್ಪ. ಅನುಗೊಂಬಂತೆ ಮಾಡಾ ಗುಹೇಶ್ವರ. ಉಂಡಡೆ ಹಸಿವಿಲ್ಲವೆಂಬ ಮಹಾಂತ ಆರು ? ಪ್ರಭು ಅಲ್ಲವೆ ? ಪ್ರಭು ಆರಲ್ಲಿ ಹಸಿವೆಯಾಗದ ಊಟ ಮಾಡಿದ್ದು, ಈ ಊಟ ನಿಃಶಬ್ದವೇದಿಯು ಉಣಬಡಿಸಿದ ಊಟ, ಕಾಣಬಾರದ ಗುರು ಕಣ್ಣಿಗೆ ಗೋಚರವಾದಾಗ ಅಲ್ಲಿಂದ ಲಭ್ಯವಾದ ಊಟ, ಕಾಣಬಾರದ ಶ್ರೀಗುರು ಕಣ್ಣಿಗೋಚರವಾದುದು ನಿಜ. ಪ್ರಭು ಶ್ರೀಗುರುವಿಂಗೆ ಕಂಡವನಲ್ಲ, ಆ ಮಹಾಂತ ಆರಾರನ್ನು ಕಾಣದವನು. ಆವಾವುದನ್ನು ಕಾಣದುದರಿಂದ ಕಾಣಬಾರದ ಗುರು ಕಣ್ಣಿಗೆಗೋಚರವಾಗಿ ಮುಟ್ಟಲಿಲ್ಲದ ಹಸ್ತ ಮಸ್ತಕ

ಸಂಯೋಗ ಇವೆರಡು ಒಂದಾದ ಸಂಯೋಗ ಅದೆಂತು ವರ್ಣಿಸುವುದು. ಹೊರ ನೋಟಕ್ಕೆ ಅದು ಮುಟ್ಟದ ಹಸ್ತವಾಗಿದೆ. ಇದು ಮುಟ್ಟಿಸಿಕೊಳ್ಳದ ಮಸ್ತಕವಾಗಿಹುದು. ಅರು ಹೃದಯಕ್ಕೆ ಒಂದಾದ ಸಂಯೋಗ ಅರಿಯದರುವಾಗಿ ತನ್ನ ಸ್ವಸುಖದಲ್ಲಿದ್ದುದು ಶ್ರೀಗುರುವಿನ ಮುಟ್ಟದ ಹಸ್ತವಾಗಿದೆ. ಅದನ್ನು ಅರಿದರಿದು ನೋಡಿ, ಅರಿಯಲಿಲ್ಲದ ಅರುಹು ಆದುದು ಶಿಷ್ಯನ ಮಸ್ತಕವಾಗಿದೆ.

ಮೌನದ ಮೌನವಾಗಿಹ ಶ್ರೀಗುರುವಿನ ಅಂಗಾಂಗಳೆಲ್ಲ ಲಿಂಗದಲ್ಲಿ ಲೀಯವಾದ ಊಟ ಇದು ಘನದೂಟ ಗುರು ಹೃದಯ ಉಣಬಡಿಸಿದ ಊಟ, ಗುರುವಿಂಗೆ ಗುರುವಾಗಿ ಅರು ಹೃದಯ ಉಂಡಿದೆ. ಇದು ಅರುವ ಅರಿಯಹೋಗಿ ಅದುವೆ ಆಗಿ ಅರಿಯದರುವಾಗಿಹ ಜ್ಞಾನಾಮೃತ. ಅದನ್ನು ಅರಿದರಿದು ಉಂಡು ಡೇಗಿ, ಆವಾವುದನ್ನು ಲಕ್ಷ್ಯಕ್ಕೆ ತಾರದ ಅಲಕ್ಷ್ಯವಂತ ಆತನಿಗೇಕೆ ಬೇಕು. ಚಿದ್‌ಭಸ್ಮಧಾರಿಯಾದವಂಗೆ ಈ ಹೂಸಿಕೊಳ್ಳುವ ವಿಭೂತಿಪಟ್ಟಿಯು ಅವಸರ ಏಕೆ ? ಅಜಾತಂಗೆ ಮಂತ್ರದ ಅವಸರವೇನು ? ಕಣ್ಣಿನ ಕಣ್ಣಾದವಂಗೆ ನೋಡುವುದೇನು, ಕಿವಿಯ ಕಿವಿಯಾದವಂಗೆ ಕೇಳುವದೇನು, ಪೂರ್ಣಂಗೆ ಅಪೂರ್ಣವೆಲ್ಲಿಯದು, ಲಿಂಗಕ್ಕೆ ಲಿಂಗವಾಗಿಹ ಘನವಂತನು ಪೂಜೆಗೆ ಬಾರದ ಲಿಂಗವ ಕಂಡಿಹನು. ನಿಃಶಬ್ದವೇದಿಗೆ ಆಗಮ ಹಂಗೇಕೆ ? ಇಂತಪ್ಪ ಜ್ಞಾನಾಮೃತವನುಂಡು ಉಂಡೆಹೆನೆಂದಡೆ ಹಸಿವಿಲ್ಲ ಎಂದು ಹೇಳಿಹರು.

ಕಂಡೆಹೆನೆಂದರೆ ಪ್ರತಿಯಿಲ್ಲ : ಅಪ್ರತಿಮವಾಗಿಹ ಮಹಾಂತ, ಈತನಂತೆ ಇನ್ನೊಬ್ಬನಿಹನೆ ? ಕಾಣಬಾರದ ಗುರುವಿನಂತೆ ಇನ್ನೊಬ್ಬ ಕಾಣಬಾರದ ಗುರುವಿರುವನೆ ? ಅವನನ್ನು ಕಂಡು ಅವನಂತಾಗಿಹ ಗುರುವಿಂಗೆ ಗುರುವಾದವನು ಇನ್ನೊಬ್ಬನಿಹನೆ ? ಈರ್ವರು ಎಂದಲ್ಲಿ ಒಂದೆ. ಅರಿಯದರುವು ಒಂದೆ. ಅರುವ ಅರಿಯಹೋಗಿ ತಮ್ಮ ಪೂರ್ವಾಶ್ರಯ ನಷ್ಟ ಮಾಡಿದ ದ್ರೋಹಿಗಳು. ಶಿಷ್ಯನನ್ನು ಇವನು ಕೊಂದ. ಗುರುವನ್ನು ಇವನು ಕೊಂದ. ಇವರೀರ್ವರು ಅನಾಚಾರಿಗಳು ಇವರ ಮಹಾಪ್ರಸಾದವ ಕಂಡಿಹೆನೆಂದರೆ ಪ್ರತಿಯಿಲ್ಲವೆಂದು ಹೇಳಿಹರು.

ಸತ್ತ ಗುರುವಿನ ಕಾರುಣ್ಯವ ಸತ್ತು ಕೊಂಬ ಶಿಷ್ಯಂಗೆ ಭಕ್ತಿ ವಿಸ್ತರಿಸುವುದು ಎಂದಂತೆ. ಗುರುವು ಸತ್ತವ ಶಿಷ್ಯನು ಸತ್ತವ ಸತ್ತವರನ್ನು ಕಂಡಿಹೆನೆಂದಡೆ ಪ್ರತಿಯಿಲ್ಲವೆಂದು ಹೇಳಿದುದು ಸಹಜವೆ ಆಗಿದೆ. ಸತ್ತ ಗುರು, ಸತ್ತ ಶಿಷ್ಯವೆಂಬುದು ಅಷ್ಟೆ ಗಹನಾರ್ಥದಿಂದುಕ್ತವಾದುದು. ಸತ್ಯವರಿತುದರಿಂದ ಇವರು ಪರಮ ಸತ್ಯ ಸ್ವರೂಪರು. ಅಬಾಧಿತರು, ಅನಿಯಮದ ಬೆಡಗುಳ್ಳವರು. ಇವರದು ಅರುಹೃದಯವಾದುದರಿಂದ ಅರುವಿನ ಪರಿಮಳವಾಗಿಹರು. ಇವರು ಎಂಜಲ ಮಾತಿನ ಸತ್ ಎಂಬುದಕ್ಕೆ ಒಪ್ಪಿದವರಲ್ಲ, ಏಕೆಂದರೆ ಮಿಗೆ ಮಿಗೆ ಮೀಸಲವಾಗಿಹ ತತ್ವಬಲ್ಲ ಮಹಾಂತನ ಕರುಣೆ. ಸತ್ತ ಗುರುವಿನ ಕಾರುಣ್ಯ ಸತ್ತಕೊಂಬ ಶಿಷ್ಯನಾದುದರಿಂದ ಈರ್ವರು ಸಮದರ್ಶಿಗಳು ಎರಡೊಂದಾದ ನಿಲವು ಅಲ್ಲಿ ಶಬ್ದಕ್ಕೆ ತೆರಹಿಲ್ಲವೆಂದು ಹೇಳುವಲ್ಲಿ ಪ್ರತಿ ಏತರದು ಎಂದು ಹೇಳಿಹರು.

ನೋಡಿಹೆನೆಂದಡೆ ಉದಕದೊಳಗಣ ಜ್ಯೋತಿಯಂತೆ, ತನ್ನನ್ನೆ ನೋಡಲಿ, ಕಾಣಬಾರದ ಗುರುಘನವ ನೋಡಲಿ, ಉದಕದೊಳಗಣ ಜ್ಯೋತಿ ಎಂಬ ಸಂಜ್ಞೆಯ

ತಿಳಿದು ನೋಡುವುಡೆ ಉದಕವು ಶುದ್ಧಾತಿ ಶುದ್ಧವು. ಮರವರುವು ಕಾಣದ ಸುಮನವು ಅದು ಅಖಂಡ ಮನ, ಅಖಂಡ ಭಾವ ಉದಕವು ಈ ಅಖಂಡ ಅರುವಿನ ಅರುವಾಗಿಹುದೆ ಉದಕದೊಳಗಣ ಜ್ಯೋತಿ ಎಂದು ಹೇಳಿಹರು.

ಗುಹೇಶ್ವರಾ ನಿಮ್ಮ ನಾಮವಿಡಿದು ಬಿಟ್ಟಡೆ ಭಂಗವಯ್ಯ, ಗುಹೇಶ್ವರ ನಿಮ್ಮ ನಾಮ ಸಕಲ ನಾಮಂಗಳ ನಿರ್ನಾಮ ಮಾಡುವ ನಾಮ, ನಾಮವೆಂಬೆನೆ ನಿರ್ನಾಮ, ನಿರ್ನಾಮವೆಂಬೆನೆ ಶಬ್ದಮುಗ್ಧವಾಗಿಹ ನಿಮ್ಮ ಸಂಜ್ಞೆ. ನಿಮ್ಮ ಸಂಜ್ಞೆ ಅದು, ನಿಮ್ಮಯ ಕಾರುಣ್ಯ. ಈ ಕಾರುಣ್ಯರೂಪಿ ಗುಹೇಶ್ವರನೆಂಬ ನಾಮವಿಡಿದು ಬಿಡುವೆನೆ ? ಬಿಟ್ಟಡೆ ಭಂಗವಯ್ಯ ಕೇಡಯ್ಯ ಹಾನಿಯಯ್ಯ ಎಂದು ಹೇಳಿಹರು.

ಗುಹೇಶ್ವರನೆಂಬ ಸಂಜ್ಞೆಯ ಅರಿತವನು ಸ್ವತಂತ್ರನು ನಿರ್ಲಿಪ್ತನು. ಆವಾವ ಹಂಗಿಗನಲ್ಲ ಇದ್ದು ಬದ್ಧನಲ್ಲ ಸುಳಿದು ಸೂತಕಿಯಲ್ಲ ಅಚಿಂತ್ಯವೆ ತನ್ನಿರುವು ಆದವಂಗೆ ಹೇಳಲಿಲ್ಲ, ಕೇಳಲಿಲ್ಲ.

**161**

**ಉಂಡಡೇನೊ? ಉಣದೆ ಇರ್ದಡೇನೊ?**
**ಸೋಂಕಿತವೇನೊ? ಅಸೋಂಕಿತವೇನೋ ?**
**ಹುಟ್ಟೂದಿಲ್ಲಾಗಿ ಹೊಂದೂದಿಲ್ಲ**
**ಸತ್ತು ಬದುಕಿ ನಿಶ್ಚಿಂತವಾಯಿತ್ತು ಗುಹೇಶ್ವರಾ.** ॥ 575 ॥

**ತಾತ್ಪರ್ಯ** : ಉಂಡಡೇನು, ಉಣದಿದ್ದಡೇನು, ಸೋಂಕಿತವೇನೊ ಅಸೋಂಕಿತವೇನೊ : ಇವುಗಳ ಕಾಣದ ಘನವಂತನೆಂದರೆ ಘನಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿರ್ದ ಮಹಾಂತ, ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದ ಶಬ್ದಮುಗ್ಧ. ಈ ಶಬ್ದಮುಗ್ಧನಾದ ಮಹಾಮಹಿಮನೆ ತಾನಾಗದ ತನ್ನದಾಗದ ತನು ಇಂದ್ರಿಯಾದಿಗಳು ಪ್ರಾಣಾದಿಗಳು ಕರಣಾದಿಗಳು ಕಲ್ಪಿತರಾಗಿರುವ ಜೀವರುಗಳು. ತ್ಯಾಗಾಂಗಿಯಾದರೇನು, ಯೋಗಾಂಗಿಗಳಾದರೇನು, ಭೋಗಾಂಗಿಗಳಾದರೇನು, ಇವುಗಳ ಸಂಬಂಧ ಆ ಮಹಾಂತನಿಗಿಲ್ಲವಾದ್ದರಿಂದ ಉಂಡಡೇನೊ ಉಣದಿದ್ದಡೇನೊ ? ಇವುಗಳ ಸೋಂಕಿತವೇನೊ ಅಸೋಂಕಿತವೇನೊ ? ಇವುಗಳ ಕಾರ್ಯವೆ ತಾನಾಗದವನು. ಏಕೆಂದರೆ ಆ ಮಹಾಂತನ ದಿವ್ಯದೃಷ್ಟಿಯಲ್ಲಿ ಹುಟ್ಟುವದಿಲ್ಲಾಗಿ ಹೊಂದುವದೂ ಇಲ್ಲ.

ಸಹಜಮಜಮಚಿಂತ್ಯಂ ಯಸ್ತು ಪಶ್ಯೇತ್ಸ್ವರೂಪಂ । ಘಟತಿಯದಿ ಯಥೇಷ್ಟಂ ಲಿಪ್ಯತೆನೈವ ದೋಷ್ಟೆ ಸಕೃದಪಿ ತದ ಭಾವಾತ್ಕರ್ಮ ಕಿಂಚನ ಕುರ್ಯಾತ । ತದಪಿನ ನಿಬದ್ಧಃ ಸಂಯಮಿ ವಾ ತಪಸ್ವಿ ॥ ಸಹಜವು ಅಜವೂ ಅಚಿಂತ್ಯವು ಆದ ತನ್ನ ಸ್ವರೂಪವನ್ನು ಕಂಡ ಮೇಲೆ ಅವನು ಏನು ಮಾಡಿದರೂ ಅವನ ದೃಷ್ಟಿಯಲ್ಲಿ ಅವುಗಳು ಸತ್ತಿರುತ್ತವೆ. ತನ್ನ ಅಚಿಂತ್ಯವಾದ ಸ್ವರೂಪವೆ ಅಮರವಾಗಿದೆ.

ನಾಹಂ ಕರ್ತಾನಬೋಕ್ತಾ ಚ ನಮೇ ಕರ್ಮಪುರ್ರಾದುನಾ । ನಮೇದೇಹೋ ವಿದೇಹೋ ವಾ ನಿರ್ಮಮೇತಿ ಮಮೇತಿ ಕಿಮ್ । ನಾನು ಕರ್ತೃವಲ್ಲ, ಭೋಕ್ತೃವಲ್ಲ

ಹಿಂದೆ ಆಗಲಿ ಈಗಾಗಲಿ ನನಗೆ ಕರ್ಮವೂ ಇಲ್ಲ, ಅದರ ಪರಿಣಾಮವೂ ಇಲ್ಲ, ನನಗೆ ದೇಹವೂ ಇಲ್ಲ, ವಿದೇಹವೂ ಇಲ್ಲ, ನನ್ನದು ನನ್ನದಲ್ಲವೆಂದು ಹೇಗೆ ಹೇಳುವುದು.

ಕೇವಲ ತತ್ವ ನಿರಂತರ ಸರ್ವಂ । ಯೋಗ ವಿಯೋಗೌಕಥಮಿಹ ಗರ್ವಮ । ಏತಂ ಪರಮಂ ನಿರಂತರ ಸರ್ವಂ । ಏವಂ ಕಥಮಿಹ ಸಾರ ವಿಸಾರಮ್ । ಇರುವುದೆಲ್ಲ ನಿರಂತರವಾಗಿರುವ ಒಂದೆ ತತ್ವ, ಅಲ್ಲಿ ಯೋಗ ವಿಯೋಗದ ಗರ್ವವೆಲ್ಲಿ । ಹೀಗೆ ಎಲ್ಲವೂ ಪರಮ ನಿರಂತರವಾಗಿದೆ. ಈ ಸ್ಥಿತಿಯಲ್ಲಿ ಸಾರ ಅಥವಾ ಅಸಾರ ಹೇಗೆ ಸಾಧ್ಯ.

ಕೇವಲಂ ತತ್ವ ನಿರಂಜನ ಸರ್ವಂ । ಗಗನಾಕಾರ ನಿರಂತರ ಶುದ್ಧಮಂ । ಏವಂ ಕಥಮಿಹ ಸಂಗ ವಿಸಂಗಮ್ । ಸತ್ಯಂ ಕಥಮಿಹ ರಂಗವಿರಂಗಮ್ । ಇರುವುದೆಲ್ಲವೂ ಗಗನದಂತೆ ನಿರಂತರವೂ ಶುದ್ಧವೂ ಆದ ನಿರಂಜನ ತತ್ವ ; ಇಲ್ಲಿ ಸಂಗ ಅಥವಾ ಅಸಂಗ ಹೇಗೆ ಸಾಧ್ಯ, ಇಲ್ಲಿ ರೂಪ ಅರೂಪ ಹೇಗೆ ಸಾಧ್ಯ.

ಯೋಗ ವಿಯೋಗ ರಹಿತೋ ಯೋಗಿ । ಭೋಗ ವಿಭೋಗರಹಿತೋ ಭೋಗಿ । ಏತಂ ಚರತಿಹಿ ಮಹಂ ಮದಂ । ಮನಸಾಕಲ್ಪಿತ ಸಹಜಾನಂದಂ ॥ ಆ ಪರಮ ಸತ್ಯ ಸಾಕ್ಷಾತ್ಕಾರವನ್ನು ಪಡೆದವನು ಐಕ್ಯವಿರಲಿ ಇಲ್ಲದೆ ಇರಲಿ, ನಿಜವಾದ ಯೋಗಿ. ಸುಖವಿರಲಿ, ಇಲ್ಲದೆ ಇರಲಿ ಅವನೆ ನಿಜವಾದ ಭೋಗಿ. ತನ್ನ ಮನಸ್ಸಿನಿಂದ ಕಲ್ಪಿತವಾದ ಸಹಜಾನಂದವನ್ನು ಅರಿತು ಮಂದಗತಿಯಿಂದ ನಿರ್ಲಕ್ಷ್ಯವಾಗಿ ಹೋಗುವನು.

ಬೋಧವಿಭೋಧೌ ಸತತಂ ಯುಕ್ತೋ । ದ್ವೈತಾ ದ್ವೈತಃ ಕಥಮಿಹ ಮುಕ್ತಃ । ಸಹಜೊ ವಿರಜಃ ಕಥಮಿಹಯೋಗಿ । ಶುದ್ಧ ನಿರಂಜನ ಸಮರಸ ಭೋಗಿ ಬೋಧ ಅಬೋಧ ಮೀರಿದ ಘನವಂತ ದ್ವೈತ ಅದ್ವೈತರಲ್ಲಿ ಆಸಕ್ತನಾಗುವುದು ಹೇಗೆ ? ಅಥವಾ ತನ್ನ ನಿರಾಲಂಬವಾಗಿಹ ಸಹಜ ಸಾಕ್ಷಾತ್ಕಾರವಂತನು ಯೋಗ ವಿಯೋಗ ಹೇಗೆ ಸಾಧ್ಯ.

ಇಂದ್ರಜಾಲಮಿದಂ ಸರ್ವ ಯಥಾ ಮರುಮರೀಚಿಕಾ । ಅಖಂಡಿತ ಮನಾಕಾರಂ ವರ್ತತೇ ಕೇವಲಂ ಶಿವಃ । ಮರೀಚಿಕೆಯಂತೆ ಸೃಷ್ಟಿಯೆಲ್ಲ ಒಂದು ಇಂದ್ರ ಜಾಲ ಅಖಂಡವಾಗಿರುವ ಆಕಾರ ರಹಿತವಾದ ಮಂಗಳತತ್ವ ಒಂದೆ.

ಧರ್ಮಾದೌ ಮೋಕ್ಷ ಪರ್ಯಂತಂ । ನಿರೀಹಾ ಸರ್ವಥಾವಯಮ್ । ಕಥಂ ರಾಗ ವಿರಾಗೈಶ್ವ । ಕಲ್ಪಯಂತಿ ವಿಪಶ್ಚಿತಃ । ಧಾರ್ಮಿಕ ಕರ್ಮದಿಂದ ಹಿಡಿದು ಮೋಕ್ಷದ ಪರ್ಯಂತ, ಯಾವ ಕರ್ಮದಲ್ಲಿಯೂ ಆಸಕ್ತಿಯಿಲ್ಲ ಜ್ಞಾನಿಗಳಿಗೆ ರಾಗವಿದೆ ಅಥವಾ ಇಲ್ಲವೆಂದು ಹೇಗೆ ಆರೋಪಿಸುವುದು.

ಸಹಜವು ಅಜವು ಅಚಿಂತ್ಯವು ಆದ ತನ್ನ ಸ್ವರೂಪ ಕಂಡ ಮೇಲೆ ತಾನಾಗದ ದೇಹ ಇಂದ್ರಿಯಾದಿಗಳು ಉಂಡಡೇನೊ ? ಉಣದಿದ್ದಡೇನೊ । ಸೋಂಕಿತವೇನೊ ಅಸೋಂಕಿತವೇನೊ ? ಇಂದ್ರಿಯಂಗಳು ತಪಸ್ವಿಯಾಗಿ ಅಸೋಂಕಿತ । ಅಸೋಂಕಿತವೇನೊ: ಇಂದ್ರಿಯಂಗಳು ವಿಷಯೋಪಭೋಗದ ಸೋಂಕಿತವೇನೊ, ಅವನಿಗಾವ ಪುಣ್ಯವೂ ಇಲ್ಲ ಪಾಪವೂ ಇಲ್ಲ ಏಕೆಂದರೆ ಬದ್ಧಮುಕ್ತನೆಂಬುದಕ್ಕೂ ಮೀರಿದ ಘನನಾಗಿಹನು. ಹುಟ್ಟುವುದಿಲ್ಲಾಗಿ ಹೊಂದುವುದಿಲ್ಲ ಸತ್ತು ಬದುಕಿ ನಿಶ್ಚಿಂತವಾಯಿತ್ತು ಗುಹೇಶ್ವರ.

ಅಚಿಂತ್ಯ ಸ್ವರೂಪವಕಂಡ ಮಹಾಂತ ನಿಶ್ಚಿಂತನಾಗಿರುವುದರಿಂದ ಸತ್ತು ಬದುಕಿಹನು. ಕರ್ತೃತ್ವ, ಭೋಕ್ತೃತ್ವವುಳ್ಳ ಅಹಂಕಾರವೆ ನಷ್ಟವಾಗಿಹುದು. ಅದಕ್ಕಾಗಿ ನಾ

ಕರ್ತೃವಲ್ಲ, ಭೋಕ್ತೃವಲ್ಲ. ಹಿಂದೆ ಆಗಲಿ, ಈಗಾಗಲಿ ಕರ್ಮವೂ ಇಲ್ಲ ಅದರ ಫಲಪದಂಗಳು ಇಲ್ಲ. ಏಕೆಂದರೆ ನನಗೆ ದೇಹವೂ ಇಲ್ಲ. ವಿದೇಹವೂ ಇಲ್ಲ. ನಾನು ನನ್ನದು ಎಂದು ಹೇಗೆ ಹೇಳಲಿ, ಇರುವುದೆಲ್ಲ ನಿರಂತರವಾಗಿರುವ ಒಂದೆ ತತ್ವ. ಅಲ್ಲಿ ಅಂಗ, ಲಿಂಗ ಬೇರೆಂಬ ಬುದ್ಧಿ ಏಕೆ ? ಅಂಗ ಲಿಂಗ ಒಂದೆ ಎಂಬ ಬುದ್ಧಿ ಏಕೆ ? ಬುದ್ಧಿಯೆ ಭಸ್ಮವಾಗಿ ನಿರಂತರವಾಗಿಹ ಎಲ್ಲವೂ ಅದುವೆ ಆಗಿದೆ. ಅಲ್ಲಿ ನಾಶವಾವುದು, ಅವಿನಾಶಿ ಆವುದು.

ಇರುವುದೆಲ್ಲ ಗಗನದಂತೆ ನಿರಂತರವೂ ಶುದ್ಧವೂ ಆದ ನಿರಂಜನ ತತ್ವ. ಇಲ್ಲಿ ಉಂಡುದೇನೊ ? ಉಣದಿದ್ದಡೇನೊ ? ಸೋಂಕಿತವೇನೊ, ಅಸೋಂಕಿತವೇನೊ ? ಸಂಗವಾವುದು ಅಸಂಗವಾವುದು ರೂಪವಾವುದು ಅರೂಪವಾವುದು.

ತಾನಾರೆಂಬ ತನ್ನ ಪರಮ ಸತ್ ಸ್ವರೂಪವ ಸಾಕ್ಷಾತ್ಕಾರವನ್ನು ಪಡೆದವನ ಮನವು ಸ್ವರೂಪದಲ್ಲಿಯೆ ಲೀನವಾಗಲಿ, ವಾಗದಿರಲಿ, ಅವನು ನಿಜವಾದ ಯೋಗಿ. ಸುಖವಿರಲಿ, ಸುಖವಿಲ್ಲದೆ ಇರಲಿ, ಆ ಮಹಾಂತನೆ ನಿಜವಾದ ಭೋಗಿ. ಅವನ ಮನವು ಅಲುಪ್ತವಾಗಿ ತಾನಾಗದೆ ಉಪಾಧಿರಹಿತವಾಗಿರುವುದು. ಉಂಡರೇನು, ಉಣದಿದ್ದಡೇನು ನಿರ್ಲಕ್ಷ್ಯನಾಗಿ ಹೋಗುವನು.

ನಿಶ್ಚಿಂತತೆ ಅದಾರಿಗೆ ? ಆರು ಸತ್ತು ಬದುಕಿಹರು. ಬದುಕಿ ಆರು ಸತ್ತಿಹರು. ಅವರಿಗೆ ಅಮರತ್ವ ಸಿದ್ಧಿಸಿದೆ. ಪ್ರಥಮ ನಾನು ಎಂಬ ಅಹಂ ನಷ್ಟವಾಗಬೇಕು. ಇದು ನಷ್ಟವಾಗುವುಡೆ ಕೋಹಂ ನಷ್ಟವು, ಸೋಹಂ ನಷ್ಟವು, ಚಿದಹಂ ನಷ್ಟವು, ಆರಿಗೆ ನಾನೆಂಬ ಅಹಂಕಾರ ನಷ್ಟವಾಗಿದೆ. ಅವರು ಸತ್ತವರು. ಅವರು ಬದುಕಿದುದು ಅಮರತ್ವದ ಇರುವು ಅವರದಾಗಿದೆ. ಅಮರತ್ವವೆಂಬುದು ಅಚಿಂತ್ಯಪದ ತನ್ನಯ ಇರುವು ತನ್ನಯ ಪದ ಅಮರಪದ ಆವಲ್ಲಿ ಅಮರತ್ವ ಸಿದ್ಧಿಸಿದೆ ಅಲ್ಲಿಯೇ ನಿಶ್ಚಿಂತವಿಹುದು. ಈ ಅಮರತ್ವ ಪಡೆಯಲು ಹಲವು ಭಕ್ತರು ನಿರವಯ ಲಿಂಗಕ್ಕೆ ತಮ್ಮ ತನುವಾದಿಗಳರ್ಪಿಸಿ ಇದರಿಂದ ನಿಶ್ಚಿಂತ ಪದವು ಲಭ್ಯವೆಂದು ತಿಳಿದಿಹರು.

**162**

**ನಿರವಯ ನಿರ್ಗುಣ ನಿಶೂನ್ಯಲಿಂಗಕ್ಕೆ**
**ಶರಣರು ತಮ್ಮ ತಮ್ಮ ತನುಗುಣಾದಿಗಳ**
**ಅರ್ಪಿಸಿಹೆನೆಂಬುದೆ ಮಹಾಪಾಪ!**
**ಅವು ತಮ್ಮ ತನುವಿನಲ್ಲಿಪ್ಪುದೆ ಭಂಗ, ಅದೆ ಕರ್ಮ.**
**ಈ ಉಭಯ ನಾಸ್ತಿಯಾಗದ ಸುಳುಹು**
**ಮುಂದೆ ಕಾಡಿಹುದಯ್ಯ ಗುಹೇಶ್ವರಾ.** ॥ 578 ॥

**ತಾತ್ಪರ್ಯ :** ನಿರವಯ ನಿರ್ಗುಣ ನಿಃಶೂನ್ಯ ಲಿಂಗಕ್ಕೆ ಶರಣರು ತಮ್ಮ ತಮ್ಮ ತನುಗುಣಾದಿಗಳನ್ನು ಅರ್ಪಿಸಿಹೆನೆಂಬುದು ಮಹಾಪಾಪ : ಪೂಜಾಲಿಂಗವ ಪೂಜಿಸುವ ಪೂಜಕರಲ್ಲಿ ಲಿಂಗ ಜ್ಞಾನವಿಲ್ಲದವರು ಬಹಳ ಇದ್ದಾರೆ. ಹಿಂದಿನವರು ಹಾಕಿಕೊಟ್ಟ ಸಾಂಪ್ರದಾಯದಂತೆ ಬೆಳೆದು ಬಂದ ಭಾವವಾಗಿದೆ. ಆಚಾರವಾಗಿದೆ. ಹಿಂದಿನವರು ಇದು

ಲಿಂಗವೆಂದು ಹೇಳಿದರು. ಅವರು ಹೇಳಿಕೊಟ್ಟುದೆ ಲಿಂಗವೆಂಬ ಭಾವವಾಗಿದೆ. ಅದನ್ನು ಹೀಗೆಯೆ ಪೂಜಿಸಬೇಕೆಂದು ಅರ್ಚಿಸಿ ತೋರಿಸಿದರು. ಇವರು ಕೂಡ ಹಾಗೆಯೇ ಮಾಡುತ್ತ ಬಂದ ಲಿಂಗಾಯತರೆ ಹೆಚ್ಚು ಸಿಕ್ಕುತ್ತಾರೆ. ಇಂಥ ಸಾಮಾನ್ಯ ವೀರಶೈವರಲ್ಲಿ ಲಿಂಗಕ್ಕೆ ತನುವ ಅರ್ಪಿಸಬೇಕೆಂಬುದಿಲ್ಲ. ಅವರು ಸಹಜ ಮುಗ್ಧರು, ಹಿಂದಿನವರು ಹೇಳಿದಷ್ಟು ಭಾವನೆ ಮಾಡುತ್ತ ಬಂದವರು. ಅವರಿಗೆ ಲಿಂಗದ ಘನತ್ವ ಹೇಗೆ ಗೊತ್ತಾಗಬೇಕು.

ಕೆಲಬರು ಲಿಂಗದ ವಿಷಯ ಬಲ್ಲವರಿಂದ ಕೇಳಿ, ಲಿಂಗಕ್ಕೆ ನಿರವಯ ನಿರ್ಗುಣ, ನಿಃಶೂನ್ಯವೆಂದು ಭಾವಿಸಿಹರು. ಈ ಭಾವಿಸಿದ ಭಾವುಕರಾದರೂ ಲಿಂಗ ತಿಳಿಯಹೋಗಲಿಲ್ಲ. ಲಿಂಗಯ್ಯನಿಗೆ ತಮ್ಮ ತಮ್ಮ ತನು ಗುಣಾದಿಗಳರ್ಪಿಸುವ ಭಾವ ಇವರಲ್ಲಿದೆ. ಇವರಾದರೂ ಅರ್ಪಿಸುವ ವಿಧಾನವರಿತಿರುವರೆ ? ಲಿಂಗ, ನಿರವಯ ನಿರ್ಗುಣ ನಿಃಶೂನ್ಯವೆಂಬ ಲಕ್ಷಣವಾದರೂ ತಿಳಿದಿಹರೆ ? ತಿಳಿಯದೆ ಅರ್ಪಿಸುವ ಭಾವ ಭ್ರಾಂತಿಗೆ ಗುರಿ ಮಾಡಿತಲ್ಲದೆ ನಿಭ್ರಾಂತರ ಮಾಡಲಿಲ್ಲ. ಪ್ರಭು ದೇವ. ನಿರವಯ ನಿರ್ಗುಣ ನಿಃಶೂನ್ಯ ಲಿಂಗಕ್ಕೆ ಶರಣರು ತಮ್ಮ ತಮ್ಮ ತನುಗುಣಾದಿಗಳ ಅರ್ಪಿಸಿಹೆನೆಂಬುದು ಮಹಾ ಪಾಪ ಎಂದು ಗರ್ಜಿಸಿದುದು ಓಹೋ ಇದೆಂಥ ಭ್ರಾಂತು ಇದೆಂಥ ಮುಗ್ಧತ್ವ.

ನಿರವಯನಿಗೆ ಅವಯವಂಗಳ ಅರ್ಪಿಸುವುದೆ ? ಗುಣಾತೀತನಿಗೆ ಗುಣಂಗಳ ಅರ್ಪಿಸುವುದೆ ? ಅಕಥನೀಯ ದೇವನಿಗೆ ಕಥನವರ್ಪಿಸುವುದೆ, ನಿರೂಪನಿಗೆ ರೂಪವನರ್ಪಿಸುವುದೆ ? ನಿಷ್ಕಳಂಕನಿಗೆ ಕಳಂಕವರ್ಪಿಸುವುದೆ ? ನಿರ್ಮಲನಿಗೆ ಮಲವರ್ಪಿಸುವುದೆ ? ಇದೆಂಥ ಮಹಾದೋಷ ಪಾಪದ ಪಾಪ, ಅತಿ ಪಾಪ, ಲಿಂಗಯ್ಯನಿಗೆ ತನುವರ್ಪಿಸಿದಲ್ಲಿ ತನು ಇದ್ದಂತೆ ಇದ್ದಿತ್ತಲ್ಲಾ ಗುಣಗಳ ಅರ್ಪಿಸುವೆ ಎನ್ನುವಿರಿ ಅವು ಎಂದಿನಂತೆ ಇಹವಲ್ಲ, ಅರ್ಪಿಸಿದುದರ ಪರಿಣಾಮವೇನು, ಇದನ್ನಾದರೂ ಅರಿತಿರುವಿರಾ ? ಶಾಖಾಹಾರ ಸೇವಿಸುವ ಸಾಧಕನಿಗೆ ಅಭಕ್ಷ ಭಕ್ಷಣ ಮಾಡಲು ಹೇಳಿದರೆ ಸರಿಯೆ ? ಹಾಗೆ ಲಿಂಗದೇವನಿಗೆ ಅಂಗಾಂಗರ್ಪಿಸಿದುದು ಸರಿಯೆ ? ಇದು ಕಾರಣ ತಿಳಿಯದೆ ಅರ್ಪಿಸಿಹೆನೆಂಬುದು ಮಹಾಪಾಪವೆಂದು ಹೇಳಿಹರು.

ಅರ್ಪಿಸುವ ವಿಧಾನ ಶರಣರಿಗೆ ವಿದಿತವಲ್ಲದೆ ಮುಗ್ಧ ಭಾವಕರಿಗೆ ಅದರ ರಹಸ್ಯ ತಿಳಿಯುವುದು ಹೇಗೆ ಸಾಧ್ಯ ? ಅರ್ಪಿಸುವ ರಹಸ್ಯವರಿತುದರಿಂದ ಬಸವಣ್ಣ ತನುವನರ್ಪಿಸಿ ; ಆರಿಗೆ ಅರ್ಪಿಸಿ ? ತನುವ ಗುರುವಿಂಗರ್ಪಿಸಿ ಗುರುವಾದ. ಮನವ ಲಿಂಗಕ್ಕರ್ಪಿಸಿ ಲಿಂಗವಾದ, ಧನವ ಜಂಗಮಕ್ಕರ್ಪಿಸಿ ಜಂಗಮವಾದ ಇಂತೀ ತ್ರಿವಿಧವ ತ್ರಿವಿಧಕ್ಕರ್ಪಿಸಿ ಬಸವಣ್ಣ ಸಕಲರಿಗೆ ಗುರುವಾದನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ. ಇದು ಅರ್ಪಿಸುವ ರಹಸ್ಯವರಿತವರು ; ತನುವರ್ಪಿಸಿದುದು ಗುರು ಘನವಾಯಿತಲ್ಲದೆ ತನುವಾಗಿ ಉಳಿಯಲಿಲ್ಲ, ಮನವರ್ಪಿಸಿ, ಲಿಂಗ ಘನವಾಯಿತಲ್ಲದೆ ಮನವಾಗಿ ಉಳಿಯಲಿಲ್ಲ, ಹೀಗೆ ಧನವ ಜಂಗಮಕ್ಕರ್ಪಿಸಿ ಜಂಗಮವಾಯಿತಲ್ಲದೆ ಅದು ಧನವಾಗಿ ಉಳಿಯಲಿಲ್ಲ, ತನು ಗುರುವಿನದಾದುದರಿಂದ ಗುರುವಾಗಿದೆ. ಮನ ಲಿಂಗದ್ದಾದುದರಿಂದ ಲಿಂಗವಾಗಿದೆ. ಧನ ಜಂಗಮದ್ದಾದ್ದರಿಂದ ಜಂಗಮವಾಗಿದೆ. ಅವರ ಪದಾರ್ಥ ಅವರಿಗೆ ಕೊಟ್ಟು ಭಕ್ತನಾಗಿಹೆನೆಂಬುದು ಹಿರಿಯತನದ ಕೇಡು ನೋಡಾ ಕೂಡಲಚೆನ್ನಸಂಗಮದೇವಾ.

ಬಸವರಸರು, ಗುರು ಲಿಂಗ ಜಂಗಮ, ಘನವರಿತ ಮಹಾಂತ. ಇದಲ್ಲದೆ ತನು

ಮನ ಧನವರ್ಪಿಸುವ ರಹಸ್ಯವ ತಿಳಿದವರು. ತಿಳಿದವರಾದುದರಿಂದ ತನುವೆ ಗುರುವಾಗಿ ಬೆಳಗಿತ್ತು. ಮನವೆ ಲಿಂಗವಾಗಿ ಬೆಳಗಿತ್ತು. ಧನವೆ ಜಂಗಮವಾಗಿ ಬೆಳಗಿತ್ತು. ತಿಳಿಯದೆ ಅರ್ಪಿಸಿದುದು ಮಹಾಪಾಪಕ್ಕೀಡು ಮಾಡಿತ್ತು.

ಲಿಂಗಘನವಾದಲ್ಲಿ ತನಗೆ ಅರ್ಪಿತವಾದ ತನುಗುಣಾದಿಗಳು ನಷ್ಟ ಮಾಡಬೇಕಲ್ಲವೆ ? ಪ್ರಕಾಶಮಯವಾದಲ್ಲಿ ಕತ್ತಲೆ ನಷ್ಟಮಾಡಬೇಕಲ್ಲವೆ ? ತನುಗುಣಾದಿಗಳ ಅರ್ಪಿಸಿದಲ್ಲಿ ತನುವಿಂಗೆ ನಿರವಯದ ಅರುವು ಪ್ರಜ್ವಲಿಸಿತೆ ? ನಿರ್ಗುಣದರಿವು ಬೆಳಗಿತೆ ? ನಿಃಶೂನ್ಯ ಲಿಂಗದರಿವು ವಿದಿತವಾಯಿತೆ ? ಇವುಗಳ ಘನತ್ವವರಿಯದೆ ಶರಣರು ತಮ್ಮ ತಮ್ಮ ತನುಗುಣಾದಿಗಳು ಅರ್ಪಿಸಿದುದೆಂತು ? ಅವು ಮೊದಲಿದ್ದಂತೆ ಇದೆ. ಈ ದೋಷ, ಈ ಅರ್ಪಿತ ಮಾಡುವ ಕರ್ಮ ನಿಮಗೆ ನಿಜವಾಗಿಹುದೆಂದಲ್ಲಿ ಮುಂದೆ ಇವು ನಿಮ್ಮನ್ನು ಕಾಡಿಹುದಯ್ಯ ಎಂದು ಎಚ್ಚರ ಮಾಡಿದ್ದಾನೆ.

ಪೂರ್ವಿಕರು ಲಿಂಗಯ್ಯನಿಗೆ ಅರ್ಪಿಸುವ ವಿಧಾನ ಏಕೆ ಹಾಕಿದರು ? ಈ ಅರ್ಪಿಸುವ ವಿಧಾನದಿಂದ ಇಲ್ಲದುದು ಇಲ್ಲವಾಗಿ ಈ ಇಲ್ಲೆಂಬುದು ಇಲ್ಲವಾಗಿ ಇದ್ದ ವಸ್ತುವೆ ತಾನಾಗಿ ಬೆಳಗುವ ಘನದಿರುವು ಸಕಲರಿಗೂ ವಿದಿತವಾಗಲೆಂದು ತನು, ಮನ, ಧನವರ್ಪಿಸುವ ನಿಯಮ ಹಾಕಿದರು.

ಇಲ್ಲೆಂಬುದನಿಲ್ಲೆನಬಲ್ಲರೆ ಅರ್ಪಿತ, ಉಂಟೆಂಬುದ ನುಂಟೆನಬಲ್ಲರೆ ಪ್ರಸಾದ, ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ ಆ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವಾಗಿ ಆ ಪ್ರಸಾದವೆ ತಾನಾಗಿ ಬೆಳಗುತ್ತಿಪ್ಪನಯ್ಯ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ.

ಅರ್ಪಿತದ ಘನತ್ವವರಿಯುವುದು ಮಹಾನುಭವಿಗಳ ಮಹದರುವಿನಿಂದ ವಿದಿತವಾಗುವುದು. ಕತ್ತಲೆಯ ಪರಿಹಾರ ಪ್ರಕಾಶಮಾನವಾಗಿಹ ಬೆಳಗು ಬೆಳಗಿದಾಗಲ್ಲವೆ ? ಹಾಗೆ ಅರ್ಪಿತ ಮಾಡುವ ಗುಟ್ಟು ಶರಣರ ಸ್ವಾನುಭವವೆಂಬ ಬೆಳಗು ಬೆಳಗಿದಾಗ ಸಹಜ ಅರ್ಪಿತದ ರಹಸ್ಯವಿದಿತವು. ಇಲ್ಲೆಂಬುದು ಇಲ್ಲೆನಬಲ್ಲರೆ ಅರ್ಪಿತ, ಓ ! ನಿರವಯ ಲಿಂಗದಲ್ಲಿ ನಿರ್ಗುಣ ಲಿಂಗದಲ್ಲಿ ತನುವೆಂಬ ಕುರುಹು ಇಲ್ಲ ತನುವಿನ ಗುಣಗಳಾಗಿಹ ಷಡ್ವಿಕಾರಗಳು ಇಲ್ಲ, ನಿರವಯವದು ನಿರೂಪವು. ನಿರುಪಮವು ನುಡಿಗೆಡೆಗೊಡದ ಘನವು ಸತ್ ಅಸತ್ ಎಂಬುದಕ್ಕೂ ಸಮಪ್ರಕಾಶಮಾನವಾದ ತತ್ವ , ಸತ್ ಎಂಬುದಕ್ಕೂ ಅವಕಾಶಕೊಡದ ಘನ, ಅಸತ್ ಎಂಬುದಕ್ಕೂ ಅವಕಾಶ ಕೊಡದ ಘನ, ಈ ಸಂಜ್ಞೆಯಿಂದ ತಿಳಿಯಹೋದಾಗ ಈ ತನುವೆಂಬ ಕುರುಹ ಇದರ ಗುಣಗಳಾಗಿಹ ಷಡ್ವಿಕಾರಗಳು ಇಲ್ಲೆಂಬುದಕ್ಕೂ ಅವಕಾಶವಿಲ್ಲದಂತಾಗಿ ಶಬ್ದಮುಗ್ಧನಾಗಿ ನಿರವಯವಾಗಿಹ ತನ್ನಿರುವಿನ ಹಿರಿಮೆ ಪ್ರಜ್ವಲಿಸಿದಾಗ ಇಲ್ಲೆಂಬುದು ಇಲ್ಲೆನಬಲ್ಲರೆ ಅರ್ಪಿತವೆಂಬ ಮಹಾನುಭವದ ಅರಿವು ತನ್ನೊಳ ಉದಯಿಸುವುದು.

ನಿರವಯವಾಗಿಹ ಲಿಂಗ, ನಿರ್ಗುಣವಾಗಿಹ ಲಿಂಗ, ಉಂಟೆಂಬುದನುಂಟೆನಬಲ್ಲರೆ ಪ್ರಸಾದ. ಇಲ್ಲಿ ನುಡಿದು ಹೇಳಲು ಅವಕಾಶವಿಲ್ಲ, ತಿಳಿಯುವುದು ಮುಖ್ಯಪ್ರಧಾನವಾಗಿದೆ. ನಿರವಯ ನಿರ್ಗುಣ ನಿಃಶೂನ್ಯವೆಂಬುದು ಇದು ಮಹದರುವಿನ ಕಾರುಣ್ಯ ಗುರು ಕಾರುಣ್ಯ ಗುರ್ವಾನುಗ್ರಹ. ಇದನ್ನು ತಿಳಿಯ ಹೋಗುವುಡೆ ನುಡಿಗೆಡೆಗೊಡದ ಘನದಿರುವಿನ ಅರುವು ಅದು ಉಂಟೆಂಬುದನುಂಟೆನಬಲ್ಲರೆ ಪ್ರಸಾದವೆಂದು ಹೇಳಿಹರು.

ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದ : ತನ್ನ ಅಂತರಂಗದೊಳ ಬೆಳಗಿರ್ದ ಜ್ಞಾನ ಪ್ರಸಾದ ? (ಅರಿವು) ಅಹಂಕಾರ ತಾಕದೆ ತಿಳಿದ ಅರಿವು ಪ್ರಸಾದವಾಗುವುದು. ಉದಾರಣೆ ಸೂರ್ಯಪ್ರಕಾಶ ಆಕಾಶದಲ್ಲಿ ಬೆಳಗುವುದು ಕಣ್ಣಿನಿಂದ ಕಾಣುತ್ತಾನೆ. ರವಿಯು ಶಬ್ದಮುಗ್ಧ ಕಣ್ಣು ಶಬ್ದಮುಗ್ದ ಮಾತಾಡುವ ಜಿಹ್ವೆಯ ಕಾರ್ಯ ಅಲ್ಲಿ ನಿರುಪಯೋಗ. ಹಾಗೆ ತನ್ನ ಅಂತರಂಗದೊಳ ಬೆಳಗಿರ್ದ ಘನ, ಜ್ಞಾನ ಜ್ಯೋತಿ ಸ್ವಯಂಜ್ಯೋತಿ ಶಬ್ದಮುಗ್ಧ. ಅದನ್ನು ಅರು ಹೃದಯ ಶಬ್ದಮುಗ್ಧವಾಗಿರುವಲ್ಲಿ ಅದನ್ನು ಭಾಷೆಯಿಂದ ಹೇಗೆ ವಿಸ್ತರಿಸುವುದು. ಅದಕ್ಕಾಗಿ ಅಹಂಕಾರ ತಾಕದೆ ತಿಳಿದುದೆ ಪ್ರಸಾದವಾಗಿದೆ ಎಂದು ಹೇಳಿಹರು.

ಆ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವಾಗಿ ಆ ಪ್ರಸಾದವೆ ತಾನಾಗಿ ಬೆಳಗುತ್ತಿಪ್ಪನಯ್ಯ ಕೂಡಲಚೆನ್ನಸಂಗಯ್ಯ : ನಿಮ್ಮ ಶರಣ ಪ್ರಸಾದಿಯ ಪರಮ ಪರಿಣಾಮವೆ ಪ್ರಸಾದವಾಗಿ ಅಂದರೆ ತನ್ನಂತರಂಗದೊಳ ಬೆಳಗಿರ್ದ ಬೆಳಗುಳ್ಳ ಬೆಳಗು ತನ್ನಿಂದ ತಾನು ಅರಿದರಿದುದು ನೋಡಿದಡೆ ಪರಮಾನಂದ, ಪರಮಾಮೃತ, ಅದು ಜ್ಞಾನದ ಜ್ಞಾನ, ಅರುವಿಂಗರುವು ಪ್ರಜ್ವಲಿಸಿ ಅದುವೆ ತಾನಾಗಿ ಬೆಳಗುತ್ತಿಪ್ಪುದು. ಇದು ತನ್ನ ಹೃದಯ ಅರು ಹೃದಯವಾದ ಘನವು ಇದು ಮಾತಿನ ಮಹಾಂತರ ಅರುವು ಇದಲ್ಲ, ಅರುವೆಂಬುದು ತಾಕದ ಅರುವೆನ್ನದ ಅರುವು. ನುಡಿಗಿಂಬಿಲ್ಲ, ಇದನ್ನು ನುಡಿಗಿಂಬು ಮಾಡಿ ಉಂಟೆಂಬುದು ಉಂಟು, ಇಲ್ಲೆಂಬುದು ಇಲ್ಲೆನಬಲ್ಲರೆ ಮಾತಿನಲ್ಲಿ ಸರಿಮಾಡಿದರೆ ಇದುವೆ ಮುಂದೆ ಕಾಡಿಹುದಯ್ಯ ಗುಹೇಶ್ವರಾ ಎಂದು ಹೇಳಿಹರು.

**163**

**ನಾನು ಸಜ್ಜೀವವೊ, ನೀನು ಸಜ್ಜೀವವೊ?**
**ನಿನಗೆಯೂ ಎನಗೆಯೂ ಸಂಬಂಧವಯ್ಯಾ,**
**ನಿನ್ನನೆಂತು ಪ್ರಾಣಲಿಂಗವೆಂದು ಪೂಜಿಸುವೆನಯ್ಯಾ?**
**ಎನ್ನ ಪ್ರಸಾದವು ನಿನಗೆ ನಿನ್ನ ಪ್ರಸಾದ ಎನಗೆ.**
**ಎನಗೆಯೂ ನಿನಗೆಯೂ ಏಕಪ್ರಸಾದ ಕಾಣಾ ಗುಹೇಶ್ವರಾ.** ॥ 580 ॥

**ತಾತ್ಪರ್ಯ** : ನಾನು ಸಜ್ಜೀವವೊ ? ನೀನು ಸಜ್ಜೀವವೊ ? ನಿನಗೆಯೂ ನನಗೆಯೂ ಸಂಬಂಧವಯ್ಯ, ನಿನಗೆ ನನಗೆ ಸಬಂಧವಿದ್ದುದು ಅದಾರು ಬಲ್ಲರು. ಅರ್ಚಕರಾಗಲಿ, ಭಾವಿಕರಾಗಲಿ, ಜ್ಞಾನಿಗಳಾಗಲಿ ನನ್ನ ನಿನ್ನ ಸಂಬಂಧ ಬಹು ವಿಧವಾಗಿ ತಿಳಿದಿಹರು.

ಪೂರ್ವದಲ್ಲಿ ಪ್ರಮಥಾದಿಗಳು, ಅಣ್ಣ ಬಸವಣ್ಣ ಶರಣ ಶರಣೆಯರು ನಿನಗೆ ನನಗೆ ಸಂಬಂಧವಿದ್ದುದ ತೋರಿ ಸಕಲ ಲೋಕಂಗಳ ಪಾವನ ಮಾಡ ಬಂದ ಮಹಾಮಹಿಮರು ಹಾಗೂ ಮಹದರುವುಳ್ಳ ಮಹಾನುಭವರು. ನನಗೆ ನಿನಗೆ ಇದ್ದ ಸಂಬಂಧ ಕೂಡದಗಲದ ಘನ ಸಂಬಂಧ ಆ ಸಂಬಂಧ ಅರುವ ಅರಿದಿಹೆನೆಂಬುವರಿಗೂ ಮೀರಿದ ಸಂಬಂಧ ಭಾವ ಭಾವಿಸಿಹೆನೆಂಬುವರಿಗೂ ಮೀರಿದ ಸಂಬಂಧ. ಭೇದಾಭೇದ ಜ್ಞಾನವುಳ್ಳವರಿಗೂ ಮೀರಿದ ಸಂಬಂಧ, ಓಹೊ !! ಇಂತಪ್ಪ ಮೀರಿದ ಘನದಿರುವುಳ್ಳುದನು

ಬಸವರಸರು, ಸದ್ಗುರು ಸಾಧಕರಾಗಿ ನಿನಗೆ ಎನಗೆ ಸಂಬಂಧವ ತೋರಿಸಿದ ಮಹಾಮ ಹಿಮ ನೋಡಯ್ಯ.

ವೇದ ವೇದಾಂತಗಳಿಗೆ ಸಾಧ್ಯವಾಗಿಹ ಅನುಪಮ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲದಲ್ಲಿ, ನಾದಬಿಂದು ಕಲೆಗಳಿಗೆ ಅಭೇದ್ಯವಾಗಿಹ ಅಚಲಿತ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ. ವಾಙ್ಮನಕ್ಕಗೋಚರವಾಗಿಹ ಅಖಂಡಿತ ಲಿಂಗವ ತಂದುಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ಇನ್ನು ನಾನು ಬದುಕಿದೆನು. ನಾ ಬಯಸಿದ ಬಯಕೆ ಕೈಸಾರಿತಿಂದು, ಕೂಡಲಸಂಗಮದೇವಾ.

ಓ ಲಿಂಗ ದೇವನೆ ! ಕರಸ್ಥಲ ರೂಪಿ ಸುಜ್ಞಾನದಲ್ಲಿ ಬೆಳಗುವ ಬೆಳಗುಳ್ಳ ಘನವೆ ಎನಗೆಯೂ ನಿನಗೆಯೂ. ಇದೆಂಥ ಸಂಬಂಧ ಅನುಪಮ ಸಂಬಂಧ, ಅಚಲಿತ ಸಂಬಂಧ, ಅಖಂಡಿತ ಸಂಬಂಧ, ಓಹೋ ! ನನ್ನ ನಿನ್ನ ಸಂಬಂಧ, ವೇದ ವೇದಾಂತಗಳಿಂದಲೂ ವರ್ಣಿಸಲು ನಿಲುಕದ ಸಂಬಂಧವಾಯಿತೇ ! ಇದೆಂಥ ಸದ್ಗುರುವರ ಕೃಪೆ, ತಾನು ಮೌನ ವಾಗಿ ಮೌನೇಶನನ್ನು ನಿನ್ನ ಸುಜ್ಞಾನರೂಪಿ ಕರಕಮಲದಲ್ಲಿ ಇತ್ತನೇ ! ಇದೆಂಥ ಗುಟ್ಟು, ಇದೆಂಥ ರಹಸ್ಯ, ಎನಗೆಯೂ ನಿನಗೆಯೂ ಮೂಕ ಮೂಕರಾಗಿ ಸಂಬಂಧವಾಯಿತ್ತೆ ! ಇದೆಂಥ ವರ ಕೃಪೆ, ಹೃದಯದ ಹೃದಯವಾಗಿ ಲಿಂಗದ ಲಿಂಗವಾಗಿ ಸಂಬಂಧವಾಯಿತ್ತೇ ? ಇದೆಂಥ ಪುಣ್ಯದ ಪುಣ್ಯ! ಎನಗೆಯೂ ನಿನಗೂ, ಅರುಹೃದಯ ರಾಗಿ ಅರುವಿಂಗರುವಾಗಿ ಸಂಬಂಧವಾಯಿತ್ತೆ ? ಓಹೊ !! ಇದು ಅನುಪಮನ ನಿಲು ವುಳ್ಳ ಸಂಬಂಧ ಸುಖದ ಸುಖಿಯಾಗುವ ಸಂಬಂಧ, ಅವರ್ಣೀಯ ಸಂಬಂಧವಾಯಿತ್ತೆ !

ನನ್ನ ನಿನ್ನ ಸಂಬಂಧ ಸಪ್ತ ನಾದದಲ್ಲಿ ಹುಡಿಕಿದರೂ ಲಭ್ಯವಾಗದ ಸಂಬಂಧ, ಮಾನವಮಾನವರಲ್ಲಿ ಸುರಾಸುರರಲ್ಲಿ ದೇವಗಣ, ರುದ್ರಗಣ, ಪ್ರಮಥಗಣರಲ್ಲಿಯೂ ದೊರೆಯದ ಸಂಬಂಧ. ಆವಾವ ಕುರುವುಳ್ಳ ಕಲೆಯಲ್ಲಿ ಹುಡುಕಿದರೂ ದೊರೆಯದ ಸಂಬಂಧ, ಹುಡುಕಿದವರಿಗೆ ಸಿಗದ ಸಂಬಂಧ, ಹುಡಕಿದವರಿಗೂ ಪ್ರಾಪ್ತವಾಗದ ಸಂಬಂಧ ಗುರು ಕರುಣೆಯಿಂದ ಅನುವ ದೊರೆತವರಿಗೆ ಎನಗೆ ನಿನಗೆ ಸಂಬಂಧವಯ್ಯ.

ಓಹೊ ! ಲಿಂಗದೇವನೇ, ನನ್ನ ನಿನ್ನ ಸಂಬಂಧ, ಆಹ್ವಾನಿಸುವವರಿಗೆ ಇಲ್ಲ, ವಿಸರ್ಜಿಸುವವರಿಗಿಲ್ಲ, ಜಪತಪದಿಂದುಕ್ತರಾದವರಿಗಿಲ್ಲ, ಪಾಠ ಪಾರಾಯಣದಿಂದುಕ್ತರಾದವ ರಿಗೂ ಇಲ್ಲ, ಸ್ತೋತ್ರ ಧ್ಯಾನ ಮೌನಾದಿಗಳಿಗೂ ಇಲ್ಲ, ಅರುವಿಂಗರುವಾಗಿ ಲಿಂಗಕ್ಕೆ ಲಿಂಗ ವಾಗಿ ಅರಿದರಿದು ನೋಡಿದವರಿಗೆ ಸಾಧ್ಯವು.

ಶೃತಿಗಗೋಚರವಾಗಿಹ ಘನವಸ್ತುವೇ ನುಡಿಗೆಡೆಗೊಡುವದದೆಂತು ? ಅಕಥನೀ ಯವು, ಕಥನಕ್ಕೊಳಪಡುವದದೆಂತು ? ಇದು ಶಬ್ದವೇದಿಗಳಿಗೆ ಅಸಾಧ್ಯವು ಉಪಾಧಿಕ ಮನ, ಉಪಾಧಿ ರಹಿತ ಮನ, ಸಂಗ ಮನ, ನಿಸ್ಸಂಗ ಮನ ಈ ದ್ವಂದ್ವಗಳ ಹಲುಬಾಟ ಮುಕ್ತವಾದಲ್ಲಿ ಎನಗೆ ನಿನಗೆ ಸಂಬಂಧವಯ್ಯ. ಆಗ ನಾನು ಸಜ್ಜೀವವೊ ? ನೀನು ಸಜ್ಜೀ ವವೊ ? ಎಂಬ ಯತಾರ್ಥ ಅರಿವು ಹೃದಯದೋಳ್ ತನ್ನಿಂದ ತಾನೆ ಬೆಳಗುವುದು.

ನಾನು ನೀನು ಒಂದಾದ ಕೂಟ, ಬಹು ರಹಸ್ಯವಾಗಿಹ ಕೂಟ ಸದ್‌ಜ್ಞಾನ ಭರಿತ ವಾಗಿಹ ಕೂಟ, ಪೂರ್ಣಮದಃ ಪೂರ್ಣಮಿದಂ ಎಂದೆನ್ನುವ ರಹಸ್ಯದಿಂದುಕ್ತವಾದ ಕೂಟ, ಇದು ಮುನ್ನ ಮುನ್ನಲಾದ ಕೂಟ, ತನ್ನಿಂದ ತಾನರಿದರಿದು ಅದುವೆ ಆಗಿಹ ಕೂಟ ಶಬ್ದ

ಮುಗ್ದವಾಗಿಹ ಕೂಟ, ಇದುವೆ ನಾನು ನೀನು ಒಂದಾದ ಕೂಟ, ಜೀವದ ಜೀವವಾಗಿಹ ಕೂಟ, ಇದುವೆ ಸಜ್ಜೀವ, ಇದುವೆ ನಾನು, ಇದುವೆ ನೀನು ನನ್ನ ನಿನ್ನ ಇರುವಿನಿರುವ ಶಬ್ದಕ್ಕೆ ತೆರಹಿಲ್ಲ ನೋಡಾ.

ಲಿಂಗವು ಸಜ್ಜೀವವೊ ? ಶರಣನು ಸಜ್ಜೀವವೊ ? ಇವರ ರಹಸ್ಯವ ಅದಾರು ಬಲ್ಲರು. ಅನುಪಮವು ಉಪಮೆಗೆ ಅಳವಡದು. ಅಚಲಿತವು ರೂಪಾರೂಪಕ್ಕೊಳಪಡದು, ಅಖಂಡ, ಖಂಡವಾಗದು ತುಣ ತುಣಕಾಗದು, ಅದನ್ನು ಮನ ವಾಣಿಯು ಸಂಯೋಗವು ಮಾಡವು ಇದು ಕಾರಣ ನಾನು ಸಜ್ಜೀವ, ನೀನು ಸಜ್ಜೀವವು, ನಿನ್ನನೆಂತು ಪ್ರಾಣ ಲಿಂಗವೆಂದು ಪೂಜಿಸುವೆನಯ್ಯ ಓಹೊ ! ನಿನ್ನನೆಂತು ನಾನು ನನಗಿಂತ ಭಿನ್ನನೆಂದು ಪೂಜೆ ಮಾಡಲಿ, ಸುತ್ತಿಸಲಿ, ಪ್ರಾರ್ಥಿಸಲಿ, ನೆನೆಯಲಿ, ನನ್ನೊಳು ನಿನ್ನನ್ನು ಭಿನ್ನವೆನ್ನೆನು, ಅಭಿನ್ನವೆನ್ನೆನು, ಭಿನ್ನಾಭಿನ್‌ವೆನ್ನೆನು, ನುಡಿಗೆಡೆಗೊಡದ ಘನದಿರುವಿನ ಅರುವೆ ಎನಗೆ ನಿನಗೆ ಸಂಬಂಧವಾಗಿರುವಲ್ಲಿ ನಿನ್ನನ್ನು ಪ್ರಾಣಲಿಂಗವೆಂದು ಪೂಜಿಸುವೆನೆಂತು.

ಎನ್ನ ಪ್ರಸಾದ ನಿನಗೆ, ನಿನ್ನ ಪ್ರಸಾದ ಎನಗೆ. ಎನಗೆಯೂ ನಿನಗೆಯೂ ಏಕ ಪ್ರಸಾದ ಕಾಣಾ ಗುಹೇಶ್ವರಾ : ಪ್ರಸಾದದ ಹಿರಿಮೆ ಬಹು ಘನವಾದುದು ಬಹು ಭಾವಿಕರೇ ಇರಲಿ, ನಿಷ್ಠಾವಂತರೆ ಇರಲಿ, ಪೂಜಕರೆ ಇರಲಿ, ಆರೆ ಇರಲಿ, ಪ್ರಸಾದದ ಹಿರಿಮೆಯ ಘನತೆಗೆ ಎಲ್ಲರೂ ಒಪ್ಪುವುದು. ಒಪ್ಪಬಹುದು, ಆದರೆ ಪ್ರಸಾದದ ಘನವರಿತವರು ವಿರಳ.

ಕೊಟ್ಟುದು ಸೂತಕ, ಮುಟ್ಟಿದುದು ಸೂತಕ, ಕೊಟ್ಟು ಕೊಂಬುದೆ ಸೂತಕ, ಲಿಂಗ ನಿಜೈಕ್ಯಂಗೆ, ಎಲೆ ಕೂಡಲ ಚೆನ್ನಸಂಗಯ್ಯ ಲಿಂಗ ನಾನೆಂಬುದೆ ಸೂತಕ. ಪ್ರಸಾದಿಗಳೆಂದರೆ ಸೂತಕ ವಿರಹಿತರು, ಒಬ್ಬರಿಂದ ಕೊಟ್ಟುದು ಪ್ರಸಾದವಾಗದು, ಮತ್ತೊಬ್ಬರಿಂದ ಮುಟ್ಟಿ ತೆಗೆದುಕೊಂಡುದು, ಪ್ರಸಾದವಾಗದು, ಕೊಡಕೊಳ್ಳುವುದಕ್ಕೆ ನಿಲುಕದ ಜ್ಞಾನ ಪ್ರಸಾದವು ಕೊಡಕೊಳ್ಳುವ ವ್ಯವಹಾರಕ್ಕೆ ನಿಲುಕದು. ಶಬ್ದವೇದಿಗಳು ವಾಣಿರೂಪದಿಂದ ಕೊಟ್ಟುದು ಸೂತಕವಾಗುವುದು. ಅದನ್ನು ಶ್ರವಣೇಂದ್ರಿಯ ಮೂಲಕ ಮುಟ್ಟಿದುದು ಸೂತಕವಾಗುವುದು. ಗುರು ಶಿಷ್ಯರಾಗಿ ಭಕ್ತ ಜಂಗಮರಾಗಿ ಶ್ರವಣ ರೂಪದಲ್ಲಿ ಮನನ ರೂಪದಲ್ಲಿ ಕೊಟ್ಟು ಕೊಂಡಿಹೆವೆಂದರೂ ದೋಷವಾಗುವುದು. ಲಿಂಗವರಿತವರಿಗೆ ಲಿಂಗ ನಾನೆಂಬುದೆ ಸೂತಕವಾಗಿರುವಲ್ಲಿ ಪ್ರಸಾದದ ಹಿರಿಮೆ ಬಹು ಘನತರವಾಗಿಹುದು.

ಲಿಂಗ ಮುಖವನರಿದವಂಗೆ ಅಂಗವೆಂಬುದಿಲ್ಲ, ಜಂಗಮ ಮುಖವನರಿದವಂಗೆ ಸಂಸಾರವೆಂಬುದಿಲ್ಲ, ಪ್ರಸಾದ ಮುಖವನರಿದವಂಗೆ ಇಹಪರವೆಂಬುದಿಲ್ಲ, ಈ ತ್ರಿವಿಧ ಒಂದೆಂದರಿದವಂಗೆ ಮುಂದೆ ಏನೂ ಇಲ್ಲ, ಈ ತ್ರಿವಿಧದ ನೆಲೆಯು ಶೃತಿ ಸ್ಮೃತಿಗಳರಿಯವು, ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ, ಎನ್ನ ಪ್ರಸಾದ ನಿನಗೆ, ನಿನ್ನ ಪ್ರಸಾದ ಎನಗೆ, ಲಿಂಗ ಜಂಗಮ ಪ್ರಸಾದ ಒಂದೆಂದರಿದ ಪ್ರಸಾದ, ಲಿಂಗ ಅನುಪಮ, ಜಂಗಮ ಅನುಪಮ, ಪ್ರಸಾದ ಅನುಪಮ, ಅನುಪಮವಾವುದು ಅದು ನುಡಿಗೆಡೆಗೊಡದ ಘನವು. ಲಿಂಗವು ಲಿಂಗವೆನ್ನಲು ಅವಕಾಶಕೊಡದ ಘನವಾಗಿದೆ. ಜಂಗಮವು ಜಂಗಮವೆನ್ನಲು ಅವಕಾಶಕೊಡದ ಘನವಾಗಿದೆ. ಪ್ರಸಾದ ಪ್ರಸಾದವೆನ್ನಲು ಅವಕಾಶ ಕೊಡದ ಘನವಾಗಿಹುದು. ಒಂದೆಂಬೆನೆ ತ್ರಿವಿಧವು, ತ್ರಿವಿಧವೆಂಬೆನೆ ಒಂದು. ಇಲ್ಲಿ ಭಾವಕ್ಕಿಂಬು ಇಲ್ಲ, ಶಬ್ದಮೀಸಲು,

ನುಡಿಗೆಡೆಯಿಲ್ಲ, ಎಡೆಗೆ ಕಡೆಯಿಲ್ಲ, ಗುಹೇಶ್ವರ ಲಿಂಗ ವೇಧಿಸಲೊಡನೆ ಗುಹೇಶ್ವರ ಲಿಂಗ ವರಿತವರು, ಭಾವಕ್ಕಗಮ್ಯವಾಗಿಹ ಘನವರಿತವರು, ನಾನೀನೆಂಬುದಕ್ಕೂ ತೆರಹಿಲ್ಲದ ಜ್ಞಾನ ವಂತರು. ಸದ್‌ಜ್ಞಾನಭರಿತರು ನಿಶಬ್ದವೇದಿಗಳು ಆಗಿರುವಲ್ಲಿ, ಎನ್ನ ಪ್ರಸಾದ ನಿನಗೆ ನಿನ್ನ ಪ್ರಸಾದ ಎನಗೆ, ನಿನ್ನಿರುವಿನ ಅರುವೆ ನನ್ನಯ ಇರುವಿನ ಅರುವಾಗಿದೆ. ನನ್ನಯ ಇರು ವಿನ ಅರುವೆ, ನಿನ್ನಿರುವಿನ ಅರುವಾಗಿದೆ. ಇದು ಕಾರಣ, ಎನ್ನ ಪ್ರಸಾದ ನಿನಗೆ, ನಿನ್ನ ಪ್ರಸಾದ ಎನಗೆ ಏಕೆಂದರೆ ಎನಗೆಯೂ ನಿನಗೆಯೂ ಏಕ ಪ್ರಸಾದ ಕಾಣಾ ಗುಹೇಶ್ವರಾ.

ಎನಗೆಯೂ ನಿನಗೆಯೂ ಏಕ ಪ್ರಸಾದ : ಓ ಲಿಂಗ ಘನವೆ, ನನ್ನ ನಿನ್ನ ಒಂದೆ ಪ್ರಸಾದ, ಒಂದೆ ಇರವು ಅರಿವು, ಒಂದೆ ಮುಖ ಅನ್ಯವಿಲ್ಲವು, ನಿನ್ನದೆಂದರೂ ಅದುವೆ ಮುಖ ನನ್ನದೆಂದರೂ ಅದುವೆ ಮುಖ. ಅದಾವ ಮುಖ, ಮುನ್ನ ಮುನ್ನಲಾದ ಮುಖ, ತನ್ನಿಂದ ತಾನಾದ ಮುಖ, ಈರ್ವರ ಸ್ವರೂಪ ಒಂದೆ ಇದ್ದುದರಿಂದ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಅನುಪಮ ಜ್ಞಾನ ನನ್ನದು ಅದುವೆ ನಿನ್ನದು ಆದುದರಿಂದ ವಾಙ್ಮನೋತೀತವಾದುದು. ಅದಕ್ಕಾಗಿ ಒಂದೆ ಪ್ರಸಾದವೆಂದು ಹೇಳಿಹರು. ಇದಲ್ಲದೆ ಅರುವೆ ಪ್ರಸಾದವೆನ್ನುವ ಅಧ್ಯಾತ್ಮರುಗಳು ಇದ್ದಾರೆ.

**164**

**ಅರುವಿನೊಳಗೊಂದು ಮರವೆಯದೆ, ಮರಹಿನೊಳಗೊಂದು ಅರಿವದೆ.**
**ಅರಿವು ಮರವೆಯೆಂಬೆರಡೂ ಅಳಿದಡೆ ನಿರ್ವಯಲದೆ.**
**ತಾನೆಂಬಲ್ಲಿ ನಿಷ್ಪತ್ತಿಯಿದೆ- ಇದೇನು ಹೇಳಾ ಗುಹೇಶ್ವರಾ?** ॥ 582 ॥

**ತಾತ್ಪರ್ಯ** : ಅರುವಿನೊಳಗೊಂದು ಮರವು, ಮರವೆಯೊಳಗೊಂದು ಅರುವು ಅದೆ : ಆಶ್ಚರ್ಯ ಬೆಳಕಿನೊಳಗೊಂದು ಕತ್ತಲೆ ಇದೆ, ಕತ್ತಲೆದೊಳಗೊಂಡು ಬೆಳಕು ಅದೆ, ಈ ಮಾಯಿಕದ ಮರ್ಮವ ಅರಿತವರಾರು ಹೇಳಾ ? ಬೆಳಕು ನೋಡುವುಡೆ ಕಣ್ಣಿಂಗೆ ಪ್ರಕಾಶವೆ ಪ್ರಕಾಶ. ಅಲ್ಲಿ ಕತ್ತಲೆಯ ಸುಳಿವು ಇಲ್ಲದಂತೆ ಕಂಡುಬರುತ್ತದೆ. ಒಳಗೊಳಗೆ ಪ್ರಕಾಶ ಕುಗ್ಗುತ್ತ ಕುಗ್ಗುತ್ತ ಬೆಳಕ ಕಾಣದೆ ಕತ್ತಲವೆ ಸಿದ್ಧವಾಗುವುದು. ಕತ್ತಲು ! ಇದು ಕವಿ ದಾಗ ಜಗವೆಲ್ಲ ಅಂಧಃಕಾರ. ಅಂಧಃಕಾರವೆಂಬೆನೆ ? ಇದು ಒಳಗೊಳಗೆ ಕ್ಷೀಣವಾಗುತ್ತ ಕೊನೆಗೆ ಪೂರ್ಣ ಇಲ್ಲವಾಗಿ ಬೆಳಕೆ ಸಿದ್ಧವಾಗುವುದು, ಇದೆಂಥ ಆಶ್ಚರ್ಯ.

ಬೆಳಕೆಂದಲ್ಲಿ ಕತ್ತಲು, ಕತ್ತಲೆಂದಲ್ಲಿ ಬೆಳಕು, ಇದು ತೋರಿ ಇಲ್ಲವಾಗುವ ಬೆಳಕು ಸರಿ, ಕತ್ತಲೆಯು ಸರಿ, ಇವೆರಡು ಸ್ಥಿರವಾದಂತೆ ಭಾಸವಾಗುತ್ತಿವೆ. ನೋಡುವುಡೆ ಕ್ಷೀಣ ದಿಂದುಕ್ತವಾಗಿವೆ. ಈ ತೋರಿಕೆಗೆ ಕೆಲಬರು ಪ್ರೀತಿಸುವರು. ಪ್ರೀತಿಸುವ ಜನವೆ ಬಹು ಸಂಖ್ಯೆಯಲ್ಲಿದೆ. ತೋರಿಕೆಯ ಬೆಳಕಿಗೆ ಪ್ರೀತಿಸುವವರು ಅಸಂಖ್ಯರು, ತೋರಿಕೆಯ ಕತ್ತಲೆಗೂ ಪ್ರೀತಿಸುವವರು ಅಸಂಖ್ಯರು, ಇಲ್ಲಿಯೆ ಲೋಕವು ಹುದುಗಿದೆ. ಲೌಕಿಕವು ಹುದುಗಿದೆ. ಅಲೌಕಿಕವು ಇದರಲ್ಲಿಯೆ ಹುದುಗಿದೆ. ಬಹು ಕುಶಲಮತಿವಂತರು, ವಿದ್ವಾ ನರು, ವೀರರು, ಸುಭಟರು, ಅಭ್ಯಾಸಿಗಳು, ಸಾಧಕರು, ಇಲ್ಲಿಯೆ ನೆಲೆಯೂರಿಹರು. ಕೆಲವರು ಮಾತ್ರ ಇವೆರಡವ ಅಳಿದು ಸ್ವತಂತ್ರರಾಗಿಹರು.

ತೋರಿಕೆಯ ಬೆಳಕಾವುದು ? ತೋರಿಕೆಯ ಕತ್ತಲೆ ಆವುದು, ಬೆಳಕಿನೊಳಗೆ ಕತ್ತಲೆ ಆವುದು ? ಕತ್ತಲೆಯೊಳಗೆ ಬೆಳಕಾವುದು ತೋರಿಕೆಯ ಬೆಳಕೆಂಬುದು ಅರುವು, ಅರುವು ಎಂಬುದು ತೋರಿಕೆಯ ಅರುವು, ಅರುವುನೊಳಗೊಂದು ಮರವು ಇದೆ. ಈ ಅರುವು ತನಗೆ ತೋರುವ ಅರುವು ಅದು ತನಗಿಂತ ಬೇರಾದ ಅರುವು, ಈ ಅರವು ಅಮರ ಅರವು ಅಲ್ಲ, ನುಡಿಗೊಳಪಟ್ಟ ಅರುವು, ಶೃತಿ ಸ್ಮೃತಿಯನ್ನೆ ಅವಲಂಬಿಸಿದ ಅರುವು, ಮತಿ ಗೊಳಪಟ್ಟ ಅರುವು, ಇದು ಜ್ಞಾನಕಾಂಡ ಅವಲಂಬಿಸಿರುವ ಅರುವು, ಶ್ರೀಗುರು ಕರುಣೆ ಯಿಂದ ಪ್ರಾಪ್ತವಾದ ಅರುವು, ಇದು ಉದಯಾಸ್ತಗಳಿಂದುಕ್ತವಾದ ಅರುವು, ಬಹು ಜಿಜ್ಞಾಸುಗಳು ಅಭ್ಯಾಸಿಗಳು ಇದರ ಶ್ರವಣ, ಮನನ, ನಿಧಿಧ್ಯಾಸದಲ್ಲಿ ತಮ್ಮ ಬಳಲಿಕೆಯ ಕಳೆದುಕೊಳ್ಳುವರು. ಹೇಗೆ ಹೇಗೆ ಬಳಲಿಕೆ ದೂರವಾಗುವುದು ಹಾಗೆ ಹಾಗೆ ಮನದ ಕಳ ವಳ ನಷ್ಟವಾಗಿ ಮನವು ಬ್ರಹ್ಮಾಕಾರವಾಗಿ ನಿಲ್ಲವುದು. ಅಂದರೆ ಅಂತರ್ಮುಖವಾ ಗುವುದು, ಕೆಲಬರು ಈ ಅಂತರ್ಮುಖ ನಿರವಯಲು ಎಂದು ತಿಳಿದು ಅದುವೆ ತನ್ನ ನಿಷ್ಪತ್ತಿಯು ಎಂದುಕೊಂಡ ಮತಿವಂತರು ಇದ್ದಾರೆ.

ಅರುವಿನೊಳಗೊಂದು ಮರವೆಯಿದೆ : ಇದು ಆಶ್ಚರ್ಯ ಪ್ರಭುದೇವ ಸಕಲ ಜಿಜ್ಞಾಸು ವೃಂದ, ಭಕ್ತ ವೃಂದವೆಲ್ಲವನ್ನು ಎಚ್ಚರಗೊಳಿಸಿಹನು. ಈ ಮಹಾಂತ ಅಪಾರ ಕರುಣಾಕರ. ತನ್ನಂತೆ ಮಾಡಿಕೊಳ್ಳುವ ದಯಾಮಯ. ಅರುವಿನೊಳಗೊಂದು ಮರವು ಹೇಗೆ ಅದೆ, ಇದು ಅಭ್ಯಾಸವೆ, ಘನವೆಂಬ ಮತಿವಂತರಿಗೆಲ್ಲ ಕಾಣುವುದಿಲ್ಲ, ಈ ಅರು ವನ್ನು ಅರಿಯ ಹೋದವರಿಗೆ ಕಾಣುವ ಮರವು, ಅರುವನ್ನು ಯತಾರ್ಥವರಿಯದವ ರಿಗೂ ಮುಗ್ಧ ಮಾಡುವ ಮರವು, ಅರುವ ಯತಾರ್ಥವರಿಯದಿದ್ದುದೆ ಮರವು ಅರುವು, ಅರುವು ಎಂಬುದು ಮರವು.

ಒಬ್ಬ ಬಾಲಕನು ಒಂದು ಸಭೆಗೆ ಹೋದ ಅಲ್ಲಿ ಬಹು ಪಂಡಿತರು ನೆರದಿದ್ದರು, ಶ್ರೋತೃಗಳು ಇದ್ದರು. ಪಂಡಿತರಾದವರು ತಮ್ಮ ಅನುಭಾವವನ್ನು ವಾಕ್ ವೈಖರಿ ಮೂಲಕ ಪ್ರವಚನ ಮಾಡುತ್ತಿದ್ದರು. ಅವರ ವಿಷಯ ಕೇಳಿ ಬಾಲಕನಿಗೂ ತಾನು ನಾಲ್ಕು ಮಾತನಾಡಬೇಕೆನಿಸಿ, ಅವನು ಪಂಡಿತರ ಸಮ್ಮುಖ ಹೋಗಿ, ಏನು ಸ್ವಾಮಿ ನಿಮ್ಮ ಪ್ರವ ಚನ ಕೇಳಿ ನನಗೆ ಬಹು ಸಂತೋಷವಾಗಿ ನನಗೂ ನಾಲ್ಕು ಮಾತಾಡಬೇಕೆನ್ನಿಸಿದೆ. ಆದರೆ ನನಗೆ ನಾಲಿಗೆಯು ಇಲ್ಲ, ಅದು ಇದ್ದರೆ ಮಾತಾಡುತ್ತಿದ್ದೆ ಎಂದನಂತೆ. ಆಗ ಅವರು, ಅಪ್ಪಾ, ನಮ್ಮ ಸಮ್ಮುಖದಲ್ಲಿ ನೀನು ನುಡಿವುದು ನಾಲಿಗೆಯೋ ಅಥವಾ ಬೇರೆಯೆ ? ನಾಲಿಗೆ ಇದ್ದು, ನಾಲಿಗೆಯಿಂದಲೆ ನುಡಿದು, ಅದು ಇಲ್ಲವೆನ್ನುವಿಯಲ್ಲ, ಅದು ನಾಲಿಗೆ ಯಲ್ಲದೆ ಬೇರಲ್ಲ ನಿನಗೆ ನೀನೆ ವಿಚಾರಿಸಿಕೊ ಎಂದರಂತೆ.

ಬಹು ಅಭ್ಯಾಸಿಗಳು ಅರುವು ಅರುವು ಎಂಬುದು ತಮಗೆ ಇದುರಾಗಿ ಕಾಣ ಬೇಕು. ತಮ್ಮ ಶರೀರ ಸಕಲ ಪ್ರಪಂಚ ಹೇಗೆ ತೋರುತ್ತದೆ ಹಾಗೆ ಅರುವು ಎಂಬುದು ನಮ್ಮಗಳಿಗೆ ಕಂಡರೆ ಬ್ರಹ್ಮಕಂಡಂತೆ ಎನ್ನುವವರಲ್ಲಿಯೆ ಮರವು ಅಲ್ಲಿಯೆ ವಾಸಮಾಡಿದೆ. ಅರು ಸ್ವರೂಪನಾಗಿಹ ತಾನು, ತನ್ನನ್ನು ಪ್ರತಿರೂಪವಾಗಿ ಕಾಣಬೇಕೆನ್ನುವ ಈ ಹುಚ್ಚು ತಿಳಿ ಯಗೊಡದಂತೆ ಮಾಡಿದೆ. ಮೌಢ್ಯನ ಮಾಡಿದೆ. ಅರುವಿನ ವಿಷಯದಲ್ಲಿ ತನ್ನಿಂದ ತನ್ನ ಯತಾರ್ಥವಾಗಿ ತಿಳಿಯದಂತಾಗಿ ಅರುವು ಅರುವು ಎಂದು ಹಲಬುವುದು ಅರುವಿನೊಳ

ಗೊಂದು ಮರವು ಎಂದು ಹೇಳಿಹರು.

ಈ ಮರವು ಇದ್ದುದು ಎಂದರೆ ಇಲ್ಲ, ಇಲ್ಲವೆಂಬೆನೆ ಇದ್ದಂತಾಗಿದೆ. ಅರುವು ಅರಿಯದಿದ್ದಲ್ಲಿ ಮರವು ಇದ್ದಂತಾಗಿದೆ. ಅರುವು ಅರಿದಲ್ಲಿ ಮರವು ಇಲ್ಲದುದು ಇಲ್ಲದುದು ಇದ್ದಂತಾದುದು ಆಶ್ಚರ್ಯ, ಮರವೆಯೊಳಗೊಂದು ಅರುವು ಅದೆ ಇದು ಆಶ್ಚರ್ಯವು.

ಈ ಮರವಿನ ವಾಸ ಪ್ರಪಂಚದಲ್ಲಿ ಇದುವೆ ವಿಶ್ವವಾಗಿದೆ. ಹದಿನಾಲ್ಕು ಲೋಕವಾಗಿದೆ. ಇದರ ವಿಸ್ತಾರ ಬಹು ವಿಸ್ತಾರವಾಗಿಹುದು. ಪಿಂಡಾಂಡವೆಂಬುದು ಅದುವೆ, ಬ್ರಹ್ಮಾಂಡವೆಂಬುದು ಅದುವೆ, ದೇವಗಣ, ರುದ್ರಗಣ, ಪ್ರಮಥಗಣ, ಮನು, ಮುನಿ, ತಪಸ್ವಿ, ತ್ಯಾಗಿ, ಯೋಗಿ, ಭೋಗಿ ಅದುವೆ ಫಲಪದಂಗಳು ಅದುವೆ, ಸಕಲವು ಅದುವೆ ಏಕೆಂದರೆ ಮರವಿನೊಳಗೊಂದು ಅರುವದೆ ಅದರ ವಿಸ್ತಾರವು ಅದುವೆ, ಇದು ಭ್ರಾಂತಿಯ ಅರುವು, ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವನ್ನು ನಿಶ್ಚಿಯಿಸಿದಂತೆ ಬೆಳಕಿನಿಂದ ನೋಡುವುಡೆ ಅಲ್ಲಿ ಹಾವು ಕಾಣಿಸದು, ಮೊದಲಿದ್ದುದು ಹಗ್ಗವು ಅನ್ಯವಲ್ಲ, ಹಾಗೆ ಪಿಂಡಾಂಡವು ಮರವೆನ್ನದೆ, ಶಬ್ದಮುಗ್ಧವಾಗಿಹ ಘನವು. ತೋರುವುದೆಲ್ಲ ತೋರದಡಗದ ಘನವಲ್ಲದೆ ಅನ್ಯವಲ್ಲವು, ಏಕೆಂದರೆ ತೋರಬಾರದ ಘನಕ್ಕೆ ಹೇಳಲೆಂದೇನೊ, ಹೇಳಬಾರದ ಘನಕ್ಕೆ ತೋರಲೆಂದೇನೊ ಎಂಬ ಮಹಾಂತರ ಮಹಾನುಭವವು ಪ್ರಜ್ವಲಿಸುವಲ್ಲಿ ಅದನಾರು ನೋಡದಂತಿದ್ದುದು ಮರವು, ಈ ಮರವು ಅದಾವುದು, ಇದ್ದುದು ಮರೆತು ಇಲ್ಲದುದು ಕಾಣುವುದು ಮರವು, ಈ ಮರವಿನೊಳಗೊಂದು ಅರುವು ಅದೆ, ಇಲ್ಲದುದು ಇದ್ದಂತಾದುದು ಇದುವೆ ನಾಮರೂಪವಾಗಿ ತೋರಿದುದು. ಮರವು, ನೋಡುವುಡೆ ತೋರುವದರೊಳಗೆ ತೋರಬಾರದ ಘನವು ಪ್ರಜ್ವಲಿಸುತ್ತಿಹುದು. ಇದಲ್ಲದೆ ಆವಾವ ನಾಮದಿಂದ ಹೇಳಿದರೂ ಹೇಳಬಾರದ ಘನವಾಗಿಹುದು. ಅದಕ್ಕಾಗಿ ಪ್ರಭುದೇವ ಮರವಿನೊಳಗೊಂದು ಅರುವದೆ ಎಂದು ಹೇಳಿಹರು. ಇದು ಕಾರಣ, ಜೀವಾತ್ಮ ಅಂತರಾತ್ಮ ಪರಮಾತ್ಮನೆಂದರೂ ಮರವಿನೊಳಗೊಂದು ಅರುವು, ಗುರು, ಲಿಂಗ, ಜಂಗಮವೆಂದರೂ ಮರವಿನೊಳಗಿದ್ದು ಅರುವಾಗಿಹುದು ಎಂದು ಹೇಳಿಹರು.

ಅರುವು ಮರವೆಯೆಂಬೆರಡು ಅಳಿದಡೆ ಅದೆ ನಿರವಯಲುವದೆ, ಅರುವು ಮರವೆಯೆಂಬೆರಡು ಅಳಿಯಬೇಕಾದರೆ, ಇದು ಸುಲಭವು ಆಗಿದೆ. ದುರ್ಲಭವೂ ಆಗಿದೆ. ಶಬ್ದವೇದಿಗಳಿಗೆ ದುರ್ಲಭವಾಗಿದೆ. ನಿಃಶಬ್ದವೇದಿಸಿದವರಿಗೆ ಸುಲಭವಾಗಿದೆ, ಸರಳವೂ ಆಗಿದೆ. ಆರು ಲಿಂಗ ಸಕೀಲ ಸಂಯೋಗ ವರ್ಮವನರಿತಿಹರು ಅವರಿಗೆ ಸರಳವಾಗಿದೆ. ಅವರು ಎಂಜಲ ಮಾತು ನುಡಿವವರಲ್ಲ, ಮಿಗೆ ಮಿಗೆಯಾಗಿಹ ಮೀಸಲ ತತ್ವ ಬಲ್ಲವರು. ಅವರು ಮುನ್ನ ಮುನ್ನಲಾದವರು ತಮ್ಮಿಂದ ತಾವಾದವರು. ಲಿಂಗದಲ್ಲಿ ಉದಯವಾದ ಲಿಂಗೈಕ್ಯರು. ಅವರು ಶೃತಿಗಗೋಚರರು, ವಾಙ್ಮನೋತೀತರು, ಅವರು ನುಡಿದು ನುಡಿಯದವರು ಅವರು ಅರುವು ಅರುವೆನ್ನಲಿಲ್ಲ, ಅರುವ ಅರಿಯಹೋಗಿ ಅರಿಯದವರು ಆದವರು. ನುಡಿಗೆಡೆಗೊಡದ ಘನವಾದವರು. ಅವರು ಭಾವಕ್ಕಿಂಬುಕೊಡರು. ಕಲ್ಪಿತಕ್ಕೆಡೆಗೊಡದವರು ಮರವರುವೆಂಬುದಕ್ಕೆಡೆಗೊಡದವರು ಆದುದರಿಂದ ನಿರವಯಲದೆ ಲಿಂಗೈಕ್ಯ ನಿಲುವು. ಅವರದು ಗುರುವಿಡಿದ ಅರುವಿನಿಂದಾದ ನಿಲುವಲ್ಲ, ಲಿಂಗವಿಡಿದ ಅರುವಿನಿಂದಾದ ನಿಲುವಲ್ಲ, ತನ್ನಿಂದ ತನ ತನಗೆ ಸಿದ್ಧಿಸಿದ ನಿಲುವು. ಇದು ಆವಾವುದಕ್ಕೂ ಎಡೆ

ಗೊಡದ ಪರಿಪೂರ್ಣವು. ಸ್ವತಃ ಸಿದ್ಧಿಸಿದುದು ಅದಕ್ಕಾಗಿ ತಾನೆಂಬಲ್ಲಿಯೆ ನಿಷ್ಪತ್ತಿ ಎಂದು ಹೇಳಿಹರು.

ಇದೇನು ಹೇಳಾ ಗುಹೇಶ್ವರಾ : ಇದೇನು ಹೇಳಾ ಎಂಬ ಪ್ರಭುವಿನ ಪ್ರಶ್ನೆ ಇದು ಬಿಡಿಸದ ಗಂಟು, ಮಾತಿನ ಮಥನದಿಂದ ಪರಿಹರಿಸದ ಪ್ರಶ್ನೆ, ಶಬ್ದವೇದಿಗಳ ಶಬ್ದಮುಗ್ಧ ಮಾಡುವ ಪ್ರಶ್ನೆ, ಅರುವಿನೊಳಗೊಂದು ಮರವದೆ ಎಂಬ ಪ್ರಶ್ನೆ ಅಷ್ಟೆ ಗಹನಾರ್ಥವು. ಮರವಿನೊಳಗೊಂದು ಅರುವದೆ ಎಂಬ ಪ್ರಶ್ನೆ ಅಷ್ಟೆ ರಹಸ್ಯದಿಂದುಕ್ತವಾದುದು. ಅರುವಿನೊಳಗೊಂದು ಮರವು ಅದೆ ಎಂಬುದು ವಿಪರೀತವಲ್ಲವೆ ? ಮರವಿನೊಳಗೊಂದು ಅರುವದೆ ಎಂಬುದು ವಿಪರೀತವಲ್ಲವೆ ? ಇವುಗಳಲ್ಲಿ ಆವುದು ದಿಟ ಆವುದು ಸಟೆ ? ಎನ್ನುವುದು ಮಾತಿನ ಮಹಾಂತರಿಗಿದು ಬಗೆಹರಿಸದ ಪ್ರಶ್ನೆಯಾಗಿದೆ. ಆರು ಅರುವಿಂಗರುವಾಗಿಹ ರಹಸ್ಯವ ತಿಳಿದಿಹರು ಅವರಿಗೆ ನುಡಿಯುವ ಅರುವು ಅಂದರೆ ನುಡಿಗೊಳಪಟ್ಟ ಅರುವು, ನುಡಿಗೊಳಪಟ್ಟ ಮರವು, ತೋರಿಕೆಯ ನಾಮರೂಪ ನಷ್ಟವಾಗಿಹವು. ಆಗ ತಾನೆ ನಿಷ್ಪತ್ತಿ ತನ್ನದು ನಿರ್ವಯಲು ಎಂದು ಹೇಳಿಹರು.

## 165

**ತಾನಿರ್ದು ತನ್ನನರಿಯದೆ ಇನ್ನೆಂದಿಗೆ ಶರಣನಪ್ಪನಯ್ಯಾ?**
**ಪವನಸ್ಥಾನವನರಿದ ಬಳಿಕ, ಬಂದು ಬಂದು ಸುಳಿಯಲಿಲ್ಲ.**
**ಇದರಂತುವನಾರು ಬಲ್ಲರು ಗುಹೇಶ್ವರಾ-ನಿಮ್ಮ ಶರಣನಲ್ಲದೆ?** ॥ 587 ॥

**ತಾತ್ಪರ್ಯ** : ತಾನಿದ್ದು ತನ್ನನರಿಯದೆ ಇನ್ನೆಂದಿಗೆ ಶರಣನಪ್ಪನಯ್ಯ, ಶರಣತ್ವವು ಬಹುಗೂಢವಾದುದು, ತನ್ನನರಿತ ಘನತ್ವವು ಶರಣತ್ವದ ಸಂಜ್ಞೆಯಾಗಿದೆ. ಶರಣತ್ವ ಯತಾರ್ಥವಾಗಿ ತಿಳಿದವರು ವಿರಳ. ವಿಪರೀತ ಅರ್ಥಮಾಡಿ ವಿಪರೀತವಾಗಿ ತಿಳಿದವರೆ ಹೆಚ್ಚು ಅಂದರೆ ಅಡ್ಡಿಯಾಗದು, ಇದು ಈಗಿದ್ದ ವಿಷಯವಲ್ಲಿ ಪೂರ್ವದಿಂದ ಬಂದುದು ಎಂದೆನಿಸುವುದು.

ಜ್ಞಾನ ಜ್ಞಾನವೆಂದು ವಾದಿಸುವ ಅಣ್ಣಗಳಿರಾ ನೀವು ಕೇಳಿರಯ್ಯ, ಜ್ಞಾನವೆಂದಡೆ ಮಹತ್ವಗಳ ಮಾಡಿ ಮೆರೆದುದು ಜ್ಞಾನವೆ ? ಅಲ್ಲಲ್ಲ, ಜ್ಞಾನವೆಂದರೆ ಸ್ವರ್ಗದ ವಾರ್ತೆಯ ಕೇಳಿ ಕೀರ್ತಿಯ ಹುಟ್ಟಿದುದು ಜ್ಞಾನವೆ ? ಅಲ್ಲಲ್ಲ, ಜ್ಞಾನವೆಂದರೆ ತತ್ಕಾಲಕ್ಕಾಗುವ ಸುಖ-ದುಃಖಗಳ ಹೇಳಿದುದು ಜ್ಞಾನವೆ ಅಲ್ಲಲ್ಲ. ಇವೆಲ್ಲ ಸಾಧನೆಯ ಮಾತು, ಅಘೋರ ಮುಖದಿಂದ ಹುಟ್ಟಿದ ಮಂತ್ರವ ಜಪಿಸಿದಲ್ಲಿ ಮಹತ್ವಗಳಾದವು. ಸೂಕ್ಷ್ಮತಂತ್ರವ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು. ಪ್ರಸಂಗ ಚಿಂತಾಮಣಿಯ ನೋಡಿ ಸುಖದುಃಖವ ಹೇಳಿದನು. ಇವೆಲ್ಲ ಪರಸಾಧನೆಯಯ್ಯ, ನಿನ್ನರವು ಕೈಕರಣವಾಗಿದೆ. ದೇಹವಳಿದಡೇನು, ದೇಹ ಧರಿಸಿ ಬಂದಡೇನು ಕಪಿಲಸಿದ್ಧ ಮಲ್ಲಿಕಾರ್ಜುನ.

ತಾನಿದ್ದು, ತನ್ನ ಅರಿತುದು ಜ್ಞಾನ, ಅದು ನಿಜ ಜ್ಞಾನ, ಅದು ಶರಣರ ಜ್ಞಾನ, ಅಂತಪ್ಪ ಪರಾತ್ಪರ ಜ್ಞಾನವು ಶರಣರದು, ಎನ್ನಲು ಸಾರ್ಥಕವು. ಈಗಿನ ಸಮಯದಲ್ಲಿ ಶರಣರ ಹೆಸರಿನಲ್ಲಿ ತಾನಾರೆಂಬ ಜ್ಞಾನವಿಲ್ಲದೆ ಮಾಯಿಕ ಜ್ಞಾನಿಗಳ ಜ್ಞಾನವ ಅಭ್ಯಾಸ ಮಾಡು

ವವರಿಗೂ ಶರಣರೆನ್ನುವ ಸಂಧಿಯು ಸಂಭವಿಸಿದೆ. ಶರಣರೆಂದರೆ ಮಹತ್ವಂಗಳ ಮಾಡಿ ಮೆರೆದುದು ಜ್ಞಾನವೆ ? ಅವರು ಶರಣರೆ ? ಪವಾಡಗಳು ಮಾಡಿ ಮೆರೆದವನು ಶರಣನಾಗಲಾರ, ಮಕ್ಕಳಾಗದವರಿಗೆ ಮಕ್ಕಳ ಕೊಟ್ಟವನು ಶರಣನೆನಿಸನು. ಸಾವಿರ ರೂಪಾಯಿಗೊಂದು ಸಂತಾನ ಕೊಟ್ಟುವನು ಶರಣನೆ ? ಕುರುಡಂಗೆ ಕಣ್ಣು ಕೊಟ್ಟವನು ಶರಣನೆ ? ಗಂಡನ್ನು ಹೆಣ್ಣು ಮಾಡುವುದು ಪುನಃ ಗಂಡು ಮಾಡಿ ಇಂಥಹ ಮಹತ್ವಗಳ ಮಾಡಿ ಲೋಕದಲ್ಲಿ ಕೀರ್ತಿವಂತನಾದರೆ ಶರಣನೆ ?

ಸ್ವರ್ಗದ ವಾರ್ತೆಯ ಹೇಳಿ ಕೀರ್ತಿ ಹುಟ್ಟಿದುದು ಜ್ಞಾನವೆ ? ಅಲ್ಲಲ್ಲ, ವೇದಗಳಲ್ಲಿ ಸ್ವರ್ಗ ಪ್ರಾಪ್ತಿಯಾಗಲು ಒಳ್ಳೆ ಸಾಧನೆಯ ಹೇಳಿದೆ. ಈ ಸಾಧನೆ ಶುಕ್ರಾಚಾರ್ಯರು ತಮ್ಮ ದೈತ್ಯ ವರ್ಗದವರಿಂದ ಶಿಷ್ಯ ವೃಂದಕ್ಕೆ ಕಲಿಸಿದ. ಅದರಿಂದ ಸ್ವರ್ಗ ಲೋಕಕ್ಕೆ ದಾಳಿ ಇಟ್ಟು ದೇವೇಂದ್ರನಿಗೆ ಪರಾಜಯಗೊಳಿಸಿದರು. ಆದರೆ ಅವರು ಶರಣರಾಗಬಹುದೆ ?

ತತ್ಕಾಲದಲ್ಲಿ ಸುಖದುಃಖ ಹೇಳುವ ಭವಿಷ್ಯದ ಜ್ಞಾನಿಗಳು ಇವರು ಇಂದಿನದು, ಈಗಿನದು ಮುಂದಿನದು, ಸುಖ-ದುಃಖಗಳ ಹೇಳಿ, ಪ್ರತಿಭಾವಂತರಾದರೆ ಅವರು ಶರಣರೆ ? ಕೆಲಬರು ವರ್ಷಂಗಳ ಬೆಳೆಯನ್ನು ಮಾರಾಟಗಳ ಹೇಳಿ ಶರಣನೆನಿಸಿಕೊಂಡರೆ ಅವನು ಶರಣನೆ ? ಅಲ್ಲ, ಇವೆಲ್ಲ ಸಾಧನೆಯ ಕಾರ್ಯ.

ಅಘೋರ ಮುಖದಿಂದ ಹುಟ್ಟಿದ ಮಂತ್ರವ ಜಪಿಸಿದಲ್ಲಿ ಮಹತ್ವಗಳಾದವು. ಮಹತ್ವಗಳಾದರೆ ತಾನಿದ್ದು ತನ್ನ ಅರಿತಂತಾಯಿತೆ ? ಆಗದು ಇದು ಕಾರಣ ಮಂತ್ರವ ಜಪಿಸಿದಲ್ಲಿ ಮಹತ್ವಗಳಾದವು ಇದರಿಂದ ತನ್ನ ತಾ ಅರಿದಂತಾಯಿತೆ ?

ಪ್ರಸಂಗ ಚಿಂತಾಮಣಿಯ ಹೇಳಿ ಭೂತ ಭವಿಷ್ಯ ವರ್ತಮಾನ ಕಾಲಗಳ ಸುಖ ದುಃಖವ ಹೇಳಿದನು. ಈ ಸುಖ ದುಃಖ ಹೇಳಿದರೆ, ಅಚ್ಚ ಸುಖ. ಘನ ಸುಖ. ಸವೆಯದ ಸುಖ. ಅಖಂಡ ಸುಖದ ಸುಖಿಯಾಗಿಹನೆ ? ಆಗನು, ಅದಕ್ಕಾಗಿ ಇವರುಗಳೆಲ್ಲ ಪರಸಾಧನೆಯ ಮಾಡಿದವರಲ್ಲದೆ ತನ್ನ ಸಾಧನೆಯ ಮಾಡಿದವರಲ್ಲ, ತನ್ನ ಸಾಧನೆಯೆಂಬುದು ತಾನಿದ್ದು, ತನ್ನನರಿಯುವ ಸಾಧನೆ. ಇದು ಮುಖ್ಯ ಸಾಧನೆ ಈ ಸಾಧನೆಯ ಮಾಡಿದವರೆ ಶರಣರಯ್ಯ.

ಪವನ ಸ್ಥಾನವನರಿದ ಬಳಿಕ ಬಂದು ಬಂದು ಸುಳಿಯಲಿಲ್ಲ : ಪವನ ಸಾಧನೆ ಅರಿತವರು ಇರುವರು. ಪವನ ಸ್ಥಾನವರಿತವರು ಸಿಕ್ಕುವುದು ವಿರಳ. ಪವನ ಸಾಧನೆ ಅರಿತವರೆಂದರೆ ಹಠಯೋಗಿಗಳು, ಇವರು ಪ್ರಾಣಾಯಾಮ ಅಭ್ಯಾಸ ಮೂಲಕ ಕೇವಲ ಕುಂಭಕ ಯೋಗವ ಬಲಿಸಿ, ಬಹುಕಾಲ ಬದುಕಿದವರು ಇಹರು. ಕೆಲಬರು 200 ವರ್ಷ ಕೆಲಬರು 300 ವರ್ಷ ಕೆಲಬರು 700 ವರ್ಷ ಕೆಲಬರು 1400 ವರ್ಷ ಬಾಳಿದವರು ಉಂಟು. ಇವರು ಕುಂಭಕ ಯೋಗವ ಚೆನ್ನಾಗಿ ಬಲ್ಲವರು, ಪವನಸ್ಥಾನ ಬಲ್ಲವರಲ್ಲ.

ಪವನಸ್ಥಾನವೆಂದರೆ ಕೆಲಬರು ಆಧಾರ, ಸ್ವಾಧಿಷ್ಠ ಮಣಿಪುರ ಅನಾಹತ, ವಿಶುದ್ಧ ಆಗ್ನೆಯ ಬ್ರಹ್ಮರಂಧ್ರ ಪಶ್ಚಿಮ ಚಕ್ರವೆಂದು ಅನ್ನುವರು. ಶರಣರ ಅಭಿಮತದಲ್ಲಿ ಪವನಸ್ಥಾನ, ಅದು ಪವನದ ಕವನವು. ಅಂದರೆ ಪವನದ ಅಧಿಷ್ಠಾನವು ಪ್ರಾಣದ ಪ್ರಾಣವು ಪ್ರಾಣಲಿಂಗವೆಂದು ಹೇಳಿದೆ, ಇದನ್ನು ತಿಳಿಯದೆ ಕೆಲಬರು ಸೋಹಂ ಸ್ಥಾನ, ಸೋಹಂ ಇದು ಅಕ್ಷರ ಬ್ರಹ್ಮವಾಗುವುದು. ಓಂ ಎಂದರೆ ಪ್ರಣವವು, ಪ್ರಣವದರ್ಥವು ಸಚ್ಚಿದಾನಂದ

ವಾಗುವುದು. ಸಚ್ಚಿದಾನಂದವೆಂಬುದು ಆವುದು ಅರಿವುದೊ ಅದು ಪವನ ಸ್ಥಾನವೆನಿಸುವುದು, ಇಂತಪ್ಪ ಪವನ ಸ್ಥಾನವರಿತವರು ಪುನಃ ಹುಟ್ಟಿ ಹುಟ್ಟಿ, ಬಂದು ಬಂದು ಸುಳಿಯಲಿಲ್ಲವೆಂದು ಹೇಳಿಹರು.

ತಾನಿದ್ದು ತನ್ನನರಿಯದೆ ಇನ್ನೆಂದಿಗೆ ಶರಣನಪ್ಪನಯ್ಯ, ತನ್ನ ನರಿಯಲು ಕೆಲವು ಶರಣರು ಸೋಹಂ, ಸಾಧನೆಯ ಮಾಡುವರು. ಚಿದಹಂ ಸಾಧನೆಯ ಮಾಡುವರು. ದಾಸೋಹಂ ಸಾಧನೆಯ ಮಾಡುವರು. ಇವರೆಲ್ಲರು ತಾನಿದ್ದು ತನ್ನನರಿತವರೆ ? ಅಕ್ಷರವ ಬಲ್ಲೆವೆಂದು ಅಹಂಕಾರವಡೆಗೊಂಡು ಲೆಖ್ಖಗೊಳ್ಳರಯ್ಯ. ಗುರು ಹಿರಿಯರು ತೋರಿದ ಉಪದೇಶದಿಂದ ವಾಗದ್ವೈತವ ಕಲಿತು ವಾದಿಪರಲ್ಲದೆ, ಆಗು ಹೋಗೆಂಬುದನರಿಯರು ಭಕ್ತಿಯನರಿಯರು, ಯುಕ್ತಿಯನರಿಯರು, ಮುಕ್ತಿಯನರಿಯರು ಮತ್ತು ವಾದಕ್ಕೆಳಿಸವರು ಹೋದರು ಗುಹೇಶ್ವರಾ ಸತಿಕೊಂಡಮಾರಿಂಗೆ.

ಅಕ್ಷರ ಬಲ್ಲೆವೆಂದರೆ ಅವಿನಾಶಿ ನಾನು, ಸಚ್ಚಿದಾನಂದ ನಾನು, ಚೈತನ್ಯ ನಾನು ಎನ್ನುವುದೆ ಅಕ್ಷರ ಬಲ್ಲವರೆಂದು ತಿಳಿದಿಹರು. ಇವರ ಜ್ಞಾನ ಅರಿವು ಅಹಂಕಾರಕ್ಕವಕಾಶ ಮಾಡಿಕೊಟ್ಟಂತಾಯಿತು. ಇದಲ್ಲದೆ ಗುರು ಹಿರಿಯರ ಉಪದೇಶ ವಾಗದ್ವೈತವ ಕಲಿತು ವಾದಕ್ಕೆ ಗುರಿಯಾಯಿತಲ್ಲದೆ ತಾನಾರೆಂಬ ತನ್ನಿರುವಿನಲ್ಲಿ ಒಂದಾಗಲಿಲ್ಲ, ತನ್ನನ್ನು ಅರಿಯಲಿಲ್ಲ, ಕಮಲ ಪತ್ರವು ನೀರಿನೊಳಗಿದ್ದರೂ ನೀರಿಗೆ ಹೇಗೆ ಅಂಟದಂತೆ ಹೇಗೆ ಅಲುಪ್ತವಾಗಿದೆಯೋ ಹಾಗೆ ಅಕ್ಷರ ಬಲ್ಲವನಾದ ಮೇಲೆ ತನಗೆ ತಾನೆ ಅಸಂಗನಾಗಿರುವ ಜಾಣತನವಾದರೂ ಬಂದಿತೆ ? ತಾನು ಅವಿರಳಾತ್ಮನು ಎಂಬುದಾದರೂ ಅರಿತನೆ ? ಅರಿಯದಿದ್ದಲ್ಲಿ ಆವ ಮಹಾಕಾವ್ಯಗಳ ಕಲಿತು ಶಬ್ದವೇದಿಯಾಗಿ ಜಗತ್ತಿನಲ್ಲಿ ಪ್ರತಿಭಾಮೂರ್ತಿಯಾದರೂ ತಾನಿದ್ದು ತನ್ನನರಿಯದೆ ಇನ್ನೆಂದಿಗೆ ಶರಣನಪ್ಪೆನಯ್ಯ.

ಓ ಅಕ್ಷರ ಬಲ್ಲವನೆಂದು ಶಬ್ದವೇದಿಯಾದೆಯಾ ? ಸೋಹಂಭಾವಿಯಾದೆಯಾ ? ಚಿತ್ ಸ್ವರೂಪ ನಾನೆನ್ನುವ ಅರುವಿನ ಅಹಂಕಾರಿಯಾದೆಯಾ ? ಓ ಶಬ್ದವೇದಿಯಾದುದು ನಿನ್ನ ಅರುಹೃದಯಕ್ಕೆ ಒಪ್ಪಿಗೆಯಾಯಿತೆ ? ಪ್ರಣವನುಚ್ಚರಿಸುವ ಸೋಹಂ ಭಾವವು ನಿನಗೆ ಒಪ್ಪಿಗೆಯಾಯಿತೆ ? ಸಚ್ಚಿದ್ರೂಪ ನಾನೆನ್ನುವದು ನಿನಗೆ ಒಪ್ಪಿಗೆಯಾಯಿತೆ ? ಶಬ್ದವೇದವಾಗಲಿ, ಸೋಹಂಭಾವವಾಗಲಿ ಸಚ್ಚಿದ್ರೂಪ ನಾನೆನ್ನುವ ಚಿದಹಂ ಇದು ನಿನ್ನಿಂದ ಅರಿದರಿದು ನೀನು ಒಪ್ಪಿಗೆಯಾಯಿತೆ ? ಅರಿಯದೆ ಒಪ್ಪಿಗೆಯಾಯಿತು. ಶಬ್ದವೇದವಾಗಲಿ, ಸೋಹಂ ಭಾವವಾಗಲಿ, ಸಚ್ಚಿದ್ರೂಪ ನಾನೆನ್ನುವುದು ತಿಳಿಯದೆ ವಾದಕ್ಕಿಳಿದುದು ಸರಿಯೆ ? ಸೋಹಂ ಎಂಬುದು ನಿನ್ನಿಂದ ಸಿದ್ಧವಾಗುವುದೊ ಅಥವಾ ಅದರಿಂದ ನೀನು ಸಿದ್ಧವಾಗುವಿಯೊ. ಅರಿದರಿದು ನೋಡಿದಲ್ಲಿ ತನ್ನಿಂದಲ್ಲವೆ ? ಸೋಹಂ ಸಿದ್ಧವಾಗುವುದು. ಚಿದಹಂ ಸಿದ್ದವಾಗುವುದು. ದಾಸೋಹಂ ಸಿದ್ಧವಾಗುವುದು ತಾನಿದ್ದಾಗ ಇವುಗಳು ಸಿದ್ದವಾಗುವವೊ ಇರದೆ ಸಿದ್ಧವಾಗುವವೊ, ಇದ್ದಾಗ ಸಿದ್ಧವಾಗುವವುವೆಂದಲ್ಲಿ ತನ್ನಿಂದ ಸಿದ್ಧವಾದವೊ ? ತಮ್ಮಷ್ಟಕ್ಕೆ ತಾವೆ ಸಿದ್ದವಾದವೊ. ತನ್ನಿಂದ ಸಿದ್ಧವಾಗುವವೆಂದಲ್ಲಿ ಇವುಗಳಿಗೆಲ್ಲಕ್ಕು ತಾನು ಅಧಿಷ್ಠಾನನು, ತಾನೆ ಇದ್ದವನು, ತಾನೆ ಅಧಿಷ್ಠಾನನು, ತನಗಿಂತ ಅಧಿಷ್ಠಾನವಾದುದು ಘನಕ್ಕೆ ಘನವಾದುದು ಆವುದಾದರೂ ಇದೆಯಾ ? ಇಲ್ಲದಿರುವಲ್ಲಿ ತಾನಿದ್ದವನು ತಾನೆ ಅಧಿಷ್ಠಾನನು ನುಡಿಗೆಡೆಗೊಡದ ಘನನು, ನಾನೀನೆಂಬುದಕ್ಕೂ ತೆರಹಿಲ್ಲದ ಘನನು

ವಾಙ್ಮನೋತೀತನು ಶೃತಿಗಗೋಚರ ತಾನೆ.

ಇದರಂತುವನಾರು ಬಲ್ಲರು ಗುಹೇಶ್ವರಾ ನಿಮ್ಮ ಶರಣನಲ್ಲದೆ : ತಾನಿದ್ದು ತನ್ನನರಿಯುವುದು ಎಂದಲ್ಲಿ ತನ್ನ ಮೂಲವನರಿವುದು, ಇದು ತನ್ನಿಂದ ತಾನರಿವುದು, ಇದು ಸ್ವತಂತ್ರ ಅರಿವು, ಇಲ್ಲಿ ಎರವಲ ಜ್ಞಾನ ಉಪಯೋಗ ಬೀಳದು, ತನ್ನಿರುವಿನ ಅರುವೆ ಸಾರ್ಥಕವಾದುದು, ತಾನಿದ್ದು ತನ್ನನರಿಯುವುದು. ಇದು ಶರಣನಾದವನ ಮೂಲಭೂತ ಇರುವಾಗಿದೆ. ಅದುವೆ ಭೂಮಾ ಆಗಿದೆ. ಆವಲ್ಲಿ ಬೇರೊಂದನ್ನು ನೋಡುವುದಿಲ್ಲ, ಬೇರೊಂದನ್ನು ಕೇಳುವುದಿಲ್ಲ, ಬೇರೊಂದನ್ನು ಅರಿಯುವುದಿಲ್ಲ ಇದುವೆ ತಾನಿದ್ದು ತನ್ನನರಿತ ಘನವಾಗಿದೆ. ಶರಣನೆಂದರೆ ತಾನಿದ್ದು ತನ್ನ ಅರಿತವನು. ಇದಲ್ಲದೆ ಶಿವಶಕ್ತಿ ಸಂಪುಟದ ರಹಸ್ಯವ ತಿಳಿಸಿದವರು ಶರಣರು.

**166**

**ಶಿವಶಕ್ತಿ ಸಂಪುಟವೆಂಬುದೆಂತು ಪೇಳಿರಣ್ಣಾ ;**
**ಶಿವನೆ ಚೈತನ್ಯಾತ್ಮಕನು, ಶಕ್ತಿಯೆ ಚಿತ್ತು.**
**ಇಂತು- ಚೈತನ್ಯಾತ್ಮಕನೆ ಚಿತ್‌ಸ್ವರೂಪನೆಂದರಿಯ ಬಲ್ಲಡೆ**
**ಆತನೆ ಶರಣ ಗುಹೇಶ್ವರಾ. ॥ 589 ॥**

**ತಾತ್ಪರ್ಯ** : *ಶಿವಶಕ್ತಿ ಸಂಪುಟವೆಂಬುದೆಂತು ಪೇಳಿರಣ್ಣಾ* : ಶಿವಶಕ್ತಿ ಸಮರಸ ಎಂಬುದೆಂತು ? ಶಿವಶಕ್ತಿ ಒಂದಾದ ಕೂಟವೆಂಬುದು ಹೇಗೆ ಹೇಳಿರಂಣಾ ಎಂಬ ಪ್ರಶ್ನೆಗೆ ಉತ್ತರಿಸುವವರು ಬಹು ಕಡಿಮೆ ಇದ್ದಾರೆ, ಇದನ್ನು ಕಂಡೆ ಪ್ರಭು ಇದರ ಉತ್ತರವ ತಾನೆ ವಿವರಿಸಿಹನು. ಏಕೆಂದರೆ ಕೆಲವು ಪುರಾಣಗಳಲ್ಲಿಯ ಕಾರ್ಯ ಕಾರಣ ಕಲ್ಪಿತ ಕಂಡು ಆ ಜ್ಞಾನ ಬಹು ಜನರಲ್ಲಿ ಪುರಾಣಿಕರಲ್ಲಿ ವೇದವನೋದುವ ಆಚಾರ್ಯರಲ್ಲಿ ಇದು ನಮಗೆ ದೃಢವಾಗಿದೆ. ಶಿವ ಪುರಾಣದಲ್ಲಿ ಶಿವನೆ ಕಾರಣನು, ಶಕ್ತಿಯೆ ಕಾರ್ಯಳು, ಶಕ್ತಿಯೆ ಪುರಾಣದಲ್ಲಿ ಶಕ್ತಿಯ ಕಾಣಳು, ಶಿವನು ಕಾರ್ಯನು ಎಂದು ಪೂಜ್ಯ ಪೂಜಕ ದೃಷ್ಟಿಯಿಂದ ಕಲ್ಪಿಸಿಹರು. ಕಲ್ಪಿಸಿದರೂ ಅಡ್ಡಿ ಇಲ್ಲ, ಪುರಾಣಂಗಳಲ್ಲಿ ಹೇಳಿದ ಮೂಲ ಗುರಿಯಾದರೂ ತಿಳಿಯುವಷ್ಟು ಹೃದಯವಿಲ್ಲವೆನಿಸುವ ಕಾಲ ಬಂದಂತಾಗಿದೆ. ಹೀಗಾಗಿ ಈ ಕಾರ್ಯ ಕಾರಣವಾಗಿಹ ಭೇದಜ್ಞಾನವೆ ಹೃದಯದಲ್ಲಿ ಮನೆ ಮಾಡಿಕೊಂಡಿದೆ. ಪುರಾಣಂಗಳ ಪರಾಮರ್ಶಿಸಿದರೆ ಶಕ್ತಿಯ ಪುರಾಣದಲ್ಲಿ ಶಕ್ತಿಯು ಪೂಜ್ಯಳು, ಶಿವಪುರಾಣದಲ್ಲಿ ಶಿವನು ಪೂಜ್ಯನು ಎಂದು ವಿವರಿಸಿರುವುದು ಕಂಡು ಶಿವ ಶಕ್ತಿಯರು, ಪೂಜ್ಯರು ಎಂಬುದು ಸಿದ್ಧವಾಗುತ್ತದೆ. ಅಂದಲ್ಲಿ ಪೂಜ್ಯವೆಂಬುದು ಅಧಿಷ್ಠಾನವು. ಶಿವನು ಅಧಿಷ್ಠಾನವು ಶಕ್ತಿಯು ಅಧಿಷ್ಠಾನವು ಎಂಬುದು ಸಿದ್ದವಾಯಿತಲ್ಲವೆ ? ಅಂದರೆ ಶಿವನು ಅದುವೆ, ಶಕ್ತಿಯು ಅದುವೆ, ಮೂಲವಸ್ತು ಎಂಬುದು ಸಿದ್ದವಾಗುವುದು.

ಇನ್ನು ಕೆಲವು ಪುರಾಣಗಳಲ್ಲಿ ಕಾರ್ಯಕಾರಣಗಳ ರಹಸ್ಯವ ತಿಳಿಯದೆ ಪುರಾಣಂಗಳ ರಚಿಸಿದ ಪಂಡಿತರು, ಅಲ್ಲಿ ಪುರಾಣದ ಮೂಲ ಪುರುಷನಾಗಿಹ ಮಹಾಂತನ ಪವಾಡಗಳ ರಚನೆ ಆತನ ಕರ್ತೃತ್ವ ಶಕ್ತಿ, ಇವುಗಳನ್ನೆ ಕಾಣಬೇಕಲ್ಲದೆ ಬೇರೆ ಮತ್ತೊಂದು

ಇರದಂಥ ಪುರಾಣಗಳು ಬಹಳ ಇವೆ. ಇಂತಹ ಪುರಾಣಗಳ ನಂಬಿಗೆ ಜನರ ಹೃದಯ ದಲ್ಲಿ ಬೆಳೆಯುವುದರಿಂದ ಮೂಲವಸ್ತುವಿನ ಘನವ ಕಾಣದೆ ಮತ್ತಷ್ಟು ಭೇದ ಜ್ಞಾನ, ಭೇದ ಭಾವ, ಭೇದ ಶಕ್ತಿ, ಭೇದದ ಆಚಾರವೆ ದಿನೆ ದಿನೆ ಹೆಚ್ಚಾದಂತೆ ಮಾನವನ ಅರು ಹೃದಯವನ್ನೆ ಕಳೆದುಕೊಳ್ಳುವಲ್ಲಿ ಪ್ರಭುವಿನ ಶಿವಶಕ್ತಿ ಸಂಪುಟ ತಿಳಿಯುವ ಭಾಗ್ಯ ಅದಾರಿಗೆ ಇದರಿಂದ ವಿಶ್ವದ ಉನ್ನತಿ ಆಗುವದದೆಂತು.

ಪ್ರತಿಯೊಬ್ಬರ ಹೃದಯ ದೇವ, ದೇವರುಗಳಲ್ಲಿ ಭೇದ. ಮನು, ಮುನಿಗಳಲ್ಲಿ ಭೇದ, ತಪಸ್ವಿ ತ್ಯಾಗಿಗಳಲ್ಲಿ ಭೇದ, ಯೋಗಿ ಯೋಗಿಗಳಲ್ಲಿ ಭೇದ, ಜ್ಞಾನಿ ಜ್ಞಾನಿಗಳಲ್ಲಿ, ಭಕ್ತ ಭಕ್ತರಲ್ಲಿ ಭೇದ, ಅರ್ಚಕ ಅರ್ಚಕರಲ್ಲಿ ಭೇದ, ಕರ್ಮಿ ಕರ್ಮಿಗಳಲ್ಲಿ, ಭೇದ ಈ ಭೇದ ಜ್ಞಾನದ ಹಿರಿತನವಾಗಿರುವಲ್ಲಿ ಸಕಲರ ಹೃದಯ ಶಿವ ಶಕ್ತಿ ಸಂಪುಟವಾಗುವದ ದೆಂತು ?

ಸಕಲರ ಹೃದಯಂಗಳು ಶರಣರ ಪುಟವಾಗಿಹ ಶಿವಶಕ್ತಿ ಸಂಪುಟವಾಗದಿದ್ದಲ್ಲಿ ಇಡೀ ಮಾನವನ ಬಾಳು ಅವನತಿಯಾಗುವುದು. ಇದನ್ನು ತಿಳಿದೆ ಪ್ರಭುದೇವ ಶಿವಶಕ್ತಿ ಸಂಪುಟವೆಂಬುದೆಂತು ಪೇಳಿರಣ್ಣಾ ಎಂದು ಪ್ರಶ್ನಿಸಿದುದಲ್ಲದೆ ಇದರ ಉತ್ತರವ ತಾನೆ ವಿವರಿ ಸಿಹನು. ಶಿವನೆ ಚೈತನ್ಯಾತ್ಮಕನು, ಶಕ್ತಿಯೆ ಚಿತ್ತು, ಇಂತು ಚೈತನ್ಯಾತ್ಮಕನೆ ಚಿತ್ ಸ್ವರೂಪ ವೆಂದರಿಯಬಲ್ಲಡೆ ಆತನೆ ಅಚ್ಚಶರಣ ಗುಹೇಶ್ವರಾ ಎಂದು ತಾನೆ ಉತ್ತರವ ಬಿತ್ತರಿಸಿ ದುದು, ಯತಾರ್ಥವಾಗಿ ತಿಳಿಯ ಹೋದವರು ಸಿಕ್ಕುವುದು ವಿರಳ. ಪ್ರಭುವಿನ ಸಾಹಿತ್ಯವ ಬಾಯಿ ಪಾಠವ ಮಾಡಿ, ಸಭೆಗೆ ಬೆರಗುಗೊಳಿಸುವ ಮಹಾಂತರು ಇಹರು. ಇದರಿಂದ ಮಾನವರ ಹೃದಯ ಶಿವ ಶಕ್ತಿಯ ಸಂಪುಟವಾಗವು, ಶಿವಶಕ್ತಿ ಸಂಪುಟವದು, ಚೈತನ್ಯಾತ್ಮಕ ಪುಟ, ಅದು ಚಿತ್‌ಸ್ವರೂಪ ತಾನಾದ ಪುಟ, ಇಂತಪ್ಪ ಪುಟ, ಮಾನವನ ಪುಟವಾದುದು ಶರಣರ ಬಾಳು, ಸುಖದ ಸುಖವಾಗಿಹ ಬಾಳು ಆದುದರಿಂದ ಅಚ್ಚಶರಣ ಎಂದು ಹೇಳಿ ಹರು.

ಸಕಲ ಜೀವಿಗಳ ಲೇಸನು ಬಯಸುವ ಶರಣನೆ ಕುಲಜನು, ಇದು ನಿಜವಾದ ಶರಣರ ವೇಷ, ಇದನ್ನು ಬಿಟ್ಟು ಹೊರ ವೇಷವ ಧರಿಸಿ ಅಲ್ಲಲ್ಲಿ ಸಾಹಿತ್ಯವ ಮುಂದುಮಾ ಡಿ ಅನ್ನ, ವಸ್ತ್ರ ಹಣ ಕೊಡುವ ಗ್ರಾಮಗಳಲ್ಲಿ ನಗರಗಳಲ್ಲಿ ಸಂಚರಿಸುವ ಶರಣ, ಪ್ರಭು ಜಂಗಮಯ್ಯನೆನ್ನಬೇಕೆ ?

ಪ್ರಭುದೇವ, ಅನ್ನ, ವಸ್ತ್ರ, ಹಣದ ಸಂಗ್ರಹಕ್ಕಾಗಿ ಸಂಚರಿಸಿಹನೆ ? ಕೇವಲ ಒಬ್ಬ ಅನುಭವಿ ಮುಕ್ತಾಯಕ್ಕನ ದುಃಖ ಕಂಡು ಕೊರಗು ಕಂಡು ಮಸರಕಲ್ಲಿಗೆ ಬಂದು, ಶಿವ ಶಕ್ತಿ ಸಂಪುಟದ ರಹಸ್ಯವ ತಿಳಿಸಿ ಹೃದಯ ಶಿವಶಕ್ತಿ ಸಂಪುಟ ಮಾಡಿದ. ಚೈತನ್ಯಾತ್ಮಳನ್ನಾಗಿ ಮಾಡಿದ, ಚಿತ್‌ಸ್ವರೂಪಳನ್ನಾಗಿ ಮಾಡಿದ. ಇತ್ತ ಸಿದ್ಧರಾಮ ಶಿವಯೋಗಿ ಭೇದಜ್ಞಾನ ದಿಂದುಕ್ತವಾಗಿಹ ಶೈವಭಕ್ತಿಯ ಯೋಗದಿಂದ ಶಿವನೊಲಿಸಿ ಉರಿನೇತ್ರವ ಪಡಿದಿಹೆನೆಂಬ ಅಹಂಕರಾದಿಂ ಪ್ರಭುವಿನ ಮೇಲೆ ಉರಿನೇತ್ರ ಬಿಡಲು ಅದನ್ನು ತನ್ನ ಅಂಗಾಲಲ್ಲಿ ಅಡಗಿಸಿ ದುದಲ್ಲದೆ, ಸಿದ್ಧರಾಮ ಶಿವಯೋಗಿಯ ಸಂತೈಸಿ ಶಿವಶಕ್ತಿಯ ಸಂಪುಟದ ಘನತ್ವ ವಿವರಿಸಿ ಹೃದಯವನ್ನೆ ಅರುಹೃದಯ ಮಾಡಿದ. ಚೈತನ್ಯಾತ್ಮನ ಮಾಡಿದ ಚಿತ್‌ಸ್ವರೂಪನ ಮಾಡಿದ ಕೇವಲ ಅಂಗದ ಮೇಲೆ ಲಿಂಗವ ಕಟ್ಟಿ ಸುಳಿದಾತ ಜಂಗಮವಲ್ಲ, ಆ ಜಂಗಮಕ್ಕೆ ಮಾಡು

ವಾತ ಭಕ್ತನಲ್ಲ, ಈ ಉಭಯ ಕುಳವಳಿದಾತ ಜಂಗಮ. ಆ ಜಂಗಮಕ್ಕೆ ಮಾಡುವಾತ ಭಕ್ತ, ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಉಭಯ ಕುಳವಳಿದಾತ, ಭಕ್ತ ಜಂಗಮವಪೂರ್ವ ಜಂಗಮನ ಹೃದಯವೆ ಶಿವ ಶಕ್ತಿ ಸಂಪುಟವಾದಲ್ಲಿ ಹೊರಗಿನ ಪೂಜಾ ಲಿಂಗ ಕೊರಳಲ್ಲಿ ಅದೇಕೆ ? ಆ ಪೂಜಾಲಿಂಗ ಆರಾಗಿ ಪೂಜಿಸುವುದು, ಆರೆಂದು ಪೂಜಿಸುವುದು, ಲಿಂಗವೆ ತಾನಾಗಿಹ ಘನಮನ, ಚೈತನ್ಯಾತ್ಮನನ್ನೆ ಚಿತ್‌ಸ್ವರೂಪವೆಂದರಿತಿಹ ಶರಣ, ಚೈತನ್ಯ ಚಿತ್ ಒಂದಾದ ಜ್ಞಾನ, ಅಖಂಡ ಭಾವ, ಅಖಂಡ ಜ್ಞಾನ, ಅಖಂಡಿತ ಲಿಂಗ ಬೆಳಗುವಲ್ಲಿ ಪೂಜಾಲಿಂಗದ ಕುರುಹೆಲ್ಲಿ ? ಅರು ಹೃದಯ ಕಂಡವರು, ಮರವರುವಿನ ಹೃದಯಕ್ಕೆ ಒಪ್ಪುವರೆ ? ಭಕ್ತನಾದಲ್ಲಿ ನಿಸ್ಸೀಮನಾಗಿಹ ಅರುಹೃದಯಕ್ಕೆ ಒಪ್ಪಬೇಕು, ಅದು ಉಭಯ ಕುಳವಳಿದ ಹೃದಯ, ಅಂದರೆ ಪೂಜಾಲಿಂಗವ ಪೂಜಿಸುವಾತ ಪೂಜ್ಯನಲ್ಲ, ಆತ ಪೂಜಕನಾಗಿಹನು ಪೂಜಕನಾದವನು ಪೂಜ್ಯನಾದುದು ಹೇಗೆ ಎಂದು ತಿಳಿದು ಅರು ಹೃದಯವಾಗಿಹ ಭಕ್ತ, ಪೂಜಾಲಿಂಗ ಪೂಜಿಸುವ ಜಂಗಮನಿಗೆ ಪೂರ್ವಿಕನೆಂದು ತಿಳಿದು, ಪೂಜ್ಯನ ಮಾಡಲಿಲ್ಲ, ತಾ ಪೂಜಕನಾಗಲಿಲ್ಲ, ಇದು ಕಾರಣ ಉಭಯ ಕುಳವಳಿದ ಹೃದಯ, ಇವರೀರ್ವರ ಹೃದಯ ಅರು ಹೃದಯವಾದುದರಿಂದ, ಅರುವಿಂಗರುವಾಗಿಹ ಜಂಗಮಕ್ಕೆ ಪೂಜ್ಯನೆಂದು ತಿಳಿದು, ತಾ ಪೂಜಕನೆಂದು ಪೂಜೆ ಮಾಡುವುದರಿಂದ ಇವರು ಅಪೂರ್ವಿಕರೆಂದು ಹೇಳಿಹನು.

ಇಂತೀ ಚೈತನ್ಯಾತ್ಮನೆ ಶಿವ ಶಕ್ತಿಯೆ ಚಿತ್ ಸ್ವರೂಪವೆಂದರಿಯಬಲ್ಲಡೆ, ಆತನೆ ಶರಣ ಗುಹೇಶ್ವರಾ: ಚೈತನ್ಯಾತ್ಮವಾವುದು, ಅದು ಚಿತ್, ಎಂದು ಒಂದಾಗಿ ತಿಳಿದಿಹ ಶರಣ. ಶಿವನೆಂದರೆ ಭೇದಿಸಬಾರದಿಪ್ಪ ಅಭೇದ್ಯ ಶಿವ. ಅಲ್ಲಿ ಜೀವಾತ್ಮ ಅಂತರಾತ್ಮ ಪರಮಾತ್ಮವೆಂಬುದು ವಿಭಾಗಿಸಲು ಅವಕಾಶ ಕೊಡದವನು ಶಿವ. ಅದಕ್ಕಾಗಿ ಚೈತನ್ಯಕ್ಕಿಂತ ಬೇರೆಯಾದುದು. ಚೈತ್ಯನ್ಯವೆಂದು ಅಭೇದ್ಯ ಶಿವನೆಂದು ಸಿದ್ದವಾಗುವುದು. ಚೈತನ್ಯವೆಂದರೆ ಉಪಾಧಿಯಲ್ಲಿ ಪ್ರತಿಫಲಿತವಾದ ಚೇತನ. ಅಭಾಸ ಅರಿವು ಎಂದು ಹೇಳಿದೆ. ಇದು ಪ್ರತಿಬಿಂಬವು ಇದಕ್ಕಿಂತ ಅನ್ಯವಾದುದು ಚೈತನ್ಯ ಅದು ಸ್ವತಃ ಚೈತನ್ಯಾತ್ಮವು ಎಂದು ಹೇಳಿದೆ.

ಶಕ್ತಿಯೆ ಚಿತ್ ಎಂದು ಹೇಳಿದುದು, ಅದು ಕಾರ್ಯವಾದುದಲ್ಲ, ಕಾರಣವಾದುದಲ್ಲ, ಕಾರ್ಯಕಾರಣವೆಂಬುದಕ್ಕೂ ಮೀರಿದುದು. ಅದು ಚಿತ್, ಅದು ಜ್ಞಾನ ಸ್ವರೂಪ ಇದು ಜಗವು ಆದುದಲ್ಲ, ಜಗತ್ತಿಗೆ ಕಾರಣವಾದುದಲ್ಲ ಈ ಶಕ್ತಿ ಯಾವ ವೇದ ವೇದಾಂತಕ್ಕೂ ಕಾರಣವಾದುದಲ್ಲ, ಆವಾವ ಶಬ್ದರಾಶಿಯು ಆದುದಲ್ಲ, ಇವೆಲ್ಲವುಗಳಿಗೆ ಬೇರಾದುದು ಆವುದು, ಅದು ಚಿತ್ ಅದು ಶಕ್ತಿ ಎಂದು ಹೇಳಿದೆ. ಇಂತೀ ಚೈತನ್ಯಾತ್ಮಕನೆ ಚಿತ್‌ಸ್ವರೂಪವೆಂದು ಅರಿತುದರಿಂದ ಆತನೆ ಶರಣನೆಂದು ಹೇಳಿದೆ.

ಶರಣನ ದೃಷ್ಟಿಯಲ್ಲಿ, ಚೈತನ್ಯ ತಾನೆ, ಚಿತ್ ತಾನೆ, ಆತನು ಪೂರ್ಣದೃಷ್ಟಿಯಾದುದರಿಂದ ನುಡಿಗೆಡೆಗೊಡದ ಘನದಿರುವು ಆ ಮಹಾಂತನಾದುದರಿಂದ ಚೈತನ್ಯ ಚಿತ್ ಯತಾರ್ಥವರಿತುದರಿಂದ ಶಿವ ಶಕ್ತಿ ಸಂಪುಟವಾಗಿದೆ. ಚೈತನ್ಯ ಚಿತ್ ಒಂದಾದುದು ಇದು ಶರಣರ ಅರುವಿಂಗರುವಾಗಿಹ ಪುಟ ಎಲ್ಲೆಲ್ಲೂ ಒಂದನ್ನೆ ಕಂಡ ಸಂಪುಟ. ಸಂಪುಟ ಸಮ ಪುಟ ಉಪಮಿಸದ ಪುಟ, ಭಾಷೆ ಪ್ರಸಾದಕ್ಕೆ ಸಿಗದ ಪುಟ, ಮುನ್ನ ಮುನ್ನಲಾದ ಘನದಿ

ರುವು ತನ್ನಿಂದ ತಾ ಕಂಡ ಪುಟ, ಇದು ಚೈತನ್ಯವಾಗಿಹ ಘನ. ಚಿದ್ರೂಪವಾಗಿಹ ಎರಡು ಒಂದಾಗಿಹ ಘನವಾದುದರಿಂದ ಸಂಪುಟವೆಂದು ಹೇಳಿಹರು.

**167**

**ಹರಿದರಿಸಿಹೆನೆಂದಡೆ ಮನದ ವಿಕಾರ.**
**ಸುಳಿದರಿಸಿಹೆನೆಂದಡೆ ಪವನ ವಿಕಾರ.**
**ನಿಂದರಸಿಹೆನೆಂದಡೆ ಕಾಯವಿಕಾರ.**
**ಒಳಗರಸಿಹೆನೆಂದಡೆ ಜ್ಞಾನವಿಕಾರ.**
**ಅರಸಲಿಲ್ಲದೆ ಬೆರಸಬಲ್ಲಡೆ, ಆತನೆ ಶರಣ ಗುಹೇಶ್ವರಾ.** ॥ 591 ॥

**ತಾತ್ಪರ್ಯ** : ಅರಿದರಿಸಿಹೆನೆಂದಡೆ ಮನದ ವಿಕಾರ : ಇವರು ಉಪಾಸಕರು ಮನೋರೂಪಿ ನೆನಹಿನ ಮೂಲಕ ದೇವನನ್ನು ಹುಡುಕ ಹೋದವರು. ದೇವನನ್ನು ಸಾಕಾರ ರೂಪದಲ್ಲಿ ನಿರಾಕಾರ ರೂಪದಲ್ಲಿ ಪ್ರಣವ ರೂಪದಲ್ಲಿ ಹುಡುಕ ಹೋದವರು. ಇವರು ತನ್ನ ಮರೆದು ದೇವನ ಕಾಣ ಹೋದವರು. ತನ್ನ ಮರೆದು ದೇವರ ಕಂಡಿಹೆನೆಂಬ ಕಾರಣ ಹರಿಸುರಾದಿಗಳು ತಲೆ ಕೆಳಗಾಗಿ ಹೋದರು. ಅನ್ಯಮರೆದು ತನ್ನನರಿದುದಾದಡೆ ತಾನೆ ದಿಟವೆಂದ ನಂಬಿಗ ಚೌಡಯ್ಯ ದೇವನನ್ನು ಸಗುಣ ನಿರ್ಗುಣನೆಂದು ಭಾವಿಸಿ ನೆನೆ ನೆನೆದು ಚಿಂತಿಸಿ ಕಂಡಿಹೆನೆಂಬುವರು. ಇವರುಗಳೆಲ್ಲ ತಲೆ ಕೆಳಗಾಗಿ ಹೋದವರು. ತನ್ನ ಮರೆತವರು ದೇವನ ಕಂಡಿಹೆನೆಂಬುವರೆಲ್ಲ ಮನೋ ಮೂಲಕ ಜಪದಲ್ಲಿ, ತಪದಲ್ಲಿ, ನೆನಹಿನಲ್ಲಿ, ಚಿಂತನದಲ್ಲಿ ಭಾವದಲ್ಲಿ ಹುಡುಕ ಹೋದವರು. ಇವರಿಗೆ ನಿಜವಾದ ದೇವನ ಪರಿಚಯವಿಲ್ಲ, ಅದಕ್ಕಾಗಿ ಹರಿದರಸಿಹನೆಂದಡೆ ಮನದ ವಿಕಾರವೆಂದು ಹೇಳಿಹರು.

ಹೊರಗಿದ್ದಿಹನೆಂದು ಮರೆದು ಮಾತನಾಡಿದೆ ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು. ತೆರಹಿಲ್ಲದಭವ, ನುಡಿಗೆಡೆಗೊಡನು, ಆತನ ಬಯಲಿಂಗೆ ಬೇಟೆಗೊಂಡೆನವ್ವ ಎಂದು ಬಿತ್ತರಿಸಿದುದು ನೋಡುವುಡೆ ನುಡಿಗೆಡೆಗೊಡದ ಘನನನ್ನು ಸಗುಣ, ನಿರ್ಗುಣನೆಂದು ಹೇಗೆ ಹೇಳುವುದು. ಸಗುಣ ನಿರ್ಗುಣನೆನ್ನಲು ಬಾರದ ಘನಕ್ಕೆ ವಾಣಿಯಿಂದಾಗಲಿ ಮನದಿಂದಾಗಲಿ ಜಪಿಸುವುದು ಹೇಗೆ ? ತಪಿಸುವುದು ಹೇಗೆ, ನೆನೆಯುವುದು ಹೇಗೆ ಚಿಂತಿಸುವುದು ಭಾವಿಸುವುದು ಹೇಗೆ, ಇದು ಕಾರಣ ಹರಿದರಸಿಹೆನೆಂದಡೆ ಮನದ ವಿಕಾರವೆಂದು ಹೇಳಿಹರು.

ಸುಳಿದರಸಿಹೆನೆಂದಡೆ ಪವನವಿಕಾರ : ಹಠಯೋಗಿಗಳು ಪವನದ ಮೂಲಕ ಹುಡುಕಾಡಿದವರು ಇವರು ದೇವನನ್ನು ಪ್ರಕಾಶ ರೂಪನೆಂದು, ಶುಭ್ರನೆಂದು, ನೀಲಿ ಧವಳ, ಹಳದಿ, ಕೆಂಪು ಹೀಗೆ ಆರು ವರ್ಣದವನೆಂದು ಕೇಳಿ ಆ ಪ್ರಕಾಶಂಗಳ ಕಾಣಲು ಪ್ರಾಣಾಯಾಮವಾಗಲಿ ಷಣ್ಮುಖ ಮುದ್ರೆಯ ಮೂಲಕವಾಗಲಿ, ಕುಂಭಕದ ಅಭ್ಯಾಸ ಮಾಡಿ ಪ್ರಕಾಶ ಕಾಣಲು ಆಧಾರ, ಸ್ವಾಧಿಷ್ಟ, ಮಣಿಪುರ, ಅನಾಹತ, ವಿಶುದ್ಧ, ಆಗ್ನೇಯ ಬ್ರಹ್ಮರಂಧ್ರ ಶಿಖಾಚಕ್ರದಲ್ಲಿ ಪ್ರಕಾಶದ ವರ್ಣಂಗಳ ನಿಂತು ನೋಡಲು ಹುಡುಕ ಹೋದ

ವರು, ಇವರಿಗೆ ನುಡಿಗೆಡೆಗೊಡದ ಘನ ವರ್ಣಾತೀತನನ್ನು ವರ್ಣವುಳ್ಳವನೆಂದು ಕಲ್ಪಿಸಿ ಹುಡುಕ ಹೋದುದು ಪವನ ವಿಕಾರವೆಂದರು.

ನಿಂದರಿಸಿಹೆನೆಂದಡೆ ಕಾಯ ವಿಕಾರ : ಇವರು ಉಗ್ರ ತಪಸ್ವಿಗಳು, ತಮ್ಮ ಕಾಯ ಒಂಟಿ ಕಾಲಿನಲ್ಲಿಯೆ ನಿಂತು ಉಗ್ರ ತಪವ ಮಾಡಿದವರು ಇನ್ನೊಬ್ಬನು ತಲೆಯ ಮೇಲೆಯೆ ನಿಂತು ಎಷ್ಟೊ ವರ್ಷಗಳವರೆಗೆ ಉಗ್ರ ತಪವ ಮಾಡಿ ಹುಡುಕ ಹೋದವನು. ಮತ್ತೊಬ್ಬನು ಕೇವಲ ಹೆಬ್ಬರಳಿನ ಮೇಲೆ ನಿಂತವನು ಹೀಗೆ ಉಗ್ರತಪವನ್ನಾಚರಿಸಲು ಶರೀರ ಬಹು ಶೋಷಣ ಮಾಡಿದುದರಿಂದ ಕಾಯ ವಿಕಾರವೆಂದು ಹೇಳಿಹರು.

ಒಳಗರಿಸಿಹೆನೆಂದಡೆ ಜ್ಞಾನವಿಕಾರ : ದೃಶ್ಯ, ದೃಕ್ ವಿಚಾರದವರು ದೃಶ್ಯಕ್ಕೆ ಒಪ್ಪದ ವರು, ದೃಕ್ಕೆ ಒಪ್ಪಿಕೊಂಡವರು. ಇವರು ಮಹಾಕಾವ್ಯಗಳ ಮೂಲಕ ಹುಡುಕ ಹೋದ ವರು. ಅಯಮಾತ್ಮಬ್ರಹ್ಮ, ತತ್ವಮಸಿ, ಪ್ರಜ್ಞಾನಂಬ್ರಹ್ಮವೆಂಬ ಜ್ಞಾನದ ವಾಕ್ಯವ ತೆಗೆದು ಕೊಂಡು ಹುಡುಕ ಹೋದವರು.

ಅಯಮಾತ್ಮ ಬ್ರಹ್ಮವೆಂಬ ಮಹಾಕಾವ್ಯವ ತೆಗೆದುಕೊಂಡು ನಿತ್ಯಾನಿತ್ಯ ವಿವೇಕ ಮೂಲಕ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಕೋಶಗಳೆಂಬ ಪಂಚಕೋಶಗಳು ತನ್ನಿಂದ ತಿಳಿಸಿಕೊಳ್ಳವುಗಳಾಗಿರುವುದರಿಂದ ಅನಿತ್ಯವು. ಇವುಗಳನ್ನು ತಿಳಿಯುವ ದೃಕ್‌ರೂಪರು ಅಸಂಗ, ಅರು ಸ್ವರೂಪ ನಾನೆಂದು ನೇತಾತ್ಮ ಮೂಲಕ ಹುಡುಕ ಹೋದರು. ತತ್ವಮಸಿ ಎಂಬ ಮಹಾಕಾವ್ಯವ ತೆಗೆದುಕೊಂಡು ಇದ ರಲ್ಲಿ ತ್ವಂಪದ, ತತ್ವದ ತ್ವಂಪದ ಸಾಕ್ಷಿ, ತತ್ವದ ಸಾಕ್ಷಿಯೆಂದು ತ್ವಂಪದ ಹೊರಗೆ ತ್ವಂಪದ ಸಾಕ್ಷಿ ಒಳಗೆ ತತ್ವದ ಹೊರಗೆ ತತ್ವದ ಸಾಕ್ಷಿ ಹೊರಗೆ, ತ್ವಂಪದಕ್ಕೆ ಸಾಕ್ಷಿಯಾದಾತನೆ ತತ್ವದ ಸಾಕ್ಷಿಯು, ತತ್ವದ ಸಾಕ್ಷಿಯಾದಾತ್ಮನೆ ತ್ವಂಪದ ಸಾಕ್ಷಿ, ಈರ್ವರ ಲಕ್ಷಣ ಒಂದು, ಇರವು ಒಂದು, ಅರುವು ಒಂದು ಆದುದರಿಂದ ಅವನೆ ಇವ, ಇವನೆ ಅವ ಎಂಬ ಏಕತ್ವ ಸಿದ್ಧ ಮಾಡುವುದೆ ಅಸಿಪದವೆಂತಲು, ಅಂತಪ್ಪ ಅಸಿಪದಕ್ಕೆ ಸಾಕ್ಷಿಯಾದುದರಿಸಿಹೆನೆಂದಡೆ ಜ್ಞಾನವಿ ಕಾರವೆಂದು ಹೇಳಿಹರು.

ಪ್ರಜ್ಞಾನಂಬ್ರಹ್ಮವೆಂದು ಅರುವೆ ಬ್ರಹ್ಮವೆಂದು ಅರುವು ಅರುವು ಎಂದು ಒಳಗೆ ಹುಡುಕುವುದು ಇದು ಜ್ಞಾನ ವಿಕಾರ, ಜ್ಞಾನ ವಿಕಾರ ಬರೆಯಲು ಬಹು ವಿಸ್ತಾರವಾಗುವು ದೆಂದು ಸಂಕ್ಷಿಪ್ತವಾಗಿ ಬರೆದಿದೆ. ಅರುವು ಎಂಬುದು ಅರಿಸಿಕೊಳ್ಳುವದಲ್ಲ, ಅರು ಸ್ವರೂ ಪವು ಎಂದು ತಿಳಿಯ ಹೋಗಲಿಲ್ಲ, ಅರಿಸಿಕೊಳ್ಳುವುದಕ್ಕೆ ಸೇರದೆ ಅಸ್ತಿ, ಭಾತಿ ಪ್ರಿಯ ವೆಂದು ಸಚ್ಚಿದಾನಂದದ ಅನುಸಂಧಾನದಲ್ಲಿ ರತವಾಗಿ ಮನವು ಹೇಗೆ ಹೇಗೆ ಹೊರಜಗತ್ತು ಮರೆತು ಸ್ವರೂಪ ಚಿಂತನದಲ್ಲಿ ರಮಿಸಿ ಒಳಗರಿಸಿಹೆನೆಂದಡೆ ಜ್ಞಾನವಿಕಾರವೆಂದು ಹೇಳಿ ಹರು. ಇದರಿಂದ ಸ್ವರೂಪ ಚಿಂತನದಿಂದ ಆತ್ಮನ ವಿಧೇಯ ಲಕ್ಷಣ ನಿಷೇಧ ಲಕ್ಷಣ ಬುದ್ಧಿ ಯಲ್ಲಿ ಕರಿಗೊಂಡು ಅಹಂಬ್ರಹ್ಮಾಸ್ಮಿ ಎಂಬುದು ಸಿದ್ಧವಾಯಿತಲ್ಲದೆ, ನುಡಿಗೆಡೆಗೊಡದ ಘನದಿರುವು ಪ್ರಜ್ವಲಿಸದ್ದರಿಂದ, ಒಳಗರಿಸಿಹರಾದರು, ಅದಕ್ಕಾಗಿ ಇವರು ಜ್ಞಾನವಿಕಾರ ವೆಂದು ಹೇಳಿಹರು.

ಅರಸಲಿಲ್ಲದೆ ಬೆರಸಬಲ್ಲಡೆ ಆತನೆ ಶರಣ ಗುಹೇಶ್ವರಾ: ಎರಡೆಂಬರಯ್ಯ ಕರಣದ ಕಂಗಳದಲ್ಲಿ ನೋಡಿದವರು. ಎರಡುವನತಿಗಳೆದು ಒಂದೆಂಬರಯ್ಯ, ಕಾಮಿಸುವುದಿಲ್ಲಾಗಿ

ಕಲ್ಪಿಸುವುದಿಲ್ಲ, ಭಾವಿಸುವುದಿಲ್ಲಾಗಿ ಬಯಸುವುದಿಲ್ಲ, ಗುಹೇಶ್ವರನೆಂಬುದಿಲ್ಲಾಗಿ ಬಯಲೆಂಬುದಿಲ್ಲ, ತಾನಿದ್ದು, ತನ್ನಿಂದ ತನ್ನ ಅರಿತಿಹರು ಅವರು ಒಂದೆಂಬರಯ್ಯಾ. ನಿತ್ಯಾನಿತ್ಯ ವಿಚಾರವಂತರು ಎರಡು ಮಾಡಿ ವಿವೇಕವೆಂಬ ಕರಣದಕಂಗಳಲ್ಲಿ ಅಂಗ, ಲಿಂಗವ ನೋಡಿದವರು. ತನ್ನಿಂದ ತನ್ನ ನೋಡಿದವರು. ಎರಡನ್ನು ಕಾಣದವರು. ಅಂಗನೆನಲಿಲ್ಲ, ಲಿಂಗವೆನಲಿಲ್ಲ, ಲಿಂಗೈಕ್ಯನೆನಲಿಲ್ಲ ಇವರು ತನ್ನ ಅರಿತವರು. ಇವರು ಅರಸದೆ ಬೆರಸಬಲ್ಲವರು. ಕಲ್ಪನೆಗೆಡೆಗೊಡದ ಘನ ಮಹಿಮ, ಭಾವಕ್ಕಿಂಬು ಕೊಡದವನು, ನುಡಿಗೆಡೆಗೊಡದವನಾಗಿ ತಾನಿದ್ದವನು. ಅರುವಿಂಗರುವಾಗಿ ತನ್ನ ಸ್ವಮಹಿಮೆಯಲ್ಲಿದ್ದುದರಿಂದ ಅರಸದೆ ಬೆರಸಬಲ್ಲಾತನಾದುದರಿಂದ ಆತ ಶರಣನೆಂದು ಹೇಳಿಹರು.

**168**

**ಪ್ರಾಣ, ಲಿಂಗದಲ್ಲಿ ಸಮನಿಸದು; ಲಿಂಗ, ಪ್ರಾಣದಲ್ಲಿ ಸಮನಿಸದು,**
**ಪ್ರಾಣ ಲಿಂಗ, ಲಿಂಗ ಪ್ರಾಣವೆಂಬುದು**
**ಸಂದು ಸಂಶಯವಲ್ಲದೆ ನಿಜವಲ್ಲ ಕೇಳಾ.**
**ದಶಪ್ರಾಣವಳಿದು ಲಿಂಗವೆ ತಾನೆಂದರಿಯ ಬಲ್ಲಡೆ**
**ಅದೇ ಪ್ರಾಣಲಿಂಗ ಗುಹೇಶ್ವರಾ!** ॥ 593 ॥

**ತಾತ್ಪರ್ಯ :** *ಪ್ರಾಣ ಲಿಂಗದಲ್ಲಿ ಸಮನಿಸದು, ಲಿಂಗ ಪ್ರಾಣದಲ್ಲಿ ಸಮನಿಸದು :* ಲಿಂಗವಂತರಲ್ಲಿ ಬಹು ಜನರಿಗೆ ಲಿಂಗ ಜ್ಞಾನವಿದ್ದವರು ಬಹು ಕಡಿಮೆ ಅನ್ನುವಂತೆ ಕಾಣಿಸುತ್ತದೆ. ಪ್ರಾಣಕ್ಕೆ ಲಿಂಗವೆನ್ನುವ ಲಿಂಗವಂತರು ಇಹರು. ಇತ್ತ ಪ್ರಾಣವ ತಿಳಿಯದವರು ಉಂಟು, ಇತ್ತ ಹಠಯೋಗಿಗಳು ಪ್ರಾಣಾಯಾಮ ಸಾಧನೆಯಿಂದ ಕುಂಭಕ ಯೋಗವ ಬಲಿಸಿ, ಮನಸ್ಸು ಯೋಗದಲ್ಲಿ ಲೀನವಾದಡಂತು ತೀರಿತು. ಅವರು ಪ್ರಾಣಲಿಂಗಿಗಳೆನ್ನುವಷ್ಟು ಮತಿಹೀನರಾಗಿಹರು.

ಪ್ರಾಣಾಯಾಮ ಮಾಡುವ ಯೋಗಿಗಳು ಕೂಡ ಲಿಂಗ ಆವುದಕ್ಕನ್ನಬೇಕು ಇವರಿಗೆ ಕೂಡ ನಿಜವಾದ ಲಿಂಗ ಜ್ಞಾನವಿಲ್ಲವಾಗಿದೆ. ಏಕೆಂದರೆ ತಮ್ಮ ಪ್ರಾಣಾಯಾಮ ಅಭ್ಯಾಸದಲ್ಲಿ ತಮಗೆ ತೋರುವ, ನಾದ ಬಿಂದು ಕಲೆಗಳಿಗೆ ಲಿಂಗವೆನ್ನುವಷ್ಟು ಮತಿಯು ಮಂದವಾಗಿಹುದು.

ನಾದ ಬಿಂದು, ಕಲೆಗಳಿಗತೀತವಾದ ಲಿಂಗವೆತ್ತ, ಇವರು ತಿಳಿದಿಹ ನಾದ ಬಿಂದು ಕಲೆಗಳೆತ್ತ, ಜಡವೆತ್ತ, ಚೈತನ್ಯವೆತ್ತ ? ಜಡವಾವುದು, ಚೈತನ್ಯವಾವುದು ? ಎಂಬುವುದರ ಜ್ಞಾನವಿಲ್ಲದೆ ಕಥನ ಮಾಡುವ ಈ ಭ್ರಮಾತ್ಮಕ ಬುದ್ಧಿಗೆ ಏನನ್ನಬೇಕು.

ಪ್ರಾಣ ಲಿಂಗದಲ್ಲಿ ಸಮನಿಸದು, ಲಿಂಗ ಪ್ರಾಣದಲ್ಲಿ ಸಮನಿಸದು, ಪ್ರಾಣ ಲಿಂಗದಲ್ಲಿ ಹೇಗೆ ಸಮರಸವಾಗುವುದು, ಲಿಂಗ ಪ್ರಾಣದಲ್ಲಿ ಹೇಗೆ ಸಮರಸವಾಗುವುದು, ಲಿಂಗದಲ್ಲಿ ಪ್ರಾಣವು ಲೀನವು ಎಂಬುದು ಭ್ರಾಮಕವು, ಪ್ರಾಣದಲ್ಲಿ ಲಿಂಗವು ಲೀನವು ಎಂಬುದು ಭ್ರಾಮಕವು, ಭ್ರಮಾತ್ಮನು ಬ್ರಹ್ಮದ ಘನವೇನು ಬಲ್ಲನು. ಅರೆ ಮರುಳನು ಲಿಂಗದ ಘನವೇನು ಬಲ್ಲನು, ಕುರುಡಂಗೆ ಕತ್ತಲೆ ಏನು, ಬೆಳಕು ಏನು, ನಿತ್ಯಾನಿತ್ಯ

ವಿಚಾರವಿಲ್ಲದ ಜ್ಞಾನಶೂನ್ಯರು ಇವರು ಕುರುಡರು. ಇವರಿಗೆ ನಿತ್ಯವಾವುದು, ಅನಿತ್ಯವಾವುದು ? ನಿತ್ಯಕ್ಕೆ ಅನಿತ್ಯವೆನ್ನುವರು, ಅನಿತ್ಯಕ್ಕೆ ನಿತ್ಯವೆನ್ನುವರು. ಜಡಕ್ಕೆ ಚೈತನ್ಯವೆನ್ನುವರು. ಚೈತನ್ಯಕ್ಕೆ ಜಡವೆನ್ನುವರು. ಅರೆಮರುಳರಲ್ಲಿ ಲಿಂಗ, ಪ್ರಾಣವಾಗಿದೆ, ಪ್ರಾಣ ಲಿಂಗವಾಗಿದೆ. ಲಿಂಗವಂತ ಘನವಂತರಿಗೆ ಇದು ಒಪ್ಪಿಗೆಯಾಗದು.

ಲಿಂಗದಲ್ಲಿ ಪ್ರಾಣವು ಹೇಗೆ ವಿಲೀನವಾಗುವುದು ಪ್ರಾಣದ ಪ್ರಾಣವಾಗಿಹ ಲಿಂಗ ಅದು ಪ್ರಾಣದಲ್ಲಿ ಹೇಗೆ ವಿಲೀನವಾಗುವುದು. ಪ್ರಾಣಲಿಂಗದಲ್ಲಿ ಹೇಗೆ ಸಮರಸವಾಗುವುದು. ಅಜ್ಞಾನವು ಸುಜ್ಞಾನದಲ್ಲಿ ವಿಲೀನವಾಗಬಹುದೆ ? ಸುಜ್ಞಾನವು ಅಜ್ಞಾನದಲ್ಲಿ ಲೀನವಾಗಬಹುದೆ ? ಬೆಳಕು ಕತ್ತಲೆಯಲ್ಲಿ ಲೀಯವಾಗಬಹುದೆ ? ಕತ್ತಲೆಯಲ್ಲಿ ಬೆಳಕು ಲೀನವಾಗಬಹುದೆ ? ಜಡದಲ್ಲಿ ಜಡಾಜಡರಹಿತಾತ್ಮನು ಹೇಗೆ ಲೀನವಾಗುವುದು, ಜಡಾಜಡ ರಹಿತಾತ್ಮನಲ್ಲಿ ಜಡವು ಹೇಗೆ ವಿಲೀನವಾಗುವುದು. ಅಚಲಿತ ಲಿಂಗದಲ್ಲಿ ಚಲನವುಳ್ಳ ಪ್ರಾಣವು ಹೇಗೆ ವಿಲೀನವಾಗುವುದು. ಚಲನವುಳ್ಳ ಪ್ರಾಣದಲ್ಲಿ ಅಚಲಿತ ಲಿಂಗವು ಹೇಗೆ ವಿಲೀನವು, ಪ್ರಾಣವು ಸ್ಪಂದ, ನಿಸ್ಪಂದ ಶಕ್ತಿವುಳ್ಳದು, ಲಿಂಗವು ಸ್ಪಂದ ನಿಸ್ಪಂದಕ್ಕಿಂತ ಮೀರಿದ ಗಗನ ಸದೃಶವಾಗಿರುವ ಜ್ಞಾನಾಮೃತವು.

ಪ್ರಾಣ, ಪಂಚಭೂತಗಳಲೊಂದಾದ ಭೂತದ ಅಂಶವು, ಲಿಂಗವು ಪಂಚಭೂತವಾಗದ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಘನವು. ಅದು ಸತ್ಯ ಜ್ಞಾನಾನಂದವು. ಪ್ರಾಣವು ತನ್ನ ತಾ ತಿಳಿಯದ್ದು, ಅನ್ಯವನ್ನು ತಿಳಿಯದ್ದು, ಲಿಂಗ ತನಗಿಂತನ್ಯವ ಕಾಣದುದು ತಾನೆ ತಾನಾಗಿಹ ಘನವು. ಅಕ್ಷರಾಕ್ಷರ ಮೀರಿದ ಘನವು, ಕ್ಷರವೆತ್ತ ? ಅಕ್ಷರಾಕ್ಷರ ಮೀರಿದ ಘನವೆತ್ತ ?

ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೊಂದು ದಿನವಾಯಿತ್ತು, ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತ್ತು. ಹಲವು ರುದ್ರಾವತಾರ ವಳಿದಲ್ಲಿ ಕೂಡಲಸಂಗಮದೇವ ಏನೊಂದು ಅರಿಯದೆ ಇದ್ದನಯ್ಯ. ಇವರೆಲ್ಲರೂ ಸಾತ್ವಿಕ ಅಂತಃಕರಣದಲ್ಲಿ ಪ್ರತಿಫಲಿತವಾದ ಚೇತನ, ಈ ಚೇತನವೆ ಪ್ರಾಣದಲ್ಲಿ ಪ್ರತಿಫಲಿತವಾಗಿ ಇಷ್ಟು ದೀರ್ಘ ಆಯುಷ್ಯವ ತೋರಿಸಿ ಕೊನೆಗೆ ಮಡಿದು ಹೋಗುವುದು.

ಲಿಂಗವೆಂಬ ಕೂಡಲಸಂಗಯ್ಯ ಇದ್ದಂತಿದ್ದ ನಿರ್ವಿಕಾರ ಘನ, ನಿರುಪಮ ನಿರಾಳ ಘನ ಅದು ಇವರೆಲ್ಲರನ್ನು ಅದೆಂತು ಅರಿವುದು, ಇದು ಕಾರಣ ಲಿಂಗ, ಯತಾರ್ಥವರಿತವರೆಂದರೆ ಶರಣರು, ಅದಕ್ಕಾಗಿ ಪ್ರಭು, ಲಿಂಗ ಪ್ರಾಣ, ಪ್ರಾಣಲಿಂಗವೆಂಬುದು ಸಂದು ಸಂಶಯವಲ್ಲದೆ ನಿಜವಲ್ಲ ಕೇಳಾ, ಆರು ಕೋಟಿ ಬ್ರಹ್ಮರು ಮಡಿದುದು ಪ್ರಾಣವಲ್ಲದೆ ಲಿಂಗವಲ್ಲ, ಬ್ರಹ್ಮನೆಂದರೆ ಚೇತನ ಸತ್ತಾ ಪಡೆದ ಪ್ರಾಣ, ಇದೇ ಪ್ರಕಾರ ನಾರಾಯಣರೊಂದು ಕೋಟಿ ಮಡಿದರೂ ಚೇತನ ಸತ್ತಾ ಪಡೆದ ಪ್ರಾಣಂಗಳೆ ಮಡಿದಿಹವಲ್ಲದೆ ಲಿಂಗ ಮಡಿದುದಲ್ಲ, ಹಲವು ರುದ್ರಾವತಾರ ಅಳಿದರೂ ಚೇತನಸತ್ತಾ ಪಡೆದ ಪ್ರಾಣಂಗಳೆ ಮಡಿದಿಹವಲ್ಲದೆ ಲಿಂಗ ಮಡಿದುದಲ್ಲ, ವಿಚಾರ ಮಾಡಿದರೆ ಚೇತನವು ಅಳಿದುದಲ್ಲ, ಭ್ರಾಂತಿ ಅಳಿದುದು ಭ್ರಾಂತಿದೃಷ್ಟಿಗೆ ಮಾತ್ರ ಅಳಿದಂತಾಗಿದೆ. ಲಿಂಗದೃಷ್ಟಿಗೆ ಅಳಿದುದಿಲ್ಲ, ಉಳಿದುದಿಲ್ಲ, ನುಡಿಗೆಡೆಗೊಡದ ಘನದಲ್ಲಿ ನುಡಿಯಿಂದುಕ್ತವಾದುದು ಭ್ರಮವು. ಎಡೆಯಿಲ್ಲದ ಪರಿಪೂರ್ಣದಲ್ಲಿ ಆವುದು ಹುಟ್ಟಿದೆ ? ಆವುದು ಸತ್ತಿದೆ ? ಅದಕ್ಕಾಗಿ ಇದ್ದುದಕ್ಕೆ ಇಲ್ಲದಿ

ರುವಿಕೆ ಇಲ್ಲ, ಇಲ್ಲದುದಕ್ಕೆ ಇರುವಿಕೆಯು ಇಲ್ಲ, ಇದ್ದುದು ಇದೆ. ಇಲ್ಲದುದು ಇಲ್ಲವೆ ಇಲ್ಲವೆನ್ನುವುದಕ್ಕೂ ಅವಕಾಶ ಕೊಡದ ಅಖಂಡಿತ ಘನವಾಗಿಹ ಲಿಂಗವ ತಿಳಿಯದ್ದರಿಂದ ತನ್ನ ಭ್ರಾಂತಿಯಲ್ಲಿ ಇಲ್ಲದ ಪ್ರಾಣ, ಇಲ್ಲದ ಚೇತನ, ಇದ್ದ ಚೈತನ್ಯವೆಂಬುದು ನುಡಿಗೆಡೆಗೊಡದ ಘನದಲ್ಲಿ ಉಂಟಾಗಿತ್ತು. ತನ್ನಿಂದ ತನ್ನ ಅರಿಯಲು, ತನ್ನಿರುವಿನ ಹಿರಿಮೆ, ಶಬ್ದದಿಂದುಸರಲು ನಾಚಿತ್ತು. ಶಬ್ದಮುಗ್ಧವಾಯಿತು. ಇದು ಲಿಂಗಕ್ಕೆ ಲಿಂಗವಾಗಿ ನೋಡಿದ ದಿವ್ಯದೃಷ್ಟಿ ಇದು ಸುಚೈತನ್ಯಕ್ಕೆ ನಿಜ ಚೈತನ್ಯನಾಗಿ ನೋಡಿಹ ಅಪರಿಮಿತ ದೃಷ್ಟಿ. ಅಲ್ಲಿ ಲಿಂಗ ಪ್ರಾಣ ಪ್ರಾಣ ಲಿಂಗವೆಂಬುದು ಸಂದು ಸಂಶಯವಲ್ಲದೆ ನಿಜವಲ್ಲ ನೋಡಾ ಎಂಬುದು ಯತಾರ್ಥವು ಎಂಬುದು ತನ್ನಿಂದ ತನಗೆ ತಿಳಿವುದು.

ದಶಪ್ರಾಣ ವಾಯುವಳಿದು ಲಿಂಗವೆ ತಾನೆಂದರಿಯಬಲ್ಲಡೆ ಅದೆ ಪ್ರಾಣಲಿಂಗ ಗುಹೇಶ್ವರ: ಪ್ರಾಣಲಿಂಗಿಗಳು ಯಾರು ಗೊತ್ತೆ ? ತನ್ನಿಂದ ತಿಳಿಸಿಕೊಳ್ಳುವ ದಶಪ್ರಾಣ, ವಾಯು ಅವು ಶರೀರದಲ್ಲಿ ಕ್ರಿಯೆದಿಂದುಕ್ತವಾಗಿಹವು. ಈ ಪ್ರಾಣದ ಕ್ರಿಯೆ ಇರದಿದ್ದರೆ ಹೆಣವೆಂದು ಹೇಳಿಸಿಕೊಳ್ಳುವುದು. ಸಕಲ, ಶರೀರದ ಕ್ರಿಯೆಂಗಳು ಒಳಗೆ ದಶಪ್ರಾಣಗಳು ಇದ್ದೆ ನಡೆಯುತ್ತವೆ. ಅವುಗಳೆಲ್ಲವು ತನ್ನಿಂದ ತಿಳಿಸಿಕೊಳ್ಳತಕ್ಕವುಗಳಾಗಿವೆ. ಹೆಚ್ಚಿಗೆ ವಿವರಣೆ ಬೇಕಾದಲ್ಲಿ ನಿಜಗುಣರ ಪರಮಾನುಭವ ಬೋಧೆಯಲ್ಲಿ ನೋಡುವುದು. ವಿಚಾರ ಚಂದ್ರೋದಯದಲ್ಲಿ ನೋಡಬಹುದು. ವಿಷಯ ವಿಸ್ತಾರವಾಗುವುದೆಂದು ಬರೆದಿರುವುದಿಲ್ಲ. ಪ್ರಾಣಂಗಳೆಂದರೆ ಕ್ರಿಯೆದಿಂದುಕ್ತವು. ಲಿಂಗವೆಂದರೆ ತಾನು, ಅಕ್ರಿಯೆನು ಸತ್ಯಜ್ಞಾನಾನಂದಮಯನೆಂದರೆ ತಾನು ಆರು ನುಡಿಗೆಡೆಗೊಡದ ಘನದ ರಹಸ್ಯವ ತಿಳಿದಿಹರು. ಅವರು ಲಿಂಗವರಿತವರು, ಪ್ರಾಣಲಿಂಗಿಯು ಗುಹೇಶ್ವರನು ಅವನೆ.

ಪ್ರಾಣಲಿಂಗದ ಬಗ್ಗೆ ತಪ್ಪಾಗಿ ತಿಳಿದವರು ಹೆಚ್ಚು ಅಂದಂತೆ ಕಾಣಿಸುತ್ತದೆ. ಈ ತಪ್ಪು ತಿಳುವಳಿಕೆ ಹೋಗಬೇಕಾದರೆ ಪ್ರಭು ಬಿತ್ತರಿಸಿದಂತೆ ತನ್ನಿಂದ ತಿಳಿಸಿಕೊಳ್ಳುವ ದಶಪ್ರಾಣಂಗಳು ತಾನಾಗಬಾರದು, ತನ್ನವು ಆಗಬಾರದು, ಆಗ ಸಚ್ಚಿದ್ರೂಪ ಲಿಂಗವೆಂಬ ಸಂಜ್ಞೆಯ ತಿಳಿಯಬಲ್ಲಡೆ ಅದೆ ಪ್ರಾಣಲಿಂಗವೆಂದು ಬಿತ್ತರಿಸಿಹನು. ಆರು ಗುರು ಕರುಣಿಸಿದ ಲಿಂಗ, ಅಖಂಡಿತ ಲಿಂಗ, ಅಚಲಿತ ಲಿಂಗ, ಅನುಪಮ ಲಿಂಗವೆಂಬ ಲಿಂಗ ಸಕೀಲ ಸಂಯೋಗ ವರ್ಮ ಸ್ಥಲವ ತಿಳಿಸಿಕೊಟ್ಟಂತೆ ತಿಳಿದಿಹರು. ಅವರಿಗೆ ಸಹಜವು, ಕಲ್ಪಿತರಾಗಿ ಸಾಧನಮಾಡಿ ಸಾಧಿಸಿಹೆವು ಎನ್ನುವವರಿಗೂ ಸಾಧ್ಯವಿಲ್ಲ, ಹಠಯೋಗ, ರಾಜಯೋಗ ಲಂಬಿಕಾಯೋಗ, ನಾನಾ ಯೋಗ ಮಾಡಿದ ಯೋಗಿಗಳಿಗೂ ಅಸಾಧ್ಯವು. ಲಿಂಗ ಲಿಂಗವೆಂದು ಅನುಷ್ಠಾನ ಮಾಡಿದವರಿಗೂ ಸಾಧ್ಯವಿಲ್ಲ, ಆರು ಶ್ರೀಗುರು ಕೃಪೆಯಿಂದ ಲಿಂಗಸಕೀಲ ವರ್ಮಸ್ಥಲವರಿತಿಹರು ಲಿಂಗಕ್ಕೆ ಲಿಂಗವಾಗಿ ಲಿಂಗ ಪ್ರಸಾದಕೊಂಡುದರಿಂದ ಸಾಧ್ಯವು. ತಾನು ಲಿಂಗವಾಗಿ ಲಿಂಗವ ಅರಿಯಹೋದವರಿಗೆ ಲಿಂಗ ಘನವಾದರೆ ತಾನು ಘನಕ್ಕೆ ಘನವಾಗಿ ನೋಡಿಹನು. ಇಂತಪ್ಪ ಮಹಾಂತನು ಪ್ರಾಣಲಿಂಗಿಯು ಇದು ಕಾರಣ ದಶಪ್ರಾಣವಾಯು ಅಳಿದು ಲಿಂಗವೆ ತಾನೆಂದರಿಯ ಬಲ್ಲಡ ಅದೆ ಪ್ರಾಣಲಿಂಗ ಗುಹೇಶ್ವರಾ ಎಂದು ಹೇಳಿಹರು.

**ಇದ್ದುದ ಹೇಳಲಿಲ್ಲ, ಇದ್ದುದ ತೋರಲಿಲ್ಲ,**
**ಹೊದ್ದಿದ ಆಶ್ರಮವ ನಾನೆಂಬೆನು ಶಿವನೆ ?**
**ಭದ್ರಕಾಳಿಯ ಬಸಿರೊಳಗಿರ್ದ ಬಾವಿಯ ಸರ್ಪನು,**
**ಸಿದ್ಧರಸದ ಘಟಿಕೆಯ ನುಂಗಿ ಎದ್ದು ಆಡಿತ್ತು ನೋಡಾ!**
**ಹದ್ದಿನ ಹೆಡೆಯಲ್ಲಿ ಮಾಣಿಕ್ಯವಿದ್ದುದು**
**ಇಲ್ಲೆಂಬ ಎದ್ದು ಹೇಳುವ ಕನಸು ತಾನಲ್ಲ ಗುಹೇಶ್ವರಾ.** ॥ 596 ॥

**ತಾತ್ಪರ್ಯ** : ಇದ್ದುದ ಹೇಳಲಿಲ್ಲ ಇದ್ದುದ ತೋರಲಿಲ್ಲ ಹೊದ್ದಿದ ಆಶ್ರಮವ ನಾನೇನೆಂಬೆನು ಶಿವನೆ : ಶರಣ ಇದ್ದುದ ಅರಿಯ ಹೋಗಿ ಅದುವೆ ಆಗಿಹ ಸ್ವಮಹಿಮ. ಇದ್ದುದು ಆವುದು ? ಅಂದು ಇದ್ದುದು ಇಂದು ಇದ್ದುದು ಎಂದೆಂದೂ ಇದ್ದುದು. ನಿರಂತರ ಇದ್ದುದು. ಇದ್ದುದು ತಾನೆ ತಾನು ತೋರಬಾರದ ಘನ ತೋರುವುದೆ ಇಲ್ಲ ವೆಂದಲ್ಲಿ ನಿರಂತರವಾಗಿಹ ಮಂಗಲಮಯನಾಗಿ ಇದ್ದುದ ಹೇಳಲಿಲ್ಲವೆಂದಲ್ಲಿ ಇದು ನುಡಿದುದು ಎಂದು ? ನುಡಿಯದೇ ಘನಕ್ಕೆ ತತ್ವಬಲ್ಲವರೆಂದು ಸಚ್ಚಿದಾನಂದ, ನಿತ್ಯಪೂರ್ಣ, ಅಖಂಡ, ಅದ್ವಿತೀಯ ಅವಿಕಾರ, ಅಸಂಗ ಎಂದು ಹೇಳಿದುದುಂಟು. ಈ ಪರತತ್ವವದು ಇದ್ದುದು ಘನಕ್ಕೆ ಘನವು ಅದು ಹೇಳದ ಘನವಾಗಿರುವುದರಿಂದ ಶೃತಿಗಗೋಚರ ವಾಙ್ಮನೋತೀತವು ಅದಕ್ಕಾಗಿ ಅದು ತೋರಬಾರದ ಘನವೆಂದು ಬಿತ್ತರಿಸಿಹರು.

ಹೊದ್ದಿದ ಆಶ್ರಮವನೇನೆಂಬೆನು ಶಿವನೆ ಎಂದುದು ಬಹು ಗಹನಾರ್ಥವುಳ್ಳದ್ದಾಗಿದೆ. ಈ ಆಶ್ರಮವು ಬಹು ವಿಚಿತ್ರವು, ಇದರೊಳಗಿದ್ದವನು ಅನುಪಮನು, ತೋರಬಾರದ ಘನನು ಮತ್ತು ಇದ್ದವನು. ಇದ್ದವನಾಗಿದ್ದರೂ ನುಡಿಯದ ಘನ ಹೇಳದ ಘನವಂತನ ಆಶ್ರಮವನೇನೆಂಬೆನು ಶಿವನೆ, ಅಸ್ತಿ, ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮ ರೂಪು ಎಂಬ ಹುಸಿಯೆಂತು ಜನಸಿತೆಂದರಿಯನಯ್ಯ ಇಲ್ಲದ ಹೆಸರುಳ್ಳ ಚಿತ್ರದಂತೆ ರೂಪು ನಾಮವೀತೆರನಂದರಿಯದೆ ತೊಳಲುತಿರ್ದನಯ್ಯ ಕೂಡಲಚೆನ್ನಸಂಗಯ್ಯ ಸಂಸಾರ ಬಂಧನ ವೆನಗಿದೆ ಕಂಡಯ್ಯ. ಓಹೋ !! ತೋರಬಾರದ ಘನವಂತನಿಗೆ ತೋರುವ ಆಶ್ರಮವನೇನೆಂಬೆನು ಶಿವನೆ ? ಹೇಳಬಾರದ ಘನವಂತನಿಗೆ ನುಡಿಗೊಳಪಟ್ಟ ಆಶ್ರಮವನೇನೆಂಬೆನು ಶಿವನೆ ! ದಿಟವಂತನಿಗೆ ಸಟೆಯ ಆಶ್ರಮವೆ ? ನಿತ್ಯಂಗೆ ಅನಿತ್ಯದ ಆಶ್ರಮವೆ ? ಅಮರಂಗೆ ಮರಣದ ಮನೆಯೆ ? ಅಚಲನಿಗೆ ಬರ ಹೋಗುವ ಮನಿಯೆ ! ಆಶ್ರಮವೆ ! ತನುವಿರಹಿತಂಗೆ ತನುವಿನ ಆಶ್ರಮವೆ ? ನಿಷ್ಕಳಂಕನಿಗೆ ಕಳಂಕದ ಆಶ್ರಮವೆ ? ಅದೃಶಿಗೆ ದೃಶ್ಯರೂಪಿ ಆಶ್ರಮವೆ ? ಪುರುಷೋತ್ತಮನಿಗೆ ಪುರದಾಶ್ರಮವೆ ? ಅಕ್ಷರೋತ್ತಮಂಗೆ ಕ್ಷರದಾಶ್ರಯವೆ ? ಗುಣಾತೀತಂಗೆ ಗುಣಮಣಿಯ ಆಶ್ರಮವೆ ? ಬೆಳಕಿಂಗೆ ಕತ್ತಲೆಯ ಆಶ್ರಮವೆ ಇದ್ದವನಿಗೆ ಇಲ್ಲದಾಶ್ರಮವೆ ? ಬ್ರಹ್ಮಕ್ಕೆ ಭ್ರಮದ ಆಶ್ರಮವೆ ? ಪರಮಸತ್ಯಕ್ಕೆ ಅಸತ್ಯದಾಶ್ರಮವೆ ? ಸತ್ಯಾಸತ್ಯವೆಂಬುದಕ್ಕೂ ನಿಲುಕದವನು ಅಸತ್ಯದಾಶ್ರಮ ಹೊದ್ದಿದುದು ಏನನ್ನಬೇಕು, ಅಸತ್ಯದಾಶ್ರಮಕ್ಕೆ ಅದಾವ ನಾಮದಿಂ ಕರೆಯುವುದು. ಅಸತ್ಯಕ್ಕೆ ಅದಾವ ರೂಪು ಎನ್ನುವುದು ? ಓ ಘನವಂತನೆ ! ನೀ ಹೊದ್ದಿದ್ದ ಆಶ್ರಮ, ಇಲ್ಲದ ಹೆಸರುಳ್ಳ ಚಿತ್ರದಂತೆ ಇದೆಯಲ್ಲ, ಓಹೋ ! ಈ ಆಶ್ರಮಕ್ಕೇನನ್ನಬೇಕು ? ಭ್ರಮಾತ್ಮಕರಿಗೆ ನಾನಾ ರೂಪ

ವಾಗಿ ನಾನಾ ಹೆಸರಿನಿಂದ ಕರೆಯಿಸಿಕೊಳ್ಳುತ್ತದೆ. ಇದು ಪಿಂಡಾಂಡ ರೂಪವಾಗಿ ಕಾಣಿಸುತ್ತದೆ. ಬ್ರಹ್ಮಾಂಡರೂಪವಾಗಿ ಕಾಣಿಸುತ್ತದೆ. ಇದಲ್ಲದೆ ಸ್ಥಾವರವೆಂಬ ಹೆಸರಿನಿಂದ ಜಂಗಮವೆಂಬ ಹೆಸರಿನಿಂದ ಕರೆಯಿಸಿಕೊಳ್ಳುವ ಅಶ್ವಥಾಶ್ರಮವ ನಾನೇನೆಂಬೆನು ಶಿವನೆ.

ಭದ್ರಕಾಳಿಯ ಬಸಿರೊಳಗಿದ್ದ ಬಾವಿಯ ಸರ್ಪನು ಸಿದ್ಧರಸದ ಘುಟಿಕೆಯ ನುಂಗಿ ಎದ್ದಾಡಿತ್ತು ನೋಡಾ, ಹದ್ದಿನ ಹೆಡೆಯಲ್ಲಿ ಮಾಣಿಕ್ಯವಿದ್ದುದು, ಇಲ್ಲೆಂಬ ಎದ್ದು ಹೇಳುವ ಕನಸು ತಾನಲ್ಲ ಗುಹೇಶ್ವರಾ : ಭದ್ರಕಾಳಿ ಬಸಿರೊಳಗಿದ್ದ ಕಲ್ಪಿತರೂಪಿ ಕನಸು ತಾನಲ್ಲ, ಶರಣನ ಸಕಲ ಕರಣಗಳನ್ನು ಮಾರ್ಪಡಿಸುವ ಮಂತ್ರ ಶಕ್ತಿಗೆ ಒಡಲಾಗಿರುವ ಮೂಲಸ್ಥಲದಲ್ಲಿ ಪರಮಾಮೃತರೂಪವಿದೆ. ಕುಂಡಲಿ ಸರ್ಪನದರಲ್ಲಿ ನಿರಂತರ ವಾಸವಾಗಿದೆ. ಪರಮಾನಂದವೆಂಬ ಸಿದ್ದರಸವ ಸೇವಿಸಿ ಸ್ವಲೀಲೆಯಲ್ಲಿ ವಿಹರಿಸುತ್ತಿದೆ. ಬ್ರಹ್ಮ ರಂಧ್ರದಲ್ಲಿ ಪರಮಹಂಸವೆಂಬ ಜ್ಞಾನರತ್ನವ ಕಂಡಿಹೆನೆನ್ನುವುದು ಕೇವಲ ಕನಸಿನ ಮಾತು. ಇಂತಹ ಮಾತಿಗೆ ಶರಣರ ನೆಲೆ ತಿಳಿಯದು.

ಚಿತ್‌ಶಕ್ತಿ ಬಸಿರೊಳಗಿದ್ದ ಕಲ್ಪಿತರೂಪಿ ಕನಸು ತಾನಲ್ಲ, ಏಕೆಂದರೆ ಶರಣನ ಸಕಲ ಕರಣಂಗಳ ಮಾರ್ಪಡಿಸುವ ಶಿವಶಕ್ತಿ ಸಂಪುಟ, ಇದು ಶ್ರೀಗುರು ಕಾರುಣ್ಯಸಂಪುಟ, ಅಜಾತ ಸಂಪುಟ, ಚೈತನ್ಯಾತ್ಮರೂಪಿ ಶಿವ, ಚಿತ್‌ರೂಪಿ ಶಕ್ತಿ ಒಂದು ಮಾಡಿ ತೋರಿದ ಶ್ರೀಗುರು ಕಾರುಣ್ಯ, ಇದು ಎನ್ನಂಗವನ್ನೆ ಶ್ರೀಗುರು ಮಂತ್ರ ಮಾಡಿದ ಅಜಾತ ತತ್ವದಲ್ಲಿ ಪರಮಾಮೃತಭಾವಿ ಅದೆ. ಕುಂಡಲಿ ಸರ್ಪ ಅದರಲ್ಲಿ ನಿರಂತರವಾಸವಾಗಿದೆ. ಕುಂಡಲಿ ಸರ್ಪವದು ಮನರೂಪಿ ಚೇತನ. ಇದು ಅಧೋ ಮುಖವಾಗಿ ಅಂದರೆ ವಿಷಯಾಭಿಮುಖವಾಗಿ ಪ್ರವರ್ತಿಸುವುದು ಸಹಜವು, ಇಂತಹದು ಕುಂಡಲಿ ಸರ್ಪ, ಇದು ಈರೇಳ ಲೋಕ ಹದಿನಾಲ್ಕುದೊಳಗಿದ್ದು ಅಮುಖ್ಯ ಚೇತನರೂಪಿ ಜೀವಿಗಳೆಲ್ಲ ಇದರ ಆಧೀನದಲ್ಲಿ ಶರಣನೊಬ್ಬ ಮಾತ್ರ ಕುಂಡಲಿ ಸರ್ಪಕ್ಕೆ ಸಿದ್ಧರಸವ ಕುಡಿಸಿದುದರಿಂದ ತನ್ನ ಸ್ವಲೀಲೆಯಲ್ಲಿ ಎದ್ದಾಡುತ್ತಿಹುದು.

ಹದ್ದು ಪರಮಹಂಸರೂಪಿ ಹದ್ದು, ಇದು ಚಿದಾಕಾಶದಲ್ಲಿ ಚಿತ್‌ಸ್ವರೂಪ ತಾನಾಗಿ ತನ್ನ ಸ್ವಲೀಲೆಯಲ್ಲಿ ತಾನು ತಾನಾಗಿ ಸಂಚರಿಸುವ ಹದ್ದು ತನ್ನ ಸ್ವಸುಖದಲ್ಲಿ ಎದ್ದಾಡುತ್ತಿಹ ಹದ್ದು, ಇದು ಸಿದ್ಧರಸವ ಸೇವಿಸಿದ ಹದ್ದು, ಚಿದ್ರಸವ ಸೇವಿಸಿದ ಹದ್ದು, ಜ್ಞಾನಾಮೃತ ಸೇವಿಸಿದ ಹದ್ದು, ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವಿನ ಜ್ಞಾನಾಮೃತರೂಪಿ ಸಿದ್ಧರಸದ ಘುಟಿಕೆಯನುಂಗಿ ಎದ್ದಾಗಿತ್ತು. ಇದು ಅಮರತ್ವವರಿತು ಅಮರಾನಂದರಲ್ಲಿ ಸುಳಿದಾಡುವ ಘನವು ನೋಡಿರೆ ? ಸಿದ್ಧರಸವದು ಅಮರಾನಂದ, ಇದು ಅಪರಮಿತ ಆನಂದ, ಈ ಮಹಾದಾನಂದದಲ್ಲಿ ಮನ ಮಗ್ನವಾದುದು ಸಿದ್ಧರಸದ ಘುಟಿಕೆಯ ನುಂಗಿದುದು ಇದು ಶಬ್ದಮುಗ್ಧವು. ಇಂತಪ್ಪ ಸರ್ವಾಂಗಲಿಂಗಮಯವಾಗಿಹ ಅಖಂಡಿತನ ನಿಲುವುಳ್ಳ ಜ್ಞಾನಾಮೃತವು ಬ್ರಹ್ಮರಂಧ್ರದಲ್ಲಿ ಕಂಡೆನೆನ್ನುವುದು ಕನಸು ಈ ಕನಸು ತಾನಲ್ಲ ತನ್ನದಲ್ಲವೆಂದು ಹೇಳಿಹರು.

**170**

**ಅದ್ವೈತನ ಕರಸ್ಥಲದೊಳಗೆ, ಅನಂತನೆಂಬ ಗಿಳಿ ಮೂರ್ತಿಗೊಂಡು**

**ಅತೀತ ಅನಾಗತ ವರ್ತಮಾನವೆಂಬ ಕೊರೆಕೊಳನುಂಡು**
**ಓದಿತ್ತು ಅಗಣಿತ ಪುರಾಣವ ಅನಾಮಯ ಶಾಸ್ತ್ರವನು,**
**ಅನುಪಮ ವೇದವೆಂದು**
**ನಿಃಸ್ಥಲವ ಸ್ಥಲವಿಡಲು,**
**ನಿರ್ಮಳಾತ್ಮಂಗೆ ಇಹವಿಲ್ಲ ಪರವಿಲ್ಲ !**
**ಆದಿ ಮಧ್ಯಾಂತ ನಿರಾಳ ಗುಹೇಶ್ವರನ ಅನುಭಾವಿಗೆ**
**ಸರ್ವಾಂಗ ಲಿಂಗವು!** ॥ 597 ॥

**ತಾತ್ಪರ್ಯ** : ಅದ್ವೈತನ ಕರಸ್ಥಲವು ನುಡಿಗೆಡೆಗೊಡದ ಘನದಿರುವು ಆವುದು, ಅದ್ವೈತನ ಅದು ಕರಸ್ಥಲ, ನಾನೀನೆಂಬುದಕ್ಕೆಡೆಗೊಡದ ಘನದಿರುವವದು ಅದ್ವೈತನ ಕರಸ್ಥಲ, ಇಂತಪ್ಪ ಅರು ಹೃದಯದೊಳಗೆ ಅನಂತನೆಂಬ ಗಿಳಿ ಮೂರ್ತಿಗೊಂಡು ಅತೀತ, ಅನಾಗತ, ವರ್ತಮಾನವೆಂಬ ಕೊರೆಕೊಳವನುಂಡು ಓದಿತ್ತು ಅಗಣಿತ ಪುರಾಣವ ಅದ್ವೈತನ ಕರಸ್ಥಲದೊಳಗೆ ಅಲ್ಲಿ ಅಂಗನೆನ್ನುವದು ನಾಚಿ ಮೌನವಾಗಿದೆ. ಲಿಂಗನೆನ್ನುವುದು ನಾಚಿ ಮೌನವಾದ ಮಹದರುವಿನ ಇರವು ಅದು ಅದ್ವೈತನ ಕರಸ್ಥಲವು ಜೀವನೆನ್ನುವುದು ನಾಚಿ ಶಬ್ದಮುಗ್ಧವು. ಪರಮನೆನ್ನುವುದು ನಾಚಿ ಶಬ್ದಮುಗ್ಧವಾಗಿಹ ನಿಲುವು ಅದ್ವೈತ ಕರಸ್ಥಲ ಅಂಗನು ಬೇರೆ, ಲಿಂಗನು ಬೇರೆ ಅಂಗನು ಲಿಂಗನು ಒಂದೆನ್ನುವ ಭಾಷೆ ಪ್ರಸಾದವೆ, ನಾಚಿ ಮೌನವಾಗಿ ನಿಶಬ್ದವೇಧಿಸಿದ ಘನವು ಅದ್ವೈತನ ಕರಸ್ಥಲವಾಗಿದೆ. ಇದು ಶರಣರ ಕರಸ್ಥಲ ಅಲ್ಲಿ ಅನಂತನೆಂಬ ಮೂರ್ತಿಗೊಂಡ ಕರಸ್ಥಲ ಇದು ಸ್ವಾನುಭವವುಳ್ಳ ಕರಸ್ಥಲದೊಳಗೆ ಅನಂತನೆಂಬ ಗಿಳಿ ಮೂರ್ತಿಗೊಂಡು ಅತೀತ, ಅನಾಗತ, ವರ್ತಮಾನವೆಂಬ ಕೊರೆಕೊಳನುಂಡು ಓದಿತ್ತು ಅಗಣಿತ ಪುರಾಣವ ಅನಾಮಯ ಶಾಸ್ತ್ರವ ಅನುಪಮ ವೇದವೆಂದು.

ಓಹೋ !! ಇದಾವ ಗಿಳಿ, ಗುಹೇಶ್ವರನರಿದ ಗಿಳಿಯಾದುದರಿಂದ ಆದಿ, ಆಧಾರವ ಕಾಣದ ಗಿಳಿ, ಶಿವಾಚಾರ ಬ್ರಹ್ಮಚಾರವ ಕಾಣದ ಗಿಳಿ, ಈ ಅನಂತವೆಂಬ ಗಿಳಿಯಾಗಿರುವುದರಿಂದ ಇದಕ್ಕೆ ಸ್ವೀಕರಿಸಬೇಕಾದುದಿಲ್ಲ, ತ್ಯಜಿಸಬೇಕಾದುದಿಲ್ಲ, ನಷ್ಟ ಮಾಡಬೇಕಾದುದಿಲ್ಲವಾದುದರಿಂದ ಇದು ಓದಿದ ಪುರಾಣ ಅಗಣಿತ. ಓಹೋ !! ಅಗಣಿತ ಪುರಾಣ ಅನಾಮಯ ಶಾಸ್ತ್ರವ ಅನುಪಮ ವೇದವ ಓದಿತ್ತು, ಓಹೋ !! ಇದು ಆದಿ ಕಾಣದ ಗಿಳಿ, ಮಧ್ಯ ಅಂತ್ಯವ ಕಾಣದ ಗಿಳಿ ಇದು ಉಪಮಿಸಿದ ಗಿಳಿ, ಮೂರ್ತಿಗೊಂಡಿತ್ತೆ, ಇದೆಂಥ ಆಶ್ಚರ್ಯ ನಿರೂಪ ಮೂರ್ತಿಗೊಂಡಿತ್ತೆ ? ನಿರಾಳ ಮೂರ್ತಿಗೊಂಡಿತ್ತೆ ! ಇದರ ಲೀಲೆಯ ನೋಡಿರೆ ? ಅತೀತ ಅನಾಗತ ವರ್ತಮಾನವೆಂಬ ಕೊರೆಕೊಳನುಂಡ ತಾನು ಅನಂತನಾದುದರಿಂದ ಅತೀತ, ಅತೀತವೆಂಬುದು ಅದಕ್ಕೆ ತೃಪ್ತಿಕರ ಊಟ ಹೇಗಾಗುವುದು.

ವೇದಾತೀತ, ಭಾವಾತೀತ, ಗುಣಾತೀತ, ಧ್ಯಾನಾತೀತ, ವಾಙ್ಮನೋತೀತವೆಂದುದು ಅದಕ್ಕೆ ಕೊರೆಕೊಳಾಗಿದೆ. ಅದರ ಹೊಟ್ಟೆಗೆ ಸಾಲದಷ್ಟು ಆಹಾರವಾಗಿದೆ. ಈ ಅತೃಪ್ತವಾಗಿದ್ದ ಊಟವ ಉಂಡು ಓದಿತ್ತು ಅಗಣಿತ ಪುರಾಣವ ಅನುಪಮ ವೇದವ ಅನಾಮಯಶಾಸ್ತ್ರವ.

ಪರಮಹಂಸನೆಂಬ ಗಿಳಿಯ ಓದು ನೋಡಿರೆ ? ಶಾಸ್ತ್ರವ ನೋಡಿರೆ ? ಸಕಲರು ಓದಿಹ ಓದು ಇದರ ಓದು ಅಲ್ಲ, ಸಕಲ ಶಾಸ್ತ್ರದಂಥ ಶಾಸ್ತ್ರವು ಇದಲ್ಲ, ಇದು ಅನಂತನಾಗಿಹ ಗಿಳಿಯ ಪುರಾಣ, ಅಗಣಿತ ಪುರಾಣ, ಈ ಪುರಾಣ ಪೂರೈಸದ ಪುರಾಣ, ಕ್ಷರ ಪುರಾಣವಾದಲ್ಲಿ ಪೂರೈಸಬಹುದು. ಅಕ್ಷರ ಪುರಾಣವ ಪೂರೈಸಬಹುದು. ಕ್ಷರಾಕ್ಷರವೆಂಬುದಕ್ಕೂ ಮೀರಿದ ಪುರಾಣ, ತೆರಹಿಲ್ಲದ ಘನದ ಪುರಾಣ ; ಇದು ಅಗಣಿತ ಪುರಾಣ, ಕಾರ್ಯಕಾರಣದಿಂದುಕ್ತ ಪುರಾಣವ ಪೂರೈಸಬಹುದು. ಅತೀತ ಅತೀತವೆಂಬುದು ಇಲ್ಲಿ ಪ್ರಧಾನವಾಗಿಲ್ಲ, ಚಾರಿತ್ರವು ಪ್ರಧಾನವಾಗಿಲ್ಲ, ಕಾಲತ್ರಯಂಗಳು ಪ್ರಧಾನವಾಗಿಲ್ಲ, ಅಲ್ಲಿ ಕ್ಷರವೆಂಬುದಕ್ಕಿಂಬಿಲ್ಲ, ಅಕ್ಷರವೆಂಬುದಕ್ಕಿಂಬಿಲ್ಲ, ನಾಶ ಅವಿನಾಶ ಎಂಬುದಕ್ಕೂ ಅವಕಾಶ ಕೊಡದ ಪುರಾಣ, ಪ್ರಕಾಶ, ಪ್ರಕಾಶಿತವೆಂಬುದಕ್ಕೂ ಅವಕಾಶಕೊಡದ ಪುರಾಣ, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ಪುರಾಣ ಇದು ಅಗಣಿತ ಪುರಾಣ, ಭಾವಕ್ಕಿಂಬುಕೊಡದ ಪುರಾಣ, ಶಬ್ದಮೀಸಲವಾಗಿಹ ಪುರಾಣ, ನುಡಿಗೆ ಅವಕಾಶ ಕೊಡದ ಪುರಾಣ, ಅಗಣಿತ ಪುರಾಣ, ಈ ಪುರಾಣವ ಓದಿತ್ತು ನೋಡಿರೆ ?

ಅನಾಮಯ ಶಾಸ್ತ್ರ ಇದು ಅನುಪಮ ವೇದವೆಂದು ತಿಳಿದಿಹ ಶಾಸ್ತ್ರ ಇದು ಅನಾಮಯ ಶಾಸ್ತ್ರ ಇದು ವೇದ ವೇದಾಂತವಾಗದ ಶಾಸ್ತ್ರ ಗುರುವ ಕಾಣದ ಶಾಸ್ತ್ರ ಲಿಂಗವ ಕಾಣದ ಶಾಸ್ತ್ರ ಜಂಗಮ ಕಾಣದ ಶಾಸ್ತ್ರ ತನ್ನ ಕಂಡ ಶಾಸ್ತ್ರ ಇದು ಗುರುವಿನ ಗುರುವಾಗಿಹ ಶಾಸ್ತ್ರ ಲಿಂಗಕ್ಕೆ ಲಿಂಗವಾಗಿಹ ಶಾಸ್ತ್ರ ಜಂಗಮಕ್ಕೆ ಜಂಗಮವಾಗಿಹ ಶಾಸ್ತ್ರ ಪ್ರತಿಗೆ ಅಪ್ರತಿಯಾಗಿಹ ಶಾಸ್ತ್ರ ರೂಪ ನಿರೂಪ ಮಾಡಿಹ ಶಾಸ್ತ್ರ ಶಬ್ದ ನಿಶಬ್ದ ಮಾಡಿಹ ಶಾಸ್ತ್ರ ಇದು ತನುವಿನ ತನು ಮಾಡಿಹ ಶಾಸ್ತ್ರ ಮನದ ಮನ ಮಾಡಿದ ಶಾಸ್ತ್ರ ಪ್ರಾಣದ ಪ್ರಾಣ ಮಾಡಿಹ ಶಾಸ್ತ್ರ ಷಟ್‌ಸ್ಥಲವ ನಿಸ್ಥಲವ ಮಾಡಿಹ ಶಾಸ್ತ್ರ ಅನಾಮಯಶಾಸ್ತ್ರ ನಿಃಶಬ್ದವೇದಿಗಳ ಶಾಸ್ತ್ರ ಇದು ಸಕಲರ ಹೃದಯದೊಳ ನ್ಯಸ್ತಿವಾಗಿಹ ಬೆಳಗಿನೊಳಗಣ ಬೆಳಗು ಪರಮ ಚಿದ್ಬೆಳಗು, ಇದು ಶಬ್ದಮುಗ್ಧವಾಗಿಹ ಶಾಸ್ತ್ರವಾದುದರಿಂದ ಅನಾಮಯ ಶಾಸ್ತ್ರವೆಂದು ಅನುಪಮ ವೇದವೆಂದು ಹೇಳಿದೆ.

ನಿಸ್ಥಲವಿಡಿದು, ನಿಸ್ಥಲವ ಸ್ಥಲವಿಡಲು ನಿರ್ಮಳಾತ್ಮಂಗೆ ಇಹವಿಲ್ಲ, ಪರವಿಲ್ಲ, ಶರಣರ ಸಹೃದಯ, ಅಗಣಿತ, ಅಗಮ್ಯ ಅಪ್ರಮಾಣವ ಪ್ರಮಾಣಿಸಬಹುದೆ ? ಇವರು ನಿರವಧಿಗಳು ನಿರುಪಮರು, ಅವರಿಗಾವ ಷಟ್‌ಸ್ಥಲ, ಸ್ವಸ್ಥಲದನುಪಮಂಗೆ ಅದಾವ ಸ್ಥಲದವನೆಂದು ನಿರ್ಣಯಿಸುವುದು ನಿಸ್ಥಲವೆ ಅವರಿಗೆ ಸ್ಥಲವಾಗಿದೆ.

ಭಕ್ತಿ ಸ್ಥಲ ಘನವೆಂದು ನುಡಿವಿರಿ, ಭಕ್ತಸ್ಥಲಕ್ಕೆ ಮಹೇಶ್ವರ ಸ್ಥಲವು ಪ್ರತಿ, ಮಹೇಶ್ವರ ಸ್ಥಲಕ್ಕೆ ಪ್ರಸಾದಿ ಸ್ಥಲವೆ ಪ್ರತಿ ಪ್ರಸಾದಿಸ್ಥಲಕ್ಕೆ ಪ್ರಾಣಲಿಂಗಿಸ್ಥಲವೆ ಪ್ರತಿ, ಪ್ರಾಣಲಿಂಗ ಸ್ಥಲಕ್ಕೆ ಶರಣಸ್ಥಲವೆ ಪ್ರತಿ, ಶರಣ ಸ್ಥಲಕ್ಕೆ ಐಕ್ಯಸ್ಥಲವೆ ಪ್ರತಿ, ಪ್ರತಿ ಉಳ್ಳುದು ಅರುವೆ ? ಪ್ರತಿ ಉಳ್ಳುದು ಜ್ಞಾನವೆ ? ಪ್ರತಿವುಳ್ಳದು ನಿರ್ಭಾವವೆ ? ಪ್ರತಿವುಳ್ಳುದು ಮೋಕ್ಷವೆ ? ಇಂತಿದು ಷಟ್‌ಸ್ಥಲದ ಮಾರ್ಗವಲ್ಲ, ಸ್ಥಲವಲ್ಲ, ನಿಸ್ಥಲವಲ್ಲ, ಸಾವಯವವಲ್ಲ, ನಿರವಯವಲ್ಲ ಒಳಗೂ ಅಲ್ಲ ಹೊರಗೂ ಇಲ್ಲ, ಸಂಗವಲ್ಲ, ನಿಸ್ಸಂಗವಲ್ಲ, ಸುಸಂಗಬಯಲು ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣ, ಶರಣನೆಂಬುದು ಅನಂತ, ಈ ಗಿಳಿಯೆ ಶರಣರೂಪಿ ಪರಮ ಹಂಸ ಇದು ಅತೀತ, ಅನಾಗತ, ವರ್ತಮಾನವೆಂಬ ಕೊರೆಕೊಳನುಂಡ

ಪರಮಹಂಸ, ಇದು ಅಗಣಿತ ಪುರಾಣವನೋದಿತ್ತು ಅನಾಮಯಶಾಸ್ತ್ರವ ಸಾಧಿಸಿತ್ತು. ಅನುಪಮ ವೇದವ ಛೇದಿಸಿತ್ತು. ಇದಕ್ಕೆ ಅನುಪಮ ಸ್ಥಲವೆ ತನ್ನ ಸ್ವಸ್ಥಲವಾದುದರಿಂದ ಇದು ನಿರ್ಮಳಾಂಗವು ಇದು ಸುಸಂಗವಿಡಿದಿಹ ನಿರ್ಮಳಾಂಗವು ಇದು ಕಾರಣ, ಇಹವಿಲ್ಲ, ಪರವಿಲ್ಲವೆಂದು ಹೇಳಿಹರು.

ಆದಿ ಮಧ್ಯಾಂತ ನಿರಾಳ ಗುಹೇಶ್ವರನ ಅನುಭಾವಿಗೆ ಸರ್ವಾಂಗ ಲಿಂಗವು: ಸರ್ವಾಂಗಲಿಂಗಿಗೆ, ಆದಿಯು ನಿರಾಳ, ಮಧ್ಯವು ನಿರಾಳ ಅಂತ್ಯವು ನಿರಾಳ, ನುಡಿಗೆಡೆಗೊಡದಿಹ ಘನದಿರುವೆ ತನ್ನಯ ತನ್ನಿರವು ಅರುವೆಂದರಿದವಂಗೆ ಆದಿಯ ನಿರಾಳ ಮುನ್ನ ಮುನ್ನ ತಾನೆ, ಮಧ್ಯವ ತಾನೆ, ಅಂತ್ಯವು ತಾನೆ, ಸಕಳ ತಾನೆ, ನಿಃಕಳತಾನೆ, ಸಾವಯವತಾನೆ ನಿರವಯ ತಾನೆ ಆಗಿರುವುದರಿಂದ ಸರ್ವಾಂಗ ಲಿಂಗವೆಂದು ಹೇಳಿಹರು.

**171**

**ಕಂಗಳಲ್ಲಿ ನಟ್ಟಗಾಯವನಾರಿಗೆ ತೋರಬಹುದಯ್ಯಾ ?**
**ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ ?**
**ಆತ ನಿಂದ ನಿಲವಾತಂಗೆ ಸಾಧ್ಯವಾಯಿತ್ತು.**
**ಆತ ನಿಂದ ನಿಲುವನೇನೆಂಬೆ ಗುಹೇಶ್ವರಾ.** ॥ 599 ॥

**ತಾತ್ಪರ್ಯ** : ಕಂಗಳಲ್ಲಿ ನೆಟ್ಟಗಾಯವನಾರಿಗೆ ತೋರಬಹುದಯ್ಯ : ಕಂಗಳಲ್ಲಿ ನೆಟ್ಟಗಾಯ, ಲೌಕಿಕರಲ್ಲಿ ಅಷ್ಟೆ ಕಾಣಿಸಿಕೊಳ್ಳುತ್ತದೆ ಎನ್ನುವ ಹಾಗಿಲ್ಲ ಪ್ರಭು, ಮಾಯಾಕೋಲಾಹಲ ಮಾಡಿದ ಮಹಾಂತ. ಈತನು ಈ ಗಾಯವ ಕಂಡೆ ಕಂಗಳಲ್ಲಿ ನೆಟ್ಟ ಗಾಯವನಾರಿಗೆ ತೋರಬಹುದಯ್ಯ ಎಂದು ಬಿತ್ತಿರಿಸಿರುವಲ್ಲಿ ಮಹಾಂತರಿಗೂ ಈ ಗಾಯ ಕಾಣಿಸುತ್ತದೆ. ಸೊನ್ನಲಾಪುರಕ್ಕೆ ಹೋದ ಸಮಯದಲ್ಲಿ ಸಿದ್ಧರಾಮನ ಶಿಷ್ಯರುಗಳು ಕಂಗಳಿಂದ ಪ್ರಭುವನ್ನು ವಿಷಮ ದೃಷ್ಟಿಯಿಂದ ನೋಡಿ ಗಾಯವ ಮಾಡಿಹರು. ಇದ್ದುದ ಇದ್ದಂತೆ ಹೇಳಿದರೆ ಗಾಯವ ಮಾಡಬೇಕೆ ? ಒಡ್ಡು ಕಟ್ಟುವ ಒಡ್ಡಯ್ಯಗಳಿರಾ ? ಈ ಒಡ್ಡು ಕಟ್ಟಿಸುವ ಹಿರೆ ಒಡ್ಡ ಹೋಗಿಹನೆಲ್ಲಿಗೆ ? ಎಂದು ಪ್ರಶ್ನಿಸಿದುದಕ್ಕೆ ಇವರು ನಮ್ಮ ಗುರುಗಳಿಗೆ ಹಿರೆ ಒಡ್ಡನೆನ್ನುವಿಯಾ ? ಗುರುನಿಂದೆ ಮಾಡುವಿಯಾ ? ಎಂದು ಆತನನ್ನು ತಮಗಿಂತ ಅನ್ಯವೆಂದು ಗುರುಗಳಿಂತ ಅನ್ಯನೆಂದು ವಿಷಮದೃಷ್ಟಿಗೆ ಆಹುತಿಯಾಗಿ ರೇಗಿ ತಮ್ಮ ಕೈಯೊಳಗಿರುವ ಕೋಲಿನಿಂದ ಹೊಡೆದು ಗಾಯ ಮಾಡಿದರೆ ಆ ಗಾಯಗಳು ತಮಗಾಗಿರುವುದು ಕಂಡು ತಮ್ಮ ಗುರುಗಳಾಗಿಹ, ಸಿದ್ಧರಾಮೇಶ್ವರರಿಗೆ ಆ ಗಾಯಗಳ ತೋರಿಸಿಹರು. ಆರೊ ? ಒಬ್ಬನು ಬಂದು, ನಿಮಗೆ ಆವಾಚ್ಯ ಮಾತಾಡಿದುದು ಕೇಳದೆ ಅವನನ್ನು ಹೊಡದರೆ ಆ ಗಾಯಗಳೆ ನಮಗಾಗಿವೆ. ಅವನು ಮಹಾಮಾಂತ್ರಿಕನಿಹನು ಎಂದು ಹೇಳಿದ ಕೂಡಲೆ ಶಿಷ್ಯ ವೃಂದಕ್ಕೆ ಆದ ಗಾಯವ ನೋಡಿ ಸಹಿಸದೆ ಶರಣರಿಗೆ ಆದ ನೋವು ಅದು ನನಗೆ ಸಹನೆಯಾಗದೆಂದು ಸಿದ್ಧರಾಮ ಶಿವಯೋಗಿಯು ಪ್ರಭುವಿದ್ದಲ್ಲಿಗೆ ಹೋಗಿ ತನ್ನ ಉರಿ ನೇತ್ರವ ಬಿಟ್ಟರೆ ಅದು ಪ್ರಭುವಿನ ಅಂಗಾಲಲ್ಲಿ ಅಡಗಿತ್ತು. ಇದನ್ನು ಶಿವಯೋಗಿಯು ಕಂಡು ಪ್ರಾಯಶ್ಚಿತ್ತವಾಗಿ ಎಡದ

ಕಾಲಲೊದ್ದರೆ ಬಲದ ಕಾಲ ಹಿಡಿವೆ. ಬಲದ ಕಾಲಲೊದ್ದರೆ ಎಡದ ಕಾಲ ಹಿಡಿವೆ ಎಂದು ಶರಣಾಗತ ಭಾವದವನಾಗಿಹನು.

ಇದು ಇಂದ್ರಿಯ ರೂಪಿ ಕಂಗಳ ನೆಟ್ಟ ಗಾಯ, ಆರಿಗಾದರೂ ಕಾಣಿಸುತ್ತದೆ. ವಿಶ್ವದ ತುಂಬ ಈ ಗಾಯ ಕಾಣಬಹುದು, ಈ ಕಂಗಳ ಗಾಯದಿಂದ ಪಶು, ಪಕ್ಷಿ, ಪತಂಗ, ಮಾನವ, ದಾನವ, ದೇವತೆಗಳಿಗೂ ಈ ಇಂದ್ರಿಯಂಗಳ ಗಾಯ, ಕಿವಿಗೆ ನೆಟ್ಟಗಾಯ, ತ್ವಕ್ಕಿಗೆ ನೆಟ್ಟಗಾಯ, ರಸನೇಂದ್ರಿಗೆ ನೆಟ್ಟಗಾಯ, ಘ್ರಾಣೇಂದ್ರಿಗೆ ನೆಟ್ಟಗಾಯ ನಾನಾ ವಿಧದಲ್ಲಿ ನೆಟ್ಟ ಗಾಯಗಳು ಕಾಣಬಹುದು.

ಘ್ರಾಣೇಂದ್ರಿಗೆ ಸುಗಂಧ ನೆಟ್ಟಗಾಯದಿಂದ ಭ್ರಮರವು ಮರಣವಾಗಲಿಲ್ಲವೆ ? ರಸನೇಂದ್ರಿಯ ಸುಖಕ್ಕಾಗಿ ಬಂದ ಮೀನು ಗಾಣವ ನೆಟ್ಟ ಗಾಯದಿಂದ ಮೃತ್ಯುವಾಗಲಿಲ್ಲವೆ ? ತ್ವಕ್ಕಿನ ಸುಖಕ್ಕಾಗಿ ಆನೆಯು ಸ್ಪರ್ಶನೆಟ್ಟ ಗಾಯದಿಂದ ಮೃತ್ಯು ಹೊಂದಿತಲ್ಲವೆ ? ಕಿವಿಯ ಸುಖಕ್ಕಾಗಿ ಶಬ್ದವ ನೆಟ್ಟಗಾಯದಿಂದ ಮರಣವಾಯಿತ್ತು. ಕಂಗಳು ರೂಪ ನೆಟ್ಟ ಗಾಯದಿಂದ ಪತಂಗವು ಮರಣವಾಯಿತ್ತು. ಒಂದೊಂದು ಇಂದ್ರಿಯಂಗಳಿಗೆ ವಿಷಯ ನೆಟ್ಟಗಾಯದಿಂದ ಮರಣವಾಗುವಲ್ಲಿ ಆನೆಗಾಗಿ ಸತ್ತವರು ಕೋಟಿ, ಆಮಿಷಕ್ಕಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ, ಮಣ್ಣಿಗಾಗಿ ಹೊನ್ನಿಗಾಗಿ ಸತ್ತವರು ಕೋಟಿ, ನಿನಗಾಗಿ ಸತ್ತವರನೊಬ್ಬರನು ಕಾಣೆ ಗುಹೇಶ್ವರಾ. ಚಿದಾಭಾಸ ಸಹಿತ ಅಂತಃಕರಣ ವೃತ್ತಿ ನೇತ್ರೇಂದ್ರಿಯ ದ್ವಾರ ಹೆಣ್ಣನ್ನು ಕಂಡಿದೆ ಮಣ್ಣನ್ನು ಕಂಡಿದೆ ಹೊನ್ನನ್ನು ಕಂಡಿದೆ, ಅಧಿಕಾರವ ಕಂಡಿದೆ. ಹಿರಿದಿಪ್ಪ ರಾಜ್ಯವ ಕಂಡಿದೆ. ಬ್ರಹ್ಮಪದವಿ, ವಿಷ್ಣು ಪದವಿ, ರುದ್ರಪದವಿ, ನಾನಾಪದವಿಗಳ ಕಂಡು, ಮನೋಮೂಲಕ ಆಶೆ ಮಾಡುವುದು, ಇಂದ್ರಿಯ ಜನ್ಯವಿಷಯೋಪ ಭೋಗಕ್ಕಾಗಿ ಹಂಬಲಿಸಿ ಸತ್ತವರು ಕೋಟ್ಯಾನುಕೋಟಿ. ಇವುಗಳ ಆಪೇಕ್ಷೆ ಮಾಡುವುದು ಇದು ದೊಡ್ಡ ಗಾಯ, ಕ್ಯಾನ್ಸರ್‌ಗಾಯ ಒಂದೆ ಶರೀರ ನಾಶ ಮಾಡುತ್ತದೆ. ಆದರೆ ಮನೋಮೂಲಕ ಆಪೇಕ್ಷಿಸಿದ ಗಾಯ, ಬಹುಜನ್ಮಂಗಳ ನಷ್ಟ ಮಾಡುತ್ತಿದೆ. ಇದೇ ಮೇರೆಗೆ ಪೂರ್ವದಲ್ಲಿ ದೇವತೆಗಳು ದೈತ್ಯರು ಮನು ಮುನಿಗಳು ತಪಸ್ವಿ ತ್ಯಾಗಿಗಳು ಮನ ಹಂಬಲಿಸಿದ ಗಾಯಕ್ಕಾಗಿ ಮರಣ ಹೊಂದಿಹರು.

ವಿಶ್ವಾಮಿತ್ರನು ಬ್ರಹ್ಮರ್ಷಿಗಳಾದ ವಶಿಷ್ಟರ ಕಂಡು, ಅವರಲ್ಲಿರುವ ಕಾಮಧೇನುವ ಕಂಡು, ಆ ಕಾಮಧೇನುವ ಬೇಡಲು ಅದು ಬ್ರಹ್ಮರ್ಷಿಗಳಿದ್ದಲ್ಲಿ ಇರುವುದಲ್ಲದೆ ಉಳಿದವರ ಸೇರದು ಎಂದು ವಶಿಷ್ಟರು ಹೇಳಲು ವಿಶ್ವಾಮಿತ್ರನು ಬಲಾತ್ಕಾರದಿಂದ ತನ್ನ ತಪೋಬಲದಿಂದ ಅದನ್ನು ಸ್ವಾಧೀನ ಮಾಡಿಕೊಳ್ಳಲು ಹವಣಿಸಿದನು. ಅದು ಸ್ವಾಧೀನವಾಗಲಿಲ್ಲ, ಆಗ ವಿಶ್ವಾಮಿತ್ರನು ವಶಿಷ್ಟರಂತೆ ಬ್ರಹ್ಮರ್ಷಿಯಾಗಲು ಉಗ್ರತಪವ ಮಾಡಿದನು. ಮಾಡಿದರೂ ಸಾಧ್ಯವಾಗದ್ದರಿಂದ ಪುನಃ ವಿಶ್ವಾಮಿತ್ರನು ತನ್ನ ಅಹಂಕಾರವ ವಶಿಷ್ಟರಿಗೆ ಅರ್ಪಿಸಿದಾಗ ಬ್ರಹ್ಮರ್ಷಿಯಾದ ಹೀಗೆ ಕಂಗಳಲ್ಲಿ ನೆಟ್ಟಗಾಯ, ಆರಿಗಾದರೂ ಕಾಣಿಸಬಹುದು.

ಮನಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ ? ಅಂತರಂಗ ಬಹಿರಂಗ ಶುದ್ಧವಿಲ್ಲದೆ ನುಡಿವರು ಸಂತೆಯ ಸೂಳೆಯರಂತೆ ಅಂತರಂಗ, ಬಹಿರಂಗವೆಂಬುದಿಲ್ಲ, ನಮ್ಮ ಶಿವ ಶರಣರಿಗೆ ಅಂತರಂಗವೆಲ್ಲ ಅರುವಾಯಿತ್ತು. ಬಹಿರಂಗವೆಲ್ಲ ಲಿಂಗವಾಯಿತ್ತು.

ಆ ಲಿಂಗದಲ್ಲಿ ನುಡಿದು, ಲಿಂಗದಲ್ಲಿ ನಡೆದು, ಲಿಂಗದಲ್ಲಿ ಮುಟ್ಟಿ ,ಲಿಂಗದಲ್ಲಿ ವಾಸಿಸಿ, ಲಿಂಗದಲ್ಲಿ ಕೇಳಿ ಲಿಂಗವಾಗಿ ನೋಡಿ ಸರ್ವಾಂಗವು ಲಿಂಗವಾಗಿ ಆ ಲಿಂಗವ ನೋಡುವ ಕಂಗಳಲ್ಲಿ ಐಕ್ಯ ಕಂಡಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಶಿವ ಶರಣರ ಮನ ಸೋಂಕಿದ ಸುಖ, ಅರುವ ಸೋಂಕಿದ ಸುಖ, ಇದು ಅರಿಯದರುವು ಸೋಂಕಿದ ಸುಖ, ಘನ ಸುಖ ಇದು ಅವರ್ಣೀಯವು, ಶರಣನ ಅಂತರಂಗ ಅರುವಿಂಗರುವಾಗಿಹ ನಿಜದರುವು, ಬಹಿರಂಗ ಲಿಂಗವಾಗಿಹ ಘನವು, ಎಲ್ಲೆಲ್ಲೂ ಲಿಂಗಕ್ಕೆ ಲಿಂಗವಾಗಿಹ ನಿಲುವು, ನಿಸ್ಸೀಮ ನಿಲುವು, ನುಡಿದುದು ಲಿಂಗದಲ್ಲಿಯೆ ನಡೆದುದು ಲಿಂಗದಲ್ಲಿಯೆ ಮುಟ್ಟಿದುದು ಲಿಂಗದಲ್ಲಿಯೆ ವಾಸಿಸುವುದು ಲಿಂಗದಲ್ಲಿಯೆ ಲಿಂಗದಲ್ಲಿ ಕೇಳಿ ಲಿಂಗದಲ್ಲಿ ನೋಡಿದುದು ಸರ್ವಾಂಗ ಲಿಂಗವಾಗಿ, ಆ ಲಿಂಗವಾಗಿ ನೋಡುವ ಕಂಗಳಲ್ಲಿ ಅನುಪಮ ಲಿಂಗವು ಪ್ರಜ್ವಲಿಸುತ್ತಿಹುದು ನೋಡಾ.

ಆತನಿಂದ ಸುಖವಾತಂಗೆ ಸಾಧ್ಯವಾಯಿತ್ತು, ಆತ ? ಲಿಂಗವರಿತು ಲಿಂಗಕ್ಕೆ ಲಿಂಗವಾಗಿಹ ಆತ, ಆತನ ನೋಟ ಲಿಂಗ ನೋಟ ನೋಡುದುದ ನೋಡಿದ ನೋಟ ಆತನ ನುಡಿ ಲಿಂಗವಾದುದರಿಂದ ನುಡಿಯದ ನುಡಿ, ನಡೆ ಲಿಂಗವಾದುದರಿಂದ ನಡೆಯದ ನಡೆ, ಆತನದು ಅರು ಹೃದಯವಾದುದರಿಂದ ಕರಣಂಗಳೆಲ್ಲ, ಲಿಂಗಕಿರಣ ಆತನ ಹಸ್ತ ಲಿಂಗ, ಅಭಯ ಹಸ್ತ, ಸುಜ್ಞಾನ ಹಸ್ತ, ಆತನದು ಸರ್ವಾಂಗ ಲಿಂಗವಾದುದರಿಂದ ಆತ ಲಿಂಗ, ಲಿಂಗವಾಗಿ ನಿಂತಿಹನು. ಲಿಂಗಸುಖ ಆತಂಗೆ ಸಾಧ್ಯವಾಯಿತ್ತು. ಈ ಶಬ್ದಮುಗ್ಧ ಸುಖ ಆತಂಗೆ ಸಾಧ್ಯವಾಯಿತ್ತು. ಆ ಲಿಂಗಸುಖ ಅಜಗಣ್ಣಂಗೆ ಮರುಳ ಶಂಕರದೇವಂಗೆ ಹಡಪದ ಅಪ್ಪಣ್ಣಂಗೆ ನೀಲಾಂಬಿಕೆ, ಮಹಾದೇವಿಯಕ್ಕ ಇನ್ನು ಅನೇಕ ಶರಣ ಶರಣೆಯರಿಗೆ ಸಾಧ್ಯವಾಯಿತ್ತು.

ಆತನಿಂದ ನಿಲವು ಏನೆಂಬೆ ಗುಹೇಶ್ವರಾ, ಆತನಿಂದ ನಿಲವು, ಸ್ವಸ್ಥಾನ ಸ್ವಸ್ಥಿರದ ಸುಮನ ಮಂಟಪದೊಳಗೆ, ನಿತ್ಯನಿರಂಜನ ಪ್ರಭೆಯ ಬೆಳಗು ಶಿವಯೋಗಾನುಭಾವ ಏಕಾರ್ಥವಾಗಿ ಗುಹೇಶ್ವರಾ, ನಿಮ್ಮ ಶರಣ ಅನುಪಮ, ಸುಖಿಯಾಗಿರ್ದನು, ಶರಣ ನಿಂತ ನಿಲುವು, ತನ್ನ ಸ್ವಸ್ಥಾನ, ಸ್ವಸಿದ್ಧ ಅದಾರು ವರ್ಣಿಸುವುದು. ಗಗನವು ತಾನಿದ್ದು, ಗಗನವಾಗಿಯೆ ಗಗನದಲ್ಲಿದೆ, ಗಗನವಾಗಿಯೆ ನಿಂದ ನಿಲುವು, ಗಗನದ ಅಚಲತ್ವ ಸ್ಥಿರತೆ ಅಚಲವಾಗಿಯೆ ಇದೆ. ಅಚಲತ್ವವು ಅಚಲವು ಸಹಜ ಗಗನದ ನಿಲುವು ಹಾಗೆ ನುಡಿಗೆಡೆಗೊಡದ ಘನವಾಗಿಹ ತಾನು ನುಡಿಗೆಡೆಗೊಡದ ಘನದಿರುವಿನ ಸ್ವಮಹಿಮವಾಗಿ ನಿಂತಿದೆ. ತನ್ನದು ತಾನಿದ್ದಂತಿಹ ಸ್ವಮಹಿಮ ಅದನಾವ ಭಾಷೆಯಿಂದ ವಿಸ್ತರಿಸುವುದು. ಅದು ಅಕಥನೀಯವಾದುದರಿಂದ ಆತನಿಂದ ನಿಲುವ ನೇನೆಂಬೆ ಗುಹೇಶ್ವರಾ ಎಂದು ಹೇಳಿಹರು. ಆತ ದೇಹ, ದೇಹಿ ಎಂಬುದಕ್ಕೂ ಮೀರಿದ ಘನವಾಗಿ ನಿಂತ ನಿಲುವು ನೆಲೆಯಿಲ್ಲದ ನಿಲುವು ಮನ ಮೇರೆದಪ್ಪಿದುದು ಆಗಿರುವುದರಿಂದ ಪ್ರಭು ಆತ ನಿಂದ ನಿಲುವು ಏನೆಂಬೆನೇನೆಂಬೆ ಎಂದು ಹೇಳಿಹರು.

**172**

**ದೇಹಿಗೆ ದೇಹಿಯಾಗಿರ್ಪದರ ಭೇದವನು ಆರು ಬಲ್ಲರು?**

**ಹರಿಬ್ರಹ್ಮಾದಿಗಳರಿಯರು, ಮನುಮುನಿಗಳರಿಯರು,**
**ಸಿದ್ಧಸಾಧಕರರಿಯರು.**
**ಅರಿವಿಂಗೆ ಅರಿವಾಗಿರ್ಪದನು ನಿನ್ನ ಅರುವಿಂಗೆ ಅರಿಯಬಹುದೆ ?**
**ಗುಹೇಶ್ವರ ಲಿಂಗವನರಿವಡೆ ನೀನರಿಯದಂತಿರಬೇಕು.** ॥ 1271 ॥

**ತಾತ್ಪರ್ಯ** : ದೇಹಿಗೆ ದೇಹಿಯಾಗಿರ್ಪದರ ಭೇದವನಾರು ಬಲ್ಲರು ? ದೇಹ ದೇಹಿಯಾಗಿರ್ಪದರ ಭೇದಬಲ್ಲವರಿರುವರು, ದೇಹಿಗೆ ದೇಹಿಯಾಗಿರ್ಪುದರ ಭೇದವ ಬಲ್ಲವರಾರು ಎಂಬ ಪ್ರಭುವಿನ ಗುಟ್ಟಾಗಿಹ ಜ್ಞಾನ, ಪರಮ ರಹಸ್ಯದಿಂದುಕ್ತವಾದುದು. ದೇಹ ದೇಹಿಯಾಗಿರ್ಪದರ ಭೇದಬಲ್ಲವರಿರುವರು. ಇವರು ನಿತ್ಯಾನಿತ್ಯ ವಿಚಾರವುಳ್ಳವರು. ದೃಶ್ಯ ದೃಕ್ ವಿವೇಕವುಳ್ಳವರು. ಆತ್ಮಾನಾತ್ಮ ಪರಿಜ್ಞಾನಿಗಳು. ಎಲೈ ಮಾನವಾ ನೀನು ಅಮರ ಆತ್ಮನಿರುವಿ. ನೀನು ತೋರುವ ಈ ಮೂರು ಅವಸ್ಥೆಗಳಿಗೆ ಸಾಕ್ಷಿಯಾಗಿರುವೆ ಪಂಚ ಕೋಶಾತೀತನಾಗಿರುವಿ. ನೇತಿ, ನೇತಿ ಸಾಧನ ಅಭ್ಯಾಸ ಮಾಡು, ಅನ್ವಯ ವ್ಯತಿರೇಕ ರೂಪದಿಂದ ಲಯಚಾತನ ಮಾಡು, ನಾಮರೂಪಗಳನ್ನು ನಿರಾಳನ ಮಾಡು, ಅಸ್ತಿ, ಭಾತಿ, ಪ್ರಿಯಗಳನ್ನು ನೀನು ಗ್ರಹಣ ಮಾಡು ನೀನು ಸಾಕ್ಷಿಯಾಗಿರುವಿ.

ಹಸಿವು ತೃಷೆ ನಿನ್ನ ಧರ್ಮವಲ್ಲ, ಇವು ಪ್ರಾಣ ಧರ್ಮಗಳು. ಜನನ ಮರಣ ನಿನ್ನ ಧರ್ಮವಲ್ಲ, ಇವು ದೇಹದ ಧರ್ಮಂಗಳು, ಪ್ರಿಯ ಮೋದ ನಿನ್ನವಲ್ಲ, ಇವು ಕಾರಣ ಶರೀರ ವ್ಯಾಪಾರಿಗಳು. ಜಾಗ್ರವಾದಿ ಮೂರು ಅವಸ್ಥೆಗಳು ನಿನ್ನವಲ್ಲ ಇವು ಮನಸ್ಸಿನ ಅವಸ್ಥೆಗಳು. ನೀನು ಮೂರು ಅವಸ್ಥೆಗಳಿಗೆ ಸದಾ ಮುಗ್ಧ ಸಾಕ್ಷಿಯಾಗಿರುವಿ. ನಾನು ಶರೀರವೂ ಅಲ್ಲ, ಮನಸ್ಸು ಅಲ್ಲ ಎಂಬುದರ ಎಚ್ಚರಿಕೆಯುಳ್ಳವನಾಗು ನೀನು ಸದಾ ದೃಕ್‌ರೂಪ ಬ್ರಹ್ಮನಿರುವಿ ಎಂದು ಹೀಗೆ ಅನ್ವಯ ವ್ಯತಿರೇಕದಿಂದ ಲಕ್ಷಣ ವಿಭಾಗಿಸಿ ದೇಹ, ದೇಹಿಯಾಗಿರ್ಪದರ ಭೇದವ ಬಲ್ಲವರು ಇಹರು, ಇದ್ದಾರೆ.

ದೇಹಿಗೆ ದೇಹಿಯಾಗಿರ್ಪುದರ ಭೇದವನಾರು ಬಲ್ಲರು, ಹರಿಬ್ರಹ್ಮಾದಿಗಳರಿಯರು ಎಂದು ಪ್ರಭು ಬಿತ್ತರಿಸಿದುದು ನೋಡುವುಡೆ ದೇಹಿಗೆ ದೇಹಿಯಾಗಿರ್ಪುದರ ಭೇದವ ಬಲ್ಲವರು ನಿಃಶಬ್ದವೇದಿಗಳಾಗಿಹ ಶರಣರು. ಈ ರಹಸ್ಯವ ಬಲ್ಲವರು. ಇದು ಕಾರಣ ಶಿವನಿಗಿಂತಲೂ ಶಿವಶರಣರೆ ಘನವಂತರು ಎಂದು ಹೇಳಿದೆ. ಆದಿಲಿಂಗ, ಅನಾದಿ ಶರಣ, ಲಿಂಗಪೂರ್ವಿಕ, ಶರಣ ಅಪೂರ್ವಿಕನೆಂದು ಬಿತ್ತರಿಸಿಹರು.

ಬ್ರಹ್ಮನೆಂದರೆ ರಜೋಗುಣದಲ್ಲಿ ಪ್ರತಿಫಲಿತವಾದ ಚೇತನವೆ ಬ್ರಹ್ಮನು, ಸತ್ವಗುಣದಲ್ಲಿ ಪ್ರತಿಫಲಿತವಾದ ಚೇತನವೆ ವಿಷ್ಣು ಆವಲ್ಲಿ ರಜೊ, ತಮೋಗುಣ ಅಧಿಕವಾಗಿ ಸತ್ವಗುಣ ಕಡಿಮೆ ಅದೆ. ಅಂಥ ಕರಣಂಗಳಲ್ಲಿ ಪ್ರತಿಫಲಿತವಾದ ಚೇತನ ಅವಿದ್ಯೆಯಿಂದುಕ್ತವಾದುದು ಇದು ಮಾನವ ಶರೀರ, ಮಾನವಪುರ ಎಂದು ಹೇಳಿಸಿಕೊಳ್ಳುತ್ತದೆ.

ಆವಲ್ಲಿ ರಜ ತಮೊಗುಣ ಕಡಿಮೆ ಇದ್ದು, ಸತ್ವಗುಣ ಅಧಿಕವಾಗಿ ರಜ ತಮ ಗುಣಗಳು ಸತ್ವಗುಣದ ಆಧೀನವಾಗಿವೆ. ಅಂಥ ಸತ್ವಗುಣದಲ್ಲಿ ಪ್ರತಿಫಲಿತವಾದ ಚೇತನವೆ ವಿದ್ಯಾ ತನು, ಮಾಯಾ ತನು ಎಂದು ಹೇಳಿಸಿಕೊಳ್ಳುವುದು ಇಲ್ಲಿ ರಜೋಗುಣದಲ್ಲಿ

ಪ್ರತಿಫಲಿತವಾದ ಚೇತನರೂಪಿ ಬ್ರಹ್ಮ, ಸತ್ವಗುಣದಲ್ಲಿ ಪ್ರತಿಫಲಿತವಾದ ಚೇತನರೂಪಿ ವಿಷ್ಣು ಇವರು ದೇಹಿಗೆ ದೇಹಿಯಾಗಿರ್ಪುದರ ಭೇದವ ಹರಿಬ್ರಹ್ಮಾದಿಗಳರಿಯರು.

ಅರಿದಿಹೆನೆಂದಡೆ ಅದೇಕೊ ? ಮುಂದೆ ಮರವೆ ನೀನರಿದೆನೆಂಬುದು ನಿನ್ನಲ್ಲಿ ಲೇಸಾಗಿವುಳ್ಳಡೆ ನಿನ್ನರಿವೆಲ್ಲ ಹರಿಹಂಚಮಾಡಿ ಹೋದಡರಿ ಮರುಳೆ ಸ್ವತಂತ್ರ ಘನದೊಳಗಿದ್ದು ನಿಜವನರಿದೆನೆಂದರೆ ಮೂರ್ತಿ ಕಿರಿದಲ್ಲ ನಿಲ್ಲು ಮಾಣು ಗುಹೇಶ್ವರನೆಂಬ ಘನ ಘಟ್ಟಿಯನರಿವುಡೆ ನಿನ್ನರಿವೆಲ್ಲ ಹರಿ ಹಂಚ ಮಾಡಿ ನೀನರಿ ಮರುಳೆ. ಅನುಭಾವಿಯಾದಡೆ ಹರಿಬ್ರಹ್ಮಾದಿಗಳು ಇವರು. ರಜ ಮತ್ತು ಸತ್ವಗುಣದಲ್ಲಿ ಪ್ರತಿಫಲಿತವಾದ ಚೇತನರು. ಕಲ್ಪಿತರು, ಆಭಾಸರು. ಒಬ್ಬನದು ಸೃಷ್ಟಿಯ ರಚಿಸುವ ಕಾರ್ಯವು, ಮತ್ತೊಬ್ಬಾತನದು ಸೃಷ್ಟಿಯ ರಕ್ಷಿಸುವ ಕಾರ್ಯವು. ಪ್ರಜೆಗಳ ಯೋಗಕ್ಷೇಮದ ಕಾರ್ಯವು. ಹೀಗೆ ತಮ್ಮ ತಮ್ಮ ಕಾರ್ಯದ ಅಧಿಪತಿಗಳಾಗಿರುವುದೆ ಘನವಾಗಿದೆ. ಇದನ್ನು ದೀಕರಿಸುವುದು ಆಗದಂತಾಗಿದೆ. ಈ ಅಭಿಮಾನವು ತಾನಾರೆಂಬ ತಮ್ಮ ಮೂಲದಿರುವು ತಿಳಿಯಗೊಡದಂತೆ ಮಾಡಿದೆ ಇದು ಕಾರಣ ಹರಿಬ್ರಹ್ಮಾದಿಗಳರಿಯರು ಎಂದು ಹೇಳಿಹರು.

ಮನು ಮುನಿಗಳರಿಯರು ಸಿದ್ಧಸಾಧಕರರಿಯರು ಇವರಿಗೆ ತಮ್ಮ ಮನಸ್ಸು ಇಂದ್ರಿಯಾದಿಗಳಿಂದ ಕಾರ್ಯವೆ ಘನವಾಗಿಹವು. ಮನು ಅಂದರೆ ಮಂತ್ರ ಮನುಷ್ಯ ಕಾಲದ ಮೂಲ ಪುರುಷ, ಸ್ವಾರೋಚಿತ ಉತ್ತಮ, ತಾಮಸದೈವತ, ಚಾಕ್ಷುಸ, ವೈವಸ್ವತ, ಸೂರ್ಯ ಸಾವರ್ಣ, ದಕ್ಷ ಸಾವರ್ಣ, ರುದ್ರ ಸಾವರ್ಣ, ದೇವ ಸಾವರ್ಣ ಮತ್ತು ಇಂದ್ರಿ ಸಾವರ್ಣ ಎಂಬ ಹದಿನಾಲ್ಕು ಮನುಗಳಲ್ಲಿ ಒಬ್ಬ, ಬ್ರಹ್ಮಮಾನಸ ಪುತ್ರರಲ್ಲಿ ಒಬ್ಬ ಮುನಿ, ಮಹರ್ಷಿಗಳು ಇವರು ತಮ್ಮ ಸಾತ್ವಿಕ ಗುಣದಿಂದಾದ ಮನ ಕಾರ್ಯವಾಗಿಹ ವೈರಾಗ್ಯ ಉಪರತಿ, ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಆಸ್ತೇಯ, ಅಪರಿಗ್ರಹ ಧಾರಣ, ಧ್ಯಾನಾದಿಗಳೆ ಇವರಿಗೆ ಘನವಾಗಿಹವು. ಇವುಗಳಲ್ಲಿ ತಾತ್ಸಾರ ಬುದ್ಧಿ, ಭಾವ ಬಾರದಂತಾಗಿ ಇವುಗಳನ್ನು ಕೀಳು ಎಂದು ತಿಳಿಯದ್ದರಿಂದ ಇವು ಒಂದು ಹುಲ್ಲುಕಡ್ಡಿ ಎಂದು ತಿಳಿಯದ್ದರಿಂದ ಮೇಲೆ ತಿಳಿಸಿದ ಸಾತ್ವಿಕ ಗುಣದಿಂದಾದ ವೈರಾಗ್ಯ, ಉಪರತಿ ಮೊದಲಾದವುಗಳು ಹುಲ್ಲುಕಡ್ಡಿ ಆಗದಂತಾಗಿ ದೇಹಿಗೆ ದೇಹಿಯಾಗಿರ್ಪದರ ಭೇದ ತಿಳಿಯಗೊಡದಂತೆ ಮಾಡಿದೆ. ಇತ್ತ ಸಿದ್ಧ ಸಾಧಕರಾಗಿಹ ಅಣಿಮಾದಿ ಸಿದ್ಧಿ ಪುರುಷರು, ಅಣಿಮಾದಿಗಳ ಸಾಧಿಸಬೇಕೆಂಬ ಲವಲವಿಕೆಯುಳ್ಳ ಸಾಧಕರು. ಇವರಿಗೂ ತಮ್ಮ ತಪಸ್ಸು ತ್ಯಾಗ ಬ್ರಹ್ಮಚರ್ಯಾದಿಗಳಾಗಿಹ ದೈವಿ ಸಂಪದ್ಗುಣಗಳಾಗಿಹ ಸದ್ಗುಣಗಳೆ ಇವರಿಗೆ ಘನವತರವಾಗಿ ಇವುಗಳಿಂದ ಲಭ್ಯವಾಗುವ ಅಣಿಮಾದಿಸಿದ್ಧಿಗಳೆ ಶ್ರೇಷ್ಠವಾದುದರಿಂದ ದೇಹಿಗೆ ದೇಹಿಯಾಗಿರ್ಪುದರ ಭೇದ ತಿಳಿಯದಂತಾಗಿದೆ. ಏಕೆಂದರೆ ತೋರಿ ಇಲ್ಲವಾಗುವ ಮಾಯಿಕ, ಈ ಮಾಯಿಕ ಕಾರ್ಯಕ್ಕೆ ಮೆಚ್ಚಿದರಲ್ಲದೆ, ದೇಹಿಗೆ ದೇಹಿಯಾಗಿರ್ಪುದರ ಭೇದವ ತಿಳಿಯ ಹೋಗಲಿಲ್ಲ. ತಿಳಿಯ ಹೋದವರು ಶರಣರು, ಶರಣೆಯರು, ಅರುವಿಂಗರುವಾಗಿರ್ಪುದನು ತಿಳಿಯಹೋದವರು, ಅವರೆ ದೇಹಿಗೆ ದೇಹಿಯಾಗಿರ್ಪುದ ಭೇದ ಬಲ್ಲವರು ಎಂದು ಹೇಳಿಹರು.

ಶಬ್ದ ಸಂಭ್ರಮದವರೆಲ್ಲ ಹಿಂದುಗಾಣರು, ಮುಂದುಗಾಣರು, ತಮ್ಮ

ತಾವರಿಯರು ಇದು ಕಾರಣ ಮೂರು ಲೋಕವೆಲ್ಲ ಬರುಸೂರೆಹೋಯಿತ್ತು ಗುಹೇಶ್ವರಾ. ದೇಹಿಗೆ ದೇಹಿಯಾಗಿರ್ಪುದರ ರಹಸ್ಯ ಶಬ್ದಸಂಭ್ರಮದಿಂದುಕ್ತವಾದುದಲ್ಲ, ಲೋಕದವರ ದೃಷ್ಟಿಗೆ ಕುರುಹೆಂಬ ಪಿಂಡಾಂಡ ಬ್ರಹ್ಮಾಂಡ ಎಷ್ಟು ಘನವಾಗಿವೆ ಹಾಗೆ ದೇಹಿ ಎಂಬುದು ನಿತ್ಯಾನಿತ್ಯ ವಿವೇಕದಿಂದುಕ್ತವಾದವರ ಶಬ್ದ ಸಂಭ್ರಮದಲ್ಲಿದೆ, ತಮ್ಮ ತಾವರಿತವರದು ದೇಹಿಗೆ ದೇಹಿಯಾಗಿರ್ಪುದು ನಿಶಬ್ದವೇದಿಗಳ ಅರು ಹೃದಯರೂಪಿ ಅಂತರಾಳದಲ್ಲಿದೆ. ಇದು ಕಾರಣ ದೇಹಿಗೆ ದೇಹಿಯಾಗಿರ್ಪುದರ ರಹಸ್ಯಬಲ್ಲವರು. ತಮ್ಮ ಅರಿವನ್ನೆ ಹರಿಹಂಚ ಮಾಡಿ ಕೆಲಸಕ್ಕೆ ಬಾರದಂತೆ ಮಾಡಿ ಹೀನವೆಂದು ನಿ ಕೃಷ್ಟವೆಂದು ಚಿಂದಿಬಟ್ಟೆಯಂತೆ ಚಲ್ಲಾಪಿಲ್ಲವ ಮಾಡಿ ತಾವು ತಿಳಿದಿಹೆವು ಎಂಬ ಚಿದಹಮ್ಮಿಗೆ ತಾವೆ ಛೀ ಥೂ ಹಾಕಿ ತಾವಾರೆಂಬ ತಮ್ಮಿರವ ನೋಡಿಹರು. ಅದಕ್ಕಾಗಿ ಅವರಿಗೆ ಅನುಪಮರೆಂದು ಬಿತ್ತರಿಸಿಹರು.

ದೇಹಿಗೆ ದೇಹಿಯಾಗಿರ್ಪುದರ ರಹಸ್ಯವರಿತವರು ಘನಕ್ಕೆ ಘನರು, ನಿಶಬ್ದವೇದಿಗಳು ನುಡಿಗೆಡೆಗೊಡದ ಘನ ಮಹಿಮರಾದ್ದರಿಂದ ತನಗಿದುರಾಗಿ ತೋರುವ ತನುವಾದಿಗಳ ಅರಿವು ಹರಿಹಂಚ ಮಾಡಿಹರು. ಇತ್ತ ದೃಕ್ ದೇಹಿ ಆತ್ಮ ಪರಮಾತ್ಮ ಸಾಕ್ಷಿ ಸಚ್ಚಿದಾನಂದ, ನಿತ್ಯಪೂರ್ಣ ಅಖಂಡ ಅವಿಕಾರ ಅಕಲ್ಪಿತ ಎಂಬ ಶಬ್ದಸಂಭ್ರಮದ ಅರುವು ಜ್ಞಾನವೆಲ್ಲ ಹರಿಹಂಚ ಮಾಡಿಹರು. ಇದು ಕಾರಣ ದೇಹಿಗೆ ದೇಹಿಯಾಗಿರ್ಪುದರ ಭೇದಬಲ್ಲವರಾಗಿ ದೇಹವೆನಲಿಲ್ಲ, ದೇಹಿತಾ ಎನಲಿಲ್ಲ, ಸಂಗಿ ಎನಲಿಲ್ಲ, ನಿಸ್ಸಂಗಿ ಎನಲಿಲ್ಲ, ಜಡಎನಲಿಲ್ಲ, ಅಜಡ ಎನಲಿಲ್ಲ ಜಡಾಜಡರಹಿತಾತ್ಮನೆನಲಿಲ್ಲ, ದೇಹ ಅಲ್ಲೆನಲಿಲ್ಲ, ದೇಹಿ ಅಹುದೆನಲಿಲ್ಲ, ಮರಣವೆನಲಿಲ್ಲ, ಅಮರಣವೆನಲಿಲ್ಲ, ಸತ್ ಎನಲಿಲ್ಲ, ಅಸತ್ಎನಲಿಲ್ಲ, ಮಿಥ್ಯೆಎನಲಿಲ್ಲ, ಚಿತ್‌ಸ್ವರೂಪನೆನಲಿಲ್ಲ, ಅಚಿತ್ ಎನಲಿಲ್ಲ, ನಿತ್ಯನೆನಲಿಲ್ಲ, ಅನಿತ್ಯನೆನಲಿಲ್ಲ, ಮರವೆನಲಿಲ್ಲ, ಅರುವೆನಲಿಲ್ಲ, ಅರಿಯೆನೆನಲಿಲ್ಲ ಅರಿತೆನೆನಲಿಲ್ಲ, ದೇಹಿಗೆ ದೇಹಿಯಾಗಿರ್ಪುದರ ರಹಸ್ಯವರಿತು ಪರಿಪೂರ್ಣನೆನಲಿಲ್ಲ, ಪ್ರಾದೇಶಿಕನೆನಲಿಲ್ಲ, ನಿರತಿಶಯದೊಳತಿಶಯ ತಾಮುನ್ನಿಲ್ಲ, ಶರಣನೆನಲಿಲ್ಲ, ಐಕ್ಯನೆನಲಿಲ್ಲ, ಜೀವನೆನಲಿಲ್ಲ, ಪರಮನೆನಲಿಲ್ಲ, ಸಾವಯವನೆನಲಿಲ್ಲ, ನಿರವಯನೆನಲಿಲ್ಲ, ಪರವಿಹವೆಂಬು ಭಯದೊಳಿಲ್ಲದವನು, ನಿರಾಲಯ ನಿಜಗುರು ಶಾಂತೇಶ್ವರನ ಶರಣನ ನಿಲುವು ಉಪಮೆಗೆ ತಾನನುಪಮನಾಗಿಹ ಮಹಾಂತ, ತನ್ನತಾನರಿತ ಮಹಾಂತ ತನ್ನಿಂದ ತನ್ನನರಿದುದು ಘನಕ್ಕೆ ಘನ ತಾ ನಿಂದ ನಿಲವು ಅವರ್ಣೀಯವೆಂದಿತ್ತು.

173

**ಅರಿದು ಮರೆದು ಬೆರಗು ಹತ್ತಿತ್ತು.**
**ಏನೆಂದರಿಯದೆ ಅದೆಂತೆಂದರಿಯದೆ**
**ಗುಹೇಶ್ವರಾ ಗುಹೇಶ್ವರಾ ಎನುತ ಅಲ್ಲಿಯೆ ನಿಂದಿತ್ತು.** ॥ 826 ॥

**ತಾತ್ಪರ್ಯ :** ಅರಿದು ಮರೆದು ಬೆರಗು ಹತ್ತಿತ್ತು : ಏನನ್ನು ಅರಿದು ಏನನ್ನು ಮರೆದು ಬೆರಗು ಹತ್ತಿತ್ತು ? ಇದೆಂಥ ಬೆರಗು ಹತ್ತಿತ್ತು ? ಏನನ್ನು ಅರಿದು ?

ಅರಿದರುಹಿಸಿಕೊಂಬುದಕ್ಕೂ ಮೀರಿದ ಘನವರಿತು ಏನನ್ನು ಮರೆದು ? ಅರಿದರುಹಿಸಿಕೊಂಬುದನ್ನೆಲ್ಲಾ ಮರೆದು, ಎಲ್ಲ ಎಲ್ಲವನರಿದವರುಂಟು, ತನ್ನ ತಾನರಿದವರುಂಟೆ ? ಅರಿದಿಹೆನೆಂಬುದು ಚಿದಹಮ್ಮದ ಮದ ನೋಡಾ, ನಿರ್ಧರಿಸಿಹೆನೆಂಬುದು ಅನುಭವದ ಮದ ನೋಡಾ, ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವನರಿವ ಪರಿ ಎಂತು ? ಇದು ಕಾರಣ, ನಿರಂಜನ ಪ್ರಭು ನಾಗೇಶ್ವರ ನಿನ್ನವರ ಪ್ರಸಾದದನುವಿನಗಮ್ಯವನುಪಮಿಸಬಹುದೆ ? ಉಪಮಿಸಲರಿಯೆ, ಎಲ್ಲ ಎಲ್ಲವನರಿದವರುಂಟು ತನ್ನಿಂದ ತನ್ನ ಅರಿತವರು ಸಿಕ್ಕುವುದು ವಿರಳ. ತನ್ನಿಂದ ತಿಳಿಸಿಕೊಳ್ಳುವ ಅನಾತ್ಮ ತಿಳಿದವರು ಉಂಟು. ಅರಿಯುವ ಆತ್ಮ ತಾನೆಂದು ಅರಿತವರು ಉಂಟು. ಅರಿದರುಹಿಸಿಕೊಂಬುದಕ್ಕೆ ಮೀರಿದ ಘನವಾಗಿಹ ತನ್ನನ್ನು ತನ್ನಿಂದ ತಾನು ಅರಿತವರು ಸಿಕ್ಕುವುದು ವಿರಳ. ವಿವೇಕಿಯಾದವನು ತನ್ನಿಂದ ತಿಳಿಸಿಕೊಳ್ಳುವ ಅನಾತ್ಮವು ತನಗೆ ಬೇರಾದುದು ತಾನು ಇದಕ್ಕೆ ಬೇರಾಗಿರುವ ದೃಕ್ ಎಂದು ಹೀಗೆ ದೃಶ್ಯ ದೃಕ್ ವಿಭಾಗ ಮಾಡಿ ತಿಳಿದವನು ಎಂದು ತಿಳಿಯುವುದು.

ದೃಕ್ ಎಂಬುದು ಸಾಕ್ಷಿಯೆಂದು, ನಿಸ್ಸಂಗನೆಂದು, ಆತ್ಮ ಪರಮಾತ್ಮನೆಂದು ಅಕ್ಷರನೆಂದು ಅವಿನಾಶಿ ಎಂದು ವಿಲಕ್ಷಣನಾಗಿ ಲಕ್ಷಣದಿಂದ ಲಕ್ಷ್ಯರೂಪನ ಅರಿತವರು ಉಂಟು, ಹೀಗೆ ದೃಶ್ಯ ದೃಕ್‌ಗಳ ವಿಭಾಗ ಮಾಡಿ ಅರಿತರೂ ತನಗಿಂತನ್ಯವ ಅರಿತರಲ್ಲದೆ ತನ್ನ ತಾ ಅರಿತವನಲ್ಲ, ತೋರಿಕೆಯುಳ್ಳ ಅವಿದ್ಯೆ ಅದರ ಕಾರ್ಯವಾಗಿಹ ಅನಾತ್ಮವರಿತನಲ್ಲದೆ ತನ್ನ ಅರಿಯಲಿಲ್ಲ, ಇದಲ್ಲದೆ ತನಗಿದುರಾಗಿ ತೋರುವ ಮಾಯೆ, ಅದರ ಕಾರ್ಯವಾಗಿಹ ಆತ್ಮ, ಲಕ್ಷಣ, ಭಾವ ಅರಿತನಲ್ಲದೆ ತನ್ನ ಅರಿಯಲಿಲ್ಲ ಇವು ಸಾಪೇಕ್ಷೆದಿಂದ ಬಂದ ಜ್ಞಾನ, ಕಲ್ಪಿತ ಜ್ಞಾನವಲ್ಲದೆ ಅಕಲ್ಪಿತದಿರುವಳ್ಳ ಅರುವು ಆಗಲಿಲ್ಲ, ಇದು ಕಾರಣ ತನ್ನ ಅರಿಯಲಿಲ್ಲ, ಅನಾತ್ಮವ ಮರೆಯಲಿಲ್ಲ ಮರೆಯದ್ದರಿಂದ ಬೆರಗು ಹತ್ತಲಿಲ್ಲ,

ಅರೆದು ಮರೆದು ಬೆರಗು ಹತ್ತಿತ್ತು ಎಂಬ ಮಹದರಿವು ತನ್ನ ತಾನರಿದು ತಾನೆ ತಾನಾಗಿ ನಿಂತ ನಿಲವು, ಇದು ಅಕಥನೀಯವಾದುದು. ಕರಣಂಗಳೆಲ್ಲ ನಷ್ಟವಾಗಿ ಲಿಂಗಕಿರಣಂಗಳಾಗಿಹ ಇರವು. ಈ ಬೆರಗು ಹತ್ತಿತ್ತೆಂಬ ಸಂಜ್ಞೆ ತನ್ನ ತಾಕಂಡ ಸಂಜ್ಞೆ, ಆವಲ್ಲಿ ಬೇರೊಂದನ್ನು ಕಾಣುವುದಿಲ್ಲವೊ, ಬೇರೊಂದನ್ನು ಕೇಳುವದಿಲ್ಲವೊ, ಬೇರೊಂದನ್ನು ಅರಿಯುವುದಿಲ್ಲವೊ, ಅದುವೆ ಭೂಮಾ, ಅದುವೆ ತಾನು, ತನ್ನಿಂದ ತನ್ನನರಿದು ತನಗಿಂತ್ಯವಾದುದೆಲ್ಲವು ಮರೆದುದರಿಂದ ಬೆರಗು ಹತ್ತಿತ್ತು.

ಅರಿದು ? ತನ್ನಿಂದ ತನ್ನನರಿದವರು ಸೋಹಂ ಎಂಬುದನ್ನು ಹರಿಹಂಚ ಮಾಡಿದವರು, ನಾಹಂ, ಕೋಹಂ, ಚಿದಹಂ ಎಂಬುದು ಹರಿಹಂಚ ಮಾಡಿದವರು ನಿರ್ಧರಿಸಿಹೆನೆಂಬ ಅನುಭವ ಮದವ ಹರಿಹಂಚ ಮಾಡಿದವರು. ಇದು ಕಾರಣ ತನಗಿಂತನ್ಯವಾದುದು ಇದೆ ಇಲ್ಲ ಈ ಇಲ್ಲವೆಂಬುದು ಇಲ್ಲ ಮಾಡಿ ಹರಿಹಂಚ ಮಾಡಿದವರು. ಅದಕ್ಕಾಗಿ ತನ್ನ ಘನದೊಳ ಮನ ಲೀಯವಾದುದರಿಂದ ಬೆರಗು ಹತ್ತಿತ್ತು ಎಂದು ಹೇಳಿಹರು.

ಏನೆಂದರಿಯದೆ ಅದೆಂತೆಂದರಿಯದೆ ಗುಹೇಶ್ವರ, ಗುಹೇಶ್ವರ ಎನುತ ಅಲ್ಲಿಯೆ

ನಿಂದಿತ್ತು ಎನ್ನ ಮನ ನಿಮ್ಮಲ್ಲಿ ನೆಟ್ಟು ತೆಗೆಯಬಾರದ. ಬೆರಗು ನೋಡಯ್ಯ ಇಹವೆಂಬುದುನರಿಯೆ, ಪರವೆಂಬುದನರಿಯೆ ಪರಮಾನಂದದಲ್ಲಿರ್ದೆ ನೋಡಯ್ಯ ಪರಮನ ನೆನಹೆ ನೆನಹಾಗಿ ಪರಮ ಸುಖದಲ್ಲಿ ಸುಖಿಸುತಿರ್ದೆ ನೋಡಯ್ಯ ಅಪ್ರತಿಮ ಕೂಡಲ ಚೆನ್ನಸಂಗಯ್ಯ ಎನ್ನ ಬೆರಗಿನ ಭೇದವ ನೀನೆ ಬಲ್ಲೆಯಯ್ಯ.

ಎನ್ನ ಮನ ನಿಮ್ಮಲ್ಲಿ ನೆಟ್ಟು ತೆಗೆಯಬಾರದ ಬೆರಗು ನೋಡಯ್ಯ, ಸಮುದ್ರ ದಡದಲ್ಲಿ ಒಂದು ಹಡಗ ಬಿಟ್ಟಿತ್ತು, ಕಾಗೆ ಬಂದು ಅದರ ಕೊಂಬೆಯ ಮೇಲೆ ಕೂಡಲು ಹಡಗವು ಹೋಗಹತ್ತಿತು. ಕಾಗೆ ಹಡಗದ ಕೊಂಬೆಯ ಮೇಲೆ ಕೂತು ಸಾಕಾಗಿ ಮೇಲೆ ಹಾರಿತು. ಆಗ ಅದಕ್ಕೆ ಎತ್ತನೋಡಿದಡತ್ತತ್ತ ನೀರು ಕಾಣಿಸಹತ್ತಿತು, ಆಗ ಅದು ನಿರುಪಾಯವಾಗಿ ಪುನಃ ಹಡಗದ ಕೊಂಬೆಯ ಮೇಲೆಯೆ ಬಂದು ಕೂತಿತು. ಹಡಗದ ಮೇಲೆ ಕೂತರು ನೀರೆ ನೀರು ಹೇಗೊ ಹಾಗೆ ಎನ್ನ ಮನವೆಂಬ ಕಾಗೆ ನಿಮ್ಮಲ್ಲಿ ನೆಟ್ಟು ಎತ್ತ ನೋಡದಡತ್ತತ್ತ ನಿಮ್ಮಯ ಇರುವೆ ಇರುವು. ನಿಸ್ಸೀಮವು ಅಪಾರವು. ನುಡಿಗೆಡೆಗೊಡದ ಘನದಿರುವಿನ ಅರುವು ಎನ್ನ ಮನದಲ್ಲಿ ನಟ್ಟು ತೆಗೆಯಬಾರದು. ಎನ್ನ ಪೂರ್ವಾಶ್ರಮವಾಗಿಹ ಮನ ಮರೆದು ನಿಮ್ಮಲ್ಲಿ ನಟ್ಟುದು ಅವರ್ಣೀಯವಾಗಿ ಬೆರಗು ನೋಡಯ್ಯ. ಚಿತ್‌ಸ್ವರೂಪನರಿಯಹೋಗಿ ಅದುವೆ ಆಗಿ ಬೆರಗು ಹತ್ತಿತ್ತಯ್ಯ, ಅರಿಯದರುವಾಗಿಹ ಘನದಲ್ಲಿ ಎನ್ನಮನ ನಟ್ಟು ತೆಗೆಯದಂತಾಗಿಹ ಬೆರಗು ನೋಡಯ್ಯ. ಅಲ್ಲಿ ಅರಿಸಿಕೊಂಬ ಪಿಂಡಾಂಡ ಬ್ರಹ್ಮಾಂಡ ರೂಪಿ ಜಗವರಿಯೆ ಅರಿಯುವ ದೃಕ್‌ವೆಂಬುದನರಿಯೆನಾಗಿ ಇಹವೆಂಬುದನರಿಯೆ ಪರವೆಂಬುದನರಿಯೆ, ಏನೊಂದರಿಯಲಿಲ್ಲವಾದ್ದರಿಂದ ಪರಮಾನಂದದಲ್ಲಿರ್ದುದ ಏನೆಂಬೇನೆಂಬೆ ಸುಖವು ಸುಖವೆ ಇದು ಸವೆಯದ ಸುಖ, ಅಖಂಡ ಸುಖ, ಸುಖದ ಸುಖವಾದುದರಿಂದ ಅದನಾವ ಭಾಷೆಯಿಂದ ವಿಸ್ತರಿಸುವುದು ? ಸುಖದ ಸುಖ ಸವೆಯದಾನಂದವೆಂಬುದು ಮಿಗೆ ಮಿಗೆ ಮೀಸಲವಾಗದೆಂದರಿತು ಮೌನದ ಮೌನವಾಗಿಹ ತನ್ನಿರುವು ಏನೆಂದರಿಯದೆ, ಅದೆಂತೆಂದರಿಯದೆ ಗುಹೇಶ್ವರ ಗುಹೇಶ್ವರ ಎನುತ ಅಲ್ಲಿಯೆ ನಿಂದಿತ್ತು.

ಮಾತು ಮನಂಗಳು ನಷ್ಟವಾಗಿ ನೆನಹು ನಿರ್ಣಯಂಗಳು ಕೆಟ್ಟು ಬುದ್ಧಿ ಭಸ್ಮವಾಗಿ ಎಡೆಯಿಲ್ಲದ ಪರಿಪೂರ್ಣವೆ ತನ್ನಿರುವಾಗಿರುವಲ್ಲಿ ಏನೆಂದರಿಯದೆ ಅದೆಂತೆಂದರಿಯದೆ ಶಬ್ದಮುಗ್ಧವಾದುದನೇನೆಂಬೆ, ಘಟಾಕಾಶ, ಮಠಾಕಾಶ, ಮೇಘಾಕಾಶವೆಂಬ ಸಂಜ್ಞೆಯೆ ನಷ್ಟವಾದ ಮೇಲೆ ಅದನಾವ ಆಕಾಶವೆಂದು ಗಣಿಸುವುದು ? ಜೀವ ಪರಮವೆಂಬ ಗುರು, ಲಿಂಗ, ಜಂಗಮವೆಂಬ ಸಂಜ್ಞೆಯೆ ನಷ್ಟವಾದ ಮೇಲೆ ಏನೆಂದರಿಯುವುದು ಅದೆಂತರಿಯುವುದು ? ತಾನೆ ತಾನಾಗಿ ನಿಂತಿಹ ತನ್ನಿರುವು ಏನೆಂದರಿಯುವುದು ಅದೆಂತೆಂದರಿಯುವುದು ? ಉಪಮೆಗೆ ನಿಲುಕದಾಗಿ ಗುಹೇಶ್ವರ ಗುಹೇಶ್ವರ ಎನುತ ಅಲ್ಲಿಯೆ ನಿಂದಿತ್ತು. ಅಲ್ಲಿಯೆ ನಿಂದಿತ್ತು ! ಇದೆಂಥ ನಿಲ್ಲುವಿಕೆ ಗಗನವು ಗಗನವಾಗಿಯೆ ನಿಂದಿತ್ತು. ಅದನ್ನು ನೀನು ನಿಂದುದು ಹೇಗೆ ಎಂದು ಪ್ರಶ್ನಿಸಿದರೆ ಗಗನವಾಗಿಯೆ ನಿಂದ ನಿಲುವು ಪ್ರಶ್ನಿಸುವವನೆ ತಿಳಿಯಬೇಕಲ್ಲದೆ ಅದು ಮರುತ್ತರವ ನೀಡದು. ಏಕೆಂದರೆ ಅದು ಮುನ್ನ ಮುನ್ನವೆ ತನ್ನಿರುವಿನಲ್ಲಿ ನಿಂದುದು. ಇವರು ಘಟಾಕಾಶ, ಮಠಾಕಾಶವೆಂದು ಕಲ್ಪಿಸಿದರೂ ತಾನು ಇದ್ದಂತೆಯೆ ಇದೆ. ಘಟ, ಮಠಗಳು ಧ್ವಂಸವಾದರೂ ತಾನು

ಇದ್ದಂತೆಯೆ ಇದೆ. ಅದರ ಇರುವಿಕೆಯಲ್ಲಿ ಬದಲಾವಣೆಯಿಲ್ಲ, ಮೂಕನ ಇರವು ಮೂಕನಾಗಿ ತಿಳಿಯುವುದು, ಗುಹೇಶ್ವರ ಗುಹೇಶ್ವರ ಎಂಬುದು ಚಿದಾಕಾಶವು, ಅದು ಚಿದಾಕಾಶವೆನ್ನದ ಚಿದ್ಘನ, ನಿಶಬ್ದ ಬ್ರಹ್ಮವೆಂದರೂ ತಾನು ಇದ್ದಂತೆ ಇದೆ ಅದರಲ್ಲಿ ಬದಲಾವಣೆಗಿಂಬಿಲ್ಲ, ಸೃಷ್ಟಿ ಎನ್ನಲಿ, ಸೃಷ್ಟಿಯ ಕರ್ತಾರನೆನ್ನಲಿ, ಜೀವನೆನ್ನಲಿ, ಪರಮನೆನ್ನಲಿ ಏನೊಂದಾಗದ ಘನ ಇವಾವ ಕಲ್ಪನೆಗೆ ಅಂಟದೆ ತಟ್ಟದೆ ಮುಟ್ಟದೆ ಇದ್ದಂತಿದ್ದ ಘನವು ಶರಣ ಅದುವೆ ಆಗಿಹ ಶರಣ ಏನೆಂದರಿಯನು ಅದೆಂತೆಂದರಿಯನು, ತಾನೆ ತಾನಾಗಿಹ ತನ್ನ ಘನವನುಪಮಿಸಬಾರದು, ಮೌನದ ಮೌನವಾಗಿಹ ಸಾಹಿತ್ಯ, ಗುಹೇಶ್ವರ ಸಾಹಿತ್ಯ ಇನ್ನೊಂದು ಶಬ್ದವ ನುಡಿಯಬಾರದು. ಶರಣ ಗುಹೇಶ್ವರನರಿತುದರಿಂದ ಮೌನದ ಮೌನ ಸ್ವಮಹಿಮ್ನವಾದುದರಿಂದ ಗುಹೇಶ್ವರ ಗುಹೇಶ್ವರ ಎಂಬುದಿಷ್ಟೆ ಈ ಮಹಾಂತನ ಮಹಾಪ್ರಸಾದ ಲೋಕ ಲೋಕರಿಗೆ ದೊರೆತ ನಿಧಿಯು ಅಪ್ರಮಾಣವಾದುದು. ಈ ಸಂಜ್ಞೆ ಅರಿಯಹೋದವರಿಗೆ ಗುಹೇಶ್ವರನೆಂಬುದು ತಾನೆ.

**174**

**ಮಥನದ ಲೀಲೆಯಲ್ಲಿ ಹುಟ್ಟುವದೇ ಬ್ರಹ್ಮವು?**
**ಶ್ರುತಿ ಸ್ಮೃತಿಗಳಿಗೆ ಅಳವಡದು ನೋಡಾ!**
**ಪೃಥ್ವಿಯೊಳಗಿಲ್ಲದ ಅಚಲವಪ್ಪ ಘನವನು,**
**ಸಚರಾಚರದಲ್ಲಿ ಭರಿತವೆಂತೆಂಬೆ?**
**ಇಲ್ಲದ ಲಿಂಗವನಲ್ಲಲ್ಲಿಗೆ ಉಂಟುಮಾಡುವ**
**ಈ ಲೀಲೆಯ ವಾರ್ತೆ ಎಲ್ಲಿಯದೊ ಗುಹೇಶ್ವರಾ?** ॥ 1443 ॥

**ತಾತ್ಪರ್ಯ** : ಮಥನ ಲೀಲೆಯಲ್ಲಿ ಹುಟ್ಟುವದೆ ? ಬ್ರಹ್ಮವು, ಆದಾರ ಮಥನ ಲೀಲೆಯಲ್ಲಿ ಹುಟ್ಟದ ಬ್ರಹ್ಮವುದು, ಅದಕ್ಕೆ ಬ್ರಹ್ಮವೆನ್ನುವರು. ಅದು ನುಡಿಗೆಡೆಗೊಡದ ಘನವು, ಇದು ನಾಶವೆನ್ನುವಾಗಲೂ ಇದ್ದಂತಿದ್ದ ಘನ. ಅವಿನಾಶಿ ಎನ್ನುವಾಗಲೂ ಇದ್ದಂತಿದ್ದ ಘನವಾದುದರಿಂದ ಅಜಾತವು. ಸತ್, ಅಸತ್ ಎಂದಾಗಲೂ ಇದ್ದಂತಿದ್ದ ಘನ. ಚಿತ್, ಅಚಿತ್ ಎಂದಾಗಲೂ ಇದ್ದಂತಿದ್ದ ಘನ. ಆನಂದ, ನಿರಾನಂದವೆಂದಾಗಲೂ ಇದ್ದಂತಿದ್ದ ಘನ. ನಿತ್ಯ, ಅನಿತ್ಯ ಎಂದಾಗಲೂ ಇದ್ದಂತಿದ್ದ ಘನ. ಪೂರ್ಣ, ಅಪೂರ್ಣವೆಂದಾಗಲೂ ಇದ್ದಂತಿದ್ದ ಘನ. ಖಂಡಾಖಂಡವೆಂದಾಗಲೂ ಇದ್ದಂತಿದ್ದ ಘನ. ಸಂಗಾಸಂಗವೆಂದಾಗಲೂ ಇದ್ದಂತಿದ್ದದು ಇದ್ದಂತಿದ್ದ ಘನವು ವಾಗ್ವಾದದಿಂದ ಉದಯಿಸುವುದೆ ? ಅಥವಾ ಬೋಧಾಮೂರ್ತಿಯಾಗಿಹ ಗುರು ಘನವ ಮಥನ ಲೀಲೆಗೆ ಹುಟ್ಟುವುದೆ ? ಬ್ರಹ್ಮವು ಇಲ್ಲಿ ಸತ್ತ ಗುರುವಿನ ಕಾರುಣ್ಯ ಸತ್ತುಕೊಂಬ ಶಿಷ್ಯಂಗೆ ಭಕ್ತಿ ವಿಸ್ತರಿಸುವುದು ಎಂದಂತೆ. ಸತ್ತವರ ಸಮಾಗಮ ಸಮರಸ, ಬದುಕಿದವರಿಗೆ ಇವರ ರಹಸ್ಯ ಗೊತ್ತಾಗದು. ಬದುಕಿದವನು ಸತ್ತುದು ಹೇಗೆ ? ಈರ್ವರದು ಅಹಂ ಮಮ ನಷ್ಟವಾದುದು ಇವರೆ ಸತ್ತವರು. ಅಲ್ಲಿ ಸಮಪ್ರಕಾಶವಾದ ತತ್ವದಿರುವು ಪ್ರಜ್ವಲಿಸುವುದು. ಇಂತಪ್ಪ ಪರತತ್ವ ಪ್ರಜ್ವಲಿಸಿದಲ್ಲಿ, ಗುರುವಾರು ಶಿಷ್ಯರಾರು ! ಬೋಧವಾವುದು,

ಅಬೋಧವಾವುದು, ನಾನೀನೆಂಬುದಕ್ಕೂ ತೆರಹಿಲ್ಲದ ಘನ ಪ್ರಜ್ವಲಿಸುವಲ್ಲಿ ನೀನೆಂಬ ಅಜ್ಞಾನವೂ ಇಲ್ಲ, ನಾನೆಂಬ ಮಾಯಾಧೀನವು ಇಲ್ಲ, ಇಲ್ಲಿ ಸಮತೆ ಸಯವಾದ ನಿಲುವು, ಅರುವು ಆವುದು ಮರವು ಆವುದು ? ಬಂಧವಾವುದು ಮೋಕ್ಷವಾವುದು.ಶೃತಿ, ಸ್ಮೃತಿಗಳಿಗೆ ಅಳವಡದು ನೋಡಾ. ಶೃತಿಯು ಮುನ್ನವೊ ಬ್ರಹ್ಮ ಮುನ್ನವೊ ? ಸ್ಮೃತಿಯು ಮುನ್ನವೊ ಬ್ರಹ್ಮ ಮುನ್ನವೊ ಶೃತಿಯಿಂದ ಬ್ರಹ್ಮ ಸಿದ್ಧವಾಗುವುದೊ ? ಬ್ರಹ್ಮದಿಂದ ಶೃತಿಯು ಸಿದ್ಧವಾಗುವುದೊ ಅಥವಾ ಸ್ಮೃತಿಯಿಂದ ಬ್ರಹ್ಮ ಸಿದ್ಧವಾಗುವುದೊ ? ಬ್ರಹ್ಮದಿಂದ ಶೃತಿಯು ಸಿದ್ಧವಾಗುವುದೆ ? ಯತಾವಾಚ್ಯ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಎಂಬುದು ಶೃತಿಯಲ್ಲವೆ ? ಇದು ಬ್ರಹ್ಮದಿಂದ ಸಿದ್ಧವಾಗುವುದೊ ? ಅಥವಾ ಶೃತಿಯಿಂದ ಬ್ರಹ್ಮವು ಸಿದ್ಧವಾಗುವುದೊ, ನಿಃಶಬ್ದ, ಬ್ರಹ್ಮ ಮುಚ್ಯತೆ ಎಂಬುದು ಹೊಗಳಿಕೆಗೆ ಸಿಕ್ಕುವುದೆ ಎಲೆ ಮರುಳಗಳಿರಾ ? ಎಂಬ ಪ್ರಭುದೇವರ ಮಹಾಪ್ರಸಾದವು ಬಿತ್ತರಿಸುವಲ್ಲಿ ಶೃತಿಗಗೋಚರವಾಗಿಹ ಪರತತ್ವ ವಾಙ್ಮನೋತೀತವು ಎಂದು ಹೇಳಿರುವಲ್ಲಿ ಬ್ರಹ್ಮದಿಂದ ಶೃತಿ ಸ್ಮೃತಿಯು ಸಿದ್ಧವಾಗುವವಲ್ಲದೆ ಶೃತಿ ಸ್ಮೃತಿಗಳು ಬ್ರಹ್ಮವನ್ನು ಸಿದ್ಧ ಮಾಡವು. ಮಹಾಂತರು ಪ್ರಜ್ಞಾನಂ ಬ್ರಹ್ಮವೆಂದು ಬಿತ್ತರಿಸಿಹರು. ಅದನ್ನು ಅರಿದರಿದು ನೋಡುವ ಭಾಗ್ಯ ನಿಶಬ್ದವೇದಿಗಳದು. ಜ್ಞಾನದ ಜ್ಞಾನವಾವುದು, ಪ್ರಜ್ಞಾನವು ಅರುವಿಂಗರುವಾವುದು, ಅದು ಪ್ರಜ್ಞಾನವು. ಅದುವೆ ನುಡಿಗೆಡೆಗೊಡದ ಬ್ರಹ್ಮವು, ಇಂತಪ್ಪ ಪರಮ ಜ್ಞಾನವು ತಿಳಿಸುವುದು ಅಲ್ಲ, ತಿಳಿದುದು ಅಲ್ಲ, ಅದು ಆವಾವ ಹೇತುವಿನಿಂದುಕ್ತವಾದುದಲ್ಲ, ಸಾಧ್ಯವಲ್ಲ, ಇದು ಮಾತಿಗೆ ಮನಸ್ಸು ಬುದ್ಧಿಗಳಿಗೆ ನಿಲುಕದು ಇಂತಪ್ಪ ಪರತತ್ವ ಹೇಗೆ ವಿವರಿಸುವುದು, ಅವರ್ಣೀಯ ವರ್ಣಿಸುವರೆ, ನಾವು ನುಡಿಯುವ ಬ್ರಹ್ಮವಾದರೆ ಅದು ನುಡಿಗೆಡೆಗೊಡದ ಘನವಾದುದರಿಂದ ಅದು ಜ್ಞಾನದ ಜ್ಞಾನವು ಅರುವಿಂಗರುವು. ಇದು ತನ್ನಿಂದ ತನ್ನ ಅರಿದರಿದು ನೋಡಿದಲ್ಲಿ, ನುಡಿಗೆಡೆಗೊಡದ ಘನ ತಾನೆ ಆದುದರಿಂದ ಶೃತಿ ಸ್ಮೃತಿಗಳಿಗೆ ಅಳವಡದು ಎಂದು ಹೇಳಿಹರು.

ಪೃಥ್ವಿಯೊಳಗಿಲ್ಲದ ಅಚಲವಪ್ಪ ಘನವನು ಸಚರಾಚರದಲ್ಲಿ ಭರಿತವೆಂತೆಂಬೆ ? ಇಲ್ಲದ ಲಿಂಗವನಲಲ್ಲಿಗೆ ಉಂಟು ಮಾಡುವ ಈ ಲೀಲೆಯ ವಾರ್ತೆ ಎಲ್ಲಿಯದೊ ? ಗುಹೇಶ್ವರಾ : ಪೃಥ್ವಿಯೊಳಗಿಲ್ಲದ ಅಚಲವಪ್ಪ ಘನ, ಪೃಥ್ವಿಯೊಳಗೆ ಹೇಗೆ ನೋಡುವುದು ? ಬಹು ಭಕ್ತರಿಗೆ ಲಿಂಗದ ಘನವ ತಿಳಿಯದ್ದರಿಂದ ಪೃಥ್ವಿಯೊಳಗಿಹ ಬಾರಾ ಜ್ಯೋತಿರ್ಲಿಂಗಕ್ಕೆ ಲಿಂಗವೆಂದರೆ ಅದು ಅಚಲವಪ್ಪ ಘನಲಿಂಗವಾಗುವುದೆ ? ಅದು ಸಚರಾಚರದಲ್ಲಿ ತುಂಬಿದುದು ಎಂದು ಹೇಗೆ ಹೇಳುವುದು, ಅದನ್ನು ಸ್ಥಾವರದಲ್ಲಿ ತುಂಬಿದುದು ಎಂದು ಹೇಗೆ ಹೇಳುವುದು, ಜಂಗಮದಲ್ಲಿ ಅಂದರೆ ಚರಿಸ್ಯಾಡುವುದರಲ್ಲಿ ತುಂಬಿದುದು ಎಂದು ಹೇಗೆ ಹೇಳುವುದು ?

ಇಲ್ಲದ ಲಿಂಗವ ಅಲ್ಲಲ್ಲಿಗೆ ಉಂಟು ಮಾಡುವ ಈ ಲೀಲೆಯ ವಾರ್ತೆ ಎಲ್ಲಿಯದು ಗುಹೇಶ್ವರ : ವೇದ, ಶಾಸ್ತ್ರ ಆಗಮ, ಪುರಾಣಂಗಳಲ್ಲಿ ಬಾರಾಜ್ಯೋತಿರ್ಲಿಂಗಗಳಲ್ಲಿ ಪೂಜಾಲಿಂಗವಾಗಿಹ ಇಷ್ಟಲಿಂಗದಲ್ಲಿ ಇದಲ್ಲದೆ ಹಠಯೋಗಿಗಳು ಆಧಾರ, ಸ್ವಾಧಿಷ್ಠ, ಮಣಿಪುರ, ಅನಾಹತ, ವಿಶುದ್ಧ, ಆಗ್ನೇಯ ಬ್ರಹ್ಮರಂಧ್ರ ಮೊದಲಾದ ಸ್ಥಾನದಲ್ಲಿ ಇಲ್ಲ, ಇಲ್ಲದ ಲಿಂಗ, ವೇದಗಳಲ್ಲಿ ಇಲ್ಲದುದು

ಶಾಸ್ತ್ರಗಳಲ್ಲಿ ಇಲ್ಲದುದು, ಆಗಮ ಪುರಾಣಂಗಳಲ್ಲಿ ಇಲ್ಲದುದು, ಬಾರಾ ಜ್ಯೋತಿರ್ಲಿಂಗದಲ್ಲಿಯು ಇಲ್ಲದುದು, ಹೃದಯ ನಾಸಿಕಾ, ಭ್ರೂಮಧ್ಯ ಮೊದಲಾದವುಗಳಲ್ಲಿಯು ಇಲ್ಲದುದು, ಪೂಜಾಲಿಂಗದಲ್ಲಿಯೂ ಇಲ್ಲದುದು, ಇಲ್ಲದ ಲಿಂಗ ಅಲ್ಲಲ್ಲಿಗೆ ಉಂಟು ಮಾಡುವ ಈ ಲೀಲೆಯ ವಾರ್ತೆ ಎಲ್ಲಿಯದೊ ? ಗುಹೇಶ್ವರ ಎಂದು ಎಚ್ಚರಿಸಿಹನು. ಲಿಂಗವೆಂಬುದು ಶಬ್ದಮುಗ್ಧವು. ಈ ಶಬ್ದಮುಗ್ಧ ರಹಸ್ಯ ತಿಳಿದವಂಗೆ ಲಿಂಗವೆಂಬುದು ಮೃಗಜಲವು, ಲಿಂಗವೆಂಬುದು ವಂದ್ಯಾಪುತ್ರವು, ಲಿಂಗವೆನ್ನದವ ತಾನೆ ಉಂಟು, ಶಬ್ದಮುಗ್ಧವಾವುದು ಅದು ತಾನೆ ಉಂಟು, ತಾನೆ ತಾನಾದುದು ಸ್ವಮಹಿಮವು, ಅರುವಿಂಗರುವು ನೋಡಾ.

**175**

**ಬಿಂದುವೆ ಪೀಠವಾಗಿ, ನಾದವೇ ಲಿಂಗವಾದಡೆ**
**ಅದು ಭಿನ್ನ ಲಿಂಗ ನೋಡಾ.**
**ಕಳೆ ಎಂಬ ಪೂಜೆ ನಿರ್ಮಾಲ್ಯವಾಗಿ,**
**ನಾದಬಿಂದುಕಳಾತೀತ ನೋಡಾ ಮಹಾಘನವು.**
**ಅಲ್ಲಿ ಇಲ್ಲಿ ಸಿಲುಕದ ಅಚಲವಪ್ಪ ನಿರಾಳವ**
**ಪ್ರಣವರೂಪೆಂದು ಹೆಸರಿಡಬಹುದೆ ?**
**ನಮ್ಮ ಗುಹೇಶ್ವರನ ನಿಲುವು 'ನಿಶಬ್ದಂ ಬ್ರಹ್ಮ ಉಚ್ಯತೇ'**
**ಎಂದುದನರಿಯಾ ಸಿದ್ಧರಾಮಯ್ಯಾ?** ॥ 1399 ॥

**ತಾತ್ಪರ್ಯ :** ಲಿಂಗಾರ್ಚಕರ ಪೂಜೆಗಿಂತಲೂ ಸಿದ್ಧರಾಮ ಶಿವಯೋಗಿಯ ಪೂಜೆ ಅಂತರ ಪೂಜೆಯಾಗಿದೆ. ಇದು ಯೋಗಾಭ್ಯಾಸ ಮೂಲಕ ತನ್ನೊಳಗೆ ಕಾಣುವ ಲಿಂಗ ಪೂಜೆಯಾಗಿದೆ. ಶಿವಯೋಗಿಗಳ ಪೂಜೆಯೆ ಬೇರೆ, ಲಿಂಗಾರ್ಚಕರ ಪೂಜೆಯೆ ಬೇರೆ. ಪೂಜಕರ ಪೂಜೆಗೆ ಮಡಿನೀರು ಭಸ್ಮ, ಧೂಪ, ದೀಪ, ಪತ್ರೆ, ಪುಷ್ಪ, ಗಂಧ, ಅಕ್ಷತೆ ಇವುಗಳ ಅವಶ್ಯವಿದೆ. ಶಿವಯೋಗಿಯ ಪೂಜೆಗೆ ಇವುಗಳ ಅವಶ್ಯಕತೆ ಅಷ್ಟು ಇಲ್ಲ. ಏಕೆಂದರೆ ಇವರಿಗೆ ಬಿಂದುವೆ ಪೀಠವಾಗಿದೆ. ನಾದವೆ ಲಿಂಗವಾಗಿದೆ. ಕಳೆಯೆ ನಿರ್ಮಲವಾಗಿದೆ. ಈ ಮೂರರ ದರ್ಶನವೆ ಲಿಂಗಯ್ಯನ ದರ್ಶನ. ಇವುಗಳಲ್ಲಿ ಮನವು ಮಗ್ನವಾಗುವುದೆ ಶಿವಯೋಗದ ಚಿನ್ಹವೆಂದು ತಿಳಿದಿಹರು. ತಿಳಿದುದಲ್ಲದೆ ಇದುವೆ ನಿಜವಾದ ಜ್ಞಾನ, ನಿಜವಾದ ಲಿಂಗ, ಇದರಲ್ಲಿ ಮನಲೀಯವಾದುದೆ ಲಿಂಗದಲ್ಲಿ ಲೀಯವಾದುದು ಮಹಾಘನ ಲಿಂಗೈಕ್ಯವೆಂದು ತಿಳಿದಿಹರು.

ಈ ಹಠಯೋಗಿಗಳು ಶಿವಸ್ವರೂಪವಾವುದೆಂಬುದನ್ನು ಅರಿಯದವರು. ಅರಿಯದೆ ಯೋಗಾಭ್ಯಾಸವ ಮಾಡಿ ಪ್ರಾಣಾಯಾಮ ಸಾಧನೆಯಲ್ಲಿ ನಿರತರಾಗಿ, ಕುಂಭಕವ ಸಾಧಿಸಿ, ಅದರ ಪ್ರಭಾವದಿಂದ ನಾದ, ಬಿಂದು, ಕಳೆಗಳ ಕಂಡರೆ ಲಿಂಗ ಕಂಡಿಹೆವು ಎನ್ನುವ ಜಡಬುದ್ಧಿಯು. ಇದಕ್ಕೇನನ್ನಬೇಕು.

ಶಿವಯೋಗಿಯಾದಲ್ಲಿ ಭೇದಿಸಬಾರದೆ ಇಪ್ಪ ಅಭೇದ್ಯ ಶಿವನ ಸಾಕ್ಷಾತ್ಕಾರವಾದುದೆ

ಶಿವಯೋಗದ ಲಕ್ಷಣ. ಶಿವನೆಂದರೆ ಕಾರ್ಯ ಕಾರಣಗಳಿಗೆ ಅತೀತವಾದುದು, ತನಗಿಂತನ್ಯವಾಗದ್ದು, ತನ್ನ ಸ್ವರೂಪವೆ ಆದುದು ನುಡಿಗೆಡೆಗೊಡದ ಘನವು ಶಿವ. ಶಿವನೆಂದರೆ ತಾನೆ, ತನ್ನ ಅರಿತಲ್ಲಿ ತಾನೆ ಶಿವ, ತಾನೆ ತಾನಾದುದು ಶಿವಯೋಗ.

ತನ್ನ ಸ್ವರೂಪದ ಹಿರಿಮೆಯೆ ಮರೆತು ಹಠಯೋಗದ ಅಭ್ಯಾಸದಲ್ಲಿ ರತರಾಗಿ ನಾದಬಿಂದು ಕಳಗಳಲ್ಲಿ ಮನವು ಮಗ್ನವಾಗುವುದರಿಂದ ಹೃದಯ ನಿರ್ಮಲವುಳ್ಳದ್ದಾಗುವುದು. ಇದರಿಂದ ಪಾಪದೋಷ, ಚಂಚಲದೋಷ ಇವೆರಡು ನಷ್ಟವಾಗುವವು. ಆವರಣ ದೋಷವು ಮಾತ್ರ ನಾಶವಾಗುವುದಿಲ್ಲ, ಅದು ಹಾಗೆ ಇದ್ದುದು ಈ ಆವರಣದೋಷ ನಿವೃತ್ತಿಗಾಗಿ ಲಿಂಗಾಂಗ ಸಮರಸ ಜ್ಞಾನ ಅವಶ್ಯಕವಾದುದು. ಈ ಸಮ್ಯಕ ಜ್ಞಾನವಾಗದ ವಿನಃ ಆವರಣ ದೋಷ ನಿವೃತ್ತಿಯಾಗದು. ಯೋಗದಲ್ಲಿ ಕುಂಭಕವ ಬಲಿಸಿ, ಶಿಖಾಚಕ್ರದಲ್ಲಿ ತನ್ನ ಪ್ರಾಣವ ಇರಿಸಿ, ಸಹಸ್ರಾರು ವರ್ಷ ಬಾಳಿದರೂ ತಾನಾರೆಂಬ ಸ್ವರೂಪ ಜ್ಞಾನವಿಲ್ಲ, ಶಿವನಾರೆಂಬ ಜ್ಞಾನವೂ ಇಲ್ಲ, ಇಲ್ಲದ್ದರಿಂದ ಇದು ಜಡಸಮಾಧಿಯೆಂದು ಹೇಳಿಸಿಕೊಳ್ಳುವುದಲ್ಲದೆ ಸ್ವರೂಪದಲ್ಲಿ ಲೀಯವಾದ ಮಹಾಘನ ಲಿಂಗೈಕ್ಯವಾಗದು. ಮಹಾಘನ ಲಿಂಗವೆಂಬುದು ನಾದ ಬಿಂದು ಕಳಾತೀತ ನೋಡಾ.

ಓ ಸಿದ್ಧರಾಮಯ್ಯ ದೇವರೆ ! ಬಿಂದುವೆ ಪೀಠ, ನಾದವೆ ಲಿಂಗವಾಗದೆ ಅದು ಭಿನ್ನಲಿಂಗ ನೋಡಾ, ಲಿಂಗವೆಂಬುದು ನಾದ ಬಿಂದು ಕಳಾತೀತ ನೋಡಾ, ಅದು ಮಹಾಘನವು, ಶ್ರೀಗುರು ಕಾರುಣ್ಯರೂಪಿ ಲಿಂಗವ ಅರಿದರಿದು ನೋಡುವುಡೆ ಅದುವೆ ಮಹಾಘನವು. ಲಿಂಗವದು, ಮುನ್ನ ಮುನ್ನಲಾದ ನಿನ್ನಯ ಇರುವಿನ ಅರುವು. ಅರು ಈ ಮಹದರುವಾಗಿಹ ಲಿಂಗವರಿಯಲು, ತಾನೆ ಘನಕ್ಕೆ ಘನ ಅಲ್ಲಿ ಈ ಲಿಂಗ ಘನವಾದಡೆ ತಾನು ಘನಕ್ಕೆ ಘನ. ಲಿಂಗವು ಮೌನವಾದರೆ ತಾನು ಮೌನದ ಮೌನವು. ಲಿಂಗವು ಬೆಳಗುಳ್ಳದ್ದಾದರೆ ತಾನು ಬೆಳಗಿನೊಳಗಿನ ಬೆಳಗು, ಶಬ್ದಮುಗ್ಧವಾಗಿ ತನ್ನಿರುವಿನ ಘನಾನಂದಲ್ಲಿ ಲೀಯವಾದುದು ಘನ ಲಿಂಗೈಕ್ಯವೆಂದು ಹೇಳಿಹರು.

ಅಲ್ಲಿ, ಇಲ್ಲಿ ನಿಲುಕದ ಅಚಳವಪ್ಪ ನಿರಾಳವ ಪ್ರಣವ ರೂಪೆಂದು ಹೆಸರಿಡಬಹುದೆ ? ತನಗಿಂತ ಬೇರಾಗಿರುವ ಬ್ರಹ್ಮಾಂಡದಲ್ಲಿ ಇಲ್ಲಿ ಅಂದರೆ ಪಿಂಡಾಂಡ ರೂಪವಾಗಿರುವ ಇಲ್ಲಿ ತನಗಿಂತ ದೂರವಾದುದು. ಅಲ್ಲಿ ತನಗೆ ಸಮೀಪವಾದುದು. ಇಲ್ಲಿ ನಾಮರೂಪವು ದೂರವು, ಅಸ್ತಿ, ಭಾತಿ, ಪ್ರಿಯವೆಂಬುದು ಸಮೀಪವು, ಅನ್ಮಾತವೆಂಬ ಭಾವ ದೂರವಾದುದು. ಆತ್ಮನೆಂಬ ಭಾವವು ಸಮೀಪವು. ಭಾವಕ್ಕಗಮ್ಯವಾಗಿಹ ಘನವು ಅಂಗ ಭಾವಕ್ಕೂ ನಿಲುಕದ್ದು. ಲಿಂಗನೆನ್ನುವ ಭಾವಕ್ಕೂ ನಿಲುಕದ್ದು ಅದು ಅಚಳವಪ್ಪ ನಿರಾಳವ ಪ್ರಣವ ರೂಪೆಂದು ಹೆಸರಿಡಬಹುದೆ ?

ಭಾವಕ್ಕಗಮ್ಯವಾಗಿಹ ಘನವು, ಅಚಳವಪ್ಪ ನಿರಾಳವು, ನಿರುಪಮವು, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು, ಅಲ್ಲಿ ಅಂದರೆ ಅಖಂಡವೆಂಬುದರಲ್ಲಿ ; ಖಂಡವೆಂದರೆ ಇಲ್ಲಿ, ಇವೆರಡಕ್ಕೂ ಸಂಯೋಗವಿಲ್ಲದುದು ಅಖಂಡಿತನ ನಿಲುವು, ಅದು ಅಚಳವಪ್ಪ ನಿರಾಳವಾಗಿದೆ. ಆಕಾಶವು ಅಲ್ಲಿ ಇಲ್ಲಿ ಎಂಬುದಕ್ಕೂ ಸಿಲುಕದೆ ನಿಸ್ಸೀಮವಾಗಿ ಅಚಲವಾದ ಹಾಗೆ ಚಿದಾಕಾಶವಾಗಿಹ ಘನವು ಅಲ್ಲಿ ಇಲ್ಲಿ ಸಿಲುಕದ ಅಚಲವಪ್ಪ ನಿರಾಳವಾಗಿದೆ.

ಅಚಲವಪ್ಪ ನಿರಾಳವದು ನಿಷ್ಕಲವಪ್ಪ ಆವಾಚ್ಯವಾಗಿಹ ಘನವು, ವಾಙ್ಮನೋತೀತವು ಅದಕ್ಕೆ ಪ್ರಣವ ರೂಪೆಂದು ಹೆಸರಿಡಬಹುದೆ ? ಪ್ರಣವ ರೂಪವೆಂದು ಹೇಳುವವರು ಇವರು ಅಹಂ ಗ್ರಹ ಉಪಾಸಕರು. ಇವರಿಗೆ ಪ್ರಣವವೆ ಸಕಲವು, ಸಾಕಾರ ಅದುವೆ ನಿರಾಕಾರ ಅದುವೆ, ಪೂರ್ಣ ಮದಃ ಪೂರ್ಣಂ ಮಿದಂ ಎಂದೆನ್ನುವ ಭಾವಿಕರಾದುದರಿಂದ ಪ್ರಣವವೆ ಪರಬ್ರಹ್ಮವಾಗಿಹುದು ಎಂದು ತಿಳಿದಿಹರು.

ಪ್ರಭು, ನಿಃಶಬ್ದವೇದಿಯಾದುದರಿಂದ ಪ್ರಣವನುಚ್ಚರಿಸುವ ಪ್ರಮಾಣಿಕರೆಲ್ಲರು ಪ್ರಣವದರ್ಥವ ತಿಳಿದು ನೋಡಿರೆ ? ಎಂದು ಜಾಗ್ರತ ಮಾಡಿಹನು. ಪ್ರಣವದ ಬಗ್ಗೆ ಉಪನಿಷದ್‌ಕಾರರು ಈ ಅಕ್ಷರ ಬ್ರಹ್ಮಕ್ಕೆ ಬಹು ಪೂರ್ಣ ಮಾಡಿಹರು. ಪ್ರಣವ ವಾಚಕ ಇದು ಓಂ ಎಂದು ಹೇಳಿದೆ. ಇದರ ಅರ್ಥವು ಜ್ಞಾನ ಸ್ವರೂಪವಾಗಿದೆ. ಈ ಜ್ಞಾನ ಸ್ವರೂಪ ತಿಳಿದು ನೋಡುವುಡೆ ಅಲ್ಲಿ ಇಲ್ಲಿ ಸಿಲುಕದ ಅಚಲವಪ್ಪ ನಿರಾಳವು ಇದನ್ನು ತಿಳಿಯದೆ ಪ್ರಣವ ರೂಪೆಂದು ಹೆಸರಿಡಬಹುದೆ ?

ನಮ್ಮ ಗುಹೇಶ್ವರ ನಿಲುವು ನಿಃಶಬ್ದಬ್ರಹ್ಮಮುಚ್ಯತೆ ಎಂಬುದನರಿಯಾ ಸಿದ್ಧರಾಮಯ್ಯ : ಗುಹೇಶ್ವರ ನಿಲುವು ಸೋಹಂ ಶಬ್ದಕ್ಕೂ ನಿಲುಕದ ನಿಲುವು, ಚಿದಹಂ ಶಬ್ದಕ್ಕೂ ನಿಲುಕದ ನಿಲುವು, ದಾಸೋಹಂ ಶಬ್ದಕ್ಕೂ ನಿಲುಕದ ನಿಲುವು, ಆವುದು ನಾನೀನೆಂಬುದಕ್ಕೂ ತೆರಹಿಲ್ಲದ ಘನವು, ಅದು ನುಡಿಗೆಡೆಗೊಡದ ಘನದ ನಿಲವು, ಅದುವೆ ನಿಃಶಬ್ದಬ್ರಹ್ಮಮುಚ್ಯತೆ ಅದುವೆ ಗುಹೇಶ್ವರನ ನಿಲುವು. ಇದು ತನ್ನಿಂದ ತನ್ನ ಅರಿತ ನಿಲುವು. ತನ್ನದಾದ ನಿಲುವು. ಬಹುವಾಗಿ ವೇದ ವೇದಾಂತ ಬಲ್ಲವರು ಇಹರು. ನಿಃಶಬ್ದಬ್ರಹ್ಮಮುಚ್ಯತೆ ಎಂದೆನ್ನುವ ಮಹಾಂತರು ಸಿಕ್ಕುವರು. ಪ್ರಭುವಿನ ಮಹಾಪ್ರಸಾದವು ಎಲ್ಲರಂತೆ ಈತನ ಅನುಭವವಲ್ಲ, ಈತನದು ಮಹಾನುಭವ ನಿಃಶಬ್ದಬ್ರಹ್ಮಮುಚ್ಯತೆ ಎಂಬುದನರಿಯಾ ಎಂದು ಸಿದ್ಧರಾಮಯ್ಯನಿಗೆ ಸಂಬೋಧಿಸಿದ ಬೋಧ, ಮಹಾಬೋಧವಾದುದು. ತಿಳಿದು ನೋಡುವುಡೆ ನಿಃಶಬ್ದಬ್ರಹ್ಮವು ನುಡಿಗೊಳಪಟ್ಟ ತತ್ವವಾಗದು. ನುಡಿದು ಹೇಳುವವರು ಶಬ್ದವೇದಿಗಳು. ನಿಃಶಬ್ದವೇದಿಯ ಘನವ ಅವರೇನು ಬಲ್ಲರು. ನಿಃಶಬ್ದವೇದಿಗಳಾಗದಿದ್ದಲ್ಲಿ ಶಬ್ದವೇದದ ನಂಜು ಬಿಡದು, ಅಲ್ಲಿ ಶಬ್ದಬ್ರಹ್ಮದ ಜ್ಞಾನವಾಗುವುದಲ್ಲದೆ ನಿಃಶಬ್ದ ಬ್ರಹ್ಮ ಮುಚ್ಯತೆ ಎಂಬುದನರಿಯನು. ಇದು ಕಾರಣ ಆರು ನಿಃಶಬ್ದವೇದಿಗಳು ಅವರು ನಿಃಶಬ್ದಬ್ರಹ್ಮಮುಚ್ಯತೆ ಎಂಬುದನರಿತವರು. ಅವರು ಅದುವೆ ಆಗಿಹ ಮಹಾಮಹಿಮರು ಆಗಿಹರು.

**176**

**ಅರಿವನರಿದು ಮರಹ ಮರೆದು,**
**ಸಂಕಲ್ಪ ಸಂಶಯವಳಿದ ನಿಲವನು,ಅರಿದ ಪರಿ ಎಂತು ಹೇಳಾ?**
**ಅರಿದೆನೆಂದಡೆ ಜ್ಞಾನಕ್ಕೆ ದೂರ, ಮೆರದೆನೆಂದಡೆ ಮನಕ್ಕೆ ದೂರ.**
**ನಿರ್ಭಾವದ ಹೊಲಿಗೆಯಲ್ಲಿ ಭಾವಸಂಕಲ್ಪ ಬಿಡದು.**
**ನಮ್ಮ ಗುಹೇಶ್ವರಲಿಂಗದಲ್ಲಿ ಮನಮಗ್ನ ಯೋಗ,**
**ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯಾ?** ॥ 831 ॥

**ತಾತ್ಪರ್ಯ** : ಅರುವನರಿದು ಮರಹ ಮರೆದು ಸಂಕಲ್ಪ ಸಂಶಯವಳಿದ ನಿಲವನರಿದ ಪರಿ ಎಂತು ಹೇಳಾ : ಓ ! ಸಿದ್ಧರಾಮಣ್ಣಾ ನೀ ಅರುವ ನರಿದುದು ಆಶ್ಚರ್ಯ ? ಅರುವನರಿಯಲು ಬರುವುದೆ ? ಅದು ಸಕಲದರ ಅರುವಿಂಗರುವಾಗಿಹ ಅರುವು ಅದನ್ನು ನೀನು ಹೇಗೆ ಅರಿದೆ ? ಅದು ನಿನ್ನಿಂದ ತಿಳಿಸಿಕೊಳ್ಳುವದಾಗಿದ್ದಲ್ಲಿ ಅದನ್ನು ನೀನು ಅರಿಯಬಹುದು. ಅದು ಯಾರಿಂದಲೂ ಯಾವುದರಿಂದಲೂ ತಿಳಿಸಿಕೊಳ್ಳುವುದಲ್ಲ ; ತಿಳಿಯುವುದಲ್ಲ, ಅದು ಅನುಪಮವು. ಅಂತಪ್ಪ ಮಹದರುವ ಅರಿದ ಪರಿ ಎಂತು ? ಮರಹ ಮರದೆನೆಂಬುದು ಬಹು ಆಶ್ಚರ್ಯವು, ಬೆಳಕು, ಕತ್ತಲೆ ಕಂಡುದು ಆಶ್ಚರ್ಯವಲ್ಲವೆ ? ನಿನ್ನೊಳಗೆ ಇಲ್ಲದುದು ಮರಹು. ಇದನ್ನು ಕಂಡುದು ಹೇಗೆ ? ಅದನ್ನು ಮರೆತುದು ಹೇಗೆ ? ಅರುವು ನಿರಂತರ. ಇದು ನುಡಿಗೆಡೆಗೊಡದ ಘನದಿರುವಿನ ಅರುವು. ಅದು ಮರಹಿಂಗೆ ಒಳಪಟ್ಟುದೆಂದು ? ಒಳಪಡದಿದ್ದಲ್ಲಿ ಅದನ್ನು ನೀನು ಮರೆತ ಪರಿ ಆವುದು ?

ಸಂಕಲ್ಪ ಸಂಶಯವಳಿದ ಪರಿ ಆವುದು ? ಅರುವಿಂಗರುವಾಗಿಹ ಘನದಲ್ಲಿ ಸಂಕಲ್ಪ ಸುಳಿದುದು ಹೇಗೆ ? ಸಂಕಲ್ಪವೆ ಸುಳಿಯದಿದ್ದಲ್ಲಿ ನಿನ್ನೊಳ ಸಂಶಯ ಬಂದುದು ಹೇಗೆ ? ಸಂಶಯವೆ ಬಾರದಿರುವಲ್ಲಿ ಅದನ್ನು ಅಳಿದ ನಿಲವನರಿದ ಪರಿ ಎಂತು ಹೇಳಾ ? ಅಕಲ್ಪಿತ ಘನದಲ್ಲಿ ಕಲ್ಪಿತವ ಹುಡುಕುವರೆ ? ನಿರುಪಾಧಿಯೋಳ್ ಉಪಾಧಿಯ ಕಾಣಬಹುದೆ ? ಅಭವನೋಳ್ ಭವವ ಕಾಣುವುದೆ ? ಒಡಲಿಲ್ಲದವಂಗೆ ಕರಣಂಗಳ ಕಾಣುವರೆ ? ಅರುವನರಿದೆನೆಂದರೆ ಜ್ಞಾನಕ್ಕೆ ದೂರ, ಮರಹ ಮರದೆನೆಂದರೆ ಮನಕ್ಕೆ ಧೂರ, ಅರಿದು ಮರದೆನೆಂದರೆ ಉಪಮೆಗೆ ದೂರ, ನಿರ್ಭಾವದ ಹೊಲಿಗೆಯಲ್ಲಿ ಭಾವ ಸಂಕಲ್ಪ ಬಿಡದು, ಗುಹೇಶ್ವರ ಲಿಂಗದಲ್ಲಿ ಮನ ಮಗ್ನಯೋಗ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ.

ಓ, ಸಿದ್ಧರಾಮಣ್ಣಾ, ಅರುವನರಿದೆನೆಂದರೆ ನಿನ್ನ ಸ್ವಸ್ವರೂಪವಾಗಿಹ ಯತಾರ್ಥ ಜ್ಞಾನಕ್ಕೆ ದೂರ. ಅರುವ ಅರಿದೆನೆಂಬುದು ನಿನ್ನಯ ಮುನ್ನ ಮುನ್ನಲಾದ ತನ್ನಿಂದ ತಾನಾದ ಘನದಿರುವಿನ ಅರುವಿನ ಜ್ಞಾನಕ್ಕೆ ದೂರ, ನಿನ್ನ ಸ್ವಮಹಿಮೆಯಾಗಿಹ ನಿಜದಿರುವಿನ ಜ್ಞಾನಕ್ಕೆ ದೂರ. ತನ್ನಿಂದ ತನ್ನ ಅರಿತ ದಿವ್ಯ ದೃಷ್ಟಿಗೆ ದೂರ, ಅರುವಿಂಗರುವಾಗಿಹ ಜ್ಞಾನಕ್ಕೆ ದೂರ, ಅರು ಹೃದಯಕ್ಕೆ ದೂರ.

ಮರಹ ಮರದೆನೆಂಬುದು ಮನಕ್ಕೆ ದೂರ ಓ! ಮರಹ ಮರದೆನೆಂಬುದು ನಿನ್ನ ಪೂರ್ವಾಶ್ರಯ, ಮನದ ಮನವಾಗಿಹ ಘನಮನಕ್ಕೆ ದೂರ, ಲಿಂಗಕ್ಕೆ ಲಿಂಗವಾಗಿಹ ಸುಮನಕ್ಕೆ ದೂರ, ನಾನೀನೆಂಬುದಕ್ಕೆಡೆಗೊಡದ ಘನ ಮನಕ್ಕೆ ದೂರ.

ಅರಿದು ಮರದೆನೆಂದಡೆ ಉಪಮೆಗೆ ದೂರ, ಅರಿವುದು ಮರೆವುದು ಬುದ್ಧಿಧರ್ಮವು, ಕಲ್ಪಿತನ ಕಾರ್ಯವು. ಆಕಾಶಕ್ಕೆ ಹಗಲು ರಾತ್ರಿ ಉಂಟೆ ? ನೋಡುವ ಕಣ್ಣಿಗೆ ಹಗಲುಂಟು, ರಾತ್ರಿ ಉಂಟು ? ಕಾಣದ ಕಣ್ಣಿಂಗೆ ಹಗಲಾವುದು ? ರಾತ್ರಿ ಆವುದು ? ತಾನು, ಕಣ್ಣಿನ ಕಣ್ಣು, ಅರುವಿಂಗರುವು, ಜ್ಞಾನದ ಜ್ಞಾನವು ನಿರುಪಮವು ಅರಿಯಲಿಲ್ಲದ ಅರುವು ಅದುವೆ ತನ್ನದಾಗಿಹ ಚಿದಾಕಾಶದಲ್ಲಿ ಅರಿವುದು ಮರೆಯುವುದು

ಉಂಟೆ ? ಉಂಟೆಂದಲ್ಲಿ ನಿರುಪಮವಾಗಿಹ ನಿಲುವಿಂಗೆ ದೂರವಾದ್ದರಿಂದ ಉಪಮೆ ದೂರವೆಂದು ಹೇಳಿಹರು.

ನಿರ್ಭಾವದ ಹೊಲಿಗೆಯಲ್ಲಿ ಭಾವ ಸಂಕಲ್ಪ ಬಿಡದು, ಓ ! ಯೋಗಿ ವರೇಣ್ಯನೆ, ನಿರ್ಭಾವವದು, ನೀನು ಭಾವಿಸಿದ ಭಾವವು, ಇದು ನಿರ್ಭಾವ ಹೇಗಾಗುವುದು, ಅರುವು ಎಂಬುದು ಭಾವ, ಮರಹು ಎಂಬುದು ಭಾವ, ಸಂಕಲ್ಪವೆಲ್ಲವು ಭಾವಂಗಳ ಸಂಗ್ರಹಾಲಯ, ಅರುವನರಿದೆನೆಂಬುದು ಭಾವ, ಮರಹ ಮರದೆನೆಂಬುದು ಭಾವ, ಅರಿದು ಮರದೆನೆಂಬುದು ಭಾವ, ನಿನ್ನ ಅನಿಸಿಕೆಯಲ್ಲಿ ನಿರ್ಭಾವವಾಗಿಹುದಲ್ಲದೆ ಇದು ನಿರ್ಭಾವವಾದ ಹೊಲಿಗೆಯೆ ವಿನಃ ಯತಾರ್ಥ ನಿರ್ಭಾವದ ನಿಜಗುಟ್ಟು ನೀನು ತಿಳಿಯದ್ದರಿಂದ ನಿನಗೆ ಭಾವ ಸಂಕಲ್ಪ ಬಿಡದು.

ಗುಹೇಶ್ವರ ಲಿಂಗದಲ್ಲಿ ಮನ ಮಗ್ನ ಯೋಗ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ : ಗುಹೇಶ್ವರ ಲಿಂಗವದು, ಅನುಪಮ ಲಿಂಗ ಲಿಂಗವೆನ್ನದವರ ಲಿಂಗ, ಶಬ್ದಮುಗ್ದವಾಗಿಹ ಲಿಂಗ, ಅರಿತೆನೆನ್ನುವವನಿಗೂ ಕಾಣದ ಲಿಂಗ, ಅರಿಯೆನೆನ್ನುವವನಿಗೂ ಕಾಣದ ಲಿಂಗ, ಇದು ಪೂಜೆಗೆ ಬಾರದ ಲಿಂಗ, ಲಿಂಗಕ್ಕೆ ಲಿಂಗವಾಗಿ ನೋಡುವರ ಲಿಂಗ, ಲಿಂಗ ಘನವಾದರೆ ತಾನು ಘನಕ್ಕೆ ಘನವಾಗಿಹ ತಾನೆ ಲಿಂಗ, ತಾನೆ ಗುಹೇಶ್ವರ ಲಿಂಗ, ಇದು ಅಕಥನೀಯವಾಗಿಹ ಘನಲಿಂಗದಲ್ಲಿ ನಿನ್ನ ಮನ ಮಗ್ನ ಯೋಗ ನಿನಗೆಂತು ಸಾಧ್ಯವಾದುದು.

177

**ಆತ್ಮಸಂಗವಾದವರ್ಗೆ ಬಹಿರ್ಭಾವವಿಲ್ಲ,**
**ಇಂದ್ರಿಯಂಗಳು ಲಿಂಗವಾದವರ್ಗೆ ವಿಷಯಸೂತಕವಿಲ್ಲ,**
**ಕರಣಂಗಳು ಲಿಂಗವಾದವರ್ಗೆ ಹಿಂದು ಮುಂದೆಂಬ ಸಂದೇಹವಿಲ್ಲ,**
**ಲಿಂಗಾಲಯವು ಮನವಾದವರ್ಗೆ ಇಹಪರವೆಂಬ ಸಂಶಯವಿಲ್ಲ,**
**ಲೋಕದಂತೆ ನಡೆವರು ಲೋಕದಂತೆ ನುಡಿವರು,**
**ಮನವು ಮಹಾಲಿಂಗದಲ್ಲಿ ಪರಿಣಾಮಿಗಳು!**
**ಅಂತಪ್ಪ ಮಹಾನುಭವಿಗಳ ಲೋಕದ ಪ್ರಪಂಚಿಗಳೆಂದಡೆ**
**ಮನೋಮಧ್ಯದಲ್ಲಿಪ್ಪ ಜ್ಯೋತಿರ್ಲಿಂಗವು ನಗದಿಹನೆ ಗುಹೇಶ್ವರಾ?** ॥ 875 ॥

**ತಾತ್ಪರ್ಯ** : ಆತ್ಮಸಂಗವಾದವರ್ಗೆ ಬಹಿರ್ಭಾವವಿಲ್ಲ : ಆತ್ಮ ಸಂಗ ? ಇದಾರ ಸಂಗ, ಇದು ತನ್ನ ಸಂಗ, ನಿರೂಪ ಸಂಗ, ಕುರುಹು ಕಾಣದ ಸಂಗ, ಸಮತೆ ಸಯವಾದ ಸಂಗ, ಗಂಡು ಹೆಣ್ಣೆಂಬ ಭಾವ ಕೆಟ್ಟ ಸಂಗ, ಅವರ್ಣೀಯವಾಗಿಹ ತನ್ನ ಸಂಗವಾಗಿ ವರ್ಣಾಶ್ರಮಂಗಳು ನಷ್ಟವಾಗಿ ಬ್ರಹ್ಮಚರ್ಯನೆಂಬ ಭಾವವಿಲ್ಲ, ಗೃಹಸ್ಥ ವಾನಪ್ರಸ್ಥನೆಂಬ ಭಾವವಿಲ್ಲ, ಸನ್ಯಾಸಿ ತಾಪಸಿ ಎಂಬ ಭಾವವಿಲ್ಲ, ತ್ಯಾಗಿ ಎಂಬ ಭಾವವಿಲ್ಲ, ಯೋಗಿ ಎಂಬ ಭಾವವಿಲ್ಲ, ನರರೆಂಬ ಭಾವವಿಲ್ಲ, ಸುರಾಸುರರೆಂಬ ಭಾವ, ದೇವಗಣ, ರುದ್ರಗಣ, ಪ್ರಮಥಗಣರೆಂಬ ಭಾವವಿಲ್ಲ, ಶಿವ ಶಂಕರ ಭಾವವಿಲ್ಲವಾದ್ದರಿಂದ ಬಹಿರ್ಭಾವವಿಲ್ಲವೆಂದು

ಹೇಳಿಹರು. ಭಾವಕ್ಕಗಮ್ಯವಾಗಿಹ ನಿರಂಜನ ನಿಜ ಚಿದ್ರೂಪ ಸಂಗ, ತನ್ನ ಸಂಗ, ಚೈತನ್ಯ ಸಂಗವಾದವರ್ಗೆ ಭಾವವೇತರದು ? ಅಭಾವ ಏತರದು ? ಅದು ಕಾರಣ ಬಹಿರ್ಭಾವವಿಲ್ಲ.

ಇಂದ್ರಿಯಂಗಳು ಲಿಂಗವಾದವರ್ಗೆ ವಿಷಯ ಸೂತಕವಿಲ್ಲ : ಇಂದ್ರಿಯಂಗಳು ಅತೀಂದ್ರಿಯಾದವೆ ? ಇಂದ್ರಿಯಂಗಳು ತಮ್ಮ ಪೂರ್ವಾಶ್ರಯ ಮರೆತು ಮುನ್ನ ಮುನ್ನಲಾದ ಮೂಲವ ಕಂಡು ಲಿಂಗವಾದುವೆ ? ಅಸಾಧ್ಯವ ಸಾಧಿಸಿದ ಹಿರಿಮೆಯು ಕಾಣದುದ ಕಂಡುದು, ಕೇಳದುದು ಕೇಳಿದುದು, ಮುಟ್ಟದುದ ಮುಟ್ಟಿದುದು, ಸವಿಯದುದ ಸವಿದುದು, ಅಂದಲ್ಲಿ ತಮ್ಮ ಪೂರ್ವಾಶ್ರಯವಾಗಿಹ ಶುಭಾಶುಭಂಗಳ ತ್ಯಜಿಸಿ ಕಾಣದಂತಾಗಿ ಲಿಂಗಭೋಗೋಪ ಭೋಗಿಗಳಾದವೆ ? ಲಿಂಗವಾಗಿ ಲಿಂಗವನ್ನು ಕಂಡವೆ ! ಲಿಂಗವಾಗಿ ಲಿಂಗವ ಮುಟ್ಟಿಹವೆ ? ಲಿಂಗವಾಗಿ ಲಿಂಗ ಸುಖವ ಸವಿದವೆ ? ಓಹೋ ಲೋಕದವರ ಕಣ್ಣಿಂಗೆ ಎಂದಿನಂತೆ ಇದ್ದು, ನಿಮ್ಮ ಮೂಲವಿರುವಿನಲ್ಲಿ ವಾಸವೆ ? ಅಹುದು ಇದುವೆ ಅಸಾಧ್ಯವ ಸಾಧಿಸಿದ ಹಿರಿಮೆ, ಲೋಕಕ್ಕೆ ಕಣ್ಣಾಗಿ ಕಂಡು ಕಣ್ಣಿನ ಕಣ್ಣಾದಿರಾ ! ಕಿವಿಯಾಗಿ ಕಂಡು, ಕಿವಿಯ ಕಿವಿಯಾಗಿ ನಿಶಬ್ದವೇದಿಗಳಾದಿರಾ ? ಕೈಯಾಗಿ ಕಂಡು ಕೈಯಿಗೆ ಕೈಯಾಗಿ ಅನುಪಮ ಲಿಂಗಯ್ಯನಿಗೆ ನಿಮ್ಮ ಸ್ವಹಸ್ತವ ಮುಟ್ಟಿತೆ ? ಏನಿದು ಸಾಹಸ, ಘ್ರಾಣದ ಘ್ರಾಣವಾಗಿ ಲಿಂಗಯ್ಯನ ಸದ್‌ಜ್ಞಾನ ಭರಿತವಾಗಿಹ ಸದ್‌ವಾಸನೆಯಲ್ಲಿ ಲೀಯವಾದಿರಾ ! ತ್ವಕ್ಕಿನ ತ್ವಕ್ಕಾಗಿ ಮುಟ್ಟಿ ಮುಟ್ಟದಂತಾದ ನಿಸ್ಸಂಗತ್ವವ ಅದಾರು ವರ್ಣಿಸುವುದು. ಇದು ಕಾರಣ ನಿಮಗೆ ವಿಷಯ ಸೂತಕವಿಲ್ಲವೆಂದು ಹೇಳಿಹರು.

ಕರಣಂಗಳು ಲಿಂಗವಾದವರ್ಗೆ ಹಿಂದು ಮುಂದೆಂಬ ಸಂದೇಹವಿಲ್ಲ. ಕರಣಂಗಳು ತಮ್ಮ ನಿಜವ ಮರೆತು ನೆನಹು ನಿರ್ಣಯವೆ ದಿಟವಾಗಿ ಅವುಗಳ ನೆರೆನಂಬಿ ನಿರಂತರ ಚಿಂತಿಸಿ ಇವುಗಳಭಿಮಾನಿಯಾಗಿ ಕರ್ತೃತ್ವ ಭೋಕ್ತೃತ್ವದಿಂ ನರಳುವಲ್ಲಿ ಹಿಂದಿನ ಸಂಚಿತ ಕರ್ಮದ ಸಂದೇಹವಿಲ್ಲ. ಕರ್ಮದಂತೆ ಫಲಪದಂಗಳೆಂಬ ಭೇದ ಜ್ಞಾನಕ್ಕೆ ಒಪ್ಪಿದುದರಿಂದ ಮುಂದೆ ಆಗಾಮಿ ಕರ್ಮದ ಸಂದೇಹವಿತ್ತು. ಕರಣಂಗಳು ತಮ್ಮ ನಿಜವರಿತು ಲಿಂಗವಾದಲ್ಲಿ ಹಿಂದು ಮುಂದೆಂಬ ಸಂದೇಹವಿಲ್ಲವಾಯಿತ್ತು.

ಮನವು ನಿಜವರಿತು ಲಿಂಗವಾದ ಹಿರಿಮೆಯ ನೋಡಿರೆ ? ನಿಜವದು ಕೇವಲ ಜ್ಯೋತಿ, ವರ್ಣಾತೀತ ನೋಡಹೋಗಿ ಅರಿಯ ಹೋಗಿ, ಅರುವಿಂಗರುವಾಯಿತ್ತು. ಸ್ವಯಂಜ್ಯೋತಿ ಲಿಂಗವಾಯಿತ್ತು, ಅಕಲ್ಪಿತ ಘನವಾಗಿ ಪ್ರಜ್ವಲಿಸಿತ್ತು ತನ್ನ ಸಂಕಲ್ಪ, ವಿಕಲ್ಪ ಪೂರ್ವಾಶ್ರಯ ಮರೆತಿತ್ತು. ಬುದ್ಧಿಯ ಅರುವು ಮರವೆಂಬ ನಿರ್ಣಯ ನಷ್ಟವಾಯಿತ್ತು. ಚಿತ್ತದ ಚಿಂತನೆ ಅಚಿಂತ್ಯವ ಕಂಡು ಅಲ್ಲಿಯೆ ಲೀಯವಾಯಿತ್ತು. ನಾನೆಂಬುದು ನಷ್ಟವಾಗಿ ತಾನೆ ಘನವಾಯಿತ್ತು. ಶಬ್ದಮುಗ್ಧವಾಯಿತ್ತು. ಇದ್ದುದೊಂದೆ ನಾಲ್ಕಾಗಿ ಪರಿಣಮಿಸಿತ್ತು. ನಾಲ್ಕು ಕೆಡಲೆಡನೆ ಒಂದಿಲ್ಲ, ಒಂದೂ ಇಲ್ಲವಾಗಿ ನಾಲ್ಕು ಇಲ್ಲ, ಒಂದೆಂಬುದು ಮನಸ್ಸು ಇದುವೆ ಪರಿಗಣಿಸಿ ಬುದ್ಧಿ ಬುದ್ದಿಯೆ ಪರಿಣಮಿಸಿ ಚಿತ್ತ , ಇದು ಪರಿಣಮಿಸಿ ಅಹಂಕಾರ. ಸಂಕಲ್ಪ ವಿಕಲ್ಪ ರೂಪ ಕೆಟ್ಟು ಅದುವೆ ಕೇವಲ ಜ್ಯೋತಿ ವರ್ಣಾತೀತವಾಗಿರುವ ಲಿಂಗವಾದಲ್ಲಿ ಅಲ್ಲಿ ನಿರ್ಣಯವೇತರದು, ಚಿಂತನವೇತರದು

ಅಹಂಕಾರವೇತರದು ಇಲ್ಲದುದು ಇಲ್ಲವೆ ಇಲ್ಲ, ಇದ್ದುದ ನಿರಂತರ ಲಿಂಗವೆ ಮನವಾದಲ್ಲಿ ಬುದ್ಧಿಯ ಲಿಂಗ ಚಿತ್ತಾಲಿಂಗ, ಅಹಂಕಾರ ಲಿಂಗ ಕರಣಂಗಳು ಲಿಂಗವಾದುದರಿಂದ ಹಿಂದೆಂಬ ಸಂಚಿತ ಕರ್ಮವಿಲ್ಲ ಮುಂದೆಂಬ ಆಗಾಮಿ ಕರ್ಮವಿಲ್ಲ ನಿರಂತರ ಲಿಂಗವಾಗಿರುವಲ್ಲಿ ಪ್ರಾರಬ್ಧವೇತರದು.

ಲಿಂಗಾಲಯವು ಮನವಾದವರ್ಗೆ ಇಹಪರವೆಂಬ ಸಂಶಯವಿಲ್ಲ, ಶರಣ ಲಿಂಗಾಂಗಸಂಬಂಧಿಯಾದ್ದರಿಂದ ಲಿಂಗಾಲಯುವು ಅಚಿಂತ್ಯಾಲಯವು, ಸುಖದಾಲಯ ಇದು ಸ್ವಸುಖದಾಲಯ. ಮನವಾಗಿ ಇಹವ ಕಾಣದು, ಪರವ ಕಾಣದು, ಶರಣ ನಿಶಬ್ದವೇದಿ ಅನಾಮಯ ಶಾಸ್ತ್ರವನ್ನು ನೋಡಿದ ಮಹದರುವು. ಅನುಪಮ ವೇದವನೋದಿದ ಮಹಾಘನ, ಇದು ಕಾರಣ ಶಬ್ದಮುಗ್ಧ ನಿರಂತರ ನಿಶ್ಚಿಂತ, ಅಚಿಂತ್ಯಾತ್ಮನಲ್ಲಿಲೀಯವಾದ ಮನ ನುಡಿಗೆಡೆಗೊಡದ ಘನದಿರುವಿನಲ್ಲಿ ಲೀಯವಾದ ಮನ, ಇಂತಪ್ಪ ಸುಮನಕ್ಕೆ ಇಹಲೋಕವ ಕಾಣದು, ಪರಲೋಕವ ಕಾಣದು, ಕಾಣದ್ದರಿಂದ ಅಪ್ರಿಯ ಲೋಕವಾವುದು ? ಪ್ರಿಯವಾದ ಲೋಕವಾವುದು ? ಸ್ವಸುಖದಲ್ಲಿ ರಮಿಸುವ ಮನಕ್ಕೆ ಇಹಪರವೆಂಬ ಸಂಶಯವಿಲ್ಲವೆಂದು ಹೇಳಿಹರು.

ಲೋಕದಂತೆ ನಡೆವರು ಲೋಕದಂತೆ ನುಡಿವರು ಮನವು ಮಹಾಲಿಂಗದಲ್ಲಿ ಪರಿಣಾಮಿಗಳು : ಲೋಕದವರ ದೃಷ್ಟಿಗೆ, ಲಿಂಗಾನುಭವಿಗಳು, ಲೋಕದವರಂತೆ ದೇಹ, ಇಂದ್ರಿಯಂಗಳಾಗಿ ನಡೆವರು. ದೇಹ, ಇಂದ್ರಿ, ಪ್ರಾಣಂಗಳಾಗಿ ನುಡಿವರು. ಆದರೆ ತಮ್ಮ ಅಂತರಂಗದಲ್ಲಿಪ್ಪ ಜ್ಯೋತಿರ್ಲಿಂಗದ ರಹಸ್ಯವೆ ಬೇರೆ, ಅವರ ಮನ ಮಹಾಲಿಂಗದಲ್ಲಿ ಪರಿಣಾಮಿಗಳಾಗಿಹುದು. ಶರಣನ ಮನ ಗುರುಲಿಪಿ ತಿಳಿದ ಮನ, ಲಿಂಗ ಲಿಪಿ ತಿಳಿದ ಮನ, ಜಂಗಮ ಲಿಪಿ ತಿಳಿದ ಮನ, ಪ್ರಸಾದ ಲಿಪಿ ತಿಳಿದ ಮನ, ಈ ನಾಲ್ಕು ಒಂದಾಗಿ ತಿಳಿದ ಅನುಭವದ ಮನ, ಈ ಒಂದಾಗಿಹ ಅನುಭವದ ಘನವ ತಿಳಿಯ ಹೋಗಿ ಮಹಾಲಿಂಗವ ಯತಾರ್ಥ ತಿಳಿದ ಪರಿಣಾಮಿ.

ಶರಣ ಈ ನಾಲ್ಕು ಲಿಪಿ ತನ್ನೊಳಗೆ ಕಂಡ ಗುರುವಿನ ಗುರು, ಲಿಂಗದ ಲಿಂಗ, ಜಂಗಮದ ಜಂಗಮ, ಪ್ರಸಾದದ ಪ್ರಸಾದಿ, ಈ ನಾಲ್ಕು ತನ್ನೊಳ ಬೆಳಗಿದ ಬೆಳಗಿನಾಲಯ ಈ ಬೆಳಗಿನಾಲಯಕ್ಕೆ ತಾನು ಬೆಳಗುಳ್ಳ ಘನವಾಗಿ ನಿಂತು ನೋಡಿದ ಮಹಾಲಿಂಗದಲ್ಲಿ ಪರಿಣಾಮ.

ಇಂತಪ್ಪ ಲಿಂಗಾನುಭವಿಗಳ ಲೋಕದ ಪ್ರಪಂಚಿಗಳೆಂದಡೆ ಮನೋಮಧ್ಯದಲ್ಲಿಪ್ಪ ಜ್ಯೋತಿರ್ಲಿಂಗವು ನಗದಿಹನೆ ಗುಹೇಶ್ವರಾ:

ಶರಣ ಇಂತಪ್ಪ ಲಿಂಗವರಿತು ಲಿಂಗಕ್ಕೆ ಲಿಂಗವಾಗಿಹ ಮಹಾಲಿಂಗಾನುಭವಿ, ಈ ಘನವಂತನಿಗೆ ಏನನ್ನಬೇಕು, ವಾಙ್ಮನೋತೀತವಾಗಿಹ ಶಬ್ದಮುಗ್ಧ . ನೆನಹು ನಿಷ್ಪತ್ತಿ, ಚಿತ್ತಾ ಅಚಿಂತ್ಯಾತ್ಮದಲ್ಲಿ ಲೀಯವಾದ ನಿಲುವು, ಇಂತಪ್ಪ ಮಹಾಘನಕ್ಕೇನನ್ನಬೇಕು. ಶೃತಿಗಳೆ ಈ ಘನವಂತನ ಕಂಡು ನಾಚಿ ಶಬ್ದಮುಗ್ಧವಾಗಿರುವಲ್ಲಿ ಇಂತಪ್ಪ ಘನಕ್ಕೆ ಘನವಾಗಿಹ ಸ್ವಯಾನುಭವಕ್ಕೆ ಏನನ್ನಬೇಕು. ಇದು ಲಿಖಿತಕ್ಕೂ ಕಥನಕ್ಕೂ ನಿಲುಕದ ಇರುವು ಶರಣನದು. ಇಂತಪ್ಪ ಘನಮನವಾಗಿಹ ಶರಣನನ್ನು ಲೋಕದ ಪ್ರಪಂಚಿಗಳೆಂದಡೆ ಮನೋ ಮಧ್ಯದಲ್ಲಿಪ್ಪ ಜ್ಯೋತಿರ್ಲಿಂಗವು ನಗದಿಹನೆ ಎಂದು ಪ್ರಭು ಬಿತ್ತರಿಸಿದುದು.

178

**ತೋರಬಾರದ ಘನವ ಹೇಳಲೆಂದೇನಯ್ಯಾ ?**
**ಹೇಳಬಾರದ ಘನವ ತೋರಲೆಂದೇನಯ್ಯಾ ?**
**ಶರಸಂಧಾನದ ಪರಿಯಲ್ಲ ನೋಡಾ!**
**ಗುಹೇಶ್ವರಲಿಂಗವು ಕಲ್ಪಿತವಲ್ಲ ನೋಡಯ್ಯಾ.**

**ತಾತ್ಪರ್ಯ** : ತೋರಬಾರದ ಘನವ ಹೇಳಲೆಂದೇನೊ : ಪ್ರಭು ಕರಕಮಲದಲ್ಲಿ ಬೆಳಗುವ ಲಿಂಗಯ್ಯನಿಗೆ ಹೀಗೆ ಸಂಬೋಧಿಸಿದುದು ಅದೆಷ್ಟು ಲಿಂಗವಂತರುಗಳ ಹೃದಯದಲ್ಲಿ ಬೆಳಗಿದುದು ? ತೋರಬಾರದ ಘನವ ಎಂದು ಸಂಬೋಧಿಸಿದುದು ಇದೆಂಥ ದಿವ್ಯದೃಷ್ಟಿಘನಾನುಭವ ಕರಿಗೊಂಡ ದೃಷ್ಟಿ.

ಲಿಂಗಾರ್ಚಕರು ಲಿಂಗಯ್ಯನಿಗೆ ಇಷ್ಟಲಿಂಗವೆಂದು ಸಂಬೋಧಿಸಿಹರು ನಿಜ, ಪ್ರಭುವಿನ ಯತಾರ್ಥ ಜ್ಞಾನದವರು ಸಿಕ್ಕುವುದು ವಿರಳ. ಲಿಂಗ ಅನ್ನುವರಷ್ಟೆ ಅಲ್ಲದೆ ಲಿಂಗ ಜ್ಞಾನ ಎಲ್ಲಿಯದು ? ಜ್ಞಾನವೆ ಇಲ್ಲದಿರುವಲ್ಲಿ ಅದನ್ನು ತಿಳಿಯುವ ಬಗೆ ಹೇಗೆ ?

ಲಿಂಗಾರ್ಚಕರಿಗೆ ಅರುವ ಅರಿಯ ಹೇಳಿ ಶ್ರೀಗುರು ಕುರುಹ ಕೊಟ್ಟರೆ ಅರುವನೆ ಮರೆದು ಕುರುಹನೆ ಪೂಜಿಸುವ ನರಕುರಿಗಳ ನೋಡಾ ಕೂಡಲ ಚೆನ್ನಸಂಗಮದೇವಾ. ಎಂದು ಲಿಂಗ ಲಿಂಗವೆನ್ನುವ ಭಾವುಕರಿಗೆ ನಿಮ್ಮ ಕೈಯಲ್ಲಿದ್ದ ದೇವರ ದೇವನ ಅರುವ ಅರಿಯ ಹೇಳಿದ ಸಂಜ್ಞೆ ತಾನು ಅದುವೆ ಆಗಿ, ಅದನ್ನೆ ಕರುಣಿಸಿಹನು. ಓಹೊ ! ಅದುವೆ ಆದುದು ಅಂದರೆ ಮುನ್ನ ಮುನ್ನಲಾದುದು ತನ್ನಿಂದ ತಾನಾದುದು ಸಕಲರ ಹೃದಯಲ್ಲಿ ನ್ಯಸ್ತವಾಗಿಹ (ಚಿದ್‌ಬೆಳಗೆ) ಲಿಂಗವ ಕರುಣಿಸಿಹನು. ಅರುವ ಅರಿಯ ಹೇಳಿದ ಕುರುಹು ಅಪ್ರತಿಮ ಕುರುಹು ಅದನ್ನು ಕುರುಹಾಗಿ ಕಾಣಬಾರದು ನೋಡಾ, ತ್ರಿಪುಟರಹಿತರಾಗಿ ಕಾಣುವುದು ಪ್ರಮಾತಾ ಪ್ರಮಾಣ ಪ್ರಮೇಯ ಈ ಮೂರು ತ್ರಿಪುಟಗಳಿಲ್ಲದೆ ಕಂಡವರಿಗೆ ಶ್ರೀಗುರು ಕಾರುಣ್ಯವು ಸಫಲವು.

ಲಿಂಗಾರ್ಚಕರಿಗೆ ತಮ್ಮ ಕರಕಮಲದಲ್ಲಿ ಬೆಳಗುವ ಲಿಂಗ ಶ್ರೀಗುರು ಅರುವ ಅರಿಯ ಹೇಳಿದ ಸಂಜ್ಞೆ ಎಂಬುದು ಮರೆಯದೆ ಅರಿತವರಾಗಿದ್ದರೆ ಅವರು ಭ್ರಮಾತ್ಮರಾಗುತ್ತಿದ್ದಿಲ್ಲ, ಶ್ರೀಗುರು ಭ್ರಮನಿರಸನವಾಗಿ ಬ್ರಹ್ಮತ್ವ ಸಿದ್ಧಿಸಲಿ ಎಂದು ಕರುಣಿಸಿದರೆ ಇವರಿಗೆ ಭ್ರಮವೆ ಅಧಿಕವಾಗಿರುವದೆಂದಲ್ಲಿ ಲಿಂಗ ಘನವ ಅರುವಾಗಿ ಅರಿಯ ಹೋಗಿರುವುದಿಲ್ಲವೆಂಬುದು ತಾನೆ ಸಿದ್ಧವಾಗಿಹುದು. ಇದರಿಂದ ಲಿಂಗಯ್ಯನು ಸೀಮಿತ ದೇವನಾಗಿಹನು. ಇದು ಲಿಂಗವಂತರ ದೇವನು. ಈ ದೇವನ ಪೂಜಿಸುವ ಪೂಜಿಕರದು ಒಂದು ಜಾತಿಗೆ ಪಕ್ಷಕ್ಕೆ ಸೇರಿದವರೆನ್ನುವಷ್ಟು ಮಂದಮತಿಗಳಾಗಿಹರು. ಇದಲ್ಲದೆ ಅಂಗದ ಮೇಲೆ ಲಿಂಗಧರಿಸಿಕೊಂಡು ಲಿಂಗಪೂಜಿಸುವ ಪೂಜಕರಲ್ಲಿ ಪೂಜ್ಯರುಗಳಲ್ಲಿ ವಿಷಮದೃಷ್ಟಿ, ವಿಷಮ ಭಾವ, ವಿಷಮಜ್ಞಾನವೆ ವೃದ್ಧಿಯಾಗಿ ಅಯ್ಯ ಅಯ್ಯಗಳಲ್ಲಿ ಭೇದ, ಗುರು ಗುರುಗಳಲ್ಲಿ ಭೇದ, ವಿರತಿ ವಿರತಿಗಳಲ್ಲಿ ಭೇದ, ಅಧಿಕಾರಿ

ಅಧಿಕಾರಿಗಳಲ್ಲಿ ಭೇದ, ಜಗದ್ಗುರು ಜಗದ್ಗುರುಗಳಲ್ಲಿ ಭೇದ, ಭಕ್ತ ಭಕ್ತರಲ್ಲಿ ಭೇದ, ಶಿಷ್ಯ ಶಿಷ್ಯರಲ್ಲಿ ಭೇದ, ಜ್ಞಾನದ ಹೃದಯವಾಗಿರುವಲ್ಲಿ ಅರುವ ಅರಿಯ ಹೇಳಿ ಶ್ರೀಗುರು ಕರುಣಿಸಿದ ಅನುಪಮ ಲಿಂಗ ಅರಿಯುವುದು ಆವಾಗ ? ಅದ್ವೈತ ಕರಸ್ಥಲದೊಳಗೆ ಅನಂತ ಗಿಳಿ ಮೂರ್ತಿಗೊಂಡು ಅತೀತ ಅನಾಗತ, ವರ್ತಮಾನವೆಂಬ ಕೊರೆಕೊಳನುಂಡು ಅಗಣಿತ ಪುರಾಣವ ತಿಳಿಯುವುದು ಆವಾಗ, ಅನಾಮಯ ಶಾಸ್ತ್ರವನೋದಿ ತಾನು ಲಿಂಗ, ಅನಾಮಯ ನಿರ್ವಾಣವಾಗುವುದು ಆವಾಗ ? ಅನುಪಮ ವೇದವನೋದಿ ನಿಃಶಬ್ದ ಬ್ರಹ್ಮದಿರುವಿನ ಅರುವು ತಾನಾಗುವುದು ಆವಾಗ ? ಇದು ಶಬ್ದಮುಗ್ಧನಾಗಿ ನಿಃಶಬ್ದವೇದಿಯಾಗುವ ಸಾಹಿತ್ಯ. ಇಂತಪ್ಪ ಲಿಂಗ ಸಾಹಿತ್ಯವ ತಿಳಿದು ಸ್ವಮಹಿಮೆಯಲ್ಲಿ ಮಗ್ನವಾಗುವುದು ಯಾವಾಗ ? ಇಂತಪ್ಪ ಅಪರಮಿತ ಸಾಹಿತ್ಯ ಲಿಂಗ ಸಾಹಿತ್ಯವಿದ್ದರೂ ಭೇದ ದೃಷ್ಟಿ, ಭೇದಭಾವ ಭೇದ ಜ್ಞಾನ ನಷ್ಟವಾಗದಿದ್ದಲ್ಲಿ ಇನ್ನೇನು, ಇದು ಕಾರಣ ಇದರ ಪರಿಹಾರವೆಂದರೆ ಅರುವ ಅರಿಯ ಹೋಗುವುದು ಇದರಿಂದ ಅರು ಹೃದಯವಾಗಿ ಅರುವಿಂಗರುವಾಗಿಹ ಘನಾನುಭವವಾಗುವುದು. ಆಗ ತೋರಬಾರದ ಘನವ ಹೇಳಲೆಂದೆನೋ , ತೋರಬಾರದ ಘನವು ಗುಹೇಶ್ವರ ಲಿಂಗವು, ಈ ಪರಾತ್ಪರ ಲಿಂಗವು ಬಹಿರ್ ದೇಶ, ವಿದೇಶಗಳಲ್ಲಿ ಲಭ್ಯವಾಗದ ಘನವು. ತನ್ನ ದೇಹ ರೂಪಿ ಗುಹೆಯೊಳಗಿದ್ದ ಘನ ಚೈತನ್ಯವಾಗಿಹ ಮಹಾಲಿಂಗವು ತಿಳಿಯಬೇಕಾದಲ್ಲಿ ಅರುವ ಅರಿಯಹೋಗಲು ತನ್ನೊಳಗೆ ಸ್ವಪ್ರಕಾಶಿಸುವ ಪ್ರಕಾಶ ತಾನು ಅದುವೆ ಆಗಿಹ ಸ್ವಯಂಜ್ಯೋತಿ ಲಿಂಗ. ಇದು ಶಬ್ದಸಂಭ್ರಮದ ಮದವುಳ್ಳವರಿಗೆ ವೇದ್ಯವಾಗುವ ತತ್ವವಲ್ಲ, ಇದು ಶೃತಿಗಳಿಗೆ ಮೀರಿ ನಿಂತು, ತನ್ನ ತಾನರಿತ ಸಾಹಿತ್ಯ. ಶ್ರೀಗುರು ಕರುಣಿಸಿದ ಲಿಂಗ, ಕುರುಹಾಗಿ ಕಾಣದೆ ಶೃತಿಗಳಿಗೆ ಮೀರಿ ತನ್ನರುವಿನಿಂದ ಅರಿದರಿದು ನೋಡಿದಾಗ ಪ್ರಭುವಿನ ತೋರಬಾರದ ಘನ ಎಂಬುದು ಇದ್ದಕ್ಕಿದ್ದಂತೆ ತನ್ನಿಂದ ತನಗೆ ಸಿದ್ಧವಾಗುವುದು. ಆಗ ತೋರಬಾರದ ಘನವು ತನ್ನಿರುವು ಆಗುವುದು. ಶ್ರೀಗುರುವಿನ ಇರವು ತೋರಬಾರದ ಘನವು ವಿಶ್ವವು ಅದುವೆ ಎಂದು ತನ್ನಿಂದ ತನಗೆ ವಿದಿತವಾಗುವುದು. ಆಗ ತಾನೆ ವಿಶ್ವ ತಾನೆ ಗುರು, ತಾನೆ ಲಿಂಗ, ತಾನು ತಾನೆ ಆದಲ್ಲಿ ಉಪಮಿಸುವುದೆಂತು.

ಹೇಳಲೆಂದೇನೊ ? ತೋರುವ ಘನವಾದಲ್ಲಿ ಹೇಳಲು ಬರುತ್ತಿತ್ತು. ತೋರಬಾರದ ಘನವಾಗಿರುವಲ್ಲಿ ಹೇಳಲೆಂದೇನೊ ? ಇದು ಕಾರಣ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗವ ತಂದು ಕೊಟ್ಟನಯ್ಯ ಸದ್ಗುರು ಎನ್ನ ಕರಸ್ಥಲಕ್ಕೆ ಎಂದು ಬಸವರಾಜದೇವರು ಹೇಳಿಹರು.

ಸದ್ಗುರು ಕರುಣಿಸಿದ ಘನವು, ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮಲಿಂಗ, ಈ ವಾಣಿಯಿಂದ ಕಥನ ಮಾಡುವುದು ಹೇಗೆ ? ಲಿಂಗವು ಮೌನ, ಅರಿಯ ಹೋದ ತಾನು ಮೌನವಾಗಿರುವಲ್ಲಿ ಅದನ್ನು ಮಾತಿನಿಂದ ವರ್ಣಿಸಬಹುದೆ ? ಲಿಂಗದ ರಹಸ್ಯ ತಿಳಿಯದವನು ಅದನ್ನು ಮಾತಿನಲ್ಲಿ ವರ್ಣಿಸಬಹುದು. ಲಿಂಗಕ್ಕೆ ಲಿಂಗವಾಗಿಹ ತನ್ನಿರುವು ತನಗೆ ಪ್ರಜ್ವಲಿಸಿ ಪ್ರಭು ತೋರಬಾರದ ಘನವೆ ತನ್ನಿರುವಾಗಿ ಹೇಳಲೆಂದೇನೊ ಎಂದು ತನ್ನ ಮೌನದ ಮೌನವಾಗಿಹ ರಹಸ್ಯವ ಸೂಚಿಸಿಹನು. ತೋರಬಾರದ ಘನ ತಿಳಿಯದ್ದರಿಂದ ಅದನ್ನು ತಿಳಿಪಡಿಸಲು ಶ್ರೀಗುರು ವೇದ

ವೇದಾಂತಗಳಿಗಸಾಧ್ಯವಾಗಿಹ ಅನುಪಮ ಲಿಂಗವ ಕರಸ್ಥಲಕ್ಕೆ ಕರುಣಿಸಿದ. ಅದನ್ನು ತಿಳಿಯ ಹೋಗಿ ತಿಳಿದವರು ಹೇಳಲೆಂದೇನೊ ಎಂದು ಬಿತ್ತರಿಸಿಹರು. ಕರಸ್ಥಲದ ಲಿಂಗ ತೋರಬಾರದ ಘನವಾಗಿ ಪ್ರಜ್ವಲಿಸಿತು.

ಸರಸಂದಾನದ ಪರಿಯಲ್ಲಿ ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಯ್ಯ, ಕೆಲವರು ಗುಹೇಶ್ವರ ಲಿಂಗವರಿಯಲು ಪ್ರಣವಾನುಸಂಧಾನ ಮಾಡುವರು. ಕೆಲವರು ಅರುವಿನ ಅನುಸಂಧಾನ ಮಾಡುವರು. ಕೆಲವರು ಸಚ್ಚಿದಾನಂದವೆಂದು ಜ್ಞಾನಸ್ವರೂಪನೆಂದು ಅನುಸಂಧಾನವ ಮಾಡುವರು. ತಮ್ಮ ಮನವಾಣಿ ಲಿಂಗದಲ್ಲಿ ಒಂದಾಗಲು ಬೆರೆಯಲು ಹವಣಿಸುವರು ಗುಹೇಶ್ವರ. ಲಿಂಗವದು ಕೂಡದಗಲದ ಘನವು ವಾಙ್ಮನೋತೀತ ವಾಗಿರುವಲ್ಲಿ ವಾಣಿಯಿಂದ ನುಡಿ ನುಡಿದು ಒಂದಾಗುವುದು ಹೇಗೆ ? ಹಾಗೆ ಮನದಿಂದ ನೆನೆ ನೆನೆದು ಬೆರೆಯುವುದು ಹೇಗೆ ? ಅಚಿಂತ್ಯಾತ್ಮನ ಚಿಂತಿಸುವುದು ಹೇಗೆ ? ಇದು ಕಾರಣ ಕಲ್ಪಿತನಾಗಿ ಕೂಡ ಹೋದರೆ ಅಸಾಧ್ಯವೆಂದು ಹೇಳಿಹರು.

**179**

**ಅರಿದಿಹೆನರಿದೆನೆಂದಡೆ ಅದೇಕೊ ಮುಂದೆ ಮರವೆ?**
**ನೀನರಿದೆನೆಂಬುದು ನಿನ್ನಲ್ಲಿ ಲೇಸಾಗಿ ಉಳ್ಳಡೆ ,**
**ನಿನ್ನರಿವೆಲ್ಲವ ಹರಿಹಂಚ ಮಾಡಿ ಹೋದಡರಿ ಮರುಳೆ!**
**ಸ್ವತಂತ್ರ ಘನದೊಳಗಿರ್ದು,ನಿಜವನರಿದೆನೆಂದಡೆ**
**ಮೂರ್ತಿ ಕಿರಿದಲ್ಲ, ನಿಲ್ಲು ಮಾಣು.**
**ಗುಹೇಶ್ವರನೆಂಬ ಲಿಂಗದ ಘನಘಟ್ಟಿಯನರಿವಡೆ**
**ನಿನ್ನರಿವೆಲ್ಲವ ಹರಿಹಂಚು ಮಾಡಿ,**
**ನೀನರಿ ಮರುಳೇ- ಅನುಭವಿಯಾದಡೆ.** ॥ 600 ॥

**ತಾತ್ಪರ್ಯ** : ಮಾನವರಲ್ಲಿ ಧರ್ಮಾತ್ಮ ಮಾನವ ಶ್ರೇಷ್ಠ, ಧರ್ಮಾತ್ಮರುಗಳಿಗಿಂತ ತಪಸ್ವಿ ತ್ಯಾಗಿ ಶ್ರೇಷ್ಠ, ಇವರುಗಳಿಗಿಂತ ಮುಮುಕ್ಷು ಶ್ರೇಷ್ಠ, ಮುಮುಕ್ಷುಗಿಂತ ಗುರು ಪುತ್ರರು ಶ್ರೇಷ್ಠ, ಇವರುಗಳಿಗಿಂತ ಆತ್ಮಾನಾತ್ಮ ವಿಚಾರವುಳ್ಳವ ಶ್ರೇಷ್ಠ, ಇವರುಗಳಿಗಿಂತ ಜೀವ ಪರಮಾತ್ಮರ ಏಕಾತ್ಮ ಜ್ಞಾನಿ ಶ್ರೇಷ್ಠ, ಇವರುಗಳಿಗಿಂತ ಸ್ವಾನುಭವಶ್ರೇಷ್ಠವೆಂದು ಬಿತ್ತರಿಸಿದುದು ನೋಡುವುಡೆ ಸ್ವಾನುಭವಿಯಾದಡೆ ಪ್ರಭುವಿನಂಥ ಮಹದರುವಿನ ಸ್ವಾನುಭವಿಯಾಗುವುದು.

ಪ್ರಭು ಅನುಭವಿಯಾದಡೆ ಅರಿದಿಹೆನರಿದೆನೆಂದಡೆ ಅದೇಕೊ ಮುಂದೆ ಮರವೆ ನೀನರಿದೆನೆಂಬುದು ನಿನ್ನಲ್ಲಿ ಲೇಸಾಗಿ ಉಳ್ಳಡೆ ನಿನ್ನರಿವೆಲ್ಲವ ಹರಿ ಹಂಚ ಮಾಡಿ ಹೋದಡರಿ ಮರುಳೆ : ಓ ಅನುಭವಿಯೆ ! ಅರಿದಿಹೆನರಿದೆನೆನ್ನುವಿ ಅರುವಿಂಗರುವಾಗಿದ್ದುದು ಅದು ನಿನ್ನ ಅರುವಿಂಗರಿಯಬಹುದೆ ? ಇದು ಕಾರಣ ನೀನರಿದೆನೆಂಬುದು ನಿನ್ನಲ್ಲಿ ಲೇಸಾಗಿ ಉಳ್ಳಡೆ ನಿನ್ನರಿವೆಲ್ಲವ ಹರಿಹಂಚ ಮಾಡಿ ಹೋದಡರಿ ಮರುಳೆ ಎಂದು ಬಿತ್ತರಿಸಿಹನು. ಪೂರ್ವದಿಂದಲೂ ಎಷ್ಟೊ ಮಹಾಂತರು ಜ್ಞಾನ

ಸಂಪನ್ನರು ಆಗಿರುವರು. ಈಗಲೂ ಇರುವರು, ಪ್ರಭುವಿನಂಥಹ ಜ್ಞಾನಸಂಪನ್ನರು ಸಿಕ್ಕುವುದು ವಿರಳ, ಅರುವಿನ ಜ್ಞಾನಸಂಪನ್ನರು ಬಹಳಷ್ಟು ಇದ್ದಾರೆ. ಇವರು ಶಬ್ದವೇದಿಗಳು ಇವರ ಜ್ಞಾನ ಮರವು ಕಂಡಿದೆ. ಅರುವು ಕಂಡಿದೆ, ಪೂರ್ವದಲ್ಲಿ ಮರವುಳ್ಳವನಾಗಿದ್ದು ಬಂಧನಕ್ಕೊಳಪಟ್ಟಿದ್ದ. ಈಗ ಅರುವುಳ್ಳವನಾಗಿ ಮುಕ್ತನಾಗಿಹೆನೆಂಬ ಉಪಮೆಗೊಳಪಟ್ಟ ಜ್ಞಾನ ಸಂಪನ್ನರು ಇವರು. ಅನುಪಮ ಜ್ಞಾನಸಂಪನ್ನರು ಇವರು ಹೇಗಾಗುವರು. ಸೀಮಿತ ಜ್ಞಾನ, ನಿಸ್ಸೀಮ ಜ್ಞಾನ ಹೇಗಾಗುವುದು.

ಅರುವಿಂಗರುವಾಗಿಹ ಜ್ಞಾನ ಸಂಪನ್ನರು ನಿಶಬ್ದವೇದಿಗಳು. ವೇದ ಶಾಸ್ತ್ರ ಆಗಮಂಗಳ ಹಂಗಿಗರಾಗದ್ದರಿಂದ, ಓ ! ಅನುಭವಿಯಾದಡೆ ನೀನರಿದೆನೆಂಬುದು ನಿನ್ನಲ್ಲಿ ಲೇಸಾಗಿ ಉಳ್ಳಡೆ ನಿನ್ನ ಅರಿವೆಲ್ಲ ಹರಿಹಂಚ ಮಾಡಿ ಹೋದಡರಿ ಮರುಳೆ ಎಂದು ಎಚ್ಚರಿಸಿಹನು.

ತನ್ನಿಂದ ತನ್ನ ಅರಿದುದು ತನ್ನಲ್ಲಿ ಸುಖ ಸ್ವರೂಪವಾಗಿರುವಲ್ಲಿ ನಿನಗಿದುರಾಗಿ ತೋರುವ ನಿನ್ನ ಅರಿವಿಂಗೆ ಮಹತ್ವ ಮಾಡದೆ ಆ ಅರಿವನ್ನು ತಾತ್ಸಾರ ಮಾಡು, ಧಿಃಕರಿಸು ಅದು ಅರುವಿನ ಲಕ್ಷಣಾತ್ಮಕದ್ದಿರಲಿ, ಭಾವದ್ದಿರಲಿ, ನೆನಹಿನದಿರಲಿ ಅದನ್ನು ತಾತ್ಸಾರವಾಗಿ ಕಾಣು, ಕೆಲಸಕ್ಕೆ ಬಾರದ್ದೆಂದು ತಿಳಿ, ಇದು ನಿಜದಿರುವು ತಿಳಿಯಲು ಬಹು ಪ್ರತಿಬಂಧಕ ಮಾಡುವ ನಿನ್ನಯ ವೈರಿ ಎಂದು ತಿಳಿ.

ವೈರಿಗಾರಾದರೂ ಆದರಾತಿಥ್ಯವ ಮಾಡಿ ಉಪಚರಿಸುವರೆ ? ಅವನು ತನ್ನ ನಾಶ ಮಾಡ ಬಂದ ವಿರೋಧಿ. ಅವನ ಮೋಸದ ಮಾತಿಗೆ ಒಪ್ಪುತ್ತಾರೆಯೆ ? ಹಾಗೆ ಚಿದಹಮ್ಮಿನ ಜ್ಞಾನಕ್ಕೆ ಮೋಸ ಹೋಗಬಾರದು, ಅದು ತತ್ವಮಸಿ ಇರಲಿ, ಅಯಮಾತ್ಮಬ್ರಹ್ಮವಿರಲಿ ಪ್ರಜ್ಞಾನಂ ಬ್ರಹ್ಮವಿರಲಿ, ಕೊನೆಗೆ ಅಹಂಬ್ರಹ್ಮಾಸ್ಮಿ ಇರಲಿ, ಸರ್ವಂಕಲ್ವಿದಂಬ್ರಹ್ಮ, ನಿಃಶಬ್ದಂ ಬ್ರಹ್ಮ ಮುಚ್ಯತೆ ಎಂಬ ಜ್ಞಾನ ನುಡಿಗೊಳಪಟ್ಟಿರಬಾರದು. ಇವುಗಳಿಂದ ನುಡಿಗೆಡೆಗೊಡದ ಘನದಿರುವು ತನ್ನೊಳ ಪ್ರಜ್ವಲಿಸಬೇಕು ಇದು ತನಗಿದುರಾಗಿ ತೋರುವ ಅರಿವೆಲ್ಲವ ಹರಿಹಂಚಮಾಡಿ ತನ್ನನರಿದ ಹಿರಿಮೆಯು. ಇದರಿಂದ ದೇಹಿಗೆ ದೇಹಿಯಾಗಿರ್ಪುದರ ಭೇದವ ತಿಳಿಯುವನು. ಆಗ ಅರುವಿಂಗರುವಾಗಿಹ ತನ್ನಿರುವು ತನಗೆ ವಿದಿತವಾಗುವುದು. ಇದಲ್ಲದೆ ತನ್ನ ಅರಿಯದರುವು ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ ಅರುವು ಅರುವಲ್ಲ, ಇಲ್ಲದ ಗುರು, ಇಲ್ಲದ ಲಿಂಗ, ಕಲ್ಪಿತಕ್ಕೆ ಅರುವಹುದೆ ? ತನ್ನಿಂದ ತಾನು ಅರಿವುಡೆ ಅರುವು ಗುಹೇಶ್ವರ ಎಂಬ ಅನುಭವ ತನ್ನಿಂದ ತನಗೆ ಹೊರ ಹೊಮ್ಮಿ ಪ್ರಕಟವಾಗಬೇಕು. ಆಗ ಬೋಧ, ಅಬೋಧ, ಬೋಧಾಬೋಧಕ್ಕೂ ಮೀರಿ ನಿಲ್ಲುವನು. ಆಗ ತಾನಾರೆಂಬ ತನ್ನಿರುವು ತನ್ನಿಂದ ತನಗೆ ವಿದಿತವಾಗಿ ಮಿಗೆ ಮಿಗೆಯಾಗಿಹ ಮೀಸಲ ತತ್ವವೆ ಪ್ರಜ್ವಲಿಸುವಲ್ಲಿ ನುಡಿಗೊಳಪಟ್ಟ ಅರುವು ಸೋಹಂ ಆಗಿರಲಿ, ಚಿದಹಂ ಆಗಿರಲಿ, ದಾಸೋಹಂ ಆಗಿರಲಿ, ಸರ್ವಂಕಿಲ್ವಿದಂಬ್ರಹ್ಮವೆನ್ನುವ ಸರ್ವಾತ್ಮವಾಗಲಿ. ನಿಶಬ್ದಂ ಬ್ರಹ್ಮ ಮುಚ್ಯತೆ ಎನ್ನುವ ನುಡಿಗಳೆಲ್ಲವು ತನ್ನ ನೇರವಾಗಿ ಅರಿಯದನುಡಿಗಳು ಎನಿಸಿ ಶಬ್ದಮುಗ್ಧನಾಗುವನು. ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲನೋಡಾ ಅರಿದ ಬಳಿಕ ಬ್ರಹ್ಮವೆಂಬುದು ವಂಧ್ಯಾಪುತ್ರ ನೋಡಾ ಅರಿದ ಬಳಿಕ ಬ್ರಹ್ಮವೆಂಬುದು ಕಪಿಲಸಿದ್ಧ

ಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧ ನೋಡಾ, ಇದು ತನ್ನಿಂದ ತಾನರಿದ ಸಂಕೇತವು ಸ್ವಮಹಿಮೆಯು. ಅಲ್ಲಿ ಶೃತಿಗಳು ಸ್ಮೃತಿಗಳು ತನ್ನನ್ನು ಬೆಳಗವು, ತಾನೆ ನಿರಂತರ ಬೆಳಗುಳ್ಳ ಘನವಾಗಿರುವಲ್ಲಿ ತನ್ನ ಹೊರತು ಅನ್ಯ ಯಾವುದು ಇಲ್ಲದಿರುವುದರಿಂದ ಶೃತಿ ಸ್ಮೃತಿಗಳು ತನ್ನನರಿದ ಬಳಿಕ ಮೃಗಜಲವು ವಂಧ್ಯಾಪುತ್ರವಾಗಿಹವು. ಇದು ಕಾರಣ ನುಡಿಗೊಳಪಟ್ಟ ಬ್ರಹ್ಮವು ತನ್ನಿರುವು ಆಗವು ಅದಕ್ಕಾಗಿ ಪ್ರಭುದೇವ ನಿನ್ನರಿವೆಲ್ಲ ಹರಿಹಂಚ ಮಾಡಿ ಹೋದಡರಿ ಮರುಳೆ ಎಂದು ಬಿತ್ತರಿಸಿಹನು.

ಸ್ವತಂತ್ರ ಘನದೊಳಗಿದ್ದು ನಿಜವನರಿದೆನೆಂದಡೆ ಮೂರ್ತಿಕಿರಿದಲ್ಲ ನಿಲ್ಲು ಮಾಣು: ಸ್ವತಂತ್ರ ಘನ, ಘನವದು ಸ್ವತಂತ್ರ ಕಲ್ಪಿತ ಅರುವು, ಸ್ವತಂತ್ರ ಘನವಾಗದು, ಆವುದು ಕಲ್ಪಿತ ಅರುವುವಾಗದು ಅದು ತನ್ನದಾದ ಘನ, ತಾನೆ ತಾನಾದುದು ಇದು ತನ್ನಿಂದ ತನ್ನನರಿದ ಇರುವಿನ ಅರಿವು ಅದು ಸ್ವತಂತ್ರ ಘನ ತಾನೆ, ತಾನು ನಾನೆಂಬುದಕ್ಕೂ ತೆರಹಿಲ್ಲದ ಘನ, ಇದು ನಿಜವು, ನಿಃಶಬ್ದವೇದ ತಾನು ಅದುವೆ, ನಿಜವನರಿದೆನೆಂದಡೆ ಮೂರ್ತಿ ಕಿರಿದಲ್ಲ, ನಿಲ್ಲು ಮಾಣು, ನಿಜವನರಿದುದು ಸಣ್ಣ ವಿಷಯವಲ್ಲ ಅರಿತವನು ಸಾಮಾನ್ಯವೆ ? ಅಸಾಧ್ಯವ ಸಾಧಿಸಿದವಂಗೆ ಏನನ್ನಬೇಕು, ಮುಟ್ಟಬಾರದುದು ಮುಟ್ಟಿದವಂಗೆ ಏನನ್ನಬೇಕು, ಸಹಜವೆನ್ನದೆ ನಿಜವೆನ್ನದೆ ಅಚಲನೆನ್ನದೆ ಅಖಂಡನೆನ್ನದೆ ಶೂನ್ಯನೆನ್ನದೆ, ನಿಶೂನ್ಯವೆನ್ನದೆ ಏನೂ ಎನ್ನದೆ ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು, ನಿಜವರಿದುದು ಅವರ್ಣಿಯವು ಯಾರು ನಿಜವರಿತಿಹರು ಅವರು ಅಪ್ರತಿಮಗಮ್ಯನು ಅಂತಪ್ಪ ಮೂರ್ತಿ ಪೂಜ್ಯರ ಪೂಜ್ಯ ಆ ಮಹಾಂತ ಮುನ್ನ ಮುನ್ನಲಾದ ಮೂರ್ತಿ ತನ್ನಿಂದ ತಾನಾದುದು ಲಿಂಗದಲ್ಲಿ ಉದಯವಾದ ಲಿಂಗ ಘನವು. ಅನುಪಮ ಮೂರ್ತಿ ಅಲ್ಲಿ ಹೊರ ಉಪಾಧಿಯ ನೋಡಬಾರದು, ಶೃತಿಗಗೋಚರವಾಗಿಹ ವಸ್ತು, ಅಲ್ಲಿ ವಾಙ್ಮನೋತೀತವಾದ ಘನದಿರುವೆ ಥಳ ಥಳಿಸಿ ಬೆಳಗುಳ್ಳದ್ದಾಗಿ ಬೆಳಗುವಲ್ಲಿ ಅದನ್ನು ಕಿರಿದಾಗಿ ಕಾಣುವುದು ಬಹುದೋಷ ನೋಡಾ.

ಗುಹೇಶ್ವರನೆಂಬ ಲಿಂಗದ ಘನ ಘಟ್ಟಿಯನರಿವುಡೆ ನಿನ್ನರಿವೆಲ್ಲ ಹರಿಹಂಚ ಮಾಡಿ ನಿನ್ನ ನೀನರಿ ಮರುಳೆ:

ಅನುಭವಿಯಾದಡೆ ಗುಹೇಶ್ವರನೆಂಬ ಲಿಂಗದ ಘನ ಘಟ್ಟಿ ಅದು ಅರಿಯದರುವು, ಅದು ಅಚಲಿತವು. ಅಂತಪ್ಪ ಅಚಲಿತವಾಗಿಹ ಘನ ಘಟ್ಟಿಯ ಅರಿತವರು ಎಂದಲ್ಲಿ ನಿನಗಿದುರಾಗಿ ತೋರುವ ಅರಿವೆಲ್ಲವು ಅಂದರೆ ನಾಹಂ, ಕೋಹಂ, ಸೋಹಂ, ಚಿದಹಂ, ದಾಸೋಹಂ ಎಂಬ ನಿನ್ನರಿವೆಲ್ಲ ತಾತ್ಸಾರ ಮಾಡು ಧಿಃಕರಿಸು ಇವುಗಳಿಗೆ ನೀನೆ ಪ್ರತಿಯಾಗಿ ಥೂ, ಛೀ ಹಾಕು, ಈ ಸೋಹಂ, ಚಿದಹಂ ಕೆಲಸಕ್ಕೆ ಬಾರದ ನಾಹಂ ಕೋಹಂ ಎಂದು ಹೇಗೆ ಅರಿತಿರುವೆಯೋ ಹಾಗೆ ಸೋಹಂ ಚಿದಹಂ ದಾಸೋಹಂ ಶೃತಿಗಳಿಂದ ಬಂದ ಹೆತ್ತರಿವುಗಳು ಕೆಲಸಕ್ಕೆ ಬಾರದವ ಎಂದು ತಿಳಿದು ನಿನ್ನ ನೀನರಿ ಮರುಳೆ ಅನುಭವಿಯಾದಡೆ. ಏಕೆಂದರೆ ಗುಹೇಶ್ವರನೆಂಬ ಲಿಂಗದ ಘನಘಟ್ಟಿಯನರಿದವರೆಲ್ಲ ಪ್ರಭುವಿನ ಸಂದೇಶದಂತೆ ಕಲ್ಪಿತ ಅರಿವುಗಳನ್ನೆಲ್ಲ ತಾತ್ಸಾರ ಮಾಡಿದವರು ಅಲ್ಲಿ ನಾನೆಂಬುದಕ್ಕಿಂಬಿಲ್ಲ ನೀನೆಂಬುದಕ್ಕಿಂಬಿಲ್ಲ, ಭಾವಕ್ಕೆಡೆಗೊಡದಿಹ ನಿಃಶಬ್ದವೇದಿಗಳು ಗುಹೇಶ್ವರನೆಂಬ ಲಿಂಗದ ಘನ ಘಟ್ಟಿಯನರಿದವರು ಅಚಲಿತ ಲಿಂಗವರಿತವರು ತಾನೆ

ತಾನಾಗಿ ನಿಂತ ನಿಲುವುಳ್ಳವರು. ಮನ ಮೇರೆದಪ್ಪಿದ ಅನುಪಮರು, ಅರಿಯಬಾರದ ಘನವರಿತವರು ಘನ ಘಟ್ಟಿಯ ಅರಿತವರು ಎಂದು ಹೇಳಿದೆ.

**180**

**ತನ್ನರಿದವಂಗೆ ಇದಿರೆಂಬುದಿಲ್ಲ ,ತನ್ನರಿಯದವಂಗೆ ಇದಿರೆಂಬುದುಂಟು.**
**ಅರಹು ಮರಹು ಕುರುಹಳಿಯಿತ್ತು, ಬೆರಗಾಯಿತ್ತು.**
**ಬೆರಗು ಬೆರಗಿನೊಳಗೆ ಕರಿಗೊಂಡಿತ್ತು ಇದೇನೊ ?**
**ಭ್ರಾಂತು ಭ್ರಾಂತನೆ ನುಂಗಿ**
**ಗುಹೇಶ್ವರ ಭವಿಯ ಬೆಂಬತ್ತಿ ಭವಿಯಾದ ಕಾರಣ!** ॥ 604 ॥

**ತಾತ್ಪರ್ಯ** : ತನ್ನನರಿದವಂಗೆ ಇದಿರೆಂಬುದಿಲ್ಲ : ಆರು ತನ್ನ ಅರಿತಿಹರು ಅವರಿಗೆ ತನಗಿಂತನ್ಯವಾಗಿ ತೋರಿದುದಿಲ್ಲ, ತನ್ನನರಿದ ಮಹಾಂತಂಗೆ ಆನೆಂಬುದಿಲ್ಲ ನೀನೆಂಬುದಿಲ್ಲ ತಾನಿಲ್ಲ ತಾನರಿದ ಬಳಿಕ ಏನೂ ಇಲ್ಲ, ಇಲ್ಲದುದು ಇಲ್ಲದುದು ಎಲ್ಲಿಪ್ಪುದು ಇಲ್ಲಾದುದಿಲ್ಲಾದುದೆಂತಿಪ್ಪುದು ಅನುವನರಿದು ತನುವ ಮರದಡೆ ಭಾವರಹಿತ ಗುಹೇಶ್ವರ. ತನ್ನ ಅರಿದವಂಗೆ ತನಗಿದುರಾಗಿ ತೋರಿದುದು ಇಲ್ಲವಾಗಿದೆ. ಆ ಮಹಾಂತಂಗೆ ನಾನೆಂಬ ಅಹಂಕಾರವೂ ಇಲ್ಲ, ನೀನೆಂಬ ನಿರಹಂಭಾವವೂ ಇಲ್ಲ, ನಾನೀನೆಂಬುದು ನಷ್ಟವಾದುದರಿಂದ ದೇಹ ನಾನೆಂಬುದಿಲ್ಲ, ದೇಹಿ ನಾನೆಂಬುದಿಲ್ಲ, ಸೋಹಂ ಎಂಬುದಿಲ್ಲ, ಚಿದಹಂ ಎಂಬುದಿಲ್ಲ, ದಾಸೋಹಂ ಎಂಬುದಿಲ್ಲ, ಅಹುದಾದುದಿಲ್ಲ, ಅಲ್ಲಾದುದಿಲ್ಲ, ಸತ್ ಎಂಬುದಿಲ್ಲ ಅಸತ್ ಎಂಬುದಿಲ್ಲ, ಚಿತ್ ಎಂಬುದಿಲ್ಲ, ಅಚಿತ್ ಎಂಬುದಿಲ್ಲ ಆನಂದ ಎಂಬುದಿಲ್ಲ ನಿರಾನಂದ ಎಂಬುದಿಲ್ಲ ನಿತ್ಯನೆಂಬುದಿಲ್ಲ ಅನಿತ್ಯನೆಂಬುದಿಲ್ಲ ಪೂರ್ಣನೆಂಬುದಿಲ್ಲ ಅಪೂರ್ಣನೆಂಬುದಿಲ್ಲ ಸಂಗಿ ಎಂಬುದಿಲ್ಲ, ನಿಸ್ಸಂಗಿ ಎಂಬುದಿಲ್ಲ, ಪಿಂಡಾಂಡವೆಂಬುದಿಲ್ಲ ಬ್ರಹ್ಮಾಂಡನೆಂಬುದಿಲ್ಲ, ಬಂಧವೆಂಬುದಿಲ್ಲ, ಮೋಕ್ಷವೆಂಬುದಿಲ್ಲ, ಮರವೆಂಬುದಿಲ್ಲ, ಅರುವೆಂಬುದಿಲ್ಲ ಸಮತೆ ಸಯವಾದವಂಗೆ ಅರುವು ಮರವುಗಳುಂಟೆ ? ಕಲ್ಪಿತವೆಲ್ಲವು ಇಲ್ಲದುದು ಅಕಲ್ಪಿತ ಘನದಲ್ಲಿ ಕಲ್ಪಿತದ ಕುರುಹಾಗಲಿ ಕುರುಹಿನ ನಾಮ ರೂಪಂಗಳು ಇಲ್ಲ, ಇತ್ತ ಕಲ್ಪಿತವಾದ ಪರಮಾರ್ಥವೂ ಇಲ್ಲ, ಈ ಇಲ್ಲೆಂಬುದು ಇಲ್ಲವಾಗಿರುವಲ್ಲಿ ಇದು ಇದ್ದುದೆಂದು ? ಇಲ್ಲದುದು ಇದು ಹೇಗೆ ಇತ್ತು ಎಂತು ಇತ್ತು ? ತನ್ನನರಿದವಂಗೆ ಅಹಮತ್ವ ನಷ್ಟವಾಗುವುಡೆ ತಾನೆ ತಾನು ಇದು ಕಾರಣ ತನ್ನನರಿದವಂಗೆ ಇದಿರೆಂಬುದಿಲ್ಲವೆಂದು ಹೇಳಿಹರು.

ತನ್ನ ನರಿಯದವಂಗೆ ಇದಿರೆಂಬುದುಂಟು : ತನ್ನನರಿಯದವರು ಇವರಾರು ? ಇವರಿಗೆ ಇದಿರೆಂಬುದುಂಟು ಪ್ರಥಮ ವೇದಿಗಳೆಲ್ಲರೂ ಗತಿಯಲ್ಲಿ ಸಿಲುಕಿದರು. ಅತೀತ ಅನಾಗತರೆಂಬುವರೆಲ್ಲರೂ ಮತಿಯಲ್ಲಿ ಸಿಲುಕಿದರು, ಶೃತಿವಂತರೆಲ್ಲ ಆಗಮದಲ್ಲಿ ಸಿಲುಕಿದರು. ಇವರು ತನ್ನನರಿಯದವರು. ವೇದದಲ್ಲಿ ಮೂರು ಭಾಗ ಉಂಟು. ಒಂದು ಕರ್ಮ ಮತ್ತೊಂದು ಉಪಾಸನಾ, ಇನ್ನೊಂದು ಜ್ಞಾನ ಕಾಂಡ ಹೀಗೆ ಮೂರು ವಿಧದ ಜ್ಞಾನ ಉಂಟು. ಮೂರನೆ ಭಾಗದಲ್ಲಿಯ ಪ್ರಥಮ ವೇದಿಗಳೆಲ್ಲರೂ ಗತಿಯಲ್ಲಿ

ಸಿಲುಕಿದವರು. ಏಕೆಂದರೆ ಇವರಿಗೆ ಕರ್ಮಂಗಳಲ್ಲಿ ಶುಭಾಶುಭಂಗಳೆಂಬ ಭಾವ ಪ್ರಧಾನವಾಗಿದೆ. ಅಂತ್ಯದಲ್ಲಿ ಆವಭಾವದಿಂದುಕ್ತವಾಗಿಹ ಕರ್ಮದಲ್ಲಿ ತೊಡಗಿಹನು ಅವನಿಗೆ ಅದುವೆ ಗತಿಯೆಂದು ನಿಶ್ಚಯಿಸಿಹರು. ಇವರಿಗೆ ಕರ್ಮದಲ್ಲಿ ಬ್ರಹ್ಮಾರ್ಪಣವು ಬಹುಶ್ರೇಷ್ಠವಾಗಿಹುದು. ಶ್ರೇಷ್ಠವಾಗಿದ್ದರೂ ಅಡ್ಡಿ ಇಲ್ಲ, ಇವರು ಅರ್ಪಣ ರಹಸ್ಯವು ಅರಿತವರಲ್ಲ ಇತ್ತ ಬ್ರಹ್ಮವರಿತವರಲ್ಲ, ಅರ್ಪಣ ಮಾಡುವ ತಾನಾರು ಎಂಬುದು ತಿಳಿದವರಲ್ಲ ತಿಳಿಯದೆ ಮಾಡುವ ಅಜ್ಞ ಕರ್ಮ, ಅದು ಗತಿಗೊಳಪಟ್ಟಿದೆ ಇದು ಕಾರಣ ಇವರು ತನ್ನ ಅರಿಯದವರು ಎಂದು ಹೇಳಿದೆ.

ಅತೀತ ಅನಾಗತರೆಂಬುವರೆಲ್ಲರು ಮತಿಯಲ್ಲಿ ಸಿಲುಕಿದರು. ಇವರಿಗೆ ವೇದಾತೀತ, ಭಾವಾತೀತ, ತ್ರಿಗುಣಾತೀತ, ಅವಸ್ಥಾತೀತ ನಾದಬಿಂದು ಕಲಾತೀತ, ವಾಙ್ಮನೋತೀತವೆನ್ನುವ ಮತಿಯೆ ಪ್ರಧಾನವಾಗಿರುವುದರಿಂದ ಇವರು ತನ್ನನರಿಯದವರು ಇದಲ್ಲದೆ ತನ್ನ ಸ್ವರೂಪಕ್ಕೆ ಅತೀತವೆಂಬ ಮತಿಯು ಇದಿರಾಗಿರುವುದು ಎಂಬುದನರಿಯರು ಭವಿಷ್ಯ ಹೇಳುವರು ಮತಿಯಲ್ಲಿ ಸಿಲುಕಿದರು.

ಶೃತಿವಂತರಿಗೆಲ್ಲ ಮಹಾವಾಕ್ಯಗಳು ಒಪ್ಪಿಗೆಯಾಗಿ ಅವುಗಳೆ ಇವುಗಳ ಸ್ವರೂಪವಾಗಿಹವು. ಇವರೆಲ್ಲ ಶಬ್ದಬ್ರಹ್ಮರು, ಇವರಿಗೆ ಶ್ರವಣ ಮನನನಿಧಿಧ್ಯಾಸವೆ ಬ್ರಹ್ಮವಾಯಿತ್ತು. ಇದಲ್ಲದೆ ಜ್ಞಾನಕ್ರಿಯೆದಿಂದೊಡಗೂಡಿದ ಅನುಭವ ಇವರ ಇರವು ಅರಿವಾಯಿತ್ತು ಇವರು ತನ್ನನರಿಯದವರು. ಇವರಿಗೆ ವೇದ ಇದಿರಾಗಿ ಕಂಡುದುಂಟು. ಮಹಾವಾಕ್ಯಗಳು ಇದಿರಾಗಿ ಕಂಡುದುಂಟು. ಇದಲ್ಲದೆ ವೃತ್ತಾತ್ಮಕ ಬ್ರಹ್ಮಾಕಾರವು ತಮ್ಮ ಸ್ವರೂಪವಾದ್ದರಿಂದ ಇದಿರೆಂಬುದುಂಟು.

ಅರುಹು ಮರಹು ಕುರುಹಳಿಯಿತ್ತು ಬೆರಗಾಯಿತ್ತು. ಈ ಅರುಹು ಮರಹು ಕುರುಹಳಿದುದು ಅದಾರಿಗೆ ? ನುಡಿದು ನಿಶಬ್ದನಾಗಿಹ ಘನವಂತ ನಡೆದು ನಿರ್ಗಮನಿಯಾಗಿಹ ಅಚಲಿತ ಈ ಮಹಾಂತ ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿರ್ಪ ಘನಲಿಂಗ, ಅರಹು ಎಂಬುದು ಅಳಿದಿದೆ. ಮರಹಿನ ಕುರುಹು ಅಳಿದಿದೆ. ಪ್ರಪಂಚ ಸತ್ಯಮಿಥ್ಯೆ ಎಂಬ ಮರವಿನ ಕುರುಹು ಅಳಿದಿದೆ. ಪರಮಾರ್ಥ ಸತ್ಯ ಮಿಥ್ಯೆ ಎಂಬ ಅರುವಿನ ಕುರುಹು ಅಳಿದಿದೆ ಬೆರಗಾಯಿತ್ತು. ಇದೆಂಥ ಬೆರಗಾದುದು ಅರಿಯಲಿಲ್ಲದ ಅರುವೆ ತನ್ನಯ ಇರುವಾದುದರಿಂದ ಬೆರಗಾಯಿತ್ತು. ಇತ್ತ ನಾಮರೂಪಗಳಿಂದುಕ್ತವಾದ ದೃಶ್ಯವು ಕಾಣದಾಗಿದೆ. ಇತ್ತ ಅಸ್ತಿ, ಭಾತಿ, ಪ್ರಿಯವೆಂಬ ಲಕ್ಷಣಾತ್ಮಕವಾದ ಅರುವು ಕಾಣದಂತಾಗಿದೆ. ಎಲ್ಲಿ ಅರಿಸಿಕೊಳ್ಳುವ ಅನಾತ್ಮವದೆ, ಅಲ್ಲಿಯೆ (ಅರಿಸಿಕೊಳ್ಳುವ) ಅರಿಯುವ ದೃಕ್‌ರೂಪ ಅರಿವು ಇದೆ. ಆವಲ್ಲಿ ಅರಿಸಿಕೊಳ್ಳುವ ಅನಾತ್ಮವಿಲ್ಲ ಅಲ್ಲಿ ಅರಿಯುವ ದೃಕ್ ರೂಪ ಆತ್ಮನೆಂಬುದಿಲ್ಲ, ಇಲ್ಲಾದುದಿಲ್ಲಾದುದು ಎಂದಿಪ್ಪುದು ತಾನೊಂದೆ ಸತ್ಯವು ತಾನು ನುಡಿಗೆಡೆಗೊಡದ ಘನನಾಗಿರುವುದರಿಂದ ತನ್ನ ಕಂಡು ಬೆರಗಾಯಿತ್ತು ಎಂದು ಹೇಳಿಹರು.

ಬೆರಗು ಬೆರಗಿನೊಳಗೆ ಕರಿಗೊಂಡಿತ್ತಿದೇನೊ: ಕರಿಗೊಂಡುದು ಇದೆಂಥ ನೆಲೆಯಿಲ್ಲದ ನಿಲುವು. ಅರಿಯಲಿಲ್ಲದರುವು ಅವಗ್ರಹಿಸಿತ್ತಾಗಿ ಅರಿಯಲಿಲ್ಲ ಮರೆಯಲಿಲ್ಲ ನಿಜವನಿಂದಿತ್ತಾಗಿ ನಿರ್ನಾಮವಾಯಿತ್ತಾಗಿ ನಿಷ್ಪತ್ತಿಯಾಯಿತ್ತು. ಅಗಮ್ಯದಲ್ಲಿ ಗಮನಗೆಟ್ಟಿತು.

ನಿಂದಲ್ಲಿ ನಿರಾಳವಾಯಿತ್ತು. ಕೂಡಲ ಸಂಗಮದೇವರಲ್ಲಿ ಶಬ್ದಮುಗ್ಧವಾಯಿತ್ತು.

ಬೆರಗು ? ಇದು ತನ್ನ ಕಂಡ ಬೆರಗು ಅರಿಯಲಿಲ್ಲದರುವು ತನ್ನಿರುವು ಆಗಿಹ ಬೆರಗು, ಇಲ್ಲಿಯೆ ನಿಶ್ಚಲವಾಗಿ ನಿಂತಿತೆ ? ಇದು ಮನಕ್ಕೆ ಮೇರೆದಪ್ಪಿ ನಿಂತ ನಿಶ್ಚಲತೆ ಇದುವೆ ನಿಜದಲ್ಲಿದ್ದ ನಿಶ್ಚಿಂತತೆ ಇಲ್ಲಿ ಅರಿತುದೇನು ? ಮರೆತುದೇನು ? ತಾನೆ ತಾನಾಗಿ ನಿಂತುದು ಅದನೆಂತುಸುರುವುದು, ನಾಮಂಗಳೆಲ್ಲ ನಿರ್ನಾಮವಾಗಿರುಲ್ಲಿ ಶಬ್ದಸಂದಣಿಗೆ ಅವಕಾಶವೇತರದು, ಅಲ್ಲಿ ಪರಮ ಶಾಂತಿಯು ನೆಲೆಯೂರಿಹುದು. ವಾಙ್ಮನೋತೀತವಾದ ತನ್ನಿರುವು ಕರಿಗೊಂಡಿರುವುದರಿಂದ ಬೆರಗು ಬೆರಗಿನೊಳಗೆ ಕರಿಗೊಂಡಿತ್ತಿದೇನೊ ? ಎಂದು ಹೇಳಿಹರು.

ಭ್ರಾಂತು ಭ್ರಾಂತನೆ ನುಂಗಿ ಗುಹೇಶ್ವರ ಭವಿಯ ಬೆಂಬತ್ತಿ ಭವಿಯಾದ ಕಾರಣ : ತನ್ನನರಿದ ಮಹಾಂತ ಭ್ರಾಂತು ಭ್ರಾಂತನೆ ನುಂಗಿಹನು, ಗುಹೇಶ್ವರ ಭವಿಯ ಬೆಂಬತ್ತಿ ಭವಿಯಾದ ಕಾರಣ, ತೋರುವುದೆಲ್ಲವು ಭ್ರಾಂತು, ತಾನು ತೋರಬಾರದ ಘನವಿದ್ದು, ತೋರಿ ಕೆಡುವುದು ತಾನಾದುದು ಭ್ರಾಂತಿ. ಈ ತೋರಿಕೆಡುವುದು ನಾನಾ ಮುಖವಾಗಿದೆ. ಇದನ್ನು ಸರಿಯಾಗಿ ತಿಳಿಯದೆ ತಪ್ಪು ತಿಳಿದುದು ಇದೊಂದು ಭ್ರಾಂತಿ. ಈ ಭ್ರಾಂತಿಯು ದ್ವಿವಿಧವಾಗಿದೆ. ಒಂದು ಸಾಕಾರ, ಒಂದು ನಿರಾಕಾರ, ಒಂದು ಆಹ್ವಾನ, ಒಂದು ವಿಸರ್ಜನೆ, ಒಂದು ವ್ಯಾಕುಳ, ಒಂದು ನಿರಾಕುಳ, ಉಭಯಕುಳ ರಹಿತನು ಗುಹೇಶ್ವರಾ ನಿಮ್ಮ ಶರಣ ನಿಶ್ಚಿಂತ.

ಆರು ಉಭಯಕುಳರಹಿತರು, ಅವರು ಸಾಕಾರ ನಿರಾಕಾರವೆಂಬುದಕ್ಕೂ ಮೀರಿದವರು ಪ್ರಪಂಚ ಪರಮಾರ್ಥವೆಂಬುದಕ್ಕೂ ಮೀರಿದ ಅನುಪಮರು. ಅವರು ಭ್ರಾಂತು ಭ್ರಾಂತಿಯನ್ನೆ ನುಂಗಿದವರು. ಆರಿಗೆ ಅರುವಿಂಗರುವಾಗಿಹ ಘನದಿರುವೆ ತನ್ನ ಇರುವಾದುದರಿಂದ ಸಾಕಾರವೆಂಬುದೊಂದು ಭ್ರಾಂತಿ, ನಿರಾಕಾರವೆಂಬುದೊಂದು ಭ್ರಾಂತಿ, ಆಹ್ವಾನವೆಂಬುದೊಂದು ಭ್ರಾಂತಿ, ವಿಸರ್ಜನವೆಂಬುದು ಭ್ರಾಂತಿ, ಅನಾತ್ಮವೆಂಬುದು ಭ್ರಾಂತಿ, ಆತ್ಮನೆಂಬುದು ಭ್ರಾಂತಿ, ತಮ್ಮ ಅರುವಿಂಗರುವಾಗಿಹ ಘನದಿರುವಿನಲ್ಲಿ ಇವೆರಡು ಕಾಣದುದರಿಂದ ಭ್ರಾಂತು ಭ್ರಾಂತನೆ ನುಂಗಿದುದು ಅನಾತ್ಮವೆಂಬ ಭ್ರಾಂತುವನ್ನು ಆತ್ಮನೆಂಬುದು ಭ್ರಾಂತು ನುಂಗಿತ್ತು. ಆತ್ಮನೆಂಬ ಭ್ರಾಂತನ್ನು ತನ್ನ ನಿಜದಿರುವು ನುಂಗಿತ್ತು. ಗುಹೇಶ್ವರ ಭವಿಯ ಬೆಂಬತ್ತಿ ಭವಿಯಾದ ಕಾರಣ, ಗುಹೇಶ್ವರನು ಭವಿಯು ಇವನ ಬೆಂಬತ್ತಿದ ಶರಣನು ಭವಿಯು, ಗುಹೇಶ್ವರನು ಅಜಾತನು ಈ ಅಜಾತ ರೂಪಿ ಭವಿಯ ಬೆಂಬತ್ತಿ ಶರಣನು ಅಜಾತನಾದ ಕಾರಣ, ಗುಹೇಶ್ವರನ ಅರಿಯ ಹೋಗಿ ತಾನು ಅದುವೆ ಆಗಿಹ ಶರಣ ಇದು ಕಾರಣ ಭವಿಯ ಬೆಂಬತ್ತಿ ಭವಿಯಾದ ಕಾರಣ ಎಂದು ಹೇಳಿಹರು.

**181**

**ಕೆಂಡದ ಗಿರಿಯ ಮೇಲೊಂದು, ಅರಗಿನ ಕಂಭವಿದ್ದಿತ್ತು ನೋಡಾಯ್ಯಾ.**
**ಅರಗಿನ ಕಂಭದ ಮೇಲೆ ಹಂಸೆಯಿದ್ದಿತ್ತು.**
**ಕಂಭ ಬೆಂದಿತ್ತು ಹಂಸೆ ಹಾರಿತ್ತು ಗುಹೇಶ್ವರಾ!** ॥ 605 ॥

**ತಾತ್ಪರ್ಯ** : *ಕೆಂಡದ ಗಿರಿಯ ಮೇಲೊಂದು ಅರಗಿನ ಕುಂಭವಿದ್ದಿತ್ತು ನೋಡಾ ಅಯ್ಯ* : ಕಲ್ಲು ಮಣ್ಣಿನಿಂದುಕ್ತವಾದ ಮೇಲೆತ್ತರವಾಗಿ ಕಾಣಿಸುವ ಗಿರಿಕಂಡವರುಂಟು ? ಕೆಂಡದಗಿರಿಕಂಡವರುಂಟೆ ? ಗಿರಿಯ ಮೇಲೆ ಕಬ್ಬಿಣದ ಕಂಬವಾಗಲಿ, ಸಿಮೆಂಟಿನ ಕಂಭವನೆಟ್ಟುದು ಕಂಡವರುಂಟು, ಅದರ ಮೇಲೆ ಹಂಸವೆಂಬ ಪಕ್ಷಿ ಇದ್ದುದು ಕಾಣಬಹುದು ಕೆಂಡದಗಿರಿ ಇದ್ದುದು ಆಶ್ಚರ್ಯ, ಅದರ ಮೇಲೆ ಅರಗಿನ ಕಂಭವಿದ್ದುದು ಆಶ್ಚರ್ಯ ಅಂತಹ ಕಂಭದ ಮೇಲೆ ಹಂಸವಿದ್ದುದು ಆಶ್ಚರ್ಯ ಕಂಭ ಬೆಂದು ಹಂಸಹಾರಿದುದು ಪರಮಾಶ್ಚರ್ಯ.

ಕೆಂಡದ ಗಿರಿ ? ಇದು ಮಾನವರಿಗೆ ಕಾಣದ ಗಿರಿ, ತಪಸ್ವಿ, ತ್ಯಾಗಿಗಳಿಗೂ ಕಾಣದ ಗಿರಿ, ಮನು, ಮುನಿಗಳಿಗೂ ಕಾಣದ ಗಿರಿ, ದ್ವೈತಿಗಳಿಗೂ ಕಾಣದ ಗಿರಿ, ಸಿದ್ಧರಿಗೂ ಸಾಧಕರಿಗೂ ಕಾಣದ ಗಿರಿ, ಲಿಂಗಾರ್ಚಕರಿಗೂ ಜಂಗಮಯ್ಯಗಳಿಗೂ ಕಾಣದಗಿರಿ, ಲಿಂಗಾಂಗ ಸಮರಸ ಜ್ಞಾನಿಯಾಗಿಹ ಶರಣಂಗೆ ಕಾಣುವಗಿರಿ. ಇದು ಕೆಂಡದ ಗಿರಿ. ಇದು ಕೆಂಡ ! ಪ್ರಪಂಚವ ದಗ್ಧಮಾಡಿದ ಕೆಂಡ, ಲಿಂಗವರಿತು ಅಂಗವ ಕಾಣಿಸದ ಕೆಂಡ, ಜಂಗಮವರಿತು ಸಂಸಾರವ ಕಾಣಿಸದ ಕೆಂಡ, ಪ್ರಸಾದವರಿತು ತನುವ ಕಾಣಿಸದ ಕೆಂಡ, ಈ ತ್ರಿವಿಧವರಿತು ಘನಕ್ಕೆ ಘನವಾದ ಕೆಂಡ ಈ ಕೆಂಡದ ಘನವ ಶೃತಿ ಸ್ಮೃತಿಗಳರಿಯವು.

ಕೆಂಡ ? ಇದು ಸುಜ್ಞಾನ ಸದ್‌ಜ್ಞಾನ ಭರಿತವಾಗಿಹ ಸುಜ್ಞಾನ, ಇದು ಅನುಪಮವಾಗಿಹ ಜ್ಞಾನ, ಈ ಪರಾತ್ಪರ ಜ್ಞಾನ ತರ್ಕವಲ್ಲ, ಸಮಾಧಿಯೋಗವೂ ಅಲ್ಲ, ಗುರೂಪದೇಶವೂ ಅಲ್ಲ, ಅದು ದೇಶಕಾಲಗಳಲ್ಲಿ ಒಂದು ಘಟನೆ ಅಲ್ಲ, ಅದು ಜ್ಞಾನದ ಸಹಜ ಸ್ಥಿತಿ, ಜ್ಞಾನ ಸ್ವರೂಪವೆ ತಾನಾಗಿಹ ಸಹಜವಾದ ದೃಢವಾದ ಆಕಾಶದಂತಿರುವ ತತ್ವ ಇದು ಕೆಂಡ, ಇದು ಶರಣ ರೂಪಿ ಕೆಂಡ, ಸುಜ್ಞಾನ ರೂಪಿ ಕೆಂಡ, ಈ ಕೆಂಡದ ದರ್ಶನ ತಪವ ಮಾಡಿದರಿಲ್ಲ, ಗಿರಿ ಗುಹೆಹೊಕ್ಕರಿಲ್ಲ, ಕಂದ ಮೂಲ ತಿಂದರಿಲ್ಲ ಪುಣ್ಯವುಳ್ಳ ಕಾಲಕ್ಕೆ ಶಿವನೊಲಿದಾಗ ಶರಣರ ಕೃಪೆಯಾದಾಗ ದರ್ಶನ.

ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದಿತ್ತು, ಸುಜ್ಞಾನ ರೂಪಿ ಕೆಂಡ, ಇದು ನಿಸ್ಸೀಮರ ಕೆಂಡ, ಅಖಂಡಿತ ನಿಲುವುಳ್ಳವರ ಕೆಂಡ, ಅಚಲಿತ ಜ್ಞಾನವಾಗಿಹ ಕೆಂಡ, ಇದು ಎಂಜಲ ಮಾತು ಸೇರದ ಜ್ಞಾನ. ಮಿಗೆ ಮಿಗೆ ಮೀಸಲವಾಗಿಹ ತತ್ವವ ಬಲ್ಲ ಸುಜ್ಞಾನರೂಪಿ ಕೆಂಡ ಇದು ಶರಣರೂಪಿ ಕೆಂಡ.

ಅಜ್ಞರಿಗಿದು ಚರಿಸ್ಯಾಡಿದಂತೆ ಕಾಣುವುದು. ಸುಜ್ಞರಿಗೆ ಅಚಲಿತವಾಗಿಹ ಘನವು. ಈ ಗಿರಿಯ ಮೇಲೆ ಕಂಭವಿದ್ದಿತ್ತು ನೋಡಾ ಅಯ್ಯ, ಆವಲ್ಲಿ ಸುಜ್ಞಾನರೂಪಿ ಕೆಂಡವದೆ ಅಲ್ಲಿ ಭರಿತಭಾವ ರೂಪಿ ಕಂಭವದೆ. ಎಲ್ಲಿ ರೂಪಲ್ಲಿಯೆ ಲಿಂಗಸ್ವಾಯತವಾಗಿಹ ಭಾವ. ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಗಿಹ ಭಾವ, ಎಲ್ಲಿ ಸೋಂಕಲ್ಲಿಯೆ ಲಿಂಗಸ್ವಾಯತವಾಗಿಹ ಭಾವ, ಎಲ್ಲಿ ಘ್ರಾಣವಲ್ಲಿಯೆ ಲಿಂಗ ಸ್ವಾಯತವಾಗಿಹ ಭಾವ, ಎಲ್ಲಿ ರಸವಲ್ಲಿಯೆ ಲಿಂಗಸ್ವಾಯತವಾಗಿಹ ಭಾವ, ಇದು ಏಕೋ ಭಾವವಾಗಿಹ ಅರಗಿನ ಕಂಭವಿದ್ದಿತ್ತು ನೋಡಾ, ಎಲ್ಲೆಲ್ಲೂ ಒಂದನ್ನೆ ಕಂಡ ಭಾವ, ಭರಿತ ಭಾವ, ಇದುವೆ ಅರಗಿನ ಕಂಭವಿದ್ದಿತ್ತು ಎಂದು ಹೇಳಿಹರು.

ತುಂಬಿದುದು ತುಳಕದು ನೋಡಾ ನಂಬಿದುದು ಸಂದೇಹಿಸದು ಒಲಿದುದು

ಓಸರಿಸದು ನೋಡಾ, ನೆರೆ ಅರಿದುದು ಮರೆಯದು ನೋಡಾ ಚೆನ್ನಮಲ್ಲಿಕಾರ್ಜುನಯ್ಯ. ನೀನೊಲಿದ ಶರಣಂಗೆ ನಿಸ್ಸೀಮ ಸುಖವಯ್ಯ. ಬಯಲು ತುಂಬಿದುದು ಅದು ತುಳಕದು, ಆವುದು ದೇಶ ಕಾಲವಸ್ತುಗಳಾಗದೆ ಅಖಂಡವಾಗಿಹುದು ಅದು ತುಂಬಿದುದು ಅದು ಪರಿಪೂರ್ಣವು ಇದನ್ನು ನಂಬಿದವರಿಗೆ ಅನುಮಾನವೇತರದು, ಸುಖ ಒಲಿಸಿಕೊಂಡವಂಗೆ ಬೇಸರವೇತರದು, ಅರುವಿಂಗರುವು ಚೆನ್ನಾಗಿ ತಿಳಿವುಡೆ ಮರೆಯದು, ಈ ಅರಗಿನ ಕಂಭವೆ ಅಖಂಡ ಭಾವ, ಎಲ್ಲೆಲ್ಲೂ ಒಂದನ್ನೆ ಕಂಡ ಭಾವವು.

ಇಂತಪ್ಪ ಅರಗಿನ ಕಂಭದ ಮೇಲೊಂದು ಹಂಸವಿದ್ದಿತ್ತು, ಇದು ಏಕೋಭಾವದ ಹಂಸ, ಇದು ಹಂಸಕ್ಕಿಂತ ಶ್ರೇಷ್ಠವಾದುದರಿಂದ ಪರಮಹಂಸವು. ಹಂಸವದು ಹಾಲು ನೀರು ಕೂಡಿಸಿ ಇಟ್ಟರೆ, ಹಾಲನ್ನೇ ಹೀರಿ, ನೀರು ಸೇವಿಸದು, ಇದರ ಸ್ವಭಾವ. ಈ ಪರಮಹಂಸ ಹಾಗಲ್ಲ ಇದು ಹಂಸಕ್ಕಿಂತಲೂ ಘನವಾದುದು, ಏಕೆಂದರೆ ಇದು ಹಾಲು ಸೇವಿಸುವುದೂ ಅಲ್ಲ, ನೀರು ಸೇವಿಸುವುದೂ ಅಲ್ಲ, ಇಂತಹ ಕೃತಕ ಹಾಲು ನೀರು ಸೇವಿಸುವ ಹಂಸ ಇದಲ್ಲ, ಇದು ಜ್ಞಾನಾಮೃತ ಸವಿಯುವ ಹಂಸವು.

ಹಂಸವದು ನಿತ್ಯಾನಿತ್ಯ ವಿವೇಕರೂಪಿ ಹಂಸವು. ಇದು ತೋರಿಕೆಡುವ ನಾಮರೂಪ ಸೇರದು, ಅಸ್ತಿ, ಭಾತಿ, ಪ್ರಿಯವಾಗಿರುವ ಲಕ್ಷಣಾತ್ಮಕ ಸಚ್ಚಿದಾನಂದ ಭಾವಸೇವಿಸುವುದರಿಂದ ಹಂಸವೆಂಬ ನಾಮ ಬಂದಿದೆ. ಇದಕ್ಕಿಂತಲೂ ಘನವಾದುದು ಪರಮ ಹಂಸವು ಇದು ಕೃತಕ ಹಾಲು, ಎರವಲ ಹಾಲು, ಎಂಜಲ ಹಾಲು ಸೇವಿಸುವ ಹಂಸವಲ್ಲ, ಇದು ಕೃತಕವಾಗಿರುವ ಹಾಲೆ ಸೇರದಿರುವಲ್ಲಿ ನೀರು ಯಾವಾಗ ಪ್ರೀತಿಸುವುದು ಹಾಗೆ ಇದು ನಿತ್ಯ ಇದು ಅನಿತ್ಯವೆಂಬ ವೃತ್ಯಾತ್ಮಕವಾಗಿಹ ಹಾಲು ಜ್ಞಾನವ ಸೇರದ ಹಂಸವಾಗಿರುವುದರಿಂದ ಪರಮ ಹಂಸವೆಂದು ಹೇಳಿದೆ. ಇದು ತನ್ನನರಿದುದರಿಂದ ಪರಮಹಂಸವೆಂದು ಹೇಳಿದೆ. ಈ ಪರಮಹಂಸವು ಸ್ವತಃ ಸಿದ್ಧವಾಗಿ ಇದ್ದಿತ್ತು ನಿರಾಲಂಬವಾಗಿ ನಿರಾಳವಾಗಿ ನಿಂದುದೆ ನಿಶ್ಚಿಂತವಾಯಿತ್ತು ನೋಡಾ ಅಯ್ಯ.

ಓ ಜಿಜ್ಞಾಸುಗಳೆ ! ನಿಮ್ಮದು ಅರು ಹೃದಯವಾದರೆ ನೋಡಿಕೊಳ್ಳಿ. ಅರು ಹೃದಯವಾದುದು ಅದು ಕೆಂಡದ ಗಿರಿ, ಅಲ್ಲಿ ಅಖಂಡ ಭಾವ, ಅಂಗ, ಲಿಂಗ ಒಂದಾದ ಭಾವಭರಿತ ಭಾವ, ಪೂರ್ಣಮದಃ ಪೂರ್ಣಮಿದಂ ಎಂದೆನ್ನುವ ಭಾವ, ಹೀಗೆ ನಿಸ್ಸೀಮ ಭಾವ ನಿಮ್ಮದು ಆಗಿದೆಯೋ ಹೇಗೆ ನೋಡಿಕೊಳ್ಳಿ. ಅದರ ಮೇಲೊಂದು ಪರಮಹಂಸವದೆ ನೋಡಾ ಅಯ್ಯ ಎಂದು ಎಚ್ಚರಿಸಿಹನು.

ಕಂಭ ಬೆಂದಿತ್ತು, ಹಂಸ ಹಾರಿತ್ತು, ಗುಹೇಶ್ವರಾ : ಕಂಭ ಎಲ್ಲಿಯವರೆಗೆ ಬೆಂದಿರುವುದಿಲ್ಲ ಅಲ್ಲಿಯವರೆಗೆ ಹಂಸವು ಕಂಭದ ಮೇಲೆಯೇ ಇದ್ದಿತ್ತು. ಆರಲ್ಲಿ ಭರಿತ ಭಾವರೂಪಿ ಕಂಭ ಬೆಂದಿದೆ, ಅಲ್ಲಿ ಹಂಸವು ಹಾರಿದುದು ಇದು ತನ್ನಿಂದ ತನ್ನಲ್ಲಿಯೆ ನೋಡಿಕೊಳ್ಳುವುದು ತಾನು ಎಲ್ಲಿಯವರೆಗೆ ಭಾವಭರಿತನಾಗಿಹನು, ಭಾವಪ್ರೇಮಿಯಾಗಿಹನು, ಭಾವಾಚಾರವುಳ್ಳವನಾಗಿಹನು, ಅಲ್ಲಿಯವರೆಗೆ ಕಂಭ ಬೆಂದಿರುವುದಿಲ್ಲ, ತಾನು ಭಾವಕ್ಕಗಮ್ಯನೆಂಬುದು ತನ್ನಿಂದ ತನಗದು ವಿದಿತವಾಗುವುದು. ಅಲ್ಲಿ ಕಂಭಬೆಂದಿರುವುದು ಅಲ್ಲಿ ಹಂಸ ಹಾರಿದುದು, ಅಂದರೆ ಎಲ್ಲಿ ಭಾವ ನಿಷ್ಪ್ರಯೋಜಕವಾಗಿದೆ ಅಲ್ಲಿ ಭಾವಕ್ಕಗಮ್ಯವಾಗಿಹ ತನ್ನಿರುವೆ ಅರುವೆಂದರಿದು

ಅರಿಯಲಿಲ್ಲದ ಅರುವು ಆಗಿಹುದೆ ಹಂಸವು ಹಾರಿತ್ತು ಎಂದು ಹೇಳಿಹರು.

**182**

**ಜ್ಞಾನದಿಂದ ನಿಮ್ಮ ನರಿದಿಹೆನೆಂದಡೆ:**
**ಅರುವಿಂಗೆ ಬಂದಾಗಲೆ ಕುರುಹು.**
**ಕುರುಹಿಂಗೆ ಕೇಡುಂಟು;**
**ಜ್ಞಾನವೆಂಬುದೇನು? ಮನೋಭೇದ!**
**ಇಂತಪ್ಪ ಜ್ಞಾನದ ಕೈಯಲ್ಲಿ ,**
**ಅರುಹಿಸಿಕೊಂಡಡೆ ನೀ ದೇವನಲ್ಲ**
**ಅರಿಯದಿದ್ದಡೆ ನಾ ಶರಣನಲ್ಲ,**
**ನೀ ದೇವ, ನಾ ಶರಣನೆಂತಾದೆ ಹೇಳಾ ಗುಹೇಶ್ವರಾ?** ॥ 1208 ॥

**ತಾತ್ಪರ್ಯ** : ಜ್ಞಾನದಿಂದ ನಿಮ್ಮನರಿದಿಹೆನೆಂದಡೆ ಅರುವಿಂಗೆ ಬಂದಾಗಲೆ ಕುರುಹು : ದೇವ, ದೇವ, ನಿಮ್ಮನರಿದಿಹೆನೆಂದಡೆ ನಿನ್ನ ಅದಾವ ಜ್ಞಾನದಿಂದ ಅರಿವುದು, ಕಾರ್ಯ ಕಾರಣನೆಂಬ ಕಲ್ಪಿತ ಮಾಡಿ ನಿನ್ನ ಅರಿದಿಹೆನೆಂದಡೆ ಅದು ಅರುವಿನ ಕುರುಹಿಂಗೊಳಪಟ್ಟಿತ್ತು. ಕಾರಣ, ಕಾರ್ಯಗಳಿಗೆ ಅತೀತನೆಂಬ ಕಲ್ಪಿತವ ಮಾಡಿ ಅರಿದಿಹೆನೆಂದಡೆ ಅದು ಕುರುಹಿಂಗೊಳಪಟ್ಟಿತ್ತು. ವಿಶೇಷ ಜ್ಞಾನವಾಗಿಹ ಸತ್, ಚಿತ್ ಆನಂದ ಎಂಬ ಲಕ್ಷಣಾತ್ಮಕ ಜ್ಞಾನದಿಂದ ನಿನ್ನ ಅರಿದಿಹೆನೆಂದರೆ ಅದು ಅನಾದಿ ಎಂಬ ಕುರುಂಮಗೊಳಪಟ್ಟಿತ್ತು.

ಬಹು ವೀರಶೈವರಾಗಿಹ ಲಿಂಗವಂತರು, ದೇವನನ್ನು ಕುರುಹಾಗಿ ಕಂಡು ಪೂಜಿಸುವವರು ಬಹಳ ಇದ್ದಾರೆ. ಅವರಿಗೆ ಲಿಂಗವೆಂಬುದಿಷ್ಟೆ ಗೊತ್ತು, ಅದರ ರಹಸ್ಯ ತಿಳಿದವರು ಅತಿ ವಿರಳ. ಅದರಲ್ಲಿ ಸ್ವಲ್ಪ ತಿಳುವಳಿಕೆಯಿದ್ದವರು, ಜಗವು ಆತನು, ಜಗದ ಕಾರಣನು ಆತನೆ, ರೂಪ ಆತನೆ, ನಿರೂಪ ಆತನೆ ಎಂಬ ಭಾವಿಕರು ಸ್ವಲ್ಪ ಜನ, ಇತ್ತ ಕೆಲವರು ಲಿಂಗ ದೇವನು ಕಾರ್ಯ ಕಾರಣಗಳಿಗತೀತನು ಎಂದು ತಿಳಿದವರು ಅತಿ ಸ್ವಲ್ಪ ಸಂಖ್ಯೆ. ಅತೀತನಾದವನು ನಿಸ್ಸಂಗನು, ಸಚ್ಚಿದಾನಂದ ನಿತ್ಯ ಪರಿಪೂರ್ಣನು ಎಂದು ಭಾವಿಸುವವರು ಮತ್ತಷ್ಟು ವಿರಳ. ಹೀಗೆ ಜ್ಞಾನದಿಂದ ಲಿಂಗದೇವನನ್ನು ಅರಿದಿಹೆನೆಂದಡೆ ಅದು ಯತಾರ್ಥ ತಿಳಿದ ಸಂಕೇತವಲ್ಲ,

ಲಿಂಗದೇವನು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನ, ಅಂತಪ್ಪ ಘನಲಿಂಗವ ಅದಾವ ಅರುವಿನಿಂದ ಅರಿವುದು, ಜ್ಞಾನದ ಜ್ಞಾನಸ್ವರೂಪವಾಗಿಹ ಘನವನ್ನು ಅದೆಂತು ಅರಿವುದು ? ಅರುವಿನಿಂದ ಅರಿದಿಹೆನೆಂದಡೆ ಅರುವು ಮರಹಿಂಗೊಳಗಾಯಿತ್ತಾಗಿ ಆ ಅರುವಿನಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ ಕೇಳಲಾಗದು, ಭಾವದಿಂದ ಭಾವಿಸಿಹೆನೆಂದಡೆ ಭಾವ ಭ್ರಾಂತಿಗೊಳಗಾಯಿತ್ತಾಗಿ ಆ ಭಾವದಿಂದ ಭಾವಿಸಿಹೆನೆಂಬ ಭ್ರಮಿತನ ಮಾತ ಕೇಳಲಾಗದು. ಜ್ಞಾನದಿಂದ ಅರಿದಿಹೆನೆಂದಡೆ ಜ್ಞಾನ ಅಜ್ಞಾನಕ್ಕೊಳಗಾಯಿತ್ತಾಗಿ ಆ ಜ್ಞಾನದಿಂದ ಅರಿದಿಹೆನೆಂಬ ಅಜ್ಞಾನಿಯ ಮಾತ

ಕೇಳಲಾಗದು. ಸದ್‌ಜ್ಞಾನಭರಿತ ಕೂಡಲ ಚೆನ್ನಸಂಗಾ ನಿಮ್ಮ ಶರಣ.

ಅರುವಿಂಗರುವಾಗಿಪ್ಪ ಘನವನ್ನು ಅದಾವ ಅರುವಿನಿಂದ ಅರಿವುದು, ಭಾವಕ್ಕಗಮ್ಯವಾಗಿಹ ಘನವ ಅದಾವ ಭಾವದಿಂದ ಭಾವಿಸುವುದು, ಕಲ್ಪಿತವಲ್ಲದ ಘನ ಲಿಂಗವ ಅದಾವ ಜ್ಞಾನದಿಂದ ಅರಿವುದು, ''ಅಲಕ್ಷ್ಯ ಮದ್ವಯಂ ಶೂನ್ಯ ಮಮೂರ್ತಂ ಪರಮವ್ಯಯಮ್, ಅನಾಮ ಮಕುಲಂ ಶುದ್ಧ ಅನಾದ್ಯಂಶಿವ ಮುಚ್ಯತೆ । ಅಕಾರಣ ಮಕಾರ್ಯಂಚ ಮನೋವಾಚಾಮ ಗೋಚರಮ್ ಆದಿ, ಮಧ್ಯಾಂತ ಶೂನ್ಯಮ್, ಚ ವ್ಯೋಮ ವ್ಯೋಮ ವಿವರ್ಜಿತಮ್ ಧ್ಯಾನ ಜ್ಞಾನ ದ್ವಯೋರ್ಹೀನಂ ಶೂನ್ಯ ಲಿಂಗ ಮನಾಶ್ರಯಮ್ ॥

ಏನೆಂದೆನಲಿಲ್ಲ, ನುಡಿದು ಹೇಳಲಿಕ್ಕಿಲ್ಲ ನಿಜದಲ್ಲಿದ್ದ ಬೆರಗು ಕುರುಹ ಅರಿವುದೆ ಅದು ತನ್ನಲ್ಲಿ ತಾನಿಲ್ಲ, ಎನೆಂದೆನಲಿಲ್ಲದ ಬಯಲು, ಅಲ್ಲಿ ಏನೇನೂ ಅರಸಲಿಲ್ಲ, ಇದಿರಿಲ್ಲ, ತಾನಿಲ್ಲ ಚಿಕ್ಕಯ್ಯ ಪ್ರಿಯಸಿದ್ಧಲಿಂಗ ಇಲ್ಲ ಇಲ್ಲ, ಏನೆಂದೆನಲಿಲ್ಲ, ನುಡಿದು ಹೇಳಲಿಕ್ಕಾಗದ ಘನವು ಅದಾವ ಜ್ಞಾನದಿಂದ ಅರಿವುದು, ಅಕಥನೀಯ ಘನ ಅಲ್ಲಿ ಕಳೆದುಕೊಂಡುದಿಲ್ಲ, ಪಡೆದುಕೊಳ್ಳುದಿಲ್ಲ ಆಕಾಶವ ಆರಾದರೂ ಹುಡುಕ ಹೋಗಬಹುದೆ ? ಅದು ಸ್ವತಃ ಸಿದ್ಧವಾಗಿಹ ನೆಲೆಯುಳ್ಳ ನಿಲವು, ಅದನೆಂತು ಜ್ಞಾನದಿಂದ ಅರಿವುದು, ಆವುದು ಜ್ಞಾನದಿಂದ ಅರಿಯಲು ಬರುವುದು, ಅದು ಕುರುಹುಳ್ಳದ್ದು ಆಗಿದೆ. ಆವುದು ಕುರುಹುಳ್ಳದ್ದು ಆಗಿದೆ. ಅದು ನಾಶವುಳ್ಳದ್ದು ಆಗಿದೆ.

ಜ್ಞಾನವೆಂಬುದೇನು ಮನೋಭೇದ, ಕಲ್ಪಿತ ಜ್ಞಾನವು ಮನೋಭೇದದಿಂದು ಕ್ತವಾದುದು, ಆವುದು ಮನೋಭೇದದಿಂದುಕ್ತವಾಗಿದೆ ಅದು ಜ್ಞಾನದ ಕೈಯಲ್ಲಿ ಅದು ಅರುಹಿಸಿಕೊಳ್ಳುವುದಾಗಿದೆ. ಅದು ದೇವನು ಹೇಗಾಗುವುದು.

ಆವುದು ನುಡಿಗೆಡೆಗೊಡದ ಘನವಾಗಿದೆ ಅದು ದೇವನು ಆಗಿಹುದು. ಆವುದು ನುಡಿಗೊಳಪಟ್ಟಿದೆ ಅದು ಜ್ಞಾನದ ಕೈಯಲ್ಲಿ ಅರುಹಿಸಿಕೊಳ್ಳುವುದಾಗಿದೆ. ಆವುದು ಮನದ ಕಲ್ಪಿತದಿಂದುಕ್ತವಾದುದಾಗಿದೆ. ಅದು ಜ್ಞಾನದ ಕೈಯಲ್ಲಿ ತಿಳಿಸಿಕೊಳ್ಳುವುದಾಗಿದೆ, ಆವುದು ಕಲ್ಪಿತವಲ್ಲ, ಅದು ದೇವನಾಗಿಹನು. ಆವುದು ಅಲಕ್ಷ್ಯವು ಅದು ದೇವನು, ಅಲ್ಲಿ ಲಕ್ಷಣ, ಲಕ್ಷ್ಯವೆಂದು ಊಹಿಸಲು ಇಂಬಿಲ್ಲ, ದೇಹಿಗೆ ದೇಹಿಯಾದುದು ಅದು ಲಕ್ಷ್ಯ ಸ್ವರೂಪವೆಂದು ಹೇಗೆ ಹೇಳುವಿ, ಅದರ ಲಕ್ಷಣ ಹೀಗೆ ಎಂದು ಹೇಗೆ ಕಲ್ಪಿಸುವಿ. ಆವುದು ನಿಸ್ಸೀಮವಾಗಿದೆ. ಅದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಆಗಿದೆ. ಅಲ್ಲಿ ಎರಡೆಂಬುದಿಲ್ಲ, ಒಂದೆಂಬುದಿಲ್ಲ ಶಬ್ದಸಂದಣಿಗೆ ಸಂದಿಲ್ಲ, ಆವುದು ಅಮೂರ್ತವಾಗಿದೆ, ಅದು ಜ್ಞಾನದ ಕೈಯಲ್ಲಿ ಅದೆಂತು ಅರುಹಿಸಿಕೊಳ್ಳುವುದು, ಆವಲ್ಲಿ ಅಂಗ, ಲಿಂಗವೆಂಬ ನಾಮಕ್ಕೆ ಸಂದಿಲ್ಲವಾಗಿದೆ. ಅದು ದೇವನು, ಅನಾಮಯನು, ಅಕುಲನು, ಶುದ್ಧನು ಪರಮವ್ಯಯನು ಎಂದು ಸಿದ್ಧವಾಗುವುದು. ಆವುದು ವಾಚಾಮಗೋಚರವಾಗಿದೆ ಅದು ಅಕಾರಣವು ಅಕಾರ್ಯವು ಆಗಿದೆ. ಅದು ಜ್ಞಾನದಿಂದ ಅರುಹಿಸಿಕೊಳ್ಳುವದೆಂತು ? ಆವುದಕ್ಕೆ ಆದಿ, ಮಧ್ಯ, ಅಂತ್ಯವಿಲ್ಲ ಅದಕ್ಕೆ ಬಯಲು ಎಂದು ಹೇಗೆ ಅನ್ನುವಿ. ಆತ್ಮನೆಂದು ಹೇಗೆ ಅನ್ನುವಿ, ಸತ್ ಎಂದು, ಅಸತ್ ಎಂದು ಚಿತ್ ಎಂದು ಅಚಿತ್ ಎಂದು ಹೇಗೆ ಅನ್ನುವಿ ಅದಕ್ಕಾಗಿ ಧ್ಯಾನವು ನಿಷ್ಪ್ರಯೋಜಕ,

ಮನದ ಭೇದದಿಂದಾದ ಜ್ಞಾನವು ನಿಷ್ಪ್ರಯೋಜಕ ಜ್ಞಾನವೆಂಬುದೇನು, ಮನೋಭೇದ ಇಂತಪ್ಪ ಜ್ಞಾನದ ಕೈಯಲ್ಲಿ ಅರುಹಿಸಿಕೊಂಡಡೆ ನೀ ದೇವನಲ್ಲ, ಅರಿಯದಿದ್ದಡೆ ನಾ ಶರಣನಲ್ಲ, ದೇವನನ್ನು ತಿಳಿಯದ ಭಕ್ತರು ಇದ್ದಾರೆ. ಜ್ಞಾನಿಗಳು ಇರುವರು. ತನ್ನ ತಾನರಿಯದವನು, ದೇವನ ಅರಿಯುವುದೆಂತು ? ದೇವನೆಂದರೆ ಜ್ಞಾನದ ಕೈಯಲ್ಲಿ ಅರುಹಿಸಿಕೊಂಡಡೆ ಅದು ದೇವನಾಗದು ಎಂದು ಮೊದಲೆ ಹೇಳಿದೆ. ಅಂಥ ದೇವನಿಗೆ ನಿಜವಾದ ದೇವನೆಂದು ತಿಳಿದವನು ಭಕ್ತನಾಗಲಾರ ಶರಣನಾಗಲಾರ, ಅರುವಿಂಗರುವಾಗಿಹ ಪರವಸ್ತು ತಿಳಿಯಹೋದವರು ದೇವನೆ ಆಗಿಹರು.

ತನ್ನವ ಮರೆದು ದೇವರ ಕಂಡಿಹೆನೆಂಬ ಕಾರಣ, ಹರಿಸುರಾದಿಗಳೆಲ್ಲ ತಲೆಕೆಳಗಾಗಿ ಹೋದವರು. ದೇವರ ಮರೆದು ತನ್ನವನರಿದುದಾದಡೆ ತಾನೆದಿಟವೆಂದ ನಂಬಿಗಚೌಡಯ್ಯ ಎಂಬ ಘನ ಘಟ್ಟಿಯಾದ ಶರಣರ ಮಹದರಿವಿನಂತೆ ತನಗಿಂತ ದೇವರು ಅನ್ಯನು ಎಂಬುದು ಮೊದಲು ಮರೆಯಬೇಕು. ಇದಲ್ಲದೆ ತನ್ನನರಿವುಡೆ ತಾನೆ ದೇವನೆಂಬುದು ದಿಟವು ಸಹಜವು, ಇದು ಕಾರಣ ತನ್ನ ಅರಿಯ ಹೋಗಲು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನದಿರುವೆ ತನ್ನಯ ಇರುವು ಎಂಬ ಅರಿವು ಉದಯವಾದಡೆ ಆಗ ಜ್ಞಾನದ ಕೈಯಲ್ಲಿ ದೇವನನ್ನು ಅರುಹಿಸಿಕೊಳ್ಳುವವನೆಂದು ತಿಳಿಯಲಾರ. ತಿಳಿಯುವನೆಂದು ತಿಳಿಯಲಾರ. ಆಗ ತನ್ನಿರುವು ನಾನೀನೆಂಬುದಕ್ಕೂ ತೆರಹಿಲ್ಲದ ಘನವೆಂಬುದು ಎಚ್ಚರವಾಗುವುಡೆ ಆಗ ದೇವನಿಗೆ, ನೀ ದೇವ, ನಾ ಶರಣನೆಂತಾದೆ ಹೇಳಾ ಗುಹೇಶ್ವರಾ ಎಂಬ ಆಕಾಶವಾಣಿ ತನ್ನಿಂದ ತನಗೆ ಬೋಧಿಸಹತ್ತುವನು. ತನ್ನನರಿತ ಶರಣನು. ಘನಕ್ಕೆ ಘನ, ಅಪ್ರತಿಮಗಮ್ಯ ನೋಡಾ, ಅಪ್ರಮಾಣನ ಪ್ರಮಾಣಿಸಬಾರದು ನೋಡಾ, ಅನುಪಮನ ಉಪಮಿಸಬಾರದು ನೋಡಾ.

**183**

**ಮಠವೇಕೋ ಪರ್ವತವೇಕೋ ಜನವೇಕೊ ನಿರ್ಜನವೇಕೊ**
**ಚಿತ್ತ ಸಮಾಧಾನವುಳ್ಳ ಶರಣಂಗೆ ?**
**ಮತ್ತೆ- ಹೊರಗಣ ಚಿಂತೆ ಧ್ಯಾನ ಮೌನ ಜಪತಪವೇಕೊ;**
**ತನ್ನ ತಾನರಿದ ಶರಣಂಗೆ ಗುಹೇಶ್ವರಾ?** ॥ 1439 ॥

**ತಾತ್ಪರ್ಯ** : *ಮಠವೇಕೋ ? ಪರ್ವತವೇಕೋ ? ಜನವೇಕೋ ? ನಿರ್ಜನವೇಕೋ ? ಚಿತ್ತ ಸಮಾಧಾನವುಳ್ಳ ಶರಣಂಗೆ* : ಆರು ಸಮದರ್ಶಿಗಳಾಗಿಹರು ಅವರ ಚಿತ್ತ ಸಮಾಧಾನವುಳ್ಳದ್ದಾಗಿಹುದು, ಏಕೆಂದರೆ ಚಿತ್ತವು ಅಚಿಂತ್ಯಾತ್ಮದಲ್ಲಿ ಲೀಯವಾಗಿಹುದು. ಆರ ಚಿತ್ತ ತನ್ನ ಮೂಲಕಂಡಿರುವುದಿಲ್ಲ ಅದು ಭಿನ್ನಜ್ಞಾನ ದಿಂದುಕ್ತವಾಗಿ ತನ್ನ ಸಮಾಧಾನವನ್ನು ಕಳಕೊಂಡಿದೆ. ಆ ಸಮಾಧಾನವ ಪಡೆಯಲೋಸುಗ ಮಠವು ಬೇಕು ಪರ್ವತವು ಬೇಕು ಜನವು ಬೇಕು ನಿರ್ಜನವು ಬೇಕು.

ಬೇಕು ಬೇಡೆಂಬುದಳಿದ ಸುಜ್ಞಾನಿ ಶರಣ ಮಠವು ಕಾಣ ಪರ್ವತವು ಕಾಣ, ಕಾಣದುದ ಕಂಡ ಮೇಲೆ ಇನ್ನೇನಿನ್ನೇನು, ಕಾಣದುದು ಆವುದು ? ತಾನೆ ಕಾಣಬಾರದ

ಘನ, ತನ್ನನ್ನು ತನ್ನಿಂದ ಕಂಡ ಮೇಲೆ ಇನ್ನೇನಿನ್ನೇನು, ದೇಹಿಗೆ ದೇಹಿಯಾಗಿರುವ ತನ್ನ ಕಂಡವಂಗೆ ತನ್ನ ಹೊರತು ಅನ್ಯ ಆವುದು ಕಾಣದಂತಾಗಿದೆ. ಇಲ್ಲದುದು ಇಲ್ಲವೆ ಇಲ್ಲ, ಇದ್ದ ತಾನು ಅಂದು ತಾನೆ, ಇಂದು ತಾನೆ, ಮುಂದು ತಾನೆ ಎಂದೆಂದೂ ತಾನೆ ತಾನು. ಅಂತಪ್ಪ ಮಹಾಂತ ಚಿತ್ತ ಸಮಾಧಾನವುಳ್ಳುದು ದಿಟವ ಕಂಡ ಮಹಾಂತ ಸಟೆಯ ಸೇರ, ಸಟೆಯ ಕಂಡವ ದಿಟವ ಕಾಣ, ಸಟೆಯೆಂಬುದು ಮಠ, ಪರ್ವತ, ಸಟೆಯೆಂಬುದು ಜನ, ನಿರ್ಜನ, ಆವಲ್ಲಿ ಚಿತ್ ಸಮಾಧಾನವುಳ್ಳದ್ದಾಗಿದೆ ಮಠವು ಏಕೊ ? ಪರ್ವತವೇಕೊ ? ಜನವೇಕೊ ? ನಿರ್ಜನವೇಕೊ ? ತಾನೊಂದೆ ದಿಟ, ಜ್ಞಾನಾಮೃತ ಪರಮಾಮೃತ ಅನುಪಮ ಈ ಅನುಪಮ ಜ್ಞಾನಾಮೃತವನುಂಡವರು ಶೃತಿಗಗೋಚರರು. ಇವರು ಪಿಂಡವ ಕಾಣದವರು. ಬ್ರಹ್ಮಾಂಡವ ಕಾಣದವರು. ಅಂಡಜ ಕಾಣದವರು. ಸಾಕಾರ ಕಾಣದವರು. ನಿರಾಕಾರ ಕಾಣದವರು.ಸಂಗವ ಕಾಣದವರು ನಿಸ್ಸಂಗವ ಕಾಣದವರು, ದೇವಗಣ, ರುದ್ರಗಣ, ಪ್ರಮಥಗಣ ಕಾಣದವರು ಆವಾವುದನ್ನು ಕಾಣದವರು ತನ್ನ ಕಂಡವರು ಕಾಣದುದ ಕಂಡವರು.

ಚಿತ್ ಸಮಾಧಾನವುಳ್ಳ ಶರಣಂಗೆ ಇದೆಂಥಹ ಚಿತ್ ಸಮಾಧಾನ, ಈ ಸಮಾಧಾನಕ್ಕೇನನ್ನಬೇಕು. ಇದು ಹೃದಯದೊಳನ್ಯಸ್ತವಾಗಿಹ ಪರಮ ಚಿದ್‌ಬೆಳಗು, ಈ ಬೆಳಗುಳ್ಳಘನ ಕಂಡ ಸಮಾಧಾನ ಇಲ್ಲಿ ಬೆಳಗಿಸಿಕೊಳ್ಳುವ ಅನಾತ್ಮಕ್ಕಿಂಬಿಲ್ಲ, ಬೆಳಗುವ ಆತ್ಮನೆಂಬುದಕ್ಕಿಂಬಿಲ್ಲ, ಇದು ಬೆಳಗಿನೊಳಗೆ ಬೆಳಗಾಗಿ ಶಬ್ದಮುಗ್ದವಾಗಿಹ ತನ್ನ ಕಂಡ ಸಮಾಧಾನ.

ಪ್ರವಾಹ ರೂಪಿ ಹಳ್ಳ, ಹೊಳೆ, ನದಿಗಳು ಸಮುದ್ರವ ಕಂಡು ತಾವು ಅದುವೆ ಆಗಿಹ ಸಮಾಧಾನ, ಎತ್ತೆತ್ತ ನೋಡಿದಡತ್ತತ್ತ ಅದುವೆ ಆಗಿಹ ಸಮಾಧಾನ, ತನಗಿಂತನ್ಯವ ಕಾಣದಿಹ ಸಮಾಧಾನ. ಇದು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ಅದುವೆ ಆಗಿಹ ಸಮಾಧಾನ. ಪ್ರವಾಹದುಗಮ ಸಮುದ್ರದಿಂದ ಆ ಸಮುದ್ರವೆ ವಡವಾಗ್ನಿಯಾಗಿ ಅದುವೆ ಆವೆಯಾಗಿ, ಮೋಡವಾಗಿ, ಅದುವೆ ಘನಿಭೂತವಾಗಿ ಪುನಃ ಮೇಘ ರೂಪದಿಂ ತುಂತುರವಾಗಿ ಅದುವೆ ಪ್ರವಾಹರೂಪದಿಂ ಪ್ರವಾಹವೆ ಹೊಳೆ, ಹಳ್ಳ, ನದಿಗಳಾದಂತಾಗಿ ಪುನಃ ಸಮುದ್ರವಾಗಿದ್ದುದ ಅದನಾರು ಬಲ್ಲರು. ಇದು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ಅದುವೆ ಆದ ಸಮಾಧಾನ. ತಾನು ಮೂಲವೆ ಆದ ಸಮಾಧಾನ, ಅಚಲಿತವಾಗಿಹ ಸಮಾಧಾನ, ಅಖಂಡಿತವಾಗಿಹ ಸಮಾಧಾನ, ಈ ಸಮಾಧಾನ ಅನುಪಮ ಸಮಾಧಾನ, ಇದು ಶಬ್ದಮುಗ್ಧವಾಗಿಹ ಸಮಾಧಾನ.

ಚಿತ್ತಾ ! ಮುನ್ನೆಲ್ಲಿಂದ ಬಂದನಲ್ಲಿಗೆ ಹೋದ ಸಮಾಧಾನ, ಈ ಸಮಾಧಾನ ಚಿತ್ತಾದ್ದು, ಇದು ಅವರ್ಣೀಯವಾಗಿಹ ಚಿತ್ತ ಗಗನ ಸದೃಶವಾಗಿಹ ಅಖಂಡಚಿತ್‌ಇದು ಏನೊಂದಾಗದ ಘನ ಚಿತ್, ಇದ್ದಂತಿಹ ಪರಮ ಚಿತ್, ಇದು ಏನೊಂದು ಕಾಣದ ಪರಮಚಿತ್ ಇಲ್ಲಿ ಅಚಿತ್‌ವೆಂಬುದಿಲ್ಲ, ಚಿತ್‌ವೆಂಬುದು ಇಲ್ಲವಾದ್ದರಿಂದ ಪರಮಚಿತ್ ಎಂದು ಹೇಳಿದೆ ಇದು ನಾನೀನೆಂಬುದಕ್ಕೂ ತೆರಹಿಲ್ಲದ ಚಿತ್ ಆಗಿದೆ. ನುಡಿಗೆಡೆಗೊಡದ ಘನವಾದ್ದರಿಂದ ಶಬ್ದಸಂದಣಿಗೆ ಅವಕಾಶವಿಲ್ಲವಾಗಿದೆ. ಇಲ್ಲಿ ಪ್ರಮಾತೃವೆಂಬುದಿಲ್ಲ, ಪ್ರಮಾಣವೆಂಬುದಿಲ್ಲ, ಪ್ರಮೇಯವೆಂಬುದಿಲ್ಲ, ಇದು ತ್ರಿಪುಟಿಗೆ ಇಂಬು ಕೊಡದ ಚಿತ್

ಆದುದರಿಂದ ಘನ ಚಿತ್ ಎಂದು ಹೇಳಿದೆ. ತಾನು ಅದುವೆ ಆಗಿಹ ಚಿತ್ ನುಡಿಗೆಡೆಗೊಡದ್ದಾಗಿ ಶಬ್ದಂಗಳೆಲ್ಲ ಅಯತಾರ್ಥವಾಗಿಹ ಚಿತ್ ನೋಡಾ ಎಂದು ಹೇಳಿದೆ.

ಮತ್ತೆಹೊರಗಣ ಚಿಂತೆ, ಧ್ಯಾನ, ಮೌನ, ಜಪ, ತಪವೇಕೊ ? ತನ್ನ ತಾನರಿದ ಶರಣಂಗೆ ಗುಹೇಶ್ವರಾ : ಮರವುಳ್ಳವಂಗೆ ಹೊರಗಣ ಚಿಂತೆಉಂಟೆ ? ಅರುವಿಂಗರುವಾಗಿಹ ಶರಣಂಗೆ ಅದಾವ ಹೊರಗಣ ಅದಾವ ಒಳಗಣ, ಒಳಗು ತಾನೆ, ಹೊರಗು ತಾನೆ, ಒಳಹೊರಗೆಂಬುದಕ್ಕೆಡೆಗೊಡದ ಘನದಿರುವೆ ತನ್ನಯ ಇರುವಾಗಿಹ ಶರಣಂಗೆ ಹೊರಗಣ ಚಿಂತೆ ಅಚಿಂತ್ಯಾತ್ಮನೆ ತಾನಾಗಿಹ ಶರಣಂಗೆ ಅದಾವ ಧ್ಯಾನ, ಧ್ಯಾನಾತೀತವೆ ತನ್ನಿರುವು ಆಗಿಹ ಘನವಂತನಿಗೆ ಅದಾವ ಧ್ಯಾತೃ, ಅದಾವ ಧ್ಯೇಯ ಅಕಲ್ಪಿತ ಘನಕ್ಕೆ ಈ ತ್ರಿಪುಟಿಯ ಕಲ್ಪಿತ ಕಲ್ಪನೆ ಏತರದು ? ಮೌನ ಮೌನ ! ಮೌನದ ಮೌನವಾಗಿಹ ಘನಮಹಿಮಂಗೆ ಅದಾವ ಮಾತು ?ಅದಾವ ಮೌನ, ಮಾತಾಡದವಂಗೆ ಮೌನವೇಕೆ ? ಮೌನದ ಮೌನವಾಗಿಹ ಘನದಿರುವುಳ್ಳವಂಗೆ ಮೌನವೇತರದು ?

ಜಪ, ತಪವೇಕೊ ? ತನ್ನ ತಾನರಿದ ಶರಣಂಗೆ: ಅಜಾತನೊಲಿಸುವುಡೆ ಅದೇತರ ಮಂತ್ರ, ಅದೇತರ ಆಗಮ ಹೇಳಿರೊ ? ಆಚಾರ್ಯ ಕೊಟ್ಟ ಶಲಾಕೆಯನೇತರಲ್ಲಿ ನಚ್ಚುಚ್ಚಿರೋ ? ಅದಾವ ಮುಖದಲ್ಲಿ ಲಿಂಗ ಬಂದಿಪ್ಪುದೊ ? ರೂಪಿಲ್ಲದಾತನು ನಿಮ್ಮ ಮಾತಿಂಗೆ ಬಂದನೆಂದಡೆ ಅದೇತರ ಮಾತೆಂದನಂಬಿಗ ಚೌಡಯ್ಯ. ತನ್ನತಾನರಿದ ಶರಣ, ಅಜಾತನೊಲಿಸಿದ ಶರಣ, ಈ ಮಹಾಂತಂಗೆ ಅದೇತರ ಮಂತ್ರ, ನಿರಂತರ ಕಿವಿಗೆ ಕೇಳದ ಮಂತ್ರ, ಇದು ಅಜಾತ ಮಂತ್ರ, ಇಂತಪ್ಪ ಮಂತ್ರವ ತಾನಾಗಿಹ ಶರಣಂಗೆ ಅದಾವ ಮಂತ್ರ ? ನಿಶಬ್ದವೇದಿ ಶರಣಂಗೆ ಅದಾವ ವೇದದ ಮಂತ್ರ, ಅದಾವ ಜಪ ! ಅಜಪನಿಗೆ ಅದಾವ ಜಪ, ಆಚಾರ್ಯ ಕೊಟ್ಟ ಮಂತ್ರವ ಅದೆಂತು ನಂಬುವುದು, ಮುನ್ನ ಮುನ್ನಲಾದುದು ತನ್ನಿಂದ ತಾನಾದ ಘನಲಿಂಗ, ಅದಾರ ಮುಖದಿಂದ ಬಂದುದಲ್ಲ, ಆರ ಮುಖದಿಂದ ಬಂದುದು ಲಿಂಗವಾಗದು, ಮಾತು ಮನಂಗಳಿಂದತ್ತತ್ತ ತಾನೆ ತಾನಾದ ಘನ, ಅದಾರ ಮಾತಿಗೆ ಒಳಪಡದು ಎಂದಲ್ಲಿ ತಪವ ಮಾಡುವದಾದರೂ ಹೇಗೆ ? ಅತೀಂದ್ರಿಯವಾದುದು, ಇಂದ್ರಿಯಂಗಳಿಂದ ಮಾಡುವುದು ಹೇಗೆ ? ಶರಣ ಅತೀಂದ್ರಿ ಶುದ್ಧ ಜ್ಞಾನಾಮೃತನಾದುದರಿಂದ ತನ್ನ ತಾನರಿದ ಶರಣಂಗೆ ಹೊರಗಣ ಚಿಂತೆ ಇಲ್ಲ ಧ್ಯಾನವಿಲ್ಲ ಮೌನವಿಲ್ಲ ಜಪವಿಲ್ಲ, ತಪವಿಲ್ಲ ಎಂದು ಹೇಳಿಹರು.

**184**

**ಏನ ಕಂಡಡೇನಯ್ಯಾ, ತನ್ನ ಕಾಣದಾತ ಕುರುಡ,**
**ಏನ ಕೇಳಿದಡೇನಯ್ಯಾ ತನ್ನ ಕೇಳದಾತ ಕಿವುಡು.**
**ಏನ ಮಾತಾಡಿದಡೇನಯ್ಯ ತನ್ನ ಮಾತಾಡದಾತ ಮೂಕ.**
**ದಿಟದಿಂದ ತನ್ನ ತಾ ಕಾಣಬೇಕು, ದಿಟದಿಂದ ತನ್ನ ತಾ ಕೇಳಬೇಕು,**
**ದಿಟದಿಂದ ತನ್ನ ತಾ ಮಾತಾಡಬೇಕು,**
**ಇದೆ ತನ್ನ ನೆಲೆ, ಸ್ವಭೂಮಿ, ಸ್ವಸ್ವರೂಪು ಕಾಣಾ- ಗುಹೇಶ್ವರಾ.** ॥ 1000 ॥

**ತಾತ್ಪರ್ಯ** : ಏನ ಕಂಡಡೇನಯ್ಯ ತನ್ನ ಕಾಣದಾತ ಕುರುಡ : ಏನನ್ನಾದರು

ಕಂಡವರಿದ್ದಾರೆ. ತನ್ನ ಕಂಡವರು ಸಿಕ್ಕುವುದು ವಿರಳ. ಮಾನವ ನಾನಾಭಿನ್ನ ದೃಷ್ಟಿಯುಳ್ಳವನಾಗಿಹನು. ಅದಕ್ಕಾಗಿ ನಾನಾ ವಿಧವಾಗಿಹ ಜಗವ ಕಾಣುವನು. ಅಂಡಜ ಕಾಣುವನು. ಪಿಂಡಜ ಕಾಣುವನು. ಸ್ವೇದಜ ಕಾಣುವನು. ಉದ್ಭಿಜ ಕಾಣುವನು. ಸಾಕಾರ ಕಾಣುವನು, ನಿರಾಕಾರ ಕಾಣುವನು, ಸಂಗ ಕಾಣುವನು, ನಿಸ್ಸಂಗ ಕಾಣುವನು, ತೀರ್ಥಂಗಳ ಕಾಣುವನು, ದೇವಾಲಯಂಗಳ ಕಾಣುವನು, ದೇವಾಲಯಗಳಲ್ಲಿಯ ಮೂರ್ತಿಯ ಕಾಣುವನು. ಮಸೂದಿಯ ಕಾಣುವನು. ಅರ್ಚಕರ ಕಾಣುವನು. ಪೈಗಂಬರರ ಕಾಣುವನು, ಬಾರಾ ಜ್ಯೋತಿರ್ಲಿಂಗಗಳ ಕಾಣುವನು. ಪೂಜಾ ಲಿಂಗವ ಕಾಣುವನು. ಲಿಂಗಾರ್ಚಕರ ಕಾಣುವನು. ಇವೆಲ್ಲವಗಳ ಕಾಣುವ ಕಣ್ಣನ್ನು ಕಾಣುವನು, ಕಣ್ಣಿನ ಕಣ್ಣಾದುದನ್ನು ಕಾಣಲರಿಯನು, ಇತ್ತ ವೇದಂಗಳ ಕಾಣುವನು, ಶಾಸ್ತ್ರ ಆಗಮ, ಪುರಾಣಂಗಳ ಕಾಣುವನು, ಇವುಗಳ ಪಾಠ, ಪಾರಾಯಣ ಪ್ರವಚನಗಳ ಮಾಡುವರ ಕಾಣುವನು. ಗುರು, ಶಿಷ್ಯರುಗಳ ಕಾಣುವನು. ಭಕ್ತ ಜಂಗಮಯ್ಯಗಳ ಕಾಣುವನು. ಇವರು ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರವ ಕಾಣುವನು. ಇವೆಲ್ಲವ ಕಂಡರೇನಾಯಿತು, ತನಗಿಂತನ್ಯವಾಗಿಹ ತೋರಿ ಇಲ್ಲವಾಗುವ ಮಾಯಿಕವ ಕಂಡನಲ್ಲದೆ ತನ್ನ ಕಾಣಲಿಲ್ಲ, ಇವರಿಗೆ ತನ್ನ ತನ್ನಿಂದ ನೋಡುವ ದಿವ್ಯದೃಷ್ಟಿ, ಸುಜ್ಞಾನ ಇಲ್ಲದ್ದರಿಂದ ಇವನೊಬ್ಬ ಅಜ್ಞಾನಂಧಃಕಾರದಿಂದುಕ್ತನಾಗಿಹ ಕಣ್ಣಿದ್ದು ಕುರುಡನಾಗಿಹನು. ತಾನು ಕಣ್ಣಿನ ಕಣ್ಣಾಗಿದ್ದು, ತನ್ನ ನಿಜದಿರುವ ಕಾಣದಾತನಾದ್ದರಿಂದ ಕುರುಡನೆಂದು ಹೇಳಿದೆ ಇವನು ತನ್ನ ನೋಡದ ಕುರುಡ ತನ್ನ ಕಾಣದ ಕುರುಡನಿಹನು.

ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡ : ಮಾನವರಾಗಿರಲಿ, ಸ್ತ್ರೀ ಪುರುಷರಾಗಿರಲಿ, ಸುರಾಸುರರಿರಲಿ, ತಪಸ್ವಿ, ತ್ಯಾಗಿಗಳಿರಲಿ, ಸಾಧಕರಿರಲಿ, ಸಿದ್ಧರಿರಲಿ ಏನನ್ನಾದರೂ ಕೇಳಿರಬಹುದು. ತಾನಾರೆಂದು ತನ್ನ ಘನವ ಕೇಳಿದವರು ಸಿಕ್ಕುವುದು ವಿರಳ. ವಿಶ್ವದಲ್ಲಿ ಶಬ್ದವೇದಿಗಳು ಸಿಕ್ಕುವರು, ನಿಶಬ್ದವೇದಿಗಳು ಸಿಕ್ಕುವುದು ವಿರಳ. ಶಬ್ದಸಂಭ್ರಮದವರೆಲ್ಲ (ತಮ್ಮ ತಾವರಿಯರು)ಹಿಂದುಗಾಣರು, ಮುಂದುಗಾಣರು, ತಮ್ಮ ತಾವರಿಯರು, ಮೂರು ಲೋಕವೆಲ್ಲವು ಬರುಸೂರೆಹೋಯಿತ್ತು ಗುಹೇಶ್ವರಾ.

ಈ ಶಬ್ದ ಸಂಭ್ರಮ ಸಕಲರಿಗೆ ತಾನಾರೆಂದರಿಯಗೊಡದಂತೆ ಮಾಡಿದೆ ತನ್ನ ಮುಂದಿರುವ ತೋರಿಕೆಯನ್ನು ತಿಳಿಯಗೊಡದಂತೆ ಮಾಡಿದೆ. ಇದರಿಂದ ತನ್ನಂತರಂಗದೋಳ್ ನ್ಯಸ್ತವಾಗಿಹ ಮುನ್ನ ಮುನ್ನಲಾದ ತನ್ನಿಂದ ತಾನಾದ ಪರಮ ಚಿದ್‌ಬೆಳಗು ತಿಳಿಯಗೊಡದಂತೆ ಮಾಡಿಹುದು. ಇದು ಕಾರಣ, ಆವಲ್ಲಿ ಸರ್ವಪ್ರಪಂಚ ನಿವೃತ್ತವಾಗಿಹುದು ಅದೀಗ ಬ್ರಹ್ಮಜ್ಞಾನ, ಆವಲ್ಲಿ ಆನೆಂಬ ತೋರಿಕೆ ಹುಟ್ಟದಿಹುದು ಅದೀಗ ಬ್ರಹ್ಮಜ್ಞಾನ, ಆವಲ್ಲಿ ಕೇವಲ ನಿಶ್ಚಿಂತವಾಗಿಹುದು ಅದೀಗ ಬ್ರಹ್ಮಜ್ಞಾನ, ಆವಲ್ಲಿ ಕೂಡಲ ಚೆನ್ನಸಂಗಯ್ಯನಲ್ಲದೆ, ಪೆರತೊಂದನರಿಯದಿಹುದು ಅದೀಗ ಬ್ರಹ್ಮಜ್ಞಾನ, ಇದು ತನ್ನ ಸಂದೇಶ, ಈ ಸಂದೇಶ ಕೇಳಿದರೂ ತನ್ನ ಕೇಳದಾತ ಕಿವುಡ, ಆರಿಗೆ ಸರ್ವ ಪ್ರಪಂಚ 'ನಷ್ಟವಾಗಿಹುದು ಅದು ದೇಹೋಹಂದಿಂದುಕ್ತವಾದುದಿರಲಿ, ನಾಹಂ ಎಂಬ ವಿವೇಕದ್ದಿರಲಿ, ಸೋಹಂ ಭಾವವುಳ್ಳದ್ದಿರಲಿ, ಚಿದಹಮ್ಮಿನಿಂದುಕ್ತವಾಗಿರಲಿ ದಾಸೋಹಂದಿಂದುಕ್ತವಾಗಿರಲಿ ಇವೆಲ್ಲವು ಮಾಯಿಕವು, ತೋರಿ ಇಲ್ಲವಾಗುವ ಶಬ್ದ ಪ್ರಪಂಚ, ಇಲ್ಲಿ ಮರವುಉಂಟು,

ಅರುವು ಉಂಟು, ಅರುವ ಆನೆಂಬ ಚಿದಹಮ್ಮು ಉಂಟು, ಸಕಲವು ನೀನೆಂಬ ಭರಿತಭಾವ ಉಂಟು, ಇವು ತನ್ನ ಸಂದೇಶ ಕೇಳದ ಶ್ರವಣವಾಗಿವೆ. ಇದು ಕೇಳುವ ಕಿವಿಯಾಗಿಹವು. ತಾನು ಕಿವಿಯ ಕಿವಿ ಆಗಿರುವಲ್ಲಿ ಅಂತಪ್ಪ ಮಾರ್ಮಿಕರಹಸ್ಯವಾಗಿ ತತ್ವದನುವ ಕೇಳುವನು. ಆಗ ತಾನು ಕಿವಿಯ ಕಿವಿಯು. ಕಿವಿ ತುಂಬಿದಬಳಿಕ ಕೇಳಲಿಲ್ಲ, ಆಗ ತಾನೆ ಎಡೆಯಿಲ್ಲದ ಪರಿಪೂರ್ಣ ತಾನೆ, ನಿಃಶಬ್ದವೇದಿ ತಾನೆ, ಆ ಮಹಾಂತನಿಗೆ ಲೌಕಿಕ ಶಬ್ದವು ನಿಷ್ಪ್ರಯೋಜಕವು. ಪರಮಾರ್ಥದಿಂದ ಲಭ್ಯವಾಗುವ ಬೋಧರೂಪ ಶಬ್ದವು ನಿಷ್ಪ್ರಯೋಜಕವಾಗಿವೆ. ಇವೆಲ್ಲ ಹೆತ್ತರಿವು ಆಗಿವೆ. ತಾನು ಗುರು ಶಿಷ್ಯಮಧ್ಯದಲ್ಲಿ ಬೆಳಗುಳ್ಳ ಸ್ವಯಂಜ್ಯೋತಿಯಾಗಿಹನು. ಈ ಸ್ವಯಂಜ್ಯೋತಿ ತಾನು ಸ್ವಯಂಜ್ಯೋತಿ ಎನ್ನದಿಹ ಪರಾತ್ಪರ ಜ್ಯೋತಿಯಾದುದರಿಂದ ಈತ, ನಿಶಬ್ದವೇದಿ ಈ ಮಹಾಂತಂಗೆ ಕಿವುಡನೆನ್ನಲುಬರದು.

ಏನ ಮಾತಾಡಿದಡೇನಯ್ಯ ತನ್ನ ಮಾತಾಡದಾತ ಮೂಕ : ಆಧುನಿಕ ಸಮಯದಲ್ಲಿ ಸಕಲರಿಗೆ ಮಾತಾಡಲು ವಾಕ್‌ಸ್ವಾತಂತ್ರ ದೊರತಿದೆ. ಅದಕ್ಕಾಗಿ ಮಾತಾಡಲು ಮುಂದುವರಿದ ಯುಗ, ಮುಂದುವರಿದಷ್ಟು ಒಳ್ಳೆಯದು. ಸಂತೋಷ ಮುಂದುವರಿದಲ್ಲಿ ಸಮದೃಷ್ಟಿ ಬರಬೇಕು. ಸಮತೆ ಸಯವಾಗಿಹ ದೃಷ್ಟಿ ಕಳೆದುಕೊಂಡು ವಿಷಮದೃಷ್ಟಿ ಹೆಚ್ಚಿಸುವದೆಂದಲ್ಲಿ ಈ ಮಾತು ಬಂದಷ್ಟು ಹಾನಿಯೆ, ಇದರಿಂದ ನಿಶ್ಚಿಂತತೆ ಆರಾರಿಗೂ ಇಲ್ಲ.

ಒಂದರಮೋರೆಯನೊಂದು ಮೂಸಿ ನೋಡಿ ಮತ್ತೊಚ್ಚಿ ಹೊತ್ತಿಂಗೆ ಕಚ್ಚೆಯಾಡಿ ಹೋದಂತಾಯಿತ್ತು ನೋಡಿರೆ ? ಕಲಿಯುಗದೊಳಗಣ ಮೇಳಾಪವ, ಗುರುವೆಂಬಾತ ಶಿಷ್ಯನಂತುವನರಿಯ, ಶಿಷ್ಯನೆಂಬಾತ ಗುರುವಿನಂತುವನರಿಯ, ಭಕ್ತನೆಂಬಾತ ಜಂಗಮನಂತುವನರಿಯ ಜಂಗಮವೆಂಬಾತ ಭಕ್ತನಂತುವನರಿಯ, ಗುರು ಗುರುವಿನಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಜಂಗಮ, ಜಂಗಮರಲ್ಲಿ ಸಮವಿಲ್ಲ, ಇದು ಕಾರಣ, ಕಲಿಯುಗದಲ್ಲಿ ಉಪದೇಶ ಮಾಡುವ ಕಾಳಗುರಿಕೆಯ ಮಕ್ಕಳ ನೆನೆಂಬೆ ಗುಹೇಶ್ವರಾ.

ಇವರುಗಳು ಗುರುಗಳಾಗಿಯೆ ಮಹಾವಾಕ್ಯವ ನುಡಿದಿಹರು. ಶಿಷ್ಯರಾಗಿ ಮಹಾವಾಕ್ಯವ ಶ್ರವಣ ಮಾಡಿ ನುಡಿಯುವವರಾಗಿಹರು. ಭಕ್ತರಾಗಿ ಲಿಂಗ ಲಿಂಗ ಎಂದು ಕೊಂಡಾಡಿಹರು. ಜಂಗಮನಾಗಿ ಲಿಂಗ ಘನವೆಂದು ನುಡಿದಿಹರು. ಇವರು ನುಡಿಯುವವರಾಗಿಹರಲ್ಲದೆ ನುಡಿದು ನಿಃಶಬ್ದಬ್ರಹ್ಮವಾಗಲರಿಯರು. ನಿಶಬ್ದ ಬ್ರಹ್ಮವರಿಯದ್ದರಿಂದ ಗುರು ಗುರುಗಳಲ್ಲಿ ಸಮವಿಲ್ಲ, ಶಿಷ್ಯ ಶಿಷ್ಯರಲ್ಲಿ ಸಮವಿಲ್ಲ, ಭಕ್ತ ಭಕ್ತರಲ್ಲಿ ಸಮವಿಲ್ಲ, ಜಂಗಮ, ಜಂಗಮರಲ್ಲಿ ಸಮವಿಲ್ಲ, ಇವರು ಮರವು ಅರುವಿನಿಂದುಕ್ತರಾದುದರಿಂದ ಅರುಹೃದಯವಾಗಲಿಲ್ಲ, ಗುರುಗಳಾಗಲಿ, ಶಿಷ್ಯರಾಗಲಿ, ಭಕ್ತ ಜಂಗಮರಾಗಲಿ ಆರೆ ಆಗಲಿ, ಅರುಹೃದಯವಾಗದೆ, ಮಾತಾಡಿದುದು ನಿಷ್ಪ್ರಯೋಜಕವು ಎಲ್ಲಿಯವರೆಗೆ ಇಲ್ಲದ ಮರವರುವುಳ್ಳವನಾಗಿಹನು ಅಲ್ಲಿಯವರೆಗೆ ವಿಷಮದೃಷ್ಟಿ ಹೋಗದು. ಇದು ಕಾರಣ, ಅರು ಹೃದಯವಾಗಲು ಸಮಗೋಷ್ಠಿಯವರಾಗಬೇಕು. ಈ ಸಮಗೋಷ್ಠಿ ಅರುವು ಮರವಿಂಗೆ ಮೀರಿದ ಘನದಿರುವುಳ್ಳ ಅರುವು. ಅದು

ಶಬ್ದಸಂದಣಿಯವರ ಗೋಷ್ಠಿಯಲ್ಲ, ನಿಶಬ್ದವೇದಿಗಳ ಗೋಷ್ಠಿ. ನಮ್ಮ ಮಾತುಗಳು ನುಡಿದರೂ ನಿಶಬ್ದ ಬ್ರಹ್ಮದಿರುವಿನ ಸೂಚಕವಾಗಿರಬೇಕು. ಸಂಜ್ಞೆಯುಳ್ಳದ್ದಾಗಿರಬೇಕು. ಈ ಘನದಿರುವಿನ ಸಂಜ್ಞೆಯ ಸೂಚಕ ಶಬ್ದವಾಡಲು ಬರುವುದಿಲ್ಲವೆಂದಲ್ಲಿ ಏನು ಮಾತಾಡಿದಡೇನಯ್ಯ ತನ್ನ ಮಾತಾಡದಾತ ಮೂಕನೆಂದು ಹೇಳಿಹರು.

ದಿಟದಿಂದ ತನ್ನ ತಾಕಾಣಬೇಕು, ದಿಟದಿಂದ ತನ್ನ ತಾ ಕೇಳಬೇಕು, ದಿಟದಿಂದ ತನ್ನ ತಾ ಮಾತಾಡಬೇಕು. ಇದೆ ತನ್ನ ನೆಲೆ ಸ್ವಭೂಮಿ, ಸ್ವಸ್ವರೂಪ ಕಾಣಾ ಗುಹೇಶ್ವರಾ. ದಿಟವೆಂದರೆ ತಾನೆ, ತಾನಿದ್ದುದರಿಂದ ಕಾಣುವುದು ಕೇಳುವುದು ಮಾತಾಡುವುದು ತನ್ನ ನರಿಯದೆ ಏನು ಕಂಡರೇನು, ಕೇಳಿದರೇನು, ಮಾತಾಡಿದರೇನು, ತನ್ನನರಿಯದವರು ಕಣ್ಣಿದ್ದರು ಕುರುಡರು. ಕಿವಿಗಳಿದ್ದರೂ ಕಿವುಡರು, ಮಾತಾಡಿದರೂ ಮೂಕರು, ತನ್ನ ಅರಿತವರು ಏನು ಕಂಡರೂ ಕಾಣದವರು, ಕೇಳಿದರೂ ಕಿವುಡರು, ಮಾತಾಡಿದರೂ ಮೂಕರು ಇವರು ಘನಕ್ಕೆ ಘನರು ನುಡಿಗೆಡೆಗೊಡದ ಘನರು.

ತಾನಿಲ್ಲದ ಮುನ್ನ ಗುರುವೆಲ್ಲಿಯದು ? ಲಿಂಗವೆಲ್ಲಿಯದು ? ಜಂಗಮವೆಲ್ಲಿಯದು ? ಪ್ರಸಾದವೆಲ್ಲಿಯದು ? ಸ್ವಯವೆಲ್ಲಿಯದು ? ಪರವೆಲ್ಲಿಯದು ? ಗುರುವೆಂದರಿದವರು ತಾನೆ ಲಿಂಗವೆಂದರಿದವನು ತಾನೆ, ಜಂಗಮವೆಂದರಿದವನು ತಾನೆ, ಪ್ರಸಾದವೆಂದರಿದವನು ತಾನೆ, ಇಹ ಪರವೆಂದರಿದವನು ತಾನೆ ಇವೆಲ್ಲವು ಹೆತ್ತರಿವು ತಾನೆ ಸ್ವಯಂಜ್ಯೋತಿ ಕಲ್ಲೇಶ್ವರಾ, ಹೆತ್ತರುವಿನ ಜ್ಞಾನಿಗಳು ಬಹಳ ಇದ್ದಾರೆ. ಇವರು ತನ್ನ ಅರಿಯದವರು. ತನ್ನ ಅರಿದಾಗ ಗುರುವಿಂಗೆ ಗುರುವಾಗಿ ಬೆಳಗಿದವನು ತಾನೆ, ಲಿಂಗಕ್ಕೆ ಲಿಂಗವಾಗಿ ಬೆಳಗಿದಪನು ತಾನೆ, ಜಂಗಮಕ್ಕೆ ಜಂಗಮವಾಗಿ ಬೆಳಗಿದವನು ತಾನೆ, ಪ್ರಸಾದಕ್ಕೆ ಪ್ರಸಾದವಾಗಿ ಬೆಳಗಿದವನು ತಾನೆ, ಸ್ವಯಪರಕ್ಕೂ ಬೆಳಗಿದವನು ತಾನೆ ತಾನಿದ್ದು, ತಾನೆ ಸಕಲಕ್ಕೆ ಬೆಳಗಿಹನಲ್ಲದೆ ತನ್ನನ್ನು ಆವಾವು ಬೆಳಗವು, ಬೆಳಗುಳ್ಳ ಘನವೆ ತನ್ನಿರುವು ಇರುವಲ್ಲಿ ತನ್ನಿಂದ ತನ್ನ ಅರಿವುದು ಆಗ ತಾನಾರೆಂಬ ಅರಿವು ಪ್ರಜ್ವಲಿಸುವುಡೆ ತಾನೆ ತಾನಾಗಿಹ ಘನ ತಾನೊಂದೆ ಇರುವಲ್ಲಿ ತನ್ನನೊಂದೆ ನೋಡಿದುದು ಈ ಮಹಾಂತನದು. ನೋಡದ ನೋಟ, ಕೇಳದ ಕಿವಿ, ಮಾತಾಡದ ಮೂಕ, ಈತಂಗೆ ಭಿನ್ನದೃಷ್ಟಿಯಿಲ್ಲದುದರಿಂದ ಕುರುಡನು. ನಿಶಬ್ದವೇದಿಯಾದುದರಿಂದ ಕಿವುಡನು. ಅನಾಮಯವಾಗಿಹ ನಿರ್ವಾಣನಾದುದರಿಂದ ಮೂಕನು ಆಗಿಹನು. ಏಕೆಂದರೆ ತಾನೆ ಸ್ವಯಂಜ್ಯೋತಿ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಜ್ಯೋತಿಗೆ ಅನ್ಯಕಾಣದ್ದರಿಂದ ಕುರುಡನೆಂದು ಹೇಳಿಹರು.

ಶೃತಿಗಗೋಚರನಾಗಿಹ ತಾನೆ ತಾನು ಕಿವಿಯ ಕಿವಿ ಇರುವುದರಿಂದ ಕಿವುಡನೆಂದ ಹೇಳಿಹರು. ವಾಙ್ಮನೋತೀತನಾದ್ದರಿಂದ ತಾನು ಮೌನದ ಮೌನನಾದುದರಿಂದ ಮೂಕನೆಂದು ಹೇಳಿಹರು. ತನ್ನದು ಅರುವಿಂಗರುವಾಗಿಹ ಘನದಿರುವು ಇರುವಲ್ಲಿ ತನ್ನಯ ನಿಲುವು ಅನುಪಮವು ಅದುವೆ ನಿಜನಿವಾಸವು ಇದುವೆ ಸ್ವಭೂಮಿಯಾಗಿದೆ. ಇದು ನಿಸ್ಸೀಮವು ಮರವು ಅರುವು ಕಾಣದ ಹೃದಯ ಇದು ಅರು ಹೃದಯವು ಇದು ಸ್ವಭೂಮಿಯು ಆಗಿಹುದು. ಇದು ಸ್ವಸ್ವರೂಪವು ಆಗಿಹುದು. ದಿಟದಿಂದ ತನ್ನ ತಾ ಕಂಡುದುಸ್ವಸ್ವರೂಪವು, ತಾನು ನಿಶಬ್ದವೇದಿಯಾದುದು ಸ್ವಸ್ವರೂಪವು. ತಾನು ಘನಕ್ಕೆ

ಘನನಾಗಿ ಶಬ್ದಮುಗ್ಧನಾದುದು ಸ್ವಸ್ವರೂಪವು.

**185**

**ಶಿವಶರಣನು ನಿದ್ರೆಗೈಯ್ದಡೆ ಜಪ ಕಾಣಿರಣ್ಣಾ .**
**ಶಿವಶರಣನು ಎದ್ದಡೆ ಶಿವರಾತ್ರಿ ಕಾಣಿರಣ್ಣಾ.**
**ಶಿವಶರಣನು ನಡೆದಡೆ ಪಾವನ ಕಾಣಿರಣ್ಣಾ.**
**ಶಿವಶರಣನು ನುಡಿದಡೆ ಶಿವತತ್ವ ಶಿವಮಂತ್ರ ಕಾಣಿರಣ್ಣಾ.**
**ಶಿವಶರಣನು ನೋಡಿದಡೆ ಪಾಪಕ್ಷಯ ಕಾಣಿರಣ್ಣಾ.**
**ಶಿವ ಶರಣನು ಮುಟ್ಟಿದುದೆ ಸರ್ವಸಿದ್ದಿ ಕಾಣಿರಣ್ಣಾ.**
**ಶಿವಶರಣನ ಮನವೆ ಲಿಂಗ ಕಾಣಿರಣ್ಣಾ.**
**ಶಿವಶರಣನ ಕಾಯವೆ ಕೈಲಾಸ ಕಾಣಿರಣ್ಣಾ.**
**ಗುಹೇಶ್ವರಾ ನಿಮ್ಮ ಶರಣನ ಚಾರಿತ್ರ ವಿಪರೀತವಯ್ಯಾ.** ॥ 1525 ॥

**ತಾತ್ಪರ್ಯ** : *ಶಿವಶರಣನು ನಿದ್ರೆಗೈದಡೆ ಜಪ ಕಾಣಿರಂಣಾ* : ಶರಣನು ಯಾರು ಗೊತ್ತೆ ? ಮಹತ್ವ ಮಾಡಿ ಮೆರೆದುದು ಶರಣನೆ ಅಲ್ಲಲ್ಲ, ಸ್ವರ್ಗದ ವಾರ್ತೆಯ ಹೇಳಿದಡೆ ಶರಣನೆ ಅಲ್ಲಲ್ಲ ತತ್ಕಾಲಕ್ಕಾಗುವ ಸುಖದುಃಖವ ಹೇಳಿದುದು ಶರಣನೆ ಅಲ್ಲಲ್ಲ, ಅಘೋರ ಮುಖದಿಂದ ಹುಟ್ಟಿದ ಮಂತ್ರಗಳ ಜಪಿಸಿ ಮಹತ್ವವ ಮಾಡಿದರೆ ಶರಣನೆ ? ಸೂಕ್ಷ್ಮತಂತ್ರವ ಗಣಿಸಿದಲ್ಲಿ ಸ್ವರ್ಗದ ವಾರ್ತೆ ಹೇಳಿದರೆ ಶರಣನೆ ? ಪ್ರಸಂಗ ಚಿಂತಾಮಣಿಯ ನೋಡಿ ಸುಖದುಃಖ ಹೇಳಿದರೆ ಶರಣನೆ ? ಅಲ್ಲಲ್ಲ ತಾನಾರೆಂಬ ತನ್ನಿರುವಿನ ಅರುವು ಕೈಕರಣವಾದುದೆ ಶರಣತ್ವ ನೋಡಾ, ಆ ಮಹಾಮಹಿಮಂಗೆ ದೇಹವಳಿದರೇನು , ದೇಹಧರಿಸಿ ಬಂದರೇನು, ಇಂತಪ್ಪ ಶಿವ ಶರಣನು ನಿದ್ರೆಗೈದಡೆ ಜಪ ಕಾಣಿರಣ್ಣಾ, ಶರಣ ತನ್ನಂತರಂಗದೊಳ ನ್ಯಸ್ತವಾಗಿಹ ಪರಮ ಚಿದ್ ಬೆಳಗುಳ್ಳ ಶಿವತತ್ವವರಿತು ತನು ಮನವ ಮರೆತುದೆ ನಿದ್ರೆಗೈದುದು. ಇದು ಶರಣನ ಜಪ ಕಾಣಿರಂಣಾ, ಶರಣನ ಜಪ, ಅಜಪವೆ ಜಪವಾಗಿಹುದು, ಇಲ್ಲಿ ಮಣಿಯನೆಣಿಸುವುದು ಇಲ್ಲ, ನಿಜದಲ್ಲಿ ಮೈಮರೆತುದು ಜಪ, ಪರಮ ಚಿದ್ ಬೆಳಗು ತಾನಾಗಿ ಬೆಳಗುಳ್ಳದ್ದಾಗಿಹುದೆ ಶಿವ ಶರಣನ ಜಪ ಕಾಣಿರಂಣಾ.

*ಶಿವ ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರಾಂಣಾ* : ಶಿವಶರಣನೆಂಬುದು ಭೇದಿಸಬಾರದೆ ಇಪ್ಪ ಅಭೇದ್ಯಶಿವ, ಈ ಶಿವತತ್ವವರಿತು, ಶಿವ ತಾನಾಗಿ ಬೆಳಗಿದುದು ಶರಣಶರಣನೆಂದರೆ ಶಿವ, ಶಿವನೆಂದರೆ ಶರಣ, ಕಾಣದುದು ಶಿವ, ಕಾಣದುದ ಕಂಡಾತನೆ ಶರಣ, ಈ ಮಹಾಂತನೆದ್ದು ಕುಳಿತರೆ ಕೇಳುವದಿನ್ನೇನು, ನೋಡಿದುದೆಲ್ಲವು ಶಿವಮಯವು. ನುಡಿದುದೆಲ್ಲವು ಶಿವತತ್ವವು, ಶಿವಮಂತ್ರವು, ಶಿವಮಯವೆಂಬುದು ಅಕಥನೀಯ ಘನವು, ಶರಣನೆದ್ದು ಕುಳಿತರೆ ಶಿವತತ್ವವು, ಅನನ್ಯ ಭಕ್ತರಿಗೆ ಲಭ್ಯವು, ನುಡಿಗೆಡೆಗೊಡದ ಘನರೂಪಿ ಶಿವರಾತ್ರಿ ಕಾಣಿರಂಣಾ, ನಾನೀನೆಂಬುದಕ್ಕೂ ತೆರಹಿಲ್ಲದ ಘನದಿರುವಿನ ಶಿವರಾತ್ರಿ ಕಾಣಿರಂಣಾ. ಈ ಶಿವರಾತ್ರಿ ತತ್ವವರಿತವರ ಶಿವರಾತ್ರಿ. ವರ್ಷಕ್ಕೊಂದು ಸಲ ಬರುವ

ಶಿವರಾತ್ರಿಯಲ್ಲಾ, ನಿತ್ಯನಿರಂತರವಾಗಿಹ ಶಿವರಾತ್ರಿ. ಶರಣನ ಅಂತರಂಗದಲ್ಲಿ ನ್ಯಸ್ತವಾಗಿಹ ಪರಮ ಚಿದ್ ಬೆಳಗಿನ ಬೆಳಗುಳ್ಳ ಶಿವರಾತ್ರಿ. ತಾನೆ ಸ್ವಪ್ರಕಾಶನಾಗಿ ಬೆಳಗಿಹ ಶಿವರಾತ್ರಿ. ಈ ಶಿವರಾತ್ರಿ ಕಂಡುದು ತತ್ವವರಿತ ಶರಣಂಗೆ.

ಶಿವ ಶರಣ ನಡದಡೆ ಪಾವನ ಕಾಣಿರಂಣಾ : ಶರಣನದು ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಯಿಲ್ಲದ ರುಚಿ, ಭಾವವೆ ಕಪ್ಪರವಾಗಿ ಪರಮ ದೇಹಿಯೆಂದು ಬೇಡುವ ಪರಮನ ತೋರಯ್ಯ ಗುಹೇಶ್ವರ. ಶರಣ ಸುಳಿಯದವನಾಗಿ ಸುಳಿದಾಡುವವನು. ನಿರ್ಗಮನಿಯಾಗಿ ನಿಂತುದರಿಂದ ಅವರ ನಡೆಪಾವನ, ಶರಣನು ಕಾಲಿಲ್ಲದೆ ನಡೆಯುವವನು. ಕೈಯಿಲ್ಲದೆ ಮುಟ್ಟುವವ ಬಾಯಿಲ್ಲದೆ ಚಿದ್ರಸವ ಸವಿಯುವ ಘನವಂತ ; ಚಿದಾಕಾಶವೆ ತಾನಾಗಿ ಸಂಚರಿಸುವ ಶರಣ ಸುಜ್ಞಾನಿ. ಲಿಂಗವಾಗಿ ನಡೆವವ ಲಿಂಗವಾಗಿ ನುಡಿವವ, ಲಿಂಗವಾಗಿ ಮುಟ್ಟುವವ, ಲಿಂಗವಾಗಿ ರುಚಿಸುವ ಸರ್ವಾಂಗ ಲಿಂಗಿಯಾಗಿದ್ದ ಶರಣ ನಡೆಪಾವನ ಕಾಣಿರಂಣಾ, ಆತನ ಭಾವಭರಿತಭಾವ, ಮನಮೇರೆದಪ್ಪಿದಭಾವ, ಎಲ್ಲೆಲ್ಲೂ ಲಿಂಗಘನವಾಗಿ ಕಂಡ ಭಾವ, ಇಂತಪ್ಪ ಭರಿತಭಾವ, ಶರಣನದಾದುದರಿಂದ ಶಿವಶರಣನ ನಡೆ ಪಾವನ ಕಾಣಿರಂಣಾ ಎಂದು ಹೇಳಿಹರು.

ಶಿವ ಶರಣ ನುಡಿದಡೆ ಶಿವತತ್ವ ಶಿವಮಂತ್ರ ಕಾಣಿರಂಣಾ : ಶಿವ ಶರಣನ ನುಡಿ ಲೋಕಕ್ಕೆ ವಿರೋಧವಾಗಿಹ ನುಡಿ, ಜ್ಞಾನಾಜ್ಞಾನಂಗಳಿಗೆ ಮೀರಿಸುವ ನುಡಿ, ಮರವರುವಿಂಗೆ ಮೀರಿಸುವ ನುಡಿ, ಸಮಗೋಷ್ಠಿಯಾಗಿಹ ನುಡಿಗೆಡೆಗೊಡದ ಘನವಾಗಿಹ ನುಡಿ, ಅಹುದು ಅಲ್ಲವೆಂಬುದಕ್ಕೂ ಇಂಬುಗೊಡದ ನುಡಿ, ನಾಮ ನಿರ್ನಾಮಂಗಳ ಮಾಡುವ ನುಡಿ, ಎಂಜಲಮಾತಸೇರದ ನುಡಿ, ಮಿಗೆ ಮಿಗೆ ಮೀಸಲವಾಗಿಹ ತತ್ವದ ಸಂಜ್ಞೆ ಶಬ್ದಮುಗ್ಧವಾಗಿಹ ಸಂಜ್ಞೆ, ಭಾಷೆ ಪ್ರಸಾದ ಸೇರದ ಸಂಜ್ಞೆ, ಈ ಸಂಜ್ಞೆಯ ಅವರನುಡಿ, ಇದು ಶಿವತತ್ವ ಶಿವಮಂತ್ರ, ಇದು ಮಾತಿನಂತುಟಲ್ಲ ಶಿವಾಚಾರದ ಸರಿದೊಡಕು ಬೀದಿಯ ಮಾತಲ್ಲ, ರಚ್ಚೆಯ ಮಾತಲ್ಲ, ಏಕೋ ರಾತ್ರಿ ಬಂದು ಗುಹೇಶ್ವರನ ಕೂಡಿದ ಕೂಟ ಇಂದು ಸುಖ ಮುಂದೆ ಲೇಸು.

ಶರಣರ ನುಡಿ ಮಾತಿಗೆ ಮೀರಿಸುವುದು ನೆನಹು ನಿರ್ಣಯಕ್ಕೆ ಮೀರಿಸುವುದು. ಪ್ರಪಂಚ ಪರಮಾರ್ಥಕ್ಕೂ ಮೀರಿಸಿ ನಿಜವ ಕಾಣಿಸುವುದೇ ಅವರ ಮುಖ್ಯಗುರಿಯು. ಶರಣರ ನುಡಿ ಇದು ಶಿವತತ್ವ, ಶಿವಮಂತ್ರ, ಕಾಣಿರಂಣಾ ಎಂದು ಹೇಳಿಹರು.

ಶಿವ ಶರಣನೋಡಿದಡೆ ಪಾಪಕ್ಷಯ ಕಾಣಿರಂಣಾ : ಶಿವ ಶರಣನ ನೋಟ, ಸ್ವಪ್ರಕಾಶ ನೋಟ, ಕಲ್ಪಿತನಾಗಿ ನೋಡದ ನೋಟ, ಸ್ವಯ ನೋಟ, ಚಿಜ್ಯೋತಿ ತನ್ನ ಹೊರ್ತು ಅನ್ಯವ ಕಾಣದ ನೋಟ, ಪರಾತ್ಪರ ನೋಟ, ಸಕಲವು ಗುರುವಿನ ಗುರುವಾಗಿ ಕಂಡನೋಟ, ಇಹಪರ ಗುರುವಾಗಿಹ ನೋಟ, ಶುದ್ಧಾತ್ಮನೋಟ, ನಿರ್ಮಳಾಂಗ ಗುರುವ ಕಂಡ ನೋಟ, ಅಖಂಡ ನೋಟವಾದ್ದರಿಂದ ಇಲ್ಲಿ ರಾಗವೇತರದು, ವಿರಾಗವೇತರದು, ಮನವು ಮಹಾಲಿಂಗದ ಪರಿಣಾಮಿಯಾದುದರಿಂದ ಆವರಣಕ್ಕಿಂಬಿಲ್ಲ ನಿಷ್ಕಳಂಕವಾದು ದರಿಂದ ಪಾಪಕ್ಷಯವೆಂದು ಹೇಳಿಹರು.

ಶಿವಶರಣ ಮುಟ್ಟಿದುದು ಸರ್ವಸಿದ್ಧಿ ಕಾಣಿರಣ್ಣಾ : ಶರಣ ಮುಟ್ಟಬಾರದುದ ಮುಟ್ಟಿದುದು ಅಸಾಧ್ಯವ ಸಾಧಿಸಿದುದು, ಕಾಣದುದ ಕಂಡ ಸ್ವಮಹಿಮ, ಸ್ವಮಹಿಮನಾಗಿ

ಸ್ವಮಹಿಮೆಯ ಮುಟ್ಟಿದುದು. ನಿಶಬ್ದ ಬ್ರಹ್ಮ ಹೊಗಳತೆಗೆ ಸಿಕ್ಕುವುದೆ ? ಅಂತಪ್ಪ ಮಹಾಘನವ ಮಾತುಮನಂಗಳಿಲ್ಲದವನಾಗಿ ಮುಟ್ಟಿದುದು ; ಎಲ್ಲೆಲ್ಲೂ ತನ್ನ ಕಂಡಿಹನು. ನಿಶಬ್ದಬ್ರಹ್ಮದಿರುವೆ ಶಬ್ದಮುಗ್ಧನಾಗಿ ಕಾಣುತ್ತಿಹನು. ತನ್ನ ಅಂಗಾಂಗಗಳೆಲ್ಲ ನಿಶಬ್ದ ಬ್ರಹ್ಮದಿರುವಿನ ಅರುವಾಗಿ ಪ್ರಜ್ವಲಿಸುವವು. ಶರಣ ಮುಟ್ಟಿದುದು, ತನ್ನಿಂದ ತಾನಾದ ಘನವ ಮುಟ್ಟಿದುದು, ಮುನ್ನ ಮುನ್ನಲಾದುದ ಮುಟ್ಟಿದುದು ತಾನೆ ತಾನಾಗಿ ತನ್ನಿಂದ ತನ್ನ ಮುಟ್ಟಿದುದುದು, ತಾನೆ ತಾನಾಗಿ ತನ್ನ ಕಂಡುದು ತಾನೆ ತಾನಾಗಿ ಬೆಳಗುಳ್ಳ ಘನವಾದುದರಿಂದ ಸರ್ವಸಿದ್ಧಿ ಎಂದು ಹೇಳಿಹರು.

ಶಿವ ಶರಣನ ಮನವೆ ಲಿಂಗಕಾಣಿರಂಣಾ : ಶರಣನ ಮನ, ತನ್ನ ಪೂರ್ವಾಶ್ರಯ ಕಾಣದ ಮನ, ಆವಾವ ನೆನಹು ಸೇರದ ಮನ, ಮರವು ಅರುವೆಂದು ನಿರ್ಣಯಿಸದ ಮನ, ಭಾವಕ್ಕಗಮ್ಯವಾಗಿಹ ಮನ, ಅರುವ ಅರಿಯ ಹೋಗಿ, ತನ್ನ ಮೂಲದಲ್ಲಿ ರಮಿಸಿದ ಮನ, ಮಿಗೆ ಮಿಗೆ ಮೀಸಲ ತತ್ವ ತಾನಾಗಿಹ ಮನ ಶಬ್ದ ಸಂದಣಿ ಸೇರದ ಮನ, ಅಖಂಡಿತ ಮನ, ಎಲ್ಲೆಲ್ಲೂ ತನ್ನ ಕಂಡ ಮನ, ಅರಿಯಲಿಲ್ಲದರುವೆ ತಾನಾಗಿಹ ಮನ, ಘನ ಮನವಾದ್ದರಿಂದ ಶರಣರ ಮನವೆ ಲಿಂಗವೆಂದು ಅವರ್ಣೀಯವೆಂದು ಹೇಳಿಹರು.

ಗುಹೇಶ್ವರ ನಿಮ್ಮ ಶರಣನ ಚರಿತ್ರೆ ವಿಪರೀತವಯ್ಯ : ಶರಣ, ಘನಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿಹ ಶರಣ, ಕೂಡಲಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧನಾಗಿರ್ದ ಶರಣ, ಶರಣ ಏನೊಂದಾಗದ ಘನ, ಗಗನ ಸದೃಶನೆಂದು ಔಪಚಾರಿಕವಾಗಿ ಹೇಳಿದ ವಿಷಯ. ಗಗನಕ್ಕೆ ಘಟಾಕಾಶ, ಮಠಾಕಾಶ, ಮೇಘಾಕಾಶ, ಮಹಾಕಾಶವೆಂದರೂ ಏನೊಂದಾದುದಿಲ್ಲ ಇದ್ದಂತಿದ್ದ ಆಕಾಷ ಆಕಾಶವತ್ ಆಕಾಶ, ಅದು ಅನುಪಮವಾದುದರಿಂದ ಅದರ ಚಾರಿತ್ರ್ಯ ವಿಪರೀತವು. ಹಾಗೆ ಏನೊಂದಾಗದ ಘನ ಸ್ವಮಹಿಮ, ಷಟ್‌ಸ್ಥಲವಾಗದ ಮಹಾಂತ, ಅಷ್ಟಾವರ್ಣ, ಪಂಚಾಚಾರ, ಶಿವಾಚಾರ, ಬ್ರಹ್ಮಾಚಾರವಾಗದ ಮಹಾಂತ, ತತ್ವ, ಅತತ್ವವಾಗದ ಮಹಾಂತ ಅಜ್ಞಾನ ಜ್ಞಾನವಾಗದ ಮಹಾಂತ, ಆಗದವನೆಂಬೆನೆ ? ಆದವನಂತೆ ಕಾಣುವನು ಏಕೆಂದರೆ ತನ್ನ ಅಂತರಂಗದಲ್ಲಿ ನ್ಯಸ್ತವಾಗಿಹ ಪರಮ ಚಿದ್‌ಬೆಳಗನರಿಯ ಹೋಗಿ ಬೆಳಗಿನ ಬೆಳಗು ತಾನಾಗಿ ಶಬ್ದಮುಗ್ಧನಾಗಿಹ ಮಹಾಂತನಾದುದರಿಂದ ಈತನ ಚರಿತ್ರೆ ವಿಪರೀತ, ಲೌಕಿಕರಂತೆ ನಡೆವ, ಲೌಕಿಕರಂತೆ ನುಡಿವ, ಪರಮಾರ್ಥದವರಂತೆ ನಡೆವ, ಪರಮಾರ್ಥದವರಂತೆ ನುಡಿವ, ತಾನು ಮಾತ್ರ ನಡೆದು ನಿರ್ಗಮನಿಯಾಗಿಹ ಘನವಂತ, ನುಡಿದು ನಿಶಬ್ದ ಘನವಾಗಿಹ ಮಹಾಮಹಿಮ, ಈತನ ಚಾರಿತ್ರ್ಯ ಇದು ಕಾರಣ ವಿಪರೀತವೆಂದು ಹೇಳಿಹರು.

**186**

**ಶರಣನ ಒಡಲುಗೊಂಡ ಅಖಂಡಿತಲಿಂಗಕ್ಕೆ ಅರ್ಚನೆಯಿಲ್ಲ,**
**ಶರಣನ ಒಡಲುಗೊಂಡ ಅಚಲಿತಲಿಂಗಕ್ಕೆ ಅರ್ಪಿತವಿಲ್ಲ,**
**ಶರಣನ ಒಡಲುಗೊಂಡ ಅನುಪಮಲಿಂಗಕ್ಕೆ ಅವಧಾನವಿಲ್ಲ,**

**ಅದೇನು ಕಾರಣವೆಂದಡೆ;**
**ಶರಣನಿಂದಾದ ಅರ್ಚನೆ, ಶರಣನಿಂದಾದ ಅರ್ಪಿತ,**
**ಶರಣನಿಂದಾದ ಅವಧಾನ**
**ಇದು ಕಾರಣ ಸಂದಳಿದು ಲಿಂಗವಾದ ಮತ್ತೆ**
**ಆನಂದವಲ್ಲದೆ ಅಣುಮಾತ್ರ ಕ್ರೀಯಿಲ್ಲ ಕಾಣಾ ಗುಹೇಶ್ವರಾ.** ॥ 1574 ॥

**ತಾತ್ಪರ್ಯ** : *ಶರಣನ ಒಡಲುಗೊಂಡ ಅಖಂಡಿತ ಲಿಂಗಕ್ಕೆ ಅರ್ಚನೆಯಿಲ್ಲ :* ಶರಣ ಲಿಂಗಕ್ಕೆ ಲಿಂಗವಾಗಿಹ ಶರಣ, ಲಿಂಗಘನವಾದರೆ ಶರಣ ಘನಕ್ಕೆ ಘನನಾಗಿಹನು. ಲಿಂಗ ಬೆಳಗುವದಾದರೆ ಶರಣ ಬೆಳಗಿನ ಬೆಳಗು ಆಗಿಹನು. ಶರಣನ ಒಡಲು ಬೆಳಗುಳ್ಳ ಒಡಲು, ನಿರವಧಿ ಒಡಲು ಇಂತಹ ಒಡಲುಗೊಂಡ ಅಖಂಡಿತ ಲಿಂಗಕ್ಕೆ ಅರ್ಚನೆಯಿಲ್ಲ. ಶರಣಭರಿತಲಿಂಗ ಎಲ್ಲಾ ಕಡೆಯಲ್ಲಿಯು ಉಂಟು, ಲಿಂಗಭರಿತ ಶರಣನಪೂರ್ವ ನೋಡಾ, ಗಮನವುಳ್ಳ ಜಂಗಮವೆಲ್ಲ ಎಡೆಯಲ್ಲಿಯೂ ಉಂಟು, ನಿರ್ಗಮನಿ ಜಂಗಮ ಅಪೂರ್ವ ನೋಡಾ, ಸುಚೈತನ್ಯಕ್ಕೆ ನಿಜಚೈತನ್ಯ ಸಾಹಿತ್ಯ ನೋಡಾ, ಈ ಲಿಂಗ ಜಂಗಮದ ಸಕೀಲ ಸಂಬಂಧದಲ್ಲಿ ಪರಿಣಾಮಿ ಕೂಡಲಚೆನ್ನಸಂಗಾ ನಿಮ್ಮ ಶರಣ.

ಶರಣ ಆರು ಗೊತ್ತೆ ? ದೇಹಿಗೆ ದೇಹಿಯಾಗಿರ್ಪ ಭೇದವ ಬಲ್ಲ ಶರಣ, ಅರುವಿಂಗೆ ಅರುವಾಗಿರ್ಪ ಘನವಂತನಾದುದರಿಂದ ಸುಚೈತನ್ಯಕ್ಕೆ ನಿಜ ಚೈತನ್ಯ ಸಾಹಿತ್ಯ ನೋಡಾ ಎಂದು ಹೇಳಿರುವರು. ಶರಣನ ಒಡಲುಗೊಂಡ ಅಖಂಡಿತಲಿಂಗ, ಅರುವಿಂಗೆ ಅರುವಾಗಿರ್ಪ ಶರಣನ ಒಡಲು ಅರುಹೃದಯವಾಗಿಹ ಒಡಲು ಇದು ನಿಸ್ಸೀಮ ಒಡಲು, ಮರವು ಅರವು ಕಾಣದ ಒಡಲು. ಇದು ನಿತ್ಯ ಇದು ಅನಿತ್ಯವೆಂದು ವಿಭಾಗ ಮಾಡದ ಒಡಲು, ಪ್ರಕೃತಿ ಪುರುಷರ ಕಾಣದ ಒಡಲು, ಸಗುಣ, ನಿರ್ಗುಣ ಕಾಣದ ಒಡಲು, ಅಜ್ಞಾನ ಜ್ಞಾನಕಾಣದ ಒಡಲು, ಬಂಧ ಮೋಕ್ಷ ಕಾಣದ ಒಡಲು, ಕ್ಷರಾಕ್ಷರ ಕಾಣದ ಒಡಲು ಇದು ಅರಿಯದರುವುಳ್ಳ ಒಡಲು, ಈ ಒಡಲುಗೊಂಡ ಅರುವಿನ ಘನವ ಅದಾರು ಬಲ್ಲರು. ಓಹೋ !! ಒಡಲೊಳು ನ್ಯಸ್ತವಾಗಿಹ ನಿಜ ಚಿದ್ಘನದ ರಹಸ್ಯವ ಅದಾರು ಬಲ್ಲರು, ಸುಚೈತನ್ಯಕ್ಕೆ ನಿಜ ಚೈತನ್ಯವಾಗಿಹ ಶರಣನೆ ಬಲ್ಲ, ಇದು ಕಾರಣ ಶರಣನ ಒಡಲುಗೊಂಡ ಅಖಂಡಿತ ಲಿಂಗ, ಇದು ನಿಸ್ಸೀಮವಾಗಿಹ ಲಿಂಗ. ಇಲ್ಲಿ ಪೂಜಿಸುವ ಭಕ್ತನಿಲ್ಲ ಪೂಜೆಗೊಂಬ ಪೂಜಾ ಲಿಂಗವಿಲ್ಲ, ಶರಣ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲುವುಳ್ಳ ಘನ ಮಹಿಮ, ಶರಣನ ಒಡಲುಗೊಂಡ ಲಿಂಗ ಚೈತನ್ಯವು ; ಅದಕ್ಕಾಗಿ ಇದಕ್ಕೆ ಅರ್ಚನೆಯಿಲ್ಲ ಎಂದು ಹೇಳಿಹರು.

ಆವುದು ಕುರುಹುಳ್ಳದು ಆಗಿದೆ, ಅದಕ್ಕೆ ಅರ್ಚನೆ ಉಂಟು, ಶರಣನ ಹೃದಯ, ಹೃದಯದ ಹೃದಯವಾಗಿಹ ಮಹದರುವು ; ಅಂತಪ್ಪ ಹೃದಯದಲ್ಲಿದ್ದ ನಿಜಚೈತನ್ಯ ಬಹುಗಹನವಾದುದು, ಅಲ್ಲಿ ಪ್ರಜ್ವಲಿಸುವ ಘನ ತೇಜವು ಶೃತಿಗಗೋಚರವಾಗಿಹುದು. ಅದಕ್ಕಾಗಿ ಅರ್ಚನೆಯಿಲ್ಲವೆಂದು ಹೇಳಿಹರು.

ಶರಣನ ಒಡಲುಗೊಂಡ ಅಚಲಿತ ಲಿಂಗಕ್ಕೆ ಅರ್ಪಿತವಿಲ್ಲ : ಶರಣ ! ಗುರುವಿಡಿದ ಅರುವಿನಿಂದ ಅರುವಾಗಿಹ ಶರಣನಲ್ಲ, ಲಿಂಗವಿಡಿದ ಅರುವಿನಿಂದ

ಅರುವಾಗಿಹ ಶರಣನಲ್ಲ, ಇಲ್ಲದ ಗುರು, ಇಲ್ಲದ ಲಿಂಗ, ಕಲ್ಪಿತಕ್ಕೆ ಅರುವಹುದೆ ? ತನ್ನಿಂದ ತಾನರಿವುಡೆ ಅರಿವು ಗುಹೇಶ್ವರಾ. ಶರಣ : ಎರವಲ ಜ್ಞಾನದಿಂದ ತನ್ನನರಿದು ಶರಣನಾದವನಲ್ಲ, ತನ್ನಿಂದ ತನ್ನ ತಾನರಿದ ಶರಣ. ಈ ಮಹಾಂತನ ಒಡಲು ಅರುವಿನ ಒಡಲು, ಅರುಸ್ವರೂಪವಾಗಿಹ ಒಡಲು, ಈ ಚೈತನ್ಯದೊಡಲಿನ ರಹಸ್ಯವ ಅದಾರು ಬಲ್ಲರು. ಈ ಶರಣನ ಒಡಲುಗೊಂಡ ಅಚಲಿತ ಲಿಂಗ, ಗಗನದಂತೆ ಅಚಲಿತವಾಗಿಹ ಲಿಂಗ, ಮನ ಮೇರೆದಪ್ಪಿದ ಲಿಂಗ, ಬುದ್ಧಿಗಗಮ್ಯುವಾಗಿಹ ಲಿಂಗ, ಚಿಂತನಕ್ಕೆ ನಿಲುಕದ ಅಚಿಂತ್ಯ ಲಿಂಗ, ಈ ಅಚಿಂತ್ಯಲಿಂಗಕ್ಕೆ ಅರ್ಪಿತವಿಲ್ಲ, ಅಚಿಂತ್ಯಲಿಂಗವದು, ಆವಾವ ಚಿಂತನಕ್ಕೊಳಪಡದ 'ಲಿಂಗ' ಅದಕ್ಕೆ ಏನ ಅರ್ಪಿಸುವುದು. ಇದು ಕಾರಣ ಅಪ್ರಮಾಣಲಿಂಗವಾದ್ದರಿಂದ ಅರ್ಪಿತವಿಲ್ಲ ಎಂದು ಹೇಳಿಹರು. ಅಚಲಿತ ಲಿಂಗಕ್ಕೆ ಚರಾಚರ ಜಗವರ್ಪಿಸಲು ಇದು ಸಟೆಯು, ಅಚಲಿತ ಲಿಂಗವು ದಿಟವು, ದಿಟಕ್ಕೆ ಸಟೆಯ ಅರ್ಪಿಸುವುದದೆಂತು, ಬೆಳಕಿಗೆ ಕತ್ತಲೆಯ ಅರ್ಪಿಸುವರೆ ? ಅಮೃತವು ಅಮೃತವೆ ಸಟೆಯು ಸಟೆಯೆ ಅದಕ್ಕಾಗಿ ಅಚಲಿತ ಲಿಂಗಕ್ಕೆ ಅರ್ಪಿತವಿಲ್ಲವೆಂದು ಹೇಳಿಹರು.

ಶರಣನ ಒಡಲುಗೊಂಡ ಅನುಪಮ ಲಿಂಗಕ್ಕೆ ಅವಧಾನವಿಲ್ಲ : ಶರಣ, ತೋರಬಾರದ ಘನನಾಗಿರುವಲ್ಲಿ ಅವರ್ಣೀಯನು, ಅಕಥನೀಯನಾದುದರಿಂದ ತೋರಬಾರದ ಘನ. ಈ ಮಹಾಂತನ ದೃಷ್ಟಿ ಲಿಂಗ, ಮನ ಲಿಂಗ, ಕರಣಂಗಳು ಲಿಂಗ ಕಿರಣಂಗಳಾಗಿರುವಲ್ಲಿ ಆ ಘನವಂತನು ಈ ಪೂಜಾಲಿಂಗವ ತೆಗೆದುಕೊಂಡು ಕರ್ಮಿಗಳಂತೆ ಪೂಜಿಸುವನೆ ? ನೆನೆಯುವವನೆ ? ಚಿಂತಿಸುವವನೆ ? ಭಾವಿಸುವವನೆ ? ಅರಿಯಿಲಿಲ್ಲದ ಅರುವಾಗಿಹ ಘನವಂತ, ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗ, ಶೃತಿಗಗೋಚರವಾಗಿಹ ಲಿಂಗ, ವಾಙ್ಮನೋತೀತ ಲಿಂಗವಾದ್ದರಿಂದ ಶರಣನ ಒಡಲುಗೊಂಡ ಅನುಪಮ ಲಿಂಗಕ್ಕೆ ಅದಾವ ಲಕ್ಷಣದಿಂದುಪಮಿಸುವುದು ಲಕ್ಷಿಸುವುದು ? ಅನುಪಮ ಲಿಂಗ, ಅಖಂಡಿತಲಿಂಗ, ಅಚಲಿತ ಲಿಂಗವಿದು ನೆನಹಿಂಗೊಳಪಟ್ಟುದು ಅಲ್ಲ, ಇದು ಎಚ್ಚರದ ಎಚ್ಚರವಾಗಿಹ ನಿಜದೆಚ್ಚರ, ನಿಜದೆಚ್ಚರವದು ಅರುವಿಂಗರುವಾಗಿಹ ಘನವು. ಅದಕ್ಕಾವ ವಿಸ್ಮೃತಿ, ಅದಕ್ಕಾವ ಸ್ಮೃತಿ, ಇದು ಕಾರಣ ಅವಧಾನವಿಲ್ಲವೆಂದು ಹೇಳಿಹರು.

ಅದೇನು ಕಾರಣವೆಂದಡೆ ಶರಣನಿಂದಾದ ಅರ್ಚನೆ, ಶರಣನಿಂದಾದ ಅರ್ಪಿತ ಶರಣನಿಂದಾದ ಅವಧಾನ, ಕ್ರಿಯೆದಿಂದುಕ್ತವಾದುದನ್ನು ಆರಾದರೂ ಮಾಡಿದುದುಂಟು, ಅರ್ಪಿತ ಅರ್ಚನೆ ಮಾಡಿದುದುಂಟು ಎಚ್ಚರಿಸಿದುದು ಉಂಟು, ಅಣು ಮಾತ್ರವು ಕ್ರಿಯೆ ಇಲ್ಲದ ಅರ್ಚನೆ ಶರಣನದು. ಅರ್ಪಿತವೂ ಕ್ರಿಯೆ ಇಲ್ಲದುದು ಅವಧಾನವು ಕ್ರಿಯೆ ಇಲ್ಲದುದು ಇದರ ಘನವದಾರು ಬಲ್ಲರು.

ಲಿಂಗಭರಿತ ಶರಣ, ನಿರ್ಗಮನಿ ಜಂಗಮ ಇವರೆ ಬಲ್ಲರು. ಏಕೆಂದರೆ ಸುಚೈತನ್ಯಕ್ಕೆ ನಿಜಚೈತನ್ಯ ಜಂಗಮ ಸಾಹಿತ್ಯವಂತರು. ಇವರ ಹೃದಯ ಸುಚೈತನ್ಯ. ಇವರು ನಿಂತ ನಿಲುವು ತಾನೆ ತಾನಾಗಿಹ ನಿಜಚೈತನ್ಯ. ಶರಣನ ಒಡಲುಗೊಂಡುದು ಸುಚೈತನ್ಯವಾದ್ದರಿಂದ ಅಖಂಡಲಿಂಗ, ಅಚಲಿತ ಲಿಂಗ, ಅನುಪಮ ಲಿಂಗ, ಶರಣ ನಿಜಚೈತನ್ಯನಾದ್ದರಿಂದ ಜಂಗಮ ಸಾಹಿತ್ಯವಂತ. ಈ ಎರಡೊಂದಾದ ಘನವಂತನ ಅರ್ಚನೆ, ಅರ್ಪಿತ ಅಣುಮಾತ್ರ ಕ್ರಿಯೆಯಿಂದುಕ್ತವಾದುದಲ್ಲ, ಇದು ಕಾರಣ ಶರಣನಿಂದಾದ ಅರ್ಚನೆ

ಎರಡೊಂದಾದುದು. ಶರಣನಿಂದಾದ ಅರ್ಪಿತ ಎರಡೊಂದಾದುದು ಶರಣನಿಂದಾದ ಅವಧಾನ ಎರಡೊಂದಾದುದು, ಇದು ಕಾರಣ ಸಂದಳಿದು ಲಿಂಗವಾದ ಮತ್ತೆ ಆನಂದವಲ್ಲದೆ ಅಣು ಮಾತ್ರ ಕ್ರಿಯೆಯಲ್ಲ ಕಾಣಾ ಗುಹೇಶ್ವರಾ.

ಶರಣನ ಒಡಲುಗೊಂಡ ಅಖಂಡಿತ ಲಿಂಗ, ಅಚಲಿತ ಲಿಂಗ, ಅನುಪಮ ಲಿಂಗವೆಂಬುದು ಸಂದಳಿದು ಲಿಂಗವಾದ ಮತ್ತೆ ಆನಂದವಲ್ಲದೆ ಅಣು ಮಾತ್ರ ಕ್ರಿಯೆಯಿಲ್ಲವೆಂದು ಬಿತ್ತರಿಸಿದುದು ನೋಡುವುಡೆ ಘಟ್ಟಿದುಪ್ಪ, ತಿಳಿದುಪ್ಪಕ್ಕೆ ಭೇದವುಂಟೆ ? ದೀಪಕ್ಕೆ ದೀಪ್ತಿಗೆ ಭೇದ ಉಂಟೆ ? ಅಂಗಕ್ಕೆ ಆತ್ಮಕ್ಕೆ ಭೇದ ಉಂಟೆ ? ಎನ್ನಂಗವನು ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಸಾವಯವ ನಿರವಯ ಭೇದವಿಲ್ಲವಯ್ಯ ಚೆನ್ನಮಲ್ಲಿಕಾರ್ಜುನ. ಘಟ್ಟಿದುಪ್ಪ ತಿಳಿದುಪ್ಪಕ್ಕೆ ಹೇಗೆ ಭೇದವಿಲ್ಲವೊ ಹಾಗೆ ಘಟ್ಟಿದುಪ್ಪವೆಂದರೂ ಅದುವೆ, ತಿಳಿದುಪ್ಪವೆಂದರೂ ಅದುವೆ, ಇದ್ದುದೊಂದು ಹೇಗೋ ಹಾಗೆ ಶರಣನ ಒಡಲುಗೊಂಡ ಅಖಂಡಿತ ಲಿಂಗ, ಅನುಪಮ ಲಿಂಗವೆಂದರೂ ತಾನೆ ಶರಣನೆಂದರೂ ತಾನೆ ಒಡಲು ಎಂದರೂ ತಾನೆ, ಅರುವು ಎಂದರೂ ತಾನೆ, ಅರುವಿಂಗರುವಾದುದು ತಾನೆ, ಜ್ಞಾನವೆಂದರೂ ತಾನೆ, ಜ್ಞಾನಕ್ಕೆ ಜ್ಞಾನ ಸ್ವರೂಪನಾಗಿಹ ಶರಣನೆಂದರೂ ತಾನೆ, ಇದು ಕೇವಲ ಆನಂದದ ವಿಕಾಸವಲ್ಲದೆ ಅಣು ಮಾತ್ರ ಇಲ್ಲ, ಇಲ್ಲಿ ಕ್ರಿಯಾಚಾರ, ಭಾವಾಚಾರಕ್ಕಿಂಬಿಲ್ಲ ನೋಡಾ.

**187**

**ಭಕ್ತಿಯೆಂಬ ಸಮಾಧಾನ ಬಸವಣ್ಣನಿಂದ ಎನಗಾಯಿತ್ತು.**
**ಪ್ರಸಾದವೆಂಬ ಪರಿಣಾಮ ಮರುಳಶಂಕರದೇವರಿಂದ ಎನಗಾಯಿತ್ತು.**
**ಏಕೋಭಾವದ ನಿಷ್ಠೆ ಸಿದ್ಧರಾಮಯ್ಯದೇವರಿಂದ ಎನಗಾಯಿತ್ತು.**
**ಸರ್ವಜೀವ ಪರಿಪೂರ್ಣಕಳೆ ಚನ್ನ ಬಸವಣ್ಣನಿಂದ ಎನಗಾಯಿತ್ತು.**
**ಆದ ನಿಜದ ನೆಲೆ ಗುಹೇಶ್ವರಲಿಂಗವೆಂಬ ನಾಮವಾಯಿತ್ತು.** ॥ 1424 ॥

**ತಾತ್ಪರ್ಯ** : ಭಕ್ತಿಯೆಂಬ ಸಮಾಧಾನ ಬಸವಣ್ಣನಿಂದ ಎನಗಾಯಿತ್ತು : ಬಸವಣ್ಣನ ಭಕ್ತಿ ! ಷಟ್‌ಸ್ಥಲವ ನಿಸ್ಥಲವ ಮಾಡಿ ನಿಸ್ಥಲವ ಸ್ಥಲ ಮಾಡಿದ ಘನಕ್ಕೆ ಘನವಾಗಿಯ ತನ್ನ ಇರುವಿನ ಅರುವು ಈ ಭಕ್ತಿ ಅದಾರಿಗೆ ? ನೋಡಲು ದಾಸೋಹಂಭಾವ, ಎಲ್ಲೆಲ್ಲೂ ನೀನೆ ದೇವನೆಂಬ ಭರಿತ ಭಾವ, ಇದು ಲೀಲೆ, ಇದು ವಿನೋದ, ಬಸವಣ್ಣನ ನಿಜದಿರುವು ದಾಸೋಹವ ಸೋಹೆಗೊಂಡು ಹೋಗಿ ಗುರುವ ಕಂಡೆ, ಲಿಂಗ ಕಂಡೆ, ಜಂಗಮ ಕಂಡೆ ಪ್ರಸಾದವ ಕಂಡೆ ಇಂತೀ ಚತುರ್ವಿಧ ಸಂಪನ್ನನಾದೆನು. ಕೂಡಲಸಂಗಮದೇವಾ, ಇದು ಕಾರಣ ಶರಣ ಚಾರಿತ್ರ ವಿಪರೀತ. ಘನಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದನಯ್ಯ ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು ಶಬ್ದಮುಗ್ಧವಾದುದನೇನೆಂಬೆ.

ಬಸವಣ್ಣನ ಭಕ್ತಿಯೆಂಬುದು ಉತ್ಪತ್ತಿ ಇಲ್ಲಾಗಿ ಸ್ಥಿತಿ ಇಲ್ಲ, ಸ್ಥಿತಿ ಇಲ್ಲಾಗಿ ಲಯವಿಲ್ಲ. ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪುದಾದುದರಿಂದ

ಸಮಾಧಾನವಾಯಿತ್ತು, ಈ ಸಮಾಧಾನ ಅದಾರಿಗೆ ? ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿಹ ಸಮಾಧಾನ, ಇದು ಅಚಲಿತ ಸಮಾಧಾನ, ತನ್ನಿಂದ ತನ್ನಕಂಡ ಸಮಾಧಾನ. ಈ ಭಕ್ತಿ ಅದಾರಿಗೆ ? ಕೂಡದಗಲದ ಭಕ್ತಿ, ಕೂಡಿದುದು ಎಂದಲ್ಲಿ ಅಗಲದುದು ಸಿದ್ಧವಾಗುವುದು. ಅಗಲಿದುದು ಸಿದ್ಧವಾಗದಿದ್ದಲ್ಲಿ ಕೂಡಿದುದು ಸಿದ್ಧವಾಗದು. ಇದು ಅನುಪಮಭಕ್ತಿ, ಈ ಭಕ್ತಿಯೆಂಬ ಸಮಾಧಾನ ಬಸವಣ್ಣನಿಂದ ಎನಗಾಯಿತ್ತು.

ಪ್ರಸಾದವೆಂಬ ಪರಿಣಾಮ ಮರುಳಶಂಕರ ದೇವರಿಂದ ಎನಗಾಯಿತ್ತು : ಈ ಪ್ರಸಾದದ ಪರಿಣಾಮ, ಮರುಳ ಶಂಕರ ದೇವರದು. ಇದು ಶುದ್ಧ ಪ್ರಸಾದದ ಪರಿಣಾಮ ಸಿದ್ಧ ಪ್ರಸಾದದ ಪರಿಣಾಮ ಪ್ರಸಿದ್ಧ ಪ್ರಸಾದದ ಪರಿಣಾಮ, ತಾನೆ ಗುರು, ತಾನೆ ಲಿಂಗ, ತಾನೆ ಜಂಗಮನಾದ ಪರಿಣಾಮ. ಪ್ರಸಾದವೆ ಗುರು, ಪ್ರಸಾದವೆ ಲಿಂಗ, ಪ್ರಸಾದವೆ ಜಂಗಮ, ಪ್ರಸಾದನೆ ಪರಾತ್ಪರ, ಪ್ರಸಾದವೆ ಪರಮಜ್ಞಾನ, ಪ್ರಸಾದವೆ ಪರಮಾಮೃತ ಪ್ರಸಾದವೆ ವಾಙ್ಮನೋತೀತವಾಗಿರುವಲ್ಲಿ ಇದನೆಂತು ವಿವರಿಸುವುದು. ಇದು ತುದಿಮೊದಲಿಲ್ಲದ ಘನವ ನೋಡಾ, ಒಳ ಹೊರಗೆಂಬುದಿಲ್ಲದ ಅನುವ ನೋಡಾ, ಗುರು ಲಿಂಗ ಜಂಗಮ ತಾನೆಯಾಗಿ, ಮತ್ತೆ ತಾನೆಂಬುದೇನೂ ಇಲ್ಲವಾಗಿ ತನ್ನ ತಾನಿರ್ದೇಶೆಯ ಮಾಡಿಕೊಂಡು ನಿಜಪದವನೆಯ್ದಿಪ್ಪ ಪರಿಯನೋಡಾ, ಕೂಡಲ ಚೆನ್ನಸಂಗಮದೇವರಲ್ಲಿ ಪ್ರಸಾದಿಯಾಗಿಪ್ಪ ಮರುಳ ಶಂಕರದೇವರ ನಿಲುವ ನೋಡಾ.

ಇದು ಪ್ರಸಾದದ ಪರಿಣಾಮ ಈ ಪರಮಜ್ಞಾನರೂಪಿ ಪರಮಾಮೃತಕ್ಕೆ ತುದಿ ಮೊದಲಿಲ್ಲ ನೋಡಾ, ಇದು ಘನಕ್ಕೆ ಘನವಾಗಿಹುದು ನೋಡಾ, ಇದು ತನ್ನಯ ಇರುವು ನೋಡಾ, ಸ್ವಸ್ವರೂಪ ನೋಡಾ, ಗಗನಕ್ಕೆ ಒಳಹೊರಗೆಂಬುದುಂಟೆ ? ಚಿತ್ ಸ್ವರೂಪನರಿತ ಮಹಾಂತಂಗೆ ಅಂತರ ಆವುದು ಬಹಿರ್ ಆವುದು ? ಅನಾತ್ಮವಾವುದು ಆತ್ಮವಾವುದು ಅನಿತ್ಯವಾವುದು ? ನಿತ್ಯವಾವುದು ಬೆಳಗಿಸಿಕೊಳ್ಳುವದಾವುದು ಬೆಳಗುವದಾವುದು ? ಜಡವಾವುದು ? ಚೇತನವಾವುದು ನಾಶವಾವುದು ಅವಿನಾಶಿ ಆವುದು ? ತನ್ನನರಿದ ಶರಣನ ಸ್ವರೂಪ ಒಳಹೊರಗಿಲ್ಲದ ಆನಂದ ನೋಡಾ, ಬೆಳಗುವವ ತಾನೆ ಬೆಳಗುಳ್ಳ ಘನ ತಾನೆ, ಇದು ತನ್ನಿಂದ ತನ್ನ ತಾನರಿತ ನಿರ್ದೇಶೆಯ ಮಾಡಿಕೊಂಡ ನಿಜದ ಪರಿ, ಇಂತಪ್ಪ ಪ್ರಸಾದದ ಪರಿಣಾಮ ಮರುಳ ಶಂಕರ ದೇವರಿಂದ ಎನಗಾಯಿತ್ತು ಎಂದು ಪ್ರಭುದೇವ ಮರುಳ ಶಂಕರದೇವರ ಘನದಿರುವ ಕೊಂಡಾಡಿಹನು.

ಏಕೋ ಭಾವದ ನಿಷ್ಠೆ ಸಿದ್ಧರಾಮಯ್ಯ ದೇವರಿಂದ ಏನಗಾಯಿತ್ತು : ಏಕೋ ಭಾವ, ಇದಾರ ಏಕೋ ಭಾವ ! ಸಿದ್ಧರಾಮಯ್ಯ ದೇವರ ಏಕೋ ಭಾವ ತ್ರಿವಿಧ ಒಂದಾದ ಏಕೋ ಭಾವ ಇದು ಅಪ್ರತಿಮ ನಿಷ್ಠೆ, ಪ್ರತಿಮೆಯನ್ನೆ ಅಪ್ರತಿಮವಾಗಿ ಕಂಡ ನಿಷ್ಠೆ, ಚರಿಸಿ ಜಂಗಮವೆನಿಸಿತ್ತಯ್ಯ ಲಿಂಗವು, ನೆಲಿಸಿ ಲಿಂಗವೆನಿಸಿತ್ತಯ್ಯ ಲಿಂಗವು, ಇದರಿರುವ ಅರುಹಿದಲ್ಲಿ ಗುರುವೆನಿಸಿತ್ತಯ್ಯ ಲಿಂಗವು, ಗುರು ಲಿಂಗ ಜಂಗಮಕ್ಕೆ ತಿಲಾಂಶವೂ ಭೇದವಿಲ್ಲ ನೋಡಾ, ಎಲೆ ದೇವಾ ಭೇದಿಸಿದವಂಗೆ ಭವಬಾಧೆ ತಪ್ಪುವದೆ ದೇವರ ದೇವ ಕಪಿಲಸಿದ್ಧ ಮಲ್ಲಿಕಾರ್ಜುನ. ಎಲ್ಲೆಲ್ಲೂ ನೆಲಿಸಿದ ಸ್ಥಾವರವ ಅಚಲಿತಲಿಂಗವ ಮಾಡಿದ ಚರಿಸ್ಯಾಡುವ ಜಂಗಮವ ಅಖಂಡಿತ ಲಿಂಗವ ಮಾಡಿದ ಇವೆರಡರ ನಿಜದಿರುವ ಅರುಹಿ ಗುರುಲಿಂಗವದು ಅನುಪಮಲಿಂಗವ ಮಾಡಿದ, ಗುರು ಲಿಂಗ ಜಂಗಮ

ಮೂರೊಂದಾಗಿ ಕಂಡ ನಿಸ್ಸೀಮ ಇವುಗಳಲ್ಲಿ ಅಣುವಾದರೂ ಭೇದವ ಕಾಣದ ಅಭೇದ್ಯ, ಈ ತ್ರಿವಿಧದಲ್ಲಿ ಆರದು ಭೇದ ಜ್ಞಾನ, ಭೇದಭಾವ, ಭೇದದೃಷ್ಟಿಯಿಂದುಕ್ತವಾಗಿಹುದು ಅವರಿಗೆ ಭವ ಬಾಧೆ ತಪ್ಪುದು, ಇದು ಕಾರಣ ಎಲ್ಲೆಲ್ಲೂ ಒಂದನ್ನೆ ಕಂಡ ಏಕೋ ಭಾವದ ನಿಷ್ಠೆ ಸಿದ್ಧರಾಮಯ್ಯ ದೇವರಿಂದ ಎನಗಾಯಿತ್ತು ಎಂದು ಹೇಳಿಹರು.

ಸರ್ವ ಜೀವ ಪರಿಪೂರ್ಣ ಕಳೆ ಚನ್ನಬಸವಣ್ಣನಿಂದ ಎನಗಾಯಿತ್ತು : ಸಕಲ ಜೀವಂಗಳನ್ನು ಪರಿಪೂರ್ಣವಾಗಿ ಕಂಡ ಅಕ್ಷರೋತ್ತಮ ಚನ್ನಬಸವಣ್ಣ, ಈ ಜ್ಞಾನಕಳೆ ಅದಾರಿಗೆ ? ಅಂಗ ಲಿಂಗವೆಂಬುದು, ಲಿಂಗ ಅಂಗವೆಂಬುದು ಹುಸಿ, ಅಂಗ ಲಿಂಗವಾದಡೆ ಕಾಯದ ಕಳವಳವುಂಟೆ ? ಲಿಂಗ ಅಂಗವಾದಡೆ ಪ್ರಳಯಕ್ಕೆ ಒಳಗಾಗಬಹುದೆ ? ಅಂಗಲಿಂಗವಲ್ಲ, ಲಿಂಗ ಅಂಗವಲ್ಲ, ಅಂಗ ಲಿಂಗ ಸಂಬಂಧ ಸಂದಳಿದಲ್ಲಿ ಪ್ರಾಣಲಿಂಗ ಸಂಬಂಧಿ ; ಪ್ರಾಣ ನಿಷ್ಪ್ರಾಣವಾದಲ್ಲಿ ಲಿಂಗರೂಪಾಗಿ, ರೂಪು ನಾಸ್ತಿಯಾದುದು ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗಸಂಬಂಧ.

ಚೆನ್ನಬಸವಣ್ಣ ಅಖಂಡಿತ ಘನವಾಗಿಹ ಪೂರ್ಣ ಇರುವೆ ನಿಜದಿರುವು ಎಂದರಿದ ಘನವಂತ, ಅಂಗ, ಲಿಂಗ, ಎರಡು ಕಾಣ ಎರಡು ಕಂಡವಂಗೆ ಒಂದು ಮಾಡುವ ಕಲೆಯು ಉಂಟು, ಇದ್ದುದು ಇದ್ದಂತೆ ಅರಿತ ಮಹಾಮಹಿಮ ಈ ಮಹಾಂತಂಗೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ಮನಮೇರೆದಪ್ಪಿದ ನಿಲುವು. ಎರಡೆಂಬ ಕಲ್ಪಿತವಿಲ್ಲ, ಕಲ್ಪಿತವ ಕಾಣದ್ದರಿಂದ ಎಲ್ಲೆಲ್ಲೂ ಅನುಪಮ ಲಿಂಗವ ಕಂಡ, ಸಕಲ ಜೀವರೆಂಬುದು ಅನುಪಮ ಲಿಂಗವಾಗಿಹುದು. ಇದು ಕಾರಣ, ಕಲ್ಪಿತವಾಗಿಹ ಅಂಗ, ಲಿಂಗಕ್ಕೂ ಒಪ್ಪನು. ಆವುದು ಕಲ್ಪಿತಕ್ಕೆ ನಿಲುಕದ್ದಾಗಿಹುದು. ಅದು ಅಖಂಡಿತ ಘನವು ಅದುವೆ ಪೂರ್ಣ ಮದಃ ಪೂರ್ಣ ಮಿದಂ, ಪೂರ್ಣಾತ್ ಪೂರ್ಣ ಮುದಚ್ಯತೆ ಎಂದೆನಿಸಿಕೊಂಡುದು. ಸರ್ವ ಜೀವಪರಿಪೂರ್ಣ ಕಳೆಯಾಗಿಹುದು ಎಂದೆನ್ನುವ ಸದ್‌ಜ್ಞಾನಭರಿತ. ಇದು ನಿಃಶಬ್ದವೇದಿಗಳ ಜ್ಞಾನ, ಅಚಿಂತ್ಯಾತ್ಮವಾಗಿಹ ಪರಮಜ್ಞಾನವು ಇದು ಚನ್ನಬಸವಣ್ಣನಿಂದ ಎನಗಾಯಿತ್ತು ಎಂದು ಹೇಳಿಹರು.

ಆರ ನಿಜನೆಲೆ ಗುಹೇಶ್ವರ ಲಿಂಗವೆಂಬ ನಾಮವಾಯಿತ್ತು : ಭಕ್ತಿಯೆಂಬ ಪರಿಣಾಮವು ನಿಜದ ನೆಲೆಯುಳ್ಳುದು ಪ್ರಸಾದವೆಂಬ ಪರಿಣಾಮವು ನಿಜದ ನೆಲೆಯುಳ್ಳುದು. ಏಕೋ ಭಾವದ ನಿಷ್ಠೆಯು ನಿಜದ ನೆಲೆಯುಳ್ಳುದು. ಸರ್ವಜೀವ ಪರಿಪೂರ್ಣ ಕಳೆಯು ನಿಜದ ನೆಲೆಯುಳ್ಳ ಘನಕ್ಕೆ ಘನವು. ಸ್ಥಲಾತೀತವಾದ ಪರವಸ್ತುವಿನ ಇರುವಿನ ಸಂಜ್ಞೆಯಿಂದುಕ್ತವಾದ ನಿಜದ ನೆಲೆಯಾದುದರಿಂದ ಗುಹೇಶ್ವರ ಲಿಂಗವೆಂಬ ನಾಮವಾಯಿತ್ತು ಎಂದು ತನ್ನ ದೇಹವೆಂಬ ಗುಹೆಯೊಳಗೆ ಘನವಾಗಿಹ ಲಿಂಗವ ಕಂಡುದರಿಂದ ಗುಹೇಶ್ವರ ಲಿಂಗವೆಂಬ ನಾಮವಾಗದೆ ಇದು ತನ್ನಯ ಕಂಡ ನಿಜದನೆಲೆ ತನಗಾದ ನಿಜದ ನೆಲೆಯೆಂದು ಬಿತ್ತರಿಸಿಹನು. ಶರಣರು, ನಿಜದ ನೆಲೆಯುಳ್ಳವರಾದುದರಿಂದ ಸರ್ವಾಂಗವೆಲ್ಲವು ಲಿಂಗವು, ಅವರಿಗೆ ಮೈಯೆಲ್ಲಾ ಕಾಲು, ಮೈಯೆಲ್ಲಾ ನಾಲಿಗೆ, ಮೈಯೆಲ್ಲಾ ಮುಖ ಇದು ಕಾರಣ ಅಘಟಿತ ಘಟಿತವ ಸಾಧಿಸಿಹರು.

188

**ಹರಿವ ನದಿಗೆ ಮೈಯೆಲ್ಲ ಕಾಲು.**
**ಉರಿವ ಕಿಚ್ಚಿಗೆ ಮೈಯೆಲ್ಲ ನಾಲಿಗೆ.**
**ಬೀಸುವ ಗಾಳಿಗೆ ಮೈಯೆಲ್ಲ ಮುಖ**
**ಗುಹೇಶ್ವರಾ ನಿಮ್ಮ ಶರಣಂಗೆ,**
**ಸರ್ವಾಂಗವೆಲ್ಲ ಲಿಂಗ!** ॥ 1616 ॥

**ತಾತ್ಪರ್ಯ** : *ಹರಿವ ನದಿಗೆ ಮೈಯೆಲ್ಲಾ ಕಾಲು* : ಹರಿಯುವ ನದಿಯು ಪೂರ್ಣಾಂಗವು. ಪೂರ್ಣಾಂಗವುಳ್ಳುದು ಆದುದರಿಂದ ತನ್ನ ಮೂಲವಾಗಿಹ ಸಮುದ್ರವ ಸೇರಿ ಸಮುದ್ರವು. ಇದು ಸಕಲರಿಗೆ ವಿದಿತವಿದ್ದ ವಿಷಯ. ಈ ಹರಿಯುವ ನದಿ, ಮುನ್ನೆಲ್ಲಿಂದ ಬಂದಿತಲ್ಲಿಗೆ ಹೋಗುವ ಪ್ರವಾಹ. ಇದು ಮಹಾ ಪ್ರವಾಹ. ಸಮುದ್ರ ಸೇರುವ ಪ್ರವಾಹ, ಆವಲ್ಲಿಯೂ ನಿಲ್ಲದ ಪ್ರವಾಹ. ತನ್ನ ಮೂಲವ ಸೇರುವ ಪ್ರವಾಹ ಇದು ಕಾರಣ ಮೈಯೆಲ್ಲಾ ಕಾಲು ಎಂದು ಹೇಳಿಹರು.

ಹರಿಯುವ ನದಿ ಇದಾವ ನದಿ ! ಶರಣರ ಸುಮನವಾಗಿಹ ನದಿ, ಮನ ಮನ ಒಂದಾದ ನದಿ, ಇದು ಸಮದೃಷ್ಟಿಯುಳ್ಳ ಮನ, ಇಹಪರವ ಕಾಣದ ಮನ, ಕಾರ್ಯಕಾರಣ ಕಾಣದ ಮನ, ಅವಿಚಾರ ವಿಚಾರ ಕಾಣದ ಮನ, ಇದು ಬೋಧ, ಅಬೋಧ ಕಾಣದ ಮನ, ಅಂಗ ಲಿಂಗ ಕಾಣದ ಮನ ಇಲ್ಲಿ ಜೀವನಾರೊ ಪರಮನಾರೊ ಎಂಬುದ ಅರಿಯದ ಮನ, ಇದು ತನ್ನಿಂದ ತನ್ನ ಕಂಡುದರಿಂದ ಕೇವಲ ಜ್ಯೋತಿ ವರ್ಣಾತೀತವಾದುದರಿಂದ ಸುಮನವೆಂದು ಹೇಳಿದೆ.

ಈ ಸುಮನ ಪ್ರವೃತ್ತಿ ನಿವೃತ್ತಿ ಕಾಣದ ಮನ, ಇದು ನಿತ್ಯ ಅನಿತ್ಯವೆಂದರಿಯದ ಮನ, ಬಂಧಮೋಕ್ಷವ ಕಾಣದ ಮನ, ಮರವು ಅರವು ಎಂಬ ದ್ವಂದ್ವಗಳ ಕಾಣದ ಅದ್ವಿತೀಯ ಮನವಾದುದರಿಂದ ಸುಮನವೆಂದು ಹೇಳಿದೆ. ಈ ಸುಮನಕ್ಕೆ ಮೈಯೆಲ್ಲಾ ಅರುವು. ಇದು ಜ್ಞಾನಗಂಗೆ, ಇದರ ಸರ್ವಾಂಗವೆಲ್ಲ ಜ್ಞಾನಮಯವು. ತನ್ನ ಮೂಲವಾಗಿಹ ನಿಶಬ್ದಬ್ರಹ್ಮವ ಸೇರುವ ಶಬ್ದಮುಗ್ಧ ಗಂಗೆಯು. ಈ ಸುಮನರೂಪಿ ಜ್ಞಾನಗಂಗೆ ಶಬ್ದಮುಗ್ಧವಾಗಿ ನಿಶಬ್ದಬ್ರಹ್ಮವ ಸೇರುವ ಘನಗಂಗೆಯು ಆದುದರಿಂದ ಹರಿಯುವ ನದಿಗೆ ಮೈಯೆಲ್ಲಾ ಕಾಲು ಎಂದು ಹೇಳಿಹರು.

*ಉರಿವ ಅಗ್ನಿಗೆ ಮೈಯೆಲ್ಲಾ ನಾಲಿಗೆ* : ಉರಿವ ಅಗ್ನಿ, ಇದು ಜ್ಞಾನಾಗ್ನಿ ನಿರಂತರವಾಗಿಹ ಜ್ಞಾನ ಘನವು. ಇದು ನಿಶಬ್ದವೇದಿಗಳ ಜ್ಞಾನಾಗ್ನಿಯು. ಇದು ಅಜ್ಞಾನಿಗಳ ಜ್ಞಾನವೂ ಅಲ್ಲ, ಜ್ಞಾನಿಗಳ ಜ್ಞಾನವೂ ಅಲ್ಲ, ಸುಜ್ಞಾನಿಗಳ ಜ್ಞಾನವು ಅಖಂಡ ಜ್ಞಾನ. ತ್ರಿಕಾಂಡಿಗಳ ಕಾಣದ ಜ್ಞಾನ. ಇದು ಶರಣರ ಜ್ಞಾನ, ಲಿಂಗಕ್ಕೆ ಲಿಂಗವಾಗಿಹ ಜ್ಞಾನ. ಇದು ಗುರುವಿಡಿದ ಅರುವು ಅಲ್ಲ, ಸಚ್ಚಿದಾನಂದ ಸಚ್ಚಿದಾನಂದವೆಂದು ಲಕ್ಷಣಾತ್ಮಕವಿಡಿದ ಜ್ಞಾನವೂ ಅಲ್ಲ, ಇದು ಗುರು ಶಿಷ್ಯರಾಗದ ಜ್ಞಾನ, ನಿರಾಲಂಬ ಜ್ಞಾನ, ನಿರುಪಮ ಜ್ಞಾನ,

ವಾಙ್ಮನೋತೀತವಾದ್ದರಿಂದ ಶಬ್ದಮುಗ್ಧವಾಗಿಹರ ಜ್ಞಾನ, ಮಿಗೆ ಮಿಗೆ ಮೀಸಲ ತತ್ವವರಿತವರ ಜ್ಞಾನ. ಈ ಅನುಪಮ ಜ್ಞಾನಕ್ಕೆ ಮೈಯೆಲ್ಲಾ ನಾಲಿಗೆ. ಅಂದರೆ ಪೂರ್ಣಾಮೃತ ಜ್ಞಾನ ಬೇರಲ್ಲ ಆನಂದ ಬೇರಲ್ಲ, ಸಕ್ಕರೆ ಬೇರೆ ಅಲ್ಲ, ಸಿಹಿ ಬೇರೆ ಅಲ್ಲ ಹಾಗೆ ಜ್ಞಾನ ಬೇರಲ್ಲ, ಅಮೃತ ಬೇರಲ್ಲ, ಜ್ಞಾನದ ಇರುವೆ ಅಮೃತವಾದುದರಿಂದ ಜ್ಞಾನಾಮೃತ ಪೂರ್ಣವಾದುದಕ್ಕಾಗಿ ಮೈಯೆಲ್ಲ ನಾಲಿಗೆ ಎಂದು ಹೇಳಿಹರು.

ಬೀಸುವ ಗಾಳಿಗೆ ಮೈಯೆಲ್ಲ ಮುಖ : ಇದು ತಂಗಾಳಿ ತನಿರಸ ತುಂಬಿದಗಾಳಿ, ಅಮರ ಗಾಳಿ, ಹೃದಯದ ಹೃದಯವು ಅರುಹೃದಯವಾಗಿಹ ತಂಗಾಳಿ ತನ್ನಂತರಂಗದಲ್ಲಿ ನ್ಯಸ್ತವಾಗಿಹ ಚಿದ್‌ಬೆಳಗಿನ, ಅಖಂಡ ಭಾವದಗಾಳಿ, ಸದ್‌ಜ್ಞಾನ ಭಾವಭರಿತವಾಗಿಹ ಗಾಳಿ, ಇದು ಏಕೋ ಭಾವದ ಗಾಳಿ, ಗುರು ಲಿಂಗ ಜಂಗಮದ ಏಕೋ ಭಾವದ ಗಾಳಿ, ಗುರುವೆಂದರೂ ಅದುವೆ, ಲಿಂಗವೆಂದರೂ ಅದುವೆ, ಜಂಗಮವೆಂದರೂ ಅದುವೆ, ಇದುವೆ ಇಬ್ಬರ ಮಧ್ಯದಲ್ಲಿದ್ದ ಒಂದು ವಸ್ತು, ಇದುವೆ ಗುರುವಿಂಗೆ ಗುರುವಾಗಿಹುದು ಲಿಂಗಕ್ಕೆ ಲಿಂಗವಾಗಿಹುದು, ಜಂಗಮಕ್ಕೆ ಜಂಗಮವಾಗಿಹುದು. ಇದುವೆ ಸುಚೈತನ್ಯಕ್ಕೆ ನಿಜ ಚೈತನ್ಯವಾಗಿದ್ದ ಸಾಹಿತ್ಯವು ಇದು ಬೋಧ ಅಬೋಧ ನಷ್ಟ ಮಾಡುವ ಗಾಳಿ ನೆನಹು ನಿರ್ಣಯ ನಷ್ಟ ಮಾಡುವ ಗಾಳಿ ಭಾವಕ್ಕಗಮ್ಯನ ಮಾಡುವ ಗಾಳಿ, ಇದು ಹೃದಯಕ್ಕೆ ಹೃದಯ ಪ್ರಶಾಂತವಾಗುವ ಭಾವ, ನಿಶ್ಚಿಂತವಾಗಿಹ ಭಾವ, ಇದು ಶರಣರ ಸ್ವಾನುಭಾವದ ಭಾವ, ಸ್ವಸುಖವಾಗಿಹ ಭಾವ, ಇದು ಭರಿತಭಾವವಾದುದರಿಂದ ಮೈಯೆಲ್ಲ ಮುಖ, ಅಂದರೆ ಮೈಯೆಲ್ಲ ಅರಿವು ಇರವು ಆವುದು ಸ್ವಾನುಭಾವವುಳ್ಳ ಭಾವ. ಅದು ಏಕೋಭಾವ, ಎಲ್ಲೆಲ್ಲೂ ತನ್ನ ಕಂಡ ಭಾವ, ಭರಿತಭಾವ ತಾನನ್ಯವ ಕಾಣದಿಹ ಮುಖ ನಿಃಶಬ್ದ ಘನವ ಕಾಣುವ ಮುಖ, ತನ್ನ ಕಾಣುವ ಮುಖ, ಇದು ಶರಣರ ಗಾಳಿ, ಗಾಳಿ ಬಿಟ್ಟ ಕೈಲೆ ತೂರಿ ರಾಸಿ ಮಾಡಿಕೊಳ್ಳಿರೊ ? ಗಾಳಿ ನಿಮ್ಮ ಸ್ವಾಧೀನವಲ್ಲ ನಾಳೆ ತೂರಿಹೆನೆಂದರೆ ಇಲ್ಲ, ಶಿವಶರಣರ ಸ್ವಾನುಭವದ ಗಾಳಿಯಲ್ಲಿ ಬೇಗನೆ ತೂರಿಕೊಂಡಂಬಿಗರ ಚೌಡಯ್ಯ, ಗಾಳಿ ಬಿಟ್ಟಾಗ ರಾಶಿ ತೂರಿದರೆ ಶುದ್ಧ ಕಾಳು ಹೇಗೆ ಹೊರ ಬೀಳುವವು ಹಾಗೆ ಶರಣರ ಸ್ವಾನುಭವರೂಪಿ ಗಾಳಿ ಬಿಟ್ಟಾಗ ಮುನ್ನ ಮುನ್ನಲಾದ ಸ್ವಸ್ವರೂಪವು ತನ್ನಿಂದ ತನಗೆ ಪ್ರಜ್ವಲಿಸುವುಡೆ ಮೈಯೆಲ್ಲ ಮುಖವೆಂಬುದು ವಿದಿತವು.

ಗುಹೇಶ್ವರ ನಿಮ್ಮ ಶರಣಂಗೆ ಸರ್ವಾಂಗವೆಲ್ಲವು ಲಿಂಗವು : ಗುಹೇಶ್ವರ ನಿಮ್ಮ ಶರಣ, ಗುಹೇಶ್ವರನೆಂಬುದು ನಿಃಶಬ್ದ ಬ್ರಹ್ಮವು, ಶಬ್ದಮುಗ್ಧ ಬ್ರಹ್ಮವು, ಮುನ್ನ ಮುನ್ನಲಾದ ತತ್ವವು ತನ್ನಿಂದ ತಾನಾದ ಘನಕ್ಕೆ ಘನವು, ಇದು ಶರಣರ ಹೃದಯದೊಳ ನ್ಯಸ್ತವಾಗಿಹ ನಿಃಶಬ್ದ ಘನವು, ಸ್ವಯಂಜ್ಯೋತಿಯು ಅವನ ಸರ್ವಾಂಗವೆಲ್ಲವು ನಿಃಶಬ್ದ ಬ್ರಹ್ಮದಿರುವುಳ್ಳ ಘನ ಲಿಂಗವು. ಗುಹೇಶ್ವರ ಲಿಂಗವ ನೋಡಹೋಗಿ ಸರ್ವಾಂಗವೆಲ್ಲವೂ ಲಿಂಗವಾಗಿಹವು. ನಿಃಶಬ್ದ ವೇದಿಯಾಗಿಹ ಶರಣ ಸರ್ವಾಂಗವೆಲ್ಲವು ಲಿಂಗವು. ಶರಣನು ಕಿವಿಯ ಕಿವಿಯಾದುದರಿಂದ ನಿಶಬ್ದವೇದಿ, ಕಣ್ಣಿನ ಕಣ್ಣಾಗಿಹ ಘನ, ರಸನೇಂದ್ರಿಯ ರಸವಾಗಿಹ ಘನ, ತ್ವಕ್ಕಿನ ತ್ವಕ್ಕಾಗಿಹ ಘನ, ಹೃದಯದ ಹೃದಯವಾಗಿಹ ಘನ, ಈ ಘನದಿರುವು ಶೃತಿಗಗೋಚರವಾದುದು. ಇದು ಕಾರಣ ಶರಣನ ಸರ್ವಾಂಗಲಿಂಗವೆಂದು ಹೇಳಿಹರು.

ಇಂತಪ್ಪ ಸರ್ವಾಂಗ ಲಿಂಗಮಯನಿಗೆ ದೇವಲೋಕದವರು ತೃಣವಾಗಿಹರು. ಮರ್ತ್ಯ ಲೋಕವೆಂಬ ಭ್ರಮಾತ್ಮರುಗಳು ನೀರ ಮೇಲಿರುವ ಗುಳ್ಳೆಯಂತೆ ಕ್ಷಣದವರಾಗಿಹರು.

**189**

**ದೇವಲೋಕದವರ ತೃಣವೆಂಬೆ.**
**ಮರ್ತ್ಯಲೋಕದವರ ಕ್ಷಣವೆಂಬೆ.**
**ಅಹಂಕಾರವೆಂಬ ಶೃಂಗಾರವ ಮಾಣೆ!**
**ಆನಲ್ಲದೆ ಅನ್ಯವ ಅಲ್ಲೆಂಬ**
**ಗುಹೇಶ್ವರನೆಂಬುವನು ತಾನೆ ತಾನಾಗಿ.** ॥ 1269 ॥

**ತಾತ್ಪರ್ಯ** : *ದೇವಲೋಕದವರ ತೃಣವೆಂಬೆ* : ಹರಿಯಹೊಲಬನರಿಯ, ಬ್ರಹ್ಮ ಮುಂದನರಿಯ, ರುದ್ರ ಲೆಕ್ಕವ ಮರೆದು ಜಪವನೆಣಿಸುತ್ತೈದ್ದಾನೆ. ಈಶ್ವರ ಪವನಯೋಗದಲ್ಲಿ ಮಗ್ನವಾದ ಸದಾಶಿವ ಭಾವದಲ್ಲಿ ಭ್ರಮಿತನಾದ ಒಂದಂಡಜದೊಳಗಣ ಬಾಲಕರೈವರು ನಿಮ್ಮನೆತ್ತ ಬಲ್ಲರು ಗುಹೇಶ್ವರಾ. ಹರಿ ಬ್ರಹ್ಮ ರುದ್ರ ಈಶ್ವರ ಸದಾಶಿವ ಇವರು ದೇವಲೋಕದವರು. ಹರಿಯು ಅಮರದ ಹೊಲಬನರಿಯ. ಬ್ರಹ್ಮನು, ತನ್ನ ಮುಂದೆ ಇರುವ ಜಗವನರಿಯ ಜೀವಿಗಳನರಿಯ ತನ್ನ ಸೃಷ್ಟಿಯ ಕಾರ್ಯವನರಿಯ. ರುದ್ರ ಕಿವಿಗೆ ಕೇಳದ ಮಂತ್ರವನರಿಯ ಅಜಾತ ತತ್ವವರಿಯ ಈಶ್ವರ ಪ್ರಾಣಲಿಂಗವನರಿಯ, ಸದಾಶಿವ ಭಾವಕ್ಕಗಮ್ಯವಾಗಿಹ ನಿರಂತರವಾದ ಮಂಗಲಮಯ ತತ್ವ ರೂಪಿ ಶಿವನರಿಯ, ಇವರು ಒಂದು ಅಂಡಜದೊಳಗಣ ಬಾಲಕರೈವರು ಗುಹೇಶ್ವರ ನಿಮ್ಮನೆತ್ತಬಲ್ಲರು. ಪ್ರಭುವಿನ ದಿವ್ಯದೃಷ್ಟಿಯಲ್ಲಿ ಹರಿ ಬ್ರಹ್ಮಾದಿಗಳು ತೃಣವತ್ ಎಂದು ಹೇಳಿಹನು. ತನ್ನ ಸ್ವಮಹಿಮೆಯಲ್ಲಿ ನಿಂತ ಘನವಂತರಿಗೆ ಬ್ರಹ್ಮನು ತೃಣವಾಗಿ ಕಂಡ ಬ್ರಹ್ಮಸೃಷ್ಟಿ ಕಾರ್ಯವು ತೃಣವಾಗಿ ಕಂಡಿಹನು. ಹರಿಯ ಹತ್ತು ಅವತಾರಗಳು ತೃಣವಾಗಿಕಂಡ. ಸಕಲ ಜೀವಿಗಳ ರಕ್ಷಣ ಕಾರ್ಯವು ತೃಣವಾಗಿ ಕಂಡ. ರುದ್ರನ ಅವತಾರವ ತೃಣವಾಗಿ ಕಂಡ, ಅಗಣಿತ ಜಪವ ತೃಣವಾಗಿ ಕಂಡ, ಭಕ್ತರಿಗೆ ಬೇಡಿದ್ದನ್ನೀವ ವರಗಳನ್ನು ತೃಣವಾಗಿ ಕಂಡ. ಈಶ್ವರನ ಪವನ ಯೋಗದಲ್ಲಿ ಮಗ್ನವಾದುದು ತೃಣವಾಗಿ, ಸದಾಶಿವನ ಭಾವದಲ್ಲಿ ಭ್ರಮಿತನಾದುದು ತೃಣವಾಗಿ ಕಂಡ, ಪ್ರಭುವಿನ ದೃಷ್ಟಿಯಲ್ಲಿ ದೇವ ಲೋಕದವರ ತೃಣವೆಂಬೆ ಎಂದು ಹೇಳಿಹರು.

ಚತುರ್ಮುಖ ಬ್ರಹ್ಮನ ಲೋಕ, ಈ ಲೋಕದಲ್ಲಿ ಈತನೆ ಅಧಿಷ್ಠಾನನು, ಬ್ರಹ್ಮನ ಭಕ್ತರಾದವರು ಬ್ರಹ್ಮನ ಉಪಾಸಿಸಿ ಬ್ರಹ್ಮ ಒಲಿಸಿಕೊಂಡು ಬ್ರಹ್ಮಪದವಿ ಪಡೆದುದು ಸಕಲವು ತೃಣವಾಗಿ ಕಂಡಿಹನು. ಬ್ರಹ್ಮನನ್ನು ಬ್ರಹ್ಮನ ಲೋಕವನ್ನು ಆತನ ಭಕ್ತರನ್ನು ಅವರು ಉಪಾಸಿಸುವ ಉಪಾಸನೆ ಬ್ರಹ್ಮವ ಒಲಿಸಿಕೊಂಡುದು ಬ್ರಹ್ಮ ಪದವಿಯಂಗಳು ತೃಣವಾಗಿ ಕಂಡಿಹನು.

ವಿಷ್ಣು ಲೋಕದಲ್ಲಿ ವಿಷ್ಣುವೆ ಅಧಿಷ್ಠಾನನು, ವಿಷ್ಣು ಭಕ್ತರಾದವರು ವಿಷ್ಣುವನ್ನು ಒಲಿಸಿಕೊಂಡು ವಿಷ್ಣುಪದವಿ ಪಡೆದರೂ ಪ್ರಭುವಿಂಗೆ ತೃಣವೆಂಬೆ ಎಂದು ಹೇಳಿಹನು.

ಶಿವಲೋಕದಲ್ಲಿ ಶಿವನೆ ಅಧಿಷ್ಠಾನನು, ಶಿವನ ಭಕ್ತರಾದವರು ಶಿವನನ್ನು ಒಲಿಸಿಕೊಂಡು ಶಿವಸಾಯಜ್ಯವ ಪಡೆದರೂ ಪ್ರಭುವಿಂಗೆ ತೃಣ ರೂಪವಾಗಿ ಕಂಡಿಹವು. ಈಶ್ವರನನ್ನು ಉಪಾಸಿಸಿ ಈಶ್ವರನನ್ನು ಒಲಿಸಿಕೊಂಡು ಗಣಪದವಿ ಪಡೆದರೂ ಅದು ತೃಣರೂಪವಾಗಿ ಕಂಡಿಹನು. ಇತ್ತ ಸದಾಶಿವನ ಭಕ್ತರು, ಸದಾಶಿವನ ಉಪಾಸಿಸಿ ಅವನನ್ನು ಒಲಿಸಿಕೊಂಡರು. ಶಿವನ ಗಣಪದವಿಯಲ್ಲಿ ಲೀನವಾದರು. ಸದಾಶಿವನು ಭ್ರಮಿತ ಭಾವಕ್ಕೆ ಒಪ್ಪಿದರೂ ತೃಣವಾಗಿ ಕಂಡಿಹನು. ಹೀಗೆ ಭೇದಜ್ಞಾನಯುಕ್ತನಾಗಿ ದೇವತೆಗಳ ಒಲಿಸಿಕೊಂಡರು, ಅದು ತೃಣವಾಗಿ ಕಂಡಿಹನು.

ಮೃತ್ಯುಲೋಕದವರ ಕ್ಷಣವೆಂಬೆ : ಮೃತ್ಯು ಲೋಕದವರ ವಾಸವೆ ಮೃತ್ಯುವಿನ ದವಡೆಯಲ್ಲಿರುವಾಗ ಇವರ ಸಾವು ಕ್ಷಣವೆಂಬೆ. ಸರ್ಪನ ಬಾಯಿಯಲ್ಲಿರುವ ಕಪ್ಪೆಗೆ ಅದಕ್ಕೆ ಇನ್ನು ಆಯುಷ್ಯವೆಷ್ಟು ಎಂದು ಕೇಳಿದಲ್ಲಿ ಈಗಲೆ ! ಈಗಿಂದೀಗಲೆ ಆಗಬಹುದು. ಹಾಗೆ ಈ ಮೃತ್ಯು ಲೋಕದಲ್ಲಿದ್ದ ಜೀವರುಗಳ ತಮ್ಮ ಶರೀರದ ಸಾವು ಒಂದು ಕ್ಷಣವಾಗಿದೆ ಎಂದು ಹೇಳಿಹರು.

ಅಹಂಕಾರವೆಂಬ ಶೃಂಗಾರವ ಮಾಣೆ : ಈ ಅಭಾಸಲೋಕಂಗಳೆಲ್ಲ ಅಹಂಕಾರದಿಂದುಕ್ತವಾದವುಗಳು. ಇವು ನೋಡಲು ನಾನಾವಿಧವಾಗಿ ರೂಪ ರಂಜನೆ ಯಾಗಿರಲಿ, ಮನೋರಂಜನೆಯಾಗಿರಲಿ, ಭವ್ಯವಾಗಿರಲಿ, ಉಪಭೋಗ್ಯ ವಸ್ತುವಾಗಿರಲಿ, ಬ್ರಹ್ಮಾದಿಗಳ ಲೋಕವಿರಲಿ, ಅವು ನಾನಾಪದವಿಯಿಂದುಕ್ತವಾಗಿರಲಿ, ಅವು ತೋರಿ ಇಲ್ಲವಾಗುವುದರಿಂದ ಶಾಶ್ವತವಾಗವು. ನಿತ್ಯವಾಗವು, ಅವುಗಳಿಂದ ಅಮರತ್ವ ಇಲ್ಲವಾಗಿದೆ. ಅದಕ್ಕಾಗಿ ಅಹಂಕಾರವೆಂಬ ಶೃಂಗಾರವ ಮಾಣೆ ಎಂದು ಹೇಳಿಹರು.

ಆನಲ್ಲದೆ, ಅನ್ಯವನಲ್ಲೆಂಬ ಗುಹೇಶ್ವರನೆಂಬುವನು ತಾನೆ ತಾನಾಗಿ ತನ್ನವ ಅರಿದವರು ಇವರು ಶರಣರು, ಶರಣೆಯರು, ತನಗಿಂತ ಭಿನ್ನ ದೇವನಿರುವನೆಂಬುದು ಮರೆತವರು ತನ್ನ ಅರಿತವರು. ಅದಕ್ಕಾಗಿ ಶರಣ ದಿಟ ದೇವನು, ಇದು ಕಾರಣ, ಎಲ್ಲೆಲ್ಲೂ ತನ್ನ ಕಂಡವರು ತನ್ನ ಹೊರತು ಅನ್ಯವ ಕಾಣದವರು. ಕೂಡಲ ಚೆನ್ನಸಂಗಯ್ಯನಲ್ಲದೆ ಪೆರತೊಂದನರಿಯದವರು. ಅದು ಬ್ರಹ್ಮಜ್ಞಾನದ ಹಿರಿಮೆಯು ಸಮ್ಯಜ್ಞಾನಿ, ಚನ್ನಬಸವಣ್ಣನ ಮಹದರುವಿನಂತೆ ಎಲ್ಲೆಲ್ಲೂ ತಾನಲ್ಲದೆ ತನಗಿಂತನ್ಯವು ಅಲ್ಲೆಂಬ ಮಹದರುವು ಪ್ರಭುವಿನ ಮಹಾಜ್ಞಾನ ಗುಹೇಶ್ವರನೆಂಬುವನು ತಾನೆ ತಾನಾಗಿ ಈ ದೇಹವೆಂಬ ಗುಹೆಯೊಳಗೆ ಘನತತ್ವವರಿತವರು ಗುಹೇಶ್ವರ ತಾನೆ ಅದಕ್ಕಾಗಿ ತಾನೆ ತಾನಾಗಿ ಎಂದು ಹೇಳಿಹರು.

**190**

**ಎಲ್ಲರಂತೆ ನುಡಿದು ಎಲ್ಲರಂತೆ ನಡೆದು**
**ಎಲ್ಲರಂತೆ ಸಂಸಾರವ ಬಳಸುತ್ತಿಪ್ಪರೆಂದು**
**ಎಲ್ಲರಂತೆ ಕಾಣಬಹುದೆ ನಿಜ ದೊರಕೊಂಡ ನಿರ್ಮಲಜ್ಞಾನಿಗಳ?**
**ಅವರ ಮನೋಮಧ್ಯದಲ್ಲಿ ತೊಳಗಿ ಬೆಳಗುವ ಶಿವಜ್ಞಾನಬೀಜವು ಹೊಳ್ಳಪ್ಪುದೆ ?**
**ಉರಿಯದಿದ್ದಡೂ ಕಿಚ್ಚನೊರಲೆ ಕೊಂಬುದೆ ಗುಹೇಶ್ವರಾ?** ॥ 997 ॥

**ತಾತ್ಪರ್ಯ** : ಎಲ್ಲರಂತೆ ನುಡಿದು ಎಲ್ಲರಂತೆ ನಡೆದು, ಎಲ್ಲರಂತೆ ಸಂಸಾರವ ಬಳಸುತ್ತಿಪ್ಪರೆಂದು ಎಲ್ಲರಂತೆ ಕಾಣಬಹುದೆ ? ನಿಜದೊರಕೊಂಡ ನಿರ್ಮಲ ಜ್ಞಾನಿಗಳ : ನಿಜವ ದೊರಕೊಂಡ ನಿರ್ಮಲ ಜ್ಞಾನಿಯು ಸಹಜನು. ಆಯಾಸವಿಲ್ಲದೆ ಅರುವರಿತವನು, ಅರಿತ ಶರಣಂಗೆ ಕೆಡಿಸುವ ಮರವಿಲ್ಲ, ಗಳಿಸುವ ಅರುವಿಲ್ಲ, ಇದ್ದಂತಿರುವ ಸಹಜನು. ಸ್ವಯಮೇವ ಸಮ್ಯಜ್ಞಾನಿಯು ಅವನನ್ನು ಕೆಡಿಸುವ ಅಧರ್ಮವಿಲ್ಲ, ಧನ್ಯನ ಮಾಡುವ ಧರ್ಮವಿಲ್ಲ, ಧರ್ಮಾಧರ್ಮಗಳಿಗೆ ಮೀರಿದ ಮಹಾಂತ, ಶುಭಾಶುಭಂಗಳ ಕ್ರಿಯೆಗೆ ಮೀರಿದ ಅಕ್ರಿಯನು. ಆವಾವ ಕ್ರಿಯಗಳ ಹೊದ್ದುವನಲ್ಲ ಗಗನದಂತೆ ಸಹಜನು. ಇದು ಕಾರಣ, ಎಲ್ಲರಂತೆ ನಡೆವನು. ಎಲ್ಲರಂತೆ ನುಡಿವನು. ಎಲ್ಲರಂತೆ ಸಂಸಾರವ ಬಳಸುತ್ತಿಪ್ಪರೆಂದು ಎಲ್ಲರಂತೆ ಕಾಣಬಹುದೆ ?

ಅವನ ಶರೀರ ವ್ಯವಹಾರ ಎಲ್ಲರಂತೆ ನಡೆವುದು ನುಡಿವುದು ಸಂಸಾರದಲ್ಲಿರುವದೆಂದರೆ ಆತನು ಸಂಸಾರಾಸಕ್ತನೆ ? ಸರ್ವ ಸಾಮಾನ್ಯರುಗಳಂತೆ ವಿಷಯಾಸಕ್ತ ಭ್ರಾಂತನೆ ? ಅಜ್ಞರಂತೆ ವಿಷಯೋಪ ಭೋಗದಲ್ಲಿ ತೊಡಗಿದುದು ಕಂಡು ಸಕಲ ವ್ಯವಹಾರಿಕ ಜೀವಿಗಳಂತೆ ವ್ಯವಹಾರಿಯು ಅಜ್ಞನು ಎಂದು ತಿಳಿಯಕೂಡದು. ಬಳ್ಳಿಗಳು ನೀರಿನಲ್ಲಿ ಹುಟ್ಟಿ ನೀರಲ್ಲಿ ಇದ್ದು, ಪುನಃ ಅದರಲ್ಲಿಯೆ ಲೀನವಾದರೂ ಶತಪತ್ರದ ಸಮಾನವಾಗವು. ಶತಪತ್ರವು ನೀರೊಳಗಿದ್ದರೂ ತಾನು ಅದಕ್ಕೆ ಅಂಟದೆ ತನ್ನ ನೀರಿನಿಂದ ತೋಯಿಸಿಕೊಳ್ಳದಂತೆ ತಾನು ಇದ್ದಂತೆ ಹೇಗೆ ಇದೆಯೊ ? ಹಾಗೆ ನಿಜವ ದೊರಕೊಂಡ ನಿರ್ಮಲ ಜ್ಞಾನಿಯು, ತನ್ನ ಇಪ್ಪತ್ತೈದು ತತ್ವಗಳುಳ್ಳ ಅನಾತ್ಮ ವ್ಯವಹಾರಕ್ಕೆ ತಾನು ಅಂಟದಂತೆ ನಿಸ್ಸಂಗನಾಗಿ ನಿರಾಲಂಬನಾಗಿ ಇದ್ದಂತೆ ಇಹನು.

ನಮಾನಸಂ ಕರ್ಮಶುಭಾ ಶುಭಮ್ ಮೆ । ನ ಕಾಯಕಂ ಕರ್ಮ ಶುಭಾಶುಭಮ್ ಮೆ ॥ ನ ವಾಚಕಂ ಕರ್ಮ ಶುಭಾಶುಭಮ್ ಮೆ । ಜ್ಞಾನಾಮೃತಮಂ ಶುದ್ಧಮತೀಂದ್ರಿಯೋಽ ಹಮ್ ॥ ಶುಭಾಶುಭಗಳನ್ನು ಕೊಡುವ ಮಾನಸಿಕ ಕರ್ಮ ನನಗಿಲ್ಲ, ಶುಭಾಶುಭಗಳನ್ನು ಕೊಡುವ ಕಾರ್ಯಕರ್ಮ ನನಗಿಲ್ಲ, ಶುಭಾಶುಭಗಳನ್ನು ಕೊಡುವ ವಾಚಕ ಕರ್ಮ ನನಗಿಲ್ಲ, ಶುದ್ಧವಾದ ಅತೀಂದ್ರಿಯವಾದ ಜ್ಞಾನಾಮೃತವೆ ತನ್ನಿರುವೆಂದರಿದ ಮಹಾಂತ ದೇಹೇಂದ್ರಿಯಾದಿಗಳ ಶುಭಾಶುಭಂಗಳು ತನ್ನದಾಗಿರುವುದಿಲ್ಲ, ದೇಹವು ತನ್ನದಾಗಿರುವುದಿಲ್ಲ ಏಕೆಂದರೆ, ಸಹಜಮಜಮಚಿಂತ್ಯಂ ಯಸ್ತು ಪಶ್ಯೇತ್ಸ್ವರೂಪಂ । ಘಟತಿಯದಿ ಯಥೇಷ್ಟಂ ಲಿಪ್ಯತೆ ನೈವದೋಷ್ಟೈಃ । ಸಕೃದಪಿ ತದಭಾವಾತ್ಕರ್ಮಶಿಂಚನ ಕುರ್ಯಾತ್, ತದಪಿನ ನಿಬದ್ಧಃ ಸಂಯಮಿ ವಾ ತಪಸ್ವಿ ॥ ಸಹಜವು ಅಜವು (ಆದ) ಅಚಿಂತ್ಯವು ಆದ ತನ್ನ ಸ್ವರೂಪವನ್ನು ಕಂಡ ಮೇಲೆ ಅವನು ಏನು ಮಾಡಿದರೂ ಅದರಿಂದ ದೋಷವಿಲ್ಲ, ಪಾಪಲೇಪವಿಲ್ಲದವನಾದುದರಿಂದ ಅವನು ಸಂಯಮಿಯಾಗಿ ತಪಸ್ವಿಯಾಗಿ ಕರ್ಮವನ್ನು ಮಾಡದಿದ್ದರೂ ಆಗಲೂ ಬದ್ಧನಾಗುವುದಿಲ್ಲ ಎಂಬ ಶೃತಿ ತಾತ್ಪರ್ಯದಂತೆ ಸಾಮಾನ್ಯರುಗಳಂತೆ ವಿಷಯಬೋಗೋಪಭೋಗಿಯಾಗಿ ಎಲ್ಲರಂತೆ ಸಂಸಾರವ ಬಳಸುತಿಪ್ಪನೆಂದು ಎಲ್ಲರಂತೆ ಕಾಣಬಹುದೆ? ಕಾಣಬಾರದು ನಿಜವ ದೊರಕೊಂಡ ನಿರ್ಮಲಜ್ಞಾನಿ, ಎಲ್ಲರಂತೆ ಕಾಣಬಾರದು. ನಿಜವ ದೊರಕೊಂಡ

ನಿರ್ಮಲಜ್ಞಾನಿ ಅನುಪಮನು, ಮಿಗೆ ಮಿಗೆಯಾಗಿಹ ಮೀಸಲ ತತ್ವ ತಿಳಿದ ತತ್ವವೇತ್ತ, ನಿಶಬ್ದವೇದಿ, ಪ್ರಪಂಚ ಸತ್ಯವೆಂಬ ಭ್ರಾಂತರಿಗೂ, ಪ್ರಪಂಚ ಮಿಥ್ಯೆವೆಂಬ ವೈರಾಗ್ಯದವರಿಗೂ ನಿಲುಕದ ಘನನು. ಇತ್ತ ಪರಮಾರ್ಥಸತ್ಯವೆಂಬ ಶೃತಿವಂತರಿಗೂ ಪರಮಾರ್ಥ ಮಿಥ್ಯೆವೆಂಬ ಶೃತಿಗೆ ಸೇರದವರಿಗೂ ನಿಲುಕದ ಘನನು ಶಬ್ದಮುಗ್ಧನು. ಸಕಲಕ್ಕೂ ಸಮತೆ ಸಯವಾದ ಸ್ವಮಹಿಮ. ನಡೆದು ನಿರ್ಗಮನಿಯಾಗಿಹ ಚಿದಾಕಾಶ ಸ್ವರೂಪನು. ನಿಜವ ದೊರಕೊಳ್ಳುವದೆಂದರೆ ಸಾಮಾನ್ಯವೆ ?

ನಿಜವೆಂಬುದು ಮಾತಿನಂತುಟಲ್ಲ, ಬೀದಿ ಮಾತಲ್ಲ, ರಚ್ಚೆಯ ಮಾತಲ್ಲ, ಶಿವಾಚಾರವೆಂಬುದು ಸರಿದೊಡಕು ನೆನೆಹು ನಿರ್ಣಯಕ್ಕೆ ನಿಲುಕದದು, ಭಾವಕ್ಕಗಮ್ಯವಾಗಿಹ ಘನವು, ತನ್ನಯ ಇರುವಿನ ಅರುವು, ಶಬ್ದ ಸಂಭ್ರಮದವರ ಜ್ಞಾನವಲ್ಲ ನಿಲುವು ಅಲ್ಲ, ನಿಜವದು ತನ್ನಿಂದ ತನ್ನ ಅರಿದು ತಾನೇ ತಾನಾಗಿಹ ಘನದಿರುವಿನ ಅರುವು. ಅಲ್ಲಿ ಏನೊಂದುಸುರಲು ಇಂಬಿಲ್ಲವಾದ್ದರಿಂದ ನುಡಿಗೆಡೆಗೊಡದ ಘನವು ನಿಜಪದವಾಗಿದೆ. ಆ ನಿಜ ಪದಕ್ಕೆ ಸಹಜವೆನ್ನಲುಬರದು, ನಿಜವೆನ್ನಲುಬರದು, ಅಚಲವೆನ್ನಲು ಬರದು, ಅಖಂಡಿತ ಎನ್ನಲು ಬರದು, ಶೂನ್ಯ, ನಿಶೂನ್ಯವೆನ್ನಲು ಬರದ್ದಕ್ಕಾಗಿ ಏನೂಎನ್ನದೆ ತಾನು ಅದುವೆ ಆಗಿಹ ತನ್ನಿರುವು ಅಂತಪ್ಪ ನಿಜಪ್ರಾಪ್ತವಾಗಿಹ ನಿರ್ಮಲ ಜ್ಞಾನಿ ಎಂದು ಹೇಳಿಹರು.

ನಿಜವ ದೊರಕೊಂಡ ನಿರ್ಮಲ ಜ್ಞಾನಿಗಳ ಮನೋಮಧ್ಯದಲ್ಲಿ ತೊಳಗಿ ಬೆಳಗುವ ಶಿವಜ್ಞಾನ ಬೀಜವು ಹೊಳ್ಳಪ್ಪುದೆ ? ನಿರ್ಮಲ ಜ್ಞಾನಿಗಳ ಮನೋ ಮಧ್ಯವಾವುದು ? ಮನ ಆವುದು ? ಭೇದವುಳ್ಳದು ಮನ, ಅಭೇದವುಳ್ಳದು ಮನವೆ ? ಅಂಗ, ಲಿಂಗ, ಬೇರೆನ್ನುವ ಭೇದಜ್ಞಾನವುಳ್ಳದು ಮನವೆ ! ಅಂಗ, ಲಿಂಗ, ಒಂದೆನ್ನುವದು ಮನವೆ ? ಇವಾವು ಆಗದದು, ಮನೋಮಧ್ಯವು.

ಮನವು ಆವುದು ? ಅಬೋಧವು ಮನವು, ಬೋಧವು ಮನವು, ಬೋದಾಬೋಧವು ಮನವು, ಅನಾತ್ಮವೆಂಬುದು ಮನವು, ಆತ್ಮನೆಂಬುದು ಮನವು, ವಿವೇಕವು ಮನವೆ, ಅವಿವೇಕವು ಮನವೆ, ದೇಹವೆಂಬುದು ಮನವು, ದೇಹಿ ಎಂಬುದು ಮನವು, ಚಿದಹಂ ಎಂಬುದು ಮನವು, ದಾಸೋಹಂ ಎಂಬುದು ಮನವು, ಈ ಮನೋ ಮಧ್ಯದಲ್ಲಿ ಬೆಳಗುಳ್ಳ ತತ್ವವಾವುದು, ಅದು ನಿರಂತರವು, ಸರ್ವ ಸದಾ ಮಂಗಳಮಯ ತತ್ವವಾವುದು, ಅದು ಅಬಾಧಿತವು ಅಲ್ಲಿ ಅವಸ್ಥಾತ್ರಯವೆಲ್ಲಿ ? ತುರೀಯವೆಲ್ಲಿ ?

ಪರತತ್ವವದು ನಿಃಶಬ್ದಬೊಮ್ಮ, ಅದು ಮಾತಿನ ಮೂಲಕ ವಿವರಿಸುವುದಕ್ಕೂ ಆಗುವುದಿಲ್ಲ, ವಿವರಿಸದೆ ಇರುವುದಕ್ಕೂ ಆಗುವುದಿಲ್ಲ, ಅದನ್ನು ತಿಳಿದಿದೆ ಎಂತಲು ಹೇಳುವುದಕ್ಕೂ ಆಗುವುದಿಲ್ಲ, ತಿಳಿದಿಲ್ಲವೆಂತಲೂ ಹೇಳುವುದಕ್ಕೂ ಆಗುವುದಿಲ್ಲ, ಇಂತಪ್ಪ ಪರತತ್ವ ತನ್ನ ಮನೋಮಧ್ಯದಲ್ಲಿ ತೊಳಗಿ ಬೆಳಗುವ ಶಿವಜ್ಞಾನ ಬೀಜವು ತೋರಿ ಇಲ್ಲವಾಗಬಹುದೆ ? ಅದು ತನಗಿಂತ ಅನ್ಯವಾಗಬಹುದೆ ? ಅದು ಮಾಯಿಕವಾಗಬಹುದೆ ? ಅದು ಘನ ಘಟ್ಟಿಯು ಅದೆಂತು ಜೊಳ್ಳಾಗುವುದು ? ಉರಿಯದಿದ್ದರೂ ಕಿಚ್ಚು ನೊರಲೆಕೊಂಬುದೆ ಗುಹೇಶ್ವರಾ, ಕಿಚ್ಚು ? ಇದಾವ ಕಿಚ್ಚು, ಸಮ್ಯಜ್ಞಾನ ರೂಪಿ ಕಿಚ್ಚು, ಸುಜ್ಞಾನರೂಪಿ ಕಿಚ್ಚು, ನೊರಲೆ ? ಇದಾವ ನೊರಲೆ ?

ಎಲ್ಲರಂತೆ ನುಡಿವ ಎಲ್ಲರಂತೆ ನಡೆವ ಎಲ್ಲರಂತೆ ಸಂಸಾರವ ಬಳಸುತ್ತಿಪ್ಪ ತೋರಿಕೆಯ ವ್ಯವಹಾರ ಇದು ನೊರಲೆ .

ನಿರ್ಮಲ ಜ್ಞಾನಿಗಳ ವ್ಯವಹಾರ ಎಲ್ಲರಂತೆ ಕಂಡರೂ ಒಳಗಿಹ ಸಮ್ಯಜ್ಞಾನದ ಕಿಚ್ಚು, ಸುಜ್ಞಾನದ ಕಿಚ್ಚು, ಅನುಪಮ ಜ್ಞಾನದ ಕಿಚ್ಚು, ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವೆಂದರಿದ ನಿಜಜ್ಞಾನದ ಕಿಚ್ಚು, ಹೊರಗೆ ತೋರಿ ಬರುವ ನುಡಿವ ನಡೆವ ಎಲ್ಲರಂತೆ ಸಂಸಾರವ ಬಳಸುತಿಪ್ಪ ವ್ಯವಹಾರ ರೂಪಿ ನೊರಲೆ ಕಿಚ್ಚನ್ನು ಆರಿಸಬಹುದೆ ? ನೊರಲೆ ಕಿಚ್ಚನ್ನು ಬೂದಿ ಮಾಡಬಹುದೆ ? ಅದರ ಸಮೀಪ ಸಹ ಹಾಯಬಹುದೆ ? ಕಿಚ್ಚು ಪ್ರಜ್ವಲವಾಗಿಹ ಕಿಚ್ಚು ! ಈ ವ್ಯವಹಾರ ರೂಪಿನೊರಲೆ ಅದರ ಮುಂದೆಯಾದರೂ ನಿಲ್ಲಬಹುದೆ ? ಎಂದು ಹೇಳಿಹರು. ಇಂತಪ್ಪ ಅನುಪಮ ಜ್ಞಾನ ಮಾಡಿಕೊಂಡವರು ಸಿಕ್ಕುವುದು ವಿರಳ, ಅವರು ಕಾಣದುದ ಕಂಡವರು, ಕೇಳದುದ ಕೇಳಿದವರು ಇದು ಕಾರಣ, ಅನುಪಮರೆಂದಿಹರು.

**191**

**ಕಾಣದುದ ಕಂಡೆ, ಕೇಳದುದ ಕೇಳಿದೆ-**
**ಮುಟ್ಟಬಾರದುದ ಮುಟ್ಟಿದೆ, ಅಸಾಧ್ಯವ ಸಾಧಿಸಿದ,**
**ತಲೆಗೆಟ್ಟುದ ತಲೆವಿಡಿದ, ನೆಲೆಗೆಟ್ಟುದ ನಿರ್ಧರಿಸಿದ.**
**ಗುಹೇಶ್ವರಾ ನಿಮ್ಮ ಶರಣ ಅಜಗಣ್ಣಂಗೆ**
**ಶರಣೆಂದು ಶುದ್ಧನಾದೆನು.** ॥ 1074 ॥

**ತಾತ್ಪರ್ಯ** : ಕಾಣದುದ ಕಂಡವರಾರು ? ಕೇಳದುದ ಕೇಳಿದವರು ಮುಟ್ಟಬಾರದುದ ಮುಟ್ಟಿದವರು, ಅಸಾಧ್ಯವ ಸಾಧಿಸಿದವರು, ಇವರೆ ತಾನಾರೆಂದರಿದ ತನ್ನಿರುವಿನ ಅರುವುಳ್ಳ ಮಹಾಂತರು ಇವರು ಶಬ್ದಮುಗ್ಧರು, ದಿಟದಿಂದ ಕಾಣದುದಕಂಡವರು, ದಿಟದಿಂದ ಕೇಳುದುದ ಕೇಳಿದವರು, ದಿಟದಿಂದ ಮುಟ್ಟಬಾರದುದ ಮುಟ್ಟಿದವರು. ದಿಟದಿಂದ ಅಸಾಧ್ಯವ ಸಾಧಿಸಿದವರು. ದಿಟದಿಂದ ತಲೆಗೆಟ್ಟು ತಲೆ ಹಿಡಿದವರು ಇವರೆ ನೆಲೆಗೆಟ್ಟು ನಿರ್ಧರಿಸಿದವರು.

ದಿಟದಿಂದ ಕಾಣದುದ ಕಂಡವರೆಂದರೆ ಅಜಗಣ್ಣ ತಂದೆ ಶಬ್ದಮುಗ್ಧನಾಗಿಹ ನಿಶಬ್ದವೇದಿ, ಆರು ನಿಶಬ್ದವೇದಿಗಳು ಅವರು ದಿವ್ಯದೃಷ್ಟಿಯುಳ್ಳವರು. ಘನದೃಷ್ಟಿಯುಳ್ಳವರು ಇವರದು ಘನ ಕಣ್ಣು, ಏನೊಂದು ಕಾಣದ ಕಣ್ಣು, ಎಲ್ಲೆಲ್ಲೂ ತನ್ನ ಕಂಡ ಕಣ್ಣು, ಕಣ್ಣಿಗೆ ಕಣ್ಣಾಗಿಹ ಕಣ್ಣು, ಇದು ಕಂದದ ಕುಂದದ ಕಣ್ಣು, ಬೆಳಗುಳ್ಳ ಕಣ್ಣು ಇದು ನಿರಂತರ ಕಣ್ಣು, ಏನನ್ನಾದರೂ ಕಂಡ ಕಣ್ಣು ಸಿಕ್ಕುವುದು, ಏನನ್ನು ಕಾಣದ ಅರುರೂಪಿ ಕಣ್ಣು ಈ ಮಹದರುವುಳ್ಳ ಕಣ್ಣು ಲಭ್ಯವಾಗುವುದು ಬಹು ದುಸ್ತರವು. ಅದು ಸುಲಭರೂಪದಿಂದ ಲಭ್ಯವಾಗುವುದೆಂದರೆ ಬಹು ಸುಕೃತವು, ಇಂತಪ್ಪ ಮಹದರುವುಳ್ಳವರು ಕಾಣುವದೆಂದರೆ ಕಾಣದುದ ಕಂಡಂತೆ ಅಜಗಣ್ಣ ದಿಟದಿಂದ ತನ್ನ ಕಂಡ ಮಹಾಮಹಿಮ ಈ ಘನವಂತನ ಸ್ವಾನುಭವ, ಸಮ್ಯಜ್ಞಾನ, ಸುಜ್ಞಾನದಿಂದ ಕಾಣುವದು, ಅದು ಕಾಣದುದ

ಕಂಡುದು.

ಕೇಳದುದ ಕೇಳಿದೆ : ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡ, ದಿಟದಿಂದ ತನ್ನ ತಾ ಕೇಳಬೇಕು. ಏನ ಕೇಳಿದರೂ ಪ್ರಭು ಅದಕ್ಕೆ ಮಹತ್ವ ಮಾಡಿರುವದಿಲ್ಲ, ಅವರು ನಾಲ್ಕು ವೇದಗಳ ಕೇಳಿರಲಿ, ದಶಉಪನಿಷದ ಕೇಳಿರಲಿ, ಇಪ್ಪತ್ತೆಂಟು ಆಗಮ ಕೇಳಿರಲಿ, ಗುರುಗಳಿಂದ ಮಹಾಕಾವ್ಯ ಕೇಳಿರಲಿ, ಇವರು ದಿಟದಿಂದ ತನ್ನ ಕೇಳಿದರೆ ? ಇವರು ಕೇಳುವವರೆ ಆಗಿಹರಲ್ಲದೆ, ತನ್ನ ಘನವ ಕೇಳಿಹರೆ ? ಆರು ದಿಟದಿಂದ ತನ್ನ ಕೇಳಿದರು. ಅವರು ಕೇಳದುದ ಕೇಳಿದವರು ತಾನು ದಿಟ ನಿರಂತರ, ಏನೊಂದಾಗದ ಘನ, ನುಡಿಗೆಡೆಗೊಡದ ಘನ, ತಾನು ಶಬ್ದಕ್ಕೊಳಪಟ್ಟುದೆಂದು, ಮಹಾಕಾವ್ಯಕ್ಕೊಳಪಟ್ಟುದೆಂದು ಶೃತಿಗಗೋಚರನಾಗಿಹ ತನ್ನಿರುವು ಶೃತಿಗಳಿಗೆ ಅವಕಾಶ ಕೊಟ್ಟುದೆಂದು ತೋರಬಾರದ ಘನ, ತಾನು ತೋರದೆಂದು, ತೋರಿಯೆ ಇಲ್ಲವೆಂದಲ್ಲಿ ಹೇಳಲೆಂದು ಹೇಳಬಾರದ ಘನ ತೋರಲೆಂದೆನೋ ? ಸರಸಂಧಾನದ ಪರಿಯಲ್ಲ ಗುಹೇಶ್ವರನೆಂಬುದು ಕಲ್ಪಿತವಲ್ಲ ನೋಡಾ, ಈ ರಹಸ್ಯ ಯತಾರ್ಥ ! ಯತಾರ್ಥ ತಿಳಿದವರು ದಿಟದಿಂದ ತನ್ನ ತಾ ಕೇಳಿದುದು, ತಾನು ನಿರಂತರ ಕಿವಿಯ ಕಿವಿ ಆಗಿರುವಲ್ಲಿ ತಾನೆಂದು ಕೇಳಿದನು. ಎಂದೆಂದು ಕೇಳದವನನ್ನು ಕೇಳಿದವನೆನಬೇಕೆ ? ಇದು ಕಾರಣ ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡನೆಂದು ಹೇಳಿಹರು. ಕೇಳದವನಾದ ತನ್ನನ್ನು ಕಂಡಾಗ ಅವನು ಏನನ್ನು ಕೇಳದವನು ದಿಟದಿಂದ ಘನಕ್ಕೆ ಘನವಾಗಿಹ ತಾನು ಅನಾಮಯ ಶಾಸ್ತ್ರ ಅನುಪಮ ವೇದ, ಇದು ದಿಟದಿಂದ ತನ್ನ ಕೇಳಿದುದು, ಅದಕ್ಕಾಗಿ ಕೇಳದುದ ಕೇಳಿದೆ ಎಂದು ಹೇಳಿಹರು.

ಮುಟ್ಟಬಾರದುದ ಮುಟ್ಟಿದೆ : ತನ್ನನರಿತ ಮಹಾಂತ, ಮುಟ್ಟಬಾರದುದು ಮುಟ್ಟಿದುದು, ತನ್ನ ತಾನೆ ಮುಟ್ಟಿದುದು, ಆಕಾಶ ಅದಾರು ಅದನ್ನಾರು ಮುಟ್ಟಿರು, ಗಗನವಾದರೂ ಆರನ್ನು ಮುಟ್ಟಿದುದಲ್ಲ, ಗಗನವೆಂದ ವಾಣಿ ಅದನ್ನು ಮುಟ್ಟಲಿಲ್ಲ, ನೋಡಿದ ಕಣ್ಣಿಗೂ ನಿಲುಕಲಿಲ್ಲ, ಗಗನವು ಈ ವಾಣಿಯ ಮುಟ್ಟಲಿಲ್ಲ ನೋಡಿದ ಕಣ್ಣನ್ನು ಕಾಣಲಿಲ್ಲ, ಗಗನ ಗಗನವಾಗಿಯೆ ಇದ್ದಂತೆ ಇದೆ. ಹಾಗೆ ಅರುವಿಂಗರುವಾಗಿಹ ತನ್ನ ಅದಾರು ಮುಟ್ಟುವರು. ಶೃತಿಗಳ ನಂಬಿದ ವಾಣಿಯು ಮುಟ್ಟಲಿಲ್ಲ, ಗುರು ಶಿಷ್ಯರ ಸಂವಾದವು ಮುಟ್ಟಲಿಲ್ಲ, ನೆನೆವ ಮನ, ನಿರ್ಣಯಿಸುವ ಬುದ್ಧಿ ಚಿಂತಿಸುವ ಚಿತ್ತಾ, ನಾನೆ ಆತ್ಮ, ನಾನೆ ಬ್ರಹ್ಮನೆಂಬುವ ಚಿದಹಮ್ಮು ಮುಟ್ಟಲಿಲ್ಲ, ಇದು ತನ್ನಿಂದ ತನ್ನ ಮುಟ್ಟಿದುದು, ಅರಿತ ಶರಣ ಹೆತ್ತರಿವು ಆಗಿ, ತನ್ನ ಮುಟ್ಟ ಹೋಗಲಿಲ್ಲ, ತನ್ನಿಂದ ತನ್ನ ಅರಿದರಿದು ನೋಡಿದುದುತಾನೆ ತಾನಾದುದು ಇದು ಮುಟ್ಟಬಾರದುದ ಮುಟ್ಟಿದುದು ಎಂದು ಹೇಳಿದೆ.

ಅಸಾಧ್ಯವ ಸಾಧಿಸಿದೆ : ಶೃತಿ ಸ್ಮೃತಿಗಳಿಗೂ ಅಸಾಧ್ಯವಾದುದು ಸಾಧಿಸಿದಲ್ಲಿ, ಅಸಾಧ್ಯವ ಸಾಧಿಸಿದುದು, ಎಲ್ಲವನ್ನು ಕಾಣುವ ಕಣ್ಣಿಗೂ ಇದು ಅಸಾಧ್ಯವಾದುದು, ಎಲ್ಲವನ್ನು ಕೇಳುವ ಕಿವಿಗೂ ಅಸಾಧ್ಯವಾದುದು, ಎಲ್ಲವನ್ನು ಮುಟ್ಟುವ ಕೈಗಳಿಗೂ ಅಸಾಧ್ಯವಾದುದು ಕಣ್ಣಿಲ್ಲದೆ, ಕಿವಿಯಿಲ್ಲದೆ, ಕೈಗಳಿಲ್ಲದೆ, ಸಾಧಿಸಿದುದು, ಅಸಾಧ್ಯವ ಸಾಧಿಸಿದುದು, ವೇದ ಘನವೆಂಬನೆ ? ವೇದ ವೇಧಿಸಲರಿಯದೆ ಕೆಟ್ಟವು, ಶಾಸ್ತ್ರ ಘನವೆಂಬೆನೆ

? ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು, ಪುರಾಣ ಘನವೆಂಬೆನೆ ? ಪುರಾಣ ಪೂರೈಸಲರಿಯದೆ ಕೆಟ್ಟವು, ಅದೇನು ಕಾರಣವೆಂದಡೆ ವೇದ ಶಾಸ್ತ್ರ ಪುರಾಣಮಂಗಳೆಲ್ಲ ತಮ್ಮ ತನುವಿಡಿದು ಅರಸಲರಿಯವು, ಇದಿರಿಟ್ಟು ಕಂಡು ಹೋದ ನರಲೋಕದ ನರರುಗಳರಿಯರು, ಸುರಲೋಕದ ಸುರರುಗಳರಿಯರು, ಕೂಡಲ ಚೆನ್ನಸಂಗಮದೇವಾ, ನಿಮ್ಮ ಶರಣನೆ ಬಲ್ಲ, ಇವರು ಅನುಪಮ ವೇದವ ಹಿಡಿದು ತಮ್ಮನರಿಯ ಹೋಗಲಿಲ್ಲ ಅನಾವಯ ಶಾಸ್ತ್ರವ ಓದಿ ತಮ್ಮನರಿಯ ಹೋಗಲಿಲ್ಲ, ಅಗಣಿತ ಪುರಾಣವನೋದಿ ತನ್ನ ನರಿಯಹೋಗಲಿಲ್ಲ, ನರರಾಗಲಿ, ಸುರರಾಗಲಿ, ಆರೆ ಆಗಲಿ, ತನಗಿದಿರಿಟ್ಟು ಕಾಣುವ ವೇದ ಶಾಸ್ತ್ರ ಪುರಾಣಗಳಿಂದ ತನ್ನ ಕಾಣಹೋದರು. ಇವು ಹೆತ್ತರಿವು ಕಲ್ಪಿತ ಅರಿವು ಇವುಗಳ ಹಿಡಿದು ತಮ್ಮ ಅರಿಯಹೋದರು, ಅದಕ್ಕಾಗಿ ಅರುವಿಂಗರುವಾಗಿಹ ಘನವ ತಿಳಿಯದಾದರು. ಏಕೆಂದರೆ ದೇಹಿಗೆ, ದೇಹಿಯಾಗಿರ್ಪ ಭೇದವನು ಆರು ಬಲ್ಲರು. ಹರಿಬ್ರಹ್ಮಾದಿಗಳರಿಯರು, ಮನುಮುನಿಗಳರಿಯರು, ಸಿದ್ಧ ಸಾಧಕರರಿಯರು ಅರುವಿಂಗರುವಾಗಿರ್ಪುದು ನಿನ್ನರುವಿಂಗೆ ಅರಿಯಬಹುದೆ, ಗುಹೇಶ್ವರ ಲಿಂಗವನರಿವುಡೆ ನೀನರಿಯದಂತಿರಬೇಕು ಸಿದ್ಧರಾಮಣ್ಣ ಎಂದು ಬಿತ್ತರಿಸಿದುದು ನೋಡಿದಡೆ ದೇಹಿಗೆ ದೇಹಿಯಾಗಿರ್ಪ ಭೇದವ ಬಲ್ಲವರು ಘನಕ್ಕೆ ಘನರು, ನಿಜವದೊರಕೊಂಡ ನಿರ್ಮಲಜ್ಞಾನಿಗಳು, ನಿಃಶಬ್ದವೇದಿಗಳು, ತಮ್ಮ ತನು, ಮನ ನೆನಹು ಭಾವ, ಜ್ಞಾನಂಗಳ ನಷ್ಟ ಮಾಡಿದುದಲ್ಲದೆ ನಾನೀನೆಂಬುದು ನಷ್ಟ ಮಾಡಿದುದರಿಂದ ತನ್ನ ಕಂಡವರು, ಮುಟ್ಟದುದ ಮುಟ್ಟಿದವರು ಅಸಾಧ್ಯವ ಸಾಧಿಸಿದುದು ಎಂದು ಹೇಳಿಹರು.

ತಲೆಕೆಟ್ಟು ತಲೆಹಿಡಿದೆ : ಶರಣರು ತಲೆಕೆಟ್ಟು ತಲೆಹಿಡಿದವರು, ನಾನೆಂಬುದು ತಲೆಕೆಟ್ಟಿದೆ, ನೀನೆಂಬುದು ತಲೆಕೆಟ್ಟಿದೆ, ಇವೆರಡು ತಲೆಕೆಟ್ಟು ನಾನೀನೆಂಬುದಕ್ಕೂ ತೆರಹಿಲ್ಲದ ಘನವಾವುದು, ಅದರ ತಲೆ ಹಿಡಿದವರು. ಅದಕ್ಕಾಗಿ ಅವರದು ನಾಹಂ, ತಲೆಕೆಟ್ಟಿದೆ ಕೋಹಂ ತಲೆಕೆಟ್ಟಿದೆ, ಸೋಹಂ ತಲೆ ಕೆಟ್ಟಿದೆ, ಚಿದಹಂ ತಲೆಕೆಟ್ಟಿದೆ, ಸಕಲವು ನೀನೆಂಬ ದಾಸೋಹಂ ಭಾವರೂಪಿ ತಲೆಕೆಟ್ಟಿದೆ, ಅರಿಯಲಿಲ್ಲದ ಅರುವಾಗಿಹ ಘನದ ತಲೆ ಹಿಡಿದಿದೆ. ಏನೆಂದೆನಲಿಲ್ಲದ ಅರುವಿನ ತಲೆ ಹಿಡಿದಿದೆ. ಭಾವಕ್ಕಿಂಬುಕೊಡದ ಘನವಾಗಿಹರು. ಇದು ಕಾರಣ ತಲೆಕೆಟ್ಟು ತಲೆ ಹಿಡಿದೆ. ಅಂದರೆ ಶಬ್ದಮೀಸಲವಾಗಿಹ ತಲೆ ಹಿಡಿದೆ. ನುಡಿಗೂ ನಡೆಗೂ ಎಡೆಗೊಡದ ತಲೆ ಹಿಡಿದೆ. ಶೃತಿಗಗೋಚರವಾಗಿಹ ನನ್ನ ತಲೆವಿಡಿದೆ. ವಾಙ್ಮನೋತೀತವಾಗಿಹ ನನ್ನ ತಲೆವಿಡಿದೆ ಎಂದು ಹೇಳಿಹರು.

ನೆಲೆಗೆಟ್ಟು ನಿರ್ಧರಿಸಿದೆ : ಸ್ವತಂತ್ರ ಘನದೊಳಗಿದ್ದು ನಿಜವನರಿದುದು ನೆಲೆಗೆಟ್ಟು ನಿರ್ಧರಿಸಿದ ಸಂಕೇತವು. ಗುಹೇಶ್ವರ ಲಿಂಗವೆಂಬ ಘನ ಘಟ್ಟಿಯ ನರಿವುಡೆ ನಿನ್ನರಿವೆಲ್ಲ ಹರಿಹಂಚಮಾಡಿ ನೀನರಿದುದೆ ನೆಲೆಗೆಟ್ಟು ನಿರ್ಧರಿಸಿದುದು, ಗುಹೇಶ್ವರನೆಂಬ ಲಿಂಗವರಿವುದೆಂದರೆ ತನ್ನ ದೇಹದೊಳಗೆ ಘನ ಚೈತನ್ಯನಾಗಿಹ ತಾನು, ತನ್ನನ್ನು ತನ್ನಿಂದ ತಾನರಿವುದು, ತಾನು ಅಖಂಡಿತ ಘನಪೂರ್ಣವಪ್ಪ ಪರಾತ್ಪರ ಅರುವು ಆದುದರಿಂದ ಆವಾವ ಕಲ್ಪಿತಕ್ಕೂ ಭಾವಕ್ಕೂ ನೆನಹಿಂಗೂ ವಿಚಾರಕ್ಕೂ ಅವಕಾಶ ಕೊಡದ ನಿಸ್ಸೀಮ ತತ್ವವಾದ್ದರಿಂದ ಅದನ್ನು ಅರಿಯಲು ತನಗಿಂತ ಬೇರಾದ ಸಕಲ ಬಿಡಿಅರುವೆಲ್ಲ ಹರಿ ಹಂಚು ಮಾಡುವುದಂ ದಿಃಕರಿಸುವುದು ನಿಃಕರಿಸುವುದು ಆಗ ತನ್ನ ನೆಲೆಕೆಟ್ಟು ತನ್ನಿರುವು

ನಿರ್ಧರಿಸಿದುದು ಎಂದು ಹೇಳಿಹರು.

ಗುಹೇಶ್ವರ ನಿಮ್ಮ ಶರಣ ಅಜಗಣ್ಣಂಗೆ ಶರಣೆಂದು ಬದುಕಿದೆನು : ಗುಹೇಶ್ವರ ನಿಮ್ಮ ಶರಣ ಅಜಗಣ್ಣ ಶಬ್ದಮುಗ್ಧ ನಿಶಬ್ದವೇದಿ ಅಜಗಣ್ಣ ತನ್ನಿಂದ ತಾನರಿತ ಅಜಗಣ್ಣ ನಿರಂತರವಾಗಿರುವ ಮಂಗಳಮಯವಾಗಿಹ ಅಜಗಣ್ಣ, ನಾನೀನೆಂಬುದಕ್ಕೂ ತೆರಹಿಲ್ಲದ ಘನವಾಗಿಹ ಅಜಗಣ್ಣ, ನುಡಿಗೆಡೆಗೊಡದ ಘನವಾಗಿಹ ಅಜಗಣ್ಣನ ನಿಲುವಿಂಗೆ ಒಪ್ಪಿ ಸಮ್ಮತವಾಗಿ ಅರುವಿಂಗರುವಾಗಿ ಬದುಕಿದೆನು ಎಂದು ಹೇಳಿಹರು.

**192**

**ಅರಿವರತು ಮರಹುಗೆಟ್ಟು ತನ್ನಲ್ಲಿ ತಾನು ಸನ್ನಹಿತನಾದವಂಗೆ**
**ದುಃಖಿಸುವರೆ ಹೇಳಾ? ಶೋಕಿಸುವರೆ ಹೇಳಾ?**
**ಒಡಲಲ್ಲಿದಾತಂಗೆ ಎಡೆಯಲೊಂದು ಅಳಿವುಂಟೆಂದು**
**ನುಡಿದು ಹೇಳುವ ಮಾತು ಭ್ರಾಂತು ನೋಡಾ!**
**ಎರಡಿಲ್ಲದ ಐಕ್ಯಂಗೆ ಒಳಹೊರಗಿಲ್ಲ ನೋಡಾ,**
**ಗುಹೇಶ್ವರನ ಶರಣ ಅಜಗಣ್ಣಂಗೆ!**

**ತಾತ್ಪರ್ಯ** : ಅರುವರಿತು ಮರಹುಗೆಟ್ಟು ತನ್ನಲ್ಲಿ ತಾನು ಸನ್ನಿಹಿತನಾದವಂಗೆ ದುಃಖಿಸುವರೆ ಹೇಳಾ, ಶೋಕಿಸುವರೆ ಹೇಳಾ : ಮುಕ್ತಾಯಕ್ಕ ತನ್ನ ಗುರುವಾಗಿಹ ಅಜಗಣ್ಣನ ವಿಯೋಗವಾಗಿ ಬಹು ದುಃಖಿಸಹತ್ತಿದ್ದಾಳೆ. ಆ ದುಃಖವ ಕಂಡು ಸಂತೈಸುವ ಪ್ರಭು, ತನ್ನ ಸ್ವಾನುಭವ ಸುಧೆಯನ್ನೆ ಆ ಮುಕ್ತಾಯಕ್ಕನ ಮುಂದಿಟ್ಟಿದ್ದಾನೆ. ಓ ಅಕ್ಕ ಗುರು ಘನನು ವಿಯೋಗವಾಗಿಹನೆಂದು ದುಃಖಿಸುವಿಯಾ, ಶೋಕಿಸುವಿಯಾ, ಮುಕ್ತಾಯಕ್ಕನಂತೆ ಗುರು ಘನನು ವಿಯೋಗವಾದನೆಂದು ದುಃಖಿಸುವವರು ಬಹಳಷ್ಟು ಗುರುಪುತ್ರರಿದ್ದಾರೆ. ಇವರು ತಾವಾರು ತಮ್ಮ ತಿಳಿಯದವರು ಗುರು ಘನನನ್ನು ತಿಳಿಯದವರು , ಪ್ರಭು ಅರುವರಿತ ಮಹಾಂತ. ದುಃಖವನ್ನು ಕಳೆಯುವ ಸಮರ್ಥರೆಂದರೆ ಅರುವರಿತವರು ಮರಹುಗೆಟ್ಟವರು ತನ್ನಲ್ಲಿ ತಾನು ಸನ್ನಿಹಿತವಾದವರು ಇವರೆ ಪರಮಾನಂದಮಯರು ಸಾವನರಿಯದವರು.

ಅರುವರಿತವರು ಸಿಕ್ಕುವುದು ವಿರಳ, ಅರುವೆಂಬುವವರು ಪ್ರಜ್ಞಾನಂಬ್ರಹ್ಮ, ಸತ್ಯಜ್ಞಾನಮನಂತ ಬ್ರಹ್ಮ, ಏಕಮೇವಾದ್ವಿತೀಯಂ ಬ್ರಹ್ಮ , ಸರ್ವಂ ಖಲ್ವಿದಂ ಬ್ರಹ್ಮ, ನಿಃಶಬ್ದ ಬ್ರಹ್ಮ , ಹೀಗೆ ಶೃತಿವಾಕ್ಯಗಳ ಕಥನ ಮಾಡುವ ಶಬ್ದ ಬ್ರಹ್ಮರು, ತಮ್ಮ ತಾವರಿಯದವರು. ಶೃತಿ ಪರಾಯಣರು, ಇವರು ಸಿಕ್ಕುವರು, ಅರುವರಿತವರು ನಿಃಶಬ್ದವೇದಿಗಳು ಶೃತಿಗಗೋಚರರು, ನೇರವಾಗಿ ತನ್ನ ತಾನರಿತ ಶರಣರು. ಇವರು ಮರಹುಗೆಟ್ಟವರು. ತನ್ನ ನರಿದವಂಗೆ ಇದಿರೆಂಬುದಿಲ್ಲ ತನ್ನ ಅರಿಯದವಂಗೆ ಇದಿರೆಂಬುದುಂಟು. ಅರುವು ಮರವು ಕುರುಹಳಿಯಿತ್ತು ಬೆರಗಾಯಿತ್ತು, ಬೆರಗಿನೊಳಗೆ ಬೆರಗು ಹತ್ತಿತ್ತಿದೇನೋ ?

ತನ್ನ ಅರಿತವರಾದುದರಿಂದ ಇದಿರೆಂಬುದಿಲ್ಲ, ಇದಿರೆಂಬುದೆಲ್ಲವು ಕೆಟ್ಟು ಹೋಗಿದೆ.

ನಷ್ಟವಾಗಿದೆ, ದೇಹೋಹಂ ಎಂಬುದು ಮರವು ನಾಹಂ ಎಂಬುದು ಮರವು ಕೋಹಂ ಎಂಬುದು ಮರಹು, ಸೋಹಂ ಎಂಬುದು ಅರುವಿನ ಮರವು, ಚಿದಹಂ ಎಂಬುದು ಅರುವಿನ ಮರವು, ಇದು ಅನುಭವದ ಮದವು, ಆರು ಅರಿಯದರುವು ತನ್ನಯ ಇರುವು ಆಗಿ ಕರಿಗೊಂಡಿದೆ ಅಲ್ಲಿ ಇದಿರೆಂಬುದು ಕೆಟ್ಟು ಹೋಗಿದೆ. ಮರವಿನ ಅರುವು ಕೆಟ್ಟುಹೋಗಿದೆ. ಅರುವು ತಾನೆಂಬುದು ಕೆಟ್ಟು ಹೋಗಿದೆ. ತಾನೆ ತಾನಾಗಿಹ ಅರಿಯದರುವೆ ಪ್ರಜ್ವಲಿಸುವಲ್ಲಿ ಆ ಘನ ಗುರುವಿಗೋಸ್ಕರ ದುಃಖಿಸುವರೆ ಹೇಳಾ, ಶೋಕಿಸುವರೆ ಹೇಳಾ, ಆಕಾಶಕ್ಕಾಗಿ ಆರಾದರೂ ಅಳುವರೆ ? ಘಟವಿದ್ದಡೇನು, ಘಟ ಒಡೆದು ತುಣು ತುಣುಕಾದರೇನು, ಮನೆ ಇದ್ದಡೇನು, ಮನೆ ಬಿದ್ದಡೇನು, ಇದ್ದಂತಿಹ ಆಕಾಶ, ಆಕಾಶವತ್ ಆಕಾಶವಾಗಿಹ ಬಯಲು ಹಾಗೆ ಅರುವಿಂಗರುವಾಗಿಹ ಘನವು, ಅದು ತನ್ನಲ್ಲಿ ತಾನು ಸ್ವತಃ ಸಿದ್ಧವಾದುದು ಈ ಸ್ವತಃ ಸಿದ್ಧವಾಗಿಹ ತನ್ನಿರುವು ಅಂದು ಇದ್ದಂತಿದ್ದುದು ಇಂದು ಇದ್ದಂತಿದ್ದುದು ಎಂದೆಂದು ಇದ್ದಂತಿದ್ದುದನರಿತ ಮಹಾಂತಂಗೆ ಕಾಲಂಗಳ ಭೇದವಿಲ್ಲ ಅಂತಪ್ಪ ಮಹಾಂತಂಗೆ ದುಃಖಿಸುವರೆ ಹೇಳಾ ಶೋಕಿಸುವರೆ ಹೇಳಾ.

ಒಡಲಿಲ್ಲದಾತಂಗೆ ಎಡೆಯಲೊಂದು ಅಳಿವುಂಟೆಂದು ನುಡಿದು ಹೇಳುವ ಮಾತು ಭ್ರಾಂತು ನೋಡಾ, ಅರುವರಿದ ಮಹಾಂತನೆಂದರೆ ಒಡಲಿಲ್ಲದಾತನು ಪ್ರಭುವಿನ ಅರ್ಥಗರ್ಭಿತವಾದ ರಹಸ್ಯತಿಳಿದ ಆಧ್ಯಾತ್ಮರುಗಳು ಬೆರಳುಗಳ ಮೇಲೆ ಎಣಿಸುವಷ್ಟು ಮಹಾಂತರು ಸಿಕ್ಕಬಹುದು. ಅರುವರಿತವರೆಂದರೆ ಒಡಲಿಲ್ಲದ ಮಹಾಂತರು. ಚಿದಾಕಾಶ ತಾನಾಗಿಹ ಘನಮಹಿಮಂಗೆ ಒಡಲೇತರದು, ಆಕಾಶವತ್, ಆಕಾಶವಾಗಿಹ ಘನದಲ್ಲಿ, ಘಟ ಮಠ ಮೇಘವಿರಲು ಸಂದೆಲ್ಲಿಯದು, ಆರಿಗೆ ಆಕಾಶದ ಯತಾರ್ಥ ತಿಳುವಳಿಕೆಯಾಗಿದೆ.ಅವರಿಗೆ ಅದು ನಿಸ್ಸೀಮವು ಅಪಾರ ಹಾಗೆ ನುಡಿಗೆಡೆಗೊಡದ ಘನದಿರುವು ತನ್ನ ಇರುವು ಆಗಿರುವಲ್ಲಿ ಅಲ್ಲಿ ಕಾರ್ಯವಾವುದು, ಕಾರಣವಾವುದು ಸೃಷ್ಟಿ ಆವುದು ? ಪಿಂಡವಾವುದು ? ಬ್ರಹ್ಮಾಂಡವಾವುದು ? ಇಲ್ಲದುದು ಇಲ್ಲವೆ ಇಲ್ಲ, ಶರಣ ಇದ್ದಂತಿದ್ದ ಘನ ಎಡೆಯಿಲ್ಲದ ಪರಿಪೂರ್ಣನಿರುವಲ್ಲಿ ಆ ಮಹಾಮಹಿಮಂಗೆ ನಡೆ ಆವುದು ? ನುಡಿ ಆವುದು, ಅಪ್ರಮಾಣನ ಪ್ರಮಾಣಿಸಿ ನೋಡಿದುದು ಯತಾರ್ಥವಾಗದು, ಶಬ್ದಮುಗ್ಧನ ನುಡಿಗೊಳಪಡಿಸುವುದು ಯತಾರ್ಥವಾಗದು.

ಕರ್ಮಾಧೀನವೆಂಬ ಕರ್ಮಿ, ಲಿಂಗಾಧೀನವೆಂಬ ಭಕ್ತ ಪ್ರಾರಬ್ಧವೆಂಬ ದ್ವೈತಿ, ತ್ರಿವಿಧವೆನ್ನದವರ ನೀನೆಂಬೆ ಗುಹೇಶ್ವರಾ, ತ್ರಿವಿಧಕ್ಕೊಳಪಟ್ಟವರು ಸಿಕ್ಕುವರು. ತ್ರಿವಿಧವ ಕಾಣುವವರು ಸಿಕ್ಕುವರು, ಒಬ್ಬನು ಕರ್ಮಾಧೀನವ ಕಾಣುವನು. ಕೆಲರು ಲಿಂಗಾಧೀನವ ಕಾಣುವರು ಕೆಲರು, ಪ್ರಾರಬ್ಧವ ಕಾಣುವರು. ಇವರು ತಾನಾರೆಂದು ತನ್ನ ಅರಿತವರಲ್ಲ, ಅರಿಯದ್ದರಿಂದ ಮರಹು ಕೆಟ್ಟವರಲ್ಲ, ತನ್ನಲ್ಲಿ ತಾನು ಸನ್ನಿಹಿತವಾದವರಲ್ಲ, ಅರುವರಿತವರು ಅರುವಿಂಗರುವಾಗಿಹ ಸ್ವಮಹಿಮರು, ಅಂತಪ್ಪ ಘನಕ್ಕೆ ಘನ ಅಳಿಯಲು ಸಂದೆಲ್ಲಿ ? ಬಿಡುವು ಎಲ್ಲಿ ಸ್ಥಾನವೆಲ್ಲಿ ? ಒಡಲೆ ಇಲ್ಲದವನು ಅಳಿವನು ಎಂದು ನುಡಿದು ಹೇಳುವುದು ಅದು ಭ್ರಾಂತಿ.

ಆಕಾಶವದು ಘಟಾಕಾಶ ಮಠಾಕಾಶ ಮೇಘಾಕಾಶವಾಗಿದೆಯಾ ? ಅದು

ಇದ್ದಂತಿದ್ದುದು ಶಬ್ದಮುಗ್ಧ ಆಕಾಶ ! ನುಡಿದು ಹೇಳುವವರಿಗೆ ಅದರ ಘನವು ತಿಳಿಯದು, ಚಿದಾಕಾಶವದು ನಿರುಪಾಧಿಯು, ನಿರುಪಾಧಿಯಾಗಿಹ ಘನದಿರುವು ಉಪಾಧಿಯ ಸತ್ಯತ್ವ ಬುದ್ಧಿಯುಳ್ಳವಂಗೆ ತಿಳಿಯದು, ಮಿಥ್ಯತ್ವ ಬುದ್ಧಿಯುಳ್ಳವಂಗೆ ತಿಳಿಯದು, ಆರದು ಬುದ್ಧಿ ಭಸ್ಮವಾಗಿದೆ ಅಲ್ಲಿ ನಿರಾಲಂಬದ ನಿಜದಿರುವು ಪ್ರಜ್ವಲಿಸುವುದಾಗಿದೆ. ಅಲ್ಲಿ ಜೀವಾತ್ಮ, ಅಂತರಾತ್ಮ, ಪರಮಾತ್ಮನೆಂಬುದು ಭ್ರಾಂತಿ, ನುಡಿಗೆಡೆಗೊಡದ ಘನವು ನುಡಿಗೊಳಪಟ್ಟುದೆಂದು ? ತನ್ನ ತಾನರಿತ ಶರಣ ಅವರ್ಣಿಯ ಬ್ರಹ್ಮವು, ಆದುದರಿಂದ ಎರಡಿಲ್ಲದ ಐಕ್ಯನೆಂದು ಹೇಳಿಹರು.

ಎರಡಿಲ್ಲದ ಐಕ್ಯಂಗೆ ಒಳಗೆಂಬುದಿಲ್ಲ, ಹೊರಗೆಂಬುದಿಲ್ಲವಾದ್ದರಿಂದ ಒಳಹೊರಗಿಲ್ಲ ನೋಡಾ, ಅರಿತ ಬಳಿಕ ಬ್ರಹ್ಮವೆಂಬುದು, ಮೃಗಜಲನೋಡಾ, ಅರಿದ ಬಳಿಕ ಬ್ರಹ್ಮವೆಂಬುದು, ವಂದ್ಯಾಪುತ್ರ ನೋಡಾ, ಅರಿದ ಬಳಿಕ ಬ್ರಹ್ಮವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಶಬ್ದಮುಗ್ಧ ನೋಡಾ. ತನ್ನ ತಾನರಿದ ಶರಣ, ಎರಡಿಲ್ಲದ ಐಕ್ಯ. ಇತ್ತ ನಾಮರೂಪವು ಇಲ್ಲವಾಗಿದೆ. ಇತ್ತ ಅಸ್ತಿ, ಭಾತಿ, ಪ್ರಿಯವೆಂಬುದು ಇಲ್ಲವಾಗಿದೆ. ಇತ್ತ ನಾಮವು ನಿರ್ನಾಮವು, ರೂಪವು, ನಿರೂಪವು ಇತ್ತ ಅಸ್ತಿ ಭಾತಿ, ಪ್ರಿಯವೆಂಬ ಬ್ರಹ್ಮವು ಮೃಗಜಲವಾಗಿದೆ. ವಂದ್ಯಾಪುತ್ರವಾಗಿದೆ. ಇದು ಕಾರಣ ತನ್ನನರಿದ ಶರಣ ಶಬ್ದಮುಗ್ಧ ಸ್ವಮಹಿಮ, ಗುಹೇಶ್ವರಾ ಶರಣ ಅಜಗಣ್ಣಂಗೆ, ಅಜಗಣ್ಣ ಶಬ್ದಮುಗ್ಧ ಈ ಮಹಾಂತಂಗೆ ನುಡಿಗಳೆಲ್ಲ ಮೃಗಜಲವಾಗಿದೆ. ವಂದ್ಯಾಪುತ್ರವಾಗಿದೆ. ಈ ಶಬ್ದಮುಗ್ದತ್ವವು ಮುನ್ನ ಮುನ್ನಲಾದುದು ತನ್ನಿಂದ ತಾನಾದುದು, ಅಜಗಣ್ಣನೆಂಬ ಶರಣ, ಮುನ್ನ ಮುನ್ನಲಾದ ಸ್ವಮಹಿಮ, ತನ್ನಿಂದ ತಾನಾದ ಸ್ವಯಂಜ್ಯೋತಿ. ಇದು ಅಜಾತವು ಎಂದು ಹೇಳಿದೆ. ಇಂತಪ್ಪ ಮುನ್ನ ಮುನ್ನಲಾದ ತನ್ನಿಂದ ತಾನಾದ ಸ್ವಯಂಜ್ಯೋತಿಯು ನುಡಿಗೆಡೆಗೊಡದ ಘನ ಕಂಡೆನೆಂಬುದು ಕಣ್ಣಿಂಗೆ ಮರವು ಕಾಣೆನೆಂಬುದು ಮನದ ಮರವು, ಶರಣರು ಶರಣರನ್ನು ಕಾಣುವರಲ್ಲದೆ ಸಾಧಕರಿಗೂ ಜಿಜ್ಞಾಸುಗಳಿಗೂ ಅನುಭವಿಗಳಿಗೂ ಕಾಣುವುದು ದುಸ್ತರವು. ಕಲ್ಪಿತವಲ್ಲದ ಘನವ ಕಲ್ಪಿತರು ಕಾಣುವದದೆಂತು, ಅಪ್ರಮಾಣಿಕನ ಪ್ರಮಾಣಿಕರು ಕಾಣುವದದೆಂತು ? ಮರವರುವುಳ್ಳವರು ಅರಿಯದರುವಿನ ಘನವ ಅವರೇನು ಬಲ್ಲರು, ಇದು ಕಾರಣ ಗುಹೇಶ್ವರನ ಶರಣ ಅಜಗಣ್ಣನ ಕಂಡೆ ಕಾಣೆ ಕೂಡಿದೆ ಅಗಲಿದೆನೆಂಬುದು ಭ್ರಾಂತವು.

**193**

**ಕಂಡೆನೆಂಬುದು ಕಂಗಳ ಮರವೆ,**
**ಕಾಣೆನೆಂಬುದು ಮನದ ಮರವೆ,**
**ಕೂಡಿದೆನೆಂಬುದು ಮರಹಿನ ಮರವೆ,**
**ಅಗಲಿದೆನೆಂಬುದು ಮರಹಿನ ಮರವೆ.**
**ಇಂತು-ಕಂಡೆ ಕಾಣೆ ಕೂಡಿದೆ ಅಗಲಿದೆ ಎಂಬ,**
**ಭ್ರಾಂತಿಸೂತಕವಳಿದು ನೋಡಲು**
**ಗುಹೇಶ್ವರಲಿಂಗವನಗಲಲೆಡೆಯಿಲ್ಲ ಕೇಳಾ, ಎಲೆ ತಾಯೆ,** ॥ 1014 ॥

**ತಾತ್ಪರ್ಯ** : ಕಂಡೆನೆಂಬುದು ಕಂಗೆ ಮರವು, ಕಾಣೆನೆಂಬುದು ಮನದ ಮರವು : ಮರವಿನ ನೋಟ, ಮರವಿನ ಮನ, ಇದು ವಿಶ್ವವನ್ನೆ ಮುಚ್ಚಿಹಾಕಿದೆ ಎಂದರೂ ಅಡ್ಡಿ ಇಲ್ಲ. ಈ ಮರವಿನ ನೋಟದಿಂದ ಉಳಿದುಕೊಂಡವನು ಕೋಟಿಗೊಬ್ಬ ಮಹಾಂತನಿಹನು. ಏಕೆಂದರೆ ತತ್ವ ಪ್ರೇಮಿಗಳಾಗಿಹ ತಾತ್ವಿಕರಲ್ಲಿ ಭ್ರಮದೃಷ್ಟಿ, ಭ್ರಮಾತ್ಮಕ ಮನ ನೆಲೆಗೊಂಡಿದೆ. ಇದು ಗುರು ಶಿಷ್ಯರಲ್ಲಿಯೂ ಅನುಭವಿಗಳಲ್ಲಿಯೂ ವಾಸ ಮಾಡಿ, ನಿಜದಿರುವ ಕಾಣಗೊಡದಂತೆ ಮುಚ್ಚಿ ಹಾಕಿರುವುದಲ್ಲದೆ ಅಂಥ ಮುಕ್ತಾಯಕ್ಕನಿಗೂ ಶ್ರೀಗುರುವಾಗಿಹ ಅಜಗಣ್ಣನ ಕಂಡೆ. ಈಗ ಕಾಣೆ ಎನ್ನುವ ಮರವಿನ ದೃಷ್ಟಿ, ಮರವಿನ ಮನವೆ ಆರೂಢವಾಗಿರುವಲ್ಲಿ ಇನ್ನುಳಿದವರ ಪಾಡೇನು ?

ಶ್ರೀಗುರುವ ಕಂಡೆನೆಂಬ ಈ ಭಿನ್ನದೃಷ್ಟಿ, ಮಾಯಿಕ ದೃಷ್ಟಿ, ತನಗೆ ಮೋಸ ಮಾಡುವ ಮರವಿನ ದೃಷ್ಟಿ, ಇದು ಪ್ರಪಂಚದವರಿಂದ ಹಿಡಿದು ಪರಮಾರ್ಥದವರಲ್ಲಿಯೂ ಕೂಡ ಎಷ್ಟು ಹಬ್ಬಿದೆಯಲ್ಲ, ಏನಾಶ್ಚರ್ಯ, ಈ ಮರವಿನ ದೃಷ್ಟಿ ಶ್ರೀಗುರುವ ಕಂಡೆನೆನ್ನುತ್ತದೆ. ಈಗ ಕಾಣೆನೆನ್ನುತ್ತದೆ. ಇದಲ್ಲದೆ ಭಕ್ತರಲ್ಲಿ, ವಿಷ್ಣುವ ಕಂಡೆ ಶಿವನ ಕಂಡೆ ದೇವಿಯ ಕಂಡೆ, ಈಗ ಕಾಣೆನೆಂಬ ಭಿನ್ನ ದೃಷ್ಟಿ ಎಷ್ಟು ಪ್ರಬಲವಾಗಿ ಬೆಳದಿದೆ.

ಅಪರಮಿತ ಕತ್ತಲೆಯೊಳಗೆ ಪರಮಿತಿಯ ಬೆಳಕು ಇಟ್ಟಂತಾಗಿದೆ. ಇತ್ತ ಭ್ರಾಂತಿ ದೃಷ್ಟಿ, ಇತ್ತ ಬ್ರಹ್ಮದೃಷ್ಟಿಯೆ ? ಇತ್ತ ನೀನೆ ಬ್ರಹ್ಮನಿದ್ದೀಯ ಎಂದು ಬೋಧಿಸುವುದು ಇತ್ತ ಶಿಷ್ಯನಾಗಿ ಶ್ರವಣ ಮಾಡುವುದೆ ? ಬ್ರಹ್ಮ ಬ್ರಹ್ಮವಾಗಿ ಬೋಧಿಸುವುದು ಬ್ರಹ್ಮ ಬ್ರಹ್ಮವಾಗಿ ತಿಳಿಯುವುದು ಹೀಗೆ ತಿಳಿಯುವುದು ಬಿಟ್ಟು ಪುನಃ ಮರವಿನಿಂದುಕ್ತನಾಗಿ ಶ್ರೀಗುರುಘನವ ಕಂಡೆ ಈಗ ಕಾಣೆನೆನ್ನುವದು ಬೋಧಸಮಯದಲ್ಲಿ ತನ್ನ ಕಂಡೆನೆನ್ನುವುದು ಉಳಿದ ಸಮಯದಲ್ಲಿ ಕಾಣೆನೆನ್ನುವದು ಪೂರ್ವದಲ್ಲಿ ನನ್ನ ನಾನು ಅರಿಯದಿದ್ದೆ, ಈಗ ಅರಿತೆನೆನ್ನುವುದು ಇದು ನಿಜತತ್ವ ತಿಳಿಯದ ಪರಿಣಾಮ.

ಗುರು ಘನವ ಕಂಡೆನೆನ್ನುವರು ಅಸಂಖ್ಯರು. ಇವರು ಗುರುನಿಂದ ಉಪದೇಶ ಪಡೆದ ಗುರುಪುತ್ರರು. ಈಗ ಅವರು ಹೋಗಿ ಹತ್ತಾರು ವರ್ಷಗಳಾದವು.ಅವರನ್ನು ಕಾಣೆ ಎನ್ನುವ ಗುರುಭಕ್ತರು ಬಹಳಷ್ಟು ಸಿಕ್ಕುತ್ತಾರೆ. ಈ ಸೀಮಿತ ದೋಷ ಕಳೆಯಲು ಬಂದ ಪ್ರಭು ಕಂಡೆನೆಂಬುದು ಕಂಗೆ ಮರವು, ಕಾಣೆನೆಂಬುದು ಮನದ ಮರವು ಎಂದು ಬಿತ್ತರಿಸಿದುದು ನೋಡುವ ಅದೆಷ್ಟು ಅರುವಿನ ಸಂಪನ್ನರು ಇರುವರೋ ಅದನಾರು ಬಲ್ಲರು.

ಅರುವು ಅರುವು ಬ್ರಹ್ಮ ಬ್ರಹ್ಮವೆಂದು ಶ್ರವಣ ಮಾಡುವ ಸಂಪನ್ನರಿಂದ ಈ ಭ್ರಾಂತಿಸೂತಕ ಪರಿಹಾರ ವಾಗದು, ಆರು ಅರುವಿಂಗರುವಾಗಿ ದೇಹಿಗೆ ದೇಹಿಯಾಗಿ ತಿಳಿಯಹೋದವರಿಗೆ ಆಗ ಗುರುವ ಕಂಡೆನೆಂಬುದು ಕಣ್ಣಿನ ಅಜ್ಞಾನ, ಈಗ ಕಾಣೆನೆಂಬುದು ಮನದ ಅಜ್ಞಾನವೆಂಬುದು ತನ್ನಿಂದ ತನಗೆ ವಿದಿತವಾಗುವುದು. ಪ್ರಭುದೇವ ಕಂಡೆ ಕಾಣೆನೆಂಬ ಕಣ್ಣಿನ ಭ್ರಾಂತಿ, ಮನದ ಭ್ರಾಂತಿ ಅಳಿದು ನೋಡುವುಡೆ ಆಗ ತನ್ನಿಂದ ಅಗಲಲು ಎಡೆಯಿಲ್ಲ ಸಂದಿಲ್ಲ, ಅವಕಾಶವೆ ಇಲ್ಲವೆಂಬುದು ತಿಳಿಯುವುದು.

ಗುರು ಘನವ ಕೂಡಿದೆನೆನ್ನುವ ಅಗಲಿದೆನೆನ್ನುವ ದೇವನ ಭಕ್ತರು ಇರುವರು, ಗುರುಭಕ್ತರು ಇರುವರು, ಇವರನ್ನು ಕುರಿತು ಪ್ರಭು ಎಚ್ಚರಿಸುತ್ತಿಹನು. ಕೂಡಿದೆನೆನ್ನುವುದು ಅರುವಿನ ಮರವು ಅಗಲಿದೆನೆನ್ನುವುದು ಮರಹಿನ ಮರವೆ ಎಂದು ಎಚ್ಚರಿಸಿಹನು. ದೇವನ ಭಕ್ತರಾಗಲಿ, ಗುರುವಿನ ಭಕ್ತರಾಗಲಿ, ಇವರು ಒಡಲುಳ್ಳವರು, ಒಡಲಿಲ್ಲದವನ ಕಾಣುವದದೆಂತು ಕೂಡವದದೆಂತು ? ಕರಣಂಗಳಿಲ್ಲದವಂಗೆ ಕರಣಂಗಳಿಂದ ತಿಳಿವುದದೆಂತು.

ಪ್ರಭುದೇವ ಒಡಲಿಲ್ಲದಾತ, ಶ್ರೀಗುರು ಒಡಲಿಲ್ಲದಾತ, ಈರ್ವರ ಹೃದಯ ಒಂದು, ಅರಿವು ಒಂದು, ಇರುವು ಒಂದು. ಶ್ರೀಗುರುವೆಂದರೆ ಪ್ರಭು ಪ್ರಭುವೆಂದರೆ ಶ್ರೀಗುರು ಇದು ಕಾರಣ, ಸಕಲರ ಹೃದಯ ನಿಸ್ಸೀಮ ಹೃದಯವಾಗಬೇಕು, ಅರು ಹೃದಯವಾಗಬೇಕು, ಅದು ಅರುವಿಂಗರುವಾಗಿ ಪ್ರಜ್ವಲಿಸಿ ಬೆಳಗುಳ್ಳದ್ದಾಗಬೇಕೆಂಬುದು ಆತನ ಕರುಣಾರಸದ ಕಳವಳ.

ಕೂಡಿದೆನೆನ್ನುವುದು ಅರುವಿನ ಮರವು, ಅಗಲಿದೆನೆನ್ನುವುದು ಮರವಿನ ಮರಹು, ಮರವರುವುಳ್ಳದು ಬುದ್ಧಿಯಕಾರ್ಯ ಈ ಬುದ್ಧಿ ಭಸ್ಮಮಾಡಲು ಚಿದ್ಘನ ರೂಪಿ, ಪ್ರಭುವಿನ ಆಕಾಶವಾಣಿ ಸಕಲ ಶರಣರ ಮುಂದೆ ಪ್ರಜ್ವಲಿಸುವುದು, ಅದೆಷ್ಟು ಆಧ್ಯಾತ್ಮರುಗಳಿಗೆ ಒಪ್ಪುವದೋ ಅವರ ಹೃದಯವೆ ಬಲ್ಲದು ಬಹು ಗುರುಭಕ್ತರು ಅರುವಿನ ಅನುಸಂಧಾನಕ್ಕೆ ಒಪ್ಪಿ ಅದರಲ್ಲಿ ಲೀಯವಾಗುವುದೆ ಸಮಾಧಿ ಎಂದು ಸಾಕ್ಷಾತ್ಕಾರವೆಂದು ತಿಳಿದಿರುವುದು. ಇದು ಬುದ್ಧಿಯಕಾರ್ಯವೆಂದು ತಿಳಿಯದಂತಾಗಿದೆ. ಅದಕ್ಕಾಗಿ ಬುದ್ಧಿ ಬೋಧದಿಂದುಕ್ತವಾಗುವುಡೆ ಗುರುವ ಕೂಡಿದೆ. ಬುದ್ಧಿ ಅಬೋಧದಿಂದುಕ್ತವಾಗುವುಡೆ ಗುರುವ ಅಗಲಿದೆನೆನ್ನುವ ಜ್ಞಾನವೆ ದೃಢವಾಗಿದೆ. ಇದು ಕಾರಣ ಶರಣವರೇಣ್ಯರೆ ? ಬೋಧಿಸುವದೆ ಗುರುಘನವೆಂದು ತಿಳಿಯಬೇಡಿ, ನೀವು ಶ್ರವಣ ಮಾಡುವುದೆ ನಿಮ್ಮ ಸ್ವರೂಪವೆಂದು ತಿಳಿಯಬೇಡಿ, ಇದರತ್ತಾಚೆ ನಡೆಯಿರಿ. ಅರುವಿಂಗರುವಾಗಿಹ ಘನವ ನೋಡಿರಿ, ಆಗ ನಿಮ್ಮಗಳ ನಿಜದಿರುವಿನ ದರ್ಶನ, ಶ್ರೀಗುರುವಿನ ದರ್ಶನ, ಈ ಯತಾರ್ಥ ದರ್ಶನವಾದಾಗ ಶ್ರೀಗುರುವ ಕೂಡಿದೆನೆನ್ನುವುದು ಅಗಲಿದೆನೆಂಬುದು ಅಜ್ಞಾನವು ಹೀಗೆ ಸಹಜವಿದಿತವು ಆಗುವುದು.

ಇಂತು ಕಂಡೆ ಕಾಣೆ ಕೂಡಿದೆ ಅಗಲಿದೆನೆಂಬ ಭ್ರಾಂತಿ, ಸೂತಕವ ತಿಳಿದು ನೋಡಲು ಗುಹೇಶ್ವರ ಲಿಂಗವನಗಲಲೆಡೆಯಿಲ್ಲ ಕೇಳಾ ತಾಯೆ, ಶ್ರೀಗುರುವ ಕಂಡೆ ಕಾಣೆ ಕೂಡಿದೆ ಅಗಲಿದೆ ಎಂಬುದು ಭ್ರಾಂತಿ, ಇದು ಮಹಾದೋಷ, ಇದು ತಿಳಿದು ನೋಡುವುದು. ತನ್ನ ಸ್ವತಂತ್ರ ದೃಷ್ಟಿ, ಸ್ವತಂತ್ರ ಅರುವು ಇದು ಅರುವಿಂಗರುವು(ಅರುವಿನ ಅರುವು) ಇದು ಗುರುವಿನ ಗುರುವಾಗಿಹ ಸ್ವತಂತ್ರ ಗುರುತನ ಭ್ರಾಂತಿ ಸೂತಕವಳಿದು ನೋಡಿದ ದಿವ್ಯದೃಷ್ಟಿ ಬೋಧವೆ ನಷ್ಟ ಮಾಡಿದ ದೃಷ್ಟಿ ಕಂಗಳ ಸೂತಕ ನಷ್ಟ ಮಾಡಿದ ದೃಷ್ಟಿ, ಮನದ ಸೂತಕ ನಷ್ಟ ಮಾಡಿದ ದೃಷ್ಟಿ, ಅರಿತೆ ಅರಿಯೆನೆನ್ನುವ ಬುದ್ಧಿಯ ಭ್ರಮವನ್ನೆ ನಷ್ಟ ಮಾಡುವ ದೃಷ್ಟಿ. ಇದು ತನ್ನಿಂದ ತನ್ನ ಅರಿದ ದೃಷ್ಟಿ. ದಿಟದಿಂದ ತನ್ನ ತಾಕಂಡ ದಿವ್ಯದೃಷ್ಟಿ, ಶ್ರೀಗುರುವ ಕಂಡ ದೃಷ್ಟಿ, ಇದು ಶರಣ ಶರಣೆಯರ ದೃಷ್ಟಿ ಬೆಳಗುಳ್ಳ ದೃಷ್ಟಿ ಇಲ್ಲಿ ಪ್ರಕಾಶಿತ, ಪ್ರಕಾಶಕ, ಭಿನ್ನದೃಷ್ಟಿ ಗಿಂಬಿಲ್ಲ ಅಖಂಡಿತ ಘನ ಪೂರ್ಣವಪ್ಪ

ತನ್ನಿರುವೆ ಅರುವೆಂದರಿದ ದಿವ್ಯದೃಷ್ಟಿ ಗುಹೇಶ್ವರ ಲಿಂಗವ ನಗಲಲೆಡೆಯಿಲ್ಲ ಕೇಳಾ ಎಲೆ ತಾಯೆ.

ಶರಣರು ತಮ್ಮ ದೇಹರೂಪಿ ಗುಹೆಯಲ್ಲಿ ಬೆಳಗುಳ್ಳ ಘನ ಚೈತನ್ಯವಾಗಿಹ ಈಶ್ವರ ರೂಪಿ ಲಿಂಗವರಿತುದರಿಂದ ಅಖಂಡಿತ ಘನ ಪೂರ್ಣವಪ್ಪ ತನ್ನಿರುವೆ ಅರುವಾದುದರಿಂದ ಗುಹೇಶ್ವರ ಲಿಂಗ ಅಗಲಲೆಡೆಯಿಲ್ಲ ತಾಯೆ ಎಂದು ಹೇಳಿಹರು. ಶರಣರು ಅಜಾತರು, ಚೈತನ್ಯವೆ ತಾವಾಗಿಹ ಘನಕ್ಕೆ ಘನರು. ಅಂತಪ್ಪ ಮಹಾಂತರ ಚಾರಿತ್ರ್ಯವ ಉಪಮಿಸಬಾರದು ನೋಡಾ. ಸಾಕಾರನಲ್ಲ, ನಿರಾಕಾರನಲ್ಲ, ಸಾವಯವನಲ್ಲ, ನಿರವಯನಲ್ಲ, ಕ್ಷರನಲ್ಲ, ಅಕ್ಷರನಲ್ಲ, ದ್ವಂದ್ವವನತಿಗಳೆದ ಅಕ್ಷರಾಕ್ಷರ ಮೀರಿದ ಘನ, ಅಚಿಂತ್ಯ ಚಿನ್ಮಾತ್ರನ ಪ್ರಮಾಣಿಸಲಳವಲ್ಲ ಇದು ಕಾರಣ ಗುಹೇಶ್ವರನ ಶರಣ ಅಜಗಣ್ಣನ ಅಂತಿಂತೆನಬಾರದು.

**194**

**ಅಳಿವನಲ್ಲ ಉಳಿವನಲ್ಲ ಘನಕ್ಕೆ ಗಮನನಲ್ಲ ಮನಕ್ಕೆ ಸಾಧ್ಯನಲ್ಲ**
**ತನ್ನ ತಪ್ಪಿಸಿ ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ ,**
**ಗುಹೇಶ್ವರನ ಶರಣ.**
**ಅಜಗಣ್ಣನ ಅಂತಿಂತೆನಬಾರದು ಕೇಳಾ ತಾಯೆ.** ॥ 857 ॥

**ತಾತ್ಪರ್ಯ** : ಅಳಿವನಲ್ಲ, ಉಳಿವನಲ್ಲ : ಪ್ರಭುದೇವ, ಅಳಿವನಲ್ಲ ಉಳಿವನಲ್ಲವೆಂದು ಬಿತ್ತರಿಸಿದುದು ನೋಡಿದಡೆ ಶರಣ ! ಅಪ್ರತಿಮಗಮ್ಯನು ಅಚಿಂತ್ಯಾತ್ಮತಾನಾಗಿಹ ಸ್ವಮಹಿಮ ಅಂತಪ್ಪ ಮಹಾಂತ ಅಳಿವವನು ಉಳಿವವನು ಹೇಗಾಗುವನು ? ಆಧುನಿಕ ಸಮಯದಲ್ಲಿ ಶರಣನು ಅಳಿವವನು, ಉಳಿವವನು ದೇಹಾಗಿ ತೋರುವವನು ಎಂದು ತಿಳಿದವರೆ ಹೆಚ್ಚು, ಅವರ ತಪಸ್ಸು, ತ್ಯಾಗ, ಯೋಗವ ನೋಡಿ ಶರಣರೆಂದು ಹೇಳುವ ಹೇಳಿಸಿಕೊಳ್ಳುವವರು ಇದ್ದಾರೆ. ಇಂಥವರಿಗೆ ಶರಣರೆಂದು ತಿಳಿದು ಕೊಂಡಾಡುವ ಭಕ್ತರು ಇದ್ದಾರೆ. ಕೆಲಬರು ಹಿಂದಿನ ಮುಂದಿನ, ಇಂದಿನ ಭವಿಷ್ಯವ ಹೇಳಿ ಶರಣರೆಂದೆನಿಸಿಕೊಂಡವರು ಇದ್ದಾರೆ. ಕೆಲಬರು ತಂತ್ರ, ಮಂತ್ರ, ಯಂತ್ರಗಳ ಸಿದ್ಧಿ ಮಾಡಿಕೊಂಡು ಜನರಿಗೆ ಮಂತ್ರದಿಂದ ಮಂತ್ರಿಸಿ ಶರಣರೆನಿಸಿಕೊಂಡವರು ಇಹರು. ಲೋಕದವರು ಇಂಥ ಮೌಢ್ಯ ವಿಚಾರಗಳಿಗೆ ಮರುಳಾಗಿ ಆತನೊಬ್ಬ ಮಹಾಮಾನವ, ಅವತಾರಿಗಳೆಂದು ಅವರ ಪಾದುಕೆಗಳ ಪೂಜೆ ಮನೆಯಲ್ಲಿ ಮಾಡಿದರೆ ಅಷ್ಟೈಶ್ವರ್ಯ ಲಭ್ಯವಾಗುವುದೆಂದು ನಂಬಿ ಅವರ ಅನುಯಾಯಿಗಳಾಗಿ ಮನೆಯಲ್ಲಿ ಸಣ್ಣದಾಗಲಿ, ದೊಡ್ಡದಾಗಲಿ ಕಾರ್ಯವಾಗಬೇಕಾದರೆ ಅವರನ್ನು ವಿಚಾರಿಸಿ ಆ ಕಾರ್ಯವ ಕೈಕೊಳ್ಳವರು. ಮಗಳನ್ನು ಮನೆಗೆ ಕರೆದುಕೊಂಡು ಬರುವುದಾಗಲಿ, ಅಂಥ ಸಣ್ಣಕಾರ್ಯಕ್ಕೂ ಅವರನ್ನು ವಿಚಾರಿಸುವರು. ಮಗಳು ಗಂಡನ ಮನೆಗೆ ಹೋಗುವುದಾಗಲಿ, ಲಗ್ನಾದಿಗಳಾಗಲಿ, ಮನೆಯ ಯಜಮಾನರ ವರ್ಷಕ್ಕೊಂದು ಸಲ ಮಾಡುವ ಪುಣ್ಯ ತಿಥಿಯಾಗಲಿ ಅವರ ಮುಂದಿಟ್ಟುಕೊಂಡು ಮಾಡುವರು. ಅವರು

ಇಂಥ ಕಾರ್ಯಗಳಿಗೆ ಶುಭ ಹೇಳುವ ಬೃಹಸ್ಪತಿಯಂತಾಗಿಹರು.

ಇನ್ನು ಕೆಲವರು ಮೌನಮಾಡಿ ಶರಣರೆನಿಸಿಕೊಂಡಿಹರು.ಭಕ್ತರು ತಮ್ಮದಾದ ವಿಷಯ ಮುಂದಿಟ್ಟರೆ ಸಂಜ್ಞೆಯಿಂದ ಬರೆದು ತೋರಿಸುವರು ಇಲ್ಲವೇ ಅಕ್ಷರಗಳ ಮೂಲಕ ಕಾಗದದಲ್ಲಾಗಲಿ ಆವುದರಲ್ಲಾಗಲಿ ಆ ವಿಷಯದ ಉತ್ತರವ ಬರೆದು ತೋರಿಸುವರು. ಕೆಲಬರು ಮೋಡಗಳ ಸಂಜ್ಞೆಯ ನೋಡಿಕೊಂಡು ಮಳೆಯಾಗುವ ವರ್ಷದ ಭವಿಷ್ಯವ ಹೇಳಿ ಅವರು ಕೂಡ ಒಂದು ಅಪ್ರತಿಮ ಶರಣರೆಂದು ಶಿವಯೋಗಿಗಳೆಂದು ಪ್ರಸಿದ್ಧ ಸ್ಥಾನವಾಗಿಹರು. ಹೀಗೆ ನಾನಾ ವಿಧದಿಂದ ಶರಣರನ್ನು ಕಂಡು ನಿಜವಾದ ತತ್ತ್ವವೇತ್ತ ಮಹಾಪುರುಷನ ಘನಾನುಭವ ಕಾಣದಂತಾಗಿ ಮಾಯಿಕಕ್ಕೆ ಮೋಸಹೋಗಿ ಅಮೂಲ್ಯವಾಗಿಹ ಅರುಹೃದಯವನ್ನೆ ಹಾಳುಮಾಡಿಕೊಳ್ಳುತ್ತಿಹರು ಇದರ ಪರಿಹಾರ ಆವಾಗ? ಶರಣರ ಸ್ವಾನುಭವದ ಮಹದರುವಿನಕಡೆ ಲಕ್ಷ್ಯ ಕೊಡುವವರೆಗೂ ಈ ಪಿಡುಗುರೋಗ ಅಂಟುರೋಗ ಹೋಗುವದು ಅಸಾಧ್ಯವು. ಸದ್ಯದ ಸಮಯದಲ್ಲಾಗುವ ಶರಣರ ಕಾರ್ಯ ನೋಡಿದರೆ ಅರುಹೃದಯವನ್ನೇ ನಾಶ ಮಾಡುವ ಕಟುಕರೆಂದರೂ ಅಡ್ಡಿಯಿಲ್ಲ . ಇಂಥ ಹೀನ ಕಾರ್ಯವ ಮಾಡುವ ದುರ್ಬುದ್ಧಿ ಹೋಗಿ ಸುಬುದ್ಧಿಯಿಂದುಕ್ತವಾಗುವ ಜ್ಞಾನಾಶ್ರಮಗಳಾಗಬೇಕು, ಮಂದಿರವಾಗಬೇಕು. ಆಗ ಮಾನವ ಹೃದಯ ಅರುಹೃದಯವಾಗಲು ಅವಕಾಶವು. ಇನ್ನು ಕೆಲಬರು ಹಠಯೋಗ ಸಾಧನೆಯಿಂದ ಕೇವಲ ಕುಂಭಕ ಬಲಿಸಿ ತಮ್ಮ ಶರೀರಾಯುಷ್ಯವ ಹೆಚ್ಚು ಮಾಡಿಕೊಂಡು 200 ವರ್ಷ, 300-400-600-700-1400 ವರ್ಷಗಳಿದ್ದು, ತಮ್ಮ ತಪೋಬಲದಿಂದ ನಾನಾ ಪವಾಡಗಳ ಮಾಡಿ ಪವಾಡ ಪುರುಷರು, ವಿಭೂತಿ ಪುರುಷರೆನಿಸಿಕೊಂಡ ಶರಣರು ಆಗಿಹರು. ಇನ್ನು ಕೆಲವರು ವೈಷ್ಣವ ಭಕ್ತರಾಗಲಿ, ಶೈವ ಭಕ್ತರಾಗಲಿ, ಶಾಕ್ತೇಯ ಭಕ್ತರಾಗಲಿ, ಇವರು ಇಷ್ಟ ದೇವನ ಒಲಿಸಿಕೊಂಡು ಆ ದೇವನಿಂದ ತಮ್ಮ ಇಷ್ಟಾರ್ಥವ ಪಡೆದುಕೊಂಡು ಶರಣರೆನಿಸಿಕೊಂಡಿರುವರು. ಅವರಲ್ಲಿ ವಿಷ್ಣು ಭಕ್ತನಾಗಿರುವ, ಪುರಂದರದಾಸ, ನಾಮದೇವ, ಶೈವಭಕ್ತನಾಗಿಹ ಕಣ್ಣಪ್ಪ, ಈಶ್ವರ ಭಕ್ತನಾಗಿಹ ಮಾರ್ಕಂಡೇಯ, ದೇವಿ ಭಕ್ತನಾಗಿಹ ಚಿದಾನಂದರು ಇವರು ಶರಣನೆನೆಸಿಕೊಂಡಿಹರು. ಇವರು ಲೌಕಿಕ ಭೋಗವ ಮೆಚ್ಚದೆ ದೇವನ ಅಲೌಕಿಕವಾಗಿಹ ಸುಖಕ್ಕೆ ಮೆಚ್ಚಿ ಗಣಪದವಿಯ ಗಣ್ಯರಾಗಿಹರು.

ಪ್ರಭುದೇವ ಶರಣರೆಂದು ತಿಳಿದುದು ಬಹು ಅರ್ಥಗರ್ಭಿತವಾದುದಾಗಿರುವುದು, ಅಳಿವನಲ್ಲ, ಉಳಿವನಲ್ಲ ಘನಕ್ಕೆ ಗಮನನಲ್ಲ, ಮನಕ್ಕೆ ಸಾಧ್ಯನಲ್ಲ, ತನ್ನ ತಪ್ಪಿಸಿ ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ, ಇಲ್ಲಿ ಶರಣರು ಯಾರು ? ಅವರು ತಿಳಿದ ತಿರುಳು ಅಷ್ಟೆ ಘನಕ್ಕೆ ಘನವಾದುದು. ನೀವೇ ನೋಡಿಕೊಳ್ಳಲು ಸಕಲರ ಮುಂದೆ ತನ್ನ ಮಹದರುವುಳ್ಳ ಬಂಗಾರವ ನಿಟ್ಟಿಹನು, ಜ್ಞಾನರತ್ನವನಿಟ್ಟಿಹನು.

ಅಳಿದುದು ಉಳಿದುದು ದೇಹವಲ್ಲವೆ ! ಆರು ದೇಹವೇ ತಾವಾಗಿ, ನಾಲ್ಕು ಆಶ್ರಮಗಳಲ್ಲಿ ಆವುದೆ ಆಶ್ರಮವಂತನಾಗಿರಲಿ ಅದನ್ನು ವಿಧಿವತ್ತಾಗಿ ಆಚರಿಸಲಿ, ಆ ಆಚಾರ ಕ್ರಿಯ ಕಂಡು ವಿಶ್ವವೆ ಮಹಾಪುರುಷರೆಂದು ಕೊಂಡಾಡಲಿ. ದೇಹ, ಇಂದ್ರಿ, ಪ್ರಾಣ, ಮನ ಬುದ್ಧ್ಯಾದಿಗಳಿಂದ ಕಾರ್ಯಗಳಲ್ಲಿ ತಾದಾತ್ಮ್ಯ ಹೊಂದಿ ಇಂದ್ರಿಯಂಗಳ

ನಿಗ್ರಹಕಾರ್ಯವೇ ತಾನಾಗಿಹನು. ಪ್ರಾಣದ ಕಾರ್ಯವಾಗಿಹ ಕುಂಭಕ ಯೋಗವೆ ತಾನಾಗಿಹನು. ತಪಸ್ಸು, ಧ್ಯಾನ, ಮೌನದ ಕಾರ್ಯವಾಗಿಹ ಕರಣಂಗಳೆ ತಾನಾಗಿಹನೆಂದಲ್ಲಿ ಅವನು ಅಳಿವವನಾಗಿಹನು. ಉಳಿದು, ತಪಸ್ಯಾದಿಗಳ ತೋರಿಸಲು ಉಳಿದವನಾಗಿದ್ದಾನೆಂದಲ್ಲಿ ಶರಣನು ಹೇಗಾಗುವನು ?

ಘನಕ್ಕೆ ಗಮನನಲ್ಲ, ಶರಣ ! ಬುದ್ಧಿಗೆಗೋಚರನಾಗುವವನಲ್ಲ, ಶರಣನಾದವನು, ಬುದ್ಧಿಯು ಆಗದವನು, ಬುದ್ಧಿಯ ಮರವು , ಅರವು ಆಗದವನು, ಸ್ವತಃ ಸಿದ್ಧವಾಗಿದ್ದ ಪರವಸ್ತುವಿನ ಇರುವೆ ತನ್ನಿರುವೆಂದರಿದ ಮಹಾಂತಂಗೆ ಏನನ್ನಬೇಕು ? ದೇಹವೆನ್ನಲು ಬರದು, ದೇಹಿಯೆನ್ನಲು ಬರದು, ಅಂಗನೆನ್ನಲು ಬರದು, ಲಿಂಗನೆನ್ನಲು ಬರದು, ಕ್ಷರನೆನ್ನಲು ಬರದು, ಅಕ್ಷರನೆನ್ನಲು ಬರದು, ನಾಶವುಳ್ಳವನೆನ್ನಲು ಬರದು, ಅವಿನಾಶಿ ಎನ್ನಲು ಬರದು, ಪ್ರಕಾಶಿತ, ಪ್ರಕಾಶಕನೆನ್ನಲು ಬರದು, ಜಡ, ಅಜಡನೆನ್ನಲು ಬರದು, ಜಡಾ ಜಡರಹಿತಾತ್ಮನೆನ್ನಲು ಬರದು, ಬದ್ಧನೆನ್ನಲು ಬರದು, ಮುಕ್ತನೆನ್ನಲು ಬರದು, ಶೃತಿಗಗೋಚರನಾಗಿಹ ಶರಣ ನಿಶಬ್ದವೇದಿಯಾಗಿಹ ಶರಣ ಘನವು ಬುದ್ಧಿಗೆ ನಿಲುಕದ್ದರಿಂದ ಘನಕ್ಕೆ ಗಮನನಲ್ಲವೆಂದು ಹೇಳಿಹರು. ಪರಿಪೂರ್ಣನಲ್ಲ, ಪ್ರದೇಶಿಕನಲ್ಲ, ನಿರತಿಶಯ ದೊಳತಿಶಯ ತಾ ಮುನ್ನಲ್ಲ, ಶರಣನಲ್ಲ, ಐಕ್ಯನಲ್ಲ, ಪರಮನಲ್ಲ, ಜೀವನಲ್ಲ, ಸಾವಯವನಲ್ಲ, ನಿರವಯನಲ್ಲ, ಪರವಿಹವೆಂಬುಭಯದೊಳಲ್ಲದವನು ನಿರಾಲಂಬ, ನಿಜಗುರುಶಾಂತೇಶ್ವರನ ನಿಲುವು, ಉಪಮೆಗೆ ತಾನನುಪಮನು ಆದುದರಿಂದ ಘನಕ್ಕೆ ಗಮನನಲ್ಲವೆಂದು ಹೇಳಿಹರು.

ಮನಕ್ಕೆ ಸಾಧ್ಯನಲ್ಲ, ಕಲ್ಪಿತಕ್ಕೆ ಒಳಪಟ್ಟವನಾಗಿದ್ದಲ್ಲಿ ಮನಕ್ಕೆ ಸಾಧ್ಯನೆಂದು ಹೇಳಿಸಿಕೊಳ್ಳುತ್ತಿದ್ದನು. ಶರಣಂಗೆ ಪ್ರವೃತ್ತಿ ಮನ, ನಿವೃತ್ತಿ ಮನ, ಉಪಾಧಿಮನ, ಉಪಾಧಿ ರಹಿತಮನ ನಷ್ಟವಾಗಿಹವು. ಪ್ರವೃತ್ತಿ ಮನವಿದ್ದಲ್ಲಿ ಪ್ರಾದೇಶಿಕನೆಂದು ಹೇಳಿಕೊಳ್ಳುತ್ತಿದ್ದನು. ನಿವೃತ್ತಿ ಮನವಿದ್ದಲ್ಲಿ ಪರಿಪೂರ್ಣನೆನಿಸಿ ಕೊಳ್ಳುತ್ತಿದ್ದನು. ಉಪಾಧಿಮನ ಉಪಾಧಿರಹಿತ ಮನವೆಂಬ ಕಲ್ಪಿತವೆ ನಾಚಿ ಶಬ್ದಮುಗ್ಧವಾಗಿರುವಲ್ಲಿ ನಿರತಿಶಯದಲ್ಲಿ ಅತಿಶಯವಾವುದು ? ಶಬ್ದಮುಗ್ಧವಾಗಿಹ ಘನದಿರುವಿಂಗೆ ಸ್ಥಲವಾವುದು ? ನಿಸ್ಥಲವಾವುದು ? ಶರಣನೆಂಬುದಿಲ್ಲ, ಐಕ್ಯನೆಂಬುದಿಲ್ಲ, ಷಟ್‌ಸ್ಥಲವಿಲ್ಲ, ಅಷ್ಟಾವರ್ಣಂಗಳಿಲ್ಲ, ಅಹುದಾದುದಿಲ್ಲ, ಅಲ್ಲಾದುದಿಲ್ಲ, ನಾನೆಂಬುದಿಲ್ಲ, ನೀನೆಂಬುದಿಲ್ಲ, ತೆರಹಿಲ್ಲದ ಘನದಿರುವೆ ತನ್ನಯ ಇರುವಾಗಿಹ ಮಹಾಮಹಿಮನು ಮನಕ್ಕೆ ಸಾಧ್ಯವಾದುದು ಹೇಗೆ ? ಆ ಮಹಿಮನು ಪೂಜ್ಯರ ಪೂಜ್ಯ ಪುಣ್ಯರುಗಳ ಪುಣ್ಯ ಸಾವಯವನಾದುದಿಲ್ಲ, ನಿರವಯನಾದುದಿಲ್ಲ, ಇಹಪರದೊಳಿಲ್ಲದ ನಿರಾಲಂಬ ಸ್ವಮಹಿಮ ಗಗನ ಸದೃಶವಾಗಿರುವ ಜ್ಞಾನಾಮೃತನು ಗಗನವು ಹೇಗೆ ಆವುದಕ್ಕೂ ಅಂಟದೆ ನಿಸ್ಸಂಗವಾಗಿದೆಯೋ ಹಾಗೆ ತನ್ನ ತಾನರಿತ ಶರಣ, ಗಗನವು ಎಂದಾದರೂ ಗಗನವೆಂದಿದೆಯೆ ? ಹಾಗೆ ಗಗನ ಸದೃಶವಾಗಿಹ ಜ್ಞಾನಾಮೃತನು ತಾನು ಜ್ಞಾನಾಮೃತನೆನ್ನದ ಜ್ಞಾನಾಮೃತನು. ಮುನ್ನ ಮುನ್ನಲಾದ ಸ್ವಮಹಿಮನು ತನ್ನಿಂದ ತಾನಾದ ಘನಕ್ಕೆ ಘನನು ಜ್ಞಾನಾಮೃತದಲ್ಲಿ ಲೀಯವಾಗಿಹ ಜ್ಞಾನಾನಂದಮಯನು ಸುಖಮಯನು ಆದುದರಿಂದ ಮನಕ್ಕೆ ಸಾಧ್ಯನಲ್ಲವೆಂದು ಹೇಳಿಹರು.

ತನ್ನ ತಪ್ಪಿಸಿ ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ, ನಾನೀನೆಂಬುದಕ್ಕೂ ತೆರಹಿಲ್ಲದ ಘನನು, ಶರಣಂಗೆ ತನ್ನ ತಪ್ಪಿಸುವುದಿಲ್ಲ. ಇದಿರನೊಪ್ಪಿಸುವುದೂ ಇಲ್ಲ, ನಾನೆಂಬುದಿಲ್ಲ, ನೀನೆಂಬುದಿಲ್ಲ ತತ್ ತ್ವಂ ಅಸಿ ಎಂದುದಿಲ್ಲ, ಅಹಂಬ್ರಹ್ಮಾಸ್ಮಿ ಎಂದುದಿಲ್ಲ. ಭಾಷೆ ಪ್ರಸಾದಕ್ಕೆ ಒಪ್ಪದ ಮಹಾಪ್ರಸಾದಿಯಾದುದರಿಂದ ತನ್ನ ತಪ್ಪಿಸಿ, ಇದಿರನೊಪ್ಪಿಸಿಹೆನೆಂಬ ಭಿನ್ನಭಾವಿಯಲ್ಲ ಎಂದು ಹೇಳಿಹರು.

ಗುಹೇಶ್ವರ ಶರಣ ಅಜಗಣ್ಣನ ಅಂತಿಂತೆನಬಾರದು ಕೇಳಾ ತಾಯೆ : ಎಂದು ಹೇಳಿಹರು. ಗುಹೇಶ್ವರನರಿಯಹೋಗಿ ಅದುವೆ ತಾನಾಗಿಹ ಘನಕ್ಕೆ ಘನ, ನಿಃಶಬ್ದಬ್ರಹ್ಮವು ಹೊಗಳಿಕೆಗೆ ಸಿಲುಕುವುದೆ ? ಸಿಲುಕದ್ದರಿಂದ ತಾನೆ ತಾನಾಗಿಹ ಸ್ವಮಹಿಮಕ್ಕೆ ಅಂತಿಂತೆನಬಾರದು ಎಂದು ಹೇಳಿಹರು.

**195**

**ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ.**
**ತಾನೆಂಬುದ ಅಳಿದು ಇದಿರೆಂಬುದು ಮರೆದು,**
**ಭಾವದಗ್ಧವಾಗಿರಬಲ್ಲಡೆ ಆದು ಸ್ವತಂತ್ರ.**
**ನೀನೆಂಬುದು ಧಿಕ್ಕರಿಸಿ ತಾನೆಂಬುದ ನೀಕರಿಸಿ**
**ಉಭಯ ಭಾವದಲ್ಲಿ ಸನ್ನಿಹಿತವಾಗಿರಬಲ್ಲಡೆ ಪರತಂತ್ರ.**
**ಸ್ವತಂತ್ರ ಪರತಂತ್ರವೆಂಬೆರಡನೂ ವಿವರಿಸದೆ,**
**ತನ್ನ ಮರೆದಿಪ್ಪಾತನ ಉಪಮಾತೀತನು.**
**ಗುಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂಬುದು**
**ಇಂದೆನಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯಾ.** ॥ 1605 ॥

**ತಾತ್ಪರ್ಯ** : ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ : ಪ್ರಭುವಿನ ಸಂದೇಶ, ಘನ ಸಂದೇಶವೆನಬೇಕೆ ? ಅಲ್ಲಲ್ಲ ಘನಕ್ಕೆ ಘನವಾಗಿಹ ಸಂದೇಶ, ಉಪಮೆಗಳ ನತಿಗಳೆದ ಸಂದೇಶ. ತನ್ನ ಮರವ ಮರೆದಿಪ್ಪ ಸಂದೇಶ. ಅರುವೆಂಬುದು ಮರೆದಿಪ್ಪ ಸಂದೇಶ, ಅಹಮಿಲ್ಲದ ಸಂದೇಶ, ಅರಿತೆ ಅರಿಯೆನೆಂಬುದಕ್ಕೂ ನಿಲುಕದ ಸಂದೇಶ. ಸ್ವತಂತ್ರಗಳಿಸಿಕೊಂಡವರು ಇರಬಹುದು, ಪರತಂತ್ರದೊಳಗಿದ್ದವರು ಇರಬಹುದು. ಪ್ರಭುವಿನ ಮಹಾನುಭವ ಈರ್ವರಿಗೂ ಯತಾರ್ಥವರಿಯ ಹೇಳಿದ ನಿಜಾನುಭವ, ಮಹಾಂತರ ದಿವ್ಯದೃಷ್ಟಿಯಲ್ಲಿ ಸ್ವತಂತ್ರ ಘನವಾಗಿರುವುದಿಲ್ಲ, ಪರತಂತ್ರ ಕೀಳಾಗಿರುವುದಿಲ್ಲ ಇವೆರಡಕ್ಕೂ ಮಿಗೆಯಾಗಿಹ ಮೀಸಲ ತತ್ವದಿರುವು ತೋರಿಸಿದ ಉಪಮಾತೀತ ಶರಣರು.

ಸ್ವತಂತ್ರಗಳಿಸಿಕೊಟ್ಟ ಮಹಾಂತರು ಇಹರು. ಪರತಂತ್ರದೊಳಗಿದ್ದ ಪ್ರಜೆಗಳು ಇಹರು. ಈರ್ವರ ನಿಲುವಿಂಗೂ ನಿಲುಕದ ನಿಲುವು ಪ್ರಭುವಿನದು ಆಗಿರುವುದು. ಸ್ವತಂತ್ರವೆಂದರೆ ಪರದೇಶದವರ ಕೈಯೊಳಗಿರುವ ಭಾರತ ದೇಶವನ್ನು ಭಾರತದವರು ತಮ್ಮ ಸ್ವದೇಶವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಪರದೇಶದವರನ್ನು ತಮ್ಮ ದೇಶಕ್ಕೆ ಕಳಿಸಿದುದು ಸ್ವಾತಂತ್ರವು ಇದು ಘನ ಕಾರ್ಯ.

ಇವರು ಬಹಿರ್‌ದೇಶದಲ್ಲಿ ವಾಸವಾಗಿಹ ಪರಕೀಯರನ್ನು ನಮ್ಮ ದೇಶವ ಬಿಡಿಸಿ, ತಮ್ಮ ದೇಶಕ್ಕೆ ಕಳುಹಿಸಿದೆವು ಎನ್ನುವುದು ಮಹಾಂತರ ದೃಷ್ಟಿಯಲ್ಲಿ ಇದು ಗೌಣವಾಗಿ ಕಂಡಿಹರು. ಏಕೆಂದರೆ ಮಹಾಂತರ ಸ್ವದೇಶವೆ ಬೇರೆಯಾಗಿದೆ. ಸ್ವಭೂಮಿಯು ಬೇರೆಯಾಗಿಹುದು. ಅವರ ನಿಜದಿರುವಿಂಗೂ ಸ್ವಾತಂತ್ರ್ಯಗಳಿಸಿಕೊಟ್ಟ ಮಹಾಂತರ ಇರುವಿಂಗೂ ಬಹು ವ್ಯತ್ಯಾಸವು ಇದೆ.

ಸ್ವತಂತ್ರದ ಚಿನ್ಹ ಪರತಂತ್ರದ ಚಿನ್ಹ ವೇನು ? ಭಾರತವು ಪರಕೀಯರ ಒಡೆತನದೊಳಿದ್ದುದು ಆ ಅಧಿಕಾರದ ಗುಲಾಮಗಿರಿಯಲ್ಲಿ ಇಡೀ ಭಾರತವು ಭಾರತದ ಜನಾಂಗವು ಇದ್ದುದು ಪರತಂತ್ರವು ಎಂದು ಪರಿಗಣಿಸಿದೆ.

ಪರತಂತ್ರದ ಚಿನ್ಹ ತೋರಿಸಿದ್ದಾಯಿತು, ಇನ್ನು ಸ್ವತಂತ್ರ ಚಿನ್ಹವೆಂದರೆ ಪರಕೀಯರ ಅಧಿಕಾರ ಸೂತ್ರವ ಕಿತ್ತೊಗೆದು ಅವರ ದೇಶಕ್ಕೆ ಅವರ ತಳ್ಳಿ ಭಾರತ, ಭಾರತದಲ್ಲಿಹ ಜನಾಂಗವು ತಮ್ಮ ಒಡೆತನದಲ್ಲಿದ್ದುದು ಸ್ವಾತಂತ್ರ್ಯ ಅಂದರೆ ಸಕಲರಿಗೂ ಸಮಸೂತ್ರವಾಗಿಹ ಅಧಿಕಾರವೆ ಪ್ರಜೆಗಳ ಅಧಿಕಾರವಾದುದು ಸ್ವತಂತ್ರವೆಂದು ಪರಿಗಣಿಸಿಹರು.

ಪ್ರಭುಹೃದಯ ಹೃದಯದ ಹೃದಯವು ಮಹಾಲಿಂಗವಾಗಿಹ ಹೃದಯ. ಮರವಿನ ಹೃದಯವು ಸೀಮಿತವು ಮರವು ಸೇರದೆ ಅರುವಿಂಗೊಪ್ಪಿದುದು ಸೀಮಿತ. ಅದಕ್ಕಾಗಿ ನಿಸ್ಸೀಮವಾವುದು ಅದು ನಿಜವು. ಇಲ್ಲಿ ಪರತಂತ್ರವು ನಿಜವಾದುದಲ್ಲ, ಸ್ವತಂತ್ರವು ನಿಜವಾದುದಲ್ಲ, ಇವೆರಡಕ್ಕೂ ಸಮವಾದುದು ಆವುದು. ಅದು ನಿಜವಾದುದು ಸ್ವಭೂಮಿಯಾಗಿದೆ. ಭೂಮಾ ಆಗಿದೆ. ಇದುವೆ ಸ್ವಸ್ವರೂಪವಲ್ಲದೆ ಅನ್ಯವಾಗದು, ಇದು ಕಾರಣ ತನ್ನ ನೋಡಿಕೊಳ್ಳುವುದು, ಅದು ಕೂಡದಗಲದ ಘನವ ತಿಳಿವುದು. ಅದು ತನಗಿಂತನ್ಯಪದವಲ್ಲ, ತನ್ನ ಪದ, ಕೂಡುವ ಅಗಲುವ ಧಾವತಿಯಿಂದ ಲಭ್ಯವಾಗಿಹ ಪದ ಅದು ಸ್ವಭೂಮಿ ಆಗದು, ಸ್ವತಂತ್ರ ಪದವಾಗದು. ಸ್ವಯಮೇವಪದವಾಗದು.

ಶರಣರಲ್ಲಿ ಉಪಾಸಿಕರು ಉಂಟು ಕೆಲಬರು ದೇವನ ನಾಮಕ್ಕೆ ಆತನ ಮಾಯಿಕಕ್ಕೆ ನಂಬಿ, ಮಾಯಿಕ ರೂಪವನಂಬಿ ಆ ದೇವನ ಒಲಿಸಿಕೊಂಡು ಸಾಮಿಪ್ಯ, ಸಾಯುಜ್ಯ ಸಾರೂಪ್ಯ ಪಡೆದುದು ಎಂದು ಪುರಾಣದಿಂದ ತಿಳಿದುಬರುತ್ತದೆ. ಆ ಪದವಿಗಳಿಂದ ಪೂರ್ವದಲ್ಲಿ ಭಕ್ತನಾದವನು ಅಗಲಿದ್ದನು. ಈಗ ಇವುಗಳ ಪಡೆದು ಪದವಿಯಿಂದುಕ್ತನಾಗಿಹನು. ಇವು ಅಗಲಿದ ಕೂಡಿದ ಪದಗಳೆಂದು ಅನಿಸಿಕೊಳ್ಳುವವು. ಆವ ಪದವು ಪೂರ್ವದಲ್ಲಿ ಇದ್ದಿಲ್ಲ ನಡುವೆ ಕೂಡಿದ ಪದವಾದರೆ ಒಂದಿಲ್ಲೊಂದು ಕಾಲದಲ್ಲಿ ಆ ಪದವ ಬಿಡಬೇಕಾಗುತ್ತದೆ. ಅನ್ಯರ ಸ್ವತ್ತು, ತನ್ನ ಸ್ವತ್ತು ಆಗದು, ಮಾಯಿಕದೇವನಿಂದ ಬಂದ ಚತುರ್ವಿಧ ಫಲಪದಂಗಳು ತನ್ನ ಸ್ವಂತ ಸ್ವತ್ತು ಹೇಗಾಗುವುದು.

ತಾನಾರೆಂದರಿತು ತನ್ನಿಂದ ತನ್ನ ಕಂಡುದು ಅದು ತನ್ನ ಸ್ವತ್ತು. ಅದು ನಿಜ ವಸ್ತು, ನಿಜ ಸ್ವತ್ತು ಆ ಸ್ವಸ್ವತ್ತು ಲಭ್ಯವಾದಡೆ ತನ್ನ ಸ್ವಭೂಮಿ ತನಗೆ ಲಭ್ಯವಾದಂತೆ ಈ ಸ್ವಭೂಮಿ ಒಮ್ಮೆ ನಮಗೆ ಲಭ್ಯವಾದಡೆ ಪುನಃ ಇದನ್ನಾರು ಕಸಿದುಕೊಳ್ಳರು. ಇದರ ಮೇಲೆ ಆರಾರ ಅಧಿಕಾರವು ನಡೆಯದು. ಅದು ಮರವರುವಿಂಗೆ ಮೀರಿದ ಮಹದರುವಿನ ಮಹಾನುಭವದಿಂದ ಲಭ್ಯವಾದ ತನ್ನ ಸ್ವಸ್ವರೂಪವು. ಅದು ನಿಜವಾದುದೆಂದು

ಸಂಪಾದಿಸಿಕೊಳ್ಳುವ ಮಾನವನ ನಿಜವಾದ ಗುರಿಯಾಗಿದೆಂದು ತಮ್ಮ ಸ್ವಾನುಭವ ಸುಧೆಯನ್ನೆ ನಮ್ಮಗಳ ಮುಂದಿಟ್ಟು ತೃಪ್ತರೂಪ ತೃಪ್ತರಾಗಲು ಹೆದ್ದಾರಿ ಹಾಕಿದಂತೆ ಹೃದಯದಿಂದ ಹೊರಹೊಮ್ಮಿದ ಮಹಾನುಭವವಾಗಿವೆ.

ಮಹಾಂತರ ದೃಷ್ಟಿಯಲ್ಲಿ ಸ್ವತಂತ್ರವದು ತಾನೆಂಬುದಳಿದು ಇದಿರೆಂಬುದು ಮರೆದು ಭಾವದಗ್ಧವಾಗಿರಬಲ್ಲಡೆ ಅದು ಸ್ವತಂತ್ರ. ತಾನೆಂಬುದಳಿಯಬೇಕಾದರೆ ಇದು ತಾನಾರೆಂಬ ತನ್ನಿರುವಿನ ಅರುವಾದಾಗ ತಾನೆಂಬುದು ಅಳಿಯುವುದು. ಇದಿರೆಂಬುದು ಮರೆಯುವುದು ಭಾವದಗ್ಧವಾಗುವುದು. ತಾನಾರೆಂಬ ತನ್ನ ನಿಜದಿರುವು ಲಭ್ಯವಾಗಬೇಕಾದರೆ ತಾನು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನದಿರುವಿನ ಅರುವುಳ್ಳವನಾಗುವುದು. ಇದರಿಂದ ತಾನೆಂಬುದಳಿಯುವ ಉಪಾಯವು ದೊರೆಯುತ್ತದೆ. ಇದಿರೆಂಬುದು ಮರೆಯುವ ಉಪಾಯವು ಗೊತ್ತಾಗುತ್ತದೆ. ತಾನು ಇದಿರೆಂಬುದು ತನಗಿಂತನ್ಯವಾದವುಗಳು ಈ ದೃಷ್ಟಿ, ಭಿನ್ನ ದೃಷ್ಟಿ, ಮರವಿನ ದೃಷ್ಟಿ, ಇದು ನಸುಗತ್ತಲೆ ಇದ್ದಂತೆ, ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವು ಕಂಡಂತೆ ಬೆಳಕಿನಲ್ಲಿ ನೋಡುವುಡೆ ಹಾವು ಇಲ್ಲ, ಇಲ್ಲದುದು ಇಲ್ಲವೆ ಇಲ್ಲ, ಇದ್ದ ಹಗ್ಗ ಇದ್ದಂತೆ ಇದೆ. ಹಾಗೆ ತನ್ನಯ ನಿಜದಿರುವು ಸುಜ್ಞಾನದಿಂದ ನೋಡುವುಡೆ ತಾನು ಅರಿದರುಹಿಸಿಕೊಂಬುದಕ್ಕೂ ಮೀರಿದ ಘನದಿರುವಿನರುವುಳ್ಳವನಾಗಿ ನೋಡುವುಡೆ ತಾನೆಂಬ ಅಹಂಕಾರವೂ ಇಲ್ಲ, ಇದಿರೆಂಬ ಭಿನ್ನದೃಶ್ಯವೂ ಇಲ್ಲ, ಇಲ್ಲದುದು ಇಲ್ಲವೆ ಇಲ್ಲ, ಇದ್ದ ತಾನು ಇದ್ದಂತಿಹನು. ಈ ಯತಾರ್ಥ ಜ್ಞಾನ ಯಜ್ಞ ಯಾಗಾದಿಗಳ ಮಾಡಿದರೂ ಅಸಾಧ್ಯ. ಜಪತಪಾದಿಗಳಿಗೂ ಅಸಾಧ್ಯವು, ಧಾರಣಧ್ಯಾನಾದಿಗಳಿಗೂ ಅಸಾಧ್ಯವು. ಅಲ್ಲಿ ತನ್ನಿಂದ ತನ್ನ ಇದ್ದಂತೆ ತಿಳಿಯುವುದು ಬಹು ಮಹತ್ತರವಾದುದು.

ಸ್ವತಂತ್ರ, ಪರತಂತ್ರವೆಂಬುದನು ವಿವರಿಸದೆ ತನ್ನ ಮರೆದಿಪ್ಪಾತನೆ ಉಪಮಾತೀತನು, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನನೆತಾನಿದ್ದು ತನ್ನನ್ನು ತನ್ನಿಂದರಿತುದು ಸ್ವತಂತ್ರ. ಇಂತಪ್ಪ ಅಖಂಡಿತ ಘನ ಪರಿಪೂರ್ಣವಪ್ಪ ತನ್ನಿರುವೆ ಅರುವೆಂದರಿತಾಗ ಪರ ತಂತ್ರವಾಗಿಹ ದಾಸೋಹಂಭಾವ ಚಿದಹಂಭಾವ ಮರೆಯುವನು. ಆಗ ತನ್ನಿರುವಿನ ಅರುವು ಹಾಗೆ ಹೀಗೆ ಎಂದು ಉಪಮಿಸಲು ಬಾರದ್ದರಿಂದ ಉಪಮಾತೀತನೆಂದಿಹರು.

ಗುಹೇಶ್ವರನ ಶರಣ ದೇಹವಿಲ್ಲದ ನಿರ್ದೇಹಿಗಳೆಂಬುದು ಇಂದೆನಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯ : ಗುಹೇಶ್ವರನ ಶರಣನೆಂಬುದು ತನ್ನ ದೇಹವೆಂಬ ಗುಹೆಯೊಳಗೆ ಆವುದು ಚಿದ್ಘನವಾಗಿಹುದು ಅದು ಈಶ್ವರ, ಇಂತಪ್ಪ ಚಿದ್ಘನವ ಅರಿತವರು ಅವರು ಗುಹೇಶ್ವನ ಶರಣರು. ಅವರು ದೇಹವಿಲ್ಲದ ನಿರ್ದೇಹಿಗಳೆಂಬುದು ತನ್ನ ನಿಲುವು. ಸ್ವಭೂಮಿ ಸ್ವಸ್ವರೂಪವು. ಆವಲ್ಲಿ ತಾನೆಂಬ ತೋರಿಕೆ ಹುಟ್ಟದಿಹುದು ಅದೀಗ ಬ್ರಹ್ಮವೆಂದಂತೆ. ದೇಹವದು ನಾನೆಂಬ ಅಹಂಕಾರದ ತೋರಿಕೆ ಎಲ್ಲಿಯವರೆಗೆ ಅಹಂತ್ವವುಳ್ಳವನಾಗಿಹನು ಅಲ್ಲಿಯವರೆಗೆ ದೇಹವುಳ್ಳವನೆಂದು ತಿಳಿವುದು. ಈ ಅಹಂತ್ವವು ನಾಹಂ ಎನ್ನುವದಿರಲಿ, ಕೋಹಂಎನ್ನುವುದಿರಲಿ, ಸೋಹಂ ಎನ್ನುವುದಿರಲಿ, ದಾಸೋಹಂ ಎನ್ನುವದಿರಲಿ, ಅವರು ದೇಹವುಳ್ಳವರೆ ಆಗಿಹರಲ್ಲದೆ ದೇಹವಿಲ್ಲದ ನಿರ್ದೇಹಿಗಳಾಗಲಿಲ್ಲ, ಆವಲ್ಲಿ ಅಹಂತ್ವನಷ್ಟವಾಗಿಹುದು ಅಲ್ಲಿ ತನ್ನಿರುವಿನ ಅರುವೆ ಪ್ರಜ್ವಲಿಸುವುದರಿಂದ ದೇಹವಿಲ್ಲದ ನಿರ್ದೇಹಿಗಳು ಎಂಬುದು ಕಾಣಬಂದಿತ್ತು ಎಂದು ಹೇಳಿಹರು.

**196**

**ಎರಡು ಕಣ್ಣುಳ್ಳಡೆ ಚತುರ್ಭುಜನೆಂಬೆನು.**
**ಮೂರು ಕಣ್ಣುಳ್ಳಡೆ ಮಹೇಶ್ವರನೆಂಬೆನು**
**ಮೈಯೆಲ್ಲಾ ಕಣ್ಣಾದಡೆ ಸದಾಶಿವನೆಂಬೆನು**
**ಗುಹೇಶ್ವರಾ ನಿಮ್ಮ ಶರಣಂಗೆ ಅಂಗಾಲ ಕಣ್ಣು ಮೂಡಿದಡೆ**
**ನಿರುಪಮ ಮಹಿಮ ಅಲ್ಲಯ್ಯನೆಂಬೆನು.** ॥ 987 ॥

**ತಾತ್ಪರ್ಯ** : ಎರಡು ಕಣ್ಣುಳ್ಳಡೆ ಚತುರ್ಭುಜನಾದ, ಮೂರು ಕಣ್ಣುಳ್ಳಾತ ಮಹೇಶ್ವರನಾದ ಮೈಯೆಲ್ಲಾ ಕಣ್ಣುಳ್ಳಾತ ಸದಾಶಿವನಾದ ಎರಡು ಕಣ್ಣುಳ್ಳವರು ಮೂರು ಕಣ್ಣುಳ್ಳವರು ಮೈಯೆಲ್ಲಾ ಕಣ್ಣುಳ್ಳವರು ಅವರವರ ಕಣ್ಣುಗಳ ಮೇಲಿಂದ ಅವರ ನಾಮಂಗಳು ಸಿದ್ಧವಾಗುವವು.

ಹರಿಹೊಲಬನರಿಯ, ಬ್ರಹ್ಮಮುಂದನರಿಯ, ರುದ್ರ ಲೆಕ್ಕವಮರೆದು, ಜಪವನೆಣಿ ಸುತ್ತೈದಾನೆ, ಈಶ್ವರ ಪವನಯೋಗದಲ್ಲಿ ಮಗ್ನನಾದ, ಸದಾಶಿವ ಭಾವದಲ್ಲಿ ಭ್ರಮಿತನಾದ ಒಂದಂಡಜದೊಳಗೆ ಬಾಲಕರೈವರು ನಿಮ್ಮನೆತ್ತಬಲ್ಲರು ಗುಹೇಶ್ವರಾ.

ಈ ಒಂದಂಡಜದೊಳಗೆ ಬಾಲಕರೈವರು ಆದವರಿಗೆ ಎರಡು ಕಣ್ಣುಳ್ಳವರೆನಬೇಕೆ ? ಮೂರು ಕಣ್ಣುಳ್ಳವರೆನಬೇಕೆ ? ಮೈಯೆಲ್ಲ ಕಣ್ಣುಳ್ಳವರೆನಬೇಕೆ ? ಇವರುಗಳನ್ನು ಚತುರ್ಭುಜ ಬ್ರಹ್ಮ, ವಿಷ್ಣು ಮೂರು ಕಣ್ಣುಳ್ಳಾತ ರುದ್ರ, ಮೈಯೆಲ್ಲಾ ಕಣ್ಣಾದಾತ ಸದಾಶಿವ, ಇಂಥವರಿದ್ದರೂ ಗುಹೇಶ್ವರನನ್ನು ತಿಳಿಯದವರು. ಹೇಗೆಂದರೆ ಹರಿಯು ಹೊಲಬನರಿಯ ರುದ್ರನಿಗೆ ಲೆಕ್ಕವ ತಪ್ಪಿಹೋಗಿದೆ. ಈಶ್ವರ ಹಠಯೋಗದಲ್ಲಿ ಮಗ್ನನಾದ ಸದಾಶಿವನೆಂದರೆ ಭಾವದಲ್ಲಿ ಭ್ರಮಿತನಾದ-ಇವರಾರು ಭಾವಕ್ಕಗಮ್ಯವಾಗಿಹ ಮೀಸಲ ತತ್ವಬಲ್ಲವರಿಲ್ಲವೆಂದಲ್ಲಿ ಇವರೆಷ್ಟು ಕಣ್ಣುಳ್ಳವರಾದರೂ ನಿಷ್ಪ್ರಯೋಜಕವಾಯಿತು. ಇವರು ತಾವಾರೆಂದರಿಯದ್ದರಿಂದ ಒಂದಂಡಜದೊಳಗೆ ಬಾಲಕರೈವರು ಎಂದು ಪ್ರಭುದೇವ ಇವರನಿಲುವು ಬಿತ್ತರಿಸಿಹನು.

ಎರಡು ಕಣ್ಣುಳ್ಳಡೆ ಚತುರ್ಭುಜನೆಂಬೆ : ಮರವರುವೆಂಬ ಕಣ್ಣುಳ್ಳವರು ಆರು ಅವರು ಚತುರ್ಭುಜರು. ಇತ್ತ ಮರವಿನ ಕಣ್ಣು ಕಾಣುತ್ತಿಹನು. ಇತ್ತ ಅರುವಿನ ಕಣ್ಣುಳ್ಳವನಾದ್ದರಿಂದ ವಿವೇಕವೆಂಬುದೊಂದು ಭುಜ. ವೈರಾಗ್ಯವೆಂಬುದೊಂದು ಭುಜ, ಶಮಾದಿ ಷಟ್ ಸಂಪತ್ತುಯೆಂಬುದೊಂದು ಭುಜ ಮುಮುಕ್ಷುವೆಂಬುದೊಂದು ಭುಜ.

ಇನ್ನೊಂದು ವಿಧದಿಂದ ನೋಡುವುಡೆ ಶುಭಾಶುಭ ವಾಸನೆಗಳೆಂಬಿವು ಎರಡು ಕಣ್ಣುಗಳು. ಒಂದು ಅವಿವೇಕ ಕಣ್ಣು, ಇನ್ನೊಂದು ವಿವೇಕ ಕಣ್ಣು. ಅವಿವೇಕಿಗೆ ದುರ್ಗುಣ, ದುರಹಂಕಾರ, ದುರಾಚಾರ, ಕಪಟ, ವಂಚನೆ, ಅಹಂ ಮಮಕಾರದಿಂದ ವಿಷಯ ಭೋಗೋಪಭೋಗಿಯಾಗಿಹುದೆ ಅವಿವೇಕ ಕಣ್ಣು. ವಿವೇಕಿಯಾದಡೆ ಸದ್ಗುರು, ಸತ್‌ಶಾಸ್ತ್ರನುಸಾರ ಸಾಧಕನಾಗಿ ವಿಷಯಾದಿಗಳೊಳ್ ಜಿಗುಪ್ಸೆ ಮೂಡಿ ಸ್ವರೂಪನುಸಂದಾನ ಮಾಡುವುದೆ ಶ್ರೇಷ್ಠ. ಪುಣ್ಯವೆನ್ನುವ ಸಕೃತವಂತರು ಇವರಿಗೆ ನಾಲ್ಕು ಭುಜಗಳಿರುವವು

ಅವುಗಳಾವವು.

ಶ್ಲೋಕ: ಸಂತೋಷಃ ಪರಮೋಲಾಭಃ ಸತ್ಸಂಗಮ್ ಪರಮಮ್‌ಧನಮ್ ವಿಚಾರಃ ಪರಮಂ ಜ್ಞಾನಮ್ ಶಮಂಚ ಪರಮಸುಖಮ್ ಎಂಬ ನಾಲ್ಕು ಭುಜಗಳಿಂದುಕ್ತನಾಗಿ ಪರಿಶೋಭಿಸುವನು. ಇವನ ಸರ್ವಾಚಾರ ಸಂಪತ್ತು ಕಂಡು ಬ್ರಹ್ಮಾದಿಗಳು ಸ್ತುತಿಸುವಲ್ಲಿ ಲೋಕದವರು ಸ್ತುತಿಸುವುದು ಸಹಜವು.

ಶಮೆಯೆಂಬುದು ಮನಸ್ಸಿನ ಸಂಯಮವು. ಇದು ಲಭ್ಯವಾಗುವುದರಿಂದ ಕ್ರೂರ ಪ್ರಾಣಿ ವಿಷಜಂತುಗಳ ಭಯವು ತೋರದು ಸದಾನಿರ್ಭಯನು, ಶಾಂತ ರೂಪನು, ಶಮವಂತನಿಗೆ ಘೋರಸಂಕಟವಾಗಲಿ, ಕಾಲಾಗ್ನಿಯ ಜ್ವಾಲೆಯಾಗಲಿ, ಕಾಲನೆ ತನ್ನೆದುರಿನಲ್ಲಿ ತೋರಿದರು ಆತನ ಸ್ಥಿರತ್ವ ಕೆಡದು, ಇದು ಸದ್ಗುಣದ ಆಗರವು. ಶಮೆಯುಳ್ಳವನು ಶಾಂತಿಯ ಶ್ರೀಮಂತ. ತ್ರಿವಿಧ ತಾಪದಿಂ ಬಳಲುವವರಿಗೆ ಈ ಶಮೆಯೆಂಬ ಪರಮೌಷಧವ ಸೇವಿಸುವುಡೆ ಪ್ರಶಾಂತಮಯನು, ಕೋಪತಾಪದಿಂ ವಿಮುಕ್ತನು.

ವಿಚಾರವೆಂಬ ಭುಜವುಳ್ಳವನು ಪರಬ್ರಹ್ಮನು. ಶುದ್ಧ ಬ್ರಹ್ಮನ ಮಹಿಮೆಯ ಪ್ರಕಾಶಿಸುವ ಪ್ರಕಾಶಕ. ಇವನದು ಜ್ಞಾನದೃಷ್ಟಿ, ಏಕಾತ್ಮದೃಷ್ಟಿ, ಸರ್ವಾತ್ಮ ದೃಷ್ಟಿಯುಳ್ಳವನಾದುದರಿಂದ ಅನ್ಯವಕಾಣನು. ತನಗಿಂತನ್ಯವಕಾಣದ್ದರಿಂದ ನಿರ್ಭಯನು ಶಾಂತಾತ್ಮನು.

ಸಂತೋಷವೆಂಬ ಭುಜವುಳ್ಳವನು ನಿರಾಳ ನಿರಾಲಂಬದ ಹಿರಿಮೆಯಲ್ಲಿ ಮಗ್ನನಾಗಿಹ ಶಾಂತಿಯ ಮಂದಿರ ಸದ್ಗುಣಗಳುಗಮ, ಇದು ಗುರು ಘನನ ವರಪ್ರಸಾದ. ಇದರಿಂದ ಪರಮಾನಂದಮಯನು ಇಲ್ಲಿ ತ್ರಿಲೋಕದೈಶ್ವರ್ಯವು ತೃಣವು, ತುಚ್ಛವು, ಈ ಪರಮಾನಂದ ದೇವಲೋಕದ ಅಮೃತ ಸೇವಿಸಿದರೂ ಇಲ್ಲ, ಸಂತೋಷವು ಸಕಲ ದೇವರುಗಳ ದೇವ, ಇದರ ನಿವಾಸವೆ ಆನಂದದ ನಿವಾಸ.

ಸತ್ಸಂಗವೆಂಬ ಭುಜವು ಮಹಾಭುಜವು ಸ್ವಸುಖವ ಲಭ್ಯವಾಗಲು ಸತ್ಸಂಗ ಮಾಡುವುದು. ಸತ್ಸಂಗದಿಂದ ನಿಸ್ಸಂಗವು ನಿರ್ಮೋಹವು ನಿಶ್ಚಿಂತತೆಯ ಮೇಲೆ ಜೀವನ್ಮುಕ್ತನಾಗಿಹನು. ಆಗ ಸ್ವಾತ್ಮಾನಂದದಿಂದ ಪೂರ್ಣನು, ಸತ್ಸಂಗದಿಂದ ಜ್ಞಾನವ ಪಡೆದು ಅಮರತ್ವ ಸಿದ್ಧಿಸುವುದು.

ಮೂರು ಕಣ್ಣುಳ್ಳಡೆ ಮಹೇಶನೆಂಬೆ : ಈ ಮಹೇಶ ಅಘಟಿತ ಘಟಿತನು. ಈತನ ಮೂರು ಕಣ್ಣು ಮಹಾನ್ ಕಣ್ಣು, ಒಂದು ಲೋಕವ ಕಾಣುವ ಕಣ್ಣು, ಇನ್ನೊಂದು ಜೀವ ಪರಮರೆಂಬ ಭೇದ ಜ್ಞಾನವನ್ನೆ ನಷ್ಟಮಾಡುವ ಕಣ್ಣು, ಜ್ಞಾನಕಣ್ಣು ಇನ್ನೊಂದು. ಈ ಕಣ್ಣಿನ ಹಿರಿಮೆಯ ಆಶ್ಚರ್ಯವು ಇದು ಜೀವ ಪರಮರೊಂದು ಮಾಡುವ ಕಣ್ಣು, ದಯಾಮಯ ಕಣ್ಣು, ಅಭೇದ ಜ್ಞಾನಮಯವಾಗಿಹ ಕಣ್ಣು, ಅಖಂಡ ಕಣ್ಣು,

ಇನ್ನೊಂದು ಭೇದಾಭೇದಕ್ಕೆ ಮೀರಿದ ಕಣ್ಣು, ಜ್ಞಾನ ಅಜ್ಞಾನಕ್ಕೆ ಮೀರಿದ ಕಣ್ಣು, ಬಂಧ ಮೋಕ್ಷಗಳ ಮೀರಿದ ಕಣ್ಣು, ಇದು ತನ್ನನ್ನೆ ಕಂಡ ಕಣ್ಣು, ನಿರಂತರವಾಗಿಹ ಕಣ್ಣು, ಇದು ನಿಜವರಿದಿಹ ಕಣ್ಣು, ಶೃತಿಗೆ ಮೀರಿದ ಕಣ್ಣು, ಕಣ್ಣು ತಾನಾಗಿಹ ಕಣ್ಣು, ಬಿಟ್ಟು ಮಹೇಶನಾದೆನೆಂಬುದು ಅರುಹಿನ ಕೇಡು, ಹಿಡಿದು ಭಕ್ತನಾದೆನೆಂಬುದು ನಿಜದಕೇಡು, ಬಿಡುವುದು ಹಿಡಿವುದು ಮನ ಕಲ್ಪಿತವಲ್ಲದೆ ಕಲ್ಪನಾರಹಿತ ಭಕ್ತ ಮಹೇಶ್ವರನಲ್ಲಿಪ್ಪುದೇನಯ್ಯ

ಕಪಿಲಸಿದ್ಧ ಮಲ್ಲಿಕಾರ್ಜುನ.

ಈ ಮಹೇಶನು ಕಲ್ಪನಾರಹಿತನು. ಈ ಮಹಾಂತನ ದಿವ್ಯದೃಷ್ಟಿಯಲ್ಲಿ ಬಿಟ್ಟುದಿಲ್ಲ, ಹಿಡಿದುದಿಲ್ಲ, ಪ್ರಿಯನಲ್ಲ ಅಪ್ರಿಯನಲ್ಲ, ಬೇಕೆಂಬುದಿಲ್ಲ, ಬೇಡೆಂಬುದಿಲ್ಲ, ಅರುವಿನ ಅರುವು ಆಗಿಹ ಮಹಾಂತನಾದುದರಿಂದ ಕಲ್ಪನಾರಹಿತನು ಎಂದು ಹೇಳಿಹರು. ಈ ಘನವಂತ ಮೂರು ಕಣ್ಣುಳ್ಳವನೆಂದು ಹೇಳಿಹರು.

ಮೈಯೆಲ್ಲಾ ಕಣ್ಣುಳ್ಳವರು ಸದಾಶಿವರು. ಸೂರ್ಯನಿಗೆ ಮೈಯೆಲ್ಲಾ ಪ್ರಕಾಶ ಹೇಗೆ ಹಾಗೆ ಚಿತ್‌ಸೂರ್ಯನೆ ತಾನಾಗಿಹ ಮಹಾಂತನಿಗೆ ಮೈಯೆಲ್ಲಾ ಕಣ್ಣು. ಈ ಸದಾಶಿವನು ನಿರೂಪನು, ನಿಃಶಬ್ದವೇದಿಯು, ಸೂರ್ಯನು ಎಂದಾದರೂ ತಾನು ಸೂರ್ಯನೆಂದು ಹೇಳಿಹನೆ ? ಶಬ್ದಮುಗ್ದ ಸೂರ್ಯ ಹೇಗೋ ಹಾಗೆ. ಚಿತ್ ಎಂಬುದನರಿತ ಶರಣ. ಚಿದಾಕಾಶವೆ ತಾನಾಗಿಹ ಶಬ್ದಮುಗ್ಧ. ನುಡಿದು ನಿಃಶಬ್ದನಾಗಿಹ ಘನವಂತ ನಡೆದು ನಿರ್ಗಮನಿಯಾಗಿಹ ಅಚಲಿತ. ನುಡಿಗೆಡೆಗೊಡದ ಘನದಿರುವಿನ ಅರುವೆ ತಾನಾಗಿ ಪ್ರಜ್ವಲಿಸುವ ಅರಿಯಲಿಲ್ಲದ ಅರುವು ಕಣ್ಣಿನ ಕಣ್ಣಾಗಿಹ ಪೂರ್ಣಕಣ್ಣು, ತುಂಬಿ ತುಳಕದ ಕಣ್ಣು, ಕಡೆಮೊದಲಿಲ್ಲದ ಕಣ್ಣು, ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ಕಣ್ಣುಳ್ಳವನಾದುದರಿಂದ ಮೈಯೆಲ್ಲಾ ಕಣ್ಣು ಅದಕ್ಕಾಗಿ ಸದಾಶಿವನೆಂದು ಹೇಳಿಹರು.

ಗುಹೇಶ್ವರಾ ನಿಮ್ಮ ಶರಣಂಗೆ ಅಂಗಾಲ ಕಣ್ಣು ಮೂಡಿದಡೆ ನಿರುಪಮ ಮಹಿಮ. ಅಲ್ಲಯ್ಯನೆಂಬ ಈ ಕಣ್ಣುಳ್ಳ ಮಹಾಮಹಿಮ, ಕಲ್ಪಿತವಲ್ಲದ ಅನುಪಮ ಮಹಿಮ. ಏಕೆಂದರೆ ಉಪಮೆಗೆ ಒಳಪಟ್ಟ ಕಣ್ಣುಗಳ ಲಕ್ಷ್ಯಕ್ಕೆ ತಾರದೆ ಅಲಕ್ಷ್ಯನಾಗಿಹ ಮಹಾಂತ. ಕಾರಣಾಂತರದಿಂದ ಅಂಗಾಲಲ್ಲಿ ಕಣ್ಣು ಮೂಡಿದುದರಿಂದ ನಿರುಪಮ ಮಹಿಮ ಅಲ್ಲಯ್ಯನೆಂದು ಹೇಳಿದೆ.

**197**

**ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ನೋಡಾ!**
**ತನ್ನ ಸ್ವಾನುಭಾವದ ಉದಯದಿಂದ ತನ್ನ ತಾನರಿದ ನಿಜಶಕ್ತಿಯ ನೋಡಾ!**
**ಭಿನ್ನವಿಲ್ಲದಿರುವು, ಮನ್ನಣೆಯ ಮಮಕಾರವ ಮೀರಿದ ಭಾವ !**
**ತನ್ನಿಂದ ತಾನಾದಳು!**
**ನಮ್ಮ ಗುಹೇಶ್ವರಲಿಂಗದಲ್ಲಿ ಸ್ವಯಲಿಂಗವಾದ**
**ಮಹಾದೇವಿಯಕ್ಕಗಳ ನಿಲುವಿಂಗೆ**
**ನಮೋ ನಮೋ ಎನುತಿರ್ದೆನು ಕಾಣಾ ಚೆನ್ನಬಸವಣ್ಣ.** ॥ 725 ॥

**ತಾತ್ಪರ್ಯ** : *ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರುವ ನೋಡಾ* : ಎಷ್ಟೋ ಲಿಂಗಾರ್ಚಕರು ಪೂಜಾಲಿಂಗವ ತಮ್ಮ ಅಂಗೈಯ ಲಿಂಗವ ಪೂಜಿಸುತ್ತಿಹರು. ಅದನ್ನು ಷೋಡಶೋಪಚಾರಗಳಿಂದಲೂ ಪೂಜಿಸುವರು. ಲಿಂಗದಲ್ಲಿ ತಮ್ಮ ಕಂಗಳನೋಟ ನೆಡುತ್ತಿಹರು. ತ್ರಾಟಕ ದೃಷ್ಟಿಯ ಮಾಡುತ್ತಿಹರು. ಕಂಗಳ ನೋಟ ಲಿಂಗದಲ್ಲಿ ತಲ್ಲೀಯ ಮಾಡುತ್ತಿಹರು.

ಅಕ್ಕಮಹಾದೇವಿಯಂತೆ ಲಿಂಗದಲ್ಲಿ ಕಂಗಳನೋಟ ಸ್ವಯವಾದ ಇರವ ಆಗಿದೆಯಾ ತನ್ನದಾದ ಇರವು ಕಂಗಳ ನೋಟವಾಗಿದೆಯಾ ? ಆಗದಿದ್ದಲ್ಲಿ ಇದಾವ ದೋಷ ? ಅಂಗೈಯ ದೋಷವೊ ? ಲಿಂಗ ದೋಷವೊ ? ಲಿಂಗದಲ್ಲಿ ನೆಟ್ಟ ಕಂಗಳ ದೋಷವೊ ? ಆವ ದೋಷವುಳ್ಳದ್ದಾಗಿ ಸ್ವಯವಾದ ಇರುವಾಗಲೊಲ್ಲದು ತನ್ನದಾದ ಇರುವು ಆಗಲೊಲ್ಲದು, ಈ ವಿಷಯದಲ್ಲಿ ತನ್ನೊಳ ಅರಿದರಿದು ನೋಡಿದವರು ಎಷ್ಟು ಜನ ಸಿಕ್ಕಬಹುದು.

ಲಿಂಗ ಪೂಜಿಸುವವರೆಲ್ಲರಿಗೂ ಅಂಗೈ ಇದೆ. ಲಿಂಗವೂ ಇದೆ. ಅಕ್ಕನ ಅಂಗೈ ಬೇರೆ, ಇವರ ಅಂಗೈ ಬೇರೆ. ಅಕ್ಕನ ಕರಕಮಲದಲ್ಲಿ ಬೆಳಗುಳ್ಳ ಘನವಾಗಿಹ ಲಿಂಗ ಬೇರೆ, ಇವರ ಕರಕಮಲ ಬೇರೆಯೆ ? ಬೇರೆಂದು ತಿಳಿದಲ್ಲಿ ಅದು ತಪ್ಪಾಗಲಿಲ್ಲವೆ ? ಅಖಂಡಿತ ಘನ ಪರಿಪೂರ್ಣವಪ್ಪ ಲಿಂಗವು. ಅಕ್ಕನ ಅಂಗೈಯಲಿದ್ದುದು ಅದುವೆ, ಉಳಿದವರ ಅಂಗೈಯಲ್ಲಿದ್ದುದು ಅದುವೆ ಆಗಿದ್ದರೂ ಲಿಂಗ ಜ್ಞಾನವಿಲ್ಲದ್ದರಿಂದ ಲಿಂಗಾರ್ಚಕರ ಲಿಂಗವು ಪೂಜಾಲಿಂಗವಾಗಿದೆ. ಕುರುಹುಳ್ಳಲಿಂಗವಾಗಿದೆ.

ಅಂಗೈಯ ಲಿಂಗದಲ್ಲಿ ಕಂಗಳನೋಟ ಸ್ವಯವಾದ ಇರವು ನೋಡಾ, ಅಕ್ಕನ ಅಂಗೈ ಅಂಗಭಾವವಳಿದ ಅಂಗೈ ಅಂಗೈ ಎನ್ನದೆ ಶಬ್ದಮುಗ್ಧವಾಗಿಹ ಅಂಗೈ ತಾನೆನ್ನದ ಅಂಗೈ ಇದಿರ ಕಾಣದ ಅಂಗೈ. ಓಹೊ !! ನಿಮ್ಮ ನಿಮ್ಮ ಅಂಗೈಯ ಅರಿದರಿದು ನೋಡಿರೆ ? ಅಂಗೈಯದು ಮಾತಿಲ್ಲದವನ ಅಂಗೈ ಶಬ್ದಮುಗ್ಧವಾಗಿಹ ಅಂಗೈಯ ನೋಡುವರೆ ? ಮುನ್ನ ಮುನ್ನಲಾದ ಇರವಿನಿಂದ ಶೋಭಿಸುವ ಅಂಗೈಯ ಇದು ಅಕ್ಕನ ಅಂಗೈಯ. ಈ ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರುವ ನೋಡಾ. ಲಿಂಗ ! ಇದೆಂಥ ಲಿಂಗ. ಲಿಂಗ, ಲಿಂಗವೆನ್ನದ ಲಿಂಗ. ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಲಿಂಗ ಅನುಪಮ ಲಿಂಗ. ನಾದಬಿಂದು ಕಲೆಗಳಿಗೆ ಅಬೇಧ್ಯವಾಗಿಹ ಲಿಂಗ, ಅಚಲಿತ ಲಿಂಗ, ವಾಙ್ಮನಕ್ಕೆ ಬಾರದ ಅಖಂಡಿತ ಲಿಂಗ, ಶೃತಿಗಗೋಚರವಾಗಿಹ ಲಿಂಗ, ಶಬ್ದಮುಗ್ಧಲಿಂಗ, ಶರಣರ ಹೃದಯದಲ್ಲಿ ಪ್ರಜ್ವಲಿಸುವ ಲಿಂಗ ಇದು ಅರುವಿಂಗರುವಾಗಿಹ ಅರುವು.

ಕಂಗಳ ನೋಟ ಇದಾವ ಕಂಗಳ ನೋಟ, ಮರವಿನ ಕಂಗಳದ ಕಂಗಳಾಗಿಹ ನೋಟ, ಅರುವಿನ ಕಂಗಳದ ಕಂಗಳಾಗಿಹ ನೋಟ, ಅರುವಿಂಗೆ ಅರುವಾಗಿಹ ದಿವ್ಯ ನೋಟ, ಇದು ದಿಟ ನೋಟ, ಈ ನೋಟವು ನಿಬ್ಬೆರಗು, ಓಹೊ ! ಅಂಗೈಯ ಮೌನ, ಲಿಂಗವು ಮೌನ, ಕಂಗಳ ನೋಟವು ಮೌನ, ಈ ಮೌನ ಮುದ್ರಿತವಾಗಿಹ ಸಂಕೇತ. ಸಯದ ಇರುವಾಗಿಹ ಸಂಕೇತ. ಅಂಗೈಯ ತನ್ನಿರುವಿನ ಸಂಕೇತ ಲಿಂಗವು ತನ್ನಿರುವ ಸಂಕೇತ ಕಂಗಳ ನೋಟವು ತನ್ನಯ ಇರುವಿನ ಸಂಕೇತ, ಇದು ಮೂರೊಂದಾದ ತನ್ನಯ ಇರುವಿನ ಸಂಕೇತ. ಇದು ಸಾಕ್ಷಾತ್ಕಾರದ ಘನದಿರುವ ನೋಡಾ ಮುನ್ನ ಮುನ್ನಲಾದ ತನ್ನಯ ಇರುವ ತನ್ನಿಂದ ತಾನಾದ ತನ್ನಲಾದ ಇರುವ ತಾನೆ ತಾನಾದ ಇರುವ ನೋಡಾ.

ತನ್ನ ಸ್ವಾನುಭವದ ಉದಯದಿಂದ ತನ್ನ ತಾನರಿದ ನಿಜಶಕ್ತಿಯ ನೋಡಾ, ತನ್ನ ಸ್ವಾನುಭವವೆಂಬುದು ಇದು ಮಾತು ಮನಂಗಳಿಗೆ ಮೀರಿದ ಸ್ವಾನುಭಾವ ಮರವರುವಿಂಗೆ ಮೀರಿದ ಸ್ವಾನುಭಾವ. ಅರಿತೆ ಅರಿಯೆನೆನ್ನುವುದಕ್ಕೂ ನಿಲುಕದ ಸ್ವಾನುಭಾವ. ಇದು ತನ್ನಿಂದ ತನ್ನನರಿತ ಸ್ವಾನುಭಾವ. ಇದು ಗುರುವಿಡಿದ ಅರುವು ಅರುವಲ್ಲ, ಲಿಂಗವಿಡಿದ

ಅರುವು ಅರುವಲ್ಲ. ಇಲ್ಲದ ಗುರು, ಇಲ್ಲದ ಲಿಂಗ, ಕಲ್ಪಿತಕ್ಕೆ ಅರುವಹುದೆ ? ತನ್ನಿಂದ ತನ್ನ ಅರಿವುಡೆ ಅರಿವು ಗುಹೇಶ್ವರಾ. ಈ ಮಹದರುವಿನಂತೆ ಎರವಲಜ್ಞಾನದಿಂದ ಕಂಡ ಸ್ವಾನುಭಾವವಲ್ಲ. ಮಿಗೆ ಮಿಗೆ ಮೀಸಲವಾಗಿಹ ತತ್ವಬಲ್ಲ ತಿರಳು ದಿಟದಿಂದ ತನ್ನ ತಾಕಂಡ ಸ್ವಾನುಭಾವ. ದಿಟದಿಂದ ತನ್ನ ತಾ ಕೇಳಿದ ಸ್ವಾನುಭಾವ. ದಿಟದಿಂದ ತನ್ನ ಮಾತಾಡಿದ ಸ್ವಾನುಭಾವ. ಇದು ಸ್ವಭೂಮಿ ಸ್ವಸ್ವರೂಪ ಕಾಣಾ ಗುಹೇಶ್ವರಾ ಎಂದು ಬಿತ್ತರಿಸಿದಂತೆ ದಿಟದಿಂದ ತನ್ನ ತಾಕಂಡ ಅರಿಯದರುವು, ದಿಟದಿಂದ ತನ್ನ ತಾ ಕೇಳಿದ ಕಿವಿ. ನಿಶಬ್ದವೇದಿ ದಿಟದಿಂದ ತನ್ನ ತಾ ಮಾತಾಡಿದುದು ಅನಾಮಯವಾಗಿಹ ನಿರ್ವಾಣಿ. ಅಕ್ಕ ಉದಯದ ಉದಯ. ಅಕ್ಕ ಉದಯಾಸ್ತಗಳಿಲ್ಲದ ಉದಯ. ನಿರಂತರ ಉದಯದಿಂದ ತನ್ನ ತಾನರಿದ ನಿಜಶಕ್ತಿ ಅಕ್ಕನ ಸ್ವಾನುಭವದ ಉದಯ ಘನಕ್ಕೆ ಘನವು ಇದು ಕಾಣದುದು ಕಂಡುದು. ಕೇಳದುದು ಕೇಳಿದುದು. ಮುಟ್ಟಬಾರದುದ ಮುಟ್ಟಿದುದು. ಇದು ಸ್ವಾನುಭವದ ಉದಯ. ಅಕ್ಕ ನಿಶಬ್ದವೇದಿ, ಅಕ್ಕ ಅನುಪಮ ವೇದವ ತಿಳಿದುದರಿಂದ ಸ್ವಾನುಭವದ ಉದಯವೆಂದು ಹೇಳಿಹರು.

ಸ್ವಾನುಭವದ ಉದಯದಿಂದ ತನ್ನತಾನರಿದ ನಿಜಶಕ್ತಿ, ಅದನೆಂತು ವರ್ಣಿಸುವುದು. ಅರಿಯದರುವಾಗಿಹ ನಿಜಶಕ್ತಿ. ನಿಶಬ್ದವೇದಿಯಾಗಿ ತನ್ನ ತಾನರಿದ ನಿಜಶಕ್ತಿ. ನಿರ್ವಾಣದುದಯದಿಂದ ತನ್ನ ತಾನರಿದ ನಿಜಶಕ್ತಿ.

ಭಿನ್ನವಿಲ್ಲದಿರುವು ಅಕ್ಕನ ಇರವು. ಭಿನ್ನವಿಲ್ಲದಿರುವ ತನಗಿಂತ ಅನ್ಯ ಕಾಣದ್ದು. ಎಲ್ಲೆಲ್ಲೂ ತನ್ನ ಕಂಡ ಇರುವ ತಾನೆ ತಾನಾಗಿಹ ಮಹದಿರುವು. ಅಂಗ ಕಂಡರೂ ತನ್ನಯ ಇರುವು. ಲಿಂಗ ಕಂಡರೂ ತನ್ನಯ ಇರುವು. ಘಟ್ಟಿದುಪ್ಪ ಕಂಡರೂ ಅದುವೆ ತಿಳಿದುಪ್ಪ ಕಂಡರೂ ಅದುವೆ ಎನ್ನಂಗ ಶ್ರೀಗುರು ಮಂತ್ರ ಮಾಡಿ ತೋರಿದನಾಗಿ ಸಾವಯವ ತನ್ನಯ ಇರುವು, ನಿರವಯ ಕಂಡರೂ ತನ್ನಯ ಇರವು. ಇದು ಭಿನ್ನವಿಲ್ಲದಿರುವು ದೃಶ್ಯ, ದೃಕ್ ಎಂಬುದು ತನ್ನಯ ಇರುವು. ಅಜ್ಞಾನಿ ತಾನೆ, ಸುಜ್ಞಾನಿ ತಾನೆ, ಶಿವ ತಾನೆ, ಶಕ್ತಿ ತಾನೆ, ಆತ್ಮ ತಾನೆ, ಅನಾತ್ಮ ತಾನೆ, ತನ್ನಿಂದ ತನ್ನನರಿತು, ತನ್ನ ಸ್ವಮಹಿಮೆಯಲ್ಲಿದ್ದುದು ಭಿನ್ನವಿಲ್ಲದಿರುವ ಕ್ಷರವೆನಲಿಲ್ಲ, ಅಕ್ಷರವೆನಲಿಲ್ಲ, ಲಿಂಗವೆನಲಿಲ್ಲ, ಆಲಿಂಗೈಕ್ಯವೆನಲಿಲ್ಲ, ಸಂಗಿ ಎನಲಿಲ್ಲ, ನಿಸ್ಸಂಗಿಯೆನಲಿಲ್ಲ, ಏನೂ ಎನ್ನದೆ ಶಬ್ದಮುಗ್ಧವಾಗಿದ್ದ ಅಕ್ಕ ಭಿನ್ನವಿಲ್ಲದ ಇರುವ ನೋಡಾ ಎಂದಿಹರು.

ಭಕ್ತೆಯಾನಪ್ಪೆನಯ್ಯ, ಕರ್ತೃತ್ವ ಭೃತ್ಯತ್ವನರಿಯೆ, ಮಹೇಶ್ವರಿಯಾನಪ್ಪೆನಯ್ಯ, ವ್ರತಧರ್ಮಂಗಳ ಫಲವನರಿಯೆ, ಪ್ರಸಾದಿಯಾನಪ್ಪೆನಯ್ಯ ಅರ್ಪಿತ ಅನರ್ಪಿತನರಿಯೆ, ಪ್ರಾಣಲಿಂಗಿಯಾನಪ್ಪೆನಯ್ಯ, ಅನುಭಾವದ ಗಮನವನರಿಯೆ, ಶರಣೆಯಾನಪ್ಪೆನಯ್ಯ ಅನುಭಾವದ ಗಮನವನರಿಯೆ, ಐಕ್ಯಯಾನಪ್ಪೆನಯ್ಯ, ಬೆರಸಿ ಭೇದವನರಿಯೆ, ಇಂತೀ ಷಟ್‌ಸ್ಥಲದಲ್ಲಿ, ನಿಸ್ಥಲನಾಗಿಪ್ಪೆ ಕಾಣಾ ಚೆನ್ನಮಲ್ಲಿಕಾರ್ಜುನ. ಅಕ್ಕನದು ಭಿನ್ನವಿಲ್ಲದಿರುವು ಆದುದರಿಂದ ಸ್ವರೂಪ ಸಾಕ್ಷಾತ್ಕಾರವಾಯಿತ್ತು ಎನ್ನದವಳು ಆಗದ್ದು ಎನ್ನದವಳು ಏನೂ ಎನ್ನದೆ ಶಬ್ದಮುಗ್ಧವಾಗಿಹ ಘನಕ್ಕೆ ಘನಳು.

ಮನ್ನಣೆ ಮಮಕಾರವ ಮೀರಿದ ಭಾವ, ತನ್ನಿಂದ ತಾನಾದಳು, ಅಕ್ಕನು ಷಟ್‌ಸ್ಥಲಕ್ಕೂ ಮನ್ನಣೆ ಕೊಡದ ನಿರಾಲಂಬಿ. ನಿಸ್ಥಲವಂತೆ ಸ್ವಸ್ಥಲದ ಹಿರಿಮೆಯಿಂದ

ಪ್ರಜ್ವಲಿಸುವ ಮಹಾಪ್ರಭೆ ಆವಾವುದಕ್ಕೂ ಮಮಕಾರವ ಮಾಡದ ಮಹಿಮಳು. ತನ್ನ ಕರ್ತೃತ್ವ ಭೋಕ್ತೃತ್ವಕ್ಕೆ ಮಮಕಾರವ ಮಾಡದ ನಿಸ್ಸಂಗಳು. ತನ್ನ ವ್ರತಧರ್ಮವಾಗಿಹ ಅರ್ಪಿತ ಅನರ್ಪಿತಕ್ಕೂ ಅನುಭವಕ್ಕೂ ತಾಸತಿ, ಚೆನ್ನಮಲ್ಲಿಕಾರ್ಜುನ ಎಂಬ ಪತಿ ಎಂಬುದಕ್ಕೂ ಮನ್ನಣೆ ಮಮಕಾರವ ಮೀರಿದುದರಿಂದ ಭಾವಕ್ಕಗಮ್ಯವಾಗಿಹ ನಿರ್ಭಾವದ ಭಾವ ಏನೊಂದಾಗದ ಭಾವ ನುಡಿಗೆಡೆಗೊಡದ ಭಾವ ನಾನೀನೆಂಬುದಕ್ಕೂ ತೆರಹಿಲ್ಲದ ಭಾವವಾದುದರಿಂದ ತನ್ನಿಂದ ತಾನಾದಳು.

ಗುಹೇಶ್ವರ ಲಿಂಗದಲ್ಲಿ ಮಹಾದೇವಿಯಕ್ಕನ ನಿಲುವಿಂಗೆ ನಮೋ ನಮೋ ಎನುತಿರ್ದೆನು. ಗುಹೇಶ್ವರ ಲಿಂಗವೆಂಬುದು ತಾನೆ ತಾನಾಗಿಹ ಲಿಂಗ. ಇದು ತನ್ನಿಂದ ತಾನಾದ ಘನ. ಇದು ಗುರುವಿಡಿದ ಅರುವಿನಿಂದಾಗ ಘನವೂ ಅಲ್ಲ, ಲಿಂಗ, ಲಿಂಗ ಎಂಬ ಲಿಂಗಾನುಸಂದಾನದಿಂದ ಆದ ಘನವೂ ಅಲ್ಲ, ತಾನೆ ಲಿಂಗಕ್ಕೆ ಲಿಂಗವಾಗಿಹ ನಿಲುವು ಗುರುವಿಂಗೆಗುರುವಾಗಿಹ ನಿಲುವು. ಮಹದೇವಿಯಕ್ಕನ ನಿಲುವಾದುದರಿಂದ ಮಹಾದೇವಿಯಕ್ಕನ ನಿಲುವಿಂಗೆ ನಮೋ ನಮೋ ಎನುತಿರ್ದೆನೆಂದು ಹೇಳಿಹನು.

**198**

**ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು.**
**ಮನಗುಣನಾಸ್ತಿಯಾಗಿ ಅರಿವುಸಂಗಿಯಾದಳು.**
**ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು.**
**'ತಾನು' 'ಇದಿರು' ಎಂಬ ಎರಡಳಿದು**
**ನಮ್ಮ ಗುಹೇಶ್ವರಲಿಂಗದಲ್ಲಿ ಸ್ವಯಲಿಂಗವಾದ**
**ಮಹಾದೇವಿಯಕ್ಕಗಳ ನಿಲುವಿಂಗೆ ಶರಣೆನುತಿರ್ದೆನು.** ॥ 1227 ॥

**ತಾತ್ಪರ್ಯ :** ತನುಗುಣ ನಾಸ್ತಿಯಾಗಿ ಲಿಂಗಸಂಗಿಯಾದಳು, ಲಿಂಗಸಂಗಿಯಾದ ಸಂಕೇತವೆ ತನುಗುಣವಳಿದ ಸಂಕೇತ. ಫಲಪಕ್ವವಾಗುವುಡೆ ಮರದಿಂದ ಹಣ್ಣು ಕೆಳಗೆ ಬೀಳುವುದು, ಫಲಪಕ್ವವಾಗದಿರುವಲ್ಲಿ ಅದು ಗಿಡಕ್ಕೆ ಅಂಟಿರುವುದು. ಹಾಗೆ, ಲಿಂಗ ಸಂಗವಾದುದು ಹೃದಯ ಪಕ್ವವಾದ ಸಂಕೇತ. ಮರವರುವಿಂಗೆ ಮೀರಿದ ಹೃದಯವಾಗುವುದು. ಎಲ್ಲಿಯವರೆಗೆ ಅಹಮತ್ವದಿಂದುಕ್ತವಾಗಿದೆ ಅದು ಪಕ್ವವಾಗದ ಚಿನ್ಹೆ. ತನು ಎಂದರೆ ದೇಹ ಅಹಂಕಾರ ಎಂದು ಅರ್ಥವಾಗುವುದು. ಈಶ್ವರ ರಚಿತ ಶರೀರ ಅಷ್ಟು ಕೆಡಕುಳ್ಳದ್ದಲ್ಲ, ಕಾಯದಿಂದ ಪುರುಷಾರ್ಥ ಪರಮಪುರುಷಾರ್ಥ ಸಿದ್ಧಿಸುವಲ್ಲಿ ಕಾಯವಿಲ್ಲದಿರೆ ಆವಾವುದು ಸಿದ್ಧಿಸದು, ಕಾಯ ಕೆಡಕು ಅಲ್ಲ ಅದರ ಉಪಯೋಗ ಮಾಡುವವನ ಕೈಯಲ್ಲಿದೆ. ಲಿಂಗಸಂಗಿಯಾಗಿ ಸದುಪಯೋಗವಾಗುವ ಕಾಯ, ಅದು ಪ್ರಸಾದಕಾಯ ಪರಮಜ್ಞಾನರೂಪಿ ಪರಮಾಮೃತ ಕಾಯವೆನಿಸಿಕೊಳ್ಳುವುದು.

ತನುಗುಣವಳಿಯದಿದ್ದಲ್ಲಿ ಇಂದ್ರಿಯಜನ್ಯ ವಿಷಯಾದಿಗಳ ಉಪಭೋಗಕ್ಕೆ ಉಪಯೋಗವಾದರೆ ಕಾಯವು ಅನರ್ಥವು ಅಮೂಲ್ಯ ಜೀವನ ಹಾಳು ಮಾಡಲು ಬಂದ ಮೃತ್ಯುವೆಂದೆನಿಸುವುದು. ತನುಗುಣವಳಿಯುವ ಮೊದಲನೆಯ ಸಾಧನೆ ಎಂದರೆ

ಅಭಿಮಾನವಳಿಯುವುದು. ಗುರೂಪದೇಶಕ್ಕೆ ಯೋಗ್ಯವಾದ ಶರೀರವೆಂದರೆ ಅಹಂಕಾರ ದರ್ಪಣವಾಗಿಹ ಶರೀರ, ಆರು ಅಹಂಕಾರ ತ್ಯಾಗ ಮಾಡಿರುವರು ಅವರೆ ಆದರ್ಶಕ, ಅವರೆ ಹಿರಿಯರು ಗುರುದರ್ಶನವಾಗಹೋಗಿ ಗುರುವಾದವರು. ಲಿಂಗ ನೋಡ ಹೋಗಿ ಲಿಂಗಸಂಗಿಯಾದವರು. ತನುಗುಣವಳಿದ ಸಂಕೇತವೆಂದರೆ ದೇಹೋಹಂ ಹಿಡಿದುಬಿಟ್ಟರೆ ಗುಣವಳಿದ ಸಂಕೇತವಾಗುವುದಿಲ್ಲ, ನಾಹಂ, ಕೋಹಂ, ಸೋಹಂ, ಚಿದಹಂ, ಈ ನಾಲ್ಕರ ಅಹಂಕಾರ ಆರು ಅಳಿದಿಹರು ಅವರು ತನುಗುಣವಳಿದವರು ಅವರು ಲಿಂಗಸಂಗಿಯಾದವರು. ಏಕೆಂದರೆ ಅವರಿಗೆ ವೇದ ವೇದಾಂತಗಳಿಗೆ ಅಸಾಧ್ಯವಾದ ಅನುಪಮ ಲಿಂಗ ಸಂಗಿಯಾಗಿಹುದು. ಅದಕ್ಕಾಗಿ ಅವರಿಗೆ ತನುಗುಣವಳಿದ ಸಂಕೇತವೆಂದು ಹೇಳಿಹರು.

ಮನಗುಣನಾಸ್ತಿಯಾಗಿ ಅರುವಿನ ಸಂಗಿಯಾದಳು, ಮನ ? ಅವಿಚಾರ ಮನ, ವಿಚಾರ ಮನ ಇವೆರಡು ನಷ್ಟವಾದಲ್ಲಿ ಅರುವಿನ ಸಂಗಿಯಾದ ಸಂಕೇತ, ಅವಿಚಾರ ಮನ ? ಇದು ನಿತ್ಯಾನಿತ್ಯವರಿಯದ ಮನ, ದೃಶ್ಯ, ದೃಕ್ ಎಂಬುದನರಿಯದ ಮನ, ತತ್ವ ಅತತ್ವಗಳ ವಿಚಾರವಿಲ್ಲದ ಮನ, ಭ್ರಾಂತಿ ಮನ, ಈ ಮೂರುವರಿ ಮೊಳ ಶರೀರವೆ ತಾನೆನ್ನುವ ಮನ, ಷಡ್ವಿಕಾರವುಳ್ಳ ಮನ, ಹುಟ್ಟುಸಾವುಗಳು ತಾನೆನ್ನುವ ಮನ, ಬಾಲ್ಯ, ಯೌವ್ವನ ಮುಪ್ಪು, ಸೊಕ್ಕುವಿಕೆ, ಸೊರಗುವಿಕೆ ತಾನೆನ್ನುವ ಮನ, ಇದು ಭ್ರಾಂತಿಯಿಂದುಕ್ತವಾದ ಮನ, ತಾನಾರೆಂದರಿದ ಮನ, ಮರವಿನ ಮನ, ಅವಿದ್ಯೆಯಿಂದುಕ್ತವಾಗಿಹ ಅನಾತ್ಮದ ಸಂಗಿಯಾಗಿಹ ಭ್ರಾಂತಿ ಮನ.

ವಿಚಾರ ಮನ, ನಿತ್ಯಾನಿತ್ಯ ವಿಭಾಗ ಮಾಡಿ ತಿಳಿದಿಹ ಮನ, ದೃಶ್ಯ, ದೃಕ್ ಎಂಬುದು ವಿಭಾಗಿಸಿದ ಮನ, ಅನಾತ್ಮವ ಸೇರದ ಮನ, ಆತ್ಮ ತಾನೆನ್ನುವುದಕ್ಕೆ ಒಪ್ಪಿದ ಮನ, ಸಂಗವ ಸೇರದ ಮನ, ನಿಸ್ಸಂಗಕ್ಕೆ ಒಪ್ಪಿದ ಮನ, ಅಸ್ತಿ, ಭಾತಿ, ಪ್ರಿಯ ನಾನೆನ್ನುವ ಮನ, ಸೋಹಂ ಸೋಹಂ ಎಂದೆನ್ನುವ ಮನ, ಆತ್ಮಾಕಾರವುಳ್ಳಮನ, ಇದು ಗುರು ಕೃಪೆಯಿಂದ ಲಭ್ಯವಾಗಿಹ ಮನ, ಗುರುಪುತ್ರರ ಮನ, ದ್ವಿಜಾತಿ ಸಂಪನ್ನರ ಮನ, ಮೋಕ್ಷರೂಪ ಮನ, ಇಲ್ಲಿ ಒಂದು ಆಹ್ವಾನ ಒಂದು ವಿಸರ್ಜನೆ. ಒಂದು ವ್ಯಾಕುಳ, ಒಂದು ನಿರಾಕುಳ ಇದು ವಿಚಾರ ಮನ, ಇವೆರಡು ನಷ್ಟವಾದುದು. ಮನ ಗುಣ ನಾಸ್ತಿಯಾಗಿ ಅರುವಿನ ಸಂಗಿಯಾದ ಸಂಕೇತ.

ಶರಣರು ಸಮಸ್ವರೂಪಿಗಳು ಅವರಲ್ಲಿ ಆಹ್ವಾನಿಸುವುದಿಲ್ಲ, ವಿಸರ್ಜಿಸುವುದಿಲ್ಲ, ಬೆಳಕೆಂಬುದಿಲ್ಲ ಕತ್ತಲೆ ಎಂಬುದಿಲ್ಲ, ಬೆಳಕನ್ನು ಆಹ್ವಾನಿಸುವುದಿಲ್ಲ, ಕತ್ತಲೆಯ ವಿಸರ್ಜಿಸುವುದಿಲ್ಲ, ಸಮಸ್ವರೂಪವಾದುದು ಮರವೆಂಬ ಅವಿಚಾರ ರೂಪ ಕತ್ತಲೆಯು ಕಾಣದು, ಇತ್ತ ವಿಚಾರರೂಪವಾದ ಆತ್ಮ ನಾನು, ಸಚ್ಚಿದಾನಂದ ನಾನು, ಸೋಹಂ ನಾನು, ಪೂರ್ಣ ನಾನೆಂಬ ಚಿದಹಂ ರೂಪಿ ಬೆಳಕನ್ನು ಕಾಣದು, ಇವೆರಡಕ್ಕೂ ಮೀರಿದ ಘನದಿರುವಾಗಿಹ ನಿಜಚಿದ್ರೂಪವಾಗಿಹ ಚಿದಾಕಾಶದ ಸಂಗಿಯಾದ ಸಂಕೇತವು. ಈ ಸಂಗನ ಸಂಗಿಯಾದ ಮೇಲೆ ಇನ್ನೇನಿನ್ನೇನು.

ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು. ಭಾವವೆಂಬವು ತ್ರಿವಿಧರೂಪವು. ಒಂದು ಜೀವಭಾವ, ಒಂದು ಅಂತರಾತ್ಮನೆಂಬ ಭಾವ, ಮತ್ತೊಂದು ಪರಮಾತ್ಮನೆಂಬ

ಭಾವ. ಈ ತ್ರಿವಿಧರೂಪ ಭಾವಂಗಳು ಭಾವಕ್ಕಗಮ್ಯವಾಗಿಹ ಘನದಿರುವು ಕಾಣದವು. ಕಾಣದ್ದರಿಂದ ಭಾವಂಗಳಾಗಿಹವು. ಒಂದು ಮರುವಿನ ದೆಶೆಯಲ್ಲಿ ತೋರುವ ಜೀವಭಾವವಾಗಿದೆ. ಇನ್ನೊಂದು ವಿವೇಕ ದೆಶೆಯಲ್ಲಿ ತೋರುವ ಅಂತರಾತ್ಮಭಾವ ಅರಿಸಿಕೊಳ್ಳುವ ಅನಾತ್ಮ ನಾನಲ್ಲ, ಅರಿಯು ದೃಕ್ ರೂಪ, ಆತ್ಮ ತಾನೆನ್ನುವುದೆ ಅಂತರಾತ್ಮ ಭಾವ. ಇವೆರಡಕ್ಕೂ ಮೀರಿದ ಅರುರೂಪ ತಾನೆನ್ನುವುದೆ ಪರಮಾತ್ಮಭಾವವಾಗಿದೆ. ಪರಮಾತ್ಮ ಭಾವವು, ಪೂರ್ಣಭಾವವು ಅಖಂಡ ಭಾವವು.

ಈ ಮೂರು ಭಾವಂಗಳು ತನ್ನಿಂದ ತಿಳಿಸಿಕೊಳ್ಳುವುದರಿಂದ ತಾನಲ್ಲ, ತನಗನ್ಯವಾದವುಗಳು ತಾನು ಈ ತ್ರಿವಿಧ ಭಾವಂಗಳಿಗೆ ಮೀರಿದ ಭಾವಕ್ಕಗಮ್ಯನು. ತಾನು ಏನೊಂದಾಗದ ಘನನು. ತನ್ನೊಳಗೆ ಭಾವಕ್ಕಿಂಬಿಲ್ಲ, ಶಬ್ದಮೀಸಲವಾಗಿಹುದು, ನುಡಿಗೆಡೆಗೊಡದವನು. ಎಡೆಯಿಲ್ಲದ ಪರಿಪೂರ್ಣನು. ತನ್ನಿಂದ ತಾನಾದವನು. ತಾನೆ ತಾನಾದವನು. ದೇಹಿಗೆ ದೇಹಿಯಾದವನು. ಭಾವಕ್ಕಗಮ್ಯವಾಗಿಹ ತನ್ನಿರುವು ಆದುದು. ಅದಕ್ಕಾಗಿ ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು ಎಂದು ಹೇಳಿಹರು.

ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯ ಲಿಂಗಿಯಾದ ಮಹಾದೇವಿಯಕ್ಕನ ನಿಲುವಿಂಗೆ ಶರಣೆಂದು ಬದುಕಿದೆನು. ಅಕ್ಕ ತಾನಿದಿರೆಂಬೆರಡಳಿದ ಮಹಾಶಕ್ತಿ. ತಾ ಸತಿಯೆನಲಿಲ್ಲ, ಲಿಂಗಪತಿ ಎನಲಿಲ್ಲ, ಚೆನ್ನಮಲ್ಲಿಕಾರ್ಜುನ ಪತಿಯೆನಲಿಲ್ಲ, ತಾನು ಅವನ ಹೆಂಡತಿ ಎನಲಿಲ್ಲ, ಚೈತನ್ಯವಾದುದು ಗಂಡನೆನಲಿಲ್ಲ, ಚೈತನ್ಯದ ನೆನಹುಳ್ಳ ಭಾವವದು ಹೆಂಡತಿ ಎನಲಿಲ್ಲ, ಇತ್ತ ಜ್ಞಾನ, ಇತ್ತ ಭಾವ ಇವೆರಡಳಿದುದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯಲಿಂಗಿಯಾದ ಮಹಾದೇವಿಯಕ್ಕನ ನಿಲುವಿಂಗೆ ಶರಣೆಂದು ಬದುಕಿದೆನು.

ಅಕ್ಕನ ನಿಲುವು ಸ್ವಯಲಿಂಗಿಯಾದ ನಿಲುವು. ಶಬ್ದಮುಗ್ಧವಾಗಿಹ ನಿಲುವು. ಲಿಂಗಕ್ಕೆ ಲಿಂಗವಾಗಿಹ ಸ್ವಯಲಿಂಗವಾದ ನಿಲುವು. ಇದು ಮೌನದ ಮೌನವಾಗಿಹ ಅನಾಮಯ ನಿರ್ವಾಣವು. ಇದು ಮುನ್ನ ಮುನ್ನಲಾದ ತನ್ನಯ ಇರವು. ತನ್ನಿಂದ ತಾನಾದ ಇರವು. ತನ್ನಂತರಂಗದೊಳ ನ್ಯಸ್ತವಾಗಿಹ ಇರವು. ಇದು ಚಿದ್‌ಬೆಳಗಿನೊಳಗೆ ಬೆಳಗಾಗಿಹ ಘನಕ್ಕೆ ಘನವು. ಇದು ತನ್ನಿರುವಾಗಿಹ ಅರುವು. ಸ್ವಯಲಿಂಗವರಿದ ನಿಲುವು. ಅಕ್ಕ ಲಿಂಗದಲ್ಲಿ ಉದಯಿಸಿ ಲಿಂಗದಲ್ಲಿ ಲೀಯವಾದ ಲಿಂಗೈಕ್ಯಳು. ಇಲ್ಲಿ ಕಲ್ಪಿತಕ್ಕೆಡೆಯಿಲ್ಲವಾದ್ದರಿಂದ ಗುಹೇಶ್ವರ ಲಿಂಗದಲ್ಲಿ, ಮಹಾದೇವಿಯಕ್ಕನ ನಿಲುವಿಂಗೆ ಶರಣೆಂದು ಬದುಕಿದೆನು ಎಂದು ಹೇಳಿಹಳು.

**199**

**ನುಡಿಗೆಡೆಗೊಡದ ಘನವ ಹಿಡಿದು ಒಡಬಂದಿಯಾಳು.**
**ಎಡೆಯಿಲ್ಲದ ಪರಿಪೂರ್ಣದೊಳಗೆ ನಡೆನುಡಿಗೆಟ್ಟಳು.**
**ತನ್ನ ನಿಲುಕಡೆಯ ನಿಜವ ತಾನರಿಯದಂತೆ**
**ಎನ್ನಿಂದ ಕೇಳಿ ಸ್ವಯವಾದಳು.**
**ಗುಹೇಶ್ವರಲಿಂಗ ಸಾಕ್ಷಿಯಾಗಿ,**

**ಮಹಾದೇವಿಯಕ್ಕನ ನಿಲವ ಕೊಂಡಾಡುವುದಕ್ಕೆ**
**ತೆರಹಿಲ್ಲ ಕಾಣಾ ಮಡಿವಾಳಯ್ಯ.** ॥ 1327 ॥

**ತಾತ್ಪರ್ಯ** : ನುಡಿಗೆಡೆಗೊಡದ ಘನವಹಿಡಿದು, ಒಡಬಂದಿಯಾದಳು. ಅಕ್ಕನ ನಿಲುವ, ಪ್ರಭುದೇವ ನುಡಿಗೆಡೆಗೊಡದ ಘನವಹಿಡಿದು ಒಡಬಂದಿಯಾದಳು. ಅಕ್ಕನ ನಿಲುವ ಪ್ರಭುದೇವ ಕೊಂಡಾಡುವುದಕ್ಕೆ ತೆರಹಿಲ್ಲವೆಂದು ಪ್ರಮಾಣಿಸಿರುವಲ್ಲಿ ಇನ್ನುಳಿದವರು ಅದನೆಂತು ವಿವರಿಸುವುದು. ಸಕಲರು ನುಡಿಗೊಳಪಟ್ಟ ಘನವ ಹಿಡಿದವರುಂಟು. ಅದರ ಸಪ್ರೇಮಿಗಳು ಉಂಟು, ಸದ್ಭಾವಿಗಳು ಉಂಟು, ಶ್ರದ್ಧಾವಂತರು ನಿಷ್ಠೆವುಳ್ಳವರು ಅನುಭವಿಗಳು ಉಂಟು. ಅಕ್ಕ ನುಡಿಗೆಡೆಗೊಡದ ಘನವ ಹಿಡಿದುದು ಅದನೆಂತು ವರ್ಣಿಸುವುದು. ಅಪ್ರಮಾಣವೆಂದರೂ ನುಡಿಗೊಳಪಟ್ಟಿತ್ತಲ್ಲವೆ ? ಸತ್, ಚಿತ್, ಆನಂದ ನಿತ್ಯ ಪರಿಪೂರ್ಣನೆಂದರೂ ನುಡಿಗೊಳಪಟ್ಟದು. ಅವಿಕಾರಿ, ಅಕಲ್ಪಿತ, ಅಗಮ್ಯ ಅಚಿಂತ್ಯವೆಂದರೂ ನುಡಿಗೊಳಪಟ್ಟುದು. ಅದ್ವಿತೀಯ, ಅನುಪಮನೆಂದರೂ ನುಡಿಗೊಳಪಟ್ಟುದಾಯಿತ್ತು. ಶೃತಿಗಗೋಚರ, ವಾಙ್ಮನೋತೀತವೆಂದರೂ ನುಡಿಗೊಳಪಟ್ಟ ಘನವಾಯಿತಲ್ಲದೆ, ನುಡಿಗೆಡೆಗೊಡದ ಘನವಾಯಿತಲ್ಲ ಎಂಬುದು ಯತಾರ್ಥವಾಗದು. ಸರ್ವಂಖಲ್ವಿದಂಬ್ರಹ್ಮ, ನಿಶಬ್ದ ಬ್ರಹ್ಮವೆಂದರೂ ನುಡಿಗೊಳಪಟ್ಟ ಬ್ರಹ್ಮವಾಯಿತಲ್ಲದೆ, ನುಡಿಗೆಡೆಗೊಡದ ಘನವಾಗಲಿಲ್ಲ, ಮುನ್ನ ಮುನ್ನಲಾದುದು ತನ್ನಿಂದ ತಾನಾದುದು ಎಂದರೂ ನುಡಿಗೊಳಪಟ್ಟ ಬ್ರಹ್ಮವಾಯಿತಲ್ಲದೆ ತನ್ನಿರುವು ಆಗಲಿಲ್ಲ, ಇದು ಕಾರಣ ತನ್ನಿಂದ ತನ್ನನರಿದ ಇರುವು ದಿಟದಿಂದ ತನ್ನ ತಾ ಕಂಡು ನುಡಿಯಲು ಬಾರದಾಗಿಹ ಇರುವು. ದಿಟದಿಂದ ತನ್ನ ತಾ ಕೇಳಲು ಬಾರದಾಗಿಹ ತನ್ನಿರುವ ಇಂತಪ್ಪ ಘನವಹಿಡಿದು, ಒಡಬಂದಿಯಾದಳೆ ? ಅಕ್ಕ ಇದೆಂಥ ಸೆರೆಯಲ್ಲಿದ್ದವನ ಜೊತೆಗಾರಳು ? ನುಡಿಗೆಡೆಗೊಡದ ಘನವಾಗಿಹ ತನ್ನಯ ಜೊತೆಗಾರನ ಜೊತೆಯಾದಳೆ ? ಕಥನಕ್ಕೆ ನಿಲುಕದ ಘನವಾಗಿಹ ಘನವಂತನ ಜೊತೆಗಾರಳಾದಳೆ ? ಇದೆಂಥ ಒಡಬಂದಿಯಾದಳು, ಮಾತುಮನಂಗಳ ಸೇರದವನ ಒಡಬಂದಿಯಾದಳೆ ? ಶೃತಿ ಪ್ರಮಾಣಂಗಳ ಸೇರದವನ ಒಡಬಂದಿಯಾದಳೆ ? ಇದು ಕಾರಣ ಎಡೆಯಿಲ್ಲದ ಪರಿಪೂರ್ಣದೊಳಗೆ ನಡೆನುಡಿಗೆಟ್ಟಳು. ಬಹುವಾಗಿ ಬ್ರಹ್ಮಜ್ಞಾನಿಗಳಲ್ಲಿ ಸಾಪೇಕ್ಷ ಜ್ಞಾನಿಗಳು ಆಗಿಹರು. ಶಬ್ದವೇದಿಗಳು ಆಗಿಹರು. ನಿಃಶಬ್ದವೇದಿಗಳು ಬಹು ಕಡಿಮೆ.

ತನು ವಿಡಿದಿಹುದು ಪ್ರಕೃತಿ, ಪ್ರಕೃತಿ ವಿಡಿದಿಹುದು ಪ್ರಾಣ, ಪ್ರಾಣವಿಡಿದಿಹುದು ಜ್ಞಾನ, ಜ್ಞಾನವಿಡಿದಿಹುದು ಗುರು, ಇಂತಿ ಗುರು ಲಿಂಗ ಜಂಗಮ ಪ್ರಸಾದ ಸಗುಣವೆಂದು ಹಿಡಿದು ನಿರ್ಗುಣವೆಂದು ಕಂಡ ಸಂದೇಹಿ, ವ್ರತಗೇಡಿಯ ನೇನೆಂಬೆ ಅವರ ಮುಖವ ತೋರದಿರು ಕೂಡಲಸಂಗಮದೇವ. ಅಕ್ಕನ ಜ್ಞಾನ, ಅಕ್ಕನ ಇರುವು, ಏನೊಂದಾಗದ ಘನದ ಜ್ಞಾನ. ಏನೊಂದಾಗದ ಘನದಿರುವು. ನಿಸ್ಸೀಮ ಇರುವು. ಆವಾವುದಕ್ಕೂ ಅವಕಾಶಕೊಡದ ಇರುವು ತನ್ನೊಳ ತನುವ ಕಂಡವಳಲ್ಲ, ಪ್ರಕೃತಿ ಕಂಡವಳಲ್ಲ, ಪ್ರಾಣ ಕಂಡವಳಲ್ಲ, ಕಲ್ಪಿತ ಜ್ಞಾನ ಕಂಡವಳಲ್ಲ, ಗುರು ಕಂಡವಳಲ್ಲ, ಗುರು ಲಿಂಗ ಜಂಗಮ ಪ್ರಸಾದ ಇವುಗಳನ್ನು ಸಗುಣವಾಗಿ ಕಂಡವಳಲ್ಲ. ತಾನು ನಿರ್ಗುಣವೆಂದು ತಿಳಿದವಳಲ್ಲ.

ಇವಾವು ಕಂಡವಳಲ್ಲ ಆದುದರಿಂದ ಅಸತ್ ಕಂಡವಳಲ್ಲ, ಮಿಥ್ಯೆ ಕಂಡವಳಲ್ಲ, ಸತ್ ಕಂಡವಳಲ್ಲ, ಜಡ ಕಂಡವಳಲ್ಲ, ಅಜಡ ಕಂಡವಳಲ್ಲ, ಪ್ರಕಾಶಿತ ಕಂಡವಳಲ್ಲ, ಪ್ರಕಾಶಕ ಕಂಡವಳಲ್ಲ, ಚೇತನ ಕಂಡವಳಲ್ಲ ನಿಜ ಚೈತನ್ಯವಾಗಿಹ ಮಹಾಂತಳಿಗೆ ಅನಿತ್ಯ ಕಂಡುದಿಲ್ಲ ನಿತ್ಯವೆಂಬುದು ಕಂಡುದಿಲ್ಲ ದೇಶ, ವಸ್ತು, ಕಾಲಗಳ ಕಂಡವಳಲ್ಲ ಇವು ಒಂದುಕೊಂದು ಸಾಪೇಕ್ಷೆ ಮಾಡಿ ಬಂದ ಅರುವು, ಅಕ್ಕ ಇವಾವುದಕ್ಕೂ ಅವಕಾಶಕೊಡದ ಪರಿಪೂರ್ಣಳು, ಗಗನದಂತೆ ಅಖಂಡವಾಗಿಹ ಜ್ಞಾನಾಮೃತಳು, ಚಿತ್ ಎಂಬುದನರಿತು ಚಿದಾಕಾಶವೆ ತಾನಾಗಿಹ ನಿಜಶಕ್ತಿ ಅಕ್ಕ.

ಗಗನವು ಎಂದಾದರೂ ಗಗನವೆಂದಿದೆಯಾ ? ಅದು ಚರಿಸ್ಯಾಡಿರುವುದೆ ? ಅದರ ಇರವು ಅಚಲಿತವು ಹಾಗೆ, ಚಿತ್ ಎಂಬುದನರಿತ ಚಿದ್ಘನವು. ಚಿದ್ಘನವು ಮಾತಾಡುವುದೆ ? ಚರಿಸ್ಯಾಡುವುದೆ ? ಮಹಾಶಕ್ತಿ, ಅಚಲಿತ ಶಕ್ತಿ, ಇದು ತನ್ನ ತಾನರಿದ ನಿಜಶಕ್ತಿಯಾದುದರಿಂದ ನುಡಿದುದಲ್ಲ ನಡೆದುದಲ್ಲ ಎಂದು ಕೊಂಡಾಡಿಹನು.

ತನ್ನ ನಿಲುಕಡೆಯ ನಿಜವ ತಾನರಿಯದಂತೆ ಎನ್ನಿಂದ ಕೇಳಿ ಸ್ವಯವಾದಳು, ತನ್ನ ನಿಲುಕಡೆಯ ನಿಜವೆಂಬುದು ಅರಿದರುಹಿಸಿಕೊಂಬುದಕ್ಕೆ ಮೀರಿದುದು. ಅರಿದಿಹೆನೆಂದಡೆ ಅರುಹಿಂಗಸಾಧ್ಯವು. ನೆನದಿಹೆ ನೆಂದಡೆ ನೆನಹಿಂಗೆ ಅಸಾಧ್ಯವು. ಭಾವಿಸಿದೆನೆಂದಡೆ ಭಾವಕ್ಕ ಸಾಧ್ಯವು. ವಾಙ್ಮನಕ್ಕಗೋಚರವನರಿವ ಪರಿ ಎಂತಯ್ಯ. ಗುರು ತೋರದನ್ನಕ್ಕರ ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿ ಉದಯವಪ್ಪುದೆಂಬ ಶೃತಿಹುಸಿಯೆ ಕೂಡಲ ಸಂಗಮದೇವ ನಿಮ್ಮ ಮಹಾನುಭಾವರ ಮಥನದಿಂದ ನಿಜವ ನೆಲೆಗೊಳಿಸಾ ಪ್ರಭುವೆ.

ಪೂರ್ವದಲ್ಲಿ ಬಸವರಸರು ತನ್ನ ನಿಲುಕಡೆಯ ನಿಜವ ತಾನರಿಯದಂತೆ ಇಲ್ಲಿ ಮಹಾನುಭಾವರ ಮಥನದಿಂದ ನಿಜವ ನೆಲಿಗೊಳಿಸಾ ಪ್ರಭುವೆ ಎಂದಂತೆ ಅಕ್ಕ ತನ್ನ ನಿಲುಕಡೆಯ ನಿಜವು ಎನ್ನಿಂದ ಕೇಳಿ ಸ್ವಯವಾದಳು. ಏಕೆಂದರೆ ನಿಜವ ನೆಲೆಗೊಳ್ಳಲು, ಕಲ್ಪಿತನಾಗಿ ತಿಳಿದುನೋಡಿಹೆನೆಂದಡೆ ಅಸಾಧ್ಯವು. ಅದು ಅರಿದಿಹೆನೆಂದಡೆ ಅರುವಿಂಗ 'ಸಾಧ್ಯವು, ನೆನದಿಹೆನೆಂದಡೆ ನೆನಹಿಂಗೆ ಅಸಾಧ್ಯವು. ಭಾವಿಸಲು ಅಸಾಧ್ಯವು ವಾಙ್ಮನಕ್ಕಗೋಚರವಾಗಿಹ ಘನವು, ಅದನ್ನು ಅರಿವುದು ಹೇಗೆ ? ಗುರುವಾಗಿ ಅರಿಯಹೋದರೂ ಅಸಾಧ್ಯವು. ಶಿಷ್ಯನಾಗಿ ಶ್ರವಣ ಮಾಡಿದರೂ ಅಸಾಧ್ಯವು. ಈರ್ವರ ಮಧ್ಯದಲ್ಲಿ ತಾನೆ ತಾನಾಗಿಹ ಬೆಳಗುಳ್ಳ ಘನ, ಸ್ವಯಂಜ್ಯೋತಿ ಶಿಷ್ಯರ ಮರವು ಆಗದು, ಗುರುವಿನ ಅರುವು ಆಗದು, ಏನೊಂದಾಗದ ಘನವದು ಅದು ಸ್ವಯಂಜ್ಯೋತಿ. ಅದರ ನಿಜವು ಯತಾರ್ಥ ಜ್ಞಾನವು ಎನ್ನಿಂದ ಕೇಳಿ ಸ್ವಯವಾದಳು.

ಗುಹೇಶ್ವರಲಿಂಗ ಸಾಕ್ಷಿಯಾಗಿ ಮಹಾದೇವಿಯಕ್ಕನ ನಿಲುವ ಕೊಂಡಾಡುವುದಕ್ಕೆ ತೆರಹಿಲ್ಲ ಕಾಣಾ ಮಡಿವಾಳ ಮಾಚಯ್ಯ : ಪ್ರಭುದೇವ, ತನ್ನ ದೇಹವೆಂಬ ಗುಹೆಯಲ್ಲಿ ಬೆಳಗುವ ಬೆಳಗುಳ್ಳ ಘನವಾಗಿಹ ಚೈತನ್ಯದ ಸಾಕ್ಷಿಯಾಗಿ ಮಹಾದೇವಿಯಕ್ಕನ ನಿಲುವ ಕೊಂಡಾಡುವುದಕ್ಕೆ ನಿಲುಕದ್ದಾಗಿದೆ.

ಗಗನದ ನಿಲುವು ಅದಾರು ಕೊಂಡಾಡುವುದು ? ಅದರ ಉದ್ದ, ಅಗಲ, ಅದಾರ ಅಳತೆಗೆ ನಿಲುಕುವುದು. ಅಧಃ ಊರ್ಧ್ವ ಅದಾರು ಅಳತೆ ಮಾಡುವುದು, ದೂರ ಸಮೀಪ ಅದಾರು ಅಳತೆ ಮಾಡುವುದು. ಗಗನದ ಒಳಗೆ, ಹೊರಗೆ ಅದಾರು

ಗಣಿಸುವುದು ಗಗನ ನಿಲುವು ಗಗನವಾಗಿ ನೋಡಿದವಂಗೆ ಸಾಧ್ಯವು. ಅದೊಂದು ತಾನೊಂದು ಆದವಂಗೆ ಅಸಾಧ್ಯವು ಹೇಗೋ ಹಾಗೆ.

ತನ್ನ ತಾನರಿದ ಶರಣೆ ಅಕ್ಕ, ಉಪಮಿಸದ ಅಕ್ಕ, ಷಟ್‌ಸ್ಥಲವ ಕಾಣದ ಅಕ್ಕ, ನಿಃಸ್ಥಲದಲ್ಲಿ ನಿಂತು, ನಿಸ್ಥಲವ ಕಾಣದೆ ನಿಜವರಿದಿಹ ಅಕ್ಕ, ಭಾವ ನಿರ್ಭಾವ ಕಾಣದ ಅಕ್ಕ, ಅರು ಹೃದಯವಾಗಿಹ ಅಕ್ಕ ನಡೆನುಡಿ ಗೆಟ್ಟ ಅಕ್ಕ ನುಡಿಗೆಡೆಗೊಡದ ಘನದ ಒಡಬಂದಿಯಾಗಿಹ ಅಕ್ಕನ ನಿಲುವ ವರ್ಣಿಸುವರೆ, ಅವರ್ಣೀಯವು ನುಡಿಗೊಳಪಡದವರ ನಿಲುವ ಅದನೆಂತು ವರ್ಣಿಸುವುದು. ನುಡಿಗೊಳಪಟ್ಟವರ ನಿಲುವ ವರ್ಣಿಸಬಹುದು, ಶಬ್ದಬ್ರಹ್ಮರ ನಿಲುವ ವರ್ಣಿಸಬಹುದು. ಮಾತಿಂಗೆ ಒಳಪಟ್ಟವರ ನಿಲುವ ವರ್ಣಿಸಬಹುದು ಮೌನದ ಮೌನವಾಗಿಹ ಘನವು, ಘನಕ್ಕೆ ಘನವು ಅದಾವ ಭಾಷೆಯಿಂದ ವಿಸ್ತರಿಸುವುದು. ತಾನೆ ತಾನಾಗಿಹ ನಿಲುವುಳ್ಳ ಶಬ್ದಮುಗ್ಧತ್ವವು, ಕೊಂಡಾಡುವುದಕ್ಕೆ ತೆರಹಿಲ್ಲ ಕಾಣಾ ಮಡಿವಾಳ ಮಾಚಯ್ಯ ಎಂದು ಅಕ್ಕನ ನಿಲುವ ಕೊಂಡಾಡುವುದಕ್ಕೆ ತೆರಹಿಲ್ಲ ಕಾಣಾ ಮಡಿವಾಳ ಮಾಚಯ್ಯ ಎಂದು ಉತ್ತರಿಸಿಹನು.

ತನ್ನ ತಾನರಿತ ಶರಣನ ಸುಳುಹು ಜಗಕ್ಕೆ ಪಾವನ ಅವರು ಅಘಟಿತ ಘಟಿತರು, ಶಬ್ದಮುಗ್ಧರು ನಿಶಬ್ದವೇದಿಗಳು ಗಗನವು ಗಗನವೆ ? ನಿಶಬ್ದ ಬ್ರಹ್ಮವು ಅದು ನಿಶಬ್ದಬ್ರಹ್ಮವು ಅವರು ಹೊಗಳತೆಗೆ ಸಿಕ್ಕದ ಸ್ವಯಂಜ್ಯೋತಿಗಳು ಪರತಂತ್ರ, ಸ್ವತಂತ್ರವೆನ್ನಲು ಬಾರದ ಅನುಪಮರು ಅಪ್ರತಿಮರು.

**200**

**ನಡದಡೆ ನಿರ್ಗಮನಿ!**
**ಸುಳಿದಡೆ ಗತಿವಿರಹಿತನನು ಏನೆಂಬೆನು? ಎಂತೆಂಬೆನು?**
**ಅಘಟಿತಘಟಿತನನು, ಏನೆಂಬೆನು ಎಂತೆಂಬೆನು?**
**ಅಖಂಡಿತ ಮಹಿಮನನು ಏನೆಂಬೆನು ಎಂತೆಂಬೆನು?**
**ಆದಿಯಿಂದತ್ತತ್ತ ಗುಹೇಶ್ವರನ ಶರಣ ಅಲ್ಲಯ್ಯನ ಸುಳುಹು**
**ಜಗಕ್ಕೆ ಪಾವನ!** ॥ 1281 ॥

**ತಾತ್ಪರ್ಯ** : ನಡದಡೆ ನಿರ್ಗಮನಿ, ಸುಳಿದಡೆ ಗತಿ ವಿರಹಿತನನೇನೆಂಬೆ, ನೆಂತೆಂಬೆ : ಆಶ್ಚರ್ಯ ನಡೆದರೂ ನಡೆಯದವನು, ನುಡಿದರೂ ನುಡಿಯದವನು. ಘಟದೊಳಿರುವ ಆಕಾಶ, ಘಟ ಹೋದಂತೆ ಬಂದಂತಾಗಿ ಕಂಡರೂ ಅದರೊಳಿರುವ ಆಕಾಶ ಹೋದುದಲ್ಲ, ಬಂದುದಲ್ಲ, ಇದ್ದಂತಿದ್ದ ಘನವು ಶಬ್ದಮುಗ್ಧವು ತನ್ನ ತಾನರಿತ ಶರಣ ಅತೀಂದ್ರಿ. ಇಂದ್ರಿಯಂಗಳು ನಡೆಯಲಿ ನಿಲ್ಲಲಿ, ತಾನು ಅತೀಂದ್ರಿಯನಾದುದರಿಂದ ನಿರ್ಗಮನಿಯು, ಇವರದು ವಿಪರೀತ ಚಾರಿತ್ರ, ನಡೆದವರ ನುಡಿದವರ ಚಾರಿತ್ರವ ಹೇಳಬಹುದು. ನಡೆದು ನಡೆಯದವರು ಅನುಪಮರು. ಇವರು ಗುರುವಿಂಗೆ ಗುರುವಾಗಿಹ ಘನವ ಕಂಡವರು. ಲಿಂಗಕ್ಕೆ ಲಿಂಗವಾಗಿಹ ಶಬ್ದಮುಗ್ಧತ್ವದ ರಹಸ್ಯವ ತಿಳಿದವರು. ಇವರು ನಿಜವರಿತು ಅಚ್ಚ ಸುಖದ ಸುಖದವರಾಗಿಹ

ಅವಿರಳಾನಂದಮಯರು. ಇವರು ನಿಸ್ಸೀಮರು. ಬೋಧನಷ್ಟ ಮಾಡಿ ತನ್ನ ಕಂಡವರು. ತನ್ನಿಂದ ತನ್ನ ಅರಿತ ಸ್ವಮಹಿಮರು. ಚಿತ್ ಎಂಬುದನರಿತು ಚಿದಾಕಾಶವ ತಾನಾಗಿಹ ನಿಶಬ್ದವೇದಿಗಳು. ಅರುವಿಂಗರುವಾಗಿಹ ಘನಕ್ಕೆ ಘನರು. ಶೃತಿಗಳೆ ನಷ್ಟ ಮಾಡಿದ ಶೃತಿಗಗೋಚರರು ಆದುದರಿಂದ ಇವರ ಸುಳಿದಾಟ ಆವಾವ ಬಯಕೆ ಯಿಂದುಕ್ತವಾದುದಲ್ಲ, ಈ ಮಹಾಂತಂಗೆ ಬೇಕೆಂಬುದಿಲ್ಲ, ಬೇಡೆಂಬುದಿಲ್ಲವಾದ್ದರಿಂದ ಕರಣಂಗಳು, ಲಿಂಗಕಿರಣಂಗಳು ಆಗಿರುವುದರಿಂದ ಸುಳಿದಡೆ ಗತಿವಿರಹಿತನೇನೆಂಬೆ, ನೆಂತೆಂಬೆ. ಲಿಂಗಕಿರಣಂಗಳಾಗಿಹ ಮಹಾಂತ ಲಿಂಗ ಒಂದಾಗಿರ್ದ ಜಂಗಮ, ಜಂಗಮ ಒಂದಾಗಿರ್ದ ಲಿಂಗ, ಉಪಮೆಗೆ ತಂದು ಎರಡೆನ್ನಬಹುದೆ ? ಅಪೂರ್ವಿಕ ಭಕ್ತ, ಅಪೂರ್ವಿಕ ಜಂಗಮ, ಅತೀಂದ್ರಿಯರು, ಇಂದ್ರಿಯಂಗಳ ಶುಭಾಶುಭವ ಕಾಣದವರು. ಎಲ್ಲೆಲ್ಲೂ ಅತೀಂದ್ರಿಯತ್ವ ಸಿದ್ಧಿಸಿದವರು. ಇವರದು ಅಪೂರ್ವ ಸಾಹಿತ್ಯ. ನಿರ್ಗಮನಿಗಳಾಗಿಹ ನಡೆ, ನಡೆದರೂ ನಡೆಯದ ನಡೆ, ನುಡಿದರೂ ನುಡಿಯದವರಾಗಿಹ ನಿಶಬ್ದಬ್ರಹ್ಮವು.

ದೇಹವಾಗಿ ನಡೆದವರು ಉಂಟು ದೇಹಿಯಾಗಿ ನಡೆದವರು ಉಂಟು. ದೇಹಿಗೆ ದೇಹಿಯಾಗಿಪ್ಪ, ಭೇದವ ಬಲ್ಲವರು ಸಿಕ್ಕುವುದು ವಿರಳ. ಇವರ ಸುಳಿದಾಟ ಸುಳಿಯದ ಸುಳಿದಾಟ ಸತ್ಯಜ್ಞಾನಾನಂದವೆ ತಾನಾಗಿಹ ಶರಣನ ಸುಳಿದಾಟ, ಈ ಮಹಾಂತ ಸುಳಿದಡೆ ಗತಿವಿರಹಿತನೇನೆಂಬೆ ಎಂತೆಂಬೆ ! ಶರಣ,ಸುಳಿದಡೆ ಗಮನವಿಲ್ಲದೆ ಸುಳಿಯಬಲ್ಲ ನಿರ್ಗಮನಿಯಾಗಿ ನಿಲಬಲ್ಲ ಶರಣ. ಅದಕ್ಕದೆ ಪರಿಣಾಮ ಅದಕ್ಕದೆ ಸಂತೋಷ ಅವರು ಜಗದಾರಾಧ್ಯರೆಂಬೆ, ಬೀಸುವ ಗಾಳಿ ಸುಳಿದಾಡುವುದು ಸಹಜ, ಅದರ ಗತಿ ಹೇಳುವುದು ಸಹಜವಾಗಿದೆ. ಆಕಾಶದ ವ್ಯಾಪಕತೆ ಹೇಗೆ ಹೇಳುವುದು. ಅದು ಗತಿವಿರಹಿತವಾದುದು, ಘಟದ ಸುಳಿದಾಟ ಹೇಳಬಹುದು. ಘಟಾಕಾಶದ ಸುಳಿದಾಟ ಅದನೆಂತು ವರ್ಣಿಸುವುದು. ಶರಣ ದೇಹಿಗೆ ದೇಹಿಯಾಗಿರ್ಪ ಶರಣ, ದೇಹಿಗೆ ಗತಿವಿರಹಿತರು ಎಂದು ಹೇಳುವಲ್ಲಿ, ದೇಹಿಗೆ ದೇಹಿಯಾದವನ ಸುಳಿದಾಟ ಅವರು ಗತಿವಿರಹಿತನೇನೆಂಬೆ ಎಂತೆಂಬೆ.

ಜಡಭಾವಿಯು ಗತಿಯು ಹೇಳಬಹುದು. ಅಜಡ ಭಾವಿಯ ಗತಿಯು ಹೇಳಬಹುದು. ಜಡಾಜಡನ ಕಾಣದ ಘನಮಹಿಮನ ಸುಳುಹು ಅದೆಂತು ವಿವರಿಸುವುದು, ಗಗನದ ಗತಿ ಏನೆಂಬೆ, ಎಂತೆಂಬೆ ಮುನ್ನವು ಇದ್ದಂತೆ ಇದೆ. ಇಂದೆಯೂ ಇದ್ದಂತೆ ಇದೆ. ಎಂದೆಂದೂ ಇದ್ದಂತಿದೆ. ಇದ್ದಂತಿದ್ದ ಘನ ಏನೆಂಬೆ ಎಂತೆಂಬೆ ಶರಣ ಮುನ್ನ ಮುನ್ನಲಾದ ತನ್ನ ಇರುವಿನ ಘನದಿರುವು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ನಿತ್ಯನಾಗಿಪ್ಪ ಶರಣ, ತನ್ನಿಂದ ತಾನಾದ ಶರಣ, ಘನಕ್ಕೆ ಘನನಾಗಿಹ ಶರಣನ ಗತಿವಿರಹಿತವು, ಅದು ಕಥನಕ್ಕೆ ಒಳಪಡುವುದೆಂದು.

ಅಘಟಿತ ಘಟಿತನ ಏನೆಂಬೆ ಎಂತೆಂಬೆ ಅಸಾಧ್ಯವ ಸಾಧಿಸಿದ ಸ್ವಮಹಿಮನು. ಅರಿಯದರುವು ತನ್ನಿರುವು ಆಗಿಹ ಸ್ವಮಹಿಮ ತನ್ನ ಮರೆತುದಿಲ್ಲ, ಅರಿತುದಿಲ್ಲ, ಅರುವ ಮರವುಗಳ ಮರೆದು ತನ್ನಿರುವಿನ ಅರುವಾಗಿಹ ಮಹಾಂತನಾದುದರಿಂದ ಅಘಟಿತ ಘಟಿತನ ಘನವನೇನೆಂದು ಹೇಳುವುದು, ಎಂತೆಂದು ಹೇಳುವುದು.

ಅಂಗೈಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ಇದು ಅಘಟಿತ

ಘಟಿತನ ಸ್ವಯವಾದ ಇರವು, ಈ ಅಘಟಿತ ಘಟಿತನ ಏನೆನ್ನುವುದು, ಎಂತೆನ್ನುವುದು, ಅಂಗೈಯ ಅಘಟಿತ ಘಟಿತನ ಅಂಗೈಯ ಷಡಂಗವ ಕಾಣದ, ಅಂಗೈಯ ಶಬ್ದಮುಗ್ಧವಾಗಿಹ ಅಂಗೈ ನಿರುಪಮವಾಗಿಹ ಅಂಗೈ ಇದು ಅಂಗೈ ಎನ್ನದು ನಿಂತಿದೆ. ಲಿಂಗವೆಂಬುದು ನಿಂತಿದೆ. ಅಂಗ, ಲಿಂಗ ಬೇರೆಂಬುದು ನಿಂತಿದೆ. ಒಂದು ಎಂಬುದು ನಿಂತಿದೆ, ನುಡಿಗೆಡೆಗೊಡದ ಘನದಿರುವಿನ ಅರುವಾದುದರಿಂದ ಏನೆಂಬೆ, ಎಂತೆಂಬೆ ಇಂತಪ್ಪ ಅಕಥನೀಯ ಲಿಂಗದಲ್ಲಿ ನೆಟ್ಟ ನೋಟ ಕಂಗಳ ನೋಟ, ಲಿಂಗ ನೋಟ, ಕಂಗಳದ ಕಂಗಳಾಗಿಹ ನೋಟ, ಮಂಗಳಮಯನ ನೋಟ, ನೋಟವು ಮಂಗಳಮಯವು, ಅಂಗೈಯ ಮಂಗಳಮಯವು, ಲಿಂಗವು ಮಂಗಳಮಯವು. ಮೂರೊಂದಾದ ಇರವು, ಸ್ವಯ ಇರುವು, ತನ್ನಿರುವು, ಇದು ಅಸಾಧ್ಯವ ಸಾಧಿಸಿದುದು ಇದು ಅಘಟಿತ, ಘಟಿತನ ಕಾರ್ಯವು ಅಂಗೈ ತಾನು, ಲಿಂಗ ತಾನು, ಕಂಗಳು ತಾನು, ತಾನೆನ್ನದ ತನ್ನಿರುವು ಎಲ್ಲಿ ನೋಡಿದರೂ ನುಡಿಗೆಡೆಗೊಡದ ಘನವಾಗಿಹ ತನ್ನಿರವ ಪ್ರಜ್ವಲಿಸಿದುದು ಅಘಟಿತ ಘಟಿತನ ನಿಲುವಲ್ಲವೆ ? ಇದನ್ನು ಭಾಷಾಂತರ ಮಾಡಲು ಇದಕ್ಕಾವ ಭಾಷೆ ತರಬೇಕು, ಭಾಷೆ ನಿಂತುದರಿಂದ ಏನೆಂಬೆ ಎಂತೆಂಬೆ ಎಂದು ಹೇಳಿಹರು.

ತನ್ನ ಅರಿದ ಮಹಾಂತ ಇದಿರ ಆವಾವುದು ಕಾಣದ ಮಹಾಂತ. ಅರುವು ಮರವೆಂಬ ಕುರುಹ ಕಾಣದ ಮಹಾಂತ. ಅರುವರಿಯ ಹೋಗಿ ಅರುವೆಂಬುದು ಕಾಣ, ಕಾಣದುದ ಕಂಡುದರಿಂದ ಬೆರಗು, ಬೆರಗಿನೊಳಗೆ ಕರಿಗೊಂಡುದು. ಅಘಟಿತ ಘಟಿತನ ನಿಲುವು ಏನೆಂಬೆ ಎಂತೆಂಬೆ, ಅರಿಯದರುವು ತನ್ನಯ ನಿಜದಿರುವಾಗಿ ಕರಿಗೊಂಡುದು, ಅಘಟಿತ ಘಟಿತನ ನಿಲುವು ತನ್ನಿರವು ಅರಿಯದರುವು ಆಯಿತ್ತೆ ? ತನ್ನೊಳ ಅನಾತ್ಮವೆಂಬುದು ಕಾಣದಂತಾಯಿತ್ತು. ಆತ್ಮನೆಂಬುದು ಕಾಣದಂತಾಯಿತ್ತು. ಇಹವು ಕಾಣದಂತಾಯಿತ್ತು. ಪರವು ಕಾಣದಂತಾಯಿತ್ತು. ತಾನೆ ತಾನಾಗಿ ನಿಂದಿತ್ತು. ಏನೆಂಬೆ, ಎಂತೆಂಬೆ ಶಬ್ದಮುಗ್ಧನಾದುದು ಏನೆಂಬೆ, ಎಂತೆಂಬೆ.

ಅಖಂಡಿತ ಮಹಿಮನ ಏನೆಂಬೆ ಎಂತೆಂಬೆ, ವಾಙ್ಮನಕ್ಕೆ ಬಾರದುದು ಅಖಂಡಿತ ಮಹಿಮವು. ಏನೆಂಬೆ, ಎಂತೆಂಬೆ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು. ಏನೆನ್ನುವುದು, ಎಂತೆನ್ನುವುದು, ಕರ್ಮಿ ಎನ್ನಲೆ ? ಕರ್ಮ, ಅಕರ್ಮವ ನತಿಗಳೆದ ನಿರವಧಿ, ನಿರಂತರ, ಉಪಾಧಿ ಎಂಬುದು ಕಾಣ, ನಿರುಪಾಧಿಯೆಂಬುದು ಕಾಣ. ಸಂಗದಿಂದುಕ್ತವಾದುದು ಕಾಣ. ಅಸಂಗವೆಂಬುದು ಕಾಣ, ಜಡವ ಕಾಣ, ಅಜಡವ ಕಾಣ, ಚೇತನ ಕಾಣ, ಚೈತನ್ಯವೆಂಬುದು ಕಾಣ, ನಿತ್ಯನಿರಂಜನ ತಾನೆಂದರಿದ ನಿರುಪಮ. ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ಮಹಾಂತ ಅಖಂಡಿತ. ಈ ಅಖಂಡಿತ ನುಡಿಗೆಡೆಗೊಡದ ಘನನಾದುದರಿಂದ ನುಡಿಗೆ ನಿಲುಕದ ಘನ.

ನೆನಹಿಂಗೆ ನಿಲುಕದ ಘನ, ಭಾವಕ್ಕಿಂಬುಕೊಡದ ಘನ, ಘನಕ್ಕೆ ಘನನು ನಿರವಧಿ ಯು. ಇಂತಪ್ಪ ನಿರವಧಿಯ ನಿಲುವು ತನ್ನದಾಗಿಹ ಮಹಾಂತ, ನರರು, ಸುರರು, ಪಿಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ರೂಹಿಸಬಲ್ಲೆನೆ ? ಅಯ್ಯ ದೇವಗಣ, ರುದ್ರಗಣ, ಪ್ರಮಥಗಣ, ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ

ಭಾವಿಸಬಲ್ಲೆನೆ ಅಯ್ಯ, ಸತ್ಯರು ಮುಕ್ತರು ಎಂಬ ಮಹಾಮಹಿಮರು ಚಿದ್ ಬ್ರಹ್ಮಾಂಡವೆಂಬ ಭಾಂಡದಲ್ಲಿ ಅಡಗಿಹರಾಗಿ ನಾನವರ ಅರಿಯಬಲ್ಲೆನೆ ? ಇಂತೀ ತ್ರಿಭಾಂಡವನೊಳಕೊಂಡು ಅಖಂಡಿತ ಘನಪೂರ್ಣವಪ್ಪ ತನ್ನಿರುವೆ ಅರುವೆಂದರಿದ ನಿಜಲಿಂಗೈಕ್ಯ ರೂಹಿಸಲಿಲ್ಲಾಗಿ ಭಾವಿಸಲಿಲ್ಲ, ಭಾವಿಸಲಿಲ್ಲಾಗಿ ಅರಿಯಲಿಲ್ಲ, ಅರಿಯಲಿಲ್ಲಾಗಿ ಅರಿಯಲಿಲ್ಲದಿರುವೆ ತಾನಾಗಿ ಗುಹೇಶ್ವರನೆಂಬುದು ತೆರಹಿಲ್ಲ. ಶರಣನೆಂದರೆ ತನ್ನ ತಾನರಿತ ಮಹಾಂತ, ಅರಿಯಲಿಲ್ಲದರುವಾಗಿಹ ಮಹಾಂತ, ಭಾವಿಸಲು ಬಾರದ ಮಹಾಂತ, ರೂಹಿಸಲು ಬಾರದ ಮಹಾಂತ, ಅರಿಯ ಬಾರದ ಅರಿಯದರುವು ಏನೊಂದನ್ನು ಅರಿಯದ ಅರುವಾಗಿಹ ಅಪ್ರತಿಮಗಮ್ಯನಾದುದರಿಂದ ಏನೆನ್ನುವುದು, ಎಂತೆನ್ನುವುದು. ಗುಹೇಶ್ವರನ ತನಗಿಂತನ್ಯವಾಗಿ ಕಾಣದ ಅಪ್ರತಿಮಮಗಮ್ಯ ಏಕಭಾವವದು ಎಂತೆನ್ನುವದು.

ಆದಿಯಿಂದತತ್ತ ಗುಹೇಶ್ವರನ ಶರಣ, ಅಲ್ಲಯ್ಯನ ಸುಳುಹು ಜಗಕ್ಕೆ ಪಾವನ, ಗುಹೇಶ್ವರನ ಶರಣ, ಆದಿಯಿಂದತ್ತತ್ತ ಎಂಬುದು ಬಹುಗಹನಾರ್ಥವು. ಕುರುಹು ಕೂನದಿಂದತ್ತತ್ತ ಎಂದು ಸೂಚಿಸಿದಂತಾಗುತ್ತದೆ. ಕುರುಹಾಗಲಿ, ಸಂಕೇತವಾಗಲಿ, ಆದಿ ಅನಾದಿ ಅಲ್ಲವೆ ? ಶೂನ್ಯ ಆದಿ ಅಲ್ಲವೆ ? ನಿಶೂನ್ಯ ಅನಾದಿ ಅಲ್ಲವೆ ? ರೂಪ ಆದಿ, ನಿರೂಪ ಅನಾದಿ ಅಲ್ಲವೆ ? ಲಿಂಗದ ಕುರುಹು ಆದಿ ಅಲ್ಲವೆ ? ಲಿಂಗ, ಲಿಂಗ ಸಚ್ಚಿದಾನಂದ ಸಚ್ಚಿದಾನಂದ ಎನ್ನುವುದು ಅನಾದಿ ಅಲ್ಲವೆ ? ಖಂಡವೆಂಬುದು ಆದಿ, ಅಖಂಡವೆಂಬುದು ಅನಾದಿ ಅಲ್ಲವೆ, ಇವೆರಡಕ್ಕೂ ಸಂಯೋಗವಿಲ್ಲದುದು ಅತ್ತತ್ತ ಅಲ್ಲವೆ ? ಅತ್ತತ್ತವೆಂಬುದು ಅರಿಯಲಿಲ್ಲದರುವಲ್ಲವೆ ? ನಿಮ್ಮಿಂದ ನಿಮ್ಮ ಅರಿದುದರಿದು ನೋಡಿ ಗುಹೇಶ್ವರನ ಶರಣ ಅಲ್ಲಯ್ಯನ ಸುಳುಹು ಜಗಕ್ಕೆ ಪಾವನವೆಂಬುದು ತಾನೆ ಸ್ವತಃ ಸಿದ್ಧಿಸುವುದು. ಇಂತಪ್ಪ ಪರತತ್ವ ನಿಜಸಂಯುಕ್ತನ ಸಂಚಾರ, ಸುಳುಹು ಜಗಕ್ಕೆ ಪಾವನವೆಂದು ಹೇಳಿಹರು.

**201**

**ನಡದಡೆ ನಡೆಗೆಟ್ಟ ನಡೆಯ ನಡೆವುದಯ್ಯಾ.**
**ನುಡಿದಡೆ ನುಡಿಗೆಟ್ಟ ನುಡಿಯ ನುಡಿವುದಯ್ಯಾ.**
**ಒಡಲ ಹಿಡಿದಡೆ ಹಿಡಿಯದೆ ಹಿಡಿವುದಯ್ಯಾ.**
**ಕೂಡುವಡೆ ಕೇಡಿಲ್ಲದ ಕೂಟವ ಕೂಡುವುದಯ್ಯಾ,**
**ಗುಹೇಶ್ವರಾ ನಿಮ್ಮಲ್ಲಿ ನಿಲುವುದಯ್ಯಾ.** ॥ 1280 ॥

**ತಾತ್ಪರ್ಯ** : ನಡದಡೆ ನಡೆಗೆಟ್ಟು ನಡೆವುದಯ್ಯ : ನಡೆಗೆಟ್ಟ ನಡೆ ಆವುದು ಗೊತ್ತೆ ? ಗುಹೇಶ್ವರ ನಿಮ್ಮಲ್ಲಿ ನಿಂತವರು ನಡೆಗೆಟ್ಟ ನಡೆ ನಡೆವುದು . ಗುಹೇಶ್ವರನಲ್ಲಿ ನಿಂತವರು ಇವರು ಗುಹೇಶ್ವರ ನರಿಯಹೋಗಿ ಗುಹೇಶ್ವರನೆ ತಾನಾದವರು. ಇವರ ಅಹಮತ್ವನಷ್ಟವಾಗಿದೆ. ಗುಹೇಶ್ವರನರಿಯ ಹೋದವರು ಅಹಮಿಲ್ಲದ ಚಿದ್ಘನ. ಶಬ್ದಮುಗ್ಧ ತನ್ನಿಂದ ತನ್ನ ಅರಿತವನು, ಮಿಗೆ ಮಿಗೆ ಮೀಸಲವಾಗಿಹ ತತ್ವಬಲ್ಲವನು. ಎಂಜಲ ಮಾತು

ಸೇರದವನು. ಶಬ್ದದ ಹಂಗುಹರಿದವನು ಗುಹೇಶ್ವರನು. ಸಕಲ ದೇಹವೆಂಬ ಗುಹೆಯೊಳಗಿದ್ದು ಚೈತನ್ಯ ಘನವು, ಇದು ದೇಹವೆಂಬ ಗುಹೆಗೆ ಈಶ್ವರನೆನಸಿಕೊಂಡಿರುವು. ಮಹಾಘನ, ಅನುಪಮ, ಈ ಅನುಪಮ ತಾನಾಗಿಹ ಮಹಾಂತ ಇಂತಪ್ಪ ಮಹಾಂತ ಗುಹೇಶ್ವರ ನಿಂತವರು. ಅವರದು ನಡೆಕೆಟ್ಟು ಹೋಗಿದೆ. ಅದಕ್ಕಾಗಿ ನಡೆಕೆಟ್ಟ ನಡೆಸೂತಕವ ಮೆಟ್ಟಿದವರು. ಆರು ಗೊತ್ತೆ ? ಪ್ರಪಂಚ ಸತ್ಯವೆನ್ನುವರು ಕೋಟಿ, ಪ್ರಪಂಚ ಮಿಥ್ಯೆ ಎನ್ನುವರು ಕೋಟ್ಯಾನುಕೋಟಿ ಪರಮಾರ್ಥಸತ್ಯ ಎನ್ನುವರು ಕೋಟ್ಯಾನು ಕೋಟಿ ಪರಮಾರ್ಥ ಮಿಥ್ಯೆ ಎನ್ನುವರು ಕೋಟ್ಯಾನುಕೋಟಿ ಸಮದೃಷ್ಟಿಯಲ್ಲಿ ನಿಂತು ತಮ್ಮ ತಾವರಿತವರನೊಬ್ಬರನು ಕಾಣೆ ಕೂಡಲಸಂಗಮದೇವಾ.

ಆರು ಸಮದೃಷ್ಟಿಯುಳ್ಳವರಾಗಿ ತಮ್ಮ ತಾವರಿತಿಹರು. ಅವರದು ನಡೆಕೆಟ್ಟ ನಡೆ, ನುಡಿಕೆಟ್ಟ ನುಡಿ, ಒಡಲ ಹಿಡಿಯದ ಒಡಲುಳ್ಳವರು. ಕೇಡಿಲ್ಲದ ಕೂಟವ ಕೂಡಿದವರು. ಗುಹೇಶ್ವರ ನಿಲುವಿನಲ್ಲಿ ನಿಂತವರು. ಅಹಮತ್ವ ಕೆಟ್ಟ ಸಂಕೇತ, ಅಲ್ಲಿ ದೇಹೋಹಂ, ನಾಹಂ, ಕೋಹಂ, ಸೋಹಂ, ಚಿದಹಂ, ಇವಾವು ಇಲ್ಲವಾಗಿಹವು. ಇವೆಲ್ಲವುಗಳ ಅಹಮತ್ವನತಿಗಳೆದ ದೃಷ್ಟಿ, ನಿರಾಲಂಬ ದೃಷ್ಟಿ, ನಿಜದೃಷ್ಟಿ.

ಅಹಂತ್ವವೆ ನಷ್ಟವಾದ್ದರಿಂದ ಕರ್ತೃತ್ವವಿಲ್ಲಾಗಿ ಕರ್ಮವಿಲ್ಲ, ಕರ್ಮವಿಲ್ಲಾಗಿ ಜನನವಿಲ್ಲ, ಜನನವಿಲ್ಲಾಗಿ ಮರಣವಿಲ್ಲ, ಮರಣವಿಲ್ಲಾಗಿ ಭೂತಾತ್ಮ ಪ್ರಕೃತಿ ಕರಣಾದಿಗುಣಗಳು, ಮುನ್ನವೆ ಇಲ್ಲ. ಹಿಂದಣ ಸ್ಥಿತಿ ಇಲ್ಲ. ಮುಂದಣಲಯವಿಲ್ಲ, ಆದಿ ಮಧ್ಯಾವಸಾನವಿಲ್ಲ, ಬಿಚ್ಚಿ ಬೇರಿಲ್ಲ, ಬೆರಸಿ ಒಂದಿಲ್ಲ, ಉಪಮಾತೀತ ಕೂಡಲಚೆನ್ನಸಂಗಾ ನಿಮ್ಮ ಶರಣ. ಅಂತರಂಗದಲ್ಲಿ ಭಾವಿಸುವನಲ್ಲ, ಬಹಿರಂಗದಲ್ಲಿ ಬಳಸುವನಲ್ಲ, ಎರಡುವನತಿಗಳೆದ ತನ್ನಲ್ಲಿ ತಾನೆ ಸಹಜ ನೋಡಾ, ಅಂತರಂಗವಿಲ್ಲ, ಬಹಿರಂಗವಿಲ್ಲ, ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ.

ಶರಣಂಗೆ ಅಹಮತ್ವ ನಷ್ಟವಾದುದರಿಂದ ಪ್ರಪಂಚದ ಕರ್ತೃತ್ವನಲ್ಲ, ಪ್ರವೃತ್ತನಲ್ಲ, ನಿವೃತ್ತನಲ್ಲ, ಅಕರ್ತಾರೂಪವಾಗಿಹ ಪರಬ್ರಹ್ಮ ನುಡಿಗೆಡೆಗೊಡದ ಘನ ; ಆವಾವುದಕ್ಕೂ ಅವಕಾಶ ಕೊಡದ ಪರಿಪೂರ್ಣ ತನ್ನಿಂದ ತಾನಾದ ಅನುಪಮ. ಇಂತಪ್ಪ ಅನುಪಮಂಗೆ ಅದಾವ ನಡೆ, ಅದಾವ ಒಡಲು ? ಅದಾವ ಕರಣಂಗಳು ? ಇಲ್ಲದುದು ಇಲ್ಲವೆ ಇಲ್ಲ. ...

ಗಗನವು ಹೋದುದಲ್ಲ, ಬಂದುದಲ್ಲ ಅದು ಘಟದಲ್ಲಿರಲಿ, ಮಠದಲ್ಲಿರಲಿ, ಮೇಘದಲ್ಲಿರಲಿ, ಆವಲ್ಲಿ ಇದ್ದರೂ ತಾನು ನಿರಂತರವಾಗಿ ಇದ್ದಂತಿದ್ದ ಬಯಲು ಶರಣ, ಚಿತ್ ಸ್ವರೂಪನರಿತು, ಚಿದಾಕಾಶವೆ ತಾನಾಗಿಹ ಶಬ್ದಮುಗ್ಧ. ದೇಹವೆನ್ನಲಿ, ದೇಹಿ ಎನ್ನಲಿ, ವಿದೇಹಿ ಎನ್ನಲಿ, ತಾನು ಇದ್ದಂತಿರುವ ಸ್ವಯಲಿಂಗ, ಸ್ವಯಂಜ್ಯೋತಿ ಬಂದುದಾಗಿಲ್ಲ, ಹೋದುದು ಆಗಿಲ್ಲ, ನಿರ್ವಾಣವು, ಮೌನದ ಮೌನವಾಗಿಹ ಚಿಜ್ಯೋತಿ ಅವನೆಂತು ಮಾತಾಡುವುದು, ಅವನೆಂತು ಮೂಕನಾದನು. ಕಾಲಿಲ್ಲದವ ನಡೆವುದು ಅದೆಂತು, ಒಡಲಿಲ್ಲದವಂಗೆ ಬಹಿರಂಗವಾವುದು ? ಅಂತರಂಗವಾವುದು ? ಅಂತರಂಗ ಕಾಣ ಬಹಿರಂಗವು ಕಾಣ.

ಪ್ರಪಂಚ ಸತ್ಯ ಮಿಥ್ಯೆ ಪರಮಾರ್ಥ ಸತ್ಯ ಮಿಥ್ಯೆ ಎನ್ನುವ ಅಹಂತ್ವವೆ

ನಷ್ಟವಾಗಿರುವಲ್ಲಿ ಆ ಮಹಾಂತಂಗೆ ಪ್ರಪಂಚದ ಕರ್ತೃತ್ವವು ಇಲ್ಲ, ಪರಮಾರ್ಥದ ಕರ್ತವ್ಯವು ಇಲ್ಲ, ಅಕರ್ತೃವಿಂಗೆ ಕರ್ತೃತ್ವವೇತರದು, ಭೋಕ್ತೃತ್ವವೇತರದು, ಪರಮಸತ್ಯಕ್ಕೆ ಸತ್ಯವಾವುದು, ಮಿಥ್ಯೆಯಾವುದು ? ತೆರಹಿಲ್ಲದ ಘನ ನಾನಾವುದು, ನೀನಾವುದು, ಕರ್ಮವಾವುದು, ಮರ್ಮವಾವುದು, ಜನನವಾವುದು ? ಮರಣವಾವುದು ? ಪಂಚಭೂತಂಗಳಾವು, ಈ ಭೂತಂಗಳಿಂದೊಡಗೂಡಿದ ಭೂತಾತ್ಮವೆಲ್ಲಿ ? ಪ್ರಕೃತಿ ಎಲ್ಲಿ ? ಕರಣ ಗುಣಾದಿಗಳು ಮುನ್ನವೆ ಇಲ್ಲ, ಹಿಂದಿನ ಸ್ಥಿತಿ ಇಲ್ಲ, ಮುಂದಣ ಲಯವಿಲ್ಲ, ಆದಿ ಇಲ್ಲ, ಮಧ್ಯ ಇಲ್ಲ, ಅಂತ್ಯವು ಇಲ್ಲ, ಅನಂತವಾಗಿಹ ತನ್ನ ದಿವ್ಯದೃಷ್ಟಿಗೆ ಪ್ರವೃತ್ತಿ ನಿವೃತ್ತಿ ಎಂದು ವಿವರಿಸಿ ತಿಳಿದುದು ನಿಜ. ತಾನು ಬೇರಾಗಿದ್ದುದು ನಿಜ, ಪ್ರಪಂಚ ಕಂಡರೂ ತಾನೆ, ಪರಮಾರ್ಥ ಕಂಡರೂ ತಾನೆ, ಗುಹೇಶ್ವರ ನಿಮ್ಮಲ್ಲಿ ನಿಂತವಂಗೆ ಎರಡೆಂಬುದಿಲ್ಲ, ಒಂದೆಂಬುದಿಲ್ಲ, ಎರಡಿಲ್ಲ ಒಂದಿಲ್ಲ ಉಪಮಾತೀತ ನೋಡಯ್ಯ.

ಉಪಮಾತೀತರ ನಡೆ ನಡೆಕೆಟ್ಟನಡೆ, ಉಪಮಾತೀತರ ನುಡಿ, ನುಡಿಕೆಟ್ಟ ನುಡಿ, ನಡೆದು ನಿರ್ಗಮನಿಗಳಾಗಿರುವುದರಿಂದ ನಡೆಕೆಟ್ಟ ನಡೆ, ನುಡಿದುನಿಶಬ್ದರಾಗಿರುವುದರಿಂದ ನುಡಿಕೆಟ್ಟ ಕೆಟ್ಟನುಡಿ, ಒಡಲಿನ ಪೂರ್ವಾಶ್ರಯವೆ ಕೆಟ್ಟು, ಕರಣಂಗಳು ಗುಹೇಶ್ವರ ನಿಂತ ನಿಲುವುಳ್ಳವಗಳಾಗಿರುವುದರಿಂದ ಒಡಲ ಹಿಡಿಯದೆ ಹಿಡಿವುದಯ್ಯ ಎಂದು ಹೇಳಿಹರು.

ಶರಣನ ಇರವು ನುಡಿಗೆಡೆಗೊಡದ ಘನದಿರುವು ಆಗಿರುವುದರಿಂದ ಅವನು ನುಡಿಕೆಟ್ಟು ನುಡಿಯುವವನಾಗಿಹನು. ಎಡೆಯಿಲ್ಲದ ಪರಿಪೂರ್ಣನಾದುದರಿಂದ ನಡೆಕೆಟ್ಟು ನಡೆಯಾಗಿಹವು. ಇದು ಗಗನಸದೃಶವಾಗಿಹ ಜ್ಞಾನಾಮೃತ ತಾನಾಗಿರುವಲ್ಲಿ ನಡೆಕೆಟ್ಟ ನಡೆಯಾಗಿಹವು. ಕೂಡುವುಡೆ ಕೇಡಿಲ್ಲದೆ ಕೂಡುವುದಯ್ಯ ಗುಹೇಶ್ವರ ನಿಮ್ಮಲ್ಲಿ ನಿಲುವುದಯ್ಯ, ಅದು ಗುಹೇಶ್ವರನಲ್ಲಿ ನಿಂತ ನಿಲುವು ಅದು ಕೇಡಿಲ್ಲದ ಕೂಟವದು ಶರಣನ ಕೂಟ ಕೇಡಿಲ್ಲದ ಕೂಟ, ಕೂಟ ಕೂಟ ಅಗಲುವ ಕೂಟವಲ್ಲ, ಕೂಡಿ ಅಗಲುವ ಕೂಟ. ಕಲ್ಪಿತ ಕೂಟ, ಎರಡಾಗಿ ಕೂಡಿದ ಕೂಟ. ಭಾವಭ್ರಮಿತರ ಕೂಟ, ನೆನಹಿನಿಂದುಕ್ತವಾದ ಕೂಟ. ಚಿಂತನದಿಂದುಕ್ತವಾಗಿಹ ಕೂಟ, ತುಸು ಕಾಲ ಕೂಡಿದಂತಾಗುತ್ತದೆ ಪುನಃ ಅಗಲಿದಂತಾಗುವ ಕೂಟ, ಭ್ರಾಂತರ ಕೂಟ.

ತನ್ನ ಅರಿತವರ ಕೂಟ, ಕೇಡಿಲ್ಲದ ಕೂಟ, ತನ್ನಯ ಕೂಟ, ಆರಾರಿಂದಲೂ ಕೂಡದ ಕೂಟ, ತನ್ನಿಂದ ಅಗಲದ ಕೂಟ, ಕೂಡದಗಲದ ಕೂಟ, ಮರವರುವಿಂಗೆ ಮೀರಿದ ತನ್ನಯಕೂಟ, ಗುಹೇಶ್ವರ ತಾನಾಗಿಹಕೂಟ ತಾನೆ ತಾನಗಿಹಕೂಟ.ನಿಮ್ಮಲ್ಲಿ ನಿಂತಕೂಟ ನಿಶ್ಚಿಂತಕೂಟ ಇದು ಅಚಿಂತ್ಯಕೂಟ ಮನಮೇರೆ ದಪ್ಪಿದ ಕೂಟ. ಭಾವಕ್ಕಿಂಬುಕೊಡದಕೂಟ, ನಡೆಗೆಡೆಗೊಡದಕೂಟ, ನುಡಿಗೆಡೆಗೊಡದಕೂಟ, ಗುಹೇಶ್ವರ ಲಿಂಗ ವೇಧಿಸಿದವರಕೂಟ, ಇದು ತನ್ನಲ್ಲಿ ತಾನು ನಿಂತಕೂಟ, ಕೇಡಿಲ್ಲದಕೂಟ ಈ ಕೂಟವ ಕೂಡುವುದು.

**202**

**ಅರಿದ ಶರಣಂಗೆ ಆಚಾರವಿಲ್ಲ ,ಆಚಾರವುಳ್ಳವಂಗೆ ಲಿಂಗವಿಲ್ಲ .**
**ಲಿಂಗವಿಲ್ಲದ ಶರಣನ ಸುಳುಹು ಜಗಕ್ಕೆ ವಿಪರೀತ,**

**ಚರಿತ್ರವದು ಪ್ರಕಟವಲ್ಲ ನೋಡಾ!**
**ಸಂಸಾರಿ ಬಳಸುವ ಬಯಕೆಯುನೆಂದೂ ಹೊದ್ದನು.**
**ಸಟೆಯ ಹಿಡಿದು ದಿಟವ ಮರೆದು,**
**ಇಲ್ಲದ ಲಿಂಗವನು ಉಂಟೆಂದು ಪೂಜಿಸುವರಾಗಿ ಆಚಾರವುಂಟು,**
**ಆಚಾರವುಳ್ಳವಂಗೆ ಗುರುವುಂಟು, ಗುರುವುಳ್ಳವಂಗೆ ಲಿಂಗವುಂಟು,**
**ಲಿಂಗಪೂಜಕಂಗೆ ಭೋಗವುಂಟು.**
**ಈ ಬರಿಯ ಬಾಯ ಬಣ್ಣ ಕರೆಲ್ಲರೂ ಪೂಜಕರಾದರು.**
**ಗುಹೇಶ್ವರಲಿಂಗವು ಅಲ್ಲಿ ಇಲ್ಲವೆಂಬುದನು;**
**ಈ ವೇಷಲಾಂಛನರೆತ್ತಬಲ್ಲರು ಹೇಳಾ ಸಂಗನಬಸವಣ್ಣ.** ॥ 825 ॥

**ತಾತ್ಪರ್ಯ** : ಅರಿದ ಶರಣಂಗೆ ಆಚಾರವಿಲ್ಲ, ಶರಣ ! ಅರಿದುದೇನು ? ಅರಿದಿಹೆನೆಂದಡೆ ಅರಿಯಬಾರದು ನೋಡಾ, ಘನಕ್ಕೆ ಘನ ತಾನೆ ನೋಡಾ. ಚೆನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಸೋತೆನು. ಅರಿದ ಶರಣನೆಂದರೆ ತನ್ನನರಿದ ಶರಣ, ತಾನು ಅರುವಿಂಗರುವಾಗಿರ್ಪ ಶರಣ ದೇಹಿಗೆ ದೇಹಿಯಾಗಿರ್ಪ ಭೇದವಬಲ್ಲ ಶರಣ. ಅರಿದೆನೆಂದರೆ ಅರಿಯಬಾರದು ನೋಡಾ, ಅರಿದರುಹಿಸಿಕೊಂಬುದಕ್ಕೂ ಮೀರಿದ ಘನಕ್ಕೆ ಘನ ತಾನೆ ನೋಡಾ. ಚೆನ್ನಮಲ್ಲಿಕಾರ್ಜುನ ತಾನಾಗಿಹ ಶರಣ. ತೆರಹಿಲ್ಲದ ಘನ ನಿರ್ಣಯಕ್ಕೆ ನಿಲುಕದ ಶರಣ, ಅಚಿಂತ್ಯಾತ್ಮ ತಾನೆ ನೋಡಾ, ಇಂತಪ್ಪ ಶರಣಂಗೆ ಆಚಾರವಿಲ್ಲವೆಂದು ಹೇಳಿಹರು. ಶರಣಂಗೆ ಆಚಾರವಿಲ್ಲ, ಅದಾವ ಕಾರಣದಿಂದ ಆಚಾರವಿಲ್ಲ, ಆಚಾರ ಅನಾಚಾರವಾಯಿತ್ತು. ಸೀಮೆ, ನಿಸ್ಸೀಮೆಯಾಯಿತ್ತು. ಪ್ರಾಣ ಸಂಚಯ ತಪ್ಪಿ, ಲಿಂಗ ಸಂಚಯವಾಯಿತ್ತು. ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು. ಎಲ್ಲಿ ಸೋಂಕಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರೂಪಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ರುಚಿ ಅಲ್ಲಿಯೆ ಲಿಂಗ ಸ್ವಾಯತವಾಯಿತ್ತು. ಎಲ್ಲಿ ಗಂಧವಲ್ಲಿಯೆ ಲಿಂಗ ಸ್ವಾಯತವಾಯಿತ್ತು ಕೂಡಲ ಸಂಗಮದೇವಾ ಕರುಣಾರಸ ಕಡಕೋಡಿವ ಡಿಯಿತ್ತಯ್ಯ ಎನ್ನ ಮೇಲೆ.

ಅರಿತ ಶರಣನ ದೃಷ್ಟಿ ದಿವ್ಯದೃಷ್ಟಿ, ಘನದೃಷ್ಟಿ, ಲಿಂಗದೃಷ್ಟಿ, ಶಬ್ದವದು ಲಿಂಗ, ಸ್ಪರ್ಶವದು ಲಿಂಗ, ರೂಪವದು ಲಿಂಗ, ರಸವದು ಲಿಂಗ,ಗಂಧವದು ಲಿಂಗ, ಶರಣನ ಸರ್ವಾಂಗ ಲಿಂಗಮಯನಾದುದರಿಂದ ಕಣ್ಣಿನ ಕಣ್ಣಾದುದು ಕಿವಿಯ ಕಿವಿಯಾದುದು, ತ್ವಕ್ಕಿನ ತ್ವಕ್ಕಾದುದು, ರಸದ ರಸವಾದುದು, ರೂಪದ ರೂಪವಾದುದರಿಂದ ಘನಕ್ಕೆ ಘನನಾದುದು. ಇದು ಕಾರಣ, ನಿಶಬ್ದವೇದಿಯಾದ್ದರಿಂದ ಅನುಪಮ ಶರಣ, ನಿಸ್ಸೀಮ ಶರಣ, ಅರ್ಚನೆ, ಅರ್ಪಿತ, ಅವಧಾನವಿಲ್ಲದ ಶರಣ ! ಶಬ್ದಕ್ಕೆ ತೆರಹಿಲ್ಲ ದವನಾದುದರಿಂದ ತನ್ನ ಅರಿತ ಶರಣಂಗೆ ಆಚಾರವಿಲ್ಲವೆಂದು ಹೇಳಿಹರು.

ಆಚಾರವುಳ್ಳವಂಗೆ ಲಿಂಗವಿಲ್ಲ : ಆರಿಗೆ ಲಿಂಗವಿಲ್ಲ ? ಆಚಾರವುಳ್ಳವಂಗೆ ಲಿಂಗವಿಲ್ಲ ? ತನುತ್ರಯಂಗಳ ಆಚಾರವುಳ್ಳವಂಗೆ ಲಿಂಗವಿಲ್ಲ, ಮಲತ್ರಯಂಗಳ ಆಚಾರವುಳ್ಳವಂಗೆ ಲಿಂಗವಿಲ್ಲ, ಆವುದು ಆಚಾರ ? ತನ್ನಿಂದ ತನ್ನ ನೋಡುವುದೆ

ಘನಾಚಾರ, ಲಿಂಗಾಚಾರ, ಸಮಯಾಚಾರ, ಶಿವಾಚಾರ, ಗಣಾಚಾರ ಬೃತ್ಯಾಚಾರ, ಇವು ಭಾವಭರಿತನನ್ನಾಗಿ ಮಾಡುವ ಜ್ಞಾನಾಚಾರ, ಅಪೂರ್ವಿಕರ ಆಚಾರ, ಲಿಂಗವಲ್ಲದೆ ಅನ್ಯವನರಿಯದಿಹುದೆ ಲಿಂಗಾಚಾರವಾಗಿದೆ. ಇದು ದಿವ್ಯದೃಷ್ಟಿ, ಘನದೃಷ್ಟಿಯಾದುದರಿಂದ ಏನು ಕಂಡರೂ ಘನವ ಕಾಣುತ್ತಿಹನು. ಕಲ್ಪಿತವೆ ಅಕಲ್ಪಿತ ಘನವಾಗಿ ಪ್ರಜ್ವಲಿಸುತ್ತಿಹುದು. ಗುರು, ಲಿಂಗ, ಜಂಗಮಕ್ಕೆ ಮಾಡಿ ಸತ್ಯನಾಗಿಹುದೆ ಸಮಯಾಚಾರ. ಈ ಸಮಯಾಚಾರ ಇದೆಂಥ ಸಮಯಾಚಾರ ನೋಡಿರೆ ? ಗುರುವಿಂಗೆ ಗುರುವಾಗಿಹುದು. ಲಿಂಗಕ್ಕೆ ಲಿಂಗವಾಗಿಹುದು. ಜಂಗಮಕ್ಕೆ ಜಂಗಮವಾಗಿಹ ಆಚಾರ ಎಲ್ಲೆಲ್ಲೂ ಸಮಪ್ರಕಾಶಮಾನವಾಗಿಹ ಪರತತ್ವ ಪ್ರಜ್ವಲಿಸಿದುದು ಸಮಯಾಚಾರ, ಶಿವಾಚಾರ, ಶಿವಭಕ್ತರಲ್ಲಿ ಜ್ಯಾತಿ ವರ್ಣಾಶ್ರಮವನರಸಿ ಅವರೊಕ್ಕುದ ಕೊಂಬುದು ಶಿವಾಚಾರ. ಇದು ಶಿವನಲ್ಲಿ ಒಂದಾದ ಶಿವಾಚಾರ. ಶಿವತತ್ವದಲ್ಲಿ ಒಂದಾದ ಶಿವಾಚಾರ. ಇವರು ತತ್ವಪ್ರೇಮಿಗಳು, ತತ್ವವೇತ್ತರು, ತತ್ತ ಜ್ಞಾನಿಗಳು, ಸಚ್ಚಿದಾನಂದಮಯರು. ತತ್ವಜ್ಞಾನಿಗಳಲ್ಲಿ ಜ್ಯಾತಿ ವರ್ಣಾಶ್ರಮ ಹುಡುಕದೆ, ಅವರೊಳ ಹುದುಗಿದ್ದ ಶಿವಜ್ಞಾನವ ನಂಬುವುದು. ಉಣ್ಣದ ಊಟವ ಉಣ್ಣುವದು. ಇದು ಜ್ಞಾನಾಮೃತದ ಊಟ, ನೆತ್ತಿಯ ಊಟ, ಪರಮಾನಂದವಾಗಿಹ ತೃಪ್ತರೂಪ ತೃಪ್ತಿಯ ಊಟ ಉಣುವುದೆ ಶಿವಾಚಾರ.

ಶಿವಾಚಾರ ನಿಂದೆಯ ಕೇಳದಿಹುದೆ ಗಣಾಚಾರ. : ಇದು ವೀರರ ಆಚಾರ. ನಿಷ್ಠಾವುಳ್ಳವರ ಆಚಾರ. ಅನಾಚಾರವ ಸೇರದ ಆಚಾರ. ಇದು ಗಣನೆಯುಳ್ಳ ಆಚಾರ. ಶ್ರೇಷ್ಠ ಆಚಾರ, ಗಂಭೀರರ ಆಚಾರ. ಶಿವಾಚಾರವೆ ಪ್ರಾಣ, ಶಿವಾಚಾರವೆ ಜೀವ ಶಿವಾಚಾರವೆ ಜೀವನದ ಬದುಕು ಎಂಬ ನಿಷ್ಠಾವಂತರು ಶಿವಾಚಾರ ನಿಂದೆ ಕೇಳಿದರೆ ಹೃದಯಕ್ಕೆ ಹೃದಯ ತಲ್ಲಣಿಸಿ ನಿಂದೆ ಮಾಡಿದ ಪಾಪಿಗೆ ಬುದ್ಧಿ ಕಲಿಸುವ ಆಚಾರ ಗಣಾಚಾರವು. ಶಿವಾಚಾರವೆಂಬುದು ಶಿವತತ್ವದ ರಹಸ್ಯವ ತಿಳಿದು ಶಿವಮಯವಾಗಿ ಕಾಣುವುದೆ ಶಿವಾಚಾರ ಇದು ಸುಜ್ಞಾನಿಗಳ ಆಚಾರ, ಜ್ಞಾನಾಚಾರ.

ಶಿವ ಶರಣನೆ ಹಿರಿಯನಾಗಿ ತಾನೆ ಕಿಂಕರನಾಗಿಹ ಆಚಾರ. : ದಾಸೋಹಂಭಾವ ಅಳವಟ್ಟ ಆಚಾರ ಶರಣನೆ ಶಿವನಾಗಿ ಪರಾತ್ಪರನಾಗಿ ಪರಬೊಮ್ಮನೆಂದು ತಾನು ಕಿಂಕರನಾಗಿ ದಾಸೋಹಂಭಾವಿಯಾಗಿ ಆಚರಿಸುವುದೆ ಬೃತ್ಯಾಚಾರ, ಈ ಪಂಚವಿಧ ಆಚಾರ ಘನಾಚಾರಗಳಾಗಿಹವು. ಇದು ಕಾರಣ, ಇಂತಪ್ಪ ಜ್ಞಾನಾಚಾರಿಯಾಗಿಹ ಘನವಂತನಿಗೆ ಪೂಜಾಲಿಂಗ ಕಂಡುದಿಲ್ಲ, ಅದಕ್ಕಾಗಿ ಆಚಾರ ! ಮಲತ್ರಯದ ಆಚಾರ ಮಾಡನು, ತನುತ್ರಯದ ಆಚಾರವು ಮಾಡನು, ಇದು ಕಾರಣ ಅರಿತ ಶರಣಂಗೆ ಆಚಾರವಿಲ್ಲವೆಂದು ಹೇಳಿಹರು.

ಲಿಂಗವಿಲ್ಲದ ಶರಣನ ಸುಳುಹು ಜಗಕ್ಕೆ ವಿಪರೀತ ಚರಿತ್ರವದು ಪ್ರಕಟವಲ್ಲ ನೋಡಾ, : ಲಿಂಗವಿದ್ದ ಶರಣನ ಸುಳುಹು ಜಗತ್ತಿನಲ್ಲಿ ಆತನ ಚರಿತ್ರೆ ಪ್ರಕಟಪಡಿಸುವುದು ವರ್ಣಿಸುವುದು ಸಹಜವಾಗಿದೆ. ಸರ್ವಾಂಗ ಲಿಂಗವಾಗಿಹ ಮಹಾಂತ ಈತ. ಬಾಹ್ಯಲಿಂಗವಿಲ್ಲದ ಶರಣ, ಪೂಜಾಲಿಂಗವಿಲ್ಲದ ಶರಣ, ಇಂತಪ್ಪ ಶರಣನ ಚಾರಿತ್ರ ಜಗಕ್ಕೆ ವಿಪರೀತ ಚರಿತ್ರೆ. ಅದು ಅಪ್ರಕಟ ಚರಿತ್ರ. ವಾಙ್ಮನಕ್ಕೆ ನಿಲುಕದ ಚಾರಿತ್ರ, ಶೃತಿಗಗೋಚರನಾಗಿಹ ಚಾರಿತ್ರ ವರ್ಣಿಸುವುದದೆಂತು ? ಶರಣ ! ಏನೊಂದಾಗದ ಘನ,

ಗುರು ಲಿಂಗ ಜಂಗಮವಾಗದ ಘನ ವರ್ಣಿಸುವನೆ, ಅವರ್ಣನೀಯನು. ಶರಣನ ನಿಲುವು ಮುನ್ನೆಲ್ಲಿಂದ ಬಂದನಲ್ಲಿಗೆ ಹೋಗಿ ತಾನೆ ತಾನಾಗಿಹ ಘನ ಮಹಿಮ ಅದನೆಂತು ವರ್ಣಿಸುವುದು. ಬಾಹ್ಯ ಗುರುವಾಗದವನು, ಬಾಹ್ಯಲಿಂಗ ಜಂಗಮವಾಗದವನು ತೋರಿಕೆಯೆ ನಷ್ಟವಾದುದರಿಂದ ತೋರಬಾರದ ಘನನಾಗಿಹನು. ಅಂತಪ್ಪ ಶರಣನ ಚಾರಿತ್ರ ಹೇಳುವದೆಂದೇನೊ ? ಇದು ಕಾರಣ ಜಗಕ್ಕೆ ವಿಪರೀಚ ಚರಿತ್ರವದು ಪ್ರಕಟವಲ್ಲ ನೋಡಾ ಎಂದು ಹೇಳಿಹರು.

ಶರಣನು ತೋರಬಾರದ ಘನನಾದುದರಿಂದ ಆತನ ಚಾರಿತ್ರ ಲೋಕದವರಿಗೆ ವಿರುದ್ಧವಾಗಿಹ ಚಾರಿತ್ರ. ತೋರಬಾರದ ಚಾರಿತ್ರ, ಅದು ಪ್ರಕಟಪಡಿಸಲು ಬಾರದ ಚಾರಿತ್ರ. ಅರುವಿಂಗರುವಾಗಿಹ ಶರಣನ ಚಾರಿತ್ರ ಅದನೆಂತು ವರ್ಣಿಸುವುದು. ಅದಕ್ಕಾಗಿ ಪ್ರಕಟವಲ್ಲ ಎಂದು ಹೇಳಿಹರು.

ಸಂಸಾರಿ ಬಳಸುವ ಬಯಕೆಯನೆಂದೂ ಹೊದ್ದದ ಶರಣ ಸವೆಯದ ಸುಖಿಯು, ಸತ್ಯಜ್ಞಾನಾನಂದವೆ ತಾನಾಗಿಹ ಪರಮಸುಖಿ, ಸುಖವೆ ತನ್ನಯ ಇರವು ಆಗಿರುವಲ್ಲಿ ಆತನೆಂತು ಸಂಸಾರಿ ಬಳಸುವ ಬಯಕೆಯನೆಂತು ಹೊದ್ದನು. ನಿರ್ಮಲನು ಮಲವನದೆಂತು ಬಯಕೆ ಮಾಡುವನು, ನಿಷ್ಕಳಂಕನು ಕಳಂಕವ ಹೊದೆಯುವುದೆಂತು ? ಘನ ಗಂಭೀರ ಮಹಾಘನದೊಳಗೆ ಘನಕ್ಕೆ ಘನನಾಗಿಹ ಶರಣ ಸಂಸಾರಿ ಬಳಸುವ ಬಯಕೆಯ ಅದೆಂತು ಮಾಡುವನು. ಚಿದಾಕಾಶವೆ ತಾನಾಗಿಹ ಅಪ್ರತಿಮಂಗೆ ಅದಾವ ಸಂಸಾರಿ ಕಾಣುವುದು, ಅವನು ಬಳಸುವ ಪದಾರ್ಥಂಗಳಾದರೂ ಕಾಣುವದೆಂತು, ಕಾಣುವದೆ ಇಲ್ಲವೆಂದ ಮೇಲೆ ಬಯಕೆಯಾದರೂ ಹೇಗೆ ಸಾಧ್ಯ. ಚಿತ್ಸೂರ್ಯನೆ ತಾನಾಗಿಹ ಶರಣ, ಮರವಿನ ಕಾರ್ಯವಾಗಿಹ ನಾಮರೂಪುಳ್ಳ ಲೋಕವು ಕಾಣ, ಜ್ಞಾನದ ಕಾರ್ಯವಾಗಿಹ ಬೋಧವು ಕಾಣ ; ಕಾಣದುದು ಕಂಡ ಘನವಂತನಿಗೆ ಅದಾರು ಸಂಸಾರಿಗಳು, ಅದಾರು ಶಾಸ್ತ್ರಜ್ಞರು, ಆರಾರನ್ನು ಕಾಣದವನಿಗೆ ಬಳಸುವ ಪದಾರ್ಥಂಗಳು ಕಾಣ, ಕಾಣದ್ದರಿಂದ ಅವುಗಳ ಬಯಕೆಯು ಇಲ್ಲವಾದುದರಿಂದ ಆವಾವುದನ್ನು ಹೊದೆಯನು.

ಸಟೆಯ ಹಿಡಿದು, ದಿಟವ ಮರೆದು ಇಲ್ಲದ ಲಿಂಗವನುಂಟೆಂದು ಪೂಜಿಸುವರಾಗಿ ಆಚಾರವುಂಟು, ಆಚಾರವುಳ್ಳವಂಗೆ ಗುರು ಉಂಟು, ಗುರುವುಳ್ಳವಂಗೆ ಲಿಂಗ ಉಂಟು, ಲಿಂಗ ಪೂಜಕರಿಗೆ ಭೋಗ ಉಂಟು, ಈ ಬರಿಯ ಬಾಯ ಬಣ್ಣಕರೆಲ್ಲರು ಪೂಜಕರಾದರು. ಪೂಜಕರೆಲ್ಲರು ಸಟೆಯ ಹಿಡಿದವರು ದಿಟವ ಮರತವರು. ಸುಳ್ಳನ್ನು ಹಿಡಿದವರು. ನಿಜವನ್ನು ಮರೆತವರು, ತನ್ನನ್ನೆ ಮರೆತವರು. ಅನ್ಯವನ್ನೆ ಹಿಡಿದವರು. ಅಜ್ಞಾನವ ಹಿಡಿದವರು, ಸುಜ್ಞಾನವ ಮರೆತವರು. ಲಿಂಗಕ್ಕೆ ಲಿಂಗವಾಗಿಹ ತನ್ನನ್ನೆ ಮರೆತವರು ಅರುವ ಅರಿಯ ಹೇಳಿದ ಸಂಜ್ಞೆಯ ಮರೆತು ಲಿಂಗ ಕುರುಹುಳ್ಳದೆಂದು ಪೂಜಿಸುವ ಪೂಜಕರೆಲ್ಲರು ಸಟೆಯ ಹಿಡಿದವರು ; ಅರುವ ಅರಿಯುವುದನ್ನೆ ಮರೆತವರು. ತಾನಾರೆಂಬುದೆ ಅರಿಯದೆ ಇದ್ದವರು. ಇವರು ದಿಟವ ಮರೆತವರು ಆದುದರಿಂದ ಲಿಂಗವು ಪೂಜಾಲಿಂಗವಾಗದ್ದನ್ನು ಪೂಜಾಲಿಂಗವೆಂದು ತಿಳಿದುದೆ ಭ್ರಮೆಯಾಗಿದೆ. ಅದು ಲಿಂಗವುಂಟಾದಂತಾಗಿದೆ. ಇದು ಸುಜ್ಞಾನಿಗೆ ಇಲ್ಲದ ಲಿಂಗವಾಗಿದೆ.

ಇವರ ಅಜ್ಞಾನಕ್ಕೆ ಇದು ಲಿಂಗವಾದ್ದರಿಂದ ಇವರು ಪೂಜಿಸುವುದಾಗಿ ಆಚಾರವುಳ್ಳವರಾಗಿಹರು, ಆಚಾರವುಳ್ಳವರಾದುದರಿಂದ ಇವರಿಗೆ ಗುರು ಉಂಟು, ಲಿಂಗ ಉಂಟು, ಈ ಲಿಂಗ ಪೂಜಕರಿಗೆ ಭೋಗವುಂಟು ಇವರು ಬರಿಯ ಬಾಯಬಣ್ಣಕರು, ಡಾಂಭಿಕರು, ವರ್ಣಾತ್ಮಕರು ಆದುದರಿಂದ ಪೂಜಕರಾದರು.

ಗುಹೇಶ್ವರ ಲಿಂಗ ಅಲ್ಲಿ ಇಲ್ಲವೆಂಬುದನು ಈ ವೇಷ ಲಾಂಛನರೆತ್ತ ಬಲ್ಲರು ಸಂಗನಬಸವಣ್ಣ : ಗುಹೇಶ್ವರ ಲಿಂಗ ಶರಣನ ಅಂತರಂಗದೊಳು ನ್ಯಸ್ತವಾಗಿಹ ಲಿಂಗ. ಲಿಂಗವೆನ್ನಲು ಬಾರದ ಅನುಪಮ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ಅಚಲಿತ ಲಿಂಗ. ಲಿಂಗ ಎಂಬುವರ ಲಿಂಗವೂ ಅಲ್ಲ, ಜಂಗಮ, ಜಂಗಮನೆನ್ನುವಂಗೆ ಜಂಗಮವಿಲ್ಲ, ಪ್ರಸಾದ ಪ್ರಸಾದ ಎನ್ನುವರಿಗೆ ಪ್ರಸಾದವಿಲ್ಲ, ಲಿಂಗವೆನ್ನದವಂಗೆ ಲಿಂಗವುಂಟು. ಜಂಗಮವೆನ್ನದವಂಗೆ ಜಂಗಮ ಉಂಟು. ಪ್ರಸಾದವೆನ್ನದವಂಗೆ ಪ್ರಸಾದ ಉಂಟು. ಈ ತ್ರಿವಿಧ ಸ್ಥಲವನರಿಯ ಬಲ್ಲಡೆ ತಾನೆ ಉಂಟು. ಇದು ನಿಶಬ್ದ ವೇದಿಗಳ ಲಿಂಗ, ಶಬ್ದಮುಗ್ಧ ಲಿಂಗ, ವಾಙ್ಮನೋತೀತವಾಗಿಹ ಲಿಂಗ, ಇದು ಪರಮಜ್ಞಾನವು, ಪರಮಾಮೃತವು ಆಗಿಹ ಲಿಂಗಕ್ಕೆ ಅಲ್ಲಿ, ಇಲ್ಲಿ ಉಂಟೆನ್ನುವ ಇವರು ಬರಿಯ ಬಾಯ ಬಣ್ಣಕರು. ಈ ವೇಷ ಲಾಂಛನರೆತ್ತ ಬಲ್ಲರು ಸಂಗನಬಸವಣ್ಣ ಎಂದು ಹೇಳಿಹರು.

**203**

**ಅಭ್ಯಾಸದ ಮಾತಲ್ಲ , ಶ್ರೋತ್ರದ ಸುಖವಲ್ಲ,**
**ಶಾಸ್ತ್ರದ ಅನುಭಾವದ ಮಾತಲ್ಲ .**
**ಒಳಗಣ ಮಾತಲ್ಲ ಹೊರಗಣ ಮಾತಲ್ಲ,**
**ಇದರಂಗವನರಿಯದೆ,**
**ಅನುಭಾವವ ಮಾಡಿ ಫಲವೇನಯ್ಯಾ?**
**ಗುಹೇಶ್ವರಲಿಂಗವು ಉಪಮಾತೀತ ನೋಡಯ್ಯಾ ಸಿದ್ಧರಾಮಯ್ಯಾ!** ॥ 769 ॥

**ತಾತ್ಪರ್ಯ** : ಅಭ್ಯಾಸದ ಮಾತಲ್ಲ : ಉಪಮಾತೀತವಾವುದು ? ಅದು ಅಭ್ಯಾಸದ ಮಾತಲ್ಲ, ಗುಹೇಶ್ವರ ಲಿಂಗವು ಅಭ್ಯಾಸಕ್ಕೆ ನಿಲುಕದ ಮಾತಲ್ಲ, ಈ ದೇಹವೆಂಬ ಗುಹೆಗೆ ಒಡೆಯನಾಗಿಹ ದೇವನು, ನುಡಿಗೆಡೆಗೊಡದ ಘನನಾಗಿರುವುದರಿಂದ ಲಿಂಗವೆಂಬ ಸಂಜ್ಞೆಯ ಅರಿದರಿದು ನೋಡುವುಡೆ ತಾನೆ ಗುಹೇಶ್ವರ ಲಿಂಗವು. ಅಲ್ಲಿ ಭಾವಕ್ಕಿಂಬಿಲ್ಲ, ಶಬ್ದಮೀಸಲು ನೋಡಾ ನುಡಿಗೆಡೆಯಿಲ್ಲ, ಎಡೆಗೆ ಕಡೆಯಿಲ್ಲ ಗುಹೇಶ್ವರ ಲಿಂಗ ವೇಧಿ ಸಲೊಡನೆ ಎಂಬ ಪ್ರಭುವಿನ ಮಹದರುವನ್ನು ಅರಿದರಿದು ನೋಡುವುಡೆ ಗುಹೇಶ್ವರ ಲಿಂಗದ ಘನದಿರುವು ತನ್ನಿಂದ ತನಗದು ಪ್ರಜ್ವಲಿಸುವುಡೆ ಆಗ ತಾನೆ ಉಪಮಾತೀತನೆಂಬುದು ಸ್ವತಃ ಸಿದ್ಧವು.

ಅಭ್ಯಾಸದ ಮಾತಲ್ಲ ಗುಹೇಶ್ವರ ಲಿಂಗ ಅರಿದರಿದು ನೋಡಿದವರ ಇರವು ಅರಿವು ಆಗಿರುವಲ್ಲಿ ಅದು ಅಭ್ಯಾಸದ ಮಾತು ಹೇಗಾಗುವುದು ? ತೋರಬಾರದ ಘನ ಹೇಳಲೆಂದೇನೊ ? ಹೇಳಬಾರದ ಘನ ತೋರಲೆಂದೇನೊ ? ಸರಸಂದಾನದ

ಪರಿಯಬಲ್ಲಡೆ ಹೇಳಿರೆ ? ಗುಹೇಶ್ವರ ಲಿಂಗ ಕಲ್ಪಿತವಲ್ಲ ನೋಡಾ ?

ಆವುದು ಕಲ್ಪಿತಕ್ಕಿಂಬುಕೊಟ್ಟಿದೆ ಅಲ್ಲಿ ನೆನೆಯಲು ಚಿಂತಿಸಲು ಭಾವಿಸಲು ಧ್ಯಾನಿಸಲು ಬರುವುದು. ಅಲ್ಲಿ ಅಭ್ಯಾಸದ ಮಾತು ಸಿದ್ಧಿಸುವುದು. ಆವಲ್ಲಿ ಶಬ್ದವೆ ಮೀಸಲಾಗಿರುವಲ್ಲಿ ಅದನ್ನು ವಾಣಿಯಿಂದ ಕಥನ ಮಾಡುವುದು ಹೇಗೆ ? ಇದು ಕಾರಣ ಅನುಪಮ ಲಿಂಗ ಅರಿದರಿದು ನೋಡಲು ತನ್ನಿರುವ ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನ ನಿಲುವು ತನ್ನದು ಇರುವಲ್ಲಿ ಅಭ್ಯಾಸವು ನಿಷ್ಪ್ರಯೋಜಕವಾಗಿದೆ. ಭ್ರಮವಾಗಿದೆ. ಆರು ಕಲ್ಪಿಸಿ, ಕಲ್ಪಿಸಿ ಕಲ್ಪಿತವನ್ನೆ ಅಭ್ಯಾಸ ಮಾಡುವರು. ಅವರಿಗೆ ಭ್ರಮವೆ ಅಧಿಕವಾಗುವುದಲ್ಲದೆ ತನ್ನಿರುವಿನ ಅರುವು ದೂರಾತಿದೂರವಾಗುವುದು, ಅದು ಸೋಹಂ ಚಿಂತನವಿರಲಿ, ಚಿದಹಂ ಚಿಂತನವಿರಲಿ, ಅಹಂಗ್ರಹ ಚಿಂತನವಿರಲಿ, ಆವುದೆ ಚಿಂತನ ಮಾಡಿದರೂ ಚಿದಾಭಾಸನ ಕಾರ್ಯವ ಸಿದ್ಧವಾಗುವುದಲ್ಲದೆ ಚಿತ್‌ಸ್ವರೂಪ ಸಿದ್ಧವಾಗುವುದು.

ಚಿತ್‌ಸ್ವರೂಪವದು ನುಡಿಗೆಡೆಗೊಡದ ಘನವು. ನುಡಿ ನಡೆ ಅರ್ಚನೆ ಅರ್ಪಿತ ಅವಧಾನಕ್ಕಿಂಬಿಲ್ಲವಾಗಿಹುದು. ಅರಿದರಿದು ನೋಡುವುಡೆ ಅರುವಿಂಗರುವು ತನ್ನಿರುವು ಆಗಿರುವಲ್ಲಿ ಭಾವಕ್ಕಿಂಬಿಲ್ಲ, ಶಬ್ದ ಮೀಸಲ ನುಡಿಗೆಡೆಯಿಲ್ಲವೆಂಬುದು ಶ್ರೀಗುರು ಕಾರುಣ್ಯ ಇದನೇನೆಂಬೆ ಎಂಬುದು ವಿದಿತವಾಗಿ ಅಭ್ಯಾಸದ ಮಾತಲ್ಲವೆಂದು ಸಿದ್ಧಿಸುವುದು.

ಸ್ತೋತ್ರದ ಸುಖವಲ್ಲ : ಆಭಾಸರೂಪಿ ಕಲ್ಪಿತನು ಶಿವ, ಶಂಕರ, ವಿಷ್ಣು, ಬ್ರಹ್ಮ, ದೇವಿ, ಅಲ್ಲಾ, ಸ್ವಾಮಿ ಬೇರೆ, ಸೇವಕ ಬೇರೆ, ಪೂಜ್ಯ ಬೇರೆ, ಪೂಜಕ ಬೇರೆ, ಜೀವ ಬೇರೆ, ಬ್ರಹ್ಮ ಬೇರೆ ಎಂಬ ಭೇದ ಜ್ಞಾನವುಳ್ಳವನಾಗಿ ಸ್ತೋತ್ರ ಮಾಡಿ ಭಾವದಲ್ಲಿ ಮೈಮರೆತ ಸುಖವು ಸುಖವಲ್ಲ ಅಥವಾ ಅಹಂಗ್ರಹ ಉಪಾಸನೆಯ ತದೇಕ ಚಿತ್ತವುಳ್ಳವನಾಗಿಹ ಸುಖವು ಸುಖವಲ್ಲ, ಇದು ಕಾರಣ, ಬಹು ಭಕ್ತರು ದೇವನನ್ನು ಸಗುಣ ರೂಪದಲ್ಲಿ ಶಿವ ಶಂಕರ ರಾಮ ರಹಿಮನೆಂದು ಹೀಗೆ ಅನೇಕ ನಾಮದಲ್ಲಿ ಆ ದೇವನನ್ನು ಭಾವ ಪರವಶರಾಗಿ ತಮ್ಮ ದೇಹವನ್ನೆ ಮರೆತು ತಲ್ಲೀನರಾದರೂ ಅದು ಬರಹೋಗುವ ಸುಖವು, ಭಕ್ತನು ಎಲ್ಲಿಯವರೆಗೆ ಭಾವಿಕನಾಗಿ ಸ್ತೋತ್ರವ ಮಾಡುತ್ತ, ಭಾವಪರವಶರಾಗುತ್ತಾರೆ. ಅಲ್ಲಿ ಸುಖವು ದೊರೆಯುವುದು, ಬಿಡುವುಡೆ ಸುಖವು ಇರದು, ಅಂದಲ್ಲಿ ಇದು ನಿರಂತರವಾಗಿಹ ತನ್ನ ಸಯಸುಖವಾಗದು. ಸಯ ಸುಖವದು, ಅರಿಯದರುವು ಅದು ಸ್ತೋತ್ರಕ್ಕೆ ಒಳಪಡದು, ಅದಕ್ಕಾಗಿ ಸ್ತೋತ್ರದ ಸುಖವಲ್ಲವೆಂದು ಹೇಳಿಹರು.

ಶಾಸ್ತ್ರದ ಅನುಭಾವದ ಮಾತಲ್ಲ : ಗುಹೇಶ್ವರ ಲಿಂಗ ಶಾಸ್ತ್ರದ ಅನುಭಾವದ ಮಾತಿಗೆ ಒಳಪಡುವುದಲ್ಲ, ವೇದವನೋದುವ ಅಣ್ಣಗಳಿರಾ ನೀವು ಕೇಳಿರೆ ? ವೇದ ವೇಧಿಸಲಿಲ್ಲ ಶಾಸ್ತ್ರ ಸಾಧಿಸಲಿಲ್ಲ, ಪುರಾಣ ಪೂರೈಸಲಿಲ್ಲ, ಆಗಮಕ್ಕೆ ಆದಿ ಇಲ್ಲ, ಇದು ಕಾರಣ ಆದ್ಯರಲ್ಲ ವೇದ್ಯರಲ್ಲ, ಸಾಧ್ಯರಲ್ಲ ಬರಿಯ ಹಿರಿಯರು ನೋಡಾ ಕೂಡಲ ಚೆನ್ನಸಂಗಮದೇವಾ. ಗುಹೇಶ್ವರ ಲಿಂಗವು ಶೃತಿಗಗೋಚರ ವಾಙ್ಮನೋತೀತವಾಗಿರುವಲ್ಲಿ ವಾಣಿಯಿಂದ ಕಥನ ಮಾಡುವುದು ಹೇಗೆ ? ಮನಸ್ಸಿನಿಂದ ಕಲ್ಪಿಸುವುದು ಹೇಗೆ ? ಯತಾವಾಚ್ಯ ನಿವರ್ತಂತೆ ಅಪ್ರಾಪ್ಯಮನಸಾಸಹ ಎಂದು ಶೃತಿಯೆ ಶೃತಪಡಿಸುವಲ್ಲಿ

ವಾಣಿಯಿಂದ ಬ್ರಹ್ಮವೆಂದು ಹೇಗೆ ಹೇಳುವುದು. ಬ್ರಹ್ಮಕ್ಕೆ ನಾ ಬ್ರಹ್ಮವೆಂಬುದು ಘಟಿಸದಿರುವಲ್ಲಿ ಅದನೆಂತು ಕಥನ ಮಾಡುವುದು. ತಾನಾರೆಂಬ ತನ್ನಿರುವ ಅದು ವಿಧೇಯ ವಿಶೇಷಣ. ನಿಷೇಧ ವಿಶೇಷಣಕ್ಕೂ ಮೀರಿದ ಘನವು ಅದನ್ನು ಸದವಾಲಕ್ಷಣದಿಂದಲೂ ಸಿದ್ಧವಾಗದು. ನಿಷೇಧ ಲಕ್ಷಣದಿಂದಲೂ ಸಿದ್ಧವಾಗದು. ತನ್ನಿರುವಿನಿಂದ ಇವುಗಳೆ ಸಿದ್ಧವಾಗುವವಲ್ಲದೆ ತನ್ನ ಸಿದ್ಧ ಮಾಡವು.

ಇಲ್ಲದ ಮರವನ್ನು ಮರವಿನ ಕಾರ್ಯವಾಗಿ ಅನಾತ್ಮ ಭಾವ ಮಾಡಿಕೊಂಡವಂಗೆ ಇವುಗಳನ್ನು ಇಲ್ಲ ಮಾಡಲು ಪ್ರಜ್ಞಾನಂಬ್ರಹ್ಮವೆಂದು ಔಪಚಾರಿಕವಾಗಿ ಹೇಳಿದೆ. ಇಲ್ಲದ ನಾಮರೂಪವನ್ನುಂಟು ಮಾಡಿಕೊಂಡವಂಗೆ ಇಲ್ಲ ಮಾಡಲು ಸತ್, ಚಿತ್, ಆನಂದ, ನಿತ್ಯಪೂರ್ಣನೆಂದು ಅಖಂಡ ಅವಿಕಾರಿ ಅಕಲ್ಪಿತ ಅಸಂಗನೆಂಬ ಲಕ್ಷಣವ ಹೇಳಿದುದು. ತಾನು ನಿರವಧಿ ನಿರಾಲಂಬ ನಿರ್ಲಕ್ಷ್ಯವಿರುವಲ್ಲಿ ಲಕ್ಷಣ ಲಕ್ಷ್ಯವೆಂಬುದು ನಿಲುಕದ ಘನನು. ತನ್ನಿಂದ ತನ್ನ ಅರಿದರಿದು ನೋಡುವುಡೆ ತಾನು ಲಕ್ಷ್ಯ ಲಕ್ಷಣವೆಂಬುದಕ್ಕೂ ಮೀರಿದ ಘನನೆಂಬುದು ತನ್ನಿಂದ ತನಗೆ ಸಿದ್ಧಿಸುವಲ್ಲಿ ಆಗ ತನ್ನಿರುವ ಶಾಸ್ತ್ರದ ಅನುಭಾವದ ಮಾತಲ್ಲವೆಂಬುದು ಸಹಜ ತನಗೆ ವಿದಿತವು. ಅದಕ್ಕಾಗಿ ಶಬ್ದ ಸಂಭ್ರಮದವರೆಲ್ಲ ಹಿಂದುಗಾಣರು, ಮುಂದು ಗಾಣರು, ತಮ್ಮ ತಾವರಿಯರು. ಮೂರು ಲೋಕವೆಲ್ಲ ಬರುಸೂರೆಹೋಯಿತ್ತು ಗುಹೇಶ್ವರಾ. ಶಾಸ್ತ್ರಾನುಭಾವವು ಚಿದಹಮ್ಮಿನಿಂದುಕ್ತವಾದುದು, ಅದು ಶಬ್ದಸಂಭ್ರಮವು ; ಮಾತಿನಿಂದುಕ್ತವಾದುದು. ಶಬ್ದವೆ ಮೀಸಲವಾಗಿರುವಲ್ಲಿ ಅದನೆಂತು ಕಥನವ ಮಾಡುವುದು. ನಿಃಶಬ್ದ ಬ್ರಹ್ಮವು ಹೊಗಳತೆಗೆ ಸಿಕ್ಕುವುದೆ ಅಣ್ಣಗಳಿರಾ ? ಇದನ್ನು ತಿಳಿಯದೆ ಶಾಸ್ತ್ರರೂಪಿ ಶಬ್ದಸಂಭ್ರಮಕ್ಕೆ ಒಪ್ಪಿದವರು ಪೂರ್ವದಲ್ಲಿ ತಾನು ಮುನ್ನೇನಾಗಿದ್ದನೆಂಬುದ ಅರಿಯನು. ಈಗ ತಾನೇನಾಗಿಹನು ಎಂಬುದನರಿಯನು. ಈ ಶಬ್ದಸಂಭ್ರಮದಭಿಮಾನಿಯಾಗಿ ಮುಂದೇನಾಗುವದೆಂಬುದನ್ನು ಅರಿಯನು. ಇವರು ತಮ್ಮ ಹೃದಯದಲ್ಲಿ ನ್ಯಸ್ತವಾಗಿಹ ತನ್ನ ಮುನ್ನ ಮುನ್ನಲಾದ ಘನ, ತನ್ನಿಂದ ತಾನಾದ ಘನ, ಇದು ಭಾಷೆ ಪ್ರಸಾದಕ್ಕೆ ನಿಲುಕದ ಇರವೆಂದು ತಿಳಿಯರು. ಇದು ಕಾರಣ ಶಾಸ್ತ್ರಾನುಭಾವದ ಮಾತಲ್ಲವೆಂದು ಹೇಳಿಹರು.

ಒಳಗಣ ಮಾತಲ್ಲ, ಹೊರಗಣ ಮಾತಲ್ಲ ಇದರಂಗವನರಿಯದೆ ಅನುಭಾವ ಮಾಡಿ ಫಲವೇನಯ್ಯ ಗುಹೇಶ್ವರ ಲಿಂಗ ಉಪಮಾತೀತ ನೋಡಯ್ಯ : ಒಳಗಣ ಮಾತು ಆವು ? ಹೊರಗಣ ಮಾತು ಆವು ? ಕರಣಂಗಳಿಂದ ರಚಿತವಾದ ಮಾತು ಒಳಗಣ ಮಾತು, ಇಂದ್ರಿಯಂಗಳಿಂದ ರಚಿತವಾದ ಮಾತು ಹೊರಗಣ ಮಾತು. ಜೀವಬ್ರಹ್ಮ ಬೇರೆಂಬ ಭೇದಜ್ಞಾನದ ಮಾತು ಹೊರಗಣ ಮಾತು, ಜೀವ ಬ್ರಹ್ಮ ಒಂದೆಂಬ ಅಭೇದ ಜ್ಞಾನದ ಮಾತು ಒಳಗಣ ಮಾತು, ಉಪಾಧಿತವಾವಾಗಿಹ ಅಭಾಸ ಮಾತು ಹೊರಗಣ ಮಾತು, ನಿರುಪಾಧಿಯಾಗಿಹ ಬ್ರಹ್ಮನ ಲಕ್ಷಣಾತ್ಮಕವಾಗಿಹ ಮಾತು ಒಳಗಣ ಮಾತು. ಆತ್ಮ ಪರಮಾತ್ಮರ ಏಕತ್ವದ ಲಕ್ಷಣಾತ್ಮಕವಾಗಿಹ ಮಾತು ಒಳಗಣ ಮಾತು. ದೇಹೋಹಂ, ಕೋಹಂ, ನಾಹಂ ಎನ್ನುವ ಮಾತು ಹೊರಗಣ ಮಾತು. ಸೋಹಂ, ಚಿದಹಂ, ದಾಸೋಹಂ ಎನ್ನುವ ಮಾತು ಒಳಗಣ ಮಾತು. ತಾನಿದ್ದು ತನ್ನಿಂದ ತನ್ನ ಅರಿಯದೆ ಮಾತಾಡುವ ಮಾತು ಹೊರಗಣ ಮಾತು. ತಾನಿದ್ದು ತನ್ನ ತಿಳಿಯದೆ ಅರುವಿನ

ಅಭಿಮಾನಿಯಾಗಿ ಅರುವು, ಅರುವೆಂದು ಅನುಸಂಧಾನದಲ್ಲಿ ರತನಾಗಿಹುದೆ ಒಳಗಣ ಮಾತು. ತಾನು ಎಡೆಯಿಲ್ಲದ ಪರಿಪೂರ್ಣನೆಂದು ತನ್ನ ಅರಿತಲ್ಲಿ ಒಳಗಣ ಮಾತಾವುದು ? ಹೊರಗಣ ಮಾತುವುದು ? ಇದು ಕಾರಣ, ಇದರಂಗವನರಿಯದೆ ಅನುಭಾವ ಮಾಡಿ ಫಲವೇನಯ್ಯ, ಅಭ್ಯಾಸದಂಗ, ಸ್ತೋತ್ರದಂಗ, ಶಾಸ್ತ್ರಾನುಭಾವದಂಗ, ಕರಣಂಗಳಂಗ, ಒಳಗಣಂಗ, ಹೊರಗಣದಂಗ ಇವುಗಳು ತನ್ನಿಂದ ಬೇರಾದವು. ಏಕೆಂದರೆ ಇವೆಲ್ಲವುಗಳು ತನ್ನಿಂದ ಸಿದ್ಧವಾಗುವವು. ತಾನು ಇವುಗಳಿಂದ ಸಿದ್ಧವಾಗನು. ತಾನು ಸ್ವತಃಸಿದ್ಧ ಸ್ವಯಂಜ್ಯೋತಿ ಗುಹೇಶ್ವರ ಲಿಂಗ ಉಪಮಾತೀತ ನೋಡಾ ಸಿದ್ಧರಾಮಯ್ಯ ಎಂದು ಹೇಳಿಹರು.

**204**

**ಸುರಿವ ಜಲಕ್ಕೆ ನೆಲ, ಹೊಲೆಯೆಂದು ಪ್ರಮಾಣಿಸಬಹುದೆ ?**
**ಉರಿವ ಅನಲಂಗೆ ಶತಡೊಂಕು ಸಸಿನವೆಂಬುದುಂಟೆ ?**
**ಗುಹೇಶ್ವರಲಿಂಗಕ್ಕೆ ಲೇಸು ಕಷ್ಟವೆಂಬುದಿಲ್ಲ ಸಂಗನಬಸವಣ್ಣಾ.** ॥ 1597 ॥

**ತಾತ್ಪರ್ಯ :** ಸುರಿವ ಜಲಕ್ಕೆ ನೆಲಹೊಲೆಯೆಂದು ಪ್ರಮಾಣಿಸಬಹುದೆ ? ಸುರಿವ ಜಲ ಎಲ್ಲಿಯಾದರೂ ಸುರಿಯಬಹುದು. ಅದಕ್ಕೆ ಪವಿತ್ರ ಸ್ಥಾನ, ಅಪವಿತ್ರ ಸ್ಥಾನವೆಂಬುದಿಲ್ಲ. ಇಲ್ಲಿ ಜಲವ ಸುರಿವುದು, ಇಲ್ಲಿ ಜಲ ಸುರಿಯದಿರುವುದು ಎಂಬ ಪ್ರಮಾಣವಿಲ್ಲ. ಅದು ನದಿಯಲ್ಲಿ, ತಟಾಕದಲ್ಲಿ ಹೊಳೆ ಹಳ್ಳಗಳಲ್ಲಿ ಸಾಗರಗಳಲ್ಲಿ ಪರ್ವತ ದಿನ್ನಿಗಳಲ್ಲಿ ಮಹಾಮೇರುವಿನಲ್ಲಿ ಅರಣ್ಯಗಳಲ್ಲಿ, ನಗರಗಳಲ್ಲಿ ಗ್ರಾಮಾಂತರಗಳಲ್ಲಿ ದೇಶ ವಿದೇಶಗಳಲ್ಲಿ ಎಲ್ಲೆಲ್ಲೂ ಸುರಿಯಬಹುದು. ಸುರಿವ ಜಲಕ್ಕೆ ಅದಾರು ನಿರ್ಬಂಧವ ಮಾಡುವುದು. ಸುರಿವ ಜಲವು ಸ್ವತಂತ್ರ ಹೇಗೋ ಹಾಗೆ ತಾನಾರೆಂದರಿತ ಶರಣ, ಘನ ಗಂಭೀರ. ಲಿಂಗವರಿತು ಘನಕ್ಕೆ ಘನವಾಗಿಹ ಶರಣ, ಗುಹೇಶ್ವರ ಲಿಂಗ ತಾನಾಗಿಹನು. ಅಲ್ಲಿ ಅಂತರಂಗ ಬಹಿರಂಗವೆಂಬುದಿಲ್ಲ, ಶಿವ ಶರಣಂಗೆ ಅಂತರಂಗವೆಲ್ಲ ಅರುಹಾಯಿತ್ತು. ಬಹಿರಂಗವೆಲ್ಲ ಲಿಂಗವಾಯಿತ್ತು. ಆ ಲಿಂಗದಲ್ಲಿ ನಡೆದು, ಲಿಂಗದಲ್ಲಿ ನುಡಿದು, ಲಿಂಗದಲ್ಲಿ ಮುಟ್ಟಿ, ಲಿಂಗದಲ್ಲಿ ವಾಸಿಸಿ, ಲಿಂಗದಲ್ಲಿ ಕೇಳಿ ಲಿಂಗವಾಗಿ ನೋಡಿ ಸರ್ವಾಂಗ ಲಿಂಗವಾಗಿ ಆ ಲಿಂಗವ ನೋಡುವ ಕಂಗಳಲ್ಲಿ ಐಕ್ಯಕಂಡಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ.

ಶರಣ ಸುರಿವ ಜಲವಿದ್ದಂತೆ. ಶರಣ ಮನ ಸುಮನ ಘನ ಮನ, ಲಿಂಗ ಮನ. ಸುಜ್ಞಾನ ಘನವದು, ಅದು ಸುಖರೂಪವು, ಮನವೆಂದರೆ ಸುಖದ ಸುಖ ಎರಡೊಂದಾದ ಮನ, ಮರವರುವು ಒಂದಾದ ಮನ, ಅಂತರ ಬಹಿರ ಒಂದಾದ ಮನ, ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ ಸುಖವೆ ಸುಖ ಪರಮಾನಂದ ಪರಮಾಮೃತ ತಾನೆ, ವಾಙ್ಮನೋತೀತ ತಾನೆ, ತನ್ನ ಆನಂದಕ್ಕಾಗಿ ಸುರಿವುದು, ಇದ್ದುದು ಆನಂದ, ಸುರಿವುದು ಆನಂದ, ಎಲ್ಲೆಲ್ಲೂ ಆನಂದವೆ ಆನಂದ, ಪರಮಾನಂದ ! ಸುಖ-ದುಃಖವ ಕಾಣದು, ಅಹುದು ಅಲ್ಲ ಕಾಣದು, ಬೇಕು ಬೇಡೆಂಬುದು ಕಾಣದು. ಬೋಧ ಅಬೋಧವ

ಕಾಣದು, ತನ್ನವರೆಂಬುದಿಲ್ಲ, ಅನ್ಯರೆಂಬುದಿಲ್ಲ, ನಿರ್ವಿಕಾರ ನಿಲವು. ನಿಜ ನಿಲವು ಕಡೆ ಮೊದಲಿಲ್ಲದ ಘನವಾಗಿಹ ನಿಲವು, ಕಾಣದುದ ಕಂಡ ಮೇಲೆ ಇನ್ನೇನಿನ್ನೇನು ಎಲ್ಲೆಲ್ಲೂ ತನ್ನ ಕಂಡ ಮೇಲೆ ಇನ್ನೇನಿನ್ನೇನು, ತನ್ನ ಸುಖದ ಸಂಚಾರ ಅಪಾರ ಅದನಾರು ಹೀಗೆ ಎಂದು ವಿಸ್ತರಿಸುವುದು.

ಉರಿವ ಅನಿಲಂಗೆ ಶತಡೊಂಕು ಸಸಿನವೆಂಬುದುಂಟೆ ? ಉರಿವ ಅಗ್ನಿ ಅದಕ್ಕೆ ಡೊಂಕಾವುದು ? ನೆಟ್ಟಗಾವುದು ? ಅದಕ್ಕೆ ಸಿಕ್ಕುದೆಲ್ಲವು ಸುಡುವ ದಾಹಕವು, ಡೊಂಕಾದುದು ಸುಡುವುದು. ನೆಟ್ಟಗಿದ್ದುದು ಸುಡುವುದು, ಕರಂಡವ ಸುಡುವುದು, ಕಾಷ್ಟವ ಸುಡುವುದು. ಒಳಿತೆಂಬುದಿಲ್ಲ, ಕೆಟ್ಟುದೆಂಬುದಿಲ್ಲ ತನ್ನವರೆಂಬುದಿಲ್ಲ, ಅನ್ಯರೆಂಬುದಿಲ್ಲ, ತಾನೆಂಬುದಿಲ್ಲ, ಅನ್ಯವೆಂಬುದಿಲ್ಲ ಶರಣನ ಜ್ಞಾನಾಗ್ನಿ ಅದು ಸುಜ್ಞಾನ ಘನವು, ಅದು ಚಿದಗ್ನಿ ಅದು ಮರವು ಸುಡುವುದು ಅರುವೆಂಬುದು ಸುಡುವುದು, ಅಜ್ಞಾನವ ಸುಡುವುದು ಜ್ಞಾನವೂ ಸುಡುವುದು. ಬಂಧನೆಂಬುದು ಸುಡುವುದು, ಮೋಕ್ಷವೆಂಬುದು ಸುಡುವುದು. ಅಂಗವೆಂಬುದು ಸುಡುವುದು, ಲಿಂಗವೆಂಬುದು ಸುಡುವುದು, ತನಗಿಂತನ್ಯವಾಗಿ ತೋರುವದೆಲ್ಲವನ್ನು ಸುಡುವುದು. ಇದು ಖಂಡಾಖಂಡ ಸಂಯೋಗವಿಲ್ಲದ ಅಖಂಡಿತ ನಿಲುವುಳ್ಳ ಚಿಜ್ವಾಲೆ ಅದಕ್ಕಾಗಿ ಒಳಿತು ಕೆಟ್ಟುದೆಂಬುದಿಲ್ಲ ಎಂದು ಹೇಳಿಹರು,

**205**

**ಕಾಬಡೆ ಕಣ್ಗೆ ರೂಪಲ್ಲ, ಕೈಗೆ ಸಿಲುಕುವುಡೆ ದೇಹಿಯಲ್ಲ, ನಡೆವಡೆ ಗಮನಿಯಲ್ಲ,**
**ನುಡಿವಡೆ ವಾಚಾಳಿಯಲ್ಲ, ನಿಂದಿಸಿದವರಿಗೆ ಹಗೆಯಲ್ಲ ಹೊಗಳಿದವರಿಗೆ ಕಳೆಯಲ್ಲ,**
**ಗುಹೇಶ್ವರನ ನಿಲುವು, ಮಾತಿನ ಮಾಲೆಗೆ ಸಿಲುಕುವುದೆ ಸಿದ್ಧರಾಮಯ್ಯ**
**ನೀನು ಮರುಳಾದೆಯಲ್ಲ,**

**ತಾತ್ಪರ್ಯ** : ಕಾಬಡೆ ಕಣ್ಗೆ ರೂಪಲ್ಲ, ರೂಪವಾಗದವನನ್ನು ರೂಪವ ಮಾಡಿಕಂಡುದು ಆಶ್ಚರ್ಯ. ವಿಶ್ವ ನಿರೂಪ, ರೂಪ ಮಾಡಿ ನೋಡುವುದು ಸಹಜವಾಗಿದೆ. ಮಾನವ ಜನ್ಮವಿದು ಜ್ಞಾನವಾದ ಜನ್ಮ. ಇದು ಕ್ಷರಾಕ್ಷರ ಮೀರಿದ ಘನವ ತಿಳಿಯುವ ಅನುಪಮ ಜನ್ಮ. ಇಂತಪ್ಪ ಹಿರಿದಾದ ಜನ್ಮದ ಯತಾರ್ಥ ಲಾಭ ಮಾಡಿಕೊಳ್ಳುವವರು ಕೋಟಿಗೊಬ್ಬರು.

ಕುರುಹು ಕಾಣುವ ನೋಟ ಬಹು ಜನರಿಗೆ ಇದೆ. ತನ್ನ ಕಂಡ ದಿವ್ಯದೃಷ್ಟಿಯುಳ್ಳವರು ಸಿಕ್ಕುವುದು ವಿರಳ. ಈ ದಿವ್ಯದೃಷ್ಟಿ ಇಲ್ಲದ್ದರಿಂದ ವಿಶ್ವವ ತಿಳಿಯನು. ಇಹಲೋಕ, ಪರಲೋಕವ ತಿಳಿಯನು. ಮಾನವರನ್ನು ತಿಳಿಯನು, ದೇವತಾದೈತ್ಯರ ತಿಳಿಯನು. ದೇವಗಣ, ರುದ್ರಗಣ, ಪ್ರಮಥಗಣವ ತಿಳಿಯನು. ಗುರು ಘನವ ಕಾಣನು, ಲಿಂಗ ಘನವ ತಿಳಿಯನು, ಜಂಗಮ ಘನವ ತಿಳಿಯನು, ಇದು ತನ್ನಿಂದ ತನ್ನ ಕಂಡ ದಿವ್ಯದೃಷ್ಟಿಯುಳ್ಳವರಿಗೆ ಎಲ್ಲೆಲ್ಲೂ ತನ್ನ ಕಾಣುವನಲ್ಲದೆ ಅನ್ಯಕಾಣನು. ಇದು

ಖಂಡಾಖಂಡ ಸಂಯೋಗವಿಲ್ಲದ ಅಖಂಡಿತನಾಗಿಹ ತನ್ನ ನೋಟ, ನಿರಾಲಂಬ ನೋಟ, ನಿಜದಿರುವಿನಲ್ಲಿ ನಿಂತ ಘನಮಹಿಮವು ಈ ನೋಟ ಪ್ರಭುವಿನದು.

ಪ್ರಭುವಿನ ಪರಮಜ್ಞಾನ, ಇದು ಮಹದರುವುಳ್ಳ ಮಹಾನುಭವ ಈ ಮಹಾಂತನ ಪರಮ ಪ್ರಸಾದ ಮಹಾನುಭವಿಗಳಾಗಿ ಅರಿದರಿದು ನೋಡಿದಾಗ ಈ ಮಹಾಮಹಿಮ ಏನು ಕಂಡರೂ, ನುಡಿಗೆಡೆಗೊಡದ ಘನವಾಗಿ ಕಂಡ. ದಿವ್ಯದೃಷ್ಟಿ ಎಂಬುದು ಸಹಜ ಸಿದ್ಧವಾಗುವುದು. ಇದು ಕಾರಣ ಪ್ರಪ್ರಥಮ, ತನ್ನ ತಾನು ಅರಿದರಿದು ನೋಡುವುದು, ಆಗ ತನ್ನ ದಿವ್ಯದೃಷ್ಟಿಯು ತಾನು ಏನು ಕಂಡರೂ ನಿರುಪಮ ಘನವು ಪ್ರಜ್ವಲಿಸುವುದು. ಇಂತಪ್ಪ ಸ್ವಸ್ವರೂಪ ಸಿದ್ಧಮಾಡಿದ ಜ್ಞಾನ ಸಿದ್ಧ, ಜ್ಞಾನೇಶ್ವರ ಜ್ಞಾನಗಂಗಾ ಜ್ಞಾನಾಮೃತವಾಗಿ ಪ್ರಭುವಿನ ಪ್ರಸಾದವು ವಿಶ್ವವನ್ನೇ ವಿಶ್ವನಾಥನನ್ನಾಗಿ ಕಾಣುವ ಸ್ವಯಂತೇಜ.

ಕಾಬಡೆ ಕಣ್ಗೆ ರೂಪಲ್ಲ, ಇದಾರ ದೃಷ್ಟಿ, ಪ್ರಭುವಿನ ದೃಷ್ಟಿ, ಎಲ್ಲೆಲ್ಲೂ ತನ್ನ ಕಂಡ ದೃಷ್ಟಿ. ಬೆಳಕಿಗೆ ಕತ್ತಲೆ ಕಾಣುವುದೆ ? ನಿರೂಪನಿಗೆ ರೂಪ ಕಾಣುವುದೆ ? ಕಣ್ಣು ನಿರೂಪವಲ್ಲವೆ ! ಕಣ್ಣು ತನಗಿಂತ ಅನ್ಯವಾದುದನ್ನು ಮರೆತು, ತನ್ನನ್ನೇ ನೋಡಿದಾಗ ಅಲ್ಲಿ ರೂಪಕಾಣುವುದೆ ? ಕಣ್ಣು ತನ್ನ ಘನವ ಮರೆತು ತನಗಿಂತ ಬೇರಾದುದು ತಾನೆ ಎಂದುಕೊಂಡು ತಾಪಾದಿಗಳಲ್ಲಿ ತಾದಾತ್ಮ್ಯ ಹೊಂದಿ ಸ್ತುತಿಗೂ ನಿಂದೆಗೂ ಒಳಪಟ್ಟುದಲ್ಲದೆ ಮಾನಾಪಮಾನ ಸುಖದುಃಖ, ರಾಗದ್ವೇಷ, ಲಾಭ ಹಾನಿಯುಳ್ಳವನಾಗಿ ತನ್ನನ್ನು ಕಾಣುವನು. ಕಣ್ಣು ಕಣ್ಣಾಗಿ ನೋಡಲು ಆಗ ಆರಾರಿಗೂ ರೂಪವಿಲ್ಲ, ಇದು ತತ್ವದೃಷ್ಟಿಯುಳ್ಳವರ ಸಿದ್ಧಾಂತ. ಪ್ರಭುವಿನ ಸಿದ್ಧಾಂತ ಸ್ವತಃ ತನ್ನಿಂದ ತನ್ನ ಅರಿದರಿದ ನೋಡಿದ ಸಿದ್ಧಾಂತ, ಇದು ಸ್ವಯಮೇವ ಸಿದ್ಧಾಂತವಾದುದರಿಂದ ಬಹಳಷ್ಟು ಜನರಿಗೆ ನಿಲುಕದಷ್ಟು ಗಂಭೀರವಾಗಿದೆ. ಅರಿದರಿದು ನೋಡಿದವರಿಗೆ ಸರಳವಾಗಿದೆ.

ಮಾನವ ಏನನ್ನಾದರೂ ಅರಿಯಬಹುದು. ತನ್ನಿಂದ ತನ್ನ ಅರಿಯುವುದು ದುಸ್ತರವಾಗಿದೆ. ತತ್ವದೃಷ್ಟಿಯುಳ್ಳವರಿಗೆ ಸರಳವಾಗಿರುವುದು. ಆರು ಗುಹೇಶ್ವರನನ್ನು ಅರಿಯ ಹೋಗಿಹರು. ಅವರ ದಿವ್ಯದೃಷ್ಟಿಗೆ ಕಾಬಡೆ ಕಣ್ಗೆ ರೂಪಲ್ಲವೆಂದು ಹೇಳಿಹರು. ನಸುಗತ್ತಲೆಯಲ್ಲಿ ಹಗ್ಗದಲ್ಲಿ ಹಾವು ಕಂಡು ಭಯಕಂಪಿತನಾಗುವನು. ಅದನ್ನು ಬೆಳಕಿನಿಂದ ನೋಡಲು ಹಾವೆಂಬ ರೂಪ ನಿಜವಾಗದು. ಅದು ತನ್ನ ಮೂಲ ಸ್ವರೂಪವಾದ ಹಗ್ಗವೆ ನಿಜವಾಯಿತ್ತು. ಕತ್ತಲಲ್ಲಿ ಕಂಡ ರೂಪವಾಗಲಿ, ಭಾವವಾಗಲಿ ದಿಟವಾಗಲಿಲ್ಲ ಹಾಗೆ ಮಾನವ ಮರವು ಅರುವೆಂಬ ನಸುಗತ್ತಲೆಯಲ್ಲಿ ನಿಂತು ವಿಶ್ವವನ್ನು, ತನ್ನನ್ನು ಗುರು ಲಿಂಗ ಜಂಗಮ ನೋಡಹತ್ತಿಹನು. ಅದಕ್ಕಾಗಿ ಅವನಿಗೆ ತೋರಬಾರದ ಘನವು ಕುರುಹಾಗಿ ತೋರಲು ಹತ್ತಿದೆ. ಅದು ಹೇಳಬಾರದ ಘನವಾಗಿದ್ದರೂ ಹೇಳಲು ಬರುವಂತಾಗಿದೆ. ಎಲ್ಲಿಯವರೆಗೆ ವೇದ ವೇದಾಂತಗಳಿಗೆ ಅಸಾಧ್ಯವಾಗಿಹ ಅನುಪಮ ಲಿಂಗದೃಷ್ಟಿಯುಳ್ಳವನಾಗಿ ನೋಡುವುದಿಲ್ಲ, ಅಲ್ಲಿ ನೋಡದ ನೋಟವಾಗಿಹ ದಿವ್ಯದೃಷ್ಟಿಯಿಲ್ಲದ್ದರಿಂದ ಭ್ರಾಂತಿ ದೃಷ್ಟಿ ಹೋಗದು.

ಭ್ರಾಂತಿದೃಷ್ಟಿ ನಷ್ಟವಾಗಲು ಒಂದೆ ಉಪಾಯ. ಪ್ರಥಮ ತನ್ನನ್ನು ಅನುಪಮನು ಎಂದು ಅರಿಯ ಹೋದಾಗ ಭ್ರಾಂತಿ ಸಹಜ ನಿರಸವಾಗುವುದು. ಆಗ ತಾನು ಶೃತಿಗಗೋಚರ ಎಂಬುದು ತನ್ನಿಂದ ತನಗದು ಸಿದ್ಧವಾಗುವುದಲ್ಲದೆ, ಕಾಬಡೆ ತಾನು ಕಣ್ಗೆ

ರೂಪಲ್ಲವೆಂಬುದು ಸಹಜ ಸಿದ್ಧವು. ಇದಲ್ಲದೆ ಕಾಬಡೆ ತಾನೊಂದೆ ಕಣ್ಗೆ ರೂಪಲ್ಲವೆಂಬುದಿಲ್ಲ. ತಾನು ಏನನ್ನು ಕಂಡರೂ ಅದು ತಾನೆ, ತನ್ನ ಹೊರತು ಅನ್ಯ ಆವುದು ಇಲ್ಲವೆಂಬುದು ಕೂಡಾ ನಾಚಿ ಶಬ್ದಮುಗ್ಧವಾಗಿ ತನ್ನ ಸ್ವಮಹಿಮೆಯ ಪ್ರಕಾಶಿಸುವಲ್ಲಿ ನೋಡಲು ಪೂರ್ವದ ಕಣ್ಣಿಲ್ಲ. ಹಿಡಿಯಲು ಕೈಗಳಿಲ್ಲ. ನುಡಿಯಲು ವಾಣಿಯಿಲ್ಲ. ನಡೆಯಲು ಕಾಲು ಇಲ್ಲ. ನಿಂದಿಸುವವರಿಗೆ ವೈರಿಯಲ್ಲ ಸ್ತುತಿಸುವವರಿಗೆ ಸಪ್ರೇಮಿಯಲ್ಲ ಶೃತಿಗಗೋಚರವಾಗಿರುವ ಘನವ ಕಂಡು ಮಾತಿನ ಮಾಲೆ ನಾಚಿ ಮೌನವ ಧರಿಸುವಲ್ಲಿ, ತಾನಾರೆಂದರಿಂದ ಘನಮಹಿಮನ ನಿಲುವ ಭ್ರಾಂತರಿಗೆ ನಿಲುಕುವ ನಿಲುವಲ್ಲ. ಸಟೆಗೆ ನಂಬಿದವರು ಸತ್ಯದ ಘನವ ಅವರೇನು ಬಲ್ಲರು.

ಏನ ಕಂಡೆಡೇನಯ್ಯ ತನ್ನ ಕಾಣದಾತ ಕುರುಡ, ಏನ ಮಾತಾಡಿದಡೇನಯ್ಯ ತನ್ನ ಮಾತಾಡದಾತ ಮೂಕ, ಏನ ಕೇಳಿದಡೇನಯ್ಯ ತನ್ನ ಕೇಳದಾತ ಕಿವುಡ, ದಿಟದಿಂದ ತನ್ನ ತಾ ಕಾಣಬೇಕು, ದಿಟದಿಂದ ತನ್ನ ತಾ ಕೇಳಬೇಕು. ದಿಟದಿಂದ ತನ್ನ ತಾ ಮಾತಾಡಬೇಕು. ಇದೆ ನೆಲೆ, ಸ್ವಭೂಮಿ ಸ್ವರೂಪು ಕಾಣಾ ಗುಹೇಶ್ವರಾ.

ಸಟೆಯ ನಂಬುಕರಿಗೆ ದಿಟದಿಂದ ತನ್ನ ನೋಡುವ ಭಾಗ್ಯವಿಲ್ಲ. ಅವರು ಏನ ಕಂಡರೇನು, ಏನ ಕೇಳಿದರೇನು ? ಏನ ಮಾತಾಡಿದರೇನು ? ನಿಷ್ಪ್ರಯೋಜಕವು. ಅವರು ಕಂಡುದೆಲ್ಲ ಸಟೆಯು, ಕೇಳಿದುದೆಲ್ಲ ಸಟೆಯು, ಮಾತಾಡಿದುದೆಲ್ಲವು ಸಟೆಯು. ಸಟೆಯು ದಿಟವಾಗುವುದದೆಂತು ? ದಿಟವ ಕಂಡವಂಗೆ ಸಟೆಯ ಕಂಡುದಿಲ್ಲ. ದಿಟದಿಂದ ತನ್ನ ನೋಡಿದವಂಗೆ ತಾನು ಕಾಬಡೆ ಕಣ್ಗೆ ರೂಪಲ್ಲ, ಕೈಗೆ ಸಿಲುಕುವುಡೆ ದೇಹಿಯಲ್ಲ, ನಡಿವಡೆ ಗಮನಿಯಲ್ಲ, ನುಡಿವಡೆ ವಾಚಾಳಿಯಲ್ಲ, ಸ್ತುತಿಸುವವರಿಗೆ ಕೆಳೆಯಿಲ್ಲ, ನಿಂದಿಸುವವರಿಗೆ ಹಗೆಯಲ್ಲ, ಚಿತ್ ಎಂಬುದನರಿತ ಘನವಂತ ದೇಹಿಗೆ ದೇಹಿಯಾಗಿಹ ಘನಕ್ಕೆ ಘನ ಆ ಮಹಾಂತನೆಂತು ಕಾಂಬುದು, ಅರುವಿಂಗರುವಾಗಿಹ ಅರಿಯದರುವು ಆ ಮಹಿಮನೆಂತು ಅರಿವುದು ? ಕಣ್ಣಿನ ಕಣ್ಣಾಗಿರುವ ಸ್ವಪ್ರಕಾಶವ ಅದನೆಂತು ಕಾಣುವುದು. ಮೌನದ ಮೌನವಾಗಿಹ ಘನವು, ಶಬ್ದಮುಗ್ಧವು ಮಾತಾಡಿದುದೆಂತು ? ತನುವಿನ ತನುವಾದುದನ್ನು ಕಾಣುವದದೆಂತು ? ಕೈಯ ಕೈಯಾದುದನ್ನು ಹಿಡಿಯುವದೆಂತು ? ಗಗನಕ್ಕದಾವ ಗಮನಾಗಮನ ! ಅದಾರು ಸ್ತುತಿಸುವುದು ? ಅದಾರು ನಿಂದಿಸುವುದು. ಪರಬೊಮ್ಮವೆಂಬುದೆ ನಾಚಿ ಶೃತಿರ್ಮೌವ ಧರಿಸುವಲ್ಲಿ ಅದನೆಂತು ಸ್ತುತಿಸುವುದು. ಅದನೆಂತು ನಿಂದಿಸುವುದು. ತಾನು ಅನುಪಮನಾಗಿರುವಲ್ಲಿ ಮಾತಿನ ಮಾಲೆಗೆ ಸಿಲುಕುವನೆ ?

ಪ್ರಭುದೇವ ಕರುಣಾಳು, ತಾನಾರೆಂದು ತನ್ನ ತಿಳಿದು ಅನುಭವಿಯಾದಲ್ಲಿ ಮಾತಿನ ಮಾಲೆಯ ಅನುಭವವಾಗಬಾರದೆಂದು ಎಚ್ಚರ ಮಾಡಿದ ನಿಜದೆಚ್ಚರ ಸಿದ್ಧರಾಮಯ್ಯಗೊಂದೆ ಎಚ್ಚರವಲ್ಲ, ಶಬ್ದಸಂಭ್ರಮದವರು, ನಿಶಬ್ಧವೇದಿಗಳಾಗುವುದು ಎಂಬುದು ಆತನ ಕಳಕಳಿ. ತಿಳಿದು ನೋಡುವುಡೆ ಪ್ರಭುವಿನ ಸಿದ್ಧಾಂತ ಸಕಲರ ಸಿದ್ಧಾಂತವು. ಪ್ರಭುವಿನ ಇರುವೆ ನಮ್ಮಯ ಇರುವಿನ ಅರುವಾಗುವಲ್ಲಿ ನಿರ್ಭಯಪದ ಸಹಜ ಸಿದ್ಧಿಸುವುದು.



# ವಚನಾನುಕ್ರಮಣಿಕೆ

ಪರಮ ಪೂಜ್ಯ ಸದ್ಗುರು ಶ್ರೀ ವಿದ್ಯಾನಂದ ಶರಣರು ಡಬ್ಬೇರಮಡು
ತಾ॥ಲಿಂಗಸೂಗೂರು ಜಿ॥ರಾಯಚೂರು
ಅವರ ಕೃತಿಗಳು

| | | | |
|---|---|---|---|
| 1. | ನಿಃಶಬ್ದ ಕೃಪೆ | - | ಪ್ರಕಟಣೆ 1986 |
| 2. | ನಾನು ನನ್ನ ಕಂಡ ಕಣ್ಣು | - | ಪ್ರಕಟಣೆ 1987 |
| 3. | ಗಗನ ಸಿದ್ಧಾಂತ | - | ಪ್ರಕಟಣೆ 2006 |
| 4. | ತೆರೆಹಿಲ್ಲದಭವ ನುಡಿಗೆಡೆಗೊಡನು | - | ಪ್ರಕಟಣೆ 2011 |
| 5. | ಗಗನ ಸಿದ್ಧಾಂತ (ಸಮಗ್ರ) www.suddimoola.com | | ವೆಬ್‌ಸೈಟ್ ಪ್ರಕಟಣೆ-2015 |
| 6. | ಕರುಣಾ ಜಲ | - | |
| 7. | ಅಕಾಯ ಭಕ್ತ | - | |
| 8. | ಅಂತರಾತ್ಮ ಬೋಧೆ | - | |
| 9. | ಗುರು ಕಾರುಣ್ಯ | - | |
| 10. | ಉಪದೇಶಾಮೃತ | - | |
| 11. | ತೆರಹಿಲ್ಲ ತೆರಹಿಲ್ಲ | - | |
| 12. | ನಿಶಬ್ದ ವೇದಿ | - | |
| 13. | ಎರಡು ಒಂದರ ಯೋಗ | - | |
| 14. | ಮೂರೊಂದರ ಸಮರಸ | - | |
| 15. | ಘಟ್ಟಿವಾಳಯ್ಯನ ಸಂಪಾದನೆ | - | |
| 16. | ಗುರು ಕನ್ಯೆ (ಅಕ್ಕಮಹಾದೇವಿಯ ಸಂವಾದ) | - | |
| 17. | ಅರಿತ ಕಿರಣ | - | |
| 18. | ನಿಜ ನಿಕ್ಷೇಪ | - | |
| 19. | ಉತ್ತರ ಸಿದ್ಧಾಂತ | - | |

ಶಿಷ್ಯೋತ್ತಮರಿಗಾಗಿ ಬರೆದುಕೊಟ್ಟ ಬೆಳಕಿಗೆ ಬಾರದ ಅಪ್ರಕಟಿತ ಗ್ರಂಥಗಳು ಸಾಕಷ್ಟಿವೆ.

ಪೂಜ್ಯರ ಹಾಗೂ ಸುದ್ದಿಮೂಲ ಪ್ರಕಾಶನದ ಸಮಗ್ರ ಪ್ರಕಟಿತ-ಅಪ್ರಕಟಿತ ಸಾಹಿತ್ಯವನ್ನು ಇಡೀ ವಿಶ್ವದಾದ್ಯಂತ ಓದುಗರು ತಮ್ಮ ಸ್ಮಾರ್ಟ್‌ಫೋನ್‌ನಲ್ಲಿ Newshunt App ನ್ನು ಡೌನ್‌ಲೋಡ್ ಮಾಡಿಕೊಂಡು ಅದರಲ್ಲಿ Books ಗೆ ಕ್ಲಿಕ್ ಮಾಡಿ Spiritual Category ಯಲ್ಲಿ ನೋಡಬಹುದಾಗಿದೆ.

ಮಹಾತ್ಮಾ ಬಸವಣ್ಣ ಇಷ್ಟಲಿಂಗ ಕೊಟ್ಟು ಉಪಕಾರ ಮಾಡಿದನೆಂದು ಒಂದು ವರ್ಗ ಅವರನ್ನು ಸ್ಮರಿಸುತ್ತದೆ. ಮತ್ತೊಂದು ವರ್ಗ ರೇಣುಕರು ಇಷ್ಟ ಲಿಂಗ ಕೊಟ್ಟರೆಂದ ಪ್ರತಿಪಾದಿಸುತ್ತದೆ. ಹೀಗೆ ಅನ್ನುವ ಈ ಎರಡು ವರ್ಗಗಳು ಉಣ್ಣೆಯಂತೆ ಕ್ಷೀರದ ರುಚಿಯನ್ನು ಸವಿಯಲಿಲ್ಲವೆಂದು ರೇಣುಕ ಹಾಗೂ ಶರಣರ ಅಮೃತವನ್ನು ಸವಿದ ಅನುಭಾವಿಗಳಿಗೆ ಅನ್ನಿಸದೇ ಇರದು. ಶರಣರ ವಚನಗಳಲ್ಲಿ ರೇಣುಕರ ಅನುಭಾವದಲ್ಲಿ ಕುರುಹನ್ನೆ ಕಂಡರು. ಸದಾ ಕತ್ತಲನ್ನೇ ಕಂಡವರಿಗೆ ಬೆಳಕಿನ ರುಚಿ ಹಿಡಿಸುವುದಿಲ್ಲ.

" ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದಡೇನು? ಹಸಿವು ಹೋಹುದೆ
ಅಂಗದ ಮೇಲೆ ಲಿಂಗ ಸ್ವಾಯತವಾದಡೇನು?
ಭಕ್ತನಾಗಬಲ್ಲನೆ? ಇಟ್ಟಕಲ್ಲು ಮೆಳೆಯ ಮೇಲೆ ಸಿಲುಕಿದಡೆ
ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ?
ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ ನಾಚುವನಯ್ಯಾ-ಗುಹೇಶ್ವರಾ"

ಎಂದು ಲಿಂಗವನ್ನು ಹಾಗೂ ಲಿಂಗ ಕಟ್ಟಿಕೊಂಡಾತನನ್ನು, ಕಟ್ಟಿದಾತನನ್ನು ಅಲ್ಲಮಪ್ರಭು ಟೀಕಿಸಿದ್ದಾನೆ. ಈ ವಚನದ ತಾತ್ಪರ್ಯವನ್ನು ಸದ್ಗುರು ವಿದ್ಯಾನಂದ ಶರಣರು ಬಹು ಮಾರ್ಮಿಕವಾಗಿ ದಾಖಲಿಸಿದ್ದಾರೆ.

ದಾಸರ, ಸಂತರ, ದಾರ್ಶನಿಕರ, ತತ್ವ ಪದಕಾರರ ಹಾಗೂ ಶರಣರ ವಚನಗಳನ್ನು ಸಾಹಿತಿಗಳು ಸಾಹಿತ್ಯಕ್ಕಾಗಿ, ಭಾಷಣಕಾರರು ಭಾಷಣಕ್ಕಾಗಿ, ಪ್ರಾಧ್ಯಾಪಕರು ಪಾಠ ಪ್ರವಚನಗಳಿಗಾಗಿ ಸಂಘಟನೆಗಳು ಜಾತಿ ಸಂಕರಕ್ಕಾಗಿ ಉಪಯೋಗಿಸಿಕೊಂಡರೇ ವಿನಃ ಸ್ವಸಂತೋಷಕ್ಕಾಗಿ ಸ್ವರೂಪಜ್ಞಾನಕ್ಕಾಗಿ ಅಲ್ಲ. ಹೀಗಾಗಿ ವಚನಗಳು ಅವರಿಗೆ ಹೇಗೇಗೊ ಕಾಣುತ್ತವೆ.

"ಇಷ್ಟಲಿಂಗವನ್ನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೊ?
ಇಷ್ಟಲಿಂಗ ಹೋದಡೆ ಪ್ರಾಣಲಿಂಗ ಹೋಗದು ನೋಡಾ,
ಇಷ್ಟಲಿಂಗ ಪ್ರಾಣಲಿಂಗದ ಭೇದವನು ಗುಹೇಶ್ವರಾ ನಿಮ್ಮ ಶರಣ ಬಲ್ಲ"

ಶರಣರ ದೃಷ್ಟಿಯಲ್ಲಿ ಕಾಯವೇ ಇಷ್ಟಲಿಂಗ. ಅರಿವೆಂಬ ಮಹಾನುಭಾವನು ಪ್ರಾಣಲಿಂಗವೆಂಬ ಕಾಯದೊಂದಿಗೆ ತಾಯಿಯ ಗರ್ಭದಿಂದ ಹೊರಬರುತ್ತಾನೆ. ಸ್ವಾನುಭಾವದಿಂದ ಸ್ವಸುಖದ ಆನಂದದಿಂದ ಮೆರೆದು ಅಂಗ ಬಿಟ್ಟು ಲಿಂಗದೊಂದಿಗೆ ಗಗನದಲ್ಲಿ ಮರೆಯಾಗುತ್ತಾನೆ. ತಾನೇ ಗಗನವಾಗುತ್ತಾನೆ. ಆ ಗಗನ ಸದೃಶವಾದ ಭಗವಂತನಿಗೆ ಜನನ ಮರಣಗಳಿಲ್ಲ . ಮನ ಬಂಜೆಯ ಮಗ. ಹುಟ್ಟಾ ಬಂಜೆಯ ಮಗನನ್ನು ಎಲ್ಲಿಂದ ತರಬೇಕು? ಆಕೆ ಮಗನನ್ನು ಹೇಗೆ ಹಡೆದಾಳು ಎಂಬ -ಮಾರ್ಮಿಕ ಪ್ರಶ್ನೆಗಳೊಂದಿಗೆ ಗಗನ ಸಿದ್ಧಾಂತದ ವಾಗ್ಝರಿ ಹರಿಯುತ್ತ ಸಾಗುತ್ತದೆ. ಸದ್ಗುರು ವಿದ್ಯಾನಂದ ಶರಣರ 'ಗಗನ ಸಿದ್ಧಾಂತ' ಅವರ ಶಿಷ್ಯರಿಗೆ ಸುಲಿದ ಬಾಳೆಹಣ್ಣು ; ಹೊಸಬರಿಗೆ ಹಲಸು. ಸ್ವಲ್ಪ ನಿಧಾನವಾಗಿ ಜಾಗ್ರತದಿಂದ ಬಿಡಿಸಿ ಅರಿವಿನ ಸಿಹಿ ಅನುಭವಿಸಬೇಕು.

ಬಸವರಾಜ ಸ್ವಾಮಿ
ಸಂಪಾದಕ, ರಾಯಚೂರು